# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಶಾಂತಿಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೨೧

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 21**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ॥ ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ॥ ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

## ವಿನಮ್ರವಚನಗಳು

ದಯಾಮಯನಾದ ಪರಮಾತ್ಮನ ದಿವ್ಯಾನುಗ್ರಹದಿಂದಲೂ, ಹೃದಯ ಗುಹೆಯಲ್ಲಿ ಪ್ರತಿಷ್ಠಿತನಾಗಿರುವ ಗುರುಭಗವಂತನ ದಿವ್ಯಾಶೀರ್ವಾದ ದಿಂದಲೂ, ಸಜ್ಜನರ ಸಹಕಾರ-ಸದಾಶಯಗಳಿಂದಲೂ 21ನೆಯ ಸಂಪುಟ ರೂಪವಾದ ದಿವ್ಯಪುಷ್ಪವನ್ನು ದಯಾಮಯನ ಅಡಿದಾವರೆಗಳಲ್ಲರ್ಪಿಸಿ, ಪ್ರಸಾದರೂಪವಾದ ಈ ಕುಸುಮವನ್ನು ಪ್ರಿಯವಾಚಕರ ಅಂಜಲಿಪುಟ ಗಳಲ್ಲಿಡುತ್ತಿದ್ದೇವೆ.

20ನೆಯ ಸಂಪುಟದ ಪ್ರಕಾಶನವಾಗಿ ಏಳು ತಿಂಗಳುಗಳೇ ಕಳೆದು ಹೋದುವು. ಆಕಾಂಕ್ಷೆಯಿಂದ ಸಂಪುಟವನ್ನು ನಿರೀಕ್ಷಿಸುತ್ತಿರುವ ಸಜ್ಜನರಿಗೆ ಅತ್ಯಂತವಾಗಿ ಬೇಸರವೇ ಆಗಿರುವುದು ಸಹಜ. ಆದರೂ ಹೇಳಲರಿಯದ ಅನಿವಾರ್ಯವಾದ ಹಲವಾರು ಕಾರಣಗಳಿಂದ ಸಾವಕಾಶವಾಯಿತು. ಸಾವ ಕಾಶಕ್ಕೆ ಮುಖ್ಯವಾದ ಕಾರಣ 2ನೆಯ ಸಂಪುಟದ ಪುನರ್ಮುದ್ರಣಕಾರ್ಯ. 'ಹಳೆಯದನ್ನು ಮುದ್ರಿಸಬೇಡಿರಿ, ಹೊಸ ಸಂಪುಟಗಳನ್ನೇ ಮುದ್ರಿಸಿ ಮಹಾಗ್ರಂಥವನ್ನು ಬೇಗ ಮುಗಿಸಿರಿ. ನಮ್ಮ ಜೀವಿತಕಾಲದಲ್ಲಿಯೇ ಈ ಮಹಾಗ್ರಂಥವನ್ನು ಓದಲು ಅವಕಾಶಮಾಡಿಕೊಡಿ'—ಎಂಬುದು ಅನೇಕರ ಅಭಿಪ್ರಾಯವಾಗಿದೆ. ಅವರ ಈ ಆಶಯವು ಸಾಧುವಾಗಿಯೇ ಇದೆ. ಆದರೆ ನೂತನ ಗ್ರಾಹಕರ ವಿಷಯವಾಗಿಯೂ ಸ್ವಲ್ಪ ಯೋಚಿಸುವುದು ನಮ್ಮ ಕರ್ತವ್ಯವೆನಿಸುತ್ತದೆ. ನಾವು ಸಂಪುಟಗಳನ್ನು ಅವರಿಗೆ ಕೊಡುವಾಗಲೇ 'ಪುನರ್ಮುದ್ರಣವಾದಾಗ ಹಿಂದಿನ ಸಂಪುಟಗಳನ್ನು ಕೊಡಲಾಗುವುದು'— ಎಂಬ ಮಾತನ್ನು ಹೇಳಿಯೇ ಉಳಿದ ಸಂಪುಟಗಳನ್ನು ಕೊಟ್ಟಿರುತ್ತೇವೆ. ನೂತನ ಗ್ರಾಹಕರು ಸಂಪುಟಗಳನ್ನೋದಲು ಪ್ರಾರಂಭಿಸಿರುತ್ತಾರೆ. ಅವರಿಗೆ ಮಧ್ಯ-ಮಧ್ಯದ ಸಂಪುಟಗಳು ಬಹಳ ಕಾಲದವರೆಗೂ ಸಿಕ್ಕದಿದ್ದರೆ ಬಹಳ ಬೇಸರಪಡುತ್ತಾರೆ. ಎಲ್ಲ ಗ್ರಾಹಕರಿಗೂ ಎರವಲು ಸಂಪುಟಗಳು ಸಿಗ ಲಾರವು. ಹೀಗೆ ಮಧ್ಯದ ಸಂಪುಟಗಳು ಬೇಗ ಬೇಕೆಂದು ಅವರೂ ಅವಸರಪಡಿಸುತ್ತಾರೆ. ಸುಮಾರು ಏಳು ನೂರು ಮಂದಿಗೆ ನಾವು 2ನೆಯ ಸಂಪುಟವನ್ನೇ ಕೊಟ್ಟಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ಮಧ್ಯ-ಮಧ್ಯದಲ್ಲಿ

ಪುನರ್ಮುದ್ರಣಗಳನ್ನು ಮಾಡುವುದೂ ಅನಿವಾರ್ಯವೇ ಆಗುತ್ತದೆ. ಆದರೆ ಈಗ ಪುನರ್ಮುದ್ರಣದ ಕಾರ್ಯವೇ ಅಗಾಧವಾಗಿಬಿಟ್ಟಿದೆ. ಪ್ರಸಕ್ತ 3-8-9-10 ಈ ನಾಲ್ಕು ಸಂಪುಟಗಳು ಇರುವುದಿಲ್ಲ. ಮುಂದಿನ ಎರಡು ತಿಂಗಳುಗಳಲ್ಲಿ 1-4-11-12-13-14-15 ಇವಿಷ್ಟು ಸಂಪುಟಗಳೂ ಮುಗಿದು ಹೋಗುತ್ತವೆ. ಇದನ್ನು ಹೇಗೆ ಸುಧಾರಿಸಬೇಕೆಂಬುದೇ ದೊಡ್ಡ ಸಮಸ್ಯೆ ಯಾಗಿದೆ. ಅತ್ಯಲ್ಪಸಮಯದಲ್ಲಿಯೇ ಸಂಪುಟಗಳನ್ನು ಪುನರ್ಮುದ್ರಿಸಲು ಹೊಸ ರೀತಿಯ ಅವಕಾಶವೇನೋ ಇದೆ. ಇದರಿಂದ ನಮ್ಮ ಹೊಸ ಸಂಪುಟ ಗಳೂ ಸುಗಮವಾಗಿ ಹೊರಬರಬಹುದು. ಛಾಯಾಗ್ರಹಣ ಯಂತ್ರದ ಮೂಲಕವಾಗಿ 640 ಪುಟಗಳ ಸಂಪುಟದ ಪುನರ್ಮುದ್ರಣವನ್ನು ಒಂದು ವಾರದಲ್ಲಿಯೇ ಮುಗಿಸಬಹುದು. ಈ ವಿಧಾನದಿಂದ ಪುನರ್ಮುದ್ರಣವನ್ನು ಮಾಡಲು ಹೊರಟರೆ ವೆಚ್ಚವು ಒಂದಕ್ಕೆ ಐದು ಪಟ್ಟು ಹೆಚ್ಚಾಗುತ್ತದೆ. ಅದನ್ನು ಭರಿಸುವುದೆಂತು? ಈ ಸಮಸ್ಯೆಯನ್ನು ಪರಮಾತ್ಮನೇ ಬಗೆಹರಿಸಬೇಕು.

ಸಂಪಾದಕವರ್ಗದವರೂ ಮಹಾಭಾರತವನ್ನು ಬೇಗ ಮುಗಿಸಬೇಕೆಂಬ ಆಶಯವುಳ್ಳವರಾಗಿರುವುದರಿಂದ ಮುಂದಿನ ಸಂಪುಟಗಳನ್ನು ಶೀಘ್ರಾತಿಶೀಘ್ರವಾಗಿ ಹೊರತರಲು ಖಂಡಿತವಾಗಿಯೂ ಪ್ರಯತ್ನಿಸಲಾಗು ವುದು.

21ನೆಯ ಸಂಪುಟದಲ್ಲಿ ಶಾಂತಿಪರ್ವವು ಪ್ರಾರಂಭವಾಗಿ ಈ ಸಂಪುಟ ದಲ್ಲಿ 63 ಅಧ್ಯಾಯಗಳು ಅಡಕವಾಗಿವೆ. ಯುಧಿಷ್ಠಿರನ ಪಟ್ಟಾಭಿಷೇಕಘಟ್ಟವು ಈ ಸಂಪುಟದಲ್ಲಿಯೇ ಇದೆ. ಮಹಾಭಾರತದ ಪಂಚರತ್ನಗಳಲ್ಲಿ ಒಂದಾದ ಭೀಷ್ಮಸ್ತವರಾಜವೂ ಇದೇ ಸಂಪುಟದಲ್ಲಿದೆ. ಮಹಾಮತಿಯಾದ ಭೀಷ್ಮನು ವೇದಗಳೆಲ್ಲವನ್ನೂ ಬುದ್ಧಿಯ ಕಡೆಗೋಲಿನಿಂದ ಕಡೆದು ಸಾರಭೂತವಾದ ನವನೀತವನ್ನು ಯುಧಿಷ್ಠಿರನ ಮೂಲಕ ವಿಶ್ವದ ಜನತೆಗೇ ಕೊಟ್ಟಿದ್ದಾನೆ. ಭೀಷ್ಮನು ಹೇಳುತ್ತಿರುವ ರಾಜಧರ್ಮಾನುಶಾಸನಪರ್ವದಲ್ಲಿ ನಮ್ಮ ರಾಜಕಾರಣಿಗಳೂ, ಮಂತ್ರಿಮಹೋದಯರುಗಳೂ ಗ್ರಹಿಸಬೇಕಾದ ಅನೇಕಾಂಶಗಳಿವೆ. ಸತ್ಯನಿಷ್ಠನಾದ, ಜನಪ್ರಿಯನಾದ, ಧರ್ಮಪರನಾದ ನಾಯಕನಾಗಬೇಕಾದರೆ ಮಹಾಭಾರತವನ್ನು ಅದರಲ್ಲಿಯೂ ಮುಖ್ಯವಾಗಿ ಶಾಂತಿಪರ್ವವನ್ನು ಅಧ್ಯಯನಮಾಡಿಯೇ ತೀರಬೇಕೆಂಬ ವಿಷಯವು ಅಧ್ಯಯನಮಾಡಿದ ನಂತರವೇ ತಿಳಿಯಬಲ್ಲದು. ಮಹಾಭಾರತಗ್ರಂಥವು

ವೃದ್ಧರಿಗಾಗಿಯೇ ಸಿದ್ಧಪಡಿಸಿದ ಗ್ರಂಥವಲ್ಲ. ನವಯುವಕರಿಗಾಗಿಯೂ ಸಿದ್ಧಪಡಿಸಿದ ಗ್ರಂಥ. ನಮ್ಮ ನಾಡಿನ ನವಯುವಕ-ಯುವತಿಯರು ಸತ್ಪ್ರಜೆಗಳಾಗಬೇಕಾದರೆ ಮಹಾಭಾರತದ ಅಧ್ಯಯನವು ಅತ್ಯಾವಶ್ಯಕ. ಆದರೆ ದುರ್ದೈವವಶದಿಂದ ಇದರ ಅಧ್ಯಯನಕ್ರಮವು ಬಿಟ್ಟುಹೋಗಿದೆ. ಪರಮಾತ್ಮನ ದಯೆಯಿಂದ ಈ ಸಮಯದಲ್ಲಿ ಮಹಾಗ್ರಂಥದ ಪರಿಚಯವು ಕನ್ನಡನಾಡಿನ ಜನರಿಗೆ ಸ್ವಲ್ಪವಾದರೂ ಲಭಿಸುವಂತಾಗಿದೆ. ನಾವೆಲ್ಲರೂ ಸೇರಿ ಈ ಪವಿತ್ರಗ್ರಂಥವನ್ನು ಮತ್ತಷ್ಟು ಜನಪ್ರಿಯವನ್ನಾಗಿ ಮಾಡಬೇಕು. ಇದನ್ನು ನಾವು ನಮ್ಮ ಜೀವಿತದ ಧ್ಯೇಯವನ್ನಾಗಿಟ್ಟುಕೊಳ್ಳಬೇಕು. ವಿಧರ್ಮೀಯರ ಧರ್ಮಪ್ರಚಾರವು ಸಮುದ್ರದ ಅಲೆಗಳಂತೆ ಭೋರ್ಗರೆಯುತ್ತಾ ನಮ್ಮೆಲ್ಲ ರನ್ನೂ ಆವರಿಸುತ್ತಿದೆ. ಅವರಿಗೆ ಹಣದ ಕೊರತೆಯಿಲ್ಲ. ಕೋಟ್ಯನುಕೋಟಿ ರೂಪಾಯಿಗಳನ್ನು ವೆಚ್ಚಮಾಡಿ ಅವರ ಮತಗ್ರಂಥಗಳನ್ನು ಪ್ರಚಾರಮಾಡು ತ್ತಿದ್ದಾರೆ. ತತ್ತ್ವದ ಬಗೆಗೆ ಹೇಳುವುದಾದರೆ ಅವರ ಮತಗ್ರಂಥಗಳಲ್ಲಿ ಮಹಾಭಾರತದಲ್ಲಿರುವ ಲೇಶಾಂಶತತ್ತ್ವವೂ ಇರುವುದಿಲ್ಲ. ಮಹರ್ಷಿಗಳಾದ ವ್ಯಾಸರು ನಮ್ಮ ಆತ್ಮೋನ್ನತಿಗಾಗಿ ತತ್ತ್ವರಾಶಿಯನ್ನೇ ಬಿಟ್ಟುಹೋಗಿದ್ದಾರೆ. ಹೊಸದಾಗಿ ನಾವು ಯಾರಿಂದಲೂ ಯಾವ ತತ್ತ್ವವನ್ನೂ ಆಮದು ಮಾಡಿಕೊಳ್ಳಬೇಕಾದ ಆವಶ್ಯಕತೆಯಿಲ್ಲ. ಇರುವುದನ್ನು ಅಧ್ಯಯನಮಾಡಿದರೆ ಸಾಕು. ಆ ತತ್ತ್ವಗಳಲ್ಲಿ ಕೆಲವನ್ನಾದರೂ ನಮ್ಮ ನಿತ್ಯಜೀವನದಲ್ಲಿ ಅಳವಡಿಸಿ ಕೊಂಡರೂ ಇಂದಿನ ದುರ್ಭರಸ್ಥಿತಿಯು ಸುಧಾರಿಸುವುದಂತೂ ನಿಶ್ಚಯ.

20ನೆಯ ಸಂಪುಟದ ಪ್ರಕಾಶನಸಮಾರಂಭವು ತಾ|| 13-07-80ನೇ ಭಾನುವಾರ ಸತ್ಯಪ್ರಮೋದಕಲ್ಯಾಣಮಂಟಪದಲ್ಲಿ ಬಹಳ ವಿಜೃಂಭಣೆ ಯಿಂದ ನಡೆಯಿತು. ಕರ್ನಾಟಕರಾಜ್ಯದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಆರ್. ಗುಂಡೂರಾಯರು ಸಂಪುಟವನ್ನು ಪ್ರಕಾಶನಗೊಳಿಸಿದರು. ವಿಧಾನಸಭೆಯ ಉಪಸಭಾಪತಿಗಳಾದ ಸನ್ಮಾನ್ಯ ಶ್ರೀ ವಿ. ಎಸ್. ಕೃಷ್ಣ ಅಯ್ಯರ್ ಅವರು ಮುಖ್ಯ ಅತಿಥಿಗಳಾಗಿದ್ದರು. ವಿದ್ವಾಂಸರಿಂದ ವೇದಪಠನ ವಾದ ನಂತರ ಸಮಾರಂಭವು ಪ್ರಾರಂಭವಾಯಿತು. ಶ್ರೀಮತಿ ವಿಜಯ ಲಕ್ಷ್ಮಿಯವರು ಸ್ವಾಗತಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿದರು. ವಿದ್ವಾನ್ ಹೆಚ್. ಎನ್. ರಂಗಸ್ವಾಮಿಯವರು ಸ್ವಾಗತಭಾಷಣಮಾಡುತ್ತಾ ಮಹಾ ಭಾರತದ ಸಂಪುಟಗಳನ್ನು ಕರ್ನಾಟಕದಲ್ಲಿರುವ ಎಲ್ಲ ಪ್ರೌಢಶಾಲೆಗಳಿಗೂ

ತೆಗೆದುಕೊಳ್ಳಬೇಕೆಂದು ಮುಖ್ಯಮಂತ್ರಿಗಳನ್ನು ಪ್ರಾರ್ಥಿಸಿದರು. ಮಂಗಳ ವಾದ್ಯಗಳು ಮೊಳಗುತ್ತಿದ್ದಂತೆ ಮುಖ್ಯಮಂತ್ರಿಗಳು 20ನೆಯ ಸಂಪುಟವನ್ನು ಪ್ರಕಾಶನಗೊಳಿಸಿದರು. ಬಳಿಕ ಪ್ರಕಾಶನದ ಅಧ್ಯಕ್ಷರಾದ ವೇ|| ಬ್ರಂ || ಶ್ರೀ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು 20ನೆಯ ಸಂಪುಟದ ವಿಷಯಗಳನ್ನು ಕುರಿತು ವಿದ್ವತ್ಪೂರ್ಣವಾದ ಭಾಷಣವನ್ನು ಮಾಡಿದರು. ಅನಂತರ ಶ್ರೀಮಾನ್ ವಿ. ಎಸ್. ಕೃಷ್ಣಅಯ್ಯರ್‌ರವರು ಮಾತನಾಡುತ್ತಾ– ಪ್ರಕಾಶನದವರು ನಿಃಸ್ವಾರ್ಥದಿಂದ ಅಗಾಧವಾದ ಕಾರ್ಯವನ್ನು ಮಾಡುತ್ತಿರುವರೆಂದೂ ಇವರಿಗೆ ಸನ್ಮಾನ್ಯ ಮುಖ್ಯಮಂತ್ರಿಗಳು ಖಂಡಿತವಾಗಿಯೂ ಸಹಾಯಮಾಡುವರೆಂದೂ–ಹೇಳಿದರು. ಅನಂತರ ಮಾತನಾಡಿದ ಮುಖ್ಯಮಂತ್ರಿಗಳು ಮಹಾಭಾರತದ ಹಿರಿಮೆಯನ್ನೂ ಮತ್ತು ಅದರಲ್ಲಿರುವ ಶ್ರೀಕೃಷ್ಣನ ಪಾತ್ರವನ್ನೂ ಈಗಿನ ಕಾಲದ ಹಿನ್ನೆಲೆಯೊಡನೆ ವಿವರಿಸಿ ಹೇಳಿ ದರು. ಕರ್ನಾಟಕದಲ್ಲಿರುವ ಎಲ್ಲ ಪ್ರೌಢಶಾಲೆಗಳಿಗೂ ಸಂಪುಟಗಳನ್ನು ತೆಗೆದುಕೊಳ್ಳಬೇಕೆಂಬ ಪ್ರಕಾಶನಸಮಿತಿಯವರ ಪ್ರಾರ್ಥನೆಗೆ ಉತ್ತರಿಸುತ್ತಾ– “ಒಂದು ಸಾವಿರ ಹೈಸ್ಕೂಲಿನವರು ಈ ಗ್ರಂಥವನ್ನು ಕೊಳ್ಳುತ್ತಿದ್ದಾರೆ. ಇನ್ನುಳಿದ ಒಂದು ಸಾವಿರದ ಐದು ನೂರು ಹೈಸ್ಕೂಲಿನವರೂ ಈ ಗ್ರಂಥ ವನ್ನು ಕೊಳ್ಳುವಂತೆ ಏರ್ಪಾಟುಮಾಡುತ್ತೇನೆ. ಇದು ಬಹಳ ಒಳ್ಳೆಯ ಕಾರ್ಯ. ಧರ್ಮರಕ್ಷಣೆಯ ಕಾರ್ಯವಾದ್ದರಿಂದ ನಾನು ಯಾವುದಕ್ಕೂ ಹೆದರುವುದಿಲ್ಲ. ಈ ಕಾರ್ಯವು ಬಹಳ ಹಿಂದೆಯೇ ಆಗಬೇಕಿತ್ತು. ಬಹಳ ನಿಧಾನವಾಗಿ ಹೋಗಿದೆ. ಸರ್ಕಾರದಿಂದ ಆಜ್ಞೆಯು ಆಯಿತೆಂದೇ ನೀವು ಭಾವಿಸಬಹುದು. ಧರ್ಮರಕ್ಷಣೆಗೆ ಭಾರತದ ಆಶೀರ್ವಾದ ಅರುವತ್ತೈದು ಕೋಟಿ ಜನರ ಮೇಲೆ ಇರಲಿ. ಭಾರತದ ಕೀರ್ತಿ ಬೆಳಗಲಿ ”–ಎಂದು ದೃಢವಾದ ಆಶ್ವಾಸನೆಯನ್ನು ನೀಡಿದರು. ಜಗದ್ಗುರು ಶ್ರೀಶಂಕರಾಚಾರ್ಯ ಶ್ರೀ ಶ್ರೀರಾಘವೇಂದ್ರಭಾರತೀ ಸ್ವಾಮಿಗಳವರು, ರಾಮಚಂದ್ರಾಪುರಮಠ–ಇವರು ಕಳುಹಿಸಿದ್ದ ಆಶೀರ್ವಾದ ಫಲಮಂತ್ರಾಕ್ಷತೆಗಳನ್ನು ಮುಖ್ಯಮಂತ್ರಿಗಳು ಸಂಪಾದಕಮಂಡಲಿಯ ವಿದ್ವಾಂಸರಿಗೆ ಕೊಟ್ಟು ಗೌರವಿಸಿದರು. ವಂದನಾರ್ಪಣೆಯನಂತರ ಶಾಂತಿಪಾಠದೊಡನೆ ಸಮಾರಂಭವು ಮುಕ್ತಾಯವಾಯಿತು.

ಮುಖ್ಯಮಂತ್ರಿಗಳ ಆಶ್ವಾಸನೆಯನ್ನವಲಂಬಿಸಿ 21ನೆಯ ಸಂಪುಟದ ಹನ್ನೊಂದು ಸಾವಿರ ಪ್ರತಿಗಳನ್ನು ಛಾಪಿಸಿದ್ದೇವೆ. ಆದರೆ ಸರ್ಕಾರದ ವತಿ

ಯಿಂದ ಇದುವರೆಗೆ ಅಧಿಕೃತವಾದ ಆಜ್ಞೆಯು ಬಂದಿರುವುದಿಲ್ಲ. ಅದಕ್ಕಾಗಿ ಪ್ರಯತ್ನಿಸುತ್ತಿರಲಾಗಿದೆ. ಮುಖ್ಯಮಂತ್ರಿಗಳಾದ ಶ್ರೀ ಆರ್. ಗುಂಡೂ ರಾಯರು ನುಡಿದಂತೆ ನಡೆಯುವ ಸ್ವಭಾವದವರಾದುದರಿಂದ ಕರ್ನಾಟಕದ ಎಲ್ಲ ಪ್ರೌಢಶಾಲೆಗಳಿಗೂ ಮಹಾಭಾರತವನ್ನು ತೆಗೆದುಕೊಳ್ಳುವಂತೆ ಆಜ್ಞೆ ಯಾಗುವುದರಲ್ಲಿ ನಮಗೆ ಸಂಶಯವಿಲ್ಲ. ಆದರೆ ಸ್ವಲ್ಪ ತಡವಾಗಿದೆ. ಮುಂದಿನ ಸಂಪುಟದ ವೇಳೆಗಾದರೂ ಸಂತಸದ ಸುದ್ದಿಯನ್ನು ನಮ್ಮ ಗ್ರಾಹಕರಿಗೆ ತಿಳಿಸಬಹುದೆಂಬ ಆಶಯವನ್ನು ಹೊಂದಿರುತ್ತೇವೆ.

1980ನೆಯ ವರ್ಷದಲ್ಲಿ ಗ್ರಾಹಕರ ಸಂಖ್ಯೆಯು ಗಣನೀಯವಾಗಿ ಹೆಚ್ಚಿದೆ. ಕೆನರಾ, ಸಿಂಡಿಕೇಟ್, ಕಾರ್ಪೊರೇಷನ್, ಕರ್ನಾಟಕ ಮತ್ತು ನ್ಯಾಷನಲ್ ಕೋ-ಆಪರೇಟಿವ್–ಈ ಐದು ಬ್ಯಾಂಕಿನವರು ಸಾಲದ ಸೌಲಭ್ಯ ವನ್ನು ಮುಂದುವರಿಸಿರುತ್ತಾರೆ. ಕನ್ನಡಿಗರು ಇನ್ನೂ ಹೆಚ್ಚುಸಂಖೆಯಲ್ಲಿ ಈ ಸೌಲಭ್ಯವನ್ನು ಪಡೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ.

ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಎಚ್. ಎಸ್. ವರದದೇಶಿಕಾ ಚಾರ್ಯರಂಗಪ್ರಿಯರು ಗ್ರಂಥದ ಪ್ರಕಟಣೆಯಲ್ಲಿ ಸಮಯೋಚಿತವಾದ ಸಲಹೆಗಳನ್ನು ನೀಡಿ ಉಪಕರಿಸುತ್ತಿದ್ದಾರೆ.

ಸಂಪಾದಕಮಂಡಲಿಯ ವಿದ್ವಾಂಸರು ಯಥಾಪೂರ್ವವಾಗಿ ಸಂಪೂರ್ಣಶ್ರಮವಹಿಸಿ ಈ ಗ್ರಂಥವನ್ನು ಸಿದ್ಧಗೊಳಿಸುತ್ತಿದ್ದಾರೆ. ಎಷ್ಟೇ ಶ್ರಮವಾದರೂ ಸಾಧ್ಯವಾದಷ್ಟು ಬೇಗ ಈ ಮಹಾಗ್ರಂಥವನ್ನು ಮುಗಿಸ ಬೇಕೆಂಬ ಆತುರವು ನಮ್ಮ ವಿದ್ವಾಂಸರಿಗಿರುತ್ತದೆ. ದಯಾಮಯನಾದ ಪರಮಾತ್ಮನು ಇಂತಹ ಸೌಮನಸ್ಯದಿಂದ ಕೂಡಿರುವ ನಿಃಸ್ವಾರ್ಥಿಗಳಾದ ವಿದ್ವಾಂಸರನ್ನು ಈ ಮಹಾಕಾರ್ಯಕ್ಕೆ ಒದಗಿಸಿಕೊಟ್ಟಿದ್ದಾನೆ. ಪ್ರಕಾಶನದ ಅಧ್ಯಕ್ಷರಿಗೂ ಸಂಪಾದಕಮಂಡಲಿಯ ವಿದ್ವಾಂಸರಿಗೂ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸುವುದು ನಮ್ಮೆಲ್ಲರ ಮುಖ್ಯಕರ್ತವ್ಯವೂ ಆಗಿರುತ್ತದೆ.

ನಿಃಸ್ವಾರ್ಥಿಗಳಾದ ಪ್ರಚಾರಕರ ಸಂಖ್ಯೆಯೂ ಹೆಚ್ಚುತ್ತಿದೆ. ಅನೇಕ ಸ್ಥಳಗಳಲ್ಲಿ ಗ್ರಾಹಕರೇ ನಮ್ಮ ಗೌ|| ಪ್ರಚಾರಕರಾಗಿಯೂ ಕಾರ್ಯನಿರ್ವಹಿ ಸುತ್ತಿದ್ದಾರೆ. ಗ್ರಾಹಕರ ಸಂಖ್ಯೆಯೂ ಅಮಿತವಾಗಿ ಬೆಳೆಯಬೇಕು. ಕನ್ನಡ ನಾಡಿನ ಪ್ರತಿಯೊಬ್ಬ ಕನ್ನಡಿಗರ ಮನೆಯಲ್ಲಿಯೂ ಮಹಾಭಾರತದ

ಜ್ಞಾನಜ್ಯೋತಿಯು ಬೆಳಗಬೇಕು. ಈ ನಮ್ಮ ಕನಸು ಪರಮಾತ್ಮನ ದಯೆಯಿಂದ ನನಸಾಗಲಿ.

ಈ ಸಂಪುಟಕ್ಕೆ ಚೊಕ್ಕದಾದ ಮುನ್ನುಡಿಯನ್ನು ಬರೆದುಕೊಟ್ಟು ಉಪಕರಿಸಿರುವ ಸನ್ಮಾನ್ಯ ಡಾ|| ಪು. ತಿ. ನರಸಿಂಹಾಚಾರ್ಯರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇವೆ.

ಮಹಾಭಾರತದ ಬಂಧುಗಳೆಲ್ಲರಿಗೂ ಪರಮಾತ್ಮನು ಆಯು ರಾರೋಗ್ಯೈಶ್ವರ್ಯಾದಿಗಳನ್ನು ಕೊಟ್ಟು ಕಾಪಾಡಲೆಂಬ ಮಾನಸಿಕಪ್ರಾರ್ಥನೆ ಯೊಡನೆ ವಿರಮಿಸುವೆವು.

**ಸರ್ವೇ ಜನಾಃ ಸುಖಿನೋ ಭವನ್ತು ಸಮಸ್ತಸನ್ಮಙ್ಗಲಾನಿ ಭವನ್ತು**

**–ಪ್ರಕಾಶಕರು.**

## ಚತುರ್ಥ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಪರಮಾತ್ಮನ ಕರುಣೆಯಿಂದಲೂ ಶ್ರೀರಂಗ ಸದ್ಗುರುವಿನ ಆಶೀರ್ವಾದದಿಂದಲೂ ಸತ್ಪುರುಷರ ಸಹಕಾರ ಸದಾಶಯ ಗಳಿಂದಲೂ 21ನೇ ಸಂಪುಟದ 4ನೇ ಪುನರ್ಮುದ್ರಣವನ್ನು ಮುಗಿಸುತ್ತಿದ್ದೇವೆ. ಈ ಸಂಪುಟವು ಸೇರಿ ಪ್ರಸಕ್ತ ನಮ್ಮಲ್ಲಿ ಮಹಾಭಾರತದ 32 ಸಂಪುಟಗಳ ಪೈಕಿ 27 ಸಂಪುಟಗಳು ಲಭ್ಯವಾಗುತ್ತವೆ. ಉಳಿದ 5 ಸಂಪುಟಗಳನ್ನು ಸಾಧ್ಯವಾದಷ್ಟು ಬೇಗ ಮುಗಿಸಬೇಕೆಂಬ ಧಾವಂತದಿಂದಿದ್ದೇವೆ. ಈ ಸಮಯದಲ್ಲಿ ಹೊಸ ಗ್ರಾಹಕರ ನೆರವನ್ನು ಅಪೇಕ್ಷಿಸುತ್ತೇವೆ. 1,500 ರೂ.ಗಳಿಗೆ 32 ಸಂಪುಟಗಳು ಉತ್ತಮ ಪ್ರತಿಗಳನ್ನು ಕೊಡಲಾಗುವುದು. ಎಲ್ಲಾ ಸಂಪುಟಗಳು ಹೊರಬಂದ ಮೇಲೆ 32 ಸಂಪುಟಗಳ ಪೂರ್ಣಮಾಲಿಕೆಗೆ 1,600 ರೂ. ಆಗುತ್ತದೆ. ಈ ಸದಾವಕಾಶವನ್ನು ಉಪಯೋಗಿಸಿಕೊಂಡು ಹೆಚ್ಚು ಮಂದಿ ಗ್ರಾಹಕರಾಗಿ ನಮ್ಮ ಧರ್ಮಕಾರ್ಯಕ್ಕೆ ಒತ್ತಾಸೆ ನೀಡಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. 5 ಸಂಪುಟಗಳ ಪುನರ್ಮುದ್ರಣಕ್ಕೆ 6 ಲಕ್ಷ ರೂ. ವೆಚ್ಚವಾಗುತ್ತದೆ. ನಮ್ಮ ಗ್ರಾಹಕರಲ್ಲಿ ಆಢ್ಯರಾದವರು ಒಂದು ಸಂಪುಟದ ಪುನರ್ಮುದ್ರಣಕ್ಕೆ ಆಗುವ ವೆಚ್ಚವನ್ನು ವಹಿಸಬಹುದು. ಅಂತಹ ದಾನಿಗಳ ಸ್ಮರಣೆಯು ಕನ್ನಡಿಗರಲ್ಲಿ ಶಾಶ್ವತವಾಗಿ ಉಳಿದಿರುತ್ತದೆ. ದಯಾಮಯನಾದ ಪರಮಾತ್ಮನು ಸಕಲರಿಗೂ ಸನ್ಮಂಗಳವನ್ನು ಅನುಗ್ರಹಿಸಲಿ.

**–ಪ್ರಕಾಶಕರು**

## ಎರಡನೆಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಮಹಾಭಾರತದ 21ನೆಯ ಸಂಪುಟದ ಪುನರ್ಮುದ್ರಣವನ್ನು ಮುಗಿಸಿ, ಬಹಳ ದಿವಸಗಳಿಂದ ಕಾದಿದ್ದ ಗ್ರಾಹಕರಿಗೆ ವಿತರಣೆಮಾಡಲು ಪ್ರಾರಂಭಿಸಲಾಗಿದೆ. ಕಾರ್ಯಕ್ಷೇತ್ರದಲ್ಲಿ ಸಮಸ್ಯೆಗಳು ಪರಿಹಾರವಾಗುವುದರ ಬದಲಾಗಿ ಹೊಸ-ಹೊಸ ಸಮಸ್ಯೆಗಳು ಹುಟ್ಟಿ ಕೊಳ್ಳುತ್ತಿವೆ. ಎಲ್ಲವೂ ಭಗವಂತನ ದಯೆಯಿಂದ ಪರಿಹಾರವಾಗಬೇಕು. ಮುಂದೆ ರಾಮಾಯಣದ ಮೂರನೆಯ ಸಂಪುಟವನ್ನು ಮುದ್ರಣಕ್ಕೆ ತೆಗೆದು ಕೊಳ್ಳಲಾಗುವುದು. ಕಾಲುಭಾಗ ಮುದ್ರಣ ಈಗಾಗಲೇ ಮುಗಿದಿರುತ್ತದೆ. ಮಾರ್ಚ್ ಕಡೆಯೊಳಗೆ ಅಥವಾ ರಾಮನವಮಿಯ ವೇಳೆಗೆ ಸಂಪುಟವನ್ನು ಹೊರತರುವ ಆಶಯವಿದೆ. ಅನಂತರ ಮಹಾಭಾರತದ ಐದನೇ ಸಂಪುಟ ವನ್ನೂ ರಾಮಾಯಣದ ಮೊದಲಸಂಪುಟವನ್ನೂ ಜೊತೆಯಲ್ಲಿಯೇ ಪುನರ್ಮುದ್ರಣಕ್ಕೆ ತೆಗೆದುಕೊಳ್ಳಲಾಗುವುದು. ಸಂಪುಟಗಳು ಬಹಳಬೇಗ ಮುಗಿದುಹೋಗುತ್ತಿವೆ. 15-16-27-28 ಈ ಸಂಪುಟಗಳ ಕೆಲವೇ ಪ್ರತಿ ಗಳು ಉಳಿದಿವೆ. ಹೊಸ ಗ್ರಾಹಕರಿಗೆ 16 ಸಂಪುಟಗಳಿಗಿಂತಲೂ ಕಡಿಮೆ ಯಾಗಿ ಕೊಡಬಾರದೆಂದು ಯೋಚಿಸಲಾಗಿದೆ. ಪರಮಾತ್ಮನ ಅನುಗ್ರಹ ದಿಂದ ಎಲ್ಲವೂ ಸಾಧ್ಯವಾಗಬೇಕು.

ಈ ಸಂಪುಟದ ತಪ್ಪು-ಒಪ್ಪುಗಳನ್ನು ಸಹೃದಯರಾದ ಸಂಪಾದಕ ಮಂಡಲಿಯ ವಿದ್ವಾಂಸರು ನೋಡಿಕೊಟ್ಟಿರುತ್ತಾರೆ. ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕವಂದನೆಗಳು.

ಈ ಸಂಪುಟವನ್ನು ಪಡೆದುಕೊಳ್ಳುವ ಪ್ರತಿಯೊಬ್ಬ ಗ್ರಾಹಕರೂ ರಾಮಾಯಣ-ಭಾರತದರ್ಶನಗಳಿಗೆ ಗ್ರಾಹಕರಾಗಿ ಪ್ರೋತ್ಸಾಹಿಸಬೇಕಾಗಿ ವಿನಂತಿಸುತ್ತೇನೆ

ಭಗವಂತನ ದಯೆಯಿಂದ ಸಕಲರಿಗೂ ಸುಖ-ಶಾಂತಿಗಳು ಲಭಿಸಲಿ.

—ಪ್ರಕಾಶಕರು.

# ಮುನ್ನುಡಿ

ಶ್ರೀಮನ್ಮಹಾಭಾರತದ ಶಾಂತಿಪರ್ವದ ಈ ಸಂಪುಟಕ್ಕೆ ಸನ್ಮಾನ್ಯ ಸಂಪಾದಕರು ನನ್ನಿಂದ ಒಂದು ಮುನ್ನುಡಿಯನ್ನು ಕೋರಿದ್ದಾರೆ. ಇದೊಂದು ಮಹಾಗೌರವವೆಂದು ನನ್ನೆಣಿಕೆ. ಮಹಾಭಾರತದಲ್ಲಿ ಒಂದು ದೋಷವಿದೆ. ಅದನ್ನು ಓದುತ್ತಿದ್ದರೆ ಮಿಕ್ಕಾವ ಗ್ರಂಥವೂ ನಮಗೆ ರುಚಿಸುವುದಿಲ್ಲ; ಮತ್ತಾವ ಬರವಣಿಗೆಯಲ್ಲೂ ನಮ್ಮ ಕೈಯೋಡುವುದಿಲ್ಲ. ಈ ಸಂಪುಟ ವನ್ನೋದುತ್ತಾ ನನಗೆ ಕಾಲಕಳೆದುದು ತಿಳಿಯಲಿಲ್ಲ. **“ಕವಿರಾಜಾಂ ಚ ವಿಜ್ಞಾಯ ಕುತಃ ಕಾವ್ಯಕ್ರಿಯಾದರಃ?”** ಬೆಳಿಗ್ಗೆ ನನ್ನ ಸಹಧರ್ಮಿಣಿ “ಇದೇನು ನಿಮ್ಮ ಮುಖ ಸಪ್ಪಗಿಲ್ಲವಲ್ಲ ಈ ದಿನ! ಎಲ್ಲಿಂದ ಬಂತು ಈ ಕಳೆ?” ಎಂದಳು. ನಾನೆಂದೆ : “ಶ್ರೀಕೃಷ್ಣನನ್ನು ಕಂಡೆ. ಆ ಮಹಾತ್ಮನ ದಿನಚರಿಯನ್ನು ಸವಿದೆ. ಜ್ಞಾತಿವಧೆಗಾಗಿ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದ ಧರ್ಮರಾಯ ಹಸ್ತಿನಾವತಿಯ ಹೊರಗಡೆಯೇ ಆ ಹಾಳು ಕಳದಲ್ಲಿ. ರಾಜ್ಯ ಒಲ್ಲೆ ಎಂದ ; ಸಂನ್ಯಾಸಿಯಾಗಿ ಕಾಡಿಗೆ ಹೋಗುತ್ತೇನೆ ಎಂದ. ತಮ್ಮಂದಿರಿಗೂ ದ್ರೌಪದಿಗೂ ಪೇಚಿಗಿಟ್ಟುಕೊಂಡಿತು. ನಾರದರು ಕರ್ಣನ ವಿಚಾರವೆತ್ತಿ ಧರ್ಮರಾಜನ ದುಗುಡವನ್ನು ಹೆಚ್ಚಿಸಿದರು. ಭೀಮ, ಅರ್ಜುನ, ನಕುಲ, ಸಹದೇವ, ದೇವಸ್ಥಾನ ಎಂಬ ಋಷಿ, ವ್ಯಾಸರು, ಕೊನೆಗೆ ಕೃಷ್ಣ–ಇಷ್ಟು ಜನ ಮುತ್ತಿಕೊಂಡು ಧರ್ಮರಾಯನ ಕೊರಗಿನ ಮೇಲೆ ತಮ್ಮ ವಾಗ್ಬಾಣಗಳನ್ನು ಎಸೆದರು. ಆದರೆ ಆತನೇನು ದಡ್ಡನೇ? ಅವುಗಳನ್ನು ಪ್ರತಿಮಾತಿನಿಂದ ನಿವಾರಿಸಿಕೊಂಡು ತನ್ನ ಶೋಕವನ್ನೇ ಕಾಪಾಡಿಕೊಳ್ಳುತ್ತಿದ್ದ. ಈ ಸೆಣಸಾಟ ನಿಡುಕಾಲದವರೆಗೆ ನಡೆದು ಕೊನೆಗೆ ಕೃಷ್ಣನ ಮಾತಿಗೆ ಕಿವಿಗೊಟ್ಟು ಪ್ರವೃತ್ತಿಮಾರ್ಗವನ್ನೇ ವರಿಸಿ ರಾಜಧಾನಿಯಾದ ಹಸ್ತಿನಾವತಿ ಯನ್ನು ರಾಜವೈಭವದಿಂದ ಪ್ರವೇಶಿಸುತ್ತಾನೆ ಧರ್ಮಜ. ಈ ನಗರ ಪ್ರವೇಶೋತ್ಸವ ತುಂಬ ಮನೋಹರವಾಗಿದೆ. ನಗರವನ್ನು ಪ್ರವೇಶಿಸುವಾಗ ಎತ್ತಿನ ಗಾಡಿಯಲ್ಲಿ ಕುಳಿತುಕೊಂಡು ಹೋಗಬೇಕಂತೆ! ಆ ಸರ್ವಾಲಂಕಾರ ಭೂಷಿತವಾದ ರಥಕ್ಕೆ ಹದಿನಾರು ಬಲು ಸೂಟಿಯಾದ ಎತ್ತುಗಳನ್ನು ಕಟ್ಟಿದ್ದರಂತೆ. ಮೂಕಿಯ ಮೇಲೆ ಕುಳಿತು ಭೀಮ ಆ ಎತ್ತುಗಳ ಹಗ್ಗಗಳನ್ನು ಹಿಡಿದ. ಅರ್ಜುನ ಬೆಳ್ಗೊಡೆಯನ್ನು ಎತ್ತಿದ. ನಕುಲ-ಸಹದೇವರು ಚಾಮರ

ಗಳನ್ನು ಬೀಸಿದರು. ಯುಯುತ್ಸು ಮತ್ತು ಸಾತ್ಯಕಿಯೊಡನೆ ಶ್ರೀಕೃಷ್ಣ ರಥದಲ್ಲಿ ಕುಳಿತು ಹಿಂದೆ ಬರುತ್ತಿದ್ದನು. ಧೃತರಾಷ್ಟ್ರ ಗಾಂಧಾರಿಯೊಡನೆ ಪಲ್ಲಕ್ಕಿಯಲ್ಲಿ ಕುಳಿತು ಮುಂದೆ ಹೋಗುತ್ತಿದ್ದ. ಕುಂತೀ-ದ್ರೌಪದಿಯರು ಯಥಾಯೋಗ್ಯವಾದ ಯಾನಗಳಲ್ಲಿ ವಿದುರನನ್ನು ಮುಂದುಮಾಡಿಕೊಂಡು ಯುಧಿಷ್ಠಿರನನ್ನು ಅನುಸರಿಸಿ ಹೋಗುತ್ತಿದ್ದರು. ಪೌರರ ಉತ್ಸಾಹವನ್ನೂ ಹೇಳತೀರದು. ಕಣ್ಣುತುಂಬ ಇಂಥ ವೈಭವದ ಮೆರವಣಿಗೆಯನ್ನು ನೋಡಿದೆ–ನಿಜ, ಮಹಾಭಾರತಕ್ಕೆ ಒಬ್ಬ ನಾಯಕನಿದ್ದರೆ–ಆತ ಧರ್ಮರಾಜ ಎನಿಸಿತು. ಇಲ್ಲಿ ಒಂದು ಸ್ವಾರಸ್ಯ ನೋಡು–'ಆತ ಸಂನ್ಯಾಸ ತೆಗೆದುಕೊಂಡು ಕಾಡಿಗೆ ಹೋದರೆ ಹೋಗಲಿ, ನಾವೇ ರಾಜ್ಯ ಆಳೋಣ' ಎಂದು ಯಾರೂ ಮುಂದೆ ಬರಲಿಲ್ಲ ; ಆ ಸಲಹೆಯನ್ನೂ ಯಾರೂ ಕೊಡಲಿಲ್ಲ, ನೋಡಿ ದೆಯಾ! ಎಲ್ಲರೂ ಆತನಿಗೆ ತಗ್ಗಿ ನಡೆಯುತ್ತಾರೆ. ಆತ ಒಪ್ಪದೆ ಯಾರೂ ಏನನ್ನೂ ಮಾಡಲೊಲ್ಲರು. ಆದರೆ ಆತನೋ ನಿಗರ್ವಿ, ಧರ್ಮಿಷ್ಠ. ಯಾರ ಕಳೆಯನ್ನೂ ಕುಂದಿಸದೆ, ತಾನೂ ತೇಜಗುಂದದೇ ಹೇಗೆ ಎಲ್ಲರೊಡನೆಯೂ ವರ್ತಿಸುತ್ತಾನೆ. ನಮ್ಮ ಯುಧಿಷ್ಠಿರ! ಇಷ್ಟೇ ಅಲ್ಲ. ಭೀಷ್ಮನನ್ನೂ ಕಂಡೆ. ಶ್ರೀಕೃಷ್ಣನ ಸಲಹೆಯಂತೆ ಧರ್ಮಜ ಭೀಷ್ಮನ ಸನಿಹಕ್ಕೆ ಹೋಗಿ ಕುಳಿತು ರಾಜ ಮತ್ತು ಸಾಮಾಜಿಕಧರ್ಮರಹಸ್ಯಗಳನ್ನೆಲ್ಲ ಕೇಳಿ ತಿಳಿದುಕೊಳ್ಳುವ ಕೌತುಕದ ದೃಶ್ಯ ಇನ್ನೂ ಕಣ್ಣಿಗೆ ಕಟ್ಟಿದೆ. ಧ್ಯಾನಸ್ಥನಾಗಿ ಕಟ್ಟಿಗೆಯಂತೆ ನಿಶ್ಚೇಷ್ಟನಾಗಿ ಕುಳಿತಿದ್ದ ಹರಿಯನ್ನು ಯುಧಿಷ್ಠಿರ ನೋಡಿ ಎಷ್ಟು ಆಶ್ಚರ್ಯಪಟ್ಟ ಕಂಡೆಯಾ! ಮತ್ತು ಶ್ರೀಕೃಷ್ಣ-ಭೀಷ್ಮರ ಸಮಾಗಮನದ ದೃಶ್ಯವೋ–ಇಷ್ಟನ್ನೂ ಕಂಡಮೇಲೆ ನನ್ನ ಮನಸ್ಸೂ ಅದನ್ನು ಹೋಳೆಸುವ ಮುಖವೂ ಅರಳಿ ಕಳೆಗೊಳ್ಳದೇ ಇರಲು ಹೇಗೆ ಸಾಧ್ಯ?" ಎಂದೆ. ಆಕೆ ನಕ್ಕು ಪುಸ್ತಕವನ್ನು ಕೈಗೆತ್ತಿಕೊಂಡಳು.

ಕನ್ನಡನಾಡಿನ ನಮ್ಮ ಬಂಧುಗಳು ಇಂಥ ದಿವ್ಯಪುರುಷರ ವೈಭವ ಪೂರ್ಣವಾದ ದೃಶ್ಯಗಳಿಂದ ಕೂಡಿರುವ ಈ ಸುಂದರಸಂಪುಟವನ್ನು ಕೈಗೆತ್ತಿಕೊಂಡು ಓದಿ ಧರ್ಮಜನಂತೆ ಮನೋಮಾಲಿನ್ಯವನ್ನು ನೀಗಿ ಗೆಲುವುಗೊಳ್ಳುವರೆಂಬ ಬಗೆಗೆ ನನಗೆ ಸಂದೇಹವಿಲ್ಲ. ಓದಿಸಿಕೊಂಡು ಹೋಗುವ ಕನ್ನಡದ ಚೆಲುನುಡಿಯಲ್ಲಿ ಮೂಲಕ್ಕೆ ಅಪಚಾರವಾಗದಂತೆ ಈ

ಭಾಷಾಂತರಕಾರರು ಮಹಾಭಾರತವನ್ನು ಅನುವಾದಿಸಿ ಅನೇಕ ಸಂಪುಟ ಗಳಲ್ಲಿ ಪ್ರಕಟಿಸುತ್ತಿದ್ದಾರೆ. ಇದು ಸಾಮಾನ್ಯ ಕೆಲಸವಲ್ಲ. ತುಂಬ ಮಹತ್ತ್ವಪೂರ್ಣವಾದದ್ದು. ಸ್ವಾರ್ಥರಹಿತರಾದ ನಿಷ್ಠವಿದ್ವಾಂಸರಿಂದ ಮಾತ್ರ ಇಂಥ ಕೆಲಸ ಸಾಧ್ಯ. ಈ ಕಾರ್ಯದಲ್ಲಿ ಪ್ರವರ್ತಿಸುವವರು ನಮ್ಮ ಆರ್ಷಸಂಸ್ಕೃತಿಯಲ್ಲಿನ ಮಹಾನುರಾಗದಿಂದ ಪ್ರವೃತ್ತರಾದವರು. ಅವರಿಗೆ ನನ್ನ ಹಾರ್ದ ಅಭಿವಂದನೆಗಳು ಹಾಗೂ ಅಭಿನಂದನೆಗಳು. ಈ ಸಂಪುಟ ದಲ್ಲಿ ಭೀಷ್ಮಸ್ತವರಾಜವು ಬಂದಿರುವುದು ಕಂಡು ತುಂಬ ಸಂತೋಷ ವಾಯಿತು. ಅದರಲ್ಲಿನ ಒಂದು ಶ್ಲೋಕ ನನಗೆ ಬಾಲ್ಯದಿಂದಲೂ ಪರಿಚಿತ ವಾಗಿ ಈಗಲೂ ನಿತ್ಯ ನನ್ನ ಧ್ಯಾನವಿಷಯವಾಗಿದೆ :

**ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಂಗಸಂಧಿಷು ।**
**ಕುಕ್ಷೌ ಸಮುದ್ರಾಸ್ತಿಷ್ಠನ್ತಿ ತಸ್ಮೈ ತೋಯಾತ್ಮನೇ ನಮಃ ॥**

[ ಪು.396-ಶ್ಲೋಕ 61 ]

ಇಂಥ ಕಾವ್ಯರತ್ನಗಳನ್ನೊಳಗೊಂಡ ಈ ಸಂಪುಟವನ್ನು ನನಗೆ ತಂದು ಕೊಟ್ಟು, ಓದಿನ ಔತಣವನ್ನಿತ್ತು, ಆ ವಿಷಯದಲ್ಲಿ ಎರಡು ಮಾತುಗಳನ್ನು ಬರೆಯುವ ಪುಣ್ಯಕೆಲಸಕ್ಕೆ ನನ್ನನ್ನು ನಿಯೋಜಿಸಿದ ಈ ಮಿತ್ರರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ. ಪುನಃ ಅಭಿನಂದಿಸಿ, ನಾಡೂ, ನಾಡಿನ ಶ್ರೀಮಂತರೂ ಈ ಶುಭಕಾರ್ಯಕ್ಕೆ ಇತೋಪ್ಯತಿಶಯವಾಗಿ ನೆರವೀಯಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.

ಮೈಸೂರು
10-02-81 **ಪು. ತಿ. ನರಸಿಂಹಾಚಾರ್.**



# ಮಹಾಭಾರತ-ಶಾಂತಿಪರ್ವ-ಇಪ್ಪತ್ತೊಂದನೆಯ ಸಂಪುಟದ ವಿಷಯಾನುಕ್ರಮಣಿಕೆ

## ಆಶೌಚ ನಿರ್ಣಯ

**ತತ್ರ ತೇ ಸುಮಹಾತ್ಮಾನೋ ನ್ಯವಸನ್ಪಾಣ್ಡುನನ್ದನಾಃ। ಶೌಚಂ ನಿವರ್ತಯಿಷ್ಯನ್ತೋ ಮಾಸಮಾತ್ರಂ ಬಹಿಃ ಪುರಾತ್** ( ೨ ) ಪಾಂಡವರು ಶುದ್ಧಿಯ ಕಾರ್ಯವನ್ನು ಪೂರ್ತಿಗೊಳಿಸುತ್ತಾ ಒಂದು ತಿಂಗಳು ಹಸ್ತಿನಾ ಪಟ್ಟಣದ ಹೊರಭಾಗದಲ್ಲಿ ಗಂಗಾನದಿಯ ತೀರದಲ್ಲಿದ್ದರು–ಎಂಬುದಾಗಿ ಇಲ್ಲಿ ಹೇಳಿದೆ : ಆದರೆ ಕ್ಷತ್ರಿಯರಿಗೆ ಮೃತಾಶೌಚವು ಒಂದು ತಿಂಗಳು ಇರುವುದಿಲ್ಲ. **ದಶಾಹಾಚ್ಛುಧ್ಯತೇ ವಿಪ್ರೋ ದ್ವಾದಶಾಹೇನ ಭೂಪತಿಃ। ವೈಶ್ಯಃ ಪಞ್ಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ** ( ಮನುಸ್ಮೃತಿ ಅಧ್ಯಾಯ ೫-ಶ್ಲೋಕ ೮೨ ) ಸಪಿಂಡನು ಮೃತನಾದ ಹತ್ತು ದಿವಸಗಳು ಕಳೆದನಂತರ ಬ್ರಾಹ್ಮಣನು ಶುದ್ಧನಾಗುತ್ತಾನೆ. ಹನ್ನೆರಡು ದಿವಸಗಳು ಕಳೆದನಂತರ ಕ್ಷತ್ರಿಯನು ಶುದ್ಧನಾಗುತ್ತಾನೆ. ಹದಿನೈದು ದಿವಸಗಳು ಕಳೆದನಂತರ ವೈಶ್ಯನು ಶುದ್ಧನಾಗುತ್ತಾನೆ. ಒಂದು ತಿಂಗಳು ಕಳೆದನಂತರ ಶೂದ್ರನು ಶುದ್ಧನಾಗುತ್ತಾನೆ–ಈ ಮನುವಾಕ್ಯದಂತೆ ಒಂದು ತಿಂಗಳಿನ ಮೃತಾಶೌಚವು ಶೂದ್ರನಿಗಿರುವುದೇ ಹೊರತು ಕ್ಷತ್ರಿಯನಿಗಿರುವುದಿಲ್ಲ. ಅದರಲ್ಲಿಯೂ ಯುದ್ಧದಲ್ಲಿ ಹತನಾದರೆ ಅವನ ದಾಯಾದರಿಗೆ ಆಶೌಚವೇ ಇಲ್ಲವೆಂಬ ವಾಕ್ಯವೂ ಮನುಸ್ಮೃತಿಯಲ್ಲಿಯೇ ಇದೆ. **ಉದ್ಯತೈರಾಹವೇ ಶಸ್ತ್ರೈಃ ಕ್ಷತ್ರಧರ್ಮಾಹತಸ್ಯ ಚ। ಸದ್ಯಃ ಸನ್ತಿಷ್ಠತೇ ಯಜ್ಞಸ್ತಥಾ ಶೌಚಮಿತಿಸ್ಥಿತಿಃ** [ಮನು ಅಧ್ಯಾಯ ೫ ಶ್ಲೋಕ ೮ ]– ಯುದ್ಧದಲ್ಲಿ ಎತ್ತಿದ ಆಯುಧಗಳಿಂದ ಹತನಾದ ಕ್ಷತ್ರಿಯಧರ್ಮಿಗೆ ಒಡನೆಯೇ ಯಜ್ಞಮಾಡಿದ ಫಲವು ಲಭ್ಯವಾಗುತ್ತದೆ ( ಆರಂಭಿಸಿದ್ದ ಯಜ್ಞವು ಮುಗಿಯುತ್ತದೆ.) ಹಾಗೆಯೇ ಸಪಿಂಡರಿಗೆ ಶುದ್ಧಿಯೂ ಉಂಟಾಗುತ್ತದೆ. ಅರ್ಥಾತ್ ಯುದ್ಧದಲ್ಲಿ ಸಪಿಂಡರು ಸತ್ತರೆ ಆಶೌಚವಿಲ್ಲ. ಹೀಗಿರುವಾಗ ಮಾಸದ ಶುದ್ಧಿಕಾರ್ಯವೆಂದರೇನು? ಇದಕ್ಕೆ ವ್ಯಾಖ್ಯಾನಕಾರರು ಒಂದು ಸಮಾಧಾನವನ್ನು ಹೇಳಿದ್ದಾರೆ : **ಸೌಪ್ತಿಕೇ ಪಶುವದ್ಧತಾನಾಂ ದ್ವಾದಶಾಹಮಾಶೌಚಮಸ್ತಿ** –ಮಲಗಿದ್ದಾಗಲೇ ಪಶುಗಳಂತೆ ವಧಿಸಲ್ಪಟ್ಟು ಹತರಾದವರ ಸಲುವಾಗಿ ಹನ್ನೆರಡು ದಿವಸಗಳ ಆಶೌಚವಿದೆ. **ತೇನ ಯುದ್ಧದಿನೇಷ್ವಷ್ಟಾದಶಾಹಪರ್ಯನ್ತಂ ಪ್ರತ್ಯಹಮಾಶೌಚಪ್ರಾಪ್ತಿಃ** ಯುದ್ಧದ ಪ್ರಾರಂಭದ ದಿವಸದಿಂದ ಹದಿನೆಂಟು ದಿವಸಗಳವರೆಗೆ,

ಯುದ್ಧದಲ್ಲಿ ಸಂಭವಿಸಿದ ಆಶೌಚವು ಅಂದೇ ಪರಿಹಾರವಾಗುವುದಾಗಿದ್ದರೂ ಅನುದಿನವೂ ಜ್ಞಾತಿಗಳು ಸಾಯುತ್ತಿದ್ದುದರಿಂದ ನಿತ್ಯಾಶೌಚವೇ ಇರುತ್ತಿದ್ದಿತು. **ಇತಿ ಮಾಸಂ ಶೌಚಸಂಪಾದನೋಕ್ತಿರ್ಯುಜ್ಯತೇ.** ಹೀಗೆ ವ್ಯಾಖ್ಯಾನಿಸಿದಲ್ಲಿ ಮಾಸಪರ್ಯಂತವಾಗಿ ಶುದ್ಧಿಕಾರ್ಯವು ನಡೆಯುತ್ತಿದ್ದಿತೆಂದು ಸಮನ್ವಯ ಮಾಡಬಹುದಾಗಿದೆ. ಎಂದರೆ : ಯುದ್ಧದಲ್ಲಿ ಹತರಾದವರ ಸಲುವಾಗಿ ಯುದ್ಧದ ಹದಿನೆಂಟು ದಿವಸಗಳೂ ಮತ್ತು ಅಶ್ವತ್ಥಾಮನಿಂದ ಹತರಾದವರ ಸಲುವಾಗಿ ಹನ್ನೆರಡು ದಿವಸಗಳೂ ಸೇರಿ ಒಂದು ತಿಂಗಳು ಪಾಂಡವರು ಶುದ್ಧಿಗಾಗಿ ನಗರದಿಂದ ಹೊರಗಿದ್ದರೆಂದು ಸಮನ್ವಯವಾಗುತ್ತದೆ. ಆದರೆ ಶುದ್ಧಿಸಂಪಾದನೆಗಾಗಿ ಯುದ್ಧಾನಂತರ ಒಂದು ತಿಂಗಳು ಗಂಗಾತೀರದಲ್ಲಿದ್ದರೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಆದುದರಿಂದ ಅದನ್ನು ಹೀಗೆ ಸಮನ್ವಯಮಾಡಬಹುದಾಗಿದೆ.

ದೇಶ-ವಿದೇಶಗಳ ಮುಖ್ಯಸ್ಥರು ಸತ್ತರೆ ಏಳುದಿವಸಗಳ ಶೋಕದಿನಾಚರಣೆ : ಅರ್ಧಕ್ಕೆ ಧ್ವಜವನ್ನಿಳಿಸುವುದು–ಮುಂತಾದ ಪದ್ಧತಿಗಳು ಈಗಲೂ ಇರುವಂತೆ ಒಂದು ತಿಂಗಳ ಕಾಲ ಪಾಂಡವರು ಸತ್ತವರಿಗಾಗಿ ಶೋಕ ದಿನವನ್ನಾಚರಿಸಿದರು–ಎಂದೂ ಹೇಳಬಹುದು. ಇಲ್ಲಿ ಶುದ್ಧಿಯ ಕಾರ್ಯಕ್ರಮವೆಂದರೆ ಮನಸ್ಸನ್ನು ಅನುಕ್ರಮವಾಗಿ ದುಃಖದಿಂದ ದೂರಗೊಳಿಸುವುದು; ಧರ್ಮವ್ಯಾಖ್ಯಾನವನ್ನು ಕೇಳುವುದು ಇತ್ಯಾದಿ. ಆಶೌಚದ ಸಂಬಂಧವನ್ನು ಬಿಟ್ಟು ಮನಃಶುದ್ಧಿಗಾಗಿ ಒಂದು ತಿಂಗಳ ಕಾರ್ಯಕ್ರಮವನ್ನು ಪಾಂಡವರು ಗಂಗಾತೀರದಲ್ಲಿ ಕೈಗೊಂಡರು–ಎಂಬು ಅರ್ಥವೂ ಸರಿ ಹೋಗುತ್ತದೆ. **ಶೌಚಂ ನಿವರ್ತಯಿಷ್ಯಂತಃ** ಎಂಬುದಕ್ಕೆ ಆಶೌಚನಿವೃತ್ತಿ ಎಂದೂ ಅರ್ಥಮಾಡಬೇಕಾಗಿಲ್ಲ. ಮನಃಶುದ್ಧಿಯ ಕಾರ್ಯವನ್ನು ಅನುಕ್ರಮವಾಗಿ ಪೂರ್ಣಗೊಳಿಸುತ್ತಾ ಒಂದು ತಿಂಗಳನ್ನು ನಗರದ ಹೊರಗಡೆ ಕಳೆದರು–ಎಂದು ಅರ್ಥಮಾಡಿದರೂ ಅಸಮಂಜಸವಾಗುವುದಿಲ್ಲ.

## ರಂತಿದೇವನು ಪ್ರಾಣಿಹಿಂಸಕನೇ?

ರಂತಿದೇವನ ವಿಷಯವನ್ನು 6ನೆಯ ಸಂಪುಟದ ಪರಿಶಿಷ್ಟದಲ್ಲಿ ಪೂರ್ಣವಾಗಿ ವಿಮರ್ಶಿಸಲಾಗಿದೆ. ಈ ಪ್ರಕರಣದಲ್ಲಿರುವ ಶ್ಲೋಕಗಳೆಲ್ಲ ವನ್ನೂ ಕೊಟ್ಟು ಅರ್ಥವನ್ನು ಕೊಡಲಾಗಿದೆ. 122ನೆಯ ಶ್ಲೋಕದಲ್ಲಿ

ಗ್ರಾಮ್ಯಾರಣ್ಯಪಶುಗಳು ರಂತಿದೇವನ ಬಳಿಗೆ ತಾವಾಗಿ ಬಂದುವು–ಎಂದು ಮಾತ್ರ ಹೇಳಿರುವುದೇ ಹೊರತು–'ಯಜ್ಞದಲ್ಲಿ ಕೊಲ್ಲಿಸಿಕೊಳ್ಳಲು' ಎಂದು ಹೇಳಿಲ್ಲ. ರಂತಿದೇವನು ಋಷಿಸಮಾನನು. ಆ ಪ್ರಾಣಿಗಳು ಅಕ್ಕರೆಯಿಂದ ಅವನ ಬಳಿಗೆ ಬರುತ್ತಿದ್ದುವು. ಇಲ್ಲಿ ಯಜ್ಞದ ಪ್ರಕರಣವೇ ಇಲ್ಲ. ಹಿಂದಿನ ಶ್ಲೋಕದಲ್ಲಿ ಇಂದ್ರನಿಂದ ರಂತಿದೇವನು ವರವನ್ನು ಪಡೆದ ಶ್ಲೋಕವಿದೆ. 'ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ ॥' 'ನಮ್ಮ ಬಳಿಯಲ್ಲಿ ಅನ್ನವು ಯಾವಾಗಲೂ ಯಥೇಚ್ಛವಾಗಿರಲಿ. ಸೇವೆಮಾಡಲು ಅತಿಥಿಗಳು ಯಾವಾಗಲೂ ನಮಗೆ ಲಭಿಸಲಿ.' ಮುಂದೆ ಪಶುಗಳು ಇವನ ಸಮೀಪಕ್ಕೆ ತಾವಾಗಿಯೇ ಬಂದುವೆಂಬ ಶ್ಲೋಕವಿದೆ. ಇಂದ್ರನ ವರದಂತೆ ಪಶುಗಳು ಬಂದುವೆಂದು ಅರ್ಥಮಾಡಬಾರದು. ಅನ್ನ ಎಂದರೆ ಮಾಂಸ ವಿರುವ ಪಶುಗಳೆಂದಾಗಲೀ ಅಥವಾ ಮಾಂಸವೆಂದಾಗಲೀ ಅರ್ಥವಾಗು ವುದಿಲ್ಲ. ಮಾಂಸವು ತಿನ್ನಲು ಯೋಗ್ಯವಾದುದಲ್ಲವೆಂದು ಆಧುನಿಕ ವೈಜ್ಞಾನಿಕರೇ ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ 'ಅನ್ನಂ ಚ ಬಹು ಭವೇತ್'–ಎಂಬುದಕ್ಕೆ 'ದೇಶದಲ್ಲಿ ಧಾನ್ಯಸಮೃದ್ಧಿಯಿರಲಿ'–ಎಂಬ ಅರ್ಥವೇ ಹೊರತು ಮಾಂಸವು ಸಮೃದ್ಧವಾಗಿ ಸಿಕ್ಕಲಿ–ಎಂಬ ಅರ್ಥವಲ್ಲ. ಆದುದರಿಂದ ಪಶುಗಳು ತಾವಾಗಿ ರಂತಿದೇವನ ಸಮೀಪಕ್ಕೆ ಬಂದುವೆಂದೂ ರಂತಿದೇವನು ಅವುಗಳನ್ನು ಹನನಮಾಡಿ ಯಜ್ಞಮಾಡಿದನೆಂದೂ ಅಥವಾ ಅತಿಥಿಗಳಿಗೆ ಬಡಿಸಿದನೆಂದೂ ಅರ್ಥಮಾಡುವುದು ಅಪಚಾರವಾಗುತ್ತದೆ. ಒಂದು ವೇಳೆ ಪಶುಗಳು ಬಂದರೂ ವಿಧಿ-ನಿಯಮಗಳನ್ನು ಅತಿಕ್ರಮಿಸಿ ಪ್ರಾಣಿಗಳನ್ನು ಯಾರೂ ಕೊಲ್ಲುವುದಿಲ್ಲ. ವ್ಯಾಖ್ಯಾನಕಾರರೆಲ್ಲರೂ ಅಧ್ಯಾಹಾರಮಾಡಿಕೊಂಡು ಪ್ರಾಣವನ್ನೊಪ್ಪಿಸುವ ಸಲುವಾಗಿಯೇ ಬಂದುವೆಂದು ಅರ್ಥಮಾಡಿರುತ್ತಾರೆ.

ಉಪಾತಿಷ್ಠನ್ತ ಪಿತೃಕಾರ್ಯೇ ಮಾಂ ನಿಯೋಜಯ ಮಾಂ ನಿಯೋಜಯೇತಿ. ಈ ಅಧ್ಯಾಹಾರವು ಸಮಂಜಸವಾಗಿ ಕಾಣುವುದಿಲ್ಲ. ಇದು ಅಸ್ವಾಭಾವಿಕವಾದ ಅಧ್ಯಾಹಾರ. ದಯಾಪೂರ್ಣನಾದ, ಸತ್ತ್ವಸಂಪನ್ನನಾದ ಮನುಷ್ಯನ ಬಳಿಗೆ ಪಶುಪ್ರಾಣಿಗಳು ಹೋಗುವುವೇ ಹೊರತು ಕಾರಣವೇನೇ ಇದ್ದರೂ ಕೊಲೆಗಡುಕನ ಬಳಿಗೆ ಪ್ರಾಣಿಗಳು ಹೋಗುವುದಿಲ್ಲ.

ಇದರ ಮುಂದಿನ ಶ್ಲೋಕವು ಚರ್ಮಣ್ವತೀ ನದಿಗೆ ಆ ಹೆಸರು ಬರಲು ಕಾರಣವನ್ನು ತಿಳಿಸುವುದಾಗಿದೆ. ಹಿಂದಿನ ಶ್ಲೋಕದಲ್ಲಿ ಪಶುಗಳು ಸ್ವೇಚ್ಛೆಯಿಂದ ರಂತಿದೇವನ ಸಮೀಪಕ್ಕೆ ಬಂದುವು ಎಂಬುದರಿಂದ ಮುಂದಕ್ಕೆ– 'ಬಂದ ಪಶುಗಳೆಲ್ಲವನ್ನೂ ರಂತಿದೇವನು ವಧೆಮಾಡಿಬಿಟ್ಟನು (ದೇವ ಕಾರ್ಯಕ್ಕೋ ಪಿತೃಕಾರ್ಯಕ್ಕೋ ತಿಳಿಯದು) ವಧೆಮಾಡಿದುದು ಮಾತ್ರ ವಲ್ಲದೇ ಅವುಗಳ ತೊಗಲನ್ನು ತೆಗೆದು ರಾಶಿ-ರಾಶಿಯಾಗಿ ಹಾಕಿಬಿಟ್ಟನು.' ಇಷ್ಟನ್ನೂ ಅಧ್ಯಾಹಾರಮಾಡಿಕೊಂಡು 123ನೆಯ ಶ್ಲೋಕಕ್ಕೆ ಎಲ್ಲರೂ ಅರ್ಥ ಮಾಡಿರುತ್ತಾರೆ. ರಂತಿದೇವನಿಗೆ ತಕ್ಕುದಲ್ಲದ ಅಸಂಗತವಾದ, ಇಷ್ಟು ವಿಷಯವನ್ನು ಅಧ್ಯಾಹಾರಮಾಡಿಕೊಳ್ಳುವುದು ಸರಿಯಲ್ಲ. ರಂತಿದೇವನ ಸಮೀಪಕ್ಕೆ ಗ್ರಾಮ್ಯಾರಣ್ಯಪಶುಗಳು ತಾವಾಗಿಯೇ ಬಂದು ನಿಂತುವು– ಎಂಬುದನ್ನೇ ಅನುವರ್ತಿಸಿ ಈ ಶ್ಲೋಕಕ್ಕೆ ಅರ್ಥಮಾಡುವುದು ಸಾಧುವಾಗಿ ಕಾಣುತ್ತದೆ. ಕ್ಲೇದ ಎಂದರೆ ತೇವ ಅಥವಾ ದೇಹದೊಳಗಿನ ದ್ರವ. ಉತ್ಕ್ಲೇದವೆಂದರೆ ಶರೀರದಿಂದ ಹೊರಬಂದ ದ್ರವ ; ಬೆವರು. ಶರೀರವೇ ಇಲ್ಲದಿದ್ದರೆ ಬೆವರು ಬರುವುದಿಲ್ಲ. ಆದುದರಿಂದಲೇ ಚರ್ಮರಾಶೇಃ ಎಂಬು ದಕ್ಕೆ ಚರ್ಮವನ್ನು ಹೊಂದಿರುವ ಪ್ರಾಣಿಗಳ ರಾಶಿ ಅಥವಾ ಸಮೂಹ ; ಅದರಿಂದ ಹೊರಟ ಬೆವರು. ಆ ಪ್ರಾಣಿಗಳನ್ನು ತೊಳೆದ ನೀರು ಎಂದು ಅರ್ಥಮಾಡಬಹುದು. ಆ ಪ್ರಾಣಿಗಳ ಚರ್ಮದ ಮೂಲಕವಾಗಿ ಹೊರಬಂದ ಬೆವರಿನಿಂದಲೇ ಅಥವಾ ತೊಳೆದ ನೀರಿನಿಂದಲೇ ಮಹಾನದಿಯು ಹುಟ್ಟಿದುದರಿಂದ ಅದಕ್ಕೆ ಚರ್ಮಣ್ವತೀ ಎಂದು ಹೆಸರಾಯಿತು. ಹೀಗೆ ಅರ್ಥ ಮಾಡಿದರೆ ಹಿಂದಿನ ಶ್ಲೋಕಕ್ಕೂ ಹೊಂದಿಕೊಳ್ಳುತ್ತದೆ. ಹಾಗೆ ಮಾಡದೇ ಸಲ್ಲದ ಅಧ್ಯಾಹಾರಗಳನ್ನು ಮಾಡಿಕೊಂಡು ಅರ್ಥಮಾಡಿದರೆ ಪರಮ ಧಾರ್ಮಿಕನಾದ ರಂತಿದೇವನಿಗೆ ಅಪಚಾರಮಾಡಿದಂತಾಗುತ್ತದೆ. 126ನೆಯದು ಮತ್ತೊಂದು ವಿವಾದಗ್ರಸ್ತವಾದ ಶ್ಲೋಕ. ಹಿಂದಿನ ಶ್ಲೋಕದಲ್ಲಿ ರಂತಿದೇವನು ದಾನಮಾಡುತ್ತಿದ್ದ ವಿಧಾನವನ್ನು ಹೇಳಿ ಅವನ ಯಜ್ಞ ಸಂಬಂಧವಾದ ಪಾತ್ರೆಗಳೆಲ್ಲವೂ ಸುವರ್ಣಮಯವಾಗಿತ್ತೆಂದು ಹೇಳಿದೆ. 127ನೇ ಶ್ಲೋಕದಲ್ಲಿ ರಂತಿದೇವನ ಮನೆಯಲ್ಲಿ ಯಾಂ ರಾತ್ರಿಂ ಅವಸನ್ ಯಾವ ರಾತ್ರಿಯಲ್ಲಿ ತಂಗಲು ಬಂದರೋ 'ಆ ಅತಿಥಿಗಳು' ಎಂಬುದನ್ನಿಲ್ಲಿ

ಅಧ್ಯಾಹಾರಮಾಡಿಕೊಳ್ಳಬೇಕಾಗಿದೆ. ಎಷ್ಟು ಅತಿಥಿಗಳೆಂಬುದು ಉಕ್ತವಾಗಿಲ್ಲ. ಹತ್ತಾರು ಅಥವಾ ನಾಲ್ಕಾರು ಸಾವಿರ ಅತಿಥಿಗಳೇ ಬಂದರೂ ಇಪ್ಪತ್ತೊಂದು ಸಾವಿರದ ನೂರು ಹಸುಗಳನ್ನು ಕೊಂದನೆಂದು ಹೇಳುವುದು ಸಮಂಜಸವಾಗಿ ಕಾಣುವುದೇ? ಆ ಅತಿಥಿಗಳು ಹಸುವಿನ ಮಾಂಸವನ್ನೇ ತಿನ್ನಲು ಬಂದಿದ್ದರೇ? ಮಹಾಭಾರತದಲ್ಲಿ ಎಲ್ಲಿಯೂ ಇಂತಹ ಪ್ರಕರಣವಿಲ್ಲ. ಇದು ದಾನ-ದಕ್ಷಿಣೆಗಳ ಪ್ರಕರಣವಾದುದರಿಂದ ರಂತಿದೇವನ ಮನೆಗೆ ರಾತ್ರಿಯಲ್ಲಿ ಬಂದು ತಂಗಿದ ಅತಿಥಿಗಳು ಹಸುಗಳನ್ನು ದಾನವಾಗಿ ಪಡೆದು ಕೊಂಡರು–ಎಂಬ ಅರ್ಥವೇ ಸಮಂಜಸವೂ ಸೂಕ್ತವೂ ಆಗಿರುತ್ತದೆ. 128ನೆಯ ಶ್ಲೋಕದಲ್ಲಿ **ನಾದ್ಯ ಮಾಂಸಂ ಯಥಾ ಪುರಾ** ಎಂಬ ಪಾಠವೂ ಇದೆ. ವ್ಯಾಖ್ಯಾನಕಾರರು ಇದಕ್ಕೂ ಸಮರ್ಥನೆಯನ್ನು ಕೊಟ್ಟಿರುತ್ತಾರೆ. ಪಶು **ಮಾತ್ರೋಪಯೋಗಸ್ಯ ಪ್ರಾಗುಕ್ತತ್ವಾತ್** ಹಿಂದಿನ ಶ್ಲೋಕದಲ್ಲಿ ಇಪ್ಪತ್ತು ಸಾವಿರದ ನೂರು ಹಸುಗಳನ್ನು ಕಡಿದು ಅತಿಥಿಗಳಿಗೆ ಬಡಿಸಿದರೆಂಬ ವಿಷಯ ವನ್ನು ಹೇಳಿಯಾಗಿರುವುದರಿಂದ ಈ ಶ್ಲೋಕದಲ್ಲಿ ಮಾಂಸವಿಲ್ಲವೆಂದು ಹೇಳಿರುವುದು ಸಮಂಜಸವಾಗಿದೆ'–ಇದು ವ್ಯಾಖ್ಯಾನಕಾರರ ಅಭಿಪ್ರಾಯ. ಇಂತಹ ಅರ್ಥಗಳು ಅನರ್ಥಪರಂಪರೆಯನ್ನೇ ಸೃಷ್ಟಿಸುವುದೆಂಬುದನ್ನು ಮನಗಾಣದೇ ಮಾಡಿರುವ ವ್ಯಾಖ್ಯೆಯಿದು. **'ನಾದ್ಯ ಭೋಜ್ಯಂ ಯಥಾ ಪುರಾ'** ಎಂಬ ಪಾಠವೇ ಸಾಧುವಾಗಿದೆ.

---

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ ಈ ಸಂಪುಟದ ಮೂರನೆಯ ಮುದ್ರಣ ವನ್ನು ಮುಗಿಸುತ್ತಿದ್ದೇವೆ. ಪರಮಾತ್ಮನ ದಯೆಯಿಂದ ಆಕಸ್ಮಿಕವಾಗಿ ಹೊಳೆದ ವಿವೇಚನೆಯಿಂದಾಗಿ ಈ ಸಂಪುಟವನ್ನು ಹೊಸಮಾದರಿಯಲ್ಲಿ ಮೇ|| ಎಲಿಗೆಂಟ್ ಮುದ್ರಣಾಲಯದವರ ಸಹಕಾರದಿಂದ ಬಹಳ ಬೇಗ ಮುದ್ರಿಸ ಲಾಗಿದೆ. ಈ ವಿಧಾನದಲ್ಲಿ ತಿಂಗಳಿಗೆ ಒಂದು ಸಂಪುಟದಂತೆ ಪುನರ್ಮುದ್ರಣ ಮಾಡುವ ಆಶಯವಿದೆ. ಕಾಗದ ಮತ್ತಿತರ ಕಚ್ಚಾವಸ್ತುಗಳಿಗೆ ಅಪಾರ ಬಂಡವಾಳವು ಬೇಕಾಗುತ್ತದೆ. ದಯಾಮಯನಾದ ಪರಮಾತ್ಮನ ದಯೆ ಯಿಂದ ಎಲ್ಲವೂ ಸಾಧ್ಯವಾಗಬೇಕು.

– ಪ್ರಕಾಶಕರು.

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

# ಶ್ರೀಮನ್ಮಹಾಭಾರತ-ಶಾಂತಿಪರ್ವ ;
# ಇಪ್ಪತ್ತೊಂದನೆಯ ಸಂಪುಟ

೧ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ

## ಯುಧಿಷ್ಠಿರನ ಬಳಿಗೆ ನಾರದರೇ ಮೊದಲಾದ ಮಹರ್ಷಿಗಳ ಆಗಮನ: ಯುಧಿಷ್ಠಿರನು ಕರ್ಣನೊಡನೆ ತನಗಿದ್ದ ಸಂಬಂಧವನ್ನು ಹೇಳಿಕೊಂಡು ಕರ್ಣನಿಗೆ ಶಾಪಬಂದುದಕ್ಕೆ ಕಾರಣವನ್ನು ತಿಳಿಸುವಂತೆ ನಾರದರನ್ನು ಕೇಳಿದುದು

ಕೃತೋದಕಾಸ್ತೇ ಸುಹೃದಾಂ ಸರ್ವೇಷಾಂ ಪಾಣ್ಡುನನ್ದನಾಃ ।
ವಿದುರೋ ಧೃತರಾಷ್ಟ್ರಶ್ಚ ಸರ್ವಾಶ್ಚ ಭರತಸ್ತ್ರಿಯಃ ॥೧॥

ತತ್ರ ತೇ ಸುಮಹಾತ್ಮಾನೋ ನ್ಯವಸನ್ಪಾಣ್ಡುನನ್ದನಾಃ ।
ಶೌಚಂ ನಿವರ್ತಯಿಷ್ಯನ್ತೋ ಮಾಸಮಾತ್ರಂ ಬಹಿಃ ಪುರಾತ್ ॥೨॥

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಮಹಾರಾಜ! ಪಾಂಡವರೂ, ವಿದುರನೂ, ಧೃತರಾಷ್ಟ್ರನೂ ಮತ್ತು ಭರತವಂಶದ ಎಲ್ಲ ಮಹಿಳೆಯರೂ ಯುದ್ಧದಲ್ಲಿ ಮೃತರಾಗಿದ್ದ ತಮ್ಮ ಸುಹೃದರೆಲ್ಲರಿಗೂ ಗಂಗಾನದಿಯಲ್ಲಿ ಧರ್ಮೋದಕಗಳನ್ನು ಸಮರ್ಪಿಸಿದರು. ಬಳಿಕ ಮಹಾತ್ಮರಾದ ಪಾಂಡವರು ಶುದ್ಧಿಯ ಕಾರ್ಯವನ್ನು ಆಚರಿಸುತ್ತಾ ಒಂದು ತಿಂಗಳ ಪರ್ಯಂತವಾಗಿ ನಗರದ ಹೊರಭಾಗದಲ್ಲಿ ಗಂಗಾನದಿಯ ತೀರದಲ್ಲಿಯೇ ಇದ್ದುಬಿಟ್ಟರು. ಬಂಧುವರ್ಗದವರಿಗೂ, ಸುಹೃದರಿಗೂ ಜಲತರ್ಪಣಗಳನ್ನಿತ್ತು ಉಪವಿಷ್ಟನಾಗಿದ್ದ ಧರ್ಮರಾಜನ ಬಳಿಗೆ ಅನೇಕ

ಬ್ರಹ್ಮರ್ಷಿಗಳೂ, ಮಹಾತ್ಮರಾದ ಸಿದ್ಧಪುರುಷರೂ ಆಗಮಿಸಿದರು. ವ್ಯಾಸರೂ, ನಾರದರೂ, ಮಹರ್ಷಿಗಳಾದ ದೇವಲರೂ, ದೇವಸ್ಥಾನರೂ, ಕಣ್ವರೂ ಮತ್ತು ಅವರುಗಳ ಶ್ರೇಷ್ಠರಾದ ಶಿಷ್ಯರೂ ಧರ್ಮರಾಜನ ಬಳಿಗೆ ಆಗಮಿಸಿದರು. ಇವರುಗಳೇ ಅಲ್ಲದೆ ವೇದವಿದರಾದ, ಮಹಾಪ್ರಾಜ್ಞರಾದ ಅನೇಕ ಬ್ರಾಹ್ಮಣರೂ, ಗೃಹಸ್ಥರೂ, ಸ್ನಾತಕರೂ ಮತ್ತು ಅನೇಕ ಸಾಧು- ಸತ್ಪುರುಷರೂ ಯುಧಿಷ್ಠಿರನನ್ನು ಸಂದರ್ಶಿಸಿದರು. ಮಹಾತ್ಮರಾದ ಮಹರ್ಷಿಪುರಃಸರರಾದ ಅವರೆಲ್ಲರೂ ಆಗಮಿಸಿದ ನಂತರ ಪಾಂಡವರಿಂದ ಯಥೋಚಿತವಾದ ಸತ್ಕಾರಗಳನ್ನು ಪಡೆದು ಅಮೂಲ್ಯವಾದ ಆಸನಗಳಲ್ಲಿ ಕುಳಿತುಕೊಂಡರು. ನೂರಾರು-ಸಾವಿರಾರು ಬ್ರಾಹ್ಮಣರೂ, ಬ್ರಹ್ಮರ್ಷಿಗಳೂ ಪುಣ್ಯದಾಯಿನಿಯಾದ ಭಾಗೀರಥೀನದಿಯ ತೀರದಲ್ಲಿ ತತ್ಕಾಲೋಚಿತವಾದ ಸತ್ಕಾರವನ್ನು ಸ್ವೀಕರಿಸಿ ಯುಧಿಷ್ಠಿರನ ಸುತ್ತಲೂ ಯಥಾನುಕ್ರಮವಾಗಿ ಕುಳಿತು, ಶೋಕದಿಂದ ವ್ಯಾಕುಲಗೊಂಡ ಮನಸ್ಸಿನಿಂದ ಕೂಡಿದ್ದ ಯುಧಿಷ್ಠಿರನನ್ನು ನೀತಿಯುತವಾದ ವಾಕ್ಯಗಳಿಂದ ಸಂತೈಸುತ್ತಿದ್ದರು. ಆ ಸಮಯದಲ್ಲಿ ನಾರದರು, ಯುಧಿಷ್ಠಿರನೊಡನೆ ಪ್ರಕೃತೋಚಿತವಾದ ಯಾವ ಮಾತುಗಳ ನ್ನಾಡಬೇಕೆಂಬುದನ್ನು ವ್ಯಾಸರೇ ಮೊದಲಾದ ಮಹರ್ಷಿಗಳೊಡನೆ ಸಮಾಲೋಚಿಸಿ, ಧರ್ಮಪುತ್ರನಾದ ಯುಧಿಷ್ಠಿರನೊಡನೆ ಹೇಳಿದರು :

"ಯುಧಿಷ್ಠಿರ! ನೀನು ನಿನ್ನ ಬಾಹುಬಲ-ಪರಾಕ್ರಮಗಳಿಂದಲೂ, ಶ್ರೀಕೃಷ್ಣನ ಅನುಗ್ರಹದಿಂದಲೂ, ಧರ್ಮದ ಪ್ರಭಾವದಿಂದಲೂ—ಈ ಅಖಂಡವಾದ ಭೂಮಂಡಲವನ್ನೇ ಜಯಿಸಿರುವೆ. ಸೌಭಾಗ್ಯವಶದಿಂದಲೇ ಲೋಕಭಯಂಕರವಾಗಿದ್ದ ಅಂತಹ ಮಹಾಸಂಗ್ರಾಮದಿಂದಲೂ ಮುಕ್ತನಾಗಿ ರುವೆ. ಕ್ಷತ್ರಧರ್ಮದಲ್ಲಿಯೇ ನಿರತನಾಗಿರುವ ನೀನು ಈಗಲಾದರೂ ಸಂತೋಷಿಸುವೆಯಲ್ಲವೇ? ಹತಶತ್ರುವಾಗಿರುವ ನೀನು ನಿನ್ನ ಸುಹೃದರನ್ನು ತೃಪ್ತಿಗೊಳಿಸುವೆಯಲ್ಲವೇ? ಈ ರಾಜ್ಯಲಕ್ಷ್ಮಿಯನ್ನು ಪಡೆದ ನಂತರ ನಿನ್ನನ್ನು ಮತ್ತಾವ ಶೋಕವೂ ಬಾಧೆಪಡಿಸುವುದಿಲ್ಲವಲ್ಲವೇ?"

ಯುಧಿಷ್ಠಿರನು ಹೇಳುತ್ತಾನೆ :

**ವಿಜಿತೇಯಂ ಮಹೀ ಕೃತ್ಸ್ನಾ ಕೃಷ್ಣಬಾಹುಬಲಾಶ್ರಯಾತ್ ।**
**ಬ್ರಾಹ್ಮಣಾನಾಂ ಪ್ರಸಾದೇನ ಭೀಮಾರ್ಜುನಬಲೇನ ಚ ॥೧೩॥**

"ನಾರದರೇ! ಈ ಅಖಂಡಭೂಮಂಡಲವು ಶ್ರೀಕೃಷ್ಣನ ಬಾಹುಬಲದ ಆಶ್ರಯದಿಂದಲೂ, ಬ್ರಾಹ್ಮಣರ ಪ್ರಸನ್ನತೆಯಿಂದಲೂ ಮತ್ತು ಭೀಮಾರ್ಜುನರ ಬಲದಿಂದಲೂ ಜಯಿಸಲ್ಪಟ್ಟಿತು.



ಆದರೆ ಭೂಮಂಡಲದ ವಿಜಯದಿಂದ ನನಗೇನೂ ಹೆಚ್ಚು ಆನಂದ ವುಂಟಾಗಿಲ್ಲ. ಎಲ್ಲ ಜ್ಞಾತಿಗಳ ಸಂಹಾರವೂ ರಾಜ್ಯಲೋಭದ ಕಾರಣ ದಿಂದಲೇ ಮಾಡಲ್ಪಟ್ಟುದಾಗಿದೆ. ಈ ಮಹಾದುಃಖವು ನನ್ನ ಹೃದಯದಲ್ಲಿ ಶಾಶ್ವತವಾಗಿ ಉಳಿದುಬಿಟ್ಟಿದೆ. ಅಭಿಮನ್ಯುವನ್ನೂ, ದ್ರೌಪದಿಯ ಐವರು ಪ್ರಿಯಸುತರನ್ನೂ ಯುದ್ಧದಲ್ಲಿ ಸಾಯಗೊಟ್ಟು ಗಳಿಸಿರುವ ಈ ವಿಜಯವು ಪರಾಜಯರೂಪವಾಗಿಯೇ ಇದೆಯೆಂಬುದು ನನ್ನ ಭಾವನೆಯಾಗಿದೆ.

**ಕಿಂ ನು ವಕ್ಷ್ಯತಿ ವಾರ್ಷ್ಣೇಯೀ ವಧೂರ್ಮೇ ಮಧುಸೂದನಮ್ ।**
**ದ್ವಾರಕಾವಾಸಿನೀ ಕೃಷ್ಣಮಿತಃ ಪ್ರತಿಗತಂ ಹರಿಮ್ ॥೧೬॥**

ವೃಷ್ಣಿಕುಲಕನ್ಯೆಯಾದ, ಕನಿಷ್ಟಭ್ರಾತೃವಿನ ಪತ್ನಿಯಾದುದರಿಂದ ನನಗೆ ಸೊಸೆಯ ರೂಪದಲ್ಲಿರುವ ಸುಭದ್ರೆಯು ನನ್ನ ವಿಷಯದಲ್ಲಿ ಏನೆಂದು ಕೊಳ್ಳುತ್ತಾಳೆ? (ರಾಜ್ಯಲಾಭಕ್ಕೋಸ್ಕರ ಪ್ರಿಯಪುತ್ರನಾದ ಅಭಿಮನ್ಯುವನ್ನು ಬಲಿಗೊಟ್ಟನೆಂದೇ ಹೇಳುವಳು.) ಮಧುಸೂದನನಾದ ಶ್ರೀಕೃಷ್ಣನು ಇಲ್ಲಿಂದ ದ್ವಾರಕೆಗೆ ಹೋದಕೂಡಲೇ ದ್ವಾರಕೆಯಲ್ಲಿರುವ ಜನಸಮೂಹವು * ಕೃಷ್ಣನನ್ನು ಕುರಿತು ಏನೆಂದು ಪ್ರಶ್ನಿಸುತ್ತದೆ? (ನೀನಿದ್ದೂ ಅಭಿಮನ್ಯುವು ಹೇಗೆ ಹತನಾದನೆಂದು ದ್ವಾರಕೆಯ ಜನರು ಕೇಳುತ್ತಾರೆ.)

ಐವರು ಮಕ್ಕಳನ್ನೂ, ತಂದೆಯನ್ನೂ, ಅಣ್ಣ-ತಮ್ಮಂದಿರನ್ನೂ ಕಳೆದು ಕೊಂಡಿರುವ ಈ ದ್ರೌಪದಿಯು ಅತ್ಯಂತ ದಯನೀಯಳಾಗಿದ್ದಾಳೆ. ಇವಳು ಯಾವಾಗಲೂ ನಮಗೆ ಪ್ರಿಯವನ್ನುಂಟುಮಾಡುವುದರಲ್ಲಿಯೇ ನಿರತಳಾಗಿರ ತಕ್ಕವಳು. ಆದರೆ ಈಗ ಇವಳು ನನ್ನನ್ನು ಬಹಳವಾಗಿ ಪೀಡಿಸುತ್ತಿರುವಳೋ ಎಂದು ನನಗೆ ಭಾಸವಾಗುತ್ತಿದೆ. ಏಕೆಂದರೆ : ಇವಳ ಕಡೆಗೊಮ್ಮೆ ನೋಡಿ ಇವಳ ಮನಸ್ಸಿನ ದುಃಖವನ್ನು ಸ್ಮರಿಸಿಕೊಂಡೊಡನೆಯೇ ನನ್ನ ಮನಸ್ಸು ನುಚ್ಚುನೂರಾಗಿ ಹೋಗುತ್ತದೆ. ಹೃದಯವು ಒಡೆದುಹೋಗುತ್ತದೆ.

ಭಗವನ್! ನಾರದರೇ! ಈ ಎಲ್ಲ ದುಃಖಗಳ ಜೊತೆಗೆ ಮತ್ತೊಂದು ದುಃಖವು ಪ್ರಾಪ್ತವಾದುದನ್ನೂ ನಿಮ್ಮೊಡನೆ ಹೇಳುತ್ತೇನೆ. ತಾಯಿಯಾದ ಕುಂತಿಯು ಕರ್ಣನ ಜನ್ಮರಹಸ್ಯವನ್ನು ಮುಚ್ಚಿಟ್ಟ ಕಾರಣದಿಂದಾಗಿ ಭ್ರಾತೃ ವಿಯೋಗದುಃಖದಿಂದಲೂ ನಾನು ಪೀಡಿತನಾಗಿದ್ದೇನೆ. ಯಾವನಲ್ಲಿ ಹತ್ತು ಸಾವಿರ ಆನೆಗಳ ಬಲವಿದ್ದಿತೋ–ಯಾವನಿಗೆ ಸಮಾನರಾದ ಮಹಾರಥರೇ ಲೋಕದಲ್ಲಿ ಬೇರೊಬ್ಬರಿರಲಿಲ್ಲವೋ–ಯಾವನು ಅರಣ್ಯದಲ್ಲಿ ನಿರ್ಭಯ ವಾಗಿ ವಿಹರಿಸುವ ಸಿಂಹದಂತೆ ರಣರಂಗದಲ್ಲಿ ಭಯರಹಿತನಾಗಿ ಸಂಚರಿಸು ತ್ತಿದ್ದನೋ–ಯಾವನು ಧೀಮಂತನೂ, ದಯಾಳುವೂ, ಮಹಾದಾನಿಯೂ,

---

* ದ್ವಾರಕಾವಾಸಿನೀ–ಎಂಬುದಕ್ಕೆ ವ್ಯಾಖ್ಯಾನಕಾರರು ದ್ವಾರಕೆಯಲ್ಲಿರುವ ಜನಸಮೂಹ ಎಂದು ಅರ್ಥಮಾಡಿರುತ್ತಾರೆ.

ಸಂಯಮಪೂರ್ವಕವಾಗಿ ವ್ರತಾನುಷ್ಠಾನಗಳನ್ನು ಮಾಡುವವನೂ ಆಗಿದ್ದನೋ–ಯಾವನು ಧೃತರಾಷ್ಟ್ರನ ಮಕ್ಕಳಿಗೆ ಆಶ್ರಯದಾತನಾಗಿದ್ದನೋ–ಯಾವನು ಮಹಾಮಾನಿಯೂ, ಉಗ್ರಪರಾಕ್ರಮಿಯೂ, ಅಸಹನಶೀಲನೂ, ನಿತ್ಯಕೋಪಿಯೂ ಆಗಿದ್ದನೋ–ಯಾವನು ನಮ್ಮೆಲ್ಲರನ್ನೂ ಪ್ರತಿಯುದ್ಧದಲ್ಲಿಯೂ ಪರಾಭವಗೊಳಿಸುತ್ತಿದ್ದನೋ–ಯಾವನು ಶೀಘ್ರಾಸ್ತ್ರನೂ, ಚಿತ್ರಯೋಧಿಯೂ, ಧನುರ್ವೇದಪಂಡಿತನೂ, ಅದ್ಭುತಪರಾಕ್ರಮಿಯೂ ಆಗಿದ್ದನೋ–ಅಂತಹ ಕರ್ಣನು ನಮ್ಮ ತಾಯಿಯಾದ ಕುಂತಿಗೆ ರಹಸ್ಯದಲ್ಲಿ ಹುಟ್ಟಿದ ಮಗನು. ಅವನು ನಮ್ಮೆಲ್ಲರಿಗೂ ಹಿರಿಯ ಸೋದರನಲ್ಲವೇ! (ಈ ವಿಷಯವನ್ನು ನಾವು ಅವನ ಅವಸಾನವಾದ ನಂತರವೇ ತಿಳಿದುಕೊಂಡೆವು.) ನಾವು ನಮ್ಮ ಬಂಧುಗಳೆಲ್ಲರಿಗೂ ಜಲಪ್ರದಾನಮಾಡುತ್ತಿದ್ದ ಸಮಯದಲ್ಲಿ ತಾಯಿಯು ಈ ರಹಸ್ಯವನ್ನು ಹೊರಗೆಡಹಿದಳು. ಸೂರ್ಯನಿಂದ ತನ್ನಲ್ಲಿ ಕರ್ಣನು ಹುಟ್ಟಿದನೆಂದು ಅವಳು ಹೇಳಿದಳು. ಸರ್ವಗುಣೋಪೇತನಾದ (ಸರ್ವಲಕ್ಷಣಸಂಪನ್ನನಾಗಿದ್ದ) ಆ ಪುತ್ರನನ್ನು ನೀರಿನಲ್ಲಿ ತೇಲಿಬಿಟ್ಟ ವಿಷಯವನ್ನೂ ನಮ್ಮ ತಾಯಿಯು ನಮ್ಮೊಡನೆ ಆಗ ಹೇಳಿದಳು. ಯಾವ ಮಹಾಶೂರನಾದ ಕರ್ಣನನ್ನು ಸೂತಪುತ್ರನೆಂದೂ ರಾಧೆಯ ಮಗನೆಂದೂ ಲೋಕದ ಜನರು ತಿಳಿದುಕೊಂಡಿದ್ದರೋ, ಆ ಕರ್ಣನನ್ನು ನಮ್ಮ ತಾಯಿಯಾದ ಕುಂತಿಯು ಪೆಟ್ಟಿಗೆಯೊಳಗಿಟ್ಟು ಗಂಗಾನದಿಯಲ್ಲಿ ತೇಲಿಬಿಟ್ಟಳು.

ನಾರದರೇ! ಈ ಕಾರಣದಿಂದ ನಮ್ಮ ತಾಯಿಯಾದ ಕುಂತಿಗೆ ಕರ್ಣನೇ ಜ್ಯೇಷ್ಠಪುತ್ರನು. ನಮ್ಮ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ್ದರಿಂದ ನಮಗೆ ಹಿರಿಯಣ್ಣನಾಗಿದ್ದನು. ನನಗೆ ಈ ವಿಷಯವು ತಿಳಿದೇ ಇರಲಿಲ್ಲ. ರಾಜ್ಯಲೋಭದಿಂದ ನಾನೇ ನಮ್ಮಣ್ಣನನ್ನು ತಮ್ಮನಿಂದ ಕೊಲ್ಲಿಸಿದೆನು. ಈ ವಿಷಯವನ್ನು ನಾನು ನೆನೆದೊಡನೆಯೇ–ಅಗ್ನಿಯು ಹತ್ತಿಯ ರಾಶಿಯನ್ನು ದಹಿಸುವಂತೆ–ಚಿಂತಾಗ್ನಿಯು ನನ್ನ ಅಂಗಾಂಗಗಳನ್ನು ಸುಡಲು ಪ್ರಾರಂಭಿಸುತ್ತದೆ. ಶ್ವೇತವಾಹನನಾದ ಪಾರ್ಥನೂ ಕರ್ಣನು ತನ್ನ ಅಣ್ಣನೆಂಬುದನ್ನು ತಿಳಿದವನಾಗಿರಲಿಲ್ಲ. ನಾನಾಗಲೀ, ಭೀಮಸೇನನಾಗಲೀ, ನಕುಲ-ಸಹದೇವರಾಗಲೀ, ಕರ್ಣನು ನಮ್ಮ ಅಗ್ರಜನೆಂಬುದನ್ನು ತಿಳಿದವ

ರಾಗಿರಲಿಲ್ಲ. ಸುವ್ರತನಾದ ಕರ್ಣನು ಮಾತ್ರ ನಾವೆಲ್ಲರೂ ಅವನ ಅನುಜರೆಂಬುದನ್ನು ತಿಳಿದುಕೊಂಡಿದ್ದನು. ನಮ್ಮೊಡನೆ ಸಂಧಿಮಾಡಿಸಬೇಕೆಂಬ ಇಚ್ಛೆಯಿಂದ ಕುಂತಿಯು ಕರ್ಣನ ಸಮೀಪಕ್ಕೆ ಹೋಗಿದ್ದಳೆಂಬ ವಾರ್ತೆಯನ್ನು ನಾವು ಕೇಳಿದೆವು. ಕುಂತಿಯು ಕರ್ಣನ ಸಮೀಪಕ್ಕೆ ಹೋಗಿ 'ನೀನು ನನ್ನ ಪುತ್ರನು' ಎಂದೂ ಹೇಳಿದಳಂತೆ. ಆದರೆ ಮಹಾತ್ಮನಾದ ಕರ್ಣನು ಪೃಥಾದೇವಿಯ ಆಶಯವನ್ನು ಈಡೇರಿಸಿಕೊಡಲಿಲ್ಲವಂತೆ. ಕರ್ಣನು ತಾಯಿಯ ಆಶಯವನ್ನು ಈಡೇರಿಸಿಕೊಡದಿದ್ದುದು ಮಾತ್ರವಲ್ಲದೇ, ನಮ್ಮ ತಾಯಿಯೊಡನೆ ಈ ಮಾತನ್ನು ಹೇಳಿದನೆಂಬುದನ್ನೂ ನಾವು ಕೇಳಿದೆವು.

**ನ ಹಿ ಶಕ್ಷ್ಯಾಮ್ಯಹಂ ತ್ಯಕ್ತುಂ ನೃಪಂ ದುರ್ಯೋಧನಂ ರಣೇ ।**
**ಅನಾರ್ಯತ್ವಂ ನೃಶಂಸತ್ವಂ ಕೃತಘ್ನತ್ವಂ ಚ ಮೇ ಭವೇತ್ ॥೨೮॥**

'ಮಾತೆಯೇ! ಯುದ್ಧಸಮಯದಲ್ಲಿ ದುರ್ಯೋಧನನನ್ನು ಪರಿತ್ಯಜಿಸಲು ನನಗೆ ಖಂಡಿತವಾಗಿಯೂ ಶಕ್ಯವಿಲ್ಲ. ಈ ಸಮಯದಲ್ಲಿ ನಾನು ಅವನನ್ನೇನಾದರೂ ತ್ಯಜಿಸಿದ್ದೇ ಆದರೆ ನನಗೆ ಅನಾರ್ಯತ್ವವೂ, ಕ್ರೂರತ್ವವೂ, ಕೃತಘ್ನತ್ವವೂ ಪ್ರಾಪ್ತವಾಗುತ್ತದೆ. (ನನ್ನನ್ನು ನೀಚನೆಂದೂ, ಕ್ರೂರಿಯೆಂದೂ ಮತ್ತು ಉಪಕಾರಸ್ಮರಣೆಯಿಲ್ಲದವನೆಂದೂ ಜನರೂ ಆಡಿಕೊಳ್ಳುತ್ತಾರೆ.)

**ಯುಧಿಷ್ಠಿರೇಣ ಸನ್ಧಿಂ ಹಿ ಯದಿ ಕುರ್ಯಾಂ ಮತೇ ತವ ।**
**ಭೀತೋ ರಣೇ ಶ್ವೇತವಾಹಾದಿತಿ ಮಾಂ ಮಂಸ್ಯತೇ ಜನಃ ॥೨೯॥**

ನಿನ್ನ ಅಭಿಪ್ರಾಯದಂತೆ ನಾನೇನಾದರೂ ಯುಧಿಷ್ಠಿರನೊಡನೆ ಸಂಧಿಯನ್ನು ಮಾಡಿಕೊಂಡಿದ್ದೇ ಆದರೆ, ಯುದ್ಧದಲ್ಲಿ ಅರ್ಜುನನಿಗೆ ಭಯಪಟ್ಟು ಕರ್ಣನು ಯುಧಿಷ್ಠಿರನೊಡನೆ ಸಂಧಿಮಾಡಿಕೊಂಡನೆಂದು ಜನರು ಭಾವಿಸುತ್ತಾರೆ.

**ಸೋಽಹಂ ನಿರ್ಜಿತ್ಯ ಸಮರೇ ವಿಜಯಂ ಸಹಕೇಶವಮ್ ।**
**ಸಂಧಾಸ್ಯೇ ಧರ್ಮಪುತ್ರೇಣ ಪಶ್ಚಾದಿತಿ ಚ ಸೋಽಬ್ರವೀತ್ ॥೩೦॥**

ಆದುದರಿಂದ ನಾನು ಮೊದಲು ಕೇಶವಸಹಿತನಾದ ಅರ್ಜುನನನ್ನು

ಯುದ್ಧದಲ್ಲಿ ಪರಾಜಯಗೊಳಿಸಿ ಬಳಿಕ ಧರ್ಮಪುತ್ರನೊಡನೆ ಸಂಧಿಮಾಡಿ ಕೊಳ್ಳುತ್ತೇನೆ'–ಎಂದವನು ಹೇಳಿದನಂತೆ.

ಕರ್ಣನ ಆ ಮಾತನ್ನು ಕೇಳಿ ಕುಂತಿಯು ವಿಶಾಲವಾದ ವಕ್ಷಸ್ಥಳದಿಂದ ಕೂಡಿದ ಕರ್ಣನನ್ನು ಕುರಿತು :

**ಚತುರ್ಣಾಮಭಯಂ ದೇಹಿ ಕಾಮಂ ಯುಧ್ಯಸ್ವ ಫಾಲ್ಗುನಮ್ ॥**

'ಅರ್ಜುನನೊಡನೆ ನಿನ್ನ ಇಚ್ಛಾನುಸಾರವಾಗಿಯೇ ಯುದ್ಧಮಾಡು. ಆದರೆ ಉಳಿದ ನಾಲ್ವರನ್ನಾದರೂ ಕೊಲ್ಲುವುದಿಲ್ಲವೆಂದು ಅಭಯಪ್ರದಾನ ಮಾಡು'–ಎಂಬುದಾಗಿ ಕೇಳಿದಳಂತೆ.

ಆ ಸಮಯದಲ್ಲಿ ಗಡ-ಗಡನೆ ನಡುಗುತ್ತಿದ್ದ ತಾಯಿಯನ್ನು ಕುರಿತು ಧೀಮಂತನಾದ, ಬದ್ಧಾಂಜಲಿಯಾಗಿದ್ದ ಕರ್ಣನು ಹೀಗೆ ಹೇಳಿದನಂತೆ :

**ಪ್ರಾಪ್ತಾನ್ವಿಷಹ್ಯಾಂಶ್ಚತುರೋ ನ ಹನಿಷ್ಯಾಮಿ ತೇ ಸುತಾನ್ ।**
**ಪಞ್ಚೈವ ತೇ ಸುತಾ ದೇವಿ ಭವಿಷ್ಯನ್ತಿ ತವ ಧ್ರುವಾಃ ।**
**ಸಾರ್ಜುನಾ ವಾ ಹತೇ ಕರ್ಣೇ ಸಕರ್ಣಾ ವಾ ಹತೇಽರ್ಜುನೇ ॥**

'ದೇವಿ! ಆ ನಿನ್ನ ನಾಲ್ವರು ಮಕ್ಕಳೂ ಯುದ್ಧದಲ್ಲಿ ನನ್ನಿಂದ ಪರಾಜಯವನ್ನು ಹೊಂದಿದರೂ ನಾನು ಅವರನ್ನು ಸಂಹಾರಮಾಡುವುದಿಲ್ಲ. ಕರ್ಣನು ಹತನಾದರೆ ಅರ್ಜುನನನ್ನು ಸೇರಿಸಿಕೊಂಡು ನಿನಗೆ ಐವರು ಮಕ್ಕಳು ಉಳಿಯುವರು. ಅರ್ಜುನನು ಹತನಾದಲ್ಲಿ ಕರ್ಣನನ್ನು ಸೇರಿಸಿಕೊಂಡಾದರೂ ಐವರು ಉಳಿಯುವರು. ನಿನಗೆ ಐವರು ಮಕ್ಕಳು ಉಳಿಯುವುದಂತೂ ನಿಶ್ಚಯ.'

ಕರ್ಣನ ಆ ಮಾತನ್ನು ಕೇಳಿಯೂ ಪುತ್ರಪ್ರಿಯಳಾದ ಕುಂತಿಯು ಪುನಃ ಕರ್ಣನೊಡನೆ ಹೀಗೆ ಹೇಳಿದಳಂತೆ :

**ಭ್ರಾತೄಣಾಂ ಸ್ವಸ್ತಿ ಕುರ್ವೀಥಾ ಯೇಷಾಂ ಸ್ವಸ್ತಿ ಚಿಕೀರ್ಷಸಿ ॥**

'ನೀನು ಯಾವ ನಿನ್ನ ನಾಲ್ವರು ಸಹೋದರರಿಗೆ ಮಂಗಳವನ್ನುಂಟು ಮಾಡಲು ಇಚ್ಛಿಸಿರುವೆಯೋ, ಆ ನಾಲ್ವರು ಸಹೋದರರ ವಿಷಯದಲ್ಲಾದರೂ ನೀನು ಅವರಿಗೆ ಮಂಗಳವಾಗುವಂತೆ ನಡೆದುಕೊಳ್ಳಬೇಕು.' ಹೀಗೆ

ತನ್ನ ಹಿರಿಯಮಗನೊಡನೆ ಹೇಳಿ ಕುಂತಿಯು ಕರ್ಣನನ್ನು ಅಲ್ಲಿಯೇ ಬಿಟ್ಟು ಮನೆಗೆ ಬಂದಳಂತೆ.

ನಮ್ಮೆಲ್ಲರ ಸಹೋದರನಾದ ಕರ್ಣನನ್ನು ಅರ್ಜುನನೇ ಸಂಹರಿಸಿದನು. ತಮ್ಮನೇ ಅಣ್ಣನನ್ನು ಕೊಂದನು. (ಎಂತಹ ಅಪಚಾರವಿದು?) ಈ ರಹಸ್ಯವನ್ನು ಕುಂತಿಯಾಗಲೀ, ಕರ್ಣನಾಗಲೀ–ಕಡೆಯವರೆಗೂ ಹೊರ ಗೆಡಹಲೇ ಇಲ್ಲ. ಇದರ ಪರಿಣಾಮವಾಗಿ ಅರ್ಜುನನು ಮಹಾಧನುಷ್ಮಂತ ನಾದ ಕರ್ಣನನ್ನು ಯುದ್ಧದಲ್ಲಿ ಸಂಹರಿಸಿದನು. ಬ್ರಾಹ್ಮಣಶ್ರೇಷ್ಠರೇ! ಕರ್ಣನ ಮರಣಾನಂತರವೇ ನಾನು ನಮ್ಮ ತಾಯಿಯ ಮಾತಿನಿಂದ ಕರ್ಣನು ನಮ್ಮೆಲ್ಲರಿಗೂ ಮೊದಲು ಹುಟ್ಟಿದವನೆಂಬುದನ್ನೂ–ನಮ್ಮ ಸಹೋದರ ನೆಂಬುದನ್ನೂ, ತಿಳಿದುಕೊಂಡೆನು. ಸಾಕ್ಷಾತ್ ಅಣ್ಣನ ಕೊಲೆಗೆ ಕಾರಣನಾದ ನನ್ನ ಹೃದಯವೀಗ ಬಹಳವಾಗಿ ಸಂತಪಿಸುತ್ತಿದೆ. ಕರ್ಣಾರ್ಜುನರಿಬ್ಬರ ಸಹಾಯವೂ ನನಗೆ ಇದ್ದುದೇ ಆಗಿದ್ದರೆ ನಾನು ದೇವರಾಜನನ್ನಾದರೂ ಜಯಿಸುತ್ತಿದ್ದೆನು. (ಆದರೆ ವಿಧಿಯ ಇಚ್ಛೆಯು ಹಾಗಿರಲಿಲ್ಲ). ಬಹಳ ಹಿಂದಿನ ಮಾತು. ದುರಾತ್ಮರಾದ ಧೃತರಾಷ್ಟ್ರನ ಮಕ್ಕಳು ತುಂಬಿದ ಸಭೆಯಲ್ಲಿ ನನ್ನನ್ನು ಆಡಬಾರದ ಮಾತುಗಳನ್ನಾಡಿ ಕ್ಲೇಶಗೊಳಿಸುತ್ತಿದ್ದರು. ಆ ಸಮಯ ದಲ್ಲಿ ನನ್ನ ಕೋಪವು ಮೇರೆಮೀರುತ್ತಿದ್ದಿತು. ಆದರೆ ಕರ್ಣನನ್ನು ನೋಡಿದ ಕೂಡಲೇ ಆ ನನ್ನ ಮಹಾಕೋಪವೂ ಉಪಶಮನಗೊಳ್ಳುತ್ತಿದ್ದಿತು. ದ್ಯೂತವು ನಡೆಯುತ್ತಿದ್ದಾಗ ತುಂಬಿದ ಸಭೆಯಲ್ಲಿ ದುರ್ಯೋಧನನ ಹಿತೈಷಿಯಾಗಿದ್ದ ಕರ್ಣನು ದುರ್ಯೋಧನನಿಗೆ ಸಂತೋಷವನ್ನುಂಟುಮಾಡಲು ನನ್ನನ್ನು ಉದ್ದೇಶಿಸಿ ಹೇಳುತ್ತಿದ್ದ ಕರ್ಣಕಠೋರವಾದ ಮತ್ತು ಅತಿತೀಕ್ಷ್ಣವಾದ ಮಾತುಗಳನ್ನು ನಾನು ಕೇಳುತ್ತಿದ್ದೆನು. ಆ ಸಮಯದಲ್ಲಿ ನನಗೆ ಅಪಾರವಾದ ಕೋಪವೇನೋ ಬಂದುಬಿಡುತ್ತಿದ್ದಿತು. ಆದರೆ ಕರ್ಣನ ಚರಣಾರವಿಂದಗಳನ್ನು ನೋಡಿದೊಡನೆಯೇ ಕೋಪವು ಶಾಂತವಾಗಿ ಹೋಗುತ್ತಿದ್ದಿತು.

**ಕುನ್ತ್ಯಾ ಹಿ ಸದೃಶೌ ಪಾದೌ ಕರ್ಣಸ್ಯೇತಿ ಮತಿರ್ಮಮ ।**
**ಸಾದೃಶ್ಯಹೇತುಮನ್ವಿಚ್ಛನ್ಪೃಥಾಯಾಸ್ತಸ್ಯ ಚೈವ ಹ ।**
**ಕಾರಣಂ ನಾಧಿಗಚ್ಛಾಮಿ ಕಥಂಚಿದಪಿ ಚಿನ್ತಯನ್ ॥೪೨॥**

ಕುಂತಿಯ ಪಾದಗಳಿಗೆ ಸದೃಶವಾದ ಪಾದಗಳು ಕರ್ಣನಿಗಿದ್ದಿತೆಂಬುದೇ ನನ್ನ ಅಭಿಪ್ರಾಯವಾಗಿದೆ. ಅವರಿಬ್ಬರ ಕಾಲುಗಳೂ ಒಂದೇ ಲಕ್ಷಣಗಳಿಂದ ಕೂಡಿರಲು ಕಾರಣವೇನಿರಬಹುದೆಂಬುದನ್ನು ಸದಾ ಚಿಂತಿಸುತ್ತಿದ್ದರೂ, ಎಷ್ಟೇ ಪ್ರಯತ್ನಿಸಿದರೂ ಕಾರಣವನ್ನು ತಿಳಿದುಕೊಳ್ಳಲು ನನಗೆ ಸಾಧ್ಯವೇ ಆಗಲಿಲ್ಲ.

ನಾರದರೇ! ಯುದ್ಧಸಮಯದಲ್ಲಿ ನಡೆದ ಕೆಲವು ಅದ್ಭುತಗಳಿಗೆ ಕಾರಣಗಳನ್ನು ತಮ್ಮಿಂದ ಕೇಳಿ ತಿಳಿಯಬೇಕೆಂದಿರುತ್ತೇನೆ. ಯುದ್ಧಸಮಯ ದಲ್ಲಿ ಕರ್ಣನ ರಥದ ಚಕ್ರವನ್ನು ಭೂದೇವಿಯು ಹೇಗೆ ನುಂಗಿದಳು? ನನ್ನ ಸಹೋದರನಾದ ಕರ್ಣನಿಗೆ ಆ ಶಾಪವು ಯಾವ ಕಾರಣದಿಂದ ಮತ್ತು ಯಾರಿಂದ ಪ್ರಾಪ್ತವಾಯಿತು?–ಈ ವಿಷಯವನ್ನು ಯಥಾವತ್ತಾಗಿ ತಿಳಿಸುವ ಕೃಪೆಮಾಡಿರಿ. ಭಗವನ್! ತಾವು ಎಲ್ಲವನ್ನೂ ತಿಳಿದವರಾಗಿದ್ದೀರಿ. ವಿದ್ವಾಂಸರಾಗಿದ್ದೀರಿ. ಹಿಂದೆ ನಡೆದುದು, ಮುಂದೆ ನಡೆಯುವುದು–ಈ ಎಲ್ಲ ಸಂಗತಿಗಳೂ ತಮಗೆ ತಿಳಿದಿರುತ್ತವೆ. ಆದುದರಿಂದ ತಮ್ಮಿಂದಲೇ ನಾನು ಈ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ದಯಮಾಡಿ ಹೇಳಿರಿ."

ಒನೆಯ ಅಧ್ಯಾಯವು ಮುಗಿಯಿತು.

ಎನೆಯ ಅಧ್ಯಾಯ                ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಕರ್ಣನಿಗೆ ಪ್ರಾಪ್ತವಾದ ಶಾಪದ ಪ್ರಸಂಗವನ್ನು ನಾರದರು ಯುಧಿಷ್ಠಿರನಿಗೆ ಹೇಳಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯಮಹಾರಾಜ! ವಾಗ್ಮಿಗಳಲ್ಲಿ ಶ್ರೇಷ್ಠರಾದ ನಾರದರು ಧರ್ಮರಾಜನಿಂದ ಹೀಗೆ ಪ್ರಶ್ನಿಸಲ್ಪಟ್ಟು ಕರ್ಣನು ಬ್ರಾಹ್ಮಣನಿಂದ ಹೇಗೆ ಶಪಿಸಲ್ಪಟ್ಟನೆಂಬುದನ್ನು ಹೇಳಲು ಉಪಕ್ರಮಿಸಿದರು :

"ಮಹಾಬಾಹುವೇ! ಯುಧಿಷ್ಠಿರ! ನೀನು ಕರ್ಣಾರ್ಜುನರ ಪರಾ ಕ್ರಮದ ವಿಷಯದಲ್ಲಿ ಯಾವ ಮಾತನ್ನು ಹೇಳಿದೆಯೋ ಅದು ಹಾಗೆಯೇ ಸರಿ. ಕರ್ಣಾರ್ಜುನರ ಸಹಾಯವೇ ನಿನಗಿದ್ದಿದ್ದರೆ ನೀನು ಹೇಳಿದಂತೆ ಇಂದ್ರ ನನ್ನಾದರೂ ನೀನು ಜಯಿಸಬಹುದಾಗಿದ್ದಿತು. ಕರ್ಣಾರ್ಜುನರಿಗೆ ಯುದ್ಧ

ದಲ್ಲಿ ಸಾಧಿಸಲು ಅಸಾಧ್ಯವೆನಿಸಿದುದೇ ಇರಲಿಲ್ಲ. ಯಾರನ್ನಾದರೂ ಪರಾಜಯಗೊಳಿಸುತ್ತಿದ್ದರು. ಆದರೆ ಕರ್ಣಾರ್ಜುನರು ಒಟ್ಟಿಗೇ ಇರುವುದು ದೇವತೆಗಳಿಗೂ ಇಷ್ಟವಿರಲಿಲ್ಲ. ಇದು ದೇವಗುಹ್ಯ. (ದೇವತೆಗಳ ರಹಸ್ಯ ವಿಷಯ). ನಿಷ್ಪಾಪನೇ! ಮಹಾಬಾಹುವೇ! ಅದೇ ರಹಸ್ಯವನ್ನೇ ನಾನು ನಿನಗೆ ತಿಳಿಸುತ್ತೇನೆ. ಹಿಂದೆ ಇದು ಹೇಗೆ ನಡೆಯಿತೆಂಬುದನ್ನು ಕೇಳು. ಹಿಂದೊಮ್ಮೆ ಕ್ಷತ್ರವರ್ಗವು ಶಸ್ತ್ರಪೂತವಾಗಿ (ಶಸ್ತ್ರದಿಂದ ಅಸುನೀಗಿ ಪರಿಶುದ್ಧವಾಗಿ) ಸ್ವರ್ಗಕ್ಕೆ ಹೋಗುವ ವಿಧಾನವು ಯಾವುದು?–ಎಂದು ದೇವತೆಗಳು ವಿಚಾರಮಾಡತೊಡಗಿದರು. ಪರಸ್ಪರವಾಗಿ ಸಂಘರ್ಷವಾದರಲ್ಲವೇ ಶಸ್ತ್ರ ಪ್ರಹಾರಗಳಿಂದ ಪೂತರಾಗುವುದು? ಹೀಗೆ ಯೋಚಿಸಿದ ದೇವತೆಗಳು ಕ್ಷತ್ರಿಯರಲ್ಲಿ ಪರಸ್ಪರಸಂಘರ್ಷವನ್ನುಂಟುಮಾಡಲು ಸಮರ್ಥವಾದ ಗರ್ಭವನ್ನು ಕನ್ಯೆಯಾಗಿದ್ದ ಕುಂತಿಯಲ್ಲಿರಿಸಿದರು. ಅವಳ ಗರ್ಭದಿಂದ ಹುಟ್ಟಿದ ಕರ್ಣನೇ ಕ್ಷತ್ರಿಯರ ಪರಸ್ಪರಸಂಘರ್ಷಕ್ಕೆ ಮೂಲಕಾರಣನಾದನು. ಮಹಾತೇಜಸ್ಸಿನಿಂದ ಯುಕ್ತನಾಗಿದ್ದ ಆ ಬಾಲಕನು ಕುಂತಿಯ ಗರ್ಭದಲ್ಲಿ ಹುಟ್ಟಿದರೂ, ಮುಂದೆ ಅವನು ಸೂತಪುತ್ರನೆಂದೇ ವಿಖ್ಯಾತನಾದನು. ಕರ್ಣನು ದ್ರೋಣರಿಂದ ಧನುರ್ವಿದ್ಯೆಯನ್ನು ಕಲಿತನು.

ರಾಜೇಂದ್ರ! ಕರ್ಣನು ಭೀಮಸೇನನ ಬಲವನ್ನೂ, ಅರ್ಜುನನ ಹಸ್ತಲಾಘವವನ್ನೂ, ನಿನ್ನ ಬುದ್ಧಿಯನ್ನೂ, ನಕುಲ-ಸಹದೇವರ ವಿನಯವನ್ನೂ, ಬಾಲ್ಯದಿಂದಲೂ ಶ್ರೀಕೃಷ್ಣನೊಡನೆ ಅರ್ಜುನನಿಗಿದ್ದ ಮೈತ್ರಿಯನ್ನೂ, ನಿಮ್ಮ ವಿಷಯದಲ್ಲಿ ಪ್ರಜೆಗಳಿಗಿದ್ದ ಅನುರಾಗವನ್ನೂ ಚಿಂತಿಸುತ್ತಾ ಅಸೂಯೆಯಿಂದ ಪರಿತಪಿಸುತ್ತಿದ್ದನು. ಬಾಲ್ಯದಿಂದಲೇ ಅವನು ದುರ್ಯೋಧನನೊಡನೆ ಸಖ್ಯವನ್ನು ಬೆಳೆಸಿದನು. ಸ್ವಾಭಾವಿಕವಾಗಿಯೂ ಮತ್ತು ದೈವ ಪ್ರೇರಣೆಯಿಂದಲೂ ಕರ್ಣನು ನಿಮ್ಮನ್ನು ಸದಾಕಾಲದಲ್ಲಿಯೂ ದ್ವೇಷಿಸುತ್ತಿದ್ದನು. ಧನಂಜಯನು ಧನುರ್ವೇದದಲ್ಲಿ ತನಗಿಂತಲೂ ಅಧಿಕನಾಗಿರುವನೆಂಬುದನ್ನು ಮನಗಂಡ ಕರ್ಣನು ದ್ರೋಣಾಚಾರ್ಯರನ್ನು ಏಕಾಂತದಲ್ಲಿ ಸಂಧಿಸಿ ಅವರೊಡನೆ ಹೇಳಿದನು :

“ಆಚಾರ್ಯರೇ! ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವುದನ್ನೂ ಮತ್ತು ಅದನ್ನು ಹಿಂದಕ್ಕೆ ತೆಗೆದುಕೊಳ್ಳುವುದನ್ನೂ ರಹಸ್ಯಸಹಿತವಾಗಿ ತಮ್ಮಿಂದ

ಕಲಿಯಬೇಕೆಂದಿರುತ್ತೇನೆ. ಅರ್ಜುನನೊಡನೆ ನಾನು ಸರಿಸಾಟಿಯಾಗಿ ಯುದ್ಧಮಾಡಬೇಕೆಂಬುದು ನನ್ನ ಆಶಯವಾಗಿದೆ. ನಿಮ್ಮ ಪ್ರೀತಿಯು, ನಿಮ್ಮ ಮಗನಲ್ಲಿಯೂ ಮತ್ತು ಶಿಷ್ಯರಲ್ಲಿಯೂ ಸಮಾನವಾಗಿದೆ. (ನೀವು ನಿಮ್ಮ ಶಿಷ್ಯರಲ್ಲಿ ಯಾರೊಬ್ಬರ ಮೇಲೂ ಪಕ್ಷಪಾತವನ್ನು ತೋರಿಸುವುದಿಲ್ಲ.) ಆದುದರಿಂದ ನನಗೂ ಶ್ರೇಷ್ಠವಾದ ಆ ಬ್ರಹ್ಮಾಸ್ತ್ರವನ್ನು ಅನುಗ್ರಹಿಸಿರಿ. ನಿಮ್ಮ ಪರಮಾನುಗ್ರಹದಿಂದಾಗಿ ವಿದ್ವಾಂಸರಾದವರು ನನ್ನನ್ನು ಅಕೃತಾಸ್ತ್ರನೆಂದು (ಅಸ್ತ್ರವಿದ್ಯಾನೈಪುಣ್ಯವಿಲ್ಲದವನೆಂದು) ಹೇಳದಿರಲಿ."

ಧರ್ಮಜ! ಕರ್ಣನು ಹೀಗೆ ಹೇಳಲಾಗಿ ಅರ್ಜುನನ ವಿಷಯದಲ್ಲಿ ಸ್ವಾಭಾವಿಕವಾಗಿಯೇ ಪಕ್ಷಪಾತವಿದ್ದ ದ್ರೋಣರು ಕರ್ಣನ ಮನಸ್ಸಿನಲ್ಲಿ ಅರ್ಜುನನ ವಿಷಯದಲ್ಲಿದ್ದ ದುರ್ಭಾವವನ್ನು ತಿಳಿದವರಾಗಿ ಅವನೊಡನೆ ಹೇಳಿದರು :

**ಬ್ರಹ್ಮಾಸ್ತ್ರಂ ಬ್ರಾಹ್ಮಣೋ ವಿದ್ಯಾದ್ಯಥಾವಚ್ಚರಿತವ್ರತಃ ।**
**ಕ್ಷತ್ರಿಯೋ ವಾ ತಪಸ್ವೀ ಯೋ ನಾನ್ಯೋ ವಿದ್ಯಾತ್ಕಥಂಚನ ॥೧೩॥**

"ಯಥಾವಿಧಿಯಾಗಿ ಬ್ರಹ್ಮಚರ್ಯವ್ರತವನ್ನು ಅನುಷ್ಠಾನಮಾಡಿರುವ ಬ್ರಾಹ್ಮಣನು ಬ್ರಹ್ಮಾಸ್ತ್ರವನ್ನು ತಿಳಿದುಕೊಳ್ಳಬಹುದು. ಅಥವಾ ತಪಸ್ವಿಯಾದ ಕ್ಷತ್ರಿಯನೂ ಬ್ರಹ್ಮಾಸ್ತ್ರವನ್ನು ಪಡೆದುಕೊಳ್ಳಬಹುದು. ಬೇರೆ ಯಾರೂ ಆ ಮಹಾಸ್ತ್ರವನ್ನು ಯಾವುದೇ ಕಾರಣದಿಂದಲೂ ತಿಳಿದುಕೊಳ್ಳಲು ಸಾಧ್ಯ ವಾಗದು."

ಯುಧಿಷ್ಠಿರ! ದ್ರೋಣರು ಹೀಗೆ ಹೇಳಿದೊಡನೆಯೇ ಕರ್ಣನು ಅಂಗಿ ರಸರಲ್ಲಿ ಶ್ರೇಷ್ಠರಾದ ದ್ರೋಣರನ್ನು ಯಥೋಚಿತವಾಗಿ ಗೌರವಿಸಿ ಅವರ ಅನುಮತಿಯನ್ನು ಪಡೆದು ಮಹೇಂದ್ರಪರ್ವತದಲ್ಲಿದ್ದ ಪರಶುರಾಮನ ಬಳಿಗೆ ಬಹಳ ಬೇಗ ಹೊರಟುಹೋದನು. ಕರ್ಣನು ಪರಶುರಾಮನ ಬಳಿಗೆ ಹೋಗಿ ತಲೆಬಾಗಿ ನಮಸ್ಕರಿಸಿ "ನಾನು ಭೃಗುವಂಶದ ಬ್ರಾಹ್ಮಣನಾಗಿದ್ದೇನೆ"–ಎಂದು ಹೇಳಿಕೊಂಡು ಪರಶುರಾಮನಲ್ಲಿ ಗುರುಭಾವವನ್ನಿಟ್ಟುಕೊಂಡು ಅವನ ಆಶ್ರಯವನ್ನು ಪಡೆದನು.

ಬಳಿಕ ಪರಶುರಾಮನು ಗೋತ್ರವೇ ಮೊದಲಾದ ಎಲ್ಲ ವಿಷಯ ಗಳನ್ನೂ ಕರ್ಣನಿಂದ ಕೇಳಿ ತಿಳಿದುಕೊಂಡು ಕರ್ಣನನ್ನು ತನ್ನ ಶಿಷ್ಯನನ್ನಾಗಿ

ಪರಿಗ್ರಹಿಸಿದನು. "ವತ್ಸ! ನೀನು ಇಲ್ಲಿಯೇ ಇರು. ನಿನಗೆ ಸ್ವಾಗತವನ್ನು ಬಯಸುತ್ತೇನೆ." ಪರಶುರಾಮನು ಹೀಗೆ ಹೇಳಿ ಕರ್ಣನನ್ನು ಬರಮಾಡಿ ಕೊಂಡನಲ್ಲದೇ, ಅವನನ್ನು ಬಹಳ ಅಕ್ಕರೆಯಿಂದಲೂ ಕಾಣುತ್ತಿದ್ದನು. ಸ್ವರ್ಗಸದೃಶವಾದ ಮಹೇಂದ್ರಪರ್ವತದಲ್ಲಿ ಕರ್ಣನು ಪರಶುರಾಮನ ಅಂತೇವಾಸಿತ್ವದಲ್ಲಿ ವಾಸಮಾಡುತ್ತಿದ್ದಾಗ ದೇವ-ಗಂಧರ್ವ-ಯಕ್ಷ-ರಾಕ್ಷಸರ ಸಮಾಗಮವೂ ಅವನಿಗಾಯಿತು. ಅಲ್ಲಿ ಕರ್ಣನು ಭೃಗುಶ್ರೇಷ್ಠನಾದ ಪರಶುರಾಮನಿಂದ ಯಥಾವಿಧಿಯಾಗಿ ಇಷ್ವಸ್ತ್ರಗಳನ್ನು ಕಲಿತನು. ಆದುದರಿಂದ ದೇವ-ದಾನವ-ರಾಕ್ಷಸರಿಗೂ ಅವನು ಅತ್ಯಂತಪ್ರಿಯನಾದನು.

ಕರ್ಣನೊಮ್ಮೆ ಸಮುದ್ರತೀರಪ್ರದೇಶದಲ್ಲಿದ್ದ ಆಶ್ರಮದ ಸಮೀಪದಲ್ಲಿ ಖಡ್ಗ-ಧನುಷ್ಪಾಣಿಯಾಗಿ ಸಂಚರಿಸುತ್ತಿದ್ದನು. ಆ ಸಮಯದಲ್ಲವನು ಅಗ್ನಿಹೋತ್ರದಲ್ಲಿ ತೊಡಗಿದ್ದ ವೇದಪಾಠಿಯೊಬ್ಬನ ಹೋಮಧೇನುವನ್ನು (ಅದು ಬ್ರಾಹ್ಮಣನ ಹೋಮಧೇನುವೆಂಬುದನ್ನು ತಿಳಿಯದೇ ಯಾವುದೋ ಹಿಂಸ್ರಪಶುವೆಂದು ಭಾವಿಸಿ) ಆಕಸ್ಮಿಕವಾಗಿ ಸಂಹರಿಸಿಬಿಟ್ಟನು. ಬೇಟೆಯಾಡಿದ ಪ್ರಾಣಿಯ ಬಳಿಗೆ ಹೋಗಿ ನೋಡಿದನಂತರ ಆ ಪ್ರಾಣಿಯು ಬ್ರಾಹ್ಮಣನ ಹೋಮಧೇನುವೆಂಬುದನ್ನೂ, ತಿಳಿಯದೇ ಅದನ್ನು ಅಜ್ಞಾನವಶದಿಂದ ತಾನು ಸಂಹರಿಸಿಬಿಟ್ಟೆನೆಂಬುದನ್ನೂ ಮನಗಂಡ ಕರ್ಣನು ತಾನು ತಿಳಿಯದೇ ಮಾಡಿದ ಕಾರ್ಯವನ್ನು ಬ್ರಾಹ್ಮಣನಿಗೆ ಹೇಳಿದನು. ಬ್ರಾಹ್ಮಣನನ್ನು ಪ್ರಸನ್ನಗೊಳಿಸಲು ಬಾರಿ-ಬಾರಿಗೂ ಪ್ರಯತ್ನಿಸುತ್ತಾ ಕರ್ಣನು ಅವನೊಡನೆ ಹೇಳಿದನು :

"ಭಗವನ್! ನಾನು ಬುದ್ಧಿಪೂರ್ವಕವಾಗಿ ನಿನ್ನ ಹೋಮಧೇನುವನ್ನು ಸಂಹರಿಸಲಿಲ್ಲ. ಅದು ನಿನ್ನ ಹೋಮಧೇನುವೆಂಬುದನ್ನು ತಿಳಿಯದೆಯೇ ಬೇಟೆಯಾಡಲು ಯೋಗ್ಯವಾದ ಪ್ರಾಣಿಯೆಂದು ಭಾವಿಸಿ ಸಂಹರಿಸಿಬಿಟ್ಟೆನು. ಈ ನನ್ನ ಅಪರಾಧವನ್ನು ಕ್ಷಮಿಸಿ ನನ್ನ ಮೇಲೆ ಕೃಪೆದೋರು."

ಧರ್ಮಜ! ಹೀಗೆ ಕರ್ಣನು ಆ ಬ್ರಾಹ್ಮಣನನ್ನು ಹಲವು ಬಾರಿ ಪ್ರಾರ್ಥಿಸಿದನು. ಆದರೆ ಆ ಬ್ರಾಹ್ಮಣನು ಅತ್ಯಂತಕ್ರುದ್ಧನಾಗಿ ಗಡುಸಾದ ಮಾತಿನಿಂದಲೇ ಕರ್ಣನನ್ನು ಭಯಪಡಿಸಲು ಇಚ್ಛಿಸುವನೋ ಎಂಬಂತೆ ಹೇಳಿದನು :

**ದುರಾಚಾರ ವಧಾರ್ಹಸ್ತ್ವಂ ಫಲಂ ಪ್ರಾಪ್ನುಹಿ ದುರ್ಮತೇ ।**
**ಯೇನ ವಿಸ್ಪರ್ಧಸೇ ನಿತ್ಯಂ ಯದರ್ಥಂ ಘಟಸೇಽನಿಶಮ್ ।**
**ಯುಧ್ಯತಸ್ತೇನ ತೇ ಪಾಪ ಭೂಮಿಶ್ಚಕ್ರಂ ಗ್ರಸಿಷ್ಯತಿ ॥೨೪॥**

"ದುರಾಚಾರನೇ! ದುರ್ಮತಿಯೇ! ನೀನು ಮಾಡಿರುವ ಈ ಪಾಪ ಕಾರ್ಯಕ್ಕೆ ನಿನ್ನನ್ನು ವಧಿಸುವುದೇ ಯೋಗ್ಯವಾಗಿದ್ದಿತು. ನೀನು ವಧಾರ್ಹನೇ



ಹೊರತು ಕ್ಷಮಾರ್ಹನೆಂದಿಗೂ ಅಲ್ಲ. ನೀನು ಮಾಡಿರುವ ಈ ಪಾಪ ಕರ್ಮಕ್ಕೆ ತಕ್ಕುದಾದ ಫಲವನ್ನೇ ಪಡೆಯುವೆ. ಪಾಪಿಷ್ಠನೇ! ನೀನು ಯಾರೊಡನೆ ಅನುದಿನವೂ ಸ್ಪರ್ಧಿಸುತ್ತಿರುವೆಯೋ, ನೀನು ಯಾರ ನಿರ್ಮೂಲಕ್ಕಾಗಿ

ಅಹರ್ನಿಶಿ ಪ್ರಯತ್ನಿಸುತ್ತಲೇ ಇರುವೆಯೋ–ಅಂತಹ ವೀರನೊಡನೆ ಯುದ್ಧಮಾಡುತ್ತಿರುವಾಗ ಭೂಮಿಯು ನಿನ್ನ ರಥದ ಒಂದು ಚಕ್ರವನ್ನು ನುಂಗುತ್ತದೆ. ( ಚಕ್ರವು ಭೂಮಿಯಲ್ಲಿ ಹೂತುಕೊಳ್ಳುತ್ತದೆ. )

**ತತಶ್ಚಕ್ರೇ ಮಹೀಗ್ರಸ್ತೇ ಮೂರ್ಧಾನಂ ತೇ ವಿಚೇತಸಃ ।**
**ಪಾತಯಿಷ್ಯತಿ ವಿಕ್ರಮ್ಯ ಶತ್ರುರ್ಗಚ್ಛ ನರಾಧಮ ॥೨೫॥**

ನಿನ್ನ ರಥದ ಚಕ್ರವೊಂದು ಭೂಮಿಯಿಂದ ನುಂಗಲ್ಪಡಲಾಗಿ ಬುದ್ಧಿಗೆಟ್ಟು ಕಂಗಾಲಾಗುವ ನಿನ್ನ ತಲೆಯನ್ನು ನಿನ್ನ ಶತ್ರುವು ಪರಾಕ್ರಮವನ್ನು ತೋರಿಸುತ್ತಾ ಕೆಳಗುರುಳಿಸುತ್ತಾನೆ. ನರಾಧಮನೇ! ಕ್ಷಣವಾದರೂ ಇಲ್ಲಿ ನಿಲ್ಲಬೇಡ. ಹೊರಟುಹೋಗು.

**ಯಥೇಯಂ ಗೌರ್ಹತಾ ಮೂಢ ಪ್ರಮತ್ತೇನ ತ್ವಯಾ ಮಮ ।**
**ಪ್ರಮತ್ತಸ್ಯ ತಥಾರಾತಿಃ ಶಿರಸ್ತೇ ಪಾತಯಿಷ್ಯತಿ ॥೨೬॥**

ಪ್ರಮತ್ತನಾದ ನೀನು ನನ್ನ ಈ ಹೋಮಧೇನುವನ್ನು ಹೇಗೆ ಸಂಹರಿಸಿದೆಯೋ–ಹಾಗೆಯೇ ನೀನು ಪ್ರಮತ್ತನಾಗಿರುವಾಗ ( ಮುಂದೇನು ಮಾಡಬೇಕೆಂದು ತೋರದೇ ಮೋಹವಶನಾಗಿರುವಾಗ ) ಶತ್ರುವು ನಿನ್ನ ತಲೆಯನ್ನು ಕೆಡಹುತ್ತಾನೆ."

ಯುಧಿಷ್ಠಿರ! ಹೀಗೆ ಬ್ರಾಹ್ಮಣನಿಂದ ಶಪಿಸಲ್ಪಟ್ಟ ಕರ್ಣನು ಆ ಬ್ರಾಹ್ಮಣನನ್ನು ಗೋ-ಧನ-ರತ್ನಗಳ ಪ್ರದಾನದಿಂದ ಪ್ರಸನ್ನಗೊಳಿಸಲು ಪ್ರಯತ್ನಿಸಿದನು. ಅದರಿಂದಲೂ ಶಾಂತನಾಗದ ಆ ಬ್ರಾಹ್ಮಣನು ಪುನಃ ಹೇಳಿದನು :

"ಕರ್ಣ! ನಾನೀಗ ಹೇಳಿದುದನ್ನು ( ಶಾಪಕೊಟ್ಟುದನ್ನು ) ಹೇಳದೆಯೇ ಇದ್ದಂತೆ (ಶಾಪವನ್ನೇ ಕೊಟ್ಟಿಲ್ಲವೋ ಎಂಬಂತೆ ) ಮಾಡಲು (ನನ್ನ ಶಾಪವನ್ನು ತಡೆಯಲು) ಈ ಎಲ್ಲ ಲೋಕಗಳೂ ಒಟ್ಟಾಗಿ ಸೇರಿದರೂ ಸಾಧ್ಯವಾಗುವುದಿಲ್ಲ. ನೀನು ಇಲ್ಲಿಯೇ ಇರು ಅಥವಾ ಬೇರೆಲ್ಲಿಗಾದರೂ ಹೊರಟು ಹೋಗು. ವೃಥಾ ನನ್ನ ಮುಂದೆ ಕೈಜೋಡಿಸಿಕೊಂಡು ನಿಲ್ಲುವುದರಿಂದ ಯಾವ ಪ್ರಯೋಜನವೂ ಇಲ್ಲ."

ಯುಧಿಷ್ಠಿರ! ಬ್ರಾಹ್ಮಣನು ಹೀಗೆ ಹೇಳಿದನಂತರ ಕರ್ಣನು ದೈನ್ಯ

ದಿಂದ ಅಧೋಮುಖನಾಗಿ ಬ್ರಾಹ್ಮಣನಿತ್ತ ಶಾಪವನ್ನೇ ಮನಸ್ಸಿನಲ್ಲಿ ಚಿಂತಿಸುತ್ತಾ ಭಯಗೊಂಡವನಾಗಿ ಗುರುವಾದ ಪರಶುರಾಮನ ಬಳಿಗೆ ಹೊರಟುಹೋದನು."

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಕರ್ಣನು ಬ್ರಹ್ಮಾಸ್ತ್ರವನ್ನು ಪಡೆದುದು : ಪರಶುರಾಮನ ಶಾಪ

ನಾರದರು ಮುಂದುವರಿದು ಹೇಳುತ್ತಾರೆ :

"ಧರ್ಮಜ! ಕರ್ಣನ ಬಾಹುಗಳಲ್ಲಿದ್ದ ಬಲ, ಅವನ ಗುರುಭಕ್ತಿ, ಜಿತೇಂದ್ರಿಯತೆ ಮತ್ತು ಕರ್ಣನು ಮಾಡುತ್ತಿದ್ದ ಗುರುಶುಶ್ರೂಷೆ–ಇತ್ಯಾದಿ ಗಳಿಂದ ಭೃಗುಶ್ರೇಷ್ಠನಾದ ಪರಶುರಾಮನು ಸಂತುಷ್ಟನಾದನು. ತಪಸ್ವಿಯಾದ ಪರಶುರಾಮನು ತಪಸ್ಸಿನಲ್ಲಿಯೇ ನಿರತನಾಗಿದ್ದ ಕರ್ಣನಿಗೆ ಪ್ರಯೋಗೋಪಸಂಹಾರಸಹಿತವಾದ, ಸಮಗ್ರವಾದ ಬ್ರಹ್ಮಾಸ್ತ್ರವನ್ನು ವಿಧಿವತ್ತಾಗಿ ಉಪದೇಶಿಸಿದನು. ಮಹಾಸ್ತ್ರವಾದ ಬ್ರಹ್ಮಾಸ್ತ್ರವನ್ನು ತಿಳಿದು ಕೊಂಡು ಅದ್ಭುತವಿಕ್ರಮನಾದ ಕರ್ಣನು ಪರಶುರಾಮನ ಆಶ್ರಮದಲ್ಲಿ ಅನೇಕ ದಿವಸಗಳವರೆಗೆ ಉಲ್ಲಾಸದಿಂದಲೇ ಇರುತ್ತಿದ್ದನು. ಧನುರ್ವೇದವನ್ನು ಸಂಪೂರ್ಣವಾಗಿ ಹಸ್ತಗತಮಾಡಿಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಲೂ ಇದ್ದನು. ಹೀಗೆಯೇ ಇರುತ್ತಿರಲಾಗಿ ಒಮ್ಮೆ ಧೀಮಂತನಾದ ಪರಶುರಾಮನು ಪ್ರಿಯಶಿಷ್ಯನಾದ ಕರ್ಣನೊಡನೆ ಆಶ್ರಮದ ಸಮೀಪದಲ್ಲಿ ತಿರುಗಾಡುತ್ತಿದ್ದನು. ಆ ಸಮಯದಲ್ಲಿ ಪರಶುರಾಮನು ಉಪವಾಸವ್ರತಾನುಷ್ಠಾನಗಳಿಂದ ಬಹಳವಾಗಿ ಕೃಶನಾಗಿದ್ದನು. ಮನಸ್ಸೂ ಕೂಡ ಬಹಳವಾಗಿ ಆಯಾಸಗೊಂಡಿದ್ದಿತು. ಕರ್ಣನ ಮೇಲೆ ಪರಶುರಾಮನಿಗೆ ಒಳ್ಳೆಯ ಭಾವನೆಯುಂಟಾಗಿದ್ದಿತು. ಆದುದರಿಂದ ಗುರುವಾದ ಪರಶುರಾಮನು ಕರ್ಣನಲ್ಲಿ ಸಂಪೂರ್ಣವಾದ ವಿಶ್ವಾಸವನ್ನಿಟ್ಟು ಕರ್ಣನ ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು ಮಲಗಿಬಿಟ್ಟನು. ಅದೇ ಸಮಯಕ್ಕೆ ಸರಿಯಾಗಿ ಕಫ,

ಮೇದಸ್ಸು, ಮಾಂಸ ಮತ್ತು ರಕ್ತಗಳನ್ನೇ ಆಹಾರರೂಪದಲ್ಲಿ ಸೇವಿಸುವ, ಬಹುಘೋರವಾದ, ಕಚ್ಚುವ ಸ್ವಭಾವವುಳ್ಳ ಕ್ರಿಮಿಯೊಂದು ಕರ್ಣನ ಬಳಿಗೆ ಬಂದಿತು. ರಕ್ತಾಹಾರಿಯಾದ ಆ ಕ್ರಿಮಿಯು ಕರ್ಣನ ತೊಡೆಯ ಮೇಲೆ ಕುಳಿತು ತೊಡೆಯನ್ನು ಕೊರೆಯತೊಡಗಿತು. ಗುರುವು ತೊಡೆಯ ಮೇಲೆ ಮಲಗಿದ್ದುದರಿಂದ ಆ ಸಮಯದಲ್ಲಿ ಕರ್ಣನಿಗೆ ಆ ಕ್ರಿಮಿಯನ್ನೆತ್ತಿ ಒಗೆಯಲಾಗಲೀ ಅಥವಾ ಸಾಯಿಸಲಾಗಲೀ ಸಾಧ್ಯವಾಗಲೇ ಇಲ್ಲ. ಶರೀರಕಂಪನದಿಂದ ಗುರುವಿಗೆಲ್ಲಿ ನಿದ್ರಾಭಂಗವಾಗಿಬಿಡುವುದೋ—ಎಂದು ಕರ್ಣನು ಭಯಪಟ್ಟನು. ಆ ಶಂಕೆಯಿಂದಿದ್ದ ಸೂರ್ಯನ ಮಗನಾದ ಕರ್ಣನು ಕ್ರಿಮಿಯು ಅನವರತವಾಗಿ ತೊಡೆಯನ್ನು ಕೊರೆಯುತ್ತಿದ್ದರೂ ಅದನ್ನು ಉಪೇಕ್ಷಿಸಿಬಿಟ್ಟನು. ಕ್ರಿಮಿಯನ್ನು ಕೊಲ್ಲಲೂ ಇಲ್ಲ ; ತೆಗೆದೆಸೆಯಲು ಪ್ರಯತ್ನಿಸಲೂ ಇಲ್ಲ. ಕರ್ಣನಿಗೆ ಆಗುತ್ತಿದ್ದ ವೇದನೆಯು ಸಹಿಸಲು ಅಸಾಧ್ಯವೇ ಆಗಿದ್ದಿತು. ಆದರೂ ಆ ನೋವನ್ನು ಅವನು ಧೈರ್ಯದಿಂದ ಸಹಿಸಿಕೊಂಡನು. ತನ್ನ ಅಂಗಾಂಗಗಳು ಸ್ವಲ್ಪವೂ ಕಂಪನವಾಗದಂತೆ ಎಚ್ಚರಿಕೆಯಿಂದಿದ್ದನು. ಕ್ರಿಮಿದಂಶನಕ್ಕಾಗಿ ವ್ಯಥೆಪಡಲೂ ಇಲ್ಲ. ಹೀಗೆ ಕರ್ಣನು ಗುರುವಾದ ಪರಶುರಾಮನನ್ನು ತೊಡೆಯ ಮೇಲೆ ಮಲಗಿಸಿಕೊಂಡೇ ಇದ್ದನು. ಆದರೆ ಕ್ರಿಮಿಯು ಕೊರೆಯುತ್ತಿದ್ದಂತೆ ತೊಡೆಯಿಂದ ರಕ್ತವು ಹೊರಹೊಮ್ಮಿತು. ಹೊರಬಂದ ರಕ್ತವು ಎಲ್ಲ ಕಡೆಗಳಲ್ಲಿಯೂ ಹರಿಯುತ್ತಾ ಪರಶುರಾಮನನ್ನು ಸ್ಪರ್ಶಿಸಿತು. ರಕ್ತದ ಸ್ಪರ್ಶವಾದೊಡನೆಯೇ ಪರಶುರಾಮನು ಎಚ್ಚರಗೊಂಡನು. ತೇಜಸ್ವಿಯಾದ ಪರಶುರಾಮನು ರಕ್ತಸ್ಪರ್ಶದಿಂದ ಭಯಗೊಂಡು ಉದ್ವಿಗ್ನನಾಗಿ ಹೇಳಿದನು :

**ಅಹೋಽಸ್ಮ್ಯಶುಚಿತಾಂ ಪ್ರಾಪ್ತಃ ಕಿಮಿದಂ ಕ್ರಿಯತೇ ತ್ವಯಾ ।**
**ಕಥಯಸ್ವ ಭಯಂ ತ್ಯಕ್ತ್ವಾ ಯಾಥಾತಥ್ಯಮಿದಂ ಮಮ ॥೧೧॥**

"ಅಯ್ಯೋ! ಕರ್ಣ! ನಾನು ರಕ್ತಸ್ಪರ್ಶದಿಂದ ಅಶುಚಿಯಾದೆನು. ನೀನೇನು ಮಾಡುತ್ತಿರುವೆ? ಭಯವನ್ನು ತ್ಯಜಿಸಿ ಯಥಾವತ್ತಾದ ಸಂಗತಿಯನ್ನು ನನ್ನೊಡನೆ ಹೇಳು."

ಹೀಗೆ ಪ್ರಶ್ನಿಸಿದೊಡನೆಯೇ ಕರ್ಣನು, ಕ್ರಿಮಿಯೊಂದು ತನ್ನ ತೊಡೆ

ಯನ್ನು ಕೊರೆದು ಅಲ್ಲಿದ್ದ ಮಾಂಸ-ಮೇದಸ್ಸುಗಳನ್ನು ತಿನ್ನುತ್ತಿದ್ದ ವಿಷಯವನ್ನು ಪರಶುರಾಮನಿಗೆ ಹೇಳಿದನು. ಆ ಸಮಯದಲ್ಲಿ ಪರಶುರಾಮನು ಕ್ರಿಮಿಯಿಂದ ಕ್ಷತನಾಗಿದ್ದ ಕರ್ಣನನ್ನೂ–ಹಂದಿಯಂತಿದ್ದ ಆ ಕ್ರಿಮಿಯನ್ನೂ ನೋಡಿದನು. ಆ ಕ್ರಿಮಿಗೆ ಎಂಟು ಕಾಲುಗಳಿದ್ದವು. ತೀಕ್ಷ್ಣವಾದ ಕೋರೆದಾಡೆಗಳಿದ್ದವು. ಸೂಜಿಗೆ ಸಮಾನವಾದ ಕೂದಲುಗಳಿಂದ ಆ ಕ್ರಿಮಿಯು ಆವೃತವಾಗಿದ್ದಿತು. ಅತ್ಯಂತ ತ್ರಾಸದಿಂದ ಆ ಕ್ರಿಮಿಯು ತನ್ನ ಶರೀರವನ್ನು ಸಂಕೋಚಿಸಿಕೊಂಡಿದ್ದಿತು. ಅದು ಅಲರ್ಕ ಎಂಬ ಅನ್ವರ್ಥನಾಮದಿಂದಲೇ ಪ್ರಸಿದ್ಧಿಯನ್ನು ಹೊಂದಿದ್ದಿತು.

ಪರಶುರಾಮನ ದೃಷ್ಟಿಪಾತವಾದೊಡನೆಯೇ ಕರ್ಣನ ರಕ್ತದಿಂದ ತೋಯ್ದುಹೋಗಿದ್ದ ಆ ಕ್ರಿಮಿಯು ಪ್ರಾಣಗಳನ್ನು ತೊರೆಯಿತು. ಅದು ಪರಶುರಾಮನಿಗೆ ಪರಮಾದ್ಭುತವಾಗಿ ಕಂಡಿತು. ಮರುಕ್ಷಣದಲ್ಲಿಯೇ ನಾನಾ ರೂಪಗಳನ್ನು ಧರಿಸುವ ಸಾಮರ್ಥ್ಯವಿದ್ದ, ಆ ಸಮಯದಲ್ಲಿ ಕರಾಳವಾದ (ಅತಿಘೋರವಾದ) ರೂಪವನ್ನು ಧರಿಸಿದ್ದ, ಕೆಂಪುಬಣ್ಣದ ಕುತ್ತಿಗೆಯಿಂದ ಪರಿಶೋಭಿಸುತ್ತಿದ್ದ, ಕಪ್ಪಾದ ಶರೀರವನ್ನು ಹೊಂದಿದ್ದ, ಮೇಘವನ್ನೇ ವಾಹನವನ್ನಾಗಿ ಮಾಡಿಕೊಂಡಿದ್ದ ರಾಕ್ಷಸನೊಬ್ಬನು ಆಕಾಶದಲ್ಲಿ ಕಾಣಿಸಿಕೊಂಡನು. ಪೂರ್ಣಮನೋರಥನಾಗಿದ್ದ ಆ ರಾಕ್ಷಸನು ಬದ್ಧಾಂಜಲಿಯಾಗಿ ಪರಶುರಾಮನೊಡನೆ ಮಾತನಾಡಿದನು :

**ಸ್ವಸ್ತಿ ತೇ ಭೃಗುಶಾರ್ದೂಲ ಗಮಿಷ್ಯೇऽಹಂ ಯಥಾಗತಮ್ ।**
**ಮೋಕ್ಷಿತೋ ನರಕಾದಸ್ಮಾದ್ಭವತಾ ಮುನಿಸತ್ತಮ ।**
**ಭದ್ರಂ ತವಾಸ್ತು ವನ್ದೇ ತ್ವಾಂ ಪ್ರಿಯಂ ಮೇ ಭವತಾ ಕೃತಮ್ ॥**

"ಭೃಗುಶ್ರೇಷ್ಠನೇ! ಪರಶುರಾಮ! ನಿನಗೆ ಮಂಗಳವಾಗಲಿ. ನಾನೆಲ್ಲಿಂದ ಬಂದಿದ್ದೆನೋ ಅಲ್ಲಿಗೇ ಪುನಃ ಹೊರಟುಹೋಗುತ್ತೇನೆ. ಮುನಿಶ್ರೇಷ್ಠನೇ! ಕ್ರಿಮಿಶರೀರವೆಂಬ ಈ ನರಕದಿಂದ ನನ್ನನ್ನು ನೀನು ಉದ್ಧರಿಸಿರುವೆ. ನಿನಗೆ ನಾನು ನಮಸ್ಕರಿಸುತ್ತೇನೆ. ನಿನಗೆ ಕಲ್ಯಾಣವಾಗಲಿ. ನನಗೆ ಪ್ರಿಯವನ್ನೇ ನೀನು ಮಾಡಿರುವೆ."

ರಾಕ್ಷಸನು ಹೇಳಿದ ಮಾತುಗಳನ್ನು ಕೇಳಿ ಮಹಾಬಾಹುವಾದ, ಪ್ರತಾಪವಂತನಾದ, ಜಮದಗ್ನಿಯ ಮಗನಾದ ಪರಶುರಾಮನು ಪ್ರಶ್ನಿಸಿದನು:



**ಕಸ್ತ್ವಂ ಕಸ್ಮಾಚ್ಚ ನರಕಂ ಪ್ರತಿಪನ್ನೋ ಬ್ರವೀಹಿ ತತ್ ॥೧೮॥**

"ನೀನು ಯಾರು? ಯಾವ ಕಾರಣದಿಂದಾಗಿ ನೀನು ಕ್ರಿಮಿರೂಪವಾದ ನರಕವನ್ನು ಹೊಂದಿದೆ? ಆ ಕಾರಣವನ್ನು ಹೇಳು." ಪರಶುರಾಮನು ಕೇಳಿದ ಪ್ರಶ್ನೆಗಳಿಗೆ ರಾಕ್ಷಸನು ಉತ್ತರಿಸತೊಡಗಿದನು : "ನಾನು ಹಿಂದೆ ಸತ್ಯಯುಗದಲ್ಲಿ ದಂಶ ಎಂಬ ಹೆಸರಿನ ಮಹಾಸುರನಾಗಿದ್ದೆನು. ಆ ಕಾಲದಲ್ಲಿ ನಾನು ಭೃಗುಮಹರ್ಷಿಗೆ ಸಮಾನವಯಸ್ಕನೇ ಆಗಿದ್ದೆನು. ಒಮ್ಮೆ ನಾನು

ಭೃಗುಮುನಿಗೆ ಅತ್ಯಂತಪ್ರೀತಿಪಾತ್ರಳಾಗಿದ್ದ ಪತ್ನಿಯನ್ನು ಬಲಾತ್ಕಾರವಾಗಿ ಅಪಹರಿಸಿಕೊಂಡು ಹೋದೆನು. ಆದರಿಂದ ಕುಪಿತನಾದ ಮಹರ್ಷಿಯು ಕೊಟ್ಟ ಶಾಪದಿಂದಾಗಿ ನಾನು ಕ್ರಿಮಿಯಾಗಿ ಭೂಮಿಯ ಮೇಲೆ ಬಿದ್ದೆನು. ಕ್ರುದ್ಧನಾಗಿದ್ದ ನಿನ್ನ ಮುತ್ತಾತನಾದ ಭೃಗುವು 'ಮೂತ್ರ-ಕಫಗಳನ್ನು ತಿನ್ನುತ್ತಾ ನೀನು ನರಕದಲ್ಲಿ ಬೀಳುವೆ'–ಎಂದೂ ಹೇಳಿದನು. 'ಬ್ರಹ್ಮನ್! ನೀನು ಕೊಟ್ಟಿರುವ ಶಾಪವು ಅಂತ್ಯವಾಗುವಂತೆಯಾದರೂ ಅನುಗ್ರಹಿಸು'–ಎಂದು ನಾನವನನ್ನು ಪ್ರಾರ್ಥಿಸಲಾಗಿ ಭೃಗುಮಹರ್ಷಿಯು ನನ್ನೊಡನೆ– '**ಭವಿತಾ ಭಾರ್ಗವಾದ್ರಾಮಾತ್** ಭಾರ್ಗವರಾಮನಿಂದ ನಿನಗೆ ಶಾಪದ ವಿಮೋಚನೆ ಯಾಗುತ್ತದೆ'–ಎಂದು ಶಾಪವಿಮೋಚನದ ಕಾಲವನ್ನೂ ಸೂಚಿಸಿದನು. ಯಾವ ಬಗೆಯಿಂದಲೂ ಕುಶಲವನ್ನೇ ಕಾಣದ ನಾನು ಈ ದುರವಸ್ಥೆಯನ್ನು ಅಂದಿನಿಂದಲೂ ಅನುಭವಿಸುತ್ತಿದ್ದೆನು. ಮಹಾಪುರುಷನೇ! ನಿನ್ನ ಸಮಾಗಮದ ಫಲವಾಗಿ ನಾನು ಈ ಪಾಪಜನ್ಮದಿಂದ ಮುಕ್ತನಾಗಿದ್ದೇನೆ."

ಕೌಂತೇಯ! ಮಹಾಸುರನು ಪರಶುರಾಮನಿಗೆ ಹೀಗೆ ಹೇಳಿ ನಮಸ್ಕರಿಸಿ ತನ್ನ ಸ್ಥಳಕ್ಕೆ ಹೊರಟುಹೋದನು.

ಬಳಿಕ ಪರಶುರಾಮನು ಕ್ರೋಧಾಭಿಭೂತನಾಗಿ ಕರ್ಣನ ಕಡೆಗೆ ತಿರುಗಿ ಹೇಳಿದನು :

"ಮೂಢನೇ! ಕ್ರಿಮಿಯ ದಂಶನವೆಂದರೆ ಅತ್ಯಂತದುಃಖಕರ ವಾದುದು. ಇಂತಹ ಕ್ರಿಮಿದಂಶನದಿಂದುಂಟಾಗುವ ವೇದನೆಯನ್ನು ಬ್ರಾಹ್ಮಣನಾದವನೆಂದಿಗೂ ಸಹಿಸಿಕೊಳ್ಳಲಾರನು. ನಿನ್ನಲ್ಲಿರುವ ಧೈರ್ಯವು ಕ್ಷತ್ರಿಯನಲ್ಲಿರುವ ಧೈರ್ಯಕ್ಕೆ ಸಮಾನವಾಗಿದೆ. ನೀನಾಗಿಯೇ ಸತ್ಯವನ್ನು ಹೇಳು."

ಧರ್ಮಜ! ಆ ಸಮಯದಲ್ಲಿ ಕರ್ಣನು ಪರಶುರಾಮನು ಶಾಪ ಕೊಡುವನೆಂದು ಬಹಳವಾಗಿ ಹೆದರಿದ್ದನು. ಆದರೂ ಭಾರ್ಗವನನ್ನು ಪ್ರಸನ್ನ ಗೊಳಿಸುತ್ತಾ ಹೇಳಿದನು :

**ಬ್ರಹ್ಮಕ್ಷತ್ರಾನ್ತರೇ ಜಾತಂ ಸೂತಂ ಮಾಂ ವಿದ್ಧಿ ಭಾರ್ಗವ ॥೨೬॥**

**ರಾಧೇಯಃ ಕರ್ಣ ಇತಿ ಮಾಂ ಪ್ರವದನ್ತಿ ಜನಾ ಭುವಿ ।**
**ಪ್ರಸಾದಂ ಕುರು ಮೇ ಬ್ರಹ್ಮನ್ನಸ್ತ್ರಲುಬ್ಧಸ್ಯ ಭಾರ್ಗವ ॥೨೭॥**

"ಬ್ರಾಹ್ಮಣೋತ್ತಮ! ನನ್ನನ್ನು ಬ್ರಾಹ್ಮಣ-ಕ್ಷತ್ರಿಯಜಾತಿಗಳಿಂದ ಭಿನ್ನವಾದ ಸೂತಜಾತಿಯಲ್ಲಿ ಹುಟ್ಟಿದವನೆಂದು ತಿಳಿ. 'ರಾಧೇಯ' 'ಕರ್ಣ' ಈ ಹೆಸರುಗಳಿಂದ ಪ್ರಪಂಚದ ಜನರು ನನ್ನನ್ನು ಕರೆಯುತ್ತಾರೆ. ನಾನು ಅಸ್ತ್ರವನ್ನು ಪಡೆಯುವ ಲೋಭದಿಂದಾಗಿ ನಿನ್ನಲ್ಲಿಗೆ ಈ ಬ್ರಾಹ್ಮಣವೇಷವನ್ನು ಧರಿಸಿ ಬಂದಿರುತ್ತೇನೆ. ದಯಮಾಡಿ ನನ್ನ ವಿಷಯದಲ್ಲಿ ಕೃಪೆದೋರು.

**ಪಿತಾ ಗುರುರ್ನ ಸಂದೇಹೋ ವೇದವಿದ್ಯಾಪ್ರದಃ ಪ್ರಭುಃ ।**
**ಅತೋ ಭಾರ್ಗವ ಇತ್ಯುಕ್ತಂ ಮಯಾ ಗೋತ್ರಂ ತವಾನ್ತಿಕೇ ॥೨೮॥**

ವೇದವಿದ್ಯಾಪ್ರದನಾದ ಗುರುವೇ ತಂದೆಯೆಂಬುದರಲ್ಲಿ ನನಗೆ ಸಂದೇಹವೇ ಇಲ್ಲ. ಆದುದರಿಂದಲೇ ನಾನು (ನಿನ್ನನ್ನೇ ನನ್ನ ತಂದೆಯೆಂದು ಭಾವಿಸಿಕೊಂಡು) ನಿನ್ನ ಬಳಿಯಲ್ಲಿ ಭಾರ್ಗವಗೋತ್ರಜನೆಂದು ಹೇಳಿ ಕೊಂಡೆನು."

ಧರ್ಮಜ! ಆ ಸಮಯದಲ್ಲಿ ಕರ್ಣನು ಬದ್ಧಾಂಜಲಿಯಾಗಿ ದೀರ್ಘ ದಂಡದಂತೆ ನಮಸ್ಕಾರಮಾಡುತ್ತಾ ನೆಲದ ಮೇಲೆ ಬಿದ್ದಿದ್ದನು. ಅವನ ಶರೀರವು ನಡುಗುತ್ತಿದ್ದಿತು. ಕೋಪಾಭಿಭೂತನಾಗಿದ್ದ ಪರಶುರಾಮನು ಅಂತಹ ಅವಸ್ಥೆಯಲ್ಲಿದ್ದ ಕರ್ಣನನ್ನು ಸುಟ್ಟುಬಿಡುವನೋ ಎಂಬಂತೆ ಈ ಮಾತುಗಳನ್ನಾಡಿದನು :

**ಯಸ್ಮಾನ್ಮಿಥ್ಯೋಪಚರಿತೋ ಹ್ಯಸ್ತ್ರಲೋಭಾದಿಹ ತ್ವಯಾ ।**
**ತಸ್ಮಾದೇತದ್ಧಿ ತೇ ಮೂಢ ಬ್ರಹ್ಮಾಸ್ತ್ರಂ ಪ್ರತಿಭಾಸ್ಯತಿ ।**
**ಅನ್ಯತ್ರ ವಧಕಾಲಾತ್ತೇ ಸದೃಶೇನ ಸಮೀಯುಷಃ ॥೩೦॥**

"ಮೂಢನೇ! ನೀನು ಬ್ರಹ್ಮಾಸ್ತ್ರದ ಲೋಭದಿಂದ ನನ್ನೊಡನೆ ಮಿಥ್ಯಾ ವ್ಯವಹಾರವನ್ನು ನಡೆಸಿರುವೆ. ಈ ಕಾರಣದಿಂದ ನಿನ್ನ ಮೃತ್ಯುಕಾಲವು ಸನ್ನಿಹಿತವಾಗದಿದ್ದಾಗ ಮತ್ತು ನಿನಗೆ ಸಮಾನರೊಡನೆ ನೀನು ಯುದ್ಧದಲ್ಲಿ ತೊಡಗದಿದ್ದಾಗ ಮಾತ್ರವೇ ಈ ಬ್ರಹ್ಮಾಸ್ತ್ರವು ನಿನ್ನಲ್ಲಿ ಸ್ಫುರಿಸುತ್ತಿರುತ್ತದೆ.

(ನಿನಗೆ ಸಮಾನರಾದವರೊಡನೆ ಯುದ್ಧಮಾಡುವಾಗಲೂ–ನಿನ್ನ ವಧೆಯಾಗುವ ಸಮಯದಲ್ಲಿಯೂ ಈ ಬ್ರಹ್ಮಾಸ್ತ್ರವು ನಿನ್ನ ಸ್ಮೃತಿಪಥ ದಲ್ಲಿರುವುದಿಲ್ಲ.)

**ಅಬ್ರಾಹ್ಮಣೇ ನ ಹಿ ಬ್ರಹ್ಮ ಧ್ರುವಂ ತಿಷ್ಠೇತ್ಕದಾಚನ ।**
**ಗಚ್ಛೇದಾನೀಂ ನ ತೇ ಸ್ಥಾನಮನೃತಸ್ಯೇಹ ವಿದ್ಯತೇ ।**
**ನ ತ್ವಯಾ ಸದೃಶೋ ಯುದ್ಧೇ ಭವಿತಾ ಕ್ಷತ್ರಿಯೋ ಭುವಿ ॥೩೨॥**

ಬ್ರಾಹ್ಮಣನಲ್ಲದವನಲ್ಲಿ ಬ್ರಹ್ಮಾಸ್ತ್ರವು ಯಾವುದೇ ಕಾರಣದಿಂದಲೂ ಸ್ಥಿರವಾಗಿ ಉಳಿಯುವುದಿಲ್ಲ. ನೀನೀಗಲೇ ಇಲ್ಲಿಂದ ಹೊರಟುಬಿಡು. ಅನೃತ ವಾದಿಯಾದ ನಿನಗೆ ಇಲ್ಲಿ ಖಂಡಿತವಾಗಿಯೂ ಸ್ಥಾನವಿಲ್ಲ. ಆದರೆ ನಿನ್ನ ಅಂತೇವಾಸಿತ್ವವೂ ಸಂಪೂರ್ಣವಾಗಿ ನಿರರ್ಥಕವಾಗುವುದಿಲ್ಲ. ಯುದ್ಧದಲ್ಲಿ ನಿನಗೆ ಸಮಾನನಾಗಿ ಯುದ್ಧಮಾಡುವ ಕ್ಷತ್ರಿಯನು ಪ್ರಪಂಚದಲ್ಲಿಯೇ ಹುಟ್ಟುವುದಿಲ್ಲ."

ಯುಧಿಷ್ಠಿರ! ಪರಶುರಾಮನು ಹೀಗೆ ಹೇಳಿದ ನಂತರ ಕರ್ಣನು ನ್ಯಾಯೋಚಿತವಾದ ರೀತಿಯಲ್ಲಿ ಪರಶುರಾಮನನ್ನು ಸತ್ಕರಿಸಿ ಅಲ್ಲಿಂದ ಹೊರಟುಬಿಟ್ಟನು. ಹಸ್ತಿನಾಪಟ್ಟಣಕ್ಕೆ ಬಂದು ದುರ್ಯೋಧನನೊಡನೆ '**ಕೃತಾಸ್ತ್ರೋಽ**ಸ್ಮಿ–ನಾನು ಅಸ್ತ್ರವಿದ್ಯಾಪಾರಂಗತನಾಗಿದ್ದೇನೆ'–ಎಂದೂ ಹೇಳಿ ದನು."

ಇನೆಯ ಅಧ್ಯಾಯವು ಮುಗಿಯಿತು.

೪ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ದುರ್ಯೋಧನನು ಕರ್ಣನ ಸಹಾಯದಿಂದ ಸ್ವಯಂವರಕ್ಕೆ ಬಂದಿದ್ದ ರಾಜರೆಲ್ಲರನ್ನೂ ಪರಾಜಯಗೊಳಿಸಿ ಕಲಿಂಗರಾಜನ ಕನ್ಯೆಯನ್ನು ಅಪಹರಿಸಿದುದು

ನಾರದರು ಕರ್ಣನ ಕಥೆಯನ್ನು ಮುಂದುವರಿಸುತ್ತಾರೆ :

"ಭರತರ್ಷಭನೇ! ಹೀಗೆ ಕರ್ಣನು ಭಾರ್ಗವನ (ಜಮದಗ್ನಿಯ) ಮಗನಾದ ಪರಶುರಾಮನಿಂದ ಬ್ರಹ್ಮಾಸ್ತ್ರವನ್ನು ಪಡೆದುಕೊಂಡು ದುರ್ಯೋ ಧನನೊಡನೆ ಆನಂದದಿಂದ ಕಾಲಕಳೆಯುತ್ತಿದ್ದನು. ಹೀಗೆಯೇ ಇರುತ್ತಿರ

ಲಾಗಿ ಒಮ್ಮೆ ಕಲಿಂಗದೇಶದ ರಾಜನಾದ ಚಿತ್ರಾಂಗದನ ರಾಜಧಾನಿಗೆ ಸ್ವಯಂವರದ ಮಹೋತ್ಸವಕ್ಕಾಗಿ ನಾನಾದೇಶಗಳಿಂದ ರಾಜರು ಬರತೊಡಗಿದರು. ರಾಜಪುರವೆಂಬ ಹೆಸರಿನ ಸುಂದರವಾದ ಪಟ್ಟಣವು ಕಲಿಂಗದೇಶದ ರಾಜಧಾನಿಯಾಗಿದ್ದಿತು. ಆ ಪಟ್ಟಣಕ್ಕೆ ನೂರಾರು ಮಂದಿ ರಾಜರು ರಾಜಕುಮಾರಿಯನ್ನು ವರಿಸುವ ಸಲುವಾಗಿ ಆಗಮಿಸಿದರು. ವಿಶ್ವದ ಎಲ್ಲ ರಾಜರೂ ಸ್ವಯಂವರದ ಸಲುವಾಗಿ ರಾಜಪುರದಲ್ಲಿ ಸೇರಿರುವರೆಂಬುದನ್ನು ತಿಳಿದು ದುರ್ಯೋಧನನೂ ಸುವರ್ಣಮಯವಾದ ರಥದಲ್ಲಿ ಕುಳಿತು ಕರ್ಣನೊಡನೆ ರಾಜಪುರಕ್ಕೆ ಪ್ರಯಾಣಮಾಡಿದನು. ರಾಜಪುರದಲ್ಲಿ ಸ್ವಯಂವರ ಸಂಬಂಧವಾದ ಮಹೋತ್ಸವವು ಪ್ರಾರಂಭವಾಗಲಾಗಿ, ಕನ್ಯಾರ್ಥವಾಗಿ ವಿಶ್ವದ ಎಲ್ಲ ರಾಜರೂ ಅಲ್ಲಿಗೆ ಆಗಮಿಸಿದರು. ಶಿಶುಪಾಲ, ಜರಾಸಂಧ, ಭೀಷ್ಮಕ, ವಕ್ರ, ಕಪೋತರೋಮಾ, ನೀಲ, ಸುದೃಢಪರಾಕ್ರಮನಾದ ರುಕ್ಮೀ, ಸ್ತ್ರೀರಾಜ್ಯಾಧಿಪತಿಯಾದ ಮಹಾರಾಜನಾದ ಶೃಗಾಲ, ಅಶೋಕ, ಶತಧನ್ವಾ, ಭೋಜ, ವೀರ–ಇವರೇ ಮೊದಲಾದ ರಾಜರೆಲ್ಲರೂ ಸ್ವಯಂವರಕ್ಕೆ ಹೋಗಿದ್ದರು. ಅವರೇ ಅಲ್ಲದೇ ಇನ್ನೂ ದಕ್ಷಿಣದೇಶದ ಅನೇಕರಾಜರೂ, ಮ್ಲೇಚ್ಛರೂ, ಆರ್ಯರೂ, ಪೂರ್ವೋತ್ತರದಿಕ್ಕುಗಳಲ್ಲಿದ್ದ ರಾಜರೂ ಸ್ವಯಂವರಸಮಾರಂಭಕ್ಕಾಗಿ ರಾಜಪುರದಲ್ಲಿ ಸೇರಿದ್ದರು. ರಾಜರೆಲ್ಲರೂ ಸುವರ್ಣಮಯವಾದ ಅಂಗದಗಳನ್ನು ಧರಿಸಿಕೊಂಡಿದ್ದರು. ಅವರ ಶರೀರದ ಕಾಂತಿಯು ಶುದ್ಧವಾದ ಸುವರ್ಣದ ಕಾಂತಿಗೆ ಸಮಾನವಾಗಿದ್ದಿತು. ಎಲ್ಲರೂ ತೇಜೋಮಯವಾದ ಶರೀರವುಳ್ಳವರಾಗಿದ್ದರು. ವ್ಯಾಘ್ರಗಳಂತೆ ಬಲದಿಂದ ದರ್ಪಿಷ್ಠರಾಗಿದ್ದರು.

ಸ್ವಯಂವರದ ಸಭಾಂಗಣದಲ್ಲಿ ಆ ರಾಜರೆಲ್ಲರೂ ಠೀವಿಯಿಂದ ಕುಳಿತಿರಲು, ರಾಜಕುಮಾರಿಯು ಅನೇಕ ಸೇವಕಿಯರಿಂದ ಸಮಾವೃತಳಾಗಿ ರಂಗಭೂಮಿಯನ್ನು ಪ್ರವೇಶಿಸಿದಳು. ರಾಜಕನ್ಯೆಯು ಸ್ವಯಂವರಮಾಲೆಯನ್ನು ಹಿಡಿದು ಹೋಗುತ್ತಿದ್ದಾಗ–ರಾಜಭಟರು ಅವಳ ಸಮೀಪಸ್ಥನಾದ ರಾಜನ ಹೆಸರು, ಕುಲ-ಗೋತ್ರಗಳನ್ನು ಹೇಳುತ್ತಿದ್ದರು. ರಾಜಪುತ್ರಿಯು ಆಲಿಸಿ ಕೇಳುತ್ತಿದ್ದು ಸ್ವಯಂವರಮಾಲೆಯನ್ನು ಅವನಿಗೆ ಹಾಕಲು ಇಷ್ಟಪಡದೇ ಮುಂದುವರಿಯುತ್ತಿದ್ದಳು. ವರವರ್ಣಿನಿಯಾದ ಆ ರಾಜಕುಮಾರಿಯು ಹೀಗೆಯೇ ದುರ್ಯೋಧನನನ್ನೂ ಅತಿಕ್ರಮಿಸಿ ಮುಂದೆ ಅಡಿಯಿಟ್ಟಳು.

(ದುರ್ಯೋಧನನಿಗೂ ಸ್ವಯಂವರಮಾಲೆಯನ್ನು ಹಾಕಲು ಇಷ್ಟಪಡಲಿಲ್ಲ.) ತನ್ನನ್ನೂ ಅತಿಕ್ರಮಿಸಿ ಮುಂದೆ ಹೆಜ್ಜೆಯಿಟ್ಟುದನ್ನು ದುರ್ಯೋಧನನು ಸಹಿಸಿಕೊಳ್ಳಲಿಲ್ಲ. ಅಲ್ಲಿದ್ದ ಸಮಸ್ತರಾಜರನ್ನೂ ಕಡೆಗಣಿಸಿ ದುರ್ಯೋಧನನು ಮೇಲೆದ್ದು ಮುಂದೆ ಅಡಿಯಿಟ್ಟು ರಾಜಕುಮಾರಿಯು ಮುನ್ನಡೆಯದಂತೆ ತಡೆದು ನಿಲ್ಲಿಸಿದನು. ಭೀಷ್ಮ-ದ್ರೋಣರ ಆಶ್ರಯವನ್ನು ಪಡೆದಿದ್ದ ದುರ್ಯೋಧನನು ವೀರ್ಯಮದದಿಂದ ಮತ್ತನಾಗಿದ್ದುದರಿಂದ ರಾಜಕನ್ಯೆಯನ್ನು ತಡೆದುದು ಮಾತ್ರವಲ್ಲದೇ–ಅವಳನ್ನೆತ್ತಿಕೊಂಡು ಹೋಗಿ ರಥದಲ್ಲಿ ಕುಳ್ಳಿರಿಸಿಕೊಂಡು ಅವಳನ್ನು ಅಪಹರಿಸಿಯೂ ಬಿಟ್ಟನು. ಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ, ರಥದಲ್ಲಿ ಕುಳಿತಿದ್ದ, ಖಡ್ಗವನ್ನೂ, ಕೈಚೀಲಗಳನ್ನೂ ಧರಿಸಿದ್ದ ಕರ್ಣನು ದುರ್ಯೋಧನನ ರಥದ ಹಿಂದೆಯೇ ಹೋದನು. ದುರ್ಯೋ ಧನನ ದೌಷ್ಟ್ಯವನ್ನು ಕಂಡು ಕುಪಿತರಾಗಿ ಅವನೊಡನೆ ಯುದ್ಧಮಾಡಲಿಚ್ಛಿಸಿದ ಅನೇಕರಾಜರು ಕವಚಗಳನ್ನು ಧರಿಸಿಕೊಂಡರು. ಕೆಲವರು ರಥಗಳನ್ನು ಸಜ್ಜುಗೊಳಿಸಿದರು. ಬಳಿಕ ರಾಜರಿಗೂ, ದುರ್ಯೋಧನ-ಕರ್ಣರಿಗೂ ನಡುವೆ ಭಯಂಕರವಾದ ಯುದ್ಧವೇ ಪ್ರಾರಂಭವಾಯಿತು. ಎರಡು ಪರ್ವತಗಳ ಮೇಲೆ ದಟ್ಟವಾದ ಮೇಘಗಳು ಮಳೆಗರೆಯುವಂತೆ–ಪರಮಕ್ರುದ್ಧರಾಗಿದ್ದ ಆ ರಾಜರು ಬಾಣಗಳ ಮಳೆಗರೆಯುತ್ತಾ ದುರ್ಯೋಧನ-ಕರ್ಣರನ್ನು ಆಕ್ರಮಿಸಿದರು. ಕರ್ಣನು ತಮ್ಮ ಮೇಲೆ ಬೀಳಲು ಬರುತ್ತಿದ್ದ ರಾಜರ ಧನುಸ್ಸುಗಳನ್ನೂ ಮತ್ತು ಬಾಣಗಳ ಸಮೂಹವನ್ನೂ ಒಂದೊಂದೇ ಬಾಣದಿಂದ ಕತ್ತರಿಸಿ ನೆಲದ ಮೇಲೆ ಕೆಡಹುತ್ತಿದ್ದನು. ಪ್ರಹಾರಿಗಳಲ್ಲಿ ಶ್ರೇಷ್ಠನಾದ ಕರ್ಣನು ಶೀಘ್ರಾತಿಶೀಘ್ರವಾಗಿ ಬಾಣಗಳನ್ನು ಸುರಿಸುತ್ತಾ ಆ ರಾಜರೆಲ್ಲರನ್ನೂ ವ್ಯಾಕುಲಗೊಳಿಸಿದನು. ಆ ರಾಜರಲ್ಲಿ ಕೆಲವರನ್ನು ಧನುಸ್ಸಿನಿಂದ ಹೀನರನ್ನಾಗಿ ಮಾಡಿದನು. ಕೆಲವರು ಬಾಣಗಳೆಲ್ಲವನ್ನೂ ಕಳೆದುಕೊಂಡು ಧನುಸ್ಸನ್ನೇ ಮೇಲೆತ್ತಿಕೊಂಡು ನಿಂತಿದ್ದರು. ಕೆಲವರು ಧನುಸ್ಸನ್ನೇ ಕಳೆದುಕೊಂಡು ಬಾಣಗಳನ್ನೇ ಮೇಲೆತ್ತಿಕೊಂಡು ನಿಂತಿದ್ದರು. ಕೆಲವರು ಧನುರ್ಬಾಣಗಳನ್ನೂ, ರಥಶಕ್ತಿಗಳನ್ನೂ ಮತ್ತು ಗದೆಗಳನ್ನೂ ಹಿಡಿದು ನಿಂತಿದ್ದರು. ಅನೇಕರಾಜರ ಸಾರಥಿಗಳು ಕರ್ಣನ ಬಾಣಕ್ಕೆ ಲಕ್ಷ್ಯರಾಗಿ ಅಸುನೀಗಿದ್ದರು. ಹೀಗೆ ಕರ್ಣನು ತಮ್ಮನ್ನು ಆಕ್ರಮಿಸಿದ ರಾಜ

ರೆಲ್ಲರನ್ನೂ ಬಹಳ ಬೇಗನೆ ಪರಾಜಯಗೊಳಿಸಿದನು. ಪರಾಜಿತರಾದ ಮತ್ತು ಭಗ್ನಮನೋರಥರಾದ ಭೂಪಾಲರೆಲ್ಲರೂ ಸಾರಥಿಗಳನ್ನೂ ಕಳೆದುಕೊಂಡು ತಾವೇ ಕುದುರೆಗಳನ್ನು ನಿಯಂತ್ರಿಸುತ್ತಾ–'ರಕ್ಷಿಸು-ರಕ್ಷಿಸು! ಬಾಣ ಪ್ರಯೋಗಮಾಡಬೇಡ'–ಎಂದು ಅಂಗಲಾಚಿ ಬೇಡಿಕೊಳ್ಳುತ್ತಾ ಯುದ್ಧವನ್ನು ನಿಲ್ಲಿಸಿ ಪಲಾಯನಮಾಡಿದರು. ಹೀಗೆ ದುರ್ಯೋಧನನು ಕರ್ಣನಿಂದ ರಕ್ಷಿಸಲ್ಪಡುತ್ತಾ ಪರಮಹೃಷ್ಟನಾಗಿ ಕನ್ಯೆಯನ್ನು ಕರೆದುಕೊಂಡು ಹಸ್ತಿನಾಪಟ್ಟಣಕ್ಕೆ ಪ್ರಯಾಣಮಾಡಿದನು."

೪ನೆಯ ಅಧ್ಯಾಯವು ಮುಗಿಯಿತು.

೫ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಕರ್ಣನ ಬಲ ಮತ್ತು ಪರಾಕ್ರಮಗಳ ವರ್ಣನೆ : ಕರ್ಣನು ಜರಾಸಂಧನನ್ನು ಪರಾಜಯಗೊಳಿಸಿದುದು : ಜರಾಸಂಧನು ಕರ್ಣನಿಗೆ ಅಂಗದೇಶದ ಮಾಲಿನೀನಗರವನ್ನು ಕಾಣಿಕೆಯ ರೂಪದಲ್ಲಿ ಒಪ್ಪಿಸಿದುದು

ನಾರದರು ಕರ್ಣನ ಪರಾಕ್ರಮದ ವರ್ಣನೆಯನ್ನು ಮುಂದುವರಿಸುತ್ತಾರೆ :

"ಮಹಾರಾಜ! ಸರ್ವತ್ರ ಖ್ಯಾತವಾಗುತ್ತಿದ್ದ ಕರ್ಣನ ಬಲವನ್ನು ಕೇಳಿ ಮಗಧದೇಶದ ಮಹೀಪತಿಯಾದ ಜರಾಸಂಧನು ಕರ್ಣನನ್ನು ದ್ವೈರಥ ಯುದ್ಧಕ್ಕೆ ಆಹ್ವಾನಿಸಿದನು. ದಿವ್ಯಾಸ್ತ್ರಗಳನ್ನು ತಿಳಿದಿದ್ದ ಕರ್ಣ-ಜರಾಸಂಧರ ನಡುವ ಘೋರವಾದ ಯುದ್ಧವು ಪ್ರಾರಂಭವಾಯಿತು. ಯುದ್ಧದಲ್ಲಿ ನಾನಾ ವಿಧವಾದ ಆಯುಧಗಳ ಮೂಲಕವಾಗಿ ಒಬ್ಬರು ಮತ್ತೊಬ್ಬರ ಮೇಲೆ ಆಯುಧಗಳ ಮಳೆಯನ್ನೇ ಸುರಿಸುತ್ತಿದ್ದಾಗ–ಸ್ವಲ್ಪಕಾಲ ಕಳೆದನಂತರ ಅವರಿಬ್ಬರೂ ಕ್ಷೀಣಬಾಣರಾದರು. ಅವರ ಬತ್ತಳಿಕೆಗಳಲ್ಲಿ ಬಾಣಗಳು ಬರಿದಾದುವು. ಧನುಸ್ಸುಗಳಿಂದಲೂ ಹೀನರಾದರು. ಯುದ್ಧದ ಸಲುವಾಗಿ ತೆಗೆದುಕೊಂಡುಹೋಗಿದ್ದ ಧನುಸ್ಸುಗಳೆಲ್ಲವೂ ಕತ್ತರಿಸಲ್ಪಟ್ಟುವು. ಇಬ್ಬರ ಕತ್ತಿಗಳೂ ಮತ್ತು ಗುರಾಣಿಗಳೂ ತುಂಡುಗಳಾಗಿ ಕೆಳಕ್ಕೆ ಬಿದ್ದು ಖಡ್ಗ ಯುದ್ಧವೂ ಮುಗಿಯಿತು. ಅನಂತರ ಮಹಾಬಲಿಷ್ಠರಾಗಿದ್ದ ಕರ್ಣ-ಜರಾ

ಸಂಧರು ತೋಳುಗಳಿಂದಲೇ ಮಲ್ಲಯುದ್ಧಮಾಡಲು ಸಜ್ಜಾಗಿ ನಿಂತರು. ಮಲ್ಲಯುದ್ಧವು ಪ್ರಾರಂಭವಾದನಂತರ ಕರ್ಣನು, ಜರಾ ಎಂಬ ರಾಕ್ಷಸಿಯಿಂದ ಜೋಡಿಸಲ್ಪಟ್ಟ ಶರೀರದಿಂದ ಕೂಡಿದ್ದ, ತನ್ನೊಡನೆ ಯುದ್ಧಮಾಡುತ್ತಿದ್ದ ಜರಾಸಂಧನ ಸಂಧಿಬಂಧವನ್ನು *ಬಾಹುಕಂಟಕವೆಂಬ ಯುದ್ಧದ ಮೂಲಕ ಭೇದಿಸಲು ಉಪಕ್ರಮಿಸಿದನು.

ಆ ಸಮಯದಲ್ಲಿ ಜರಾಸಂಧರಾಜನು ತನ್ನ ಶರೀರದ ವಿಕಾರವನ್ನು ನೋಡಿಕೊಂಡವನಾಗಿ ಕರ್ಣನ ವಿಷಯದಲ್ಲಿದ್ದ ವೈರಭಾವವನ್ನು ಸಂಪೂರ್ಣವಾಗಿ ತೊರೆದು, ಕರ್ಣನನ್ನು ಕುರಿತು– 'ನಾನು ನಿನ್ನ ವಿಷಯದಲ್ಲಿ ಸುಪ್ರೀತನಾಗಿದ್ದೇನೆ'–ಎಂದು ಹೇಳಿದನು. ಒಡನೆಯೇ ಮಲ್ಲಯುದ್ಧವು ನಿಂತಿತು. ಪ್ರೀತಿಯ ಕುರುಹಾಗಿ ಜರಾಸಂಧನು ಕರ್ಣನಿಗೆ ಅಂಗದೇಶದಲ್ಲಿದ್ದ ಮಾಲಿನೀ ಎಂಬ ನಗರವನ್ನು ಬಳುವಳಿಯನ್ನಾಗಿ ಕೊಟ್ಟನು. ಶತ್ರುಂಜಯನಾದ ಕರ್ಣನು ಅಲ್ಲಿಗೆ ರಾಜನಾದನು. ಶತ್ರುಬಲಮರ್ದನನಾದ ಕರ್ಣನು ದುರ್ಯೋಧನನ ಅನುಮತಿಯಿಂದ ಚಂಪಾ ಎಂಬ ಪಟ್ಟಣವನ್ನೂ ಪರಿಪಾಲಿಸುತ್ತಿದ್ದನು.

ಯುಧಿಷ್ಠಿರ! ಈ ಎಲ್ಲ ವಿಷಯಗಳೂ ನಿನಗೆ ತಿಳಿದೇ ಇವೆಯಲ್ಲವೇ? ಹೀಗೆ ಕರ್ಣನು ಶಸ್ತ್ರಾಸ್ತ್ರಗಳ ಪ್ರತಾಪದಿಂದ ಅಜಯ್ಯನೆಂಬ ಖ್ಯಾತಿಯನ್ನು ಗಳಿಸಿದನು. ನಿನ್ನ ಹಿತಾರ್ಥವಾಗಿಯೇ ದೇವೇಂದ್ರನು ಕರ್ಣನಿಂದ ಕವಚ-ಕುಂಡಲಗಳನ್ನು ಭಿಕ್ಷೆಯ ಮೂಲಕ ಅಪಹರಿಸಿದನು. ದೇವಮಾಯೆಯಿಂದ ವಿಮೋಹಿತನಾದ ಕರ್ಣನು ಹುಟ್ಟಿನಿಂದಲೇ ಇದ್ದ ದಿವ್ಯವಾದ ಕುಂಡಲಗಳನ್ನೂ ಮತ್ತು ಹುಟ್ಟಿನಿಂದಲೇ ಶರೀರಕ್ಕೆ ಅಂಟಿಕೊಂಡು ಬಂದಿದ್ದ ದಿವ್ಯಕವಚವನ್ನೂ ಬ್ರಾಹ್ಮಣರೂಪವನ್ನು ಧರಿಸಿ ಬಂದು ಭಿಕ್ಷೆ

---

* **ಬಾಹುಕಣ್ಟಕಯುದ್ಧೇನ** = ಬಾಹುಕಂಟಕಯುದ್ಧದಿಂದ : ಬಾಹುಕಂಟಕಯುದ್ಧದ ಲಕ್ಷಣವನ್ನು ಹೀಗೆ ಹೇಳಿದ್ದಾರೆ : ಏಕಾಂ ಜಙ್ಘಾಂ ಪದಾಕ್ರಮ್ಯ ಪರಾಮುದ್ಯಮ್ಯ ಪಾಟ್ಯತೇ। **ಕೇತಕೀಪತ್ರವಚ್ಛತ್ರೋರ್ಯುದ್ಧಂ ತದ್ಬಾಹುಕಣ್ಟಕಮ್ ॥** ಕೇದಗೆಯ ಹೂವನ್ನು (ತಾಳೇಹೂವಿನ ಗರಿಯನ್ನು ) ಎರಡಾಗಿ ಸೀಳುವಂತೆ ಶತ್ರುವಿನ ಒಂದು ಮೊಣಕಾಲನ್ನು ಮೆಟ್ಟಿಕೊಂಡು ಮತ್ತೊಂದು ಮೊಣಕಾಲನ್ನು ಮೇಲಕ್ಕೆತ್ತಿ ಸೀಳುವುದಕ್ಕೆ ಬಾಹುಕಂಟಕಯುದ್ಧವೆಂದು ಹೆಸರು.

ಬೇಡಿದ ಇಂದ್ರನಿಗೆ ಕೊಟ್ಟುಬಿಟ್ಟನು. ಹುಟ್ಟಿನಿಂದಲೇ ಇದ್ದ ಕುಂಡಲಗಳಿಂದಲೂ ಮತ್ತು ಕವಚದಿಂದಲೂ ವಿಮುಕ್ತನಾದ ಕರ್ಣನು ವಾಸುದೇವನ ಸಮಕ್ಷದಲ್ಲಿಯೇ ಅರ್ಜುನನಿಂದ ಯುದ್ಧದಲ್ಲಿ ಕೊಲ್ಲಲ್ಪಟ್ಟನು.

**ಬ್ರಾಹ್ಮಣಸ್ಯಾಭಿಶಾಪೇನ ರಾಮಸ್ಯ ಚ ಮಹಾತ್ಮನಃ ।**
**ಕುನ್ತ್ಯಾಶ್ಚ ವರದಾನೇನ ಮಾಯಯಾ ಚ ಶತಕ್ರತೋಃ ॥೧೧॥**
**ಭೀಷ್ಮಾವಮಾನಾತ್ಸಂಖ್ಯಾಯಾಂ ರಥಸ್ಯಾರ್ಧಾನುಕೀರ್ತನಾತ್ ।**
**ಶಲ್ಯಾತ್ತೇಜೋವಧಾಚ್ಚಾಪಿ ವಾಸುದೇವನಯೇನ ಚ ॥೧೨॥**

ಯುಧಿಷ್ಠಿರ! ಮಹಾಪರಾಕ್ರಮಿಯಾದ ಕರ್ಣನ ಸಾವಿಗೆ ಹಲವಾರು ಕಾರಣಗಳು ಸೇರಿಕೊಂಡುವು. ನಾನು ಈ ಹಿಂದೆ ಹೇಳಿದಂತೆ ಬ್ರಾಹ್ಮಣನ ಶಾಪ ; ಮಹಾತ್ಮನಾದ ಪರಶುರಾಮನ ಶಾಪ ; ಕುಂತಿಗೆ ವರದಾನಮಾಡಿದುದು ; ಇಂದ್ರನ ಮಾಯೆ, (ಕರ್ಣನನ್ನು ವಿಮೋಹಗೊಳಿಸಿ ಅವನಿಂದ ಕುಂಡಲಗಳನ್ನೂ ಕವಚವನ್ನೂ ಇಂದ್ರನು ಅಪಹರಿಸಿದುದು) ; ರಥಾತಿರಥರ ಗಣನೆಯ ಕಾಲದಲ್ಲಿ ಕರ್ಣನನ್ನು ಅರ್ಧರಥನೆಂದು ಹೇಳಿ ಭೀಷ್ಮನು ಕರ್ಣನನ್ನು ಅವಮಾನಗೊಳಿಸಿದುದು ; ವೀರ್ಯೋತ್ಸಾಹದಿಂದ ಯುದ್ಧಮಾಡಲು ಹೊರಟ ಸಮಯದಲ್ಲಿ ಶಲ್ಯನಿಂದಾದ ತೇಜೋವಧೆ ; ಇವುಗಳೆಲ್ಲದರ ಜೊತೆಗೆ ವಾಸುದೇವನ ಯುದ್ಧನೀತಿ–ಇವುಗಳು ಕರ್ಣನ ಅವಸಾನಕ್ಕೆ ಕಾರಣಗಳು. ಆದರೆ ಕರ್ಣನು ಸಾಮಾನ್ಯರಿಂದ ಹತನಾಗಲಿಲ್ಲ. ಅವನ ವಧೆಗಾಗಿ ಅರ್ಜುನನು ಅನೇಕ ಮಹಾಸ್ತ್ರಗಳನ್ನೇ ಸಂಗ್ರಹಿಸಬೇಕಾಯಿತು.

ಅರ್ಜುನನು ರುದ್ರ, ಇಂದ್ರ, ಯಮ, ವರುಣ, ಕುಬೇರ, ದ್ರೋಣರು, ಮಹಾತ್ಮರಾದ ಕೃಪರು ಇವರಲ್ಲಿದ್ದ ದಿವ್ಯಾಸ್ತ್ರಗಳನ್ನು ಪಡೆದುಕೊಂಡು ಸೂರ್ಯಸಮಾನವರ್ಚಸ್ವಿಯಾದ ವೈಕರ್ತನಕರ್ಣನನ್ನು ಸಂಹರಿಸಿದನು. ಧರ್ಮಜ! ಹೀಗೆ ನಿನ್ನ ಅಣ್ಣನು ಬ್ರಾಹ್ಮಣನಿಂದಲೂ ಮತ್ತು ಪರಶುರಾಮನಿಂದಲೂ ಶಾಪವನ್ನು ಪಡೆದುಕೊಂಡನು. ಅನೇಕರು ಅವನನ್ನು ವಂಚಿಸಿದರು. ಆದರೂ ಅವನು ಯುದ್ಧದಲ್ಲಿ ಆಯುಧದ ಮೂಲಕವಾಗಿ ನಿಧನ ಹೊಂದಿರುತ್ತಾನೆ. (ಪುಣ್ಯಲೋಕಗಳನ್ನು ಪಡೆದುಕೊಂಡಿರುತ್ತಾನೆ.) ಆದುದರಿಂದ ನೀನು ಅವನ ನಿಧನಕ್ಕಾಗಿ ದುಃಖಿಸುವುದು ಸರಿಯಲ್ಲ.”

೫ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನ ಚಿಂತೆ : ಕುಂತಿಯ ಆಶ್ವಾಸನೆ : ಸ್ತ್ರೀಯರಿಗೆ ಯುಧಿಷ್ಠಿರನ ಶಾಪ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ದೇವರ್ಷಿಗಳಾದ ನಾರದರು ಯುಧಿಷ್ಠಿರನಿಗೆ ಇಷ್ಟು ಹೇಳಿ ವಿರಮಿಸಿದರು. ರಾಜರ್ಷಿಯಾದ ಯುಧಿಷ್ಠಿರನು ಶೋಕಾಭಿಭೂತನಾಗಿ ಭ್ರಾತೃವಧದೋಷವನ್ನೇ ಚಿಂತಿಸುತ್ತಿದ್ದನು. ಆ ಸಮಯದಲ್ಲಿ ಧರ್ಮರಾಜನು ದೀನಮನಸ್ಕನಾಗಿದ್ದನು. ಶೋಕದಿಂದ ಪರಿತಪಿಸುತ್ತಿದ್ದನು. ಬಹಳವಾಗಿ ಸಂಕಟಪಡುತ್ತಿದ್ದನು. ಸರ್ಪದಂತೆ ಬಾರಿ ಬಾರಿಗೂ ನಿಟ್ಟುಸಿರು ಬಿಡುತ್ತಿದ್ದನು. ಕಣ್ಣುಗಳಿಂದ ಅಶ್ರುಬಿಂದುಗಳು ಉದುರುತ್ತಿದ್ದುವು. ವೀರನಾದ ಯುಧಿಷ್ಠಿರನು ಇಂತಹ ದುಃಖಪೂರ್ಣಾವಸ್ಥೆಯಲ್ಲಿದ್ದಾಗ ಅವನಂತೆಯೇ ಕಲುಷಿತವಾದ ಮನಸ್ಸಿನಿಂದ ಕೂಡಿದ್ದ ಶೋಕತಪ್ತಳಾಗಿದ್ದ ಕುಂತೀದೇವಿಯು ಸಮಯೋಚಿತವಾದ ಮತ್ತು ಅರ್ಥವತ್ತಾದ ಈ ಮಾತುಗಳನ್ನು ಹೇಳಿದಳು :

"ಯುಧಿಷ್ಠಿರ! ಮಹಾಬಾಹುವೇ! ಮಹಾಪ್ರಾಜ್ಞನೇ! ನೀನು ಕರ್ಣನ ಸಲುವಾಗಿ ವ್ಯಥೆಪಡುವ ಕಾರಣವಿಲ್ಲ. ನಿನ್ನ ಈ ದುಃಖವನ್ನು ದೂರಮಾಡು. ನನ್ನ ಮಾತನ್ನು ಕೇಳು. ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ನಾನು ಈ ಮೊದಲೇ ಕರ್ಣನಿಗೆ ಪಾಂಡವರು ನಿನ್ನ ಸಹೋದರರರೆಂಬುದನ್ನು ತಿಳಿಸಲು ಪ್ರಯತ್ನಿಸಿದೆನು. ಅವನ ತಂದೆಯಾದ ದೇವದೇವನಾದ ಸೂರ್ಯದೇವನೂ ಈ ವಿಷಯವನ್ನು ತಿಳಿಸಲು ಪ್ರಯತ್ನಿಸಿದನು. ಹಿತವನ್ನೇ ಮಾಡಲು ಇಚ್ಛೆಯಿರುವ ಹಿತಕಾಮನಾದ ಸುಹೃದನು ಯಾವ ಮಾತನ್ನು ಹೇಳಬೇಕೋ ಅದೇ ಹಿತವಚನವನ್ನೇ ಸೂರ್ಯದೇವನು ಕರ್ಣನಿಗೆ ಸ್ವಪ್ನದಲ್ಲಿಯೂ ಸೂಚಿಸಿದನು. ನನ್ನೆದುರಿನಲ್ಲಿಯೂ ಹೇಳಿದನು. ಆದರೆ ಕರ್ಣನು ದುರ್ಯೋಧನನ ಮೇಲಿಟ್ಟಿದ್ದ ಅಪಾರವಾದ ಸ್ನೇಹದ ಕಾರಣದಿಂದಾಗಿ ಸೂರ್ಯನಾಗಲೀ ನಾನಾಗಲೀ ಕರ್ಣನನ್ನು ನಿನ್ನ ಪಕ್ಷಕ್ಕೆ ಸೇರಿಸಲು ಅಥವಾ ನಿಮ್ಮೊಡನೆಯೇ ಸಂಪೂರ್ಣವಾಗಿ ಕಲೆಯುವಂತೆ ಮಾಡಲು ಸಮರ್ಥರಾಗ

ಲಿಲ್ಲ. ಬಳಿಕ ಕಾಲವಶೀಭೂತನಾದ ಕರ್ಣನು ನಿಮ್ಮೊಡನೆ ವೈರವನ್ನು ಹೆಚ್ಚಿಸುವುದರಲ್ಲಿಯೇ ನಿರತನಾಗಿದ್ದನು. ನಿಮಗೆ ವಿರುದ್ಧವಾದುದನ್ನೇ ಯಾವಾಗಲೂ ಮಾಡುತ್ತಿದ್ದನು. ಈ ಕಾರಣಗಳಿಂದಾಗಿ ನಾನು ಅವನನ್ನು ಉಪೇಕ್ಷಿಸಿಬಿಟ್ಟೆನು."

ಜನಮೇಜಯ! ಕಂಬನಿದುಂಬಿದ ಕಣ್ಣುಗಳಿಂದ ಕೂಡಿದ್ದ ಶೋಕದಿಂದ ವ್ಯಾಕುಲಿತವಾದ ಇಂದ್ರಿಯಗಳಿಂದ ಯುಕ್ತನಾಗಿದ್ದ, ಧರ್ಮಾತ್ಮನಾದ ಯುಧಿಷ್ಠಿರನು ತಾಯಿಯು ಹೇಳಿದ ಮಾತುಗಳನ್ನು ಕೇಳಿ ಪ್ರತ್ಯುತ್ತರಿಸಿದನು :

"ಅಮ್ಮ! ನೀನು ಈ ವಿಷಯವನ್ನು ಬಹಳ ರಹಸ್ಯವಾಗಿಯೇ ಇಟ್ಟುಕೊಂಡಿದ್ದುದರ ಫಲವಾಗಿ ನಾನು ಬಹಳ ಸಂಕಟಪಡುತ್ತಿದ್ದೇನೆ." ಇಷ್ಟು ಹೇಳಿ, ಮಹಾತೇಜಸ್ವಿಯಾಗಿದ್ದ ದುಃಖಪರೀತನಾಗಿದ್ದ ಧರ್ಮಜನು ತಾಯಿಯು ಮಾಡಿದ ಆ ಕೃತ್ಯಕ್ಕಾಗಿ ಸ್ತ್ರೀಯರ ಅಖಂಡಸಮೂಹಕ್ಕೇ ಶಾಪವನ್ನಿತ್ತನು.

**ನ ಗುಹ್ಯಂ ಧಾರಯಿಷ್ಯನ್ತಿ ಸರ್ವಲೋಕೇಷು ಯೋಷಿತಃ ।**

"ಪ್ರಪಂಚದಲ್ಲಿ ಸ್ತ್ರೀಯರು ಇನ್ನು ಮುಂದೆ ರಹಸ್ಯವಿಷಯಗಳನ್ನು ಧಾರಣೆಮಾಡಿಕೊಂಡಿರುವುದಿಲ್ಲ. ಗುಟ್ಟನ್ನು ಗುಟ್ಟಾಗಿಯೇ ಇಟ್ಟುಕೊಳ್ಳುವುದಿಲ್ಲ. ಸ್ವಲ್ಪಸಮಯದಲ್ಲಿಯೇ ರಟ್ಟುಮಾಡಿಬಿಡುತ್ತಾರೆ."

ಮಹಾರಾಜ! ಯುಧಿಷ್ಠಿರರಾಜನು ಆ ಸಮಯದಲ್ಲಿ ಅಸುನೀಗಿದ ತನ್ನ ಪುತ್ರ-ಪೌತ್ರರನ್ನೂ, ಸಂಬಂಧಿಗಳನ್ನೂ, ಸುಹೃದರನ್ನೂ ನೆನೆದು ಉದ್ವಿಗ್ನಹೃದಯನೂ, ಉದ್ವಿಗ್ನಮನಸ್ಕನೂ ಆದನು. ಬಂಧುವರ್ಗವಿಯೋಗದ ಸಂತಾಪದಿಂದ ಅತ್ಯಂತಪೀಡಿತನಾಗಿದ್ದ, ಶೋಕಾವೃತಹೃದಯನಾಗಿದ್ದ, ಧೀಮಂತನಾದ ಯುಧಿಷ್ಠಿರರಾಜನು–ಹೊಗೆಯಿಂದ ಆವೃತವಾದ ಅಗ್ನಿಯಂತೆ ತೇಜೋಹೀನನಾಗಿ ರಾಜ್ಯದ ವಿಷಯದಲ್ಲಿಯೂ ಮತ್ತು ತನ್ನ ಜೀವನದ ವಿಷಯದಲ್ಲಿಯೂ ವಿರಕ್ತಿಯನ್ನು ಹೊಂದಿದನು."

೬ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನು ಅರ್ಜುನನೊಡನೆ ತನ್ನ ಮನಸ್ಸಿನ ಆತಂಕವನ್ನು ಪ್ರಕಟಪಡಿಸುತ್ತಾ ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗುವುದನ್ನು ಪ್ರಸ್ತಾಪಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಧರ್ಮಾತ್ಮನಾದ ಯುಧಿಷ್ಠಿರನು ಮಹಾರಥನಾದ ಕರ್ಣನನ್ನು ಸ್ಮರಿಸಿಕೊಳ್ಳುತ್ತಾ, ಶೋಕದಿಂದ ವ್ಯಾಕುಲಿತವಾದ ಮನಸ್ಸಿನಿಂದ ಕೂಡಿದವನಾಗಿ ದುಃಖದಿಂದ ಪರಿತಪಿಸುತ್ತಾ ಬಹಳವಾಗಿ ಶೋಕಿಸಿದನು. ದುಃಖದಿಂದ ಬಹಳವಾಗಿ ಸಂಕಟಪಡುತ್ತಿದ್ದ ಯುಧಿಷ್ಠಿರನು ದುಃಖ-ಶೋಕಗಳಿಂದ ಪರೀತನಾಗಿ ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಿದ್ದನು. ಆ ಸಮಯದಲ್ಲಿ ಅರ್ಜುನನನ್ನು ನೋಡಿ ಅವನೊಡನೆ ಈ ಮಾತುಗಳನ್ನು ಹೇಳಿದನು :

"ಅರ್ಜುನ! ನಾವೇನಾದರೂ ಮೊದಲೇ ಸರಿಯಾಗಿ ಯೋಚಿಸಿ ವೃಷ್ಣಿ ಮತ್ತು ಅಂಧಕರ ನಗರದಲ್ಲಿ ಭಿಕ್ಷಾವೃತ್ತಿಯಿಂದಲೇ ಜೀವನವನ್ನು ಸಾಗಿಸಲು ನಿಶ್ಚಯಮಾಡಿದ್ದರೆ–ನಮ್ಮ ಜ್ಞಾತಿಗಳೆಲ್ಲರನ್ನೂ ನಿರ್ನಾಮಮಾಡಿ ಇಂದಿನ ಈ ದುರ್ಗತಿಗೆ ಬರುತ್ತಿರಲಿಲ್ಲ.

**ಅಮಿತ್ರಾ ನಃ ಸಮೃದ್ಧಾರ್ಥಾ ವೃತ್ತಾರ್ಥಾಃ ಕುರವಃ ಕಿಲ ।**
**ಆತ್ಮಾನಮಾತ್ಮನಾ ಹತ್ವಾ ಕಿಂ ಧರ್ಮಫಲಮಾಪ್ನುಮಃ ॥೪॥**

ನಮ್ಮ ಶತ್ರುಗಳು (ಬಂಧುಗಳೆಲ್ಲರೂ ವಿನಾಶವಾದುದನ್ನು ಕಂಡು) ಪೂರ್ಣಮನೋರಥರಾದರು. ಕುರುಗಳು ಯುದ್ಧಮೂಲಕವಾದ ಅವಸಾನವೇ ಪರಮಾರ್ಥವುಳ್ಳವರಾದರು. (ಶತ್ರುಗಳು ನಮ್ಮ ಎಲ್ಲ ಬಂಧುಗಳ ಅವಸಾನವನ್ನು ಕಂಡು ಪೂರ್ಣಮನೋರಥರಾದರಲ್ಲದೇ–ಯುದ್ಧದಲ್ಲಿ ಅವಸಾನವನ್ನೂ ಹೊಂದಿ ಪರಮಾರ್ಥವನ್ನೂ ಸಾಧಿಸಿದರು.) ನಾವಾದರೋ ಇದಕ್ಕೆ ಪ್ರತಿಯಾಗಿ ನಮ್ಮನ್ನೇ ಕೊಂದುಕೊಂಡಂತಾಯಿತು. ನಮ್ಮ ಪುತ್ರ-ಪೌತ್ರ-ಸಹೋದರರ ವಿನಾಶಕ್ಕೆ ನಾವೇ ಕಾರಣರಾದೆವು. ಹೀಗೆ ನಮ್ಮ ಬಂಧುಗಳ ವಿನಾಶಕ್ಕೆ ಕಾರಣರಾಗಿರುವ ನಾವು ಧರ್ಮದ ಫಲವನ್ನು

ಪಡೆಯುತ್ತೇವೆಯೇ? ಯಾವ ಧರ್ಮಫಲವನ್ನು ಪಡೆದೇವು? ನಮಗೀಗ ಯಶಃಪ್ರಾಪ್ತಿಯೂ ಇಲ್ಲ; ಸ್ವರ್ಗಪ್ರಾಪ್ತಿಯೂ ಇಲ್ಲ. ಉಭಯತಃ ಭ್ರಷ್ಟ ರಾಗಿದ್ದೇವೆ.

**ಧಿಗಸ್ತು ಕ್ಷಾತ್ರಮಾಚಾರಂ ಧಿಗಸ್ತು ಬಲಪೌರುಷಮ್ ।**
**ಧಿಗಸ್ತ್ವಮರ್ಷಂ ಯೇನೇಮಾಮಾಪದಂ ಗಮಿತಾ ವಯಮ್ ॥೫॥**

ಕ್ಷತ್ರಿಯಾಚಾರಕ್ಕೂ, ಬಲ-ಪೌರುಷಗಳಿಗೂ, ಕೋಪಕ್ಕೂ ಧಿಕ್ಕಾರ ವಿರಲಿ! ಇವುಗಳೆಲ್ಲದರ ಕಾರಣದಿಂದ ನಾವಿಂದು ಈ ಆಪತ್ತಿಗೆ ಒಳಗಾಗಿ ದ್ದೇವೆ.

**ಸಾಧು ಕ್ಷಮಾ ದಮಃ ಶೌಚಂ ವೈರಾಗ್ಯಂ ಚಾಪ್ಯಮತ್ಸರಃ ।**
**ಅಹಿಂಸಾ ಸತ್ಯವಚನಂ ನಿತ್ಯಾನಿ ವನಚಾರಿಣಾಮ್ ॥೬॥**

ವನವಾಸಿಗಳಿಗೆ (ಋಷಿಗಳಿಗೆ) ಕ್ಷಮೆ, ಜಿತೇಂದ್ರಿಯತೆ, ಅಂತಃಶುದ್ಧಿ, ಬಹಿಃಶುದ್ಧಿ, ವೈರಾಗ್ಯ, ಈರ್ಷ್ಯಭಾವ, ಅಹಿಂಸೆ, ಸತ್ಯನಿಷ್ಠೆ–ಇವುಗಳೇ ನಿತ್ಯ ವಾದ ಶ್ರೇಷ್ಠಧರ್ಮಗಳಾಗಿವೆ.

ಆದರೆ ನಾವಾದರೋ ರಾಜ್ಯಲಾಭವನ್ನೂ ಮತ್ತು ರಾಜ್ಯಭೋಗವನ್ನೂ ಪಡೆದುಕೊಳ್ಳುವ ಇಚ್ಛೆಯಿಂದ ಲೋಭದಿಂದಲೂ, ಮೋಹದಿಂದಲೂ, ದಂಭ-ದುರಭಿಮಾನಗಳನ್ನು ಆಶ್ರಯಿಸಿ ಈ ದುರವಸ್ಥೆಗೆ ಬಂದಿರುತ್ತೇವೆ. ಈ ಪೃಥಿವಿಯಲ್ಲಿ ವಿಜಯೇಚ್ಛುಗಳಾದ ನಾವು ನಮ್ಮ ಬಾಂಧವರೆಲ್ಲರೂ ವಿಜಯದ ಕಾರಣಕ್ಕಾಗಿ ಹತರಾದುದನ್ನು ನೋಡಿದಂತಾಯಿತು. ಮೂರು ಲೋಕಗಳ ಆಧಿಪತ್ಯವನ್ನೇ ಕೊಡಬಂದರೂ ಅದರಿಂದ ನಮ್ಮನ್ನು ಪ್ರಸನ್ನಗೊಳಿಸಲು ಸಾಧ್ಯವಾಗುವುದಿಲ್ಲ. (ಈ ರಾಜ್ಯಪ್ರಾಪ್ತಿಯು ನಮ್ಮ ದುಃಖಕ್ಕೆ ಕಾರಣವಾಯಿತೇ ಹೊರತು ಇದರಿಂದ ನಮಗಾವ ಸಂತೋಷವೂ ಆಗಿರುವುದಿಲ್ಲ.) ಈ ರಾಜ್ಯಲೋಭದಿಂದಾಗಿ ಅವಧ್ಯರೆನಿಸಿದ ರಾಜರೆಲ್ಲರನ್ನೂ ವಧೆಮಾಡಿ ಈಗ ಅವರಿಂದ ವಿಹೀನರಾಗಿ ಅರ್ಥಭ್ರಷ್ಟರಾದವರಂತೆ ನಾವೀಗ ಜೀವನವನ್ನು ನಡೆಸುತ್ತಿದ್ದೇವೆ.

**ಆಮಿಷೇ ಗೃಧ್ಯಮಾನಾನಾಮಶುಭಂ ವೈ ಶುನಾಮಿವ ।**
**ಆಮಿಷಂ ಚೈವ ನೋ ಹೀಷ್ಟಮಾಮಿಷಸ್ಯ ವಿವರ್ಜನಮ್ ॥೧೦॥**

ಮಾಂಸದ ತುಂಡಿಗೆ ಆಸೆಪಟ್ಟು ಕಚ್ಚಾಡುವ ನಾಯಿಗಳಿಗೆ ಕೆಟ್ಟದಾಗುವುದು ಸಹಜ. ಅದೇ ರೀತಿಯಲ್ಲಿ ರಾಜ್ಯವೆಂಬ ಆಮಿಷಕ್ಕೆ ಆಸೆಪಟ್ಟ ನಮಗೆ ಈ ಅನಿಷ್ಟವು ಪ್ರಾಪ್ತವಾಗಿದೆ. ಆದುದರಿಂದ ಮಾಂಸತುಲ್ಯವಾದ ರಾಜ್ಯ ಸುಖವನ್ನು ಅನುಭವಿಸುವುದು ನಮಗೆ ಇಷ್ಟವಿಲ್ಲ. ಅದನ್ನು (ರಾಜ್ಯವನ್ನು) ಪರಿತ್ಯಾಗಮಾಡುವುದೇ ಈಗ ನಮಗೆ ಇಷ್ಟವಾಗಿದೆ.

**ನ ಪೃಥಿವ್ಯಾ ಸಕಲಯಾ ನ ಸುವರ್ಣಸ್ಯ ರಾಶಿಭಿಃ ।**
**ನ ಗವಾಶ್ವೇನ ಸರ್ವೇಣ ತೇ ತ್ಯಾಜ್ಯಾ ಯ ಇಮೇ ಹತಾಃ ॥೧೧॥**

ಈಗ ಈ ರಾಜ್ಯಪ್ರಾಪ್ತಿಯ ಸಂಬಂಧದಲ್ಲಿ ಅಸುನೀಗಿರುವ ನಮ್ಮ ಪುತ್ರ-ಪೌತ್ರ-ಸಹೋದರರನ್ನು ಅಖಂಡಭೂಮಂಡಲದ ಸಲುವಾಗಿಯೇ ಆದರೂ ತ್ಯಾಗಮಾಡಬಾರದಾಗಿದ್ದಿತು. ಹೇರಳವಾದ ಸುವರ್ಣರಾಶಿಗಳ ಸಲುವಾಗಿಯೂ ತ್ಯಾಗಮಾಡಬಾರದಾಗಿದ್ದಿತು. ಸಮಸ್ತವಾದ ಗೋವುಗಳೂ ಮತ್ತು ಕುದುರೆಗಳೂ ಲಭಿಸುವುದೆಂಬ ಕಾರಣದಿಂದಲೂ ತ್ಯಾಗಮಾಡಬಾರದಾಗಿದ್ದಿತು. ಅಖಂಡಭೂಮಂಡಲವಾಗಲೀ ರಾಶಿ-ರಾಶಿಯಾದ ಸುವರ್ಣ ನಾಣ್ಯಗಳಾಗಲೀ–ಹಿಂಡು ಹಿಂಡಾದ ಹಸು-ಕುದುರೆಗಳಾಗಲೀ ನಮ್ಮ ಬಂಧುಗಳಿಗೆ ಸಮಾನವೆನಿಸಲಾರವು. ಭೂಮಿ-ಸುವರ್ಣ-ಹಸು-ಕುದುರೆಗಳನ್ನಾದರೂ ಪರಿತ್ಯಾಗಮಾಡಬಹುದಾಗಿತ್ತೇ ಹೊರತು ಪುತ್ರ-ಪೌತ್ರ-ಭ್ರಾತೃ-ಪಿತೃಗಳನ್ನು ಬಲಿಗೊಡಬಾರದಾಗಿದ್ದಿತು.

ಆದರೆ ಅವರೆಲ್ಲರೂ ಕಾಮ-ಕ್ರೋಧಗಳಿಗೆ ವಶೀಭೂತರಾಗಿದ್ದರು. ಹರ್ಷ-ರೋಷಗಳಿಂದ ಕೂಡಿದ್ದರು. ಆದುದರಿಂದ ಮೃತ್ಯುರೂಪವಾದ ರಥಗಳಲ್ಲಿ ಕುಳಿತು ಯಮರಾಜನ ಅರಮನೆಗೆ ಹೊರಟುಹೋದರು.

ಪಿತೃಗಳು ತಪಸ್ಸಿನಿಂದಲೂ, ಬ್ರಹ್ಮಚರ್ಯೆಯಿಂದಲೂ, ಸತ್ಯನಿಷ್ಠೆಯಿಂದಲೂ, ಕ್ಷಮೆಯಿಂದಲೂ ಯುಕ್ತರಾಗಿ ಕಲ್ಯಾಣಗುಣಸಂಪನ್ನರಾದ ಮಕ್ಕಳನ್ನು ಪಡೆದುಕೊಳ್ಳಲು ಇಚ್ಛಿಸುತ್ತಾರೆ. ಇದೇ ರೀತಿಯಲ್ಲಿ ತಾಯಂದಿರೂ ಉಪವಾಸ, ಯಜ್ಞ, ವ್ರತ ಮತ್ತು ಅನೇಕವಿಧವಾದ ಮಂಗಳ ಕಾರ್ಯಗಳ ಮೂಲಕವಾಗಿ ಗುಣಶಾಲಿಗಳಾದ ಪುತ್ರರನ್ನು ಪಡೆಯಬೇಕೆ

ನ್ನುವ ಇಚ್ಛೆಯಿಂದ ಹತ್ತು ತಿಂಗಳವರೆಗೆ ಗರ್ಭವನ್ನು ಧರಿಸುತ್ತಾರೆ. ಆ ತಂದೆ-ತಾಯಿಗಳ ಇಚ್ಛೆಯೆಲ್ಲವೂ ಇದೇ ಆಗಿರುತ್ತದೆ. 'ಕುಶಲಪೂರ್ವಕವಾಗಿ (ಯಾವ ವಿಧವಾದ ತೊಂದರೆಯೂ ಇಲ್ಲದೇ) ಮಕ್ಕಳು ಹುಟ್ಟುವರೇ? ಹುಟ್ಟಿದ ಮಕ್ಕಳು ಗ್ರಹಬಾಧೆಗಳಿಲ್ಲದೇ ಜೀವಿಸುವರೇ? ಅವರು ಬಲಿಷ್ಠರಾದನಂತರ (ಪ್ರಾಪ್ತವಯಸ್ಕರಾದನಂತರ) ಕಲ್ಯಾಣಗುಣಸಂಪನ್ನರಾಗಿ ನಮಗೆ ಇಹದಲ್ಲಿಯೂ ಮತ್ತು ಪರದಲ್ಲಿಯೂ ಸೌಖ್ಯದಾಯಕರಾಗಿರುತ್ತಾರೆಯೇ?'–ಹೀಗೆ ದೀನರಾದ ತಂದೆ-ತಾಯಿಗಳು ಆಕಾಂಕ್ಷೆಯನ್ನಿಟ್ಟುಕೊಂಡಿರುತ್ತಾರೆ. ಆದರೆ ದೀನರಾದ ಆ ತಂದೆ-ತಾಯಿಗಳ ಪ್ರಯತ್ನ ಮತ್ತು ಅವರು ಇಟ್ಟುಕೊಂಡಿದ್ದ ಆಸೆ-ಆಕಾಂಕ್ಷೆಗಳೆಲ್ಲವೂ (ಈ ಘೋರಯುದ್ಧದ ಕಾರಣದಿಂದ) ನಿಷ್ಫಲವಾಗಿ ಹೋಗಿವೆ. ಯುವಕರಾಗಿದ್ದ, ಸುವರ್ಣಮಯವಾದ ಕುಂಡಲಗಳನ್ನು ಧರಿಸಿದ್ದ ಅವರ ಮಕ್ಕಳೆಲ್ಲರೂ ಯುದ್ಧದಲ್ಲಿ ಹತರಾಗಿದ್ದಾರೆ. ಆ ರಾಜಕುಮಾರರು ರಾಜಯೋಗ್ಯವಾದ ಭೋಗಗಳನ್ನು ಅನುಭವಿಸಿಯೇ ಇರಲಿಲ್ಲ. ಪಿತೃಋಣವನ್ನಾಗಲೀ–ದೇವಋಣವನ್ನಾಗಲೀ ತೀರಿಸಿಯೇ ಇರಲಿಲ್ಲ. (ಅವರಿಗೆ ಮಕ್ಕಳೂ ಆಗಿರಲಿಲ್ಲ. ಅವರು ಯಜ್ಞ-ಯಾಗಾದಿಗಳನ್ನೂ ಮಾಡಿರಲಿಲ್ಲ.) ಅಷ್ಟರಲ್ಲಿಯೇ ಅವರೆಲ್ಲರೂ ಯಮನ ಮನೆಗೆ ಹೊರಟುಹೋದರು. ಆ ರಾಜಕುಮಾರರ ತಂದೆ-ತಾಯಿಗಳು ತಮ್ಮ ಮಕ್ಕಳು ಸಂಪಾದಿಸುವ ಧನ-ರತ್ನಗಳನ್ನು ಉಪಭೋಗಿಸಬೇಕೆನ್ನುವ ಆಶಯದಿಂದಿದ್ದರು. ಅಷ್ಟರಲ್ಲಿಯೇ ಎಲ್ಲರೂ ಹತರಾಗಿ ಹೋದರು.

**ಸಂಯುಕ್ತಾಃ ಕಾಮಮನ್ಯುಭ್ಯಾಂ ಕ್ರೋಧಹರ್ಷಾಸಮಞ್ಜಸಾಃ ।**
**ನ ತೇ ಜಯಫಲಂ ಕಿಂಚಿದ್ಭೋಕ್ತಾರೋ ಜಾತು ಕರ್ಹಿಚಿತ್ ॥೨೦॥**

ಕಾಮ-ಕ್ರೋಧಗಳಿಂದ ಕೂಡಿರತಕ್ಕವರು ಮತ್ತು ಕ್ರೋಧ ಮತ್ತು ಹರ್ಷಗಳಲ್ಲಿ ಸಾಮಂಜಸ್ಯವಿಲ್ಲದವರು (ಸಮತೋಲನವಿಲ್ಲದವರು), ವಿಜಯದ ಫಲವನ್ನು ಯಾವುದೇ ಕಾರಣದಿಂದಲೂ ಯಾವಾಗಲೂ ಅನುಭವಿಸುವುದಿಲ್ಲ. (ವ್ಯಾಖ್ಯಾನಕಾರರ ಪ್ರಕಾರ : ಕಾಮವೆಂದರೆ–ಅರ್ಥದ ಅಭಿಲಾಷೆ ; ಮನ್ಯುವೆಂದರೆ ಅರ್ಥದ ಅಲಾಭದಿಂದ ಉಂಟಾಗುವ ದೈನ್ಯ ; ಕ್ರೋಧವೆಂದರೆ–ಕಾಮದ ಪ್ರತಿಬಂಧದಿಂದುಂಟಾಗುವ ತಾಪ ; ಹರ್ಷ

ವೆಂದರೆ–ಅರ್ಥದ ಅಭಿಲಾಷೆಯು ಪೂರ್ಣವಾಗುವುದರಿಂದ ಉಂಟಾಗುವ ಉಲ್ಲಾಸ–ಇವುಗಳಿಂದ ಏರು-ಪೇರಾದ ಮನಸ್ಸಿನಿಂದ ಕೂಡಿದ ಮನುಷ್ಯರು ವಿಜಯದ ಫಲವನ್ನು ಕಿಂಚಿತ್ತಾದರೂ ಅನುಭವಿಸುವುದಿಲ್ಲ. ಯಾವಾಗಲೂ ಯಾವುದೇ ಕಾಲದಲ್ಲಿಯೂ ಅನುಭವಿಸುವುದಿಲ್ಲ.)

**ಪಞ್ಚಾಲಾನಾಂ ಕುರೂಣಾಂ ಚ ಹತಾ ಏವ ಹಿ ಯೇ ಹತಾಃ ।**
**ನ ಚೇತ್ಸರ್ವಾನಯಂ ಲೋಕಃ ಪಶ್ಯೇತ್ಸ್ವೇನೈವ ಕರ್ಮಣಾ ॥೨೧॥**

ಪಾಂಚಾಲ ಮತ್ತು ಕುರುವೀರರಲ್ಲಿ ಯಾರು ಹತರಾದರೋ, ಅವರು ಸಂಪೂರ್ಣವಾಗಿ ವಿನಾಶವನ್ನೇ ಹೊಂದಿದರು. ಒಂದು ವೇಳೆ ಅವರು ಈ ಯುದ್ಧದಲ್ಲಿ ಹತರಾಗದಿದ್ದರೆ ತಮ್ಮ ಕ್ರಿಯೆಗಳಿಂದ ಎಂತಹ ಉಚ್ಛ್ರಾಯಸ್ಥಿತಿಗೆ ಬರುತ್ತಿದ್ದರೆಂಬುದನ್ನು ಈ ಲೋಕವು ಕಾಣುತ್ತಿದ್ದಿತು.

(ವ್ಯಾಖ್ಯಾನಕಾರರ ಪ್ರಕಾರ : **'ನನು ಯೇ ಹತಾಃ ತೇ ಸ್ವರ್ಗಂ ಭೋಕ್ಷ್ಯನ್ತ್ಯೇವ ಇತ್ಯಾಶಂಕ್ಯಾಹ ಪಂಚಾಲಾನಾಮಿತಿ** : ಯಾರು ಯುದ್ಧದಲ್ಲಿ ಪ್ರಾಣತ್ಯಾಗಮಾಡಿರುವರೋ ಅವರು ಸ್ವರ್ಗಸುಖವನ್ನು ಅನುಭವಿಸುತ್ತಾರೆ'–ಎಂಬುದನ್ನು ಸಂದೇಹಿಸಿ ಧರ್ಮರಾಜನು ಈ ಮಾತನ್ನು ಹೇಳುತ್ತಾನೆ. **'ಯೇ ಹತಾಃ ತೇ ಹತಾ ಏವ । ನ ತು ಸ್ವರ್ಗಂ ಗತಾಃ**–ಯಾರು ಹತರಾದರೋ ಅವರು ಹಾಳಾಗಿಯೇ ಹೋದರು. ಸ್ವರ್ಗಕ್ಕಂತೂ ಅವರು ಹೋಗಿಯೇ ಇಲ್ಲ.' ಏಕೆಂದರೆ **ಕಾಮಾದ್ಯುಪೇತತ್ವಾದಿತ್ಯುಕ್ತ ಹೇತೋಃ** ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ ಅವರೆಲ್ಲರೂ ಕಾಮ-ಕ್ರೋಧಾಭಿಭೂತರಾಗಿದ್ದುದರಿಂದ. **ಏವಂ ನ ಚೇತ್ ಅಪಹನ್ತಾ ಸ್ವೇನೈವ ಕರ್ಮಣಾ= ನಿಮಿತ್ತೇನ ಸ್ವರ್ಗತಾನ್ ತಾನ್ ಪಶ್ಯೇತ್. ನ ಚ ಪಶ್ಯತಿ.** ಹಾಗಿಲ್ಲದಿದ್ದರೆ ಅವರನ್ನು ಸಂಹರಿಸಿದವನು ತನ್ನ ಕರ್ಮದ ಕಾರಣದಿಂದ ಸ್ವರ್ಗಕ್ಕೆ ಹೋಗುವ ಅವರನ್ನು ನೋಡಲೇಬೇಕಾಗಿದ್ದಿತು. ಆದರೆ ಅವನು ಸತ್ತವರು ಸ್ವರ್ಗಕ್ಕೆ ಹೋಗುವುದನ್ನೂ ಕಾಣುವುದಿಲ್ಲ.

ವ್ಯಾಖ್ಯಾನಕಾರರ ಒಟ್ಟು ಅಭಿಪ್ರಾಯವು ಹೀಗಿರಬಹುದು : ಯುದ್ಧದಲ್ಲಿ ಸತ್ತವನು ಸ್ವರ್ಗಕ್ಕೆ ಹೋಗುವುದು ನಿಜವಾದರೆ–ಸಂಹರಿಸಲ್ಪಟ್ಟವನು ಸ್ವರ್ಗಕ್ಕೆ ಹೋಗುವುದನ್ನು ಸಂಹರಿಸಿದವನು ಕಣ್ಣಾರೆ ನೋಡುತ್ತಿದ್ದನು.

ಯಾರೂ ಸತ್ತವರು ಸ್ವರ್ಗಕ್ಕೆ ಹೋದುದನ್ನು ನೋಡದೇ ಇರುವುದರಿಂದ ಪಾಂಚಾಲ-ಕುರುವೀರರು ಸತ್ತು ಹಾಳಾದರು. ಅವರು ಸ್ವರ್ಗಕ್ಕೆ ಖಂಡಿತ ವಾಗಿಯೂ ಹೋಗಿಲ್ಲ. **ಲೋಕಾಯತಮತಮಾಶ್ರಿತ್ಯೋಕ್ತಂ**–ನಾಸ್ತಿಕ ಮತತತ್ತ್ವವನ್ನು ಆಶ್ರಯಿಸಿ ಧರ್ಮರಾಜನು ಈ ಮಾತು ಹೇಳಿದ್ದಾನೆ– ಎಂಬ ಟಿಪ್ಪಣಿಯನ್ನೂ ವ್ಯಾಖ್ಯಾನಕಾರರು ಸೇರಿಸಿದ್ದಾರೆ. ೨೦ನೆಯ ಶ್ಲೋಕವು ಸತ್ತುಹೋಗಿರುವ ಪಾಂಚಾಲ-ಕುರುಗಳಿಗೆ ಸಂಬಂಧಿಸಿದುದೆಂಬ ವ್ಯಾಖ್ಯಾನಕಾರರ ಅಭಿಪ್ರಾಯವು ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ: ಈ ಅಧ್ಯಾಯದಲ್ಲಿ ಯುಧಿಷ್ಠಿರನು ತನ್ನನ್ನೇ ತಾನು ತೆಗಳಿಕೊಳ್ಳುತ್ತಾನೆ. ತಾನು ಮಾಡಿದುದು ಮಹಾಪರಾಧವೆಂದು ಹೇಳುತ್ತಾನೆ. ಆದುದರಿಂದ ಅವನು ಇತರರ ಬಗೆಗೆ ಹೀಗೆ ಹೇಳಿದನೆಂಬುದು ಸರಿಯಲ್ಲ. ಮೇಲಾಗಿ ಯುಧಿಷ್ಠಿರನು ಎಂತಹುದೇ ದುಃಖ ಅಥವಾ ಕಷ್ಟಸಮಯಗಳಲ್ಲಿಯೂ ನಾಸ್ತಿಕಮತವನ್ನು ಅವಲಂಬಿಸಿ ಮಾತನಾಡಿದನೆಂದು ಹೇಳುವುದು ಅಪಚಾರವೆಸಗಿದಂತಾಗುತ್ತದೆ. ಯದ್ಯಪಿ ಈ ಅಧ್ಯಾಯದ ಹಲವಾರು ಶ್ಲೋಕಗಳಿಗೆ ಅನ್ವಯಪೂರ್ವಕವಾಗಿ ಅರ್ಥಮಾಡುವುದು ಕಷ್ಟವಾದರೂ ಒಬ್ಬನ ಪ್ರಕೃತಿಗೆ ವಿರುದ್ಧವಾಗಿ ಅರ್ಥಮಾಡುವುದು ಸರಿಯಾಗಿ ಕಾಣುವು ದಿಲ್ಲ. ಈ ಶ್ಲೋಕಕ್ಕಿರುವ ಪಾಠಾಂತರವು ಇಲ್ಲಿ ಗ್ರಾಹ್ಯವಾಗಿ ಕಾಣುತ್ತದೆ.)

**ಪಞ್ಚಾಲಾನಾಂ ಕುರೂಣಾಂ ಚ ಹತಾ ಏವ ಹಿ ಯೇಽಹತಾಃ ।**
**ತೇ ವಯಂ ತ್ವಧಮಾಂಲ್ಲೋಕಾನ್ಪ್ರಪದ್ಯೇಮ ಸ್ವಕರ್ಮಭಿಃ ॥೨೧॥**

ಕುರು-ಪಾಂಚಾಲವೀರರು ತೋರಿಕೆಗೆ ಮಾತ್ರವೇ ಹತರಾದರು. ನಿಜ ವಾಗಿ ಹೇಳುವುದಾದರೆ ಅವರು ಹತರಾಗಿಲ್ಲ. ಕೀರ್ತಿಯನ್ನೂ–ಸ್ವರ್ಗವನ್ನೂ ಪಡೆದು ಅಮರರೇ ಆಗಿದ್ದಾರೆ. ಆದರೆ ಅವರನ್ನು ಸಂಹರಿಸಿದ ಅಥವಾ ಅವರ ಸಾವಿಗೆ ಕಾರಣರಾದ ನಾವು ಮಾತ್ರ ನಮ್ಮ ಈ ಬಂಧುಜನವಧೆಯೆಂಬ ಕುಕರ್ಮದ ಫಲವಾಗಿ ಅಧಮಾಧಮಲೋಕಗಳನ್ನು ಪಡೆದುಕೊಳ್ಳುತ್ತೇವೆ.

ಯುಧಿಷ್ಠಿರನು ಮುಂದುವರಿದು ಹೇಳುತ್ತಾನೆ :

**ವಯಮೇವಾಸ್ಯ ಲೋಕಸ್ಯ ವಿನಾಶೇ ಕಾರಣಂ ಸ್ಮೃತಾಃ ।**
**ಧೃತರಾಷ್ಟ್ರಸ್ಯ ಪುತ್ರೇಷು ತತ್ಸರ್ವಂ ಪ್ರತಿಪತ್ಸ್ಯತಿ ॥೨೨॥**

ಅರ್ಜುನ! ಈ ಲೋಕದ ವಿನಾಶಕ್ಕೆ ನಾವೇ ಕಾರಣರೆಂಬ ಭಾವನೆಯು ನನಗುಂಟಾಗಿಬಿಟ್ಟಿದೆ. ಆದರೆ ಲೋಕದ ವಿನಾಶಕ್ಕೆ ಮೂಲಕಾರಣವೆಲ್ಲವೂ ಧೃತರಾಷ್ಟ್ರನ ಮಕ್ಕಳಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. (**ತತ್ಸರ್ವಂ ವಿನಾಶಕಾರಣತ್ವಂ** = ವಿನಾಶದ ಕಾರಣವು, **ಧೃತರಾಷ್ಟ್ರಪುತ್ರೇಷು** = ಧೃತರಾಷ್ಟ್ರನ ಮಕ್ಕಳಲ್ಲಿಯೇ, **ಪ್ರತಿಪತ್ಸ್ಯತಿ** = **ಪರ್ಯವಸ್ಯತಿ** ಪರ್ಯವಸಾನಹೊಂದತ್ತದೆ. **ವಯಂ ರಾಜ್ಯಲೋಭಾತ್ ವಿನಾಶೇ ಅವಾಂತರಕಾರಣಂ**= ನಾವು ರಾಜ್ಯಲೋಭದಿಂದ ಯುದ್ಧದಲ್ಲಿ ತೊಡಗಿದ್ದುದರಿಂದ ಲೋಕನಾಶಕ್ಕೆ ನಿಮಿತ್ತರೂಪದಲ್ಲಿ ಕಾರಣರಾಗಿದ್ದೇವೆ. **ಮುಖ್ಯಂ ಕಾರಣಂ ತು ಅಸ್ಮದ್ರಾಜ್ಯಾಪಹಾರಾತ್ ಧಾರ್ತರಾಷ್ಟ್ರಾ ಏವ** = ನಮ್ಮ ರಾಜ್ಯವನ್ನು ಅಪಹರಿಸಿದ್ದರಿಂದ ಈ ಲೋಕವಿನಾಶಕ್ಕೆ ಮುಖ್ಯಕಾರಣರು ಧೃತರಾಷ್ಟ್ರನ ಮಕ್ಕಳೇ ಆಗಿರುತ್ತಾರೆ–ಇದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.)

ಸ್ವಲ್ಪವಾದರೂ ಅಪಕಾರವನ್ನೇ ಮಾಡದ ನಮ್ಮ ವಿಷಯದಲ್ಲಿ ಧೃತರಾಷ್ಟ್ರರಾಜನು ಸದಾಕಾಲದಲ್ಲಿಯೂ ವಂಚನೆಯ ಬುದ್ಧಿಯನ್ನೇ ಹೊಂದಿರುತ್ತಿದ್ದನು. ಅಂತರ್ಯದಲ್ಲಿ ನಮ್ಮನ್ನು ದ್ವೇಷಿಸುತ್ತಿದ್ದನು. ಮಿಥ್ಯಾಚಾರಿಯಾಗಿದ್ದನು. ತೋರಿಕೆಗೆ ಅತ್ಯಂತವಿನೀತನಾದವನಂತೆ ಕಾಣುತ್ತಿದ್ದನು. ಅವನಿಗೆ ಇಂತಹ ಬುದ್ಧಿಯಿದ್ದುದರಿಂದಲೇ :

**ನ ಸಕಾಮಾ ವಯಂ ತೇ ಚ ನ ಚಾಸ್ಮಾಭಿರ್ನ ತೈರ್ಜಿತಮ್ ।**
**ನ ತೈರ್ಭುಕ್ತೇಯಮವನಿರ್ನ ನಾರ್ಯೋ ಗೀತವಾದಿತಮ್ ॥೨೪॥**

ನಾವೂ ಪೂರ್ಣಮನೋರಥರಾಗಲಿಲ್ಲ. ನಮ್ಮ ಶತ್ರುಗಳೂ ಪೂರ್ಣಮನೋರಥರಾಗಲಿಲ್ಲ. ನಾವೂ ಜಯಗಳಿಸಿದವರಾಗಲಿಲ್ಲ. ಅವರೂ ಜಯಗಳಿಸಿದವರಾಗಲಿಲ್ಲ. ಅವರಾದರೂ ಈ ಭೂಮಂಡಲವನ್ನೂ ಸ್ತ್ರೀಯರನ್ನೂ ನಿರಾತಂಕವಾಗಿ ಉಪಭೋಗಿಸಲಿಲ್ಲ. ಆನಂದದಾಯಕವಾದ ಗೀತ-ವಾದ್ಯಾದಿಗಳನ್ನೂ ನಿರಾತಂಕವಾಗಿ ಕೇಳಲಿಲ್ಲ.

ಅವರು ಯಾವಾಗಲೂ ಅಮಾತ್ಯ-ಸುಹೃದರ ಹಿತವಾಕ್ಯಗಳನ್ನಾಗಲೀ ನೀತಿಶಾಸ್ತ್ರಜ್ಞರ ಶಾಸ್ತ್ರಪ್ರಮಾಣಗಳನ್ನಾಗಲೀ ಕೇಳಲೇ ಇಲ್ಲ. ಅವರಲ್ಲಿದ್ದ ಬಹುಮೂಲ್ಯವಾದ ರತ್ನರಾಶಿಗಳಾಗಲೀ, ಅವರ ಅಧೀನದಲ್ಲಿದ್ದ ಭೂಮಂಡಲ

ವಾಗಲೀ, ಅವರಿಗೆ ಬರುತ್ತಿದ್ದ ಅಪಾರವಾದ ಕಪ್ಪ-ಕಾಣಿಕೆಗಳಾಗಲೀ ಅವರಿಗೆ ಯಾವ ವಿಧವಾದ ಆನಂದವನ್ನೂ ಉಂಟುಮಾಡಲಿಲ್ಲ. ನಮ್ಮ ಮೇಲಿನ ದ್ವೇಷದಿಂದ ಸದಾ ಪರಿತಪಿಸುತ್ತಿದ್ದ ದುರ್ಯೋಧನನಿಗೆ ಸುಖವೆಂದ ರೇನೆಂಬುದೇ ತಿಳಿಯುತ್ತಿರಲಿಲ್ಲ. ನಾವು ಇಂದ್ರಪ್ರಸ್ಥನಗರದಲ್ಲಿ ರಾಜ್ಯವಾಳು ತ್ತಿದ್ದಾಗ ನಮ್ಮಲ್ಲಿದ್ದ ಧನ-ಧಾನ್ಯಾದಿಗಳ ಸಮೃದ್ಧಿಯನ್ನು ನೋಡಿ ದುರ್ಯೋಧನನು ಬಣ್ಣಗೆಟ್ಟು ಬಿಳಿಚಿಕೊಂಡು ಕೃಶನಾಗಿಬಿಟ್ಟನು. ದುರ್ಯೋಧನನ ಆ ಸ್ಥಿತಿಯನ್ನು ಶಕುನಿಯು ಧೃತರಾಷ್ಟ್ರನಿಗೆ ವಿವರಿಸಿ ಹೇಳಿದನು. ಪುತ್ರನ ಮೇಲಿನ ವಾತ್ಸಲ್ಯದಿಂದಾಗಿ ಧೃತರಾಷ್ಟ್ರನು ಅನ್ಯಾಯದ ಮಾರ್ಗವನ್ನೇ ಅವಲಂಬಿಸಿ ಮಗನ ದುಷ್ಟಯೋಜನೆಗಳಿಗೆ ಅನುಮತಿಯನ್ನಿ ತ್ತನು. ಆ ಸಮಯದಲ್ಲವನು ತಂದೆಯಾದ ಭೀಷ್ಮನ ಅಭಿಪ್ರಾಯವನ್ನಾಗಲೀ ವಿದುರನ ಅಭಿಪ್ರಾಯವನ್ನಾಗಲೀ ಅಪೇಕ್ಷಿಸಲೇ ಇಲ್ಲ. ಆ ದುರ್ನೀತಿಯ ಕಾರಣದಿಂದಲೇ ಧೃತರಾಷ್ಟ್ರನಿಂದು ಎಲ್ಲರನ್ನೂ ನನ್ನಂತೆಯೇ ಕಳೆದು ಕೊಂಡಿರುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ. ಅಪವಿತ್ರವಾದ ಆಚಾರ-ವಿಚಾರಗಳಿಂದ ಕೂಡಿದ್ದ, ಲುಬ್ಧನಾದ ಕಾಮಾಸಕ್ತನಾದ ಪುತ್ರನನ್ನು ನಿಯಂತ್ರಿಸದೇ ಧೃತರಾಷ್ಟ್ರನು ದುರ್ಯೋಧನನ ಮತ್ತು ಅವನ ಸಹೋದರರ ಸಂಹಾರಕ್ಕೆ ಕಾರಣನಾಗಿ ಉಜ್ವಲವಾದ ಯಶಸ್ಸಿನಿಂದಲೂ ಭ್ರಷ್ಟನಾಗಿಹೋದನು. ನಮ್ಮ ವಿಷಯದಲ್ಲಿ ಸದಾ ದ್ವೇಷಬುದ್ಧಿಯನ್ನೇ ಹೊಂದಿದ್ದ, ಪಾಪಬುದ್ಧಿಯಾದ ದುರ್ಯೋಧನನು ಇಬ್ಬರು ವೃದ್ಧರನ್ನೂ (ಧೃತರಾಷ್ಟ್ರ-ಗಾಂಧಾರಿಯರನ್ನು) ಪುತ್ರಶೋಕವೆಂಬ ಧಗ-ಧಗಿಸುವ ಬೆಂಕಿ ಯೊಳಗೆ ಹಾಕಿ ಹೊರಟುಹೋದನು. ಸಂಧಿಗಾಗಿ ಹಸ್ತಿನಾಪಟ್ಟಣಕ್ಕೆ ಹೋಗಿದ್ದ ಶ್ರೀಕೃಷ್ಣನ ಸನ್ನಿಧಿಯಲ್ಲಿ ಯುದ್ಧಮಾಡುವುದರಲ್ಲಿಯೇ ಹೆಚ್ಚು ಆಸಕ್ತನಾಗಿದ್ದ ದುರ್ಯೋಧನನು ಹೇಳಿದ ಮಾತನ್ನು ಕುಲೀನನಾದ ಯಾವ ಬಂಧುವು ತಾನೇ ಸುಹೃದರ ವಿಷಯದಲ್ಲಿ ಆಡುತ್ತಾನೆ?

ಪ್ರಳಯಕಾಲದ ಸೂರ್ಯನು ತನ್ನ ತೇಜಸ್ಸಿನಿಂದ ಎಲ್ಲ ದಿಕ್ಕುಗಳನ್ನೂ ದಹಿಸುವಂತೆ–ದುರ್ಯೋಧನನ * ದೋಷದಿಂದಲೇ ನಾವು ಎಲ್ಲ ದಿಕ್ಕು

---

* ಆತ್ಮನೋ ದೋಷಾತ್–ನನ್ನ ದೋಷದಿಂದ ಎಂದು ಅರ್ಥವಾಗುತ್ತದೆ. ಆದರೆ

ಗಳನ್ನೂ ದಹಿಸಿ (ಸಹೋದರರು, ಪುತ್ರರು, ಪೌತ್ರರು, ಪಿತೃಗಳು–ಎಂಬ ವಿವೇಚನೆಯೇ ಇಲ್ಲದೇ ಎಲ್ಲರನ್ನೂ ಸಂಹರಿಸಿ) ನಾವೂ ಶಾಶ್ವತವಾಗಿ ವಿನಾಶ ಹೊಂದಿದೆವು. (ಹಾಳಾಗಿಹೋದೆವು.) ನಮ್ಮ ಆ ಕೆಟ್ಟಬುದ್ಧಿಯ ವೈರ ಪುರುಷನು ದುರ್ಮಂತ್ರಿಗಳ ಬಂಧನಕ್ಕೊಳಗಾಗಿಬಿಟ್ಟಿದ್ದನು. ಅಂತಹ ದುಷ್ಟ ದುರ್ಯೋಧನನ ಕಾರಣದಿಂದಾಗಿ ನಮ್ಮ ಭರತಕುಲವೇ ವಿನಾಶವಾಗಿ ಹೋಯಿತು. ಅವಧ್ಯರಾದವರನ್ನೂ ವಧಿಸಿ ನಾವು ಲೋಕನಿಂದನೆಗೆ ಪಾತ್ರ ರಾದೆವು. ಧೃತರಾಷ್ಟ್ರರಾಜನು–ಕುಲದ ಸಂಪೂರ್ಣವಿನಾಶಕ್ಕೆ ಕಾರಣನಾದ, ದುರ್ಮತಿಯಾದ, ಪಾಪಪೂರುಷನಾದ ದುರ್ಯೋಧನನನ್ನು ರಾಷ್ಟ್ರೇಶ್ವರ ನನ್ನಾಗಿ ಮಾಡಿದುದಕ್ಕಾಗಿ ಈಗ ಶೋಕಪಡುತ್ತಿದ್ದಾನೆ. ಈ ಯುದ್ಧದಿಂದ ಅನೇಕ ಶೂರರು ಹತರಾಗಿ ಹೋದರು. ಕೊಲ್ಲಬಾರದವರನ್ನೆಲ್ಲಾ ಕೊಂದು ಪಾಪಕಾರ್ಯವನ್ನು ಮಾಡಿದೆವು. ನಮ್ಮ ದೇಶವೂ ಸಂಪೂರ್ಣವಾಗಿ ಹಾಳಾ ಯಿತು. ಶತ್ರುಗಳನ್ನು ಸಂಹರಿಸಿದುದರಿಂದ ನಮ್ಮ ಕೋಪವೇನೋ ಉಪ ಶಮನ ಹೊಂದಿತು. ಆದರೆ ಬಂಧುಗಳ ವಿಯೋಗದಿಂದ ಉಂಟಾಗಿರುವ ಶೋಕವು ನನ್ನನ್ನು ಪೀಡಿಸುತ್ತಿದೆ.

**ಧನಂಜಯ ಕೃತಂ ಪಾಪಂ ಕಲ್ಯಾಣೇನೋಪಹನ್ಯತೇ ।**
**ಖ್ಯಾಪನೇನಾನುತಾಪೇನ ದಾನೇನ ತಪಸಾಪಿ ವಾ ॥೩೬॥**

ಧನಂಜಯ! ಮಾಡಿದ ಪಾಪವು ಶುಭಕರ್ಮಗಳನ್ನು ಮಾಡುವುದ ರಿಂದಲೂ, ಇಂತಹ ಪಾಪಮಾಡಿದೆನೆಂದು ಪ್ರಸಿದ್ಧಿಪಡಿಸುವುದರಿಂದಲೂ ಮತ್ತು ಪಶ್ಚಾತ್ತಾಪಪಡುವುದರಿಂದಲೂ, ದಾನ-ತಪಸ್ಸುಗಳಿಂದಲೂ ಪರಿ ಹಾರವಾಗುತ್ತದೆ.

**ನಿವೃತ್ತ್ಯಾ ತೀರ್ಥಗಮನಾಚ್ಛ್ರುತಿಸ್ಮೃತಿಜಪೇನ ವಾ ।**
**ತ್ಯಾಗವಾಂಶ್ಚ ಪುನಃ ಪಾಪಂ ನಾಲಂ ಕರ್ತುಮಿತಿ ಶ್ರುತಿಃ ॥೩೭॥**
**ತ್ಯಾಗವಾಞ್ಜನ್ಮಮರಣೇ ನಾಪ್ನೋತೀತಿ ಶ್ರುತಿರ್ಯದಾ ॥೩೮॥**

---

ವ್ಯಾಖ್ಯಾನಕಾರರು ಆತ್ಮನಃ ಎಂಬುದನ್ನು ದುರ್ಯೋಧನನಿಗೆ ಅನ್ವಯಿಸಿದ್ದಾರೆ. ಆತ್ಮನ ಇತಿ ದುರ್ಯೋಧನೇಽಪಿ ಉಪಚಾರಾತ್ ಆತ್ಮಪದಪ್ರಯೋಗಃ ಆತ್ಮನಃ = ದುರ್ಯೋಧನಸ್ಯ.

ತ್ಯಾಗದಿಂದಲೂ, ತೀರ್ಥಯಾತ್ರೆಗಳಿಂದಲೂ, ವೇದಪಾರಾಯಣ ದಿಂದಲೂ, ಶ್ರುತಿ-ಸ್ಮೃತಿಗಳಲ್ಲಿ ಹೇಳಿರುವ ಮಹಾಮಂತ್ರಗಳ ಪುನಶ್ಚರಣೆ ಯಿಂದಲೂ ಮಾಡಿದ ಪಾಪವು ಪರಿಹಾರವಾಗುತ್ತದೆ. ಆದರೆ ತ್ಯಾಗಿಯು ಪುನಃ ಪಾಪವನ್ನೇ ಮಾಡುವುದಿಲ್ಲವೆಂದು ಶ್ರುತಿಯು ಸಾರುತ್ತದೆ. **ತ್ಯಾಗೇನೈಕೇ ಅಮೃತತ್ವಮಾನಶುಃ** –ತ್ಯಾಗಿಯು ಜನನ-ಮರಣಗಳಿಂದಲೂ ಮುಕ್ತನಾಗಿ ಅಮೃತತ್ವವನ್ನೇ ಪಡೆಯುವನೆಂದು ಶ್ರುತಿಯು ಘೋಷಿಸುತ್ತದೆ.

**ಪ್ರಾಪ್ತವರ್ತ್ಮಾ ಕೃತಮತಿರ್ಬ್ರಹ್ಮ ಸಮ್ಪದ್ಯತೇ ತದಾ ।**
**ಸ ಧನಂಜಯ ನಿರ್ದ್ವನ್ದ್ವೋ ಮುನಿರ್ಜ್ಞಾನಸಮನ್ವಿತಃ ॥೩೯॥**

ಧನಂಜಯ! ತ್ಯಾಗಿಯಾದವನಿಗೆ ಮುಕ್ತಿಯ ಮಾರ್ಗವು ಸುಲಭವಾಗಿ ಸಿಕ್ಕುತ್ತದೆ. ಮುಕ್ತಿಯಲ್ಲಿಯೇ ನಿಯತವಾದ ಬುದ್ಧಿಯನ್ನು ಹೊಂದಿರುವ, ಜ್ಞಾನಯುಕ್ತನಾದ, ಸ್ಥಿರಬುದ್ಧಿಯಾದ, ಸರ್ವಸಂಗಪರಿತ್ಯಾಗಿಯಾದ ಮುನಿಯು ದ್ವಂದ್ವಗಳಿಂದ ರಹಿತನಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಕೊಳ್ಳುತ್ತಾನೆ. ಆದುದರಿಂದ, ಪರಂತಪನೇ! ನಿಮ್ಮೆಲ್ಲರ ಅನುಮತಿಯನ್ನು ಪಡೆದುಕೊಂಡು ನಾನು ಅರಣ್ಯಕ್ಕೆ ಹೋಗುತ್ತೇನೆ.

**ನ ಹಿ ಕೃತ್ಸ್ನತಮೋ ಧರ್ಮಃ ಶಕ್ಯಃ ಪ್ರಾಪ್ತುಮಿತಿ ಶ್ರುತಿಃ ।**
**ಪರಿಗ್ರಹವತಾ ತನ್ಮೇ ಪ್ರತ್ಯಕ್ಷಮರಿಸೂದನ ॥೪೦॥**

ಪರಿಗ್ರಹ-ಸಂಗ್ರಹಗಳನ್ನು ಮಾಡುವ ಮನುಷ್ಯನಿಗೆ (ತ್ಯಾಗಿಯಲ್ಲ ದವನಿಗೆ) *ಸಂಪೂರ್ಣವಾದ ಧರ್ಮಾಚರಣೆಯು (ಆತ್ಮದರ್ಶನವು) ಸಾಧ್ಯವಾಗುವುದಿಲ್ಲವೆಂದು ಶ್ರುತಿಯು ಹೇಳುತ್ತದೆ. ಮೇಲಾಗಿ ಇದು ನನ್ನ ಪ್ರತ್ಯಕ್ಷಾನುಭವವೇ ಆಗಿರುತ್ತದೆ.

**ಮಯಾ ನಿಸೃಷ್ಟಂ ಪಾಪಂ ಹಿ ಪರಿಗ್ರಹಮಭೀಪ್ಸತಾ ।**
**ಜನ್ಮಕ್ಷಯನಿಮಿತ್ತಂ ಚ ಪ್ರಾಪ್ತುಂ ಶಕ್ಯಮಿತಿ ಶ್ರುತಿಃ ॥೪೧॥**

---

* **ಕೃತ್ಸ್ನತಮೋ ಧರ್ಮಃ = ಯೋಗೇನಾತ್ಮದರ್ಶನಂ**, ಯೋಗದಿಂದ ಆತ್ಮದರ್ಶನವನ್ನು ಪಡೆದುಕೊಳ್ಳುವುದಕ್ಕೆ **ಕೃತ್ಸ್ನತಮಧರ್ಮ** = ಸಂಪೂರ್ಣಧರ್ಮ ಎಂದು ವ್ಯಾಖ್ಯಾನಕಾರರು ಹೇಳಿದ್ದಾರೆ. ಪರಮಧರ್ಮವು ಯಾವುದೆಂಬುದನ್ನು ಯಾಜ್ಞವಲ್ಕ್ಯರು ಹೀಗೆ ನಿರೂಪಿಸಿದ್ದಾರೆ: **ಇಜ್ಯಾಚಾರಧರ್ಮೋಽಹಿಂಸಾದಾನಸ್ವಾಧ್ಯಾಯಕರ್ಮಣಾಮ್ । ಅಯಂ ತು ಪರಮೋ ಧರ್ಮೋ ಯದ್ಯೋಗೇನಾತ್ಮದರ್ಶನಮ್ ॥**

ರಾಜ್ಯಲಾಭವನ್ನೂ ಧನಸಂಗ್ರಹವನ್ನೂ ಇಚ್ಛಿಸಿದ ನಾನು ಪಾಪದ ರಾಶಿಯನ್ನೇ ಕೂಡಿಹಾಕಿಕೊಂಡೆನು. ಇದು ಜನ್ಮ-ಮೃತ್ಯುಗಳಿಗೆ ಅಥವಾ ಮುಕ್ತಿಯನ್ನು ಕಾಣದೇ ಅನೇಕಜನ್ಮಗ್ರಳನ್ನು ಪಡೆಯಲು ಸಾಧನವಾಗುತ್ತದೆ. ಪರಿಗ್ರಹದಿಂದ ಪಾಪವೇ ಪ್ರಾಪ್ತವಾಗುವುದೆಂದು ( ಮುಕ್ತಿಯು ಲಭಿಸು ವುದಿಲ್ಲವೆಂದು ) ವೇದವೇ ಹೇಳುತ್ತದೆ. (ಆದುದರಿಂದ ನಾನು ಈ ರಾಜ್ಯ ವನ್ನು ಪರಿಗ್ರಹಿಸುವುದಿಲ್ಲ. ) ಪರಿಗ್ರಹವೆಂಬುದು ಯಾವಾಗಲೂ ಪಾಪ ಹೇತುವು. ಅದರ ಪರಿಹಾರಕ್ಕಾಗಿ ಯಾವುದೇ ರೀತಿಯ ಯಜ್ಞ-ದಾನ-ಜಪಾದಿಗಳನ್ನು ಮಾಡಿದರೂ ಆ ಪಾಪವು ಸಂಪೂರ್ಣವಾಗಿ ಹೋಗಿಬಿಡು ವುದಿಲ್ಲ. ಪರಿಗ್ರಹಕ್ಕೆ ಅನುರೂಪವಾಗಿ ಪ್ರಾಯಶ್ಚಿತ್ತಾದಿಗಳನ್ನು ಮಾಡಿ ಕೊಳ್ಳಲು ಸಾಧ್ಯವಾಗುವುದಿಲ್ಲ. ಅದರಿಂದಾಗಿ ಪಾಪರಾಶಿಯೇ ಬೆಳೆದು ಆ ಪಾಪವು ಪುನಃ ಪುನಃ ಹುಟ್ಟು-ಸಾವುಗಳಿಗೆ ಕಾರಣವಾಗುತ್ತದೆ. ಜನ್ಮ- ಮೃತ್ಯುಗಳಿಂದ ಮೋಕ್ಷವು ಸಿಗುವುದಿಲ್ಲ. ಆದುದರಿಂದ ಪರಿಗ್ರಹಮಾಡದಿರು ವುದೇ ಒಳ್ಳೆಯದು.*

ಯುಧಿಷ್ಠಿರನು ಮುಂದುವರಿದು ಹೇಳುತ್ತಾನೆ :

"ಆದುದರಿಂದ ನಾನು ಅಖಂಡವಾದ ರಾಜ್ಯವನ್ನೂ ಮತ್ತು ಸುಖ ರೂಪವಾದ ಪರಿಗ್ರಹವನ್ನೂ ತ್ಯಾಗಮಾಡಿ, ಈ ಎಲ್ಲ ಸಾಂಸಾರಿಕಬಂಧನ ಗಳಿಂದಲೂ ವಿಮುಕ್ತನಾಗಿ, ಶೋಕರಹಿತನಾಗಿ, ಮಮತಾರಹಿತನಾಗಿ (ನಾನು-ನನ್ನದು ಎಂಬುದನ್ನು ಸಂಪೂರ್ಣವಾಗಿ ತೊರೆದು) ಯಾವುದಾದರೂ ಕಾಡಿಗೆ ಹೊರಟುಹೋಗುತ್ತೇನೆ.

ಕುರುನಂದನನೇ! ಅರ್ಜುನ! ನಿಷ್ಕಂಟಕವಾಗಿರುವ, ಕ್ಷೇಮದಿಂದಿರುವ ಈ ಭೂಮಂಡಲವನ್ನು ನೀನು ಶಾಸನಮಾಡು. ನನಗೆ ಈ ರಾಜ್ಯದಿಂದಾಗಲೀ ಸುಖೋಪಭೋಗಗಳಿಂದಾಗಲೀ ಯಾವ ಪ್ರಯೋಜನವೂ ಇರುವುದಿಲ್ಲ."

---

* ನಿಸ್ಸೃಷ್ಟಂ = ಬಿಡಲ್ಪಟ್ಟ, ತ್ಯಜಿಸಲ್ಪಟ್ಟ–ಎಂದು ಸ್ವಾಭಾವಿಕವಾದ ಅರ್ಥವಾಗುತ್ತದೆ. ಆದರೆ ಸಂದರ್ಭಕ್ಕೆ ತಕ್ಕಂತೆ ನಿತರಾಂ ಸೃಷ್ಟಂ = ಕೂಡಿಹಾಕಿಕೊಂಡ ಪಾಪ–ಎಂದು ಅರ್ಥಮಾಡಬೇಕಾಗುತ್ತದೆ. ಜನ್ಮಕ್ಷಯನಿಮಿತ್ತಂ ಎಂಬುದರ ಸ್ವಾಭಾವಿಕವಾದ ಅರ್ಥವು 'ಹುಟ್ಟಿಲ್ಲದಿರುವಿಕೆಯ ಕಾರಣವಾಗಿ' ಎಂದಾದರೂ ಇಲ್ಲಿರುವ ಕ್ಷಯಶಬ್ದಕ್ಕೆ ಸಂದರ್ಭಾನು ಸಾರವಾಗಿ ಮೃತ್ಯು ಎಂದು ಅರ್ಥಮಾಡಬೇಕಾಗಿದೆ.

ಜನಮೇಜಯಮಹಾರಾಜ! ಕುರುರಾಜನಾದ ಯುಧಿಷ್ಠಿರನು ಇಷ್ಟು ಹೇಳಿ ವಿರಮಿಸಿದನು. ಬಳಿಕ ಕುಂತಿಯ ಮಕ್ಕಳಲ್ಲಿ ಕಡೆಯವನಾದ ಅರ್ಜುನನು ಮಾತನಾಡತೊಡಗಿದನು."

ಒನೆಯ ಅಧ್ಯಾಯವು ಮುಗಿಯಿತು.



## ಅರ್ಜುನನು ಯುಧಿಷ್ಠಿರನ ಅಭಿಪ್ರಾಯವನ್ನು ನಿರಾಕರಿಸುತ್ತಾ ಐಶ್ವರ್ಯದ ಮಹತ್ತ್ವವನ್ನು ಪ್ರತಿಪಾದಿಸಿದುದು : ರಾಜಧರ್ಮದ ಪರಿಪಾಲನೆಯೇ ಕ್ಷತ್ರಿಯರಿಗೆ ಶ್ರೇಷ್ಠವಾದ ಮಾರ್ಗವೆಂದು ಪ್ರತಿಪಾದಿಸುತ್ತಾ ಯಜ್ಞಮಾಡುವಂತೆ ಯುಧಿಷ್ಠಿರನನ್ನು ಪ್ರೇರಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ಹೇಳಿದ ಮಾತುಗಳಿಂದ ಅರ್ಜುನನು–ಯುದ್ಧದಲ್ಲಿ ಅನೇಕರನ್ನು ಸಂಹರಿಸಿದ, ಅದರಲ್ಲಿಯೂ ಸಹೋದರನಾದ ಕರ್ಣನನ್ನು ಸಂಹರಿಸಿದ ತನ್ನನ್ನೇ ಧರ್ಮಜನು ಪರೋಕ್ಷವಾಗಿ ಆಕ್ಷೇಪಿಸುತ್ತಿರುವನೆಂದು ಭಾವಿಸಿ ಸಹನೆಯನ್ನು ಕಳೆದುಕೊಂಡನು. ಉಗ್ರಪರಾಕ್ರಮನಾದ, ಮಹಾತೇಜಸ್ವಿಯಾದ, ವಾದಮಾಡುವುದರಲ್ಲಿಯೂ ದೃಢವಾದ ಶಕ್ತಿಯನ್ನು ಹೊಂದಿದ್ದ, ಇಂದ್ರಪುತ್ರನಾದ ಅರ್ಜುನನು ತನ್ನ ಉಗ್ರರೂಪವನ್ನು ತೋರ್ಪಡಿಸುತ್ತಾ, ಅವುಡುಗಳನ್ನು ಕಚ್ಚುತ್ತಾ, ಗಹ-ಗಹಿಸಿ ನಗುತ್ತಾ ತತ್ಕಾಲಯೋಗ್ಯವಾದ ಈ ಮಾತುಗಳನ್ನು ಹೇಳಿದನು :

**ಅಹೋ ದುಃಖಮಹೋ ಕೃಚ್ಛ್ರಮಹೋ ವೈಕ್ಲವ್ಯಮುತ್ತಮಮ್ ।**
**ಯತ್ಕೃತ್ವಾಮಾನುಷಂ ಕರ್ಮ ತ್ಯಜೇಥಾಃ ಶ್ರಿಯಮುತ್ತಮಾಮ್ ॥**

"ಮಹಾರಾಜ! ಈ ನಿನ್ನ ನಿರ್ಧಾರವಾದರೋ ಅತ್ಯಂತದುಃಖಕರವೂ, ಕಷ್ಟವನ್ನುಂಟುಮಾಡುವುದೂ ಆಗಿದೆ. ನಿನ್ನ ವಿಹ್ವಲತೆಯು (ದುಃಖವು) ಮಿತಿಮೀರಿಹೋಗಿದೆ. ಅಮಾನುಷಕಾರ್ಯವನ್ನು ಮಾಡಿ ಸಂಪಾದಿಸಿರುವ ರಾಜ್ಯಲಕ್ಷ್ಮಿಯನ್ನು ತ್ಯಜಿಸಬೇಕೆಂದಿರುವೆಯಲ್ಲವೇ?

ಶತ್ರುಗಳೆಲ್ಲರನ್ನೂ ಸಂಹರಿಸಿ ಸ್ವಧರ್ಮದಿಂದ ಜಯಿಸಲ್ಪಟ್ಟಿರುವ ಭೂಮಂಡಲವನ್ನು ಪಡೆದುಕೊಂಡನಂತರ ನಿನ್ನ ಅಲ್ಪಬುದ್ಧಿಯ ಪರಿಣಾಮ ದಿಂದಾಗಿ ಈ ರೀತಿಯಲ್ಲಿ ರಾಜ್ಯ-ಕೋಶಾದಿಗಳೆಲ್ಲವನ್ನೂ ಹೇಗೆ ತ್ಯಜಿಸುವೆ?



**ಕ್ಲೀಬಸ್ಯ ಹಿ ಕುತೋ ರಾಜ್ಯಂ ದೀರ್ಘಸೂತ್ರಸ್ಯ ವಾ ಪುನಃ ।**
**ಕಿಮರ್ಥಂ ಚ ಮಹೀಪಾಲಾನವಧೀಃ ಕ್ರೋಧಮೂರ್ಛಿತಃ ॥೫॥**

ಹೇಡಿಗೆ ಮತ್ತು ಸೋಮಾರಿಗೆ ರಾಜ್ಯವು ಹೇಗೆ ಲಭಿಸೀತು? ನಿನಗೆ ರಾಜ್ಯವು ಬೇಡವಾಗಿದ್ದರೆ–ಕ್ರೋಧಾಭಿಭೂತನಾಗಿ ಎಲ್ಲ ರಾಜರನ್ನಾದರೂ ಏಕೆ ಸಂಹರಿಸಿದೆ? ( ಎಲ್ಲ ರಾಜರ ಸಂಹಾರಕ್ಕೂ ಏಕೆ ಕಾರಣನಾದೆ? )

**ಯೋ ಹ್ಯಾಜಿಜೀವಿಷೇದ್ಭೈಕ್ಷ್ಯಂ ಕರ್ಮಣಾ ನೈವ ಕಸ್ಯಚಿತ್ ।**
**ಸಮಾರಮ್ಭಾನ್ಬುಭೂಷೇತ ಹತಸ್ವಸ್ತಿರಕಿಂಚನಃ ।**
**ಸರ್ವಲೋಕೇಷು ವಿಖ್ಯಾತೋ ನ ಪುತ್ರಪಶುಸಂಹಿತಃ ॥೬॥**

ಯಾವನ ಕಲ್ಯಾಣಸಾಧನಗಳೆಲ್ಲವೂ ನಷ್ಟವಾಗಿಹೋಗಿರುವುವೋ, ಯಾವನು ದಟ್ಟದರಿದ್ರನೋ, ಯಾವನು ಈ ಪ್ರಪಂಚದಲ್ಲಿ ಹೇಳ-ಹೆಸರಿಲ್ಲದವನಾಗಿರುವನೋ, ಯಾವನಿಗೆ ಪತ್ನೀ-ಪುತ್ರರಾಗಲೀ–ಪಶುಸಮೃದ್ಧಿಯಾಗಲೀ ಇಲ್ಲವೋ, ಯಾವನು ಅಸಾಮರ್ಥ್ಯದ ಕಾರಣದಿಂದ ರಾಜ್ಯ-ಧನ ಸಂಗ್ರಹಗಳನ್ನು ಮಾಡಲಾರನೋ–ಅಂತಹವನು ಭಿಕ್ಷೆಯಿಂದ ಜೀವನವನ್ನು ನಿರ್ವಹಿಸಲು ಅಪೇಕ್ಷಿಸುವುದು ಯೋಗ್ಯವಾಗಿದೆ.

**ಕಾಪಾಲೀಂ ನೃಪ ಪಾಪಿಷ್ಠಾಂ ವೃತ್ತಿಮಾಸಾದ್ಯ ಜೀವತಃ ।**
**ಸಂತ್ಯಜ್ಯ ರಾಜ್ಯಮೃದ್ಧಂ ತೇ ಲೋಕೋಽಯಂ ಕಿಂ ವದಿಷ್ಯತಿ ॥೭॥**

ಮಹಾರಾಜ! ಸರ್ವಸಮೃದ್ಧವಾದ ಈ ರಾಜ್ಯಲಕ್ಷ್ಮಿಯನ್ನು ಪರಿತ್ಯಜಿಸಿ, ಕೈಯಲ್ಲಿ ಕಪಾಲವನ್ನು ಹಿಡಿದು ಭಿಕ್ಷೆಬೇಡುತ್ತಾ, ಅತ್ಯಂತನೀಚವೃತ್ತಿಯಿಂದ ಜೀವಿಸುವ ನಿನ್ನನ್ನು ನೋಡಿ ಜನರು ಏನೆಂದುಕೊಳ್ಳುತ್ತಾರೆಂಬುದನ್ನಾದರೂ ಯೋಚಿಸಿರುವೆಯಾ?

**ಸರ್ವಾರಮ್ಭಾನ್ಸಮುತ್ಸೃಜ್ಯ ಹತಸ್ವಸ್ತಿರಕಿಂಚನಃ ।**
**ಕಸ್ಮಾದಾಶಂಸಸೇ ಭೈಕ್ಷ್ಯಂ ಕರ್ತುಂ ಪ್ರಾಕೃತವತ್ಪ್ರಭೋ ॥೮॥**

ಪ್ರಭುವೇ! ನೀನೀಗ ಸಕಲವಿಧವಾದ ಉದ್ಯೋಗಗಳನ್ನೂ ಪರಿತ್ಯಜಿಸಿ, ಕಲ್ಯಾಣಸಾಧಕವಾದ ಕಾರ್ಯಗಳಿಂದ ಹೀನನಾಗಿ, ದರಿದ್ರನಾದ ಸಾಮಾನ್ಯ ಮನುಷ್ಯನಂತೆ ಭಿಕ್ಷಾಟನೆಮಾಡಿಕೊಂಡಿರಲು ಏಕೆ ಆಸೆಪಡುವೆ?

**ಅಸ್ಮಿನ್ರಾಜಕುಲೇ ಜಾತೋ ಜಿತ್ವಾ ಕೃತ್ಸ್ನಾಂ ವಸುಂಧರಾಮ್ ।**
**ಧರ್ಮಾರ್ಥಾವಖಿಲೌ ಹಿತ್ವಾ ವನಂ ಮೌಢ್ಯಾತ್ಪ್ರತಿಷ್ಠಸೇ ॥೯॥**

ಸರ್ವಶ್ರೇಷ್ಠವಾದ ಈ ಕುರುರಾಜರ ವಂಶದಲ್ಲಿ ಜನ್ಮತಾಳಿರುವೆ. ಅಖಂಡಭೂಮಂಡಲವನ್ನೂ ಯುದ್ಧದ ಮೂಲಕವಾಗಿ ಜಯಿಸಿಯಾಗಿದೆ. ಈ ಸಮಯದಲ್ಲಿ ನೀನು ಕೇವಲ ಮೂರ್ಖತೆಯ ಕಾರಣದಿಂದ ಧರ್ಮಾರ್ಥಗಳೆರಡನ್ನೂ ಪರಿತ್ಯಜಿಸಿ ಕಾಡಿಗೆ ಹೊರಟುನಿಂತಿರುವೆ.

**ಯದೀಮಾನಿ ಹವೀಂಷೀಹ ವಿಮಥಿಷ್ಯನ್ತ್ಯಸಾಧವಃ ।**
**ಭವತಾ ವಿಪ್ರಹೀಣಾನಿ ಪ್ರಾಪ್ತಂ ತ್ವಾಮೇವ ಕಿಲ್ಬಿಷಮ್ ॥೧೦॥**

ಒಂದು ವೇಳೆ ನೀನು ಈ ಸಮಯದಲ್ಲಿ ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ತೆರಳಿದರೆ, ಇಲ್ಲಿ ಯಜ್ಞದ ಸಲುವಾಗಿ ಸಂಗ್ರಹಿಸಲ್ಪಟ್ಟಿರುವ ಹವಿಸ್ಸುಗಳನ್ನು ( ಸಾಮಗ್ರಿಗಳನ್ನು ) ದುಷ್ಟರು ಹಾಳುಮಾಡುತ್ತಾರೆ. ದುಷ್ಟರು ಹಾಳುಮಾಡಿದರೂ ಆ ಸಾಮಗ್ರಿಗಳನ್ನು ನೀನೇ ಹಾಳುಮಾಡಿದಂತಾಗಿ ಆ ಪಾಪವು ನಿನಗೇ ಅಂಟಿಕೊಳ್ಳುತ್ತದೆ. ( ರಾಜ್ಯವನ್ನು ಜಯಿಸಿದ ನಂತರ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುವುದೂ ಮತ್ತು ಯಜ್ಞ-ಯಾಗಾದಿ ಗಳನ್ನು ಮಾಡುವುದೂ ನಿನ್ನ ಕರ್ತವ್ಯವಾಗಿರುತ್ತದೆ. ಒಂದು ವೇಳೆ ಹಾಗೆ ಮಾಡದೇ ಎಲ್ಲವನ್ನೂ ಪರಿತ್ಯಜಿಸಿ ನೀನು ಅರಣ್ಯಕ್ಕೆ ಹೋದೆಯಾದರೆ ಇತರರೂ ನಿನ್ನನ್ನೇ ಅನುಕರಣೆಮಾಡುತ್ತಾರೆ. ದೇಶದಲ್ಲಿ ಧರ್ಮಕಾರ್ಯಗಳೇ ನಡೆಯದಂತಾಗುತ್ತವೆ. ಯಜ್ಞಗಳೂ ನಡೆಯುವುದಿಲ್ಲ. ಇದಕ್ಕೆ ಕಾರಣನು ನೀನೇ ಆಗುವೆ. ಧರ್ಮಲೋಪದ ಪಾಪವು ನಿನಗೇ ಪ್ರಾಪ್ತವಾಗುತ್ತದೆ. )

**ಆಕಿಂಚನ್ಯಂ ಮುನೀನಾಂ ಚ ಇತಿ ವೈ ನಹುಷೋಽಬ್ರವೀತ್ ।**
**ಕೃತ್ವಾ ನೃಶಂಸಂ ಹ್ಯಧನೇ ಧಿಗಸ್ತ್ವಧನತಾಮಿಹ ॥೧೧॥**

ನಹುಷಚಕ್ರವರ್ತಿಯು ನಿರ್ಧನನಾಗಿದ್ದ ಸಮಯದಲ್ಲಿ ಕ್ರೂರವಾದ ಕರ್ಮವನ್ನು ಮಾಡಿ ದುಃಖಪೂರ್ಣವಾದ ಈ ಮಾತನ್ನು ಹೇಳಿದನು : 'ನಿರ್ಧನತ್ವಕ್ಕೆ ಧಿಕ್ಕಾರವಿರಲಿ! ಸರ್ವತ್ಯಾಗಮಾಡಿ ದಾರಿದ್ರ್ಯವನ್ನು ಅನುಭವಿ ಸುವುದು ಮುನಿಗಳ ಧರ್ಮವಾಗಿದೆ. ಅದು ರಾಜನ ಧರ್ಮವಲ್ಲ.'

**ಅಶ್ವಸ್ತನಮೃಷೀಣಾಂ ಹಿ ವಿದ್ಯತೇ ವೇದ ತದ್ಭವಾನ್ ।**
**ಯಂ ತ್ವಿಮಂ ಧರ್ಮಮಿತ್ಯಾಹುರ್ಧನಾದೇಷ ಪ್ರವರ್ತತೇ ॥೧೨॥**

ನಾಳೆಗೆಂದು ಸಂಗ್ರಹವನ್ನು ಮಾಡದೇ ಅಹನ್ಯಹನಿ ಕಾಲಕ್ಷೇಪಕ್ಕಾಗಿ ಭಿಕ್ಷೆಬೇಡುವುದು ಋಷಿಗಳ ಧರ್ಮವೆಂಬುದನ್ನು ನೀನು ತಿಳಿದವನಾಗಿರುವೆ. ಅದೇ ರೀತಿಯಲ್ಲಿ ಕ್ಷತ್ರಿಯಧರ್ಮವೆಂದು ಯಾವ ಜೀವನದ ರೀತಿಯನ್ನು ನಿರೂಪಿಸಿರುತ್ತಾರೆಯೋ ಆ ಧರ್ಮವು ಧನದ ಮೂಲಕವಾಗಿಯೇ ಸಂಪನ್ನ

ವಾಗುತ್ತದೆ. (ಒಬ್ಬರಿಗೆ ಒಂದು ಜೀವನವಿಧಾನವು ಧರ್ಮವಾದರೆ ಮತ್ತೊಬ್ಬರಿಗೆ ಆ ಜೀವನವಿಧಾನವು ಅಧರ್ಮವಾಗುತ್ತದೆ. ಋಷಿಗಳೂ ಮತ್ತು ಬ್ರಾಹ್ಮಣರೂ ಅಹನ್ಯಹನಿ ಜೀವನಕ್ಕೆ ಬೇಕಾಗುವಷ್ಟನ್ನು ಮಾತ್ರ ಭಿಕ್ಷಾಟನೆಯಿಂದ ಅಥವಾ ಉಂಛವೃತ್ತಿಯಿಂದ ಸಂಗ್ರಹಿಸಬೇಕೇ ಹೊರತು ಧನ-ಧಾನ್ಯಗಳನ್ನು ಕೂಡಿಟ್ಟುಕೊಳ್ಳಬಾರದು. ಎಂದರೆ : ಅವರು ಧನದ ಆಸೆ ಯನ್ನು ಸಂಪೂರ್ಣವಾಗಿ ತೊರೆದಿರಬೇಕು. ಇದು ಋಷಿಧರ್ಮ ಅಥವಾ ಬ್ರಾಹ್ಮಣಧರ್ಮ. ರಾಜನಾದವನು ರಾಜ್ಯ-ಕೋಶಾದಿಗಳನ್ನು ವೃದ್ಧಿಗೊಳಿಸುತ್ತಲೇ ಇರಬೇಕು. ಇದು ರಾಜಧರ್ಮ. ಇದು ವಿಪರ್ಯಾಸವಾದರೆ ದೇಶಕ್ಕೇ ಹಾನಿಯಾಗುತ್ತದೆ. ತಮಗೆ ಸಲ್ಲದ ಧರ್ಮವನ್ನು ಆಚರಿಸುವವರೂ ವಿನಾಶಹೊಂದುತ್ತಾರೆ. **ಅಸನ್ತುಷ್ಟೋ ದ್ವಿಜೋ ನಷ್ಟಃ ಸಂತುಷ್ಟಶ್ಚ ಮಹೀಪತಿಃ ।** ತೃಪ್ತಿಯಿಲ್ಲದ ಬ್ರಾಹ್ಮಣನು ಹಾಳಾಗುತ್ತಾನೆ. ಅಲ್ಪತೃಪ್ತನಾದ ರಾಜನೂ ಹಾಳಾಗುತ್ತಾನೆ. )

**ಧರ್ಮಂ ಸಂಹರತೇ ತಸ್ಯ ಧನಂ ಹರತಿ ಯಸ್ಯ ಸಃ ।**
**ಹ್ರಿಯಮಾಣೇ ಧನೇ ರಾಜನ್ವಯಂ ಕಸ್ಯ ಕ್ಷಮೇಮಹಿ ॥೧೩॥**

ಧನ-ಧರ್ಮ ಎರಡೂ ಒಂದಕ್ಕೊಂದು ಪೂರಕಗಳಾಗಿವೆ. ಒಬ್ಬನ ಧನವನ್ನು ಅಪಹರಿಸಿದರೆ ಅವನ ಧರ್ಮವನ್ನೂ ಅಪಹರಿಸಿದಂತೆಯೇ ಆಗುತ್ತದೆ. (ಇದಕ್ಕೆ ನಾವೇ ಸಾಕ್ಷೀಭೂತರಾಗಿದ್ದೇವೆ. ನಮ್ಮ ರಾಜ್ಯ-ಕೋಶಾದಿಗಳೊಡನೆ ಶತ್ರುಗಳು ನಮ್ಮ ಧರ್ಮವನ್ನೂ ಅಪಹರಿಸಿಬಿಟ್ಟಿರುವರು. ಹದಿಮೂರು ವರ್ಷಗಳ ಕಾಲ ಕ್ಷತ್ರಧರ್ಮಾನುಸಾರವಾಗಿ ರಾಜ್ಯಭಾರಮಾಡಲು ಮತ್ತು ಯಜ್ಞಗಳನ್ನು ಮಾಡಲು ನಮಗೆ ಸಾಧ್ಯವಾಗಲೇ ಇಲ್ಲ.) ಹೀಗೆ ನಮ್ಮ ರಾಜ್ಯ-ಕೋಶಗಳು ಶತ್ರುಗಳಿಂದ ಅಪಹೃತವಾಗಲಾಗಿ ನಾವು ಯಾವ ಧರ್ಮವನ್ನು ಮಾಡಲು ತಾನೇ ಸಮರ್ಥರಾದೇವು? ನಾವು ಯಾರನ್ನು ತಾನೇ ಕ್ಷಮಿಸಲು ಸಾಧ್ಯವಾಗುವುದು? ಅಪಹರಿಸಿದವನು ಸೋದರನೇ ಆಗಿರಬಹುದು ; ತಂದೆಯೇ ಆಗಿರಬಹುದು. ಧನವನ್ನೂ ಅದರ ಜೊತೆಯಲ್ಲಿಯೇ ಧರ್ಮವನ್ನೂ ಅಪಹರಿಸಿರುವಾಗ ನಾವು ಕ್ಷಮೆಯಿಂದಿರಲು ಸಾಧ್ಯವಾಗುವುದೇ? ಆದುದರಿಂದಲೇ ನಮ್ಮ ಧರ್ಮವನ್ನು ಕಾಪಾಡಿಕೊಳ್ಳಲು ನಾವು ಶತ್ರುಗಳಿಂದ ಅಪಹೃತವಾದ ನಮ್ಮ ರಾಜ್ಯವನ್ನು ಕ್ಷತ್ರಿಯೋಚಿತವಾದ

ಯುದ್ಧದಲ್ಲಿ ಗೆದ್ದುಕೊಂಡಿರುತ್ತೇವೆ. ಇದು ಕ್ಷತ್ರಿಯರಾದ ನಮಗೆ ಯೋಗ್ಯವೇ ಆಗಿದೆ.

**ಅಭಿಶಸ್ತಂ ಪ್ರಪಶ್ಯನ್ತಿ ದರಿದ್ರಂ ಪಾರ್ಶ್ವತಃ ಸ್ಥಿತಮ್ ।**
**ದರಿದ್ರಂ ಪಾತಕಂ ಲೋಕೇ ನ ತಚ್ಛಂಸಿತುಮರ್ಹತಿ ॥೧೪॥**

ಲೋಕದಲ್ಲಿ ಜನರು ತಮ್ಮ ಪಕ್ಕದಲ್ಲಿ ನಿಂತಿರುವ (ನಿಂತು ಭಿಕ್ಷೆ ಬೇಡುವ) ದರಿದ್ರನನ್ನು ನೋಡಿ 'ಇವನೆಲ್ಲೋ ಶಾಪಗ್ರಸ್ತನಾಗಿ ಹುಟ್ಟಿದ್ದಾನೆ'–ಎಂದು ತಿಳಿಯುತ್ತಾರೆ. ಈ ಲೋಕದಲ್ಲಿ ದಾರಿದ್ರ್ಯವು ಪಾತಕವೆಂದೇ ಭಾವಿಸಲ್ಪಟ್ಟಿದೆ. ಆದುದರಿಂದ ಅಂತಹ ದಾರಿದ್ರ್ಯವನ್ನೆಂದಿಗೂ ನೀನು ಪ್ರಶಂಸೆಮಾಡಬೇಡ. (ದರಿದ್ರನಾಗಲು ಇಚ್ಛಿಸಬೇಡ.)

**ಪತಿತಃ ಶೋಚ್ಯತೇ ರಾಜನ್ನಿರ್ಧನಶ್ಚಾಪಿ ಶೋಚ್ಯತೇ ।**
**ವಿಶೇಷಂ ನಾಧಿಗಚ್ಛಾಮಿ ಪತಿತಸ್ಯಾಧನಸ್ಯ ಚ ॥೧೫॥**

ಪತಿತನಾದವನು ಶೋಚನೀಯವಾದ ಸ್ಥಿತಿಯಲ್ಲಿರುತ್ತಾನೆ. ಧನಹೀನನಾದವನೂ ಶೋಚನೀಯವಾದ ಸ್ಥಿತಿಯಲ್ಲಿಯೇ ಇರುತ್ತಾನೆ. ಆದುದರಿಂದ ಪತಿತನಿಗೂ ಮತ್ತು ದರಿದ್ರನಿಗೂ ನಾನು ಯಾವ ವಿಧವಾದ ಅಂತರವನ್ನೂ ಕಾಣುವುದಿಲ್ಲ. (ಧರ್ಮಭ್ರಷ್ಟ-ಕರ್ಮಭ್ರಷ್ಟ-ಕರ್ತವ್ಯಭ್ರಷ್ಟರಿಗೆ ಪತಿತರೆನ್ನುತ್ತಾರೆ.)

**ಅರ್ಥೇಭ್ಯೋ ಹಿ ವಿವೃದ್ಧೇಭ್ಯಃ ಸಮ್ಭೃತೇಭ್ಯಸ್ತತಸ್ತತಃ।**
**ಕ್ರಿಯಾಃ ಸರ್ವಾಃ ಪ್ರವರ್ತನ್ತೇ ಪರ್ವತೇಭ್ಯ ಇವಾಪಗಾಃ ॥೧೬॥**

ಪರ್ವತಗಳಿಂದ ಅನೇಕ ನದಿಗಳು ಹುಟ್ಟಿ ಹರಿಯುವಂತೆ–ಅಲ್ಲಲ್ಲಿಂದ ಕಪ್ಪ-ಕಾಣಿಕೆಗಳ ರೂಪದಲ್ಲಿ ವೃದ್ಧಿಹೊಂದಿದ ಐಶ್ವರ್ಯಗಳಿಂದ ಎಲ್ಲ ವಿಧವಾದ ಶುಭಕರ್ಮಗಳೂ ಪ್ರವೃತ್ತವಾಗುತ್ತವೆ. ಬೊಕ್ಕಸದಲ್ಲಿ ಹಣವು ತುಂಬಿದಂತೆಲ್ಲಾ ಸತ್ಕಾರ್ಯಗಳನ್ನೂ, ಯಜ್ಞಾದಿಗಳನ್ನೂ ಮಾಡಲು ಪುನಃ ಪ್ರವೃತ್ತಿಯುಂಟಾಗುತ್ತದೆ. ಆದುದರಿಂದ ಎಲ್ಲ ವಿಧವಾದ ಶುಭಕರ್ಮಗಳಿಗೂ ಧನವೇ ಮೂಲವಾಗಿರುತ್ತದೆ.

**ಅರ್ಥಾದ್ಧರ್ಮಶ್ಚ ಕಾಮಶ್ಚ ಸ್ವರ್ಗಶ್ಚೈವ ನರಾಧಿಪ ।**
**ಪ್ರಾಣಯಾತ್ರಾಪಿ ಲೋಕಸ್ಯ ವಿನಾ ಹ್ಯರ್ಥಂ ನ ಸಿದ್ಧ್ಯತಿ ॥೧೭॥**

ನರೇಶ್ವರ! ಹೆಚ್ಚು ಹೇಳುವುದೇನಿದೆ? ಧನದಿಂದಲೇ ಧರ್ಮಾಚರಣೆಯು ಸಾಧ್ಯವಾಗುತ್ತದೆ. ಧನವಿದ್ದರೆ ಮಾತ್ರ ಕಾಮೋಪಭೋಗಗಳನ್ನು ಅನುಭವಿಸಲು ಸಾಧ್ಯವಾಗುತ್ತದೆ. ಧನವಿದ್ದರೆ ಯಜ್ಞಗಳನ್ನು ಮಾಡಿ ಸ್ವರ್ಗವನ್ನೂ ಪಡೆದುಕೊಳ್ಳಬಹುದು. ಲೋಕದಲ್ಲಿ ಜೀವನದ ನಿರ್ವಹಣೆಯೂ ಧನವಿಲ್ಲದಿದ್ದರೆ ಸಾಧ್ಯವೇ ಆಗುವುದಿಲ್ಲ.

**ಅರ್ಥೇನ ಹಿ ವಿಹೀನಸ್ಯ ಪುರುಷಸ್ಯಾಲ್ಪಮೇಧಸಃ ।**
**ವಿಚ್ಛಿದ್ಯನ್ತೇ ಕ್ರಿಯಾಃ ಸರ್ವಾ ಗ್ರೀಷ್ಮೇ ಕುಸರಿತೋ ಯಥಾ ॥೧೮॥**

ಗ್ರೀಷ್ಮರ್ತುವಿನಲ್ಲಿ ಚಿಕ್ಕ-ಪುಟ್ಟನದಿಗಳು ಒಣಗಿಹೋಗುವಂತೆ ಅಲ್ಪಬುದ್ಧಿಯವನಾದ ಧನಹೀನನಾದ ಪುರುಷನ ಕಾರ್ಯಗಳೆಲ್ಲವೂ ನಾಮಾವಶೇಷವಾಗುತ್ತವೆ.

**ಯಸ್ಯಾರ್ಥಾಸ್ತಸ್ಯ ಮಿತ್ರಾಣಿ ಯಸ್ಯಾರ್ಥಾಸ್ತಸ್ಯ ಬಾನ್ಧವಾಃ ।**
**ಯಸ್ಯಾರ್ಥಾಃ ಸ ಪುಮಾಂಲ್ಲೋಕೇ ಯಸ್ಯಾರ್ಥಾಃ ಸ ಚ ಪಣ್ಡಿತಃ ॥೧೯॥**

ಹಣವು ಯಾವನಲ್ಲಿರುವುದೋ ಅವನ ಬಳಿಗೇ ಮಿತ್ರರು ಬರುತ್ತಾರೆ. ಐಶ್ವರ್ಯವು ಇರುವವನ ಬಳಿಗೇ ಬಂಧುಗಳೂ ಹುಡುಕಿಕೊಂಡು ಬರುತ್ತಾರೆ. ಹಣವಿದ್ದವನೇ ಲೋಕದಲ್ಲಿ ಪುರುಷನೆನಿಸಿಕೊಳ್ಳುತ್ತಾನೆ. ಐಶ್ವರ್ಯಗಳು ಯಾವನವೋ ಅವನೇ ಪಂಡಿತನೆಂದು ಹೇಳಿಸಿಕೊಳ್ಳುತ್ತಾನೆ. (ಅರ್ಜುನನು ಹೇಳುತ್ತಿರುವ ಮಾತುಗಳೆಲ್ಲವೂ ಸಾರ್ವಕಾಲಿಕ ಸತ್ಯವಾದುವುಗಳೇ ಆಗಿವೆ. ಹಣವಿದ್ದವನಿಗೆ ಅನೇಕರು ಮಿತ್ರರಾಗುತ್ತಾರೆ. ಐಶ್ವರ್ಯವಿದ್ದವನಲ್ಲಿಗೆ ಅತ್ಯಂತ ದೂರದ ಬಂಧುಗಳೂ ತಾವು ಬಹಳ ಹತ್ತಿರದ ಬಂಧುಗಳೆಂದು ಹೇಳಿಕೊಂಡು ಬರುತ್ತಾರೆ. ಐಶ್ವರ್ಯವಿರುವವನನ್ನು ಜನರು ಗಣ್ಯನಾದ ಮನುಷ್ಯನೆಂದು ಪರಿಗಣಿಸುತ್ತಾರೆ. ಐಶ್ವರ್ಯವಿದ್ದವನೇ ಪಂಡಿತನೂ ಆಗುತ್ತಾನೆ. ಅವನು ಹೇಳುವುದನ್ನು ಯಾರೂ ವಿರೋಧಿಸಲು ಹೋಗುವುದಿಲ್ಲ. ಅವನು ಹೇಳುವುದೇ ವೇದವಾಕ್ಯವಾಗುತ್ತದೆ.)

**ಅಧನೇನಾರ್ಥಕಾಮೇನ ನಾರ್ಥಃ ಶಕ್ಯೋ ವಿಧಿತ್ಸಿತುಮ್ ।**
**ಅರ್ಥೈರರ್ಥಾ ನಿಬಧ್ಯನ್ತೇ ಗಜೈರಿವ ಮಹಾಗಜಾಃ ॥೨೦॥**

ದರಿದ್ರನಾದವನು ಅರ್ಥವನ್ನು ಅಪೇಕ್ಷಿಸಿದರೂ ಅವನಿಂದ ಅಪಾರ ಧನವನ್ನು ಸಂಗ್ರಹಿಸಲು ಸಾಧ್ಯವಾಗುವುದಿಲ್ಲ. ಅದಕ್ಕೆ ಪ್ರತಿಯಾಗಿ ಧನಿಕನಲ್ಲಿರುವ ಧನವು ವೃದ್ಧಿಸುತ್ತಲೇ ಇರುತ್ತದೆ. ಅವನಿಗೆ ಐಶ್ವರ್ಯವು ಹಲವು ಕಡೆಗಳಿಂದ ಕೂಡಿಕೊಂಡು ಬರುತ್ತಿರುತ್ತದೆ. ಪಳಗಿರುವ ಆನೆಗಳು ಅರಣ್ಯದಲ್ಲಿರುವ ಸಲಗಗಳನ್ನು ಸೆಳೆದುತಂದು ಪಳಗಿಸಲು ಅನುವುಮಾಡಿಕೊಡುವಂತೆ ಧನಿಕನಲ್ಲಿರುವ ಐಶ್ವರ್ಯವು ಹೊರಗಿನ ಐಶ್ವರ್ಯವನ್ನು ಸೆಳೆದು ತರಲು ಅನುವುಮಾಡಿಕೊಡುತ್ತದೆ. ('ಧನಿಕರು ಧನಿಕರಾಗುತ್ತಲೇ ಇದ್ದಾರೆ ; ಬಡವರು ತೀರಾ ಬಡವರಾಗುತ್ತಿದ್ದಾರೆ'–ಎಂಬ ಮಾತನ್ನು ನಾವು ಪದೇ-ಪದೇ ಕೇಳುತ್ತಲೇ ಇದ್ದೇವೆ. ಹಣದ ಗುಣವೇ ಅಂತಹುದು. ಅದು ಒಬ್ಬನಲ್ಲಿಯೇ ಬೆಳೆಯುತ್ತಾ ಹೋಗುತ್ತದೆ. ಅರ್ಜುನನು ಹೇಳಿರುವಂತೆ ನಿರ್ಧನನು ಎಷ್ಟೇ ಪ್ರಯತ್ನಿಸಿದರೂ ಊಟ-ಬಟ್ಟೆಗಳಿಗೆ ಸಂಪಾದಿಸಿಕೊಳ್ಳಬಹುದೇ ಹೊರತು ಹಣವನ್ನು ಸಂಗ್ರಹಮಾಡಲು ಸಾಧ್ಯವಾಗುವುದಿಲ್ಲ. ಯುಧಿಷ್ಠಿರನು ರಾಜ್ಯ-ಕೋಶಾದಿಗಳನ್ನು ಪಡೆದುಕೊಂಡು ಐಶ್ವರ್ಯವಂತನಾಗಿರುವಾಗ ದಾರಿದ್ರ್ಯವನ್ನು ಬಯಸುವುದು ಬೇಡ. ಒಂದು ವೇಳೆ ಅವನ ಅಪೇಕ್ಷೆಯಂತೆ ದರಿದ್ರನಾಗಿಬಿಟ್ಟರೆ ಪುನಃ ಎಷ್ಟೇ ಕಷ್ಟದಿಂದಲೂ ಐಶ್ವರ್ಯವಂತನಾಗಲು ಸಾಧ್ಯವಾಗುವುದಿಲ್ಲ. ದಾರಿದ್ರ್ಯವೆಂಬುದೇ ಅಂತಹುದು. ಇದು ಅರ್ಜುನನ ಅಭಿಪ್ರಾಯವಾಗಿದೆ.)

**ಧರ್ಮಃ ಕಾಮಶ್ಚ ಸ್ವರ್ಗಶ್ಚ ಹರ್ಷಃ ಕ್ರೋಧಃ ಶ್ರುತಂ ದಮಃ ।**
**ಅರ್ಥಾದೇತಾನಿ ಸರ್ವಾಣಿ ಪ್ರವರ್ತನ್ತೇ ನರಾಧಿಪ ॥೨೧॥**

ನರಾಧಿಪನೇ! ನಾನು ಹಿಂದೆಯೇ ಹೇಳಿದಂತೆ ಧನದಿಂದಲೇ ಧರ್ಮಾಚರಣೆಯು ಸಾಧ್ಯವಾಗುವುದು. ಧನದಿಂದ ಕಾಮನೆಗಳನ್ನು ಪೂರ್ಣಮಾಡಿಕೊಳ್ಳಬಹುದು. ಧನದಿಂದ ಯಜ್ಞಮಾಡಿ ಸ್ವರ್ಗವನ್ನೂ ಪಡೆಯಬಹುದು. ಹಣವಿದ್ದರೇ ಹರ್ಷ. ಹಣವಂತನ ಕ್ರೋಧವು ಫಲದಾಯಕವಾಗುತ್ತದೆ. ಹಣವಿದ್ದರೇ ವಿದ್ಯಾಭ್ಯಾಸವು ಸಾಧ್ಯವಾಗುತ್ತದೆ. ಧನಿಕನಾಗಿದ್ದರೆ ಶತ್ರುಗಳನ್ನು ದಮನಮಾಡಬಹುದು. ಈ ಎಲ್ಲವೂ ಧನದಿಂದಲೇ ಸಿದ್ಧವಾಗುತ್ತವೆ.

(**ಅರ್ಥಾತ್ ಶ್ರುತಂ**–ಹಣವಿದ್ದರೆ ಶಾಸ್ತ್ರಗಳ ಲಾಭವಾಗುತ್ತದೆ–ಎಂಬುದು ಇಲ್ಲಿಯ ಅಭಿಪ್ರಾಯ. ವಿದ್ವಾಂಸರು ಧನಿಕರ ಮನೆಗಳಿಗೆ ಹೋಗಿ ಸಂಭಾವನೆ ಯನ್ನು ಪಡೆದು ವೇದಾಂತಾದಿ ಪಾಠಗಳನ್ನು ಹೇಳುವ ವಾಡಿಕೆಯು ಈಗಲೂ ಇದೆ. ಆಧುನಿಕ ವಿದ್ಯಾಭ್ಯಾಸದಲ್ಲಿ ಹಣದ ವ್ಯಾಪ್ತಿಯೇ ಹೆಚ್ಚಾಗಿದೆ. ಆದುದರಿಂದ **ಅರ್ಥಾತ್ ಶ್ರುತಂ** ಎನ್ನುವುದು ಈಗಿನ ಕಾಲಕ್ಕೆ ಹೆಚ್ಚು ಅನ್ವಯಿಸುತ್ತದೆ.)

**ಧನಾತ್ಕುಲಂ ಪ್ರಭವತಿ ಧನಾದ್ಧರ್ಮಃ ಪ್ರವರ್ಧತೇ ।**
**ನಾಧನಸ್ಯಾಸ್ತ್ಯಯಂ ಲೋಕೋ ನ ಪರಃ ಪುರುಷೋತ್ತಮ ॥೨೨॥**

ಪುರುಷೋತ್ತಮನೇ! ಧನದಿಂದಲೇ ಕುಲದ ಪ್ರತಿಷ್ಠೆಗಳು ಹೆಚ್ಚುತ್ತವೆ. ಧನದಿಂದಲೇ ಧರ್ಮವೂ ವೃದ್ಧಿಯಾಗುತ್ತದೆ. ನಿರ್ಧನನಾದವನಿಗೆ ಈ ಲೋಕದಲ್ಲಿಯೂ ಸುಖವಿಲ್ಲ. ಧರ್ಮಾಚರಣೆಗಳನ್ನು ಮಾಡಲು ಸಾಧ್ಯ ವಾಗದೇ ಇರುವುದರಿಂದ ಪರಲೋಕವೂ ಇಲ್ಲ.

**ನಾಧನೋ ಧರ್ಮಕೃತ್ಯಾನಿ ಯಥಾವದನುತಿಷ್ಠತಿ ।**
**ಧನಾದ್ಧಿ ಧರ್ಮಃ ಸ್ರವತಿ ಶೈಲಾದ್ಗಿರಿನದೀ ಯಥಾ ॥೨೩॥**

ಹಣವಿಲ್ಲದವನು ಧರ್ಮಕಾರ್ಯಗಳನ್ನು ಯಥಾಶಾಸ್ತ್ರವಾಗಿ ಅನು ಷ್ಠಾನಮಾಡಲು ಸಾಧ್ಯವಾಗುವುದಿಲ್ಲ. ಪರ್ವತದಿಂದ ಝರಿಯು ಸ್ರವಿಸು ವಂತೆ ಧನದಿಂದಲೇ ಧರ್ಮವು ಸ್ರವಿಸುತ್ತದೆ.

**ಯಃ ಕೃಶಾರ್ಥಃ ಕೃಶಗವಃ ಕೃಶಭೃತ್ಯಃ ಕೃಶಾತಿಥಿಃ ।**
**ಸ ವೈ ರಾಜನ್ಕೃಶೋ ನಾಮ ನ ಶರೀರಕೃಶಃ ಕೃಶಃ ॥೨೪॥**

ಒಬ್ಬ ಮನುಷ್ಯನ ಶರೀರವು ಕೃಶವಾಗಿರುವ ಮಾತ್ರದಿಂದಲೇ ಅವನು ಕೃಶನೆಂದು ಹೇಳಲಾಗದು. ಧನವು ಯಾವನಲ್ಲಿರುವುದಿಲ್ಲವೋ ಅಥವಾ ಅಲ್ಪಮಾತ್ರವಿರುವುದೋ ಅವನೇ ಕೃಶನು. ಯಾವನಲ್ಲಿ ಗೋಧನವಿರುವು ದಿಲ್ಲವೋ ಅವನು ಕೃಶನು. ಯಾವನ ಬಳಿಯಲ್ಲಿ ಸೇವಕರಿರುವುದಿಲ್ಲವೋ ಅವನೇ ಕೃಶನು. ಯಾವನ ಮನೆಗೆ ಅತಿಥಿಗಳೇ ಹೋಗುವುದಿಲ್ಲವೋ ಅವನೇ ಕೃಶನೆಂಬ ಹೆಸರನ್ನು ಪಡೆಯುತ್ತಾನೆ.

(ಹಣವಿಲ್ಲದವನನ್ನೂ, ಗೋಧನವಿಲ್ಲದವನನ್ನೂ, ಭೃತ್ಯರನ್ನು ಸಾಕ ಲಾಗದವನನ್ನೂ, ಅತಿಥಿಸತ್ಕಾರಮಾಡಲಾಗದವನನ್ನೂ ಕೃಶನೆಂದು ಹೇಳ ಬೇಕೇ ಹೊರತು ಶರೀರವು ಕೃಶವಾಗಿದ್ದ ಮಾತ್ರಕ್ಕೇ ಅಂತಹವನನ್ನು ಕೃಶ ನೆಂದು ಹೇಳಲಾಗುವುದಿಲ್ಲ.)

**ಅವೇಕ್ಷಸ್ವ ಯಥಾನ್ಯಾಯಂ ಪಶ್ಯ ದೇವಾಸುರಂ ಯಥಾ ।**
**ರಾಜನ್ನಿಮನ್ಯಜ್ಞಾತೀನಾಂ ವಧಾದ್ಗೃಧ್ಯನ್ತಿ ದೇವತಾಃ ॥೨೫॥**

ಅಣ್ಣ! ನೀನು ನ್ಯಾಯಕ್ಕೆ ಅನುಸಾರವಾಗಿ ವಿಚಾರಮಾಡಬೇಕು. ದೇವಾಸುರರು ಹೇಗಿರುವರೆಂಬುದನ್ನಾದರೂ ನೋಡು. ದೇವತೆಗಳೂ ಮತ್ತು ಅಸುರರೂ ಒಬ್ಬನೇ ತಂದೆಯ ಮಕ್ಕಳು. ಅರ್ಥಾತ್ ಅಣ್ಣ-ತಮ್ಮಂದಿರೇ ಅಲ್ಲವೇ? ಆದರೆ ದೇವತೆಗಳು ತಮ್ಮ ಜ್ಞಾತಿಬಾಂಧವರಾದ ಅಸುರರ ವಧೆಯಾಗುವುದನ್ನು ಸರ್ವದಾ ಅಪೇಕ್ಷಿಸುವರೇ ಹೊರತು ಮತ್ತೇನನ್ನು ಅಪೇಕ್ಷಿಸುತ್ತಾರೆ? (ನಮಗಿಂತಲೂ ಶ್ರೇಷ್ಠರಾಗಿರುವ ದೇವತೆಗಳನ್ನು ಅನುಸರಿಸುವುದು ಸಾಧುವೇ ಆಗಿದೆಯಲ್ಲವೇ?)

**ನ ಚೇದ್ಧರ್ತವ್ಯಮನ್ಯಸ್ಯ ಕಥಂ ತದ್ಧರ್ಮಮಾರಭೇತ್ ।**
**ಏತಾವಾನೇವ ವೇದೇಷು ನಿಶ್ಚಯಃ ಕವಿಭಿಃ ಕೃತಃ ॥೨೬॥**

**ಅಧ್ಯೇತವ್ಯಾ ತ್ರಯೀ ನಿತ್ಯಂ ಭವಿತವ್ಯಂ ವಿಪಶ್ಚಿತಾ ।**
**ಸರ್ವಥಾ ಧನಮಾಹಾರ್ಯಂ ಯಷ್ಟವ್ಯಂ ಚಾಪಿ ಯತ್ನತಃ ॥೨೭॥**

ರಾಜನಾದವನು ಮತ್ತೊಬ್ಬನ ಧನವನ್ನು ತೆಗೆದುಕೊಳ್ಳದಿದ್ದರೆ ಅವನು ಧರ್ಮಾನುಷ್ಠಾನವನ್ನು ಹೇಗೆ ಆರಂಭಿಸುತ್ತಾನೆ? (ಮಾಡುತ್ತಾನೆ?) ವೇದ-ಶಾಸ್ತ್ರಗಳಲ್ಲಿಯೂ ವಿದ್ವಾಂಸರು ರಾಜನ ಧರ್ಮದ ವಿಷಯವಾಗಿ ಹೀಗೆಯೇ ನಿರ್ಣಯಮಾಡಿರುತ್ತಾರೆ. ರಾಜನಾದವನು ಪ್ರತಿನಿತ್ಯವೂ ವೇದ ಗಳನ್ನು ಅಭ್ಯಾಸಮಾಡುತ್ತಲೇ ಇರಬೇಕು. ವಿದ್ವಾಂಸನಾಗಿರಬೇಕು. ಸರ್ವ ಪ್ರಕಾರಗಳಿಂದಲೂ ಧನವನ್ನು ಸಂಗ್ರಹಿಸಬೇಕು. ಪ್ರಯತ್ನಪೂರ್ವಕವಾಗಿ ಯಜ್ಞಗಳನ್ನೂ ಮಾಡಬೇಕು.

**ದ್ರೋಹಾದ್ದೇವೈರವಾಪ್ತಾನಿ ದಿವಿ ಸ್ಥಾನಾನಿ ಸರ್ವಶಃ ।**
**ದ್ರೋಹಾತ್ಕಿಮನ್ಯಜ್ಜ್ಞಾತೀನಾಂ ಗೃಧ್ಯನ್ತೇ ಯೇನ ದೇವತಾಃ ॥೨೮॥**

ತಮ್ಮ ಜ್ಞಾತಿಸಹೋದರರಾದ ಅಸುರರಿಗೆ ದ್ರೋಹವನ್ನೆಸಗಿಯೇ ದೇವತೆಗಳು ಸ್ವರ್ಗದಲ್ಲಿರುವ ಎಲ್ಲ ಸ್ಥಾನಗಳನ್ನೂ ಪಡೆದುಕೊಂಡರು. ದೇವತೆಗಳು ತಮ್ಮ ಭ್ರಾತೃಗಳೇ ಆದ ಅಸುರರಿಂದ ಧನ ಮತ್ತು ರಾಜ್ಯಗಳನ್ನು ಸ್ವಾಧೀನಪಡಿಸಿಕೊಂಡರು. ಹೀಗೆ ಮಾಡುವುದು ತಮ್ಮ ಜ್ಞಾತಿಗಳಿಗೆ ಎಸಗುವ ದ್ರೋಹವಲ್ಲದೇ ಮತ್ತೇನು? (ಆದುದರಿಂದ ರಾಜಕುಲದ ಜ್ಞಾತಿಗಳಲ್ಲಿ ಒಬ್ಬರು ಮತ್ತೊಬ್ಬರ ರಾಜ್ಯ-ಕೋಶಗಳನ್ನು ಕಸಿದುಕೊಳ್ಳುವುದು ಸ್ವಾಭಾವಿಕವೇ ಆಗಿದೆ. ವೀರನಾದವನು ಹಾಗೆ ಮಾಡುವುದು ಯುಕ್ತವೂ ಆಗಿದೆ. ದೇವತೆಗಳಿಂದಲೇ ಪ್ರಾರಂಭವಾಗಿರುವ ಈ ವ್ಯವಹಾರವು ದೋಷ ಯುಕ್ತವಲ್ಲ.)

**ಇತಿ ದೇವಾ ವ್ಯವಸಿತಾ ವೇದವಾದಾಶ್ಚ ಶಾಶ್ವತಾಃ ।**
**ಅಧೀಯನ್ತೇಽಧ್ಯಾಪಯನ್ತೇ ಯಜನ್ತೇ ಯಾಜಯನ್ತಿ ಚ ॥೨೯॥**

**ಕೃತ್ಸ್ನಂ ತದೇವ ತಚ್ಛ್ರೇಯೋ ಯದಪ್ಯಾದದತೇಽನ್ಯತಃ ।**
**ನ ಪಶ್ಯಾಮೋಽನಪಕೃತಂ ಧನಂ ಕಿಂಚಿತ್ಕ್ವಚಿದ್ವಯಮ್ ॥೩೦॥**

ಯುಧಿಷ್ಠಿರ! ನಾನು ಈ ಧನದ ವಿಷಯವಾಗಿ ಹೇಳಿರುವುದನ್ನು ದೇವತೆಗಳೇ ವ್ಯವಸ್ಥೆಗೊಳಿಸಿ ಕಾರ್ಯರೂಪದಲ್ಲಿಯೂ ತೋರಿಸಿಕೊಟ್ಟಿರುತ್ತಾರೆ. ಇದು ವೇದಗಳ ಸನಾತನಸಿದ್ಧಾಂತವೂ ಆಗಿದೆ. ಧನದಿಂದಲೇ ದ್ವಿಜರು ವೇದಗಳ ಅಧ್ಯಯನವನ್ನು ಮಾಡುತ್ತಾರೆ ಮತ್ತು ಅಧ್ಯಾಪನಮಾಡಿಸುತ್ತಾರೆ. ಧನದ ಮೂಲಕವಾಗಿಯೇ ಬ್ರಾಹ್ಮಣರು ಯಜ್ಞಗಳನ್ನು ಮಾಡುತ್ತಾರೆ ಮತ್ತು ಮಾಡಿಸುತ್ತಾರೆ. ಅದೇ ರೀತಿಯಲ್ಲಿ ರಾಜರು ಯುದ್ಧದ ಮೂಲಕವಾಗಿ ಶತ್ರುಗಳನ್ನು ಜಯಿಸಿ ಅವರಲ್ಲಿರುವ ಬೊಕ್ಕಸವನ್ನು ಸ್ವಾಧೀನಪಡಿಸಿಕೊಳ್ಳುತ್ತಾರೆ. ಹೀಗೆ ಮಾಡುವುದೇ ರಾಜರಿಗೆ ಅತ್ಯಂತ ಶ್ರೇಯಸ್ಕರವಾದುದು. ಒಬ್ಬ ರಾಜನಿಗೆ ಅಪಕಾರಮಾಡಿಯೇ ಮತ್ತೊಬ್ಬ ರಾಜನು ಅವನಿಂದ ಧನವನ್ನು ಸಂಗ್ರಹಿಸಬೇಕಾಗುವುದು. ಯಾವುದೇ ರಾಜ

ನಲ್ಲಾಗಲೀ ಮತ್ತೊಬ್ಬನಿಗೆ ಅಪಕಾರಮಾಡದೇ ಸಂಪಾದಿಸಿರುವ ಕಿಂಚಿತ್ತಾದರೂ ಹಣವನ್ನು ನಾವು ಇದುವರೆಗೂ ಎಲ್ಲಿಯೂ ಕಂಡಿಲ್ಲ.

**ಏವಮೇವ ಹಿ ರಾಜಾನೋ ಜಯನ್ತಿ ಪೃಥಿವೀಮಿಮಾಮ್ ।**
**ಜಿತ್ವಾ ಮಮೇಯಂ ಬ್ರುವತೇ ಪುತ್ರಾ ಇವ ಪಿತುರ್ಧನಮ್ ॥೩೧॥**

ಅಣ್ಣ! ಇದೇ ರೀತಿಯಲ್ಲಿ ರಾಜರು ಭೂಮಂಡಲವನ್ನು ಜಯಿಸುತ್ತಾರೆ. ಮಕ್ಕಳು ತಂದೆಯ ಆಸ್ತಿಯನ್ನು ತಮ್ಮದೆಂದೇ ಹೇಳಿಕೊಳ್ಳುವಂತೆ–ಶತ್ರುವಿನಿಂದ ಭೂಮಂಡಲವನ್ನು ಜಯಿಸಿಕೊಂಡನಂತರ ರಾಜರು ಭೂಮಂಡಲವು ತಮ್ಮದೇ ಎಂದು ಹೇಳಿಕೊಳ್ಳುತ್ತಾರೆ.

**ರಾಜರ್ಷಯೋಽಪಿ ತೇ ಸ್ವರ್ಗ್ಯಾ ಧರ್ಮೋ ಹ್ಯೇಷಾಂ ನಿರುಚ್ಯತೇ ।**
**ಯಥೈವ ಪೂರ್ಣಾದುದಧೇಃ ಸ್ಯನ್ದನ್ತ್ಯಾಪೋ ದಿಶೋ ದಶ ।**
**ಏವಂ ರಾಜಕುಲಾದ್ವಿತ್ತಂ ಪೃಥಿವೀಂ ಪ್ರತಿ ತಿಷ್ಠತಿ ॥೩೨॥**

ಹಿಂದೆ ಇದೇ ರೀತಿಯಲ್ಲಿ ರಾಜ್ಯವಾಳುತ್ತಿದ್ದ ರಾಜರ್ಷಿಗಳೂ ತಾವು ಮಾಡಿದ ಸತ್ಕರ್ಮಗಳಿಂದ ಸ್ವರ್ಗಕ್ಕೆ ಹೋಗಿರುತ್ತಾರೆ. ಆ ರಾಜರ್ಷಿಗಳ ಧರ್ಮವು ಹೀಗೆ ಪ್ರಶಂಸಿಸಲ್ಪಟ್ಟಿದೆ. ಯಾವ ರೀತಿಯಲ್ಲಿ ಪೂರ್ಣವಾದ ಸಮುದ್ರದಿಂದ ಮೇಘಗಳ ರೂಪದಲ್ಲಿ ನೀರು ಎಲ್ಲ ದಿಕ್ಕುಗಳಿಗೂ ಹರಡುತ್ತದೆಯೋ–ಅದೇ ರೀತಿಯಲ್ಲಿ ರಾಜಕುಲದ ತುಂಬಿದ ಬೊಕ್ಕಸದಿಂದ ಐಶ್ವರ್ಯವು ನಾನಾರೂಪವಾಗಿ ಭೂಮಂಡಲದ ಎಲ್ಲ ಕಡೆಗಳಲ್ಲಿಯೂ ಹರಡಿಕೊಳ್ಳುತ್ತದೆ. (ಸ್ವಾರ್ಥಕ್ಕಾಗಿಯೇ ರಾಜರು ಐಶ್ವರ್ಯವನ್ನು ಗಳಿಸಿಡುವುದಿಲ್ಲ. ರಾಜ್ಯದ ಅಭ್ಯುದಯಕ್ಕಾಗಿಯೇ ವೆಚ್ಚಮಾಡುತ್ತಾರೆ.)

ಯುಧಿಷ್ಠಿರ! ಹಿಂದೆ ಈ ಭೂಮಂಡಲವು ದಿಲೀಪನದಾಗಿತ್ತು. ನೃಗ-ನಹುಷರದಾಗಿತ್ತು. ಅಂಬರೀಷ-ಮಾಂಧಾತೃಗಳೂ ಈ ಭೂಮಂಡಲವನ್ನು ಆಳಿಹೋದರು. ಅದೇ ಭೂಮಂಡಲವು ಈಗ ನಿನ್ನ ರಕ್ಷಣೆಗೆ ಒಳಪಟ್ಟಿದೆ. ಇದರ ಫಲವಾಗಿ ಸರ್ವದಕ್ಷಿಣಾಕವಾದ ದ್ರವ್ಯಮಯಯಜ್ಞವು ನಿನ್ನನ್ನೇ ಆಶ್ರಯಿಸಿದೆ. ( ನೀನು ಭೂಮಂಡಲವನ್ನು ಜಯಿಸಿರುವ ಕಾರಣದಿಂದ ದ್ರವ್ಯಯಜ್ಞವನ್ನು ಮಾಡಬೇಕಾಗಿದೆ. ಆ ಯಜ್ಞಮಾಡಲು ಕಾಲವೀಗ ಸನ್ನಿಹಿತವಾಗಿದೆ. )

**ತಂ ಚೇನ್ನ ಯಜಸೇ ರಾಜನ್ಪ್ರಾಪ್ತಸ್ತ್ವಂ ರಾಜ್ಯಕಿಲ್ಬಿಷಮ್ ।**
**ಯೇಷಾಂ ರಾಜಾಶ್ವಮೇಧೇನ ಯಜತೇ ದಕ್ಷಿಣಾವತಾ ।**
**ಉಪೇತ್ಯ ತಸ್ಯಾವಭೃಥೇ ಪೂತಾಃ ಸರ್ವೇ ಭವನ್ತಿ ತೇ ॥೩೫॥**

ನೀನೇನಾದರೂ ಬಹುದಕ್ಷಿಣಾಕವಾದ ಈ ದ್ರವ್ಯಯಜ್ಞವನ್ನು ಮಾಡದಿದ್ದರೆ ರಾಜ್ಯದಲ್ಲಿ ಆಗುವ ಪಾಪಗಳೆಲ್ಲವನ್ನೂ ನೀನೇ ಪಡೆದುಕೊಳ್ಳುವೆ. ಯಾವ ಪ್ರಜೆಗಳ ರಾಜನು ಬಹುದಕ್ಷಿಣಾಕವಾದ ಅಶ್ವಮೇಧಯಾಗದಿಂದ ದೇವತೆಗಳನ್ನು ಸಂಪೂಜಿಸುವನೋ, ಆ ರಾಜನ ಅಶ್ವಮೇಧಯಾಗದ ಅವಭೃಥಕ್ಕೆ ಆ ಎಲ್ಲ ಪ್ರಜೆಗಳೂ ಆಗಮಿಸಿ ಪೂತರಾಗುತ್ತಾರೆ. (ಅಶ್ವಮೇಧ ಯಾಗ ಮಾಡದಿದ್ದರೆ ಪ್ರಜೆಗಳು ಮಾಡುವ ಪಾಪಗಳೆಲ್ಲವೂ ರಾಜನಿಗೇ ಅಂಟಿಕೊಳ್ಳುತ್ತವೆ. ರಾಜ್ಯವನ್ನು ಗೆದ್ದು ಅಶ್ವಮೇಧಯಾಗವನ್ನು ಮಾಡಿದರೆ ರಾಜನೂ ಶುದ್ಧನಾಗುತ್ತಾನೆ. ಪ್ರಜೆಗಳೂ ಶುದ್ಧರಾಗುತ್ತಾರೆ.)

ವಿಶ್ವರೂಪನಾದ ಮಹಾದೇವನು ಸರ್ವಮೇಧವೆಂಬ ಮಹಾಯಜ್ಞದಲ್ಲಿ ಸರ್ವಭೂತಗಳನ್ನೂ ಹೋಮಮಾಡಿ ಆತ್ಮಾರ್ಪಣೆಯನ್ನೂ ಮಾಡಿಕೊಂಡನು.

**ಶಾಶ್ವತೋಽಯಂ ಭೂತಿಪಥೋ ನಾಸ್ಯಾನ್ತಮನುಶುಶ್ರುಮ ।**
**ಮಹಾನ್ದಾಶರಥಃ ಪನ್ಥಾ ಮಾ ರಾಜನ್ಕುಪಥಂ ಗಮಃ ॥೩೭॥**

ಈ ವಿಧಾನವು ಕ್ಷತ್ರಿಯರಿಗೆ ಕಲ್ಯಾಣಕರವಾದ ಸನಾತನಮಾರ್ಗವಾಗಿದೆ. ಈ ಮಾರ್ಗವು ಕಡಿದುಹೋಯಿತು ಅಥವಾ ಕೊನೆಗೊಂಡಿತು ಎಂಬುದನ್ನೇ ನಾವು ಇದುವರೆಗೂ ಕೇಳಿರುವುದಿಲ್ಲ. ಇದು *ದಾಶರಥಮಹಾಮಾರ್ಗವಾಗಿದೆ. ಈ ಹೆದ್ದಾರಿಯನ್ನು ಬಿಟ್ಟು ನೀನು ಕುತ್ಸಿತವಾದ ಮಾರ್ಗದಲ್ಲಿ ಕಾಲಿಡಬೇಡ."

ಲನೆಯ ಅಧ್ಯಾಯವು ಮುಗಿಯಿತು.

---

* ದಾಶರಥಃ ಪನ್ಥಾಃ = ಯಜ್ಞಸ್ಯ ಪಂಥಾಃ –ಯಜ್ಞಕ್ಕೆ ಹತ್ತು ರಥಗಳಿರುತ್ತವೆ. ಪಶು, ಪತ್ನೀ, ಯಜಮಾನ, ಋಗ್ಯಜುಃ-ಸಾಮವೇದಗಳು ಮೂರು, ನಾಲ್ವರು ಋತ್ವಿಜರು, ಒಟ್ಟು ಹತ್ತು. ದಶ ರಥಾಶ್ಚ ಪ್ರಚರನ್ತಿ ಯಸ್ಮಿನ್ ಸಃ ದಶರಥಃ ಸ ಏವ ದಾಶರಥಃ.

## ವಾನಪ್ರಸ್ಥರಂತೆ-ಸಂನ್ಯಾಸಿಗಳಂತೆ ಜೀವನ ನಡೆಸಲು ಯುಧಿಷ್ಠಿರನು ನಿರ್ಧರಿಸಿದುದು

ಅರ್ಜುನನ ಮಾತುಗಳನ್ನು ಕೇಳಿದನಂತರ ಯುಧಿಷ್ಠಿರನು ಸೌಜನ್ಯದಿಂದಲೇ ಅರ್ಜುನನಿಗೆ ಹೇಳುತ್ತಾನೆ :

**ಮುಹೂರ್ತಂ ತಾವದೇಕಾಗ್ರೋ ಮನಃ ಶ್ರೋತ್ರೇಽನ್ತರಾತ್ಮನಿ ।**
**ಧಾರಯನ್ನಪಿ ತಚ್ಛ್ರುತ್ವಾ ರೋಚೇತ ವಚನಂ ಮಮ ॥೧॥**

"ಅರ್ಜುನ! ನಾನು ಹೇಳಲಿರುವ ನಿವೃತ್ತಿಮಾರ್ಗವನ್ನು ಕೇಳಿದನಂತರ ನಿನ್ನ ಮನಸ್ಸನ್ನೂ ಮತ್ತು ಕಿವಿಗಳನ್ನೂ ಅಂತರಾತ್ಮನಲ್ಲಿ ಸ್ಥಾಪಿಸಿ ಮುಹೂರ್ತಕಾಲ ಏಕಾಗ್ರಚಿತ್ತನಾಗಿ ಧ್ಯಾನಮಾಡು. ಅನಂತರವಾದರೂ ನಾನು ಹೇಳುವ ಮಾತು ನಿನಗೆ ರುಚಿಕರವಾಗಿ ಕಾಣಬಹುದು.

**ಸಾಧುಗಮ್ಯಮಹಂ ಮಾರ್ಗಂ ನ ಜಾತು ತ್ವತ್ಕೃತೇ ಪುನಃ ।**
**ಗಚ್ಛೇಯಂ ತದ್ಗಮಿಷ್ಯಾಮಿ ಹಿತ್ವಾ ಗ್ರಾಮ್ಯಸುಖಾನ್ಯುತ ॥೨॥**

ನಾನು ಗ್ರಾಮ್ಯಸುಖಗಳನ್ನು ಪರಿತ್ಯಜಿಸಿ ಸಾಧುಗಳಾಗಿರುವವರಿಂದ ಮಾತ್ರವೇ ಹೋಗಲು ಸಾಧ್ಯವಾದ ನಿವೃತ್ತಿಮಾರ್ಗವನ್ನೇ ಹಿಡಿದುಹೋಗುತ್ತೇನೆ. ಆದರೆ ನಿನ್ನ ಆಗ್ರಹದ ಕಾರಣದಿಂದಾಗಿ ನಾನು ಪುನಃ ಯಾವುದೇ ಕಾರಣದಿಂದಲೂ ಪ್ರವೃತ್ತಿಮಾರ್ಗವನ್ನು ಹಿಡಿಯುವುದಿಲ್ಲ. (ರಾಜ್ಯವನ್ನು ಪರಿಗ್ರಹಿಸುವುದಿಲ್ಲ.)

**ಕ್ಷೇಮ್ಯಶ್ಚೈಕಾಕಿನಾ ಗಮ್ಯಃ ಪನ್ಥಾಃ ಕೋಽಸ್ತೀತಿ ಪೃಚ್ಛ ಮಾಮ್ ।**
**ಅಥವಾ ನೇಚ್ಛಸಿ ಪ್ರಷ್ಟುಮಪೃಚ್ಛನ್ನಪಿ ಮೇ ಶೃಣು ॥೩॥**

'ಏಕಾಕಿಯಾಗಿಯೇ ಹೋಗಲು ಯೋಗ್ಯವಾದ, ಕ್ಷೇಮಕರವಾದ ಮಾರ್ಗವು ಯಾವುದು?'–ಎಂದು ನನ್ನನ್ನು ಕೇಳು ಅರ್ಜುನ! ನಾನು ಅದನ್ನು ವಿವರಿಸಿ ಹೇಳುತ್ತೇನೆ. ಅಥವಾ ನಿನಗೆ ಈ ಪ್ರಶ್ನೆಯನ್ನು ಕೇಳುವ ಇಚ್ಛೆಯಿಲ್ಲದಿದ್ದರೂ ಈ ಪ್ರಶ್ನೆಗೆ ಉತ್ತರವನ್ನು ನಾನೇ ಹೇಳುವೆನು ; ಕೇಳು.

ಗ್ರಾಮ್ಯವಾದ ಸುಖವನ್ನೂ ಮತ್ತು ಆಚಾರವನ್ನೂ ಬಿಟ್ಟು ಅರಣ್ಯದಲ್ಲಿ ಕಂದ-ಮೂಲ-ಫಲಗಳನ್ನೇ ತಿನ್ನುತ್ತಾ, ಕಠೋರವಾದ ತಪಸ್ಸನ್ನು

ಮಾಡುತ್ತಾ, ಅರಣ್ಯದಲ್ಲಿರುವ ಮೃಗಗಳೊಡನೆ ಸಂಚರಿಸುತ್ತೇನೆ. ಪ್ರಾತಃ ಕಾಲದಲ್ಲಿಯೂ ಮತ್ತು ಸಾಯಂಕಾಲದಲ್ಲಿಯೂ ಸ್ನಾನಮಾಡುತ್ತಾ ಯಥೋಕ್ತವಾದ ಸಮಯದಲ್ಲಿ ಅಗ್ನಿಹೋತ್ರವನ್ನು ಮಾಡುತ್ತೇನೆ. ಜೀವ ಧಾರಣೆಗೆ ಸಾಕಾಗುವಷ್ಟು ಮಾತ್ರವೇ ಆಹಾರವನ್ನು ಸೇವಿಸುತ್ತಾ ಶರೀರ ವನ್ನು ಕೃಶಗೊಳಿಸುತ್ತೇನೆ. ಕೃಷ್ಣಾಜಿನ-ವಲ್ಕಲಗಳನ್ನು ಧರಿಸಿ ಜಟಾಧಾರಿ ಯಾಗುತ್ತೇನೆ. ಚಳಿ-ಗಾಳಿ-ಬಿಸಿಲುಗಳನ್ನು ಸಹಿಸಿಕೊಳ್ಳುತ್ತೇನೆ. ಹಸಿವು-ಬಾಯಾರಿಕೆ ಮತ್ತು ಪರಿಶ್ರಮಗಳನ್ನು ಸಹಿಸಿಕೊಳ್ಳಲು ಅಭ್ಯಾಸಮಾಡು ತ್ತೇನೆ. ವಿಧ್ಯನುಸಾರವಾದ ತಪಸ್ಸಿನ ಮೂಲಕವಾಗಿ ಶರೀರವನ್ನು ಶೋಷಿಸುತ್ತೇನೆ. ಅರಣ್ಯದಲ್ಲಿ ವಾಸಮಾಡುತ್ತಿರುವ, ಮುದಿತವಾದ (ಸಂತೋಷಯುಕ್ತವಾದ), ಮನಸ್ಸಿಗೂ ಕಿವಿಗಳಿಗೂ ಆನಂದವನ್ನುಂಟು ಮಾಡುವ ವಿಧ-ವಿಧವಾದ ಮೃಗ-ಪಕ್ಷಿಗಳ ಕಲರವಗಳನ್ನು ಕೇಳುತ್ತಿರು ತ್ತೇನೆ. ವಿಕಸಿತವಾದ ಮರ-ಗಿಡ-ಬಳ್ಳಿಗಳ ಸುಮನೋಹರವಾದ ಗಂಧ ವನ್ನು ಆಘ್ರಾಣಿಸುತ್ತಾ ನಾನಾರೂಪಿಗಳಾದ, ಚೆಲುವರಾದ ವನವಾಸಿ ಗಳನ್ನು ನೋಡುತ್ತಾ ಕಾಲಕಳೆಯುತ್ತೇನೆ. ಅರಣ್ಯದಲ್ಲಿ ವಾನಪ್ರಸ್ಥಾಶ್ರಮ ದಲ್ಲಿರುವ ಜನರನ್ನೂ, ಗುರುಕುಲವಾಸಿಗಳಾದ ಬ್ರಹ್ಮಚಾರಿಗಳನ್ನೂ ಆಗಿಂದಾಗ್ಗೆ ಸಂದರ್ಶಿಸುತ್ತೇನೆ. ವನವಾಸಿಗಳಿಗೆ ನಾನು ಅಪ್ರಿಯವಾದ ಕಾರ್ಯಗಳನ್ನೆಂದಿಗೂ ಮಾಡುವುದಿಲ್ಲ. ಹೀಗಿರುವಾಗ ನಾನು ಗ್ರಾಮ ವಾಸಿಗಳಿಗೆ ಅಪ್ರಿಯವಾದ ಕಾರ್ಯವನ್ನು ಹೇಗೆ ತಾನೇ ಮಾಡುವೆನು? ಏಕಾಂತದಲ್ಲಿದ್ದುಕೊಂಡು ಆಧ್ಯಾತ್ಮಿಕತತ್ತ್ವವನ್ನು ಚಿಂತಿಸುತ್ತಿರುತ್ತೇನೆ. ಪಕ್ವವಾದ ಆಹಾರವೇ ಸಿಕ್ಕಲಿ–ಅಪಕ್ವವಾದ ಆಹಾರವೇ ಸಿಕ್ಕಲಿ ; ಸಮಯಕ್ಕೆ ಸಿಕ್ಕಿದುದನ್ನು ಭಕ್ಷಿಸುತ್ತಾ ಜೀವಧಾರಣೆಯನ್ನು ಮಾಡಿಕೊಂಡಿರುತ್ತೇನೆ. ಪಿತೃಗಳನ್ನೂ ಮತ್ತು ದೇವತೆಗಳನ್ನೂ ಅರಣ್ಯದಲ್ಲಿ ಸಿಕ್ಕುವ ಕಂದ-ಮೂಲ-ಫಲಗಳಿಂದಲೂ, ನೀರಿನಿಂದಲೂ ಮತ್ತು ಮಧುರ ವಾದ ಮಾತುಗಳಿಂದಲೂ ತೃಪ್ತಿಪಡಿಸುತ್ತೇನೆ. ಹೀಗೆ ಅರಣ್ಯವಾಸಿಗಳಾದ ಮುನಿಗಳ ಸಲುವಾಗಿಯೇ ಶಾಸ್ತ್ರದಲ್ಲಿ ಹೇಳಿರುವ ಕಠೋರಾತಿಕಠೋರವಾದ ವಿಧಿಗಳನ್ನು ಆಚರಿಸುತ್ತಾ ಈ ದೇಹದ ಅಂತ್ಯವು ಎಂದಾಗುವುದೆಂಬುದನ್ನು ಪ್ರತೀಕ್ಷಿಸುತ್ತಿರುತ್ತೇನೆ.

ಅಥವಾ ನಾನು ಮುಂಡನಮಾಡಿಕೊಂಡು ಮುನಿಯಾಗಿ (ಸಂನ್ಯಾಸಿಯಾಗಿ) ಪ್ರತಿದಿನವೂ ಒಂದೊಂದೇ ವೃಕ್ಷದಿಂದ ಭಿಕ್ಷೆಯನ್ನು (ಆ ಮರದಿಂದ ಆ ದಿನ ಬಿದ್ದಷ್ಟೇ ಹಣ್ಣನ್ನು) ತೆಗೆದುಕೊಳ್ಳುತ್ತಾ ನನ್ನ ಈ ಶರೀರವನ್ನು ಕ್ಷಯಿಸುತ್ತೇನೆ. ಈ ಶರೀರವು ಧೂಳಿನಿಂದ ಧೂಸರಿತವಾಗಿರುತ್ತದೆ. ಯಾರೂ ಇಲ್ಲದ ಶೂನ್ಯಗೃಹದಲ್ಲಿ ಅಥವಾ ವೃಕ್ಷದ ಬುಡದಲ್ಲಿ ವಾಸ ಮಾಡುತ್ತೇನೆ. ಪ್ರಿಯವಾದುದನ್ನೂ ಮತ್ತು ಅಪ್ರಿಯವಾದುದನ್ನೂ ಪರಿತ್ಯಾಗ ಮಾಡುತ್ತೇನೆ. ಆ ಸಮಯದಲ್ಲಿ ನಾನು ದುಃಖಿಸುವುದೂ ಇಲ್ಲ ; ಸಂತೋಷ ಪಡುವುದೂ ಇಲ್ಲ. ನಿಂದೆಯನ್ನೂ ಮತ್ತು ಸ್ತುತಿಯನ್ನೂ ಸಮಾನವಾಗಿ ಕಾಣುತ್ತೇನೆ. ಆಶೆ ಮತ್ತು ಮಮಕಾರಗಳನ್ನು ತೊರೆಯುತ್ತೇನೆ. ಶೀತೋಷ್ಣ-ಸುಖ-ದುಃಖಾದಿ ದ್ವಂದ್ವಗಳಿಂದ ದೂರವಾಗುತ್ತೇನೆ. ಯಾವ ವಸ್ತುವನ್ನೂ ಪರಿಗ್ರಹಿಸುವುದಿಲ್ಲ. ಯಾವಾಗಲೂ ಆತ್ಮಾರಾಮನಾಗಿದ್ದುಕೊಂಡು ಪ್ರಸನ್ನಚಿತ್ತನಾಗಿರುತ್ತೇನೆ. ಇತರರಿಂದ ಯಾವ ಕಾರ್ಯವನ್ನೂ ಮಾಡಿಸಿಕೊಳ್ಳುವುದಿಲ್ಲ. ಯಾರೊಡನೆಯೂ ಮಾತನಾಡುವುದಿಲ್ಲ. ಜಡಾಂಧ-ಬಧಿರರಂತೆ ಏನನ್ನೂ ಹೇಳದೇ, ಯಾವುದನ್ನೂ ನೋಡದೇ, ಯಾವುದನ್ನೂ ಕೇಳದೇ ಇದ್ದುಬಿಡುತ್ತೇನೆ. ನನಗೆ ಯಾರಾದರೂ ತೊಂದರೆಮಾಡಲು ಬಂದರೂ ಜಡವಸ್ತುವಿನಂತೆ ಅವರು ಕೊಡುವ ತೊಂದರೆಯನ್ನು ಅನುಭವಿಸುವೆನೇ ಹೊರತು ಪ್ರತಿಕ್ರಿಯೆಯನ್ನು ಮಾಡಲು ಹೋಗುವುದಿಲ್ಲ. ಬೇರೊಬ್ಬರು ನಿಂದಿಸಿದರೂ ಪ್ರತಿಯಾಗಿ ನಿಂದಿಸಹೋಗುವುದಿಲ್ಲ. ಮೂಕನಂತಿದ್ದುಬಿಡುತ್ತೇನೆ. ಮನಸ್ಸನ್ನು ಅಲ್ಲೋಲ-ಕಲ್ಲೋಲಗೊಳಿಸುವ ದೃಶ್ಯಗಳು ಕಂಡಾಗ ಕುರುಡನಂತಿದ್ದುಬಿಡುತ್ತೇನೆ. ಕಣ್ಣುಗಳೆರಡನ್ನೂ ಒಳಸೆಳೆದುಕೊಳ್ಳುತ್ತೇನೆ. ನಾಲ್ಕು ಪ್ರಕಾರವಾದ ಚರಾಚರಪ್ರಾಣಿಗಳಲ್ಲಿ ಯಾವ ಪ್ರಾಣಿಗೂ ನಾನು ತೊಂದರೆಕೊಡುವುದಿಲ್ಲ. ಸ್ವಧರ್ಮನಿರತರಾದ ಪ್ರಜೆಗಳನ್ನೂ ಮತ್ತು ಪ್ರಾಣಿಗಳನ್ನೂ ಸಮವಾಗಿ ಕಾಣುತ್ತೇನೆ. ಯಾರನ್ನೂ ಹಾಸ್ಯಮಾಡುವುದಿಲ್ಲ. ಯಾರ ಮೇಲೆಯೂ ಕೋಪಿಸಿಕೊಳ್ಳುವುದಿಲ್ಲ. ಎಲ್ಲ ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು (ಇಂದ್ರಿಯಗಳಿಗೆ ಪರವಶನಾಗದೇ) ನಿತ್ಯವೂ ಪ್ರಸನ್ನಮುಖನಾಗಿರುತ್ತೇನೆ. ಅರಣ್ಯದಲ್ಲಿ ಯಾವುದೋ ಹಾದಿಯನ್ನು ಹಿಡಿದು ಹೋಗುತ್ತೇನೆ. ಆ ಹಾದಿಯು ಎಲ್ಲಿಗೆ ಹೋಗುವುದೆಂದು

ಯಾರನ್ನೂ ಕೇಳುವುದಿಲ್ಲ. ಇಂತಹುದೇ ದಿಕ್ಕಿಗೆ ಹೋಗಬೇಕೆಂದಾಗಲೀ, ಇಂತಹುದೇ ದೇಶಕ್ಕೆ ಹೋಗಬೇಕೆಂದಾಗಲೀ ನಾನು ಯಾವಾಗಲೂ ಇಚ್ಛೆ ಪಡುವುದಿಲ್ಲ. ಸಿಕ್ಕಿದ ಹಾದಿಯಲ್ಲಿ ಪ್ರಯಾಣಮಾಡುತ್ತೇನೆ. ಆ ಹಾದಿಯ ಮೂಲಕವಾಗಿ ಇಲ್ಲಿಗೇ ಹೋಗಬೇಕೆಂದಾಗಲೀ, ಇಲ್ಲಿಯೇ ತಂಗಬೇಕೆಂದಾಗಲೀ ನಾನು ಅಪೇಕ್ಷಿಸುವುದಿಲ್ಲ. ಮುಂದೆ ಹೋಗುವಾಗ ಹಿಂದಕ್ಕೆ ನೋಡುವುದಿಲ್ಲ. ಸರಳಭಾವದಿಂದಿರುತ್ತೇನೆ. ಯಾವಾಗಲೂ ಅಂತರ್ಮುಖನಾಗಿರುತ್ತೇನೆ. ಸ್ಥಾವರ-ಜಂಗಮಪ್ರಾಣಿಗಳಿಗೆ ಯಾವ ವಿಧವಾದ ತೊಂದರೆಯನ್ನೂ ಕೊಡದೇ ಮುಂದೆ ಹೋಗುತ್ತೇನೆ.*

**ಸ್ವಭಾವಸ್ತು ಪ್ರಯಾತ್ಯಗ್ರೇ ಪ್ರಭವನ್ನಶನಾನ್ಯಪಿ ।**
**ದ್ವನ್ದ್ವಾನಿ ಚ ವಿರುದ್ಧಾನಿ ತಾನಿ ಸರ್ವಾಣ್ಯಚಿನ್ತಯನ್ ॥೨೦॥**

ತಾಯಿಯ ಮಗ್ಗುಲಿನಲ್ಲಿ ಮಲಗಿದ ಮಗುವು ಸ್ತನ್ಯಪಾನಮಾಡುವಂತೆ–ಹುಟ್ಟಿದಾಗಿನಿಂದ ಬಂದಿರುವ ಸ್ವಭಾವವು ತನ್ನ ಪಾಡಿಗೆ ತಾನು ನಡೆಯುತ್ತಲೇ ಇರುತ್ತದೆ. ಆ ಸ್ವಭಾವಾನುಸಾರವಾಗಿ ಹಾದಿಯಲ್ಲಿ ಸಿಕ್ಕಿದ ಹಣ್ಣು-ಹಂಪಲುಗಳನ್ನೂ, ಗೆಡ್ಡೆ-ಗೆಣಸುಗಳನ್ನೂ ತಿನ್ನುತ್ತಾ ಮುಂದೆ ಹೋಗುತ್ತೇನೆ. ಆದರೆ ಆ ಸಮಯದಲ್ಲಿ ವಿರುದ್ಧಧರ್ಮಗಳಿರುವ ದ್ವಂದ್ವಗಳ ವಿಷಯವಾಗಿ ಯೋಚನೆಯನ್ನೇ ಮಾಡುವುದಿಲ್ಲ. ಶೀತ-ಉಷ್ಣ, ಸುಖ-ದುಃಖ, ಮಾನ-ಅಪಮಾನ, ಸಿಹಿ-ಕಹಿ, ಪಕ್ವ-ಅಪಕ್ವ–ಇದಾವುದರ ವಿಷಯವಾಗಿಯೂ ಯೋಚಿಸಹೋಗುವುದಿಲ್ಲ.

**ಅಲ್ಪಂ ವಾ ಸ್ವಾದು ವಾ ಭೋಜ್ಯಂ ಪೂರ್ವಾಲಾಭೇನ ಜಾತುಚಿತ್ ।**
**ಅನ್ಯೇಷ್ವಪಿ ಚರಂ ಲಾಭಮಲಾಭೇ ಸಪ್ತಪೂರಯನ್ ॥೨೧॥**

---

* **ಗಚ್ಛಂಸ್ತ್ರಸಸ್ಥಾವರವರ್ಜಕಃ**–ಎಂಬುದಾಗಿ ಇಲ್ಲಿ ಶ್ಲೋಕಪಾದವಿದೆ. **ಗಚ್ಛನ್ ತ್ರಸಸ್ಥಾವರವರ್ಜಕಃ** ಎಂದು ಪದವಿಭಾಗಮಾಡಿ ವ್ಯಾಖ್ಯಾನಕಾರರು : **ತ್ರಸ್ಯತೀತಿ ತ್ರಸಂ ಭಯಾದಿಧರ್ಮಕಂ**–ಭಯವೇ ಮೊದಲಾದ ಧರ್ಮವುಳ್ಳದ್ದು ತ್ರಸ ಅರ್ಥಾತ್ ಲಿಂಗಶರೀರ. **ಮರಣಕಾಲೇಽತ್ರೈವ ತಿಷ್ಠತೀತಿ ಸ್ಥಾವರಂ**–ಮರಣಕಾಲದಲ್ಲಿಯೂ ಇಲ್ಲೇ ಉಳಿಯುವುದು ಸ್ಥಾವರಶರೀರ ಅರ್ಥಾತ್ ಸ್ಥೂಲಶರೀರ. **ತಯೋರ್ವರ್ಜಕಃ ಸ್ಥೂಲಸೂಕ್ಷ್ಮಶರೀರಾಭಿಮಾನಶೂನ್ಯ ಇತ್ಯರ್ಥಃ** –ಸ್ಥೂಲ-ಸೂಕ್ಷ್ಮ ಶರೀರಗಳಲ್ಲಿ ಅಭಿಮಾನವನ್ನು ತೊರೆದವನು. ಬ್ರಹ್ಮನಲ್ಲಿಯೇ ಲೀನವಾದ ಮನಸ್ಸುಳ್ಳವನು.

ಭಿಕ್ಷೆಯು ಸ್ವಲ್ಪವೇ ಸಿಕ್ಕಲಿ ; ರುಚಿಕರವಲ್ಲದ್ದೇ ಸಿಕ್ಕಲಿ ; ಅದನ್ನೇ ಅಮೃತವೆಂದು ಭಾವಿಸಿ ಭುಂಜಿಸುತ್ತೇನೆ. ಯಾವಾಗಲಾದರೂ ಒಂದು ಮನೆಯಲ್ಲಿ ಭಿಕ್ಷೆಯು ಸಿಕ್ಕದಿದ್ದರೆ ಎರಡನೆಯ ಮನೆಗೆ ಹೋಗುತ್ತೇನೆ. ಅಲ್ಲಿಯೂ ಸಿಕ್ಕದಿದ್ದರೆ ಮೂರನೆಯ ಮನೆಗೆ ಹೋಗುತ್ತೇನೆ. ಈ ರೀತಿ ಏಳು ಮನೆಗಳಿಗೆ ಹೋಗುತ್ತೇನೆ. ಏಳನೆಯ ಮನೆಯಲ್ಲಿಯೂ ಭಿಕ್ಷೆಯು ಸಿಗದಿದ್ದರೆ ಎಂಟನೆಯ ಮನೆಗೆ ಹೋಗುವುದಿಲ್ಲ.

**ವಿಧೂಮೇ ನ್ಯಸ್ತಮುಸಲೇ ವ್ಯಙ್ಗಾರೇ ಭುಕ್ತವಜ್ಜನೇ ।**
**ಅತೀತಪಾತ್ರಸಂಚಾರೇ ಕಾಲೇ ವಿಗತಭಿಕ್ಷುಕೇ ॥೨೨॥**

**ಏಕಕಾಲಂ ಚರನ್ಭೈಕ್ಷ್ಯಂ ತ್ರೀನಥ ದ್ವೇ ಚ ಪಞ್ಚ ವಾ ।**
**ಸ್ನೇಹಪಾಶಂ ವಿಮುಚ್ಯಾಹಂ ಚರಿಷ್ಯಾಮಿ ಮಹೀಮಿಮಾಮ್ ॥೨೩॥**

ಮನೆಯಲ್ಲಿ ಹೊಗೆಯಾಡದೇ ಇರುವಾಗ, ಒನಕೆಯನ್ನು ತೆಗೆದಿಟ್ಟ ನಂತರ, ಒಲೆಯ ಬೆಂಕಿಯನ್ನು ಆರಿಸಿದನಂತರ, ಮನೆಯವರೆಲ್ಲರೂ ಭೋಜನಮಾಡಿದನಂತರ, ಅಡಿಗೆಯ ಪಾತ್ರೆಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ತೆಗೆದುಕೊಂಡು ಇಡುವ ಕಾರ್ಯವು ಮುಗಿದ ಬಳಿಕ, ಭಿಕ್ಷುಕರೆಲ್ಲರೂ ಭಿಕ್ಷೆಯನ್ನು ತೆಗೆದುಕೊಂಡು ಹೋದ ನಂತರದಲ್ಲಿ– ಮೂರು ಮನೆಗಳಲ್ಲಿಯೋ, ಎರಡು ಮನೆಗಳಲ್ಲಿಯೋ ಅಥವಾ ಐದು ಮನೆಗಳಲ್ಲಿಯೋ ದಿನಕ್ಕೆ ಒಂದೇ ಬಾರಿ ಭಿಕ್ಷೆಗೆ ಹೋಗುತ್ತೇನೆ. ಪ್ರಾಪಂಚಿಕ ವಸ್ತುಗಳಲ್ಲಿ ವ್ಯಾಮೋಹವನ್ನು ಸಂಪೂರ್ಣವಾಗಿ ತೊರೆದು ಈ ಪ್ರಪಂಚದಲ್ಲಿ ನಾನು ಸುತ್ತಾಡುತ್ತೇನೆ.

**ಅಲಾಭೇ ಸತಿ ವಾ ಲಾಭೇ ಸಮದರ್ಶೀ ಮಹಾತಪಾಃ ।**
**ನ ಜಿಜೀವಿಷುವತ್ಕಿಂಚಿನ್ನ ಮುಮೂರ್ಷುವದಾಚರನ್ ॥೨೪॥**

ನನಗೆ ಭಿಕ್ಷೆಯು ಸಿಕ್ಕಿದರೆ ನಾನು ಸಂತೋಷಿಸುವುದೂ ಇಲ್ಲ. ಸಿಕ್ಕದೆಯೇ ಇದ್ದರೆ ದುಃಖಿಸುವುದೂ ಇಲ್ಲ. ಲಾಭವಾದರೆ ನನ್ನ ಮನಸ್ಸಿನ ಮೇಲೆ ಯಾವ ಪರಿಣಾಮವಾಗುವುದೋ ಲಾಭವಾಗದಿದ್ದರೂ ಅದೇ ಪರಿಣಾಮವಾಗುತ್ತದೆ. ಲಾಭಕ್ಕೂ-ಅಲಾಭಕ್ಕೂ ನಾನು ಯಾವ ವ್ಯತ್ಯಾಸವನ್ನೂ ಕಾಣುವುದಿಲ್ಲ. ಲಾಭಾಲಾಭಗಳನ್ನು ಸಮಾನತೆಯಿಂದ ಕಾಣುತ್ತೇನೆ. ನಾನು ಯಾವಾಗಲೂ ಮಹಾತಪಸ್ಸಿನಲ್ಲಿಯೇ ನಿರತನಾಗಿರುತ್ತೇನೆ. ಜೀವಿಸಲು

ಇಚ್ಛಿಸುವವನು ಕೈಗೊಳ್ಳುವ ಧನಾದಿಸಂಗ್ರಹಕಾರ್ಯಗಳನ್ನು ಮಾಡುವುದಿಲ್ಲ. ಸಾಯಲು ಇಚ್ಛಿಸುವವನು ಮಾಡುವಂತೆ ಅನ್ನಾದಿ ತ್ಯಾಗಗಳನ್ನೂ ಮಾಡುವುದಿಲ್ಲ.

**ಜೀವಿತಂ ಮರಣಂ ಚೈವ ನಾಭಿನನ್ದನ್ನ ಚ ದ್ವಿಷನ್ ।**
**ವಾಸ್ಯೈಕಂ ತಕ್ಷತೋ ಬಾಹುಂ ಚನ್ದನೇನೈಕಮುಕ್ಷತಃ ।**
**ನಾಕಲ್ಯಾಣಂ ನ ಕಲ್ಯಾಣಂ ಚಿನ್ತಯನ್ನುಭಯೋಸ್ತಯೋಃ ॥೨೫॥**

ಜೀವನವನ್ನು ಶ್ಲಾಘಿಸಲೂ ಹೋಗುವುದಿಲ್ಲ. ಮರಣವನ್ನು ದ್ವೇಷಿಸುವುದೂ ಇಲ್ಲ. ಜೀವನಕ್ಕೂ-ಮರಣಕ್ಕೂ ನಾನು ಯಾವ ವ್ಯತ್ಯಾಸವನ್ನೂ ಕಾಣುವುದಿಲ್ಲ. ಒಬ್ಬನು ಬಂದು ನನ್ನ ಒಂದು ತೋಳನ್ನು ಬಾಚಿಯಿಂದ ಕತ್ತರಿಸಿದರೂ ನಾನು ಅವನಿಗೆ ಅಮಂಗಳವನ್ನು ಬಯಸುವುದಿಲ್ಲ. ಮತ್ತೊಬ್ಬನು ಬಂದು ನನ್ನ ಮತ್ತೊಂದು ತೋಳಿಗೆ ಚಂದನವನ್ನು ಪೂಸಿದರೂ ಅವನಿಗೆ ನಾನು ಮಂಗಳವಾಗಲೆಂದು ಬಯಸುವುದಿಲ್ಲ. ನನ್ನ ಒಂದು ತೋಳನ್ನು ಕತ್ತರಿಸಿದವನು ಮತ್ತು ನನ್ನ ಮತ್ತೊಂದು ತೋಳಿಗೆ ಚಂದನವನ್ನು ಪೂಸಿದವನೂ–ಈ ಇಬ್ಬರೂ ನನ್ನ ದೃಷ್ಟಿಯಲ್ಲಿ ಸಮಾನರೇ ಆಗುತ್ತಾರೆ. ಅರ್ಥಾತ್ ನನಗೆ ಸ್ನೇಹಿತನೂ ಇಲ್ಲ ; ದ್ವೇಷಿಯೂ ಇಲ್ಲ.

**ಯಾಃ ಕಾಶ್ಚಿಜ್ಜೀವತಾ ಶಕ್ಯಾಃ ಕರ್ತುಮಭ್ಯುದಯಕ್ರಿಯಾಃ ।**
**ಸರ್ವಾಸ್ತಾಃ ಸಮಭಿತ್ಯಜ್ಯ ನಿಮೇಷಾದಿ ವ್ಯವಸ್ಥಿತಃ ॥೨೬॥**

ಬದುಕಿ-ಬಾಳಲು ಇಚ್ಛೆಯುಳ್ಳವನು ಹಲವು ಅಭ್ಯುದಯಕಾರ್ಯಗಳನ್ನು ಮಾಡಬಹುದು. ಆದರೆ ನಾನು ಅಂತಹ ಅಭ್ಯುದಯಕಾರ್ಯಗಳೆಲ್ಲವನ್ನೂ ಸಂಪೂರ್ಣವಾಗಿ ತ್ಯಾಗಮಾಡುತ್ತೇನೆ. ಈ ಶರೀರದೊಳಗೆ ಆತ್ಮವಿರುವವರೆಗೂ ಅನಿವಾರ್ಯವಾಗಿ ಮಾಡಲೇಬೇಕಾಗುವ ರೆಪ್ಪೆಹೊಡೆಯುವುದು, ಸಿಕ್ಕಿದ ಭಿಕ್ಷೆಯನ್ನು ಭುಂಜಿಸಲು ಕೈ-ಬಾಯಿಗಳನ್ನು ಅಲುಗಾಡಿಸುವುದು–ಇಂತಹ ಕಾರ್ಯಗಳನ್ನು ಮಾತ್ರವೇ ಮಾಡುತ್ತಿರುತ್ತೇನೆ.

ಈ ಕಾರ್ಯಗಳಲ್ಲಿಯೂ ನಾನು ಆಸಕ್ತನಾಗುವುದಿಲ್ಲ. ಇಂದ್ರಿಯಗಳ ಸಂಬಂಧವಾದ ಎಲ್ಲ ಕಾರ್ಯಗಳನ್ನೂ ನಿಲ್ಲಿಸಿಯೇಬಿಡುತ್ತೇನೆ. ಸಂಕಲ್ಪ

ಶೂನ್ಯನಾಗಿರುತ್ತೇನೆ. ಹೀಗಿದ್ದುಕೊಂಡು ಮನಸ್ಸಿನ ಕಲ್ಮಷವನ್ನು ಸಂಪೂರ್ಣವಾಗಿ ತೊಡೆದುಹಾಕುತ್ತೇನೆ.

**ವಿಮುಕ್ತಃ ಸರ್ವಸಂಗೇಭ್ಯೋ ವ್ಯತೀತಃ ಸರ್ವವಾಗುರಾಃ ।**
**ನ ವಶೇ ಕಸ್ಯಚಿತ್ತಿಷ್ಠನ್ಸಧರ್ಮಾ ಮಾತರಿಶ್ವನಃ ॥೨೮॥**

ಎಲ್ಲ ವಿಧವಾದ ಸಹವಾಸಗಳಿಂದಲೂ ವಿಮುಕ್ತನಾಗಿ, ಸ್ನೇಹಸಂಬಂಧವಾದ ಎಲ್ಲ ಬಂಧನಗಳಿಂದಲೂ ಅತೀತನಾಗಿ (ಎಲ್ಲ ಸಂಬಂಧಗಳನ್ನೂ ಕಡಿದುಕೊಂಡು), ಯಾವನೊಬ್ಬನ (ಯಾವುದೊಂದು ಇಂದ್ರಿಯದ) ಅಧೀನನೂ ಆಗದೇ ವಾಯುವಿನ ಧರ್ಮಕ್ಕೆ ಸಮಾನವಾದ ಧರ್ಮದಿಂದಿರುತ್ತಾ ಸರ್ವತ್ರ ಸಂಚರಿಸುತ್ತೇನೆ.

**ವೀತರಾಗಶ್ಚರನ್ನೇವಂ ತುಷ್ಟಿಂ ಪ್ರಾಪ್ಸ್ಯಾಮಿ ಶಾಶ್ವತೀಮ್ ।**
**ತೃಷ್ಣಯಾ ಹಿ ಮಹತ್ಪಾಪಮಜ್ಞಾನಾದಸ್ಮಿ ಕಾರಿತಃ ॥೨೯॥**

ಎಲ್ಲ ವಿಧವಾದ ಸ್ನೇಹಬಂಧನಗಳನ್ನೂ ಬಿಟ್ಟು ರಾಗರಹಿತನಾಗಿ ವಾಯುವಿನಂತೆ ಸಂಚರಿಸುವ ನಾನು ಶಾಶ್ವತವಾದ ಆನಂದವನ್ನು ಪಡೆಯುತ್ತೇನೆ. ಅಜ್ಞಾನದಿಂದಲೂ ರಾಜ್ಯತೃಷ್ಣೆಯಿಂದಲೂ ನಾನು ಅನೇಕ ಪಾಪಗಳನ್ನು ಮಾಡಿಬಿಟ್ಟಿದ್ದೇನೆ.

**ಕುಶಲಾಕುಶಲಾನ್ಯೇಕೇ ಕೃತ್ವಾ ಕರ್ಮಾಣಿ ಮಾನವಾಃ ।**
**ಕಾರ್ಯಕಾರಣಸಂಶ್ಲಿಷ್ಟಂ ಸ್ವಜನಂ ನಾಮ ಬಿಭ್ರತಿ ॥೩೦॥**

ಕೆಲವು ಮಾನವರು ಶುಭಾಶುಭಕರ್ಮಗಳನ್ನು ಮಾಡುತ್ತಾ ಸ್ವಸುಖನಿಮಿತ್ತದಿಂದ ತನ್ನೊಡನೆ ಸೇರಿಕೊಂಡಿರುವ ಸ್ತ್ರೀಯರೇ ಮೊದಲಾದ ಸ್ವಜನರನ್ನು ಪಾಲಿಸುತ್ತಾರೆ. (**ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ**–ಗಂಡನ ಪ್ರೀತ್ಯರ್ಥವಾಗಿ ಹೆಂಡತಿಯು ಗಂಡನನ್ನು ಪ್ರೀತಿಸುವುದಿಲ್ಲ. ತನ್ನ ಆಸೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿಯೇ ಸತಿಯಾದವಳು ಪತಿಯನ್ನು ಪ್ರೀತಿಸುತ್ತಾಳೆ–ಎಂಬ ಶ್ರುತಿವಚನದಂತೆ ಎಲ್ಲರೂ ತಮ್ಮ ಸುಖಕ್ಕಾಗಿ ಇತರರ ಭರಣ-ಪೋಷಣೆಗಳನ್ನು ಮಾಡುವರೇ ಹೊರತು ಇತರರ ಸುಖಕ್ಕಾಗಿ ಭರಣ-ಪೋಷಣೆಗಳನ್ನು ಮಾಡುವುದಿಲ್ಲ. ಹೀಗೆ ಮಾಡುವಾಗ ಅವರು ಅನೇಕ ಶುಭಾಶುಭಕರ್ಮಗಳನ್ನು ಮಾಡುತ್ತಲೇ ಇರುತ್ತಾರೆ.)

**ಆಯುಷೋಽನ್ತೇ ಪ್ರಹಾಯೇದಂ ಕ್ಷೀಣಪ್ರಾಣಂ ಕಲೇವರಮ್ ।**
**ಪ್ರತಿಗೃಹ್ಣಾತಿ ತತ್ಪಾಪಂ ಕರ್ತುಃ ಕರ್ಮಫಲಂ ಹಿ ತತ್ ॥೩೧॥**

ಆಯುಷ್ಯದ ಅಂತ್ಯದಲ್ಲಿ (ಆಯುಷ್ಯವು ಕಳೆದುಹೋದನಂತರ) ಅತಿಕ್ಷೀಣಿಸಿರುವ ಈ ಶರೀರವನ್ನು ಬಿಟ್ಟು ಈ ಶರೀರದ ಮೂಲಕವಾಗಿ ಮಾಡಿರಬಹುದಾದ ಪಾಪವನ್ನು ಮಾತ್ರ ಆ ಜೀವನು ಪ್ರತಿಗ್ರಹಿಸುತ್ತಾನೆ. ಏಕೆಂದರೆ ಕರ್ತೃವಿನ ಕರ್ಮಫಲವೇ ಅದಾಗಿರುತ್ತದೆ.

**ಏವಂ ಸಂಸಾರಚಕ್ರೇಽಸ್ಮಿನ್ವ್ಯಾವಿದ್ಧೇ ರಥಚಕ್ರವತ್ ।**
**ಸಮೇತಿ ಭೂತಗ್ರಾಮೋಽಯಂ ಭೂತಗ್ರಾಮೇಣ ಕಾರ್ಯವಾನ್ ॥**

ರಥದ ಚಕ್ರದಂತೆ ನಿರಂತರವಾಗಿ ತಿರುಗುತ್ತಿರುವ ಈ ಸಂಸಾರಚಕ್ರದಲ್ಲಿ ಈ ಭೂತಗ್ರಾಮವು (ಪ್ರಾಣಿಗಳ ಸಮುದಾಯವು) ಕಾರ್ಯವಶದಿಂದ ಮತ್ತೊಂದು ಪ್ರಾಣಿಗಳ ಸಮುದಾಯದೊಡನೆ (ಬಂಧು-ಮಿತ್ರ-ಕಳತ್ರರೂಪದಿಂದ) ಮಿಲಿತವಾಗುತ್ತದೆ.

**ಜನ್ಮಮೃತ್ಯುಜರಾವ್ಯಾಧಿವೇದನಾಭಿರಭಿದ್ರುತಮ್ ।**
**ಅಪಾರಮಿವ ಚಾಸ್ವಸ್ಥಂ ಸಂಸಾರಂ ತ್ಯಜತಃ ಸುಖಮ್ ॥೩೩॥**

ಹುಟ್ಟು, ಸಾವು, ಮುಪ್ಪು, ರೋಗ, ಸಂಕಟ–ಇವುಗಳಿಂದ ಆಕ್ರಮಿಸಲ್ಪಟ್ಟಿರುವ, ದಾಟಲು ಸಾಧ್ಯವೇ ಇಲ್ಲವೋ ಎಂಬಂತಹ ಅಸ್ವಾಸ್ಥ್ಯದಿಂದಿರುವ ಈ ಸಂಸಾರವನ್ನು ಯಾರು ಪರಿತ್ಯಜಿಸುತ್ತಾನೆಯೋ–ಅವನೇ ಸುಖಿಯು.

**ದಿವಃ ಪತತ್ಸು ದೇವೇಷು ಸ್ಥಾನೇಭ್ಯಶ್ಚ ಮಹರ್ಷಿಷು ।**
**ಕೋ ಹಿ ನಾಮ ಭವೇನಾರ್ಥೀ ಭವೇತ್ಕಾರಣತತ್ತ್ವವಿತ್ ॥೩೪॥**

ದೇವತೆಗಳೇ ಆದರೂ ತಮ್ಮ ಪುಣ್ಯವೆಲ್ಲವೂ ಕಳೆದುಹೋದನಂತರ ಸ್ವರ್ಗದಿಂದ ಚ್ಯುತರಾಗುತ್ತಾರೆ. ಮಹರ್ಷಿಗಳೂ ತಮ್ಮ ಸ್ಥಾನಗಳಿಂದ ಭ್ರಷ್ಟರಾಗುತ್ತಾರೆ. ಹೀಗಿರುವಾಗ ಕಾರಣತತ್ತ್ವವನ್ನು (ಅವಿದ್ಯಾತತ್ತ್ವವನ್ನು = ದುಃಖಮಯತ್ವವನ್ನು) ತಿಳಿದಿರುವ ಯಾವನು ತಾನೇ ಜನ್ಮ-ಮೃತ್ಯುರೂಪವಾದ ಈ ಸಂಸಾರದಿಂದ ಪ್ರಯೋಜನವನ್ನು ಅಪೇಕ್ಷಿಸುತ್ತಾನೆ?

(ಅರ್ಜುನನು ಹೇಳಿದಂತೆ ಯಜ್ಞಮಾಡಿ ಸ್ವರ್ಗಕ್ಕೆ ಹೋಗುವುದೂ ವ್ಯರ್ಥವೇ—ಎಂದು ತಿಳಿಸಲು ಧರ್ಮರಾಜನು ಹೀಗೆ ಉತ್ತರಿಸುತ್ತಾನೆ. ಸ್ವರ್ಗವೂ ಶಾಶ್ವತವಲ್ಲ. ಮುನಿಗಳ ಸ್ಥಾನವೂ ಶಾಶ್ವತವಲ್ಲ. ಬ್ರಹ್ಮಪದವೊಂದೇ ಶಾಶ್ವತವಾದುದು. ಅದನ್ನು ಪಡೆಯಲು ಮಾನವನು ಸತತವಾಗಿ ಪ್ರಯತ್ನಿಸಬೇಕು—ಎಂಬುದು ಧರ್ಮರಾಜನ ಅಭಿಪ್ರಾಯವಾಗಿದೆ.)

ವಿವಿಧಲಕ್ಷಣಗಳಿಂದ ಕೂಡಿರುವ ವಿಧ-ವಿಧವಾದ ಕರ್ಮಗಳನ್ನು ಮಾಡುವ (ಸಾಮ-ದಾನಗಳೇ ಮೊದಲಾದ ವಿವಿಧೋಪಾಯಗಳಂತೆ ವಿವಿಧ ಲಕ್ಷಣಗಳಿಂದ ಕೂಡಿರುವ ನಾನಾವಿಧವಾದ ಕಪಟಾದಿ ರೂಪ-ಕರ್ಮಗಳನ್ನು ಮಾಡುವ ) ರಾಜನನ್ನು ಸ್ವಲ್ಪವೇ ಕಾರಣಕ್ಕಾಗಿ ಅನೇಕರಾಜರು ಸೇರಿಕೊಂಡು ಸಂಹಾರಮಾಡುತ್ತಾರೆ. ( ಆದುದರಿಂದ ನಾವೀಗ ಜಯಿಸಿದ ರಾಜ್ಯವೂ ನಮ್ಮಲ್ಲಿಯೇ ಶಾಶ್ವತವಾಗಿ ಉಳಿಯುವುದೆಂದೂ ಹೇಳಲಾಗುವುದಿಲ್ಲ. )

ಈ ಎಲ್ಲ ಕಾರಣಗಳಿಂದ ಈ ಜ್ಞಾನಾಮೃತವು ಅನೇಕ ದಿವಸಗಳಿಂದಲೇ ನನ್ನಲ್ಲಿ ಸ್ಥಾನಮಾಡಿಕೊಂಡಿದೆ. ಈ ಜ್ಞಾನಾಮೃತವನ್ನೇ ಹೊಂದಿ ನಾನು ಅವ್ಯಯವೂ, ಶಾಶ್ವತವೂ, ಸ್ಥಿರವೂ ಆದ ಪರಮಪದವನ್ನು ಇಚ್ಛಿಸುತ್ತೇನೆ. ನಾನು ಈ ಬುದ್ಧಿಯ ಮೂಲಕವಾಗಿ ಈ ಹಿಂದೆ ಹೇಳಿದ ರೀತಿಯಲ್ಲಿಯೇ ಅರಣ್ಯದಲ್ಲಿ ಪರ್ಯಟನಮಾಡುತ್ತಾ ಜನ್ಮ-ಮೃತ್ಯು-ಜರಾ-ವ್ಯಾಧಿ-ವೇದನೆಗಳಿಂದ ಆಕ್ರಾಂತವಾದ ಈ ದೇಹವನ್ನು ಭಯರಹಿತವಾದ ಮಾರ್ಗವನ್ನು ಅವಲಂಬಿಸಿ ಸಮಾಪನಗೊಳಿಸುತ್ತೇನೆ."

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಭೀಮಸೇನನು-ಯುಧಿಷ್ಠಿರನ ಸಂನ್ಯಾಸಸ್ವೀಕಾರದ ಉದ್ದೇಶಕ್ಕೆ ವಿರೋಧವನ್ನು ವ್ಯಕ್ತಪಡಿಸುತ್ತಾ ಕರ್ತವ್ಯಪಾಲನೆಯನ್ನು ಮಾಡುವಂತೆ ಸಲಹೆ ನೀಡಿದುದು.

ಭೀಮಸೇನನು ಯುಧಿಷ್ಠಿರನಿಗೆ ಹೇಳುತ್ತಾನೆ :

**ಶ್ರೋತ್ರಿಯಸ್ಯೇವ ತೇ ರಾಜನ್ಮನ್ದಕಸ್ಯಾವಿಪಶ್ಚಿತಃ ।**
**ಅನುವಾಕಹತಾಬುದ್ಧಿರ್ನೈಷಾ ತತ್ತ್ವಾರ್ಥದರ್ಶಿನೀ ॥೧॥**

"ಮಹಾರಾಜ! ಕೇವಲ ವೇದಪಠಣದಿಂದ ಬುದ್ಧಿಮಾಂದ್ಯವನ್ನು ಹೊಂದಿರುವ, ವೇದಾರ್ಥವನ್ನು ತಿಳಿಯದ ಮೂರ್ಖನಾದ ಶ್ರೋತ್ರಿಯನ ಬುದ್ಧಿಯಂತೆಯೇ ನಿನ್ನ ಬುದ್ಧಿಯೂ ಆಗಿರುವುದು. ಶ್ರೋತ್ರಿಯನ (ವೇದ ಮೂಲವನ್ನು ಅಧ್ಯಯನಮಾಡಿರುವವನ) ಬುದ್ಧಿಯು ಯಾವ ರೀತಿಯಲ್ಲಿ ವೇದಾರ್ಥಗಳನ್ನು ಗ್ರಹಣಮಾಡುವ ಬುದ್ಧಿಯಾಗಿಲ್ಲವೋ–ಅದೇ ರೀತಿಯಲ್ಲಿ ನಿನ್ನ ಬುದ್ಧಿಯೂ ತತ್ತ್ವಾರ್ಥವನ್ನು ತಿಳಿಯಬಲ್ಲ ಬುದ್ಧಿಯಾಗಿಲ್ಲ.

**ಆಲಸ್ಯೇ ಕೃತಚಿತ್ತಸ್ಯ ರಾಜಧರ್ಮಾನಸೂಯತಃ ।**
**ವಿನಾಶೇ ಧಾರ್ತರಾಷ್ಟ್ರಾಣಾಂ ಕಿಂ ಫಲಂ ಭರತರ್ಷಭ ॥೨॥**

ಭರತಶ್ರೇಷ್ಠನೇ! ರಾಜಧರ್ಮವನ್ನೇ ನಿಂದಿಸುತ್ತಿರುವ ಮತ್ತು ಆಲಸ್ಯ ಪೂರ್ಣವಾದ ಜೀವನವನ್ನೇ ನಿರ್ವಹಿಸಲು ನಿಶ್ಚಯಿಸಿರುವ ನೀನು ಧೃತ ರಾಷ್ಟ್ರನ ಮಕ್ಕಳನ್ನು ವಿನಾಶಗೊಳಿಸಿದುದರಿಂದ ಯಾವ ಫಲವನ್ನು ಪಡೆದು ಕೊಂಡಂತಾಯಿತು?

**ಕ್ಷಮಾನುಕಮ್ಪಾ ಕಾರುಣ್ಯಮಾನೃಶಂಸ್ಯಂ ನ ವಿದ್ಯತೇ ।**
**ಕ್ಷಾತ್ರಮಾಚರತೋ ಮಾರ್ಗಮಪಿ ಬನ್ಧೋಸ್ತ್ವದನ್ತರೇ ॥೩॥**

ಕ್ಷತ್ರಿಯೋಚಿತವಾದ ಮಾರ್ಗದಲ್ಲಿ ನಡೆಯುವ ಪುರುಷನಿಗೆ ತನ್ನ ಬಂಧುಗಳ ವಿಷಯದಲ್ಲಿಯೂ ಕ್ಷಮೆ, ಅನುಕಂಪ, ಕಾರುಣ್ಯ, ಕಾಠಿಣ್ಯವಿಲ್ಲ ದಿರುವಿಕೆ–ಇತ್ಯಾದಿ ಗುಣಗಳು ಇರುವುದಿಲ್ಲ. ಹೀಗಿರುವಾಗ ನೀನು ಕ್ಷತ್ರಿಯ

ಕುಲಸಂಜಾತನೇ ಆಗಿದ್ದರೂ ನಿನ್ನ ಹೃದಯದಲ್ಲಿ ಈ ಗುಣಗಳು ಹೇಗೆ ಮನೆಮಾಡಿಕೊಂಡುವು?

ನಾವೇನಾದರೂ ಈ ಮೊದಲೇ ನಿನ್ನಲ್ಲಿ ಇಂತಹ ಬುದ್ಧಿಯಿರುವುದೆಂದು ತಿಳಿದವರಾಗಿದ್ದರೆ ಶಸ್ತ್ರವನ್ನೇ ಹಿಡಿಯುತ್ತಿರಲಿಲ್ಲ; ಯಾರೊಬ್ಬರನ್ನೂ ಸಂಹರಿಸುತ್ತಲೂ ಇರಲಿಲ್ಲ. ನಾವೂ ಈ ಶರೀರದ ಅಂತ್ಯವಾಗುವವರೆಗೂ ಭಿಕ್ಷೆಯನ್ನೇ ಮಾಡಿಕೊಂಡು ಜೀವನನಿರ್ವಹಣೆಯನ್ನು ಮಾಡುತ್ತಿದ್ದೆವು. ಭೂಮಂಡಲದ ರಾಜರ ನಡುವೆ ದಾರುಣವಾದ ಮತ್ತು ಸರ್ವವಿನಾಶಕವಾದ ಈ ಮಹಾಯುದ್ಧವು ನಡೆಯುತ್ತಲೇ ಇರಲಿಲ್ಲ.

ವಿದ್ವಾಂಸರಾದವರು ಈ ಎಲ್ಲವೂ ಬಲಿಷ್ಠನ ಉಪಭೋಗ್ಯವಸ್ತುಗಳೆಂದು ಹೇಳುತ್ತಾರೆ. ಸ್ಥಾವರ-ಜಂಗಮಗಳೆಲ್ಲವೂ ಬಲಿಷ್ಠನಾದವನ ಪಾಲನೆಗೇ ಸೇರಿದುದಾಗಿವೆ.

**ಆದದಾನಸ್ಯ ಚೇದ್ರಾಜ್ಯಂ ಯೇ ಕೇಚಿತ್ಪರಿಪನ್ಥಿನಃ ।**
**ಹನ್ತವ್ಯಾಸ್ತ ಇತಿ ಪ್ರಾಜ್ಞಾಃ ಕ್ಷತ್ರಧರ್ಮವಿದೋ ವಿದುಃ ॥೭॥**

ರಾಜ್ಯಗ್ರಹಣಕಾಲದಲ್ಲಿ ಯಾರಾದರೂ ಶತ್ರುಗಳು ವಿರೋಧಿಸಿದ್ದೇ ಆದರೆ ಅಂತಹವರನ್ನು ಒಡನೆಯೇ ಸಂಹರಿಸಬೇಕೆಂದು ಕ್ಷತ್ರಧರ್ಮವನ್ನು ತಿಳಿದಿರುವ ಪ್ರಾಜ್ಞರು ಹೇಳುತ್ತಾರೆ.

ಹೀಗೆ ನಮ್ಮ ರಾಜ್ಯವನ್ನು ನಾವು ಪಡೆದುಕೊಳ್ಳಲು ಯಾರು ನಮಗೆ ಅಡ್ಡಿಯನ್ನುಂಟುಮಾಡಿದರೋ, ಆ ಅಪರಾಧಿಗಳನ್ನು ಅಥವಾ ಶತ್ರುಗಳನ್ನು ನಾವು ಸಂಹಾರಮಾಡಿದ್ದೇವೆ. ಅವರೆಲ್ಲರನ್ನೂ ಸಂಹಾರಮಾಡಿದನಂತರ ಧರ್ಮದಿಂದ ಪ್ರಾಪ್ತವಾಗಿರುವ ಈ ಭೂಮಂಡಲವನ್ನು ನೀನು ನಮ್ಮೊಡನೆ ಉಪಭೋಗಿಸು.

**ಯಥಾ ಹಿ ಪುರುಷಃ ಖಾತ್ವಾ ಕೂಪಮಪ್ರಾಪ್ಯ ಚೋದಕಮ್ ।**
**ಪಙ್ಕದಿಗ್ಧೋ ನಿವರ್ತೇತ ಕರ್ಮೇದಂ ನಸ್ತಥೋಪಮಮ್ ॥೮॥**

ಒಂದು ವೇಳೆ ನಿನ್ನ ಅಭಿಪ್ರಾಯದಂತೆ ನಮ್ಮ ಶತ್ರುಗಳೆಲ್ಲರನ್ನೂ ಸಂಹರಿಸಿ, ಪ್ರಾಪ್ತವಾಗಿರುವ ಈ ರಾಜ್ಯವನ್ನು ಉಪಭೋಗಿಸದಿದ್ದರೆ–ಕಷ್ಟಪಟ್ಟು ಬಾವಿಯನ್ನು ತೋಡಿ ನೀರನ್ನು ಪಡೆಯದೇ ಕೆಸರನ್ನು ಮೈಗೆ ಮೆತ್ತಿ

ಕೊಂಡು ಹೊರಬಂದ ಪುರುಷನಂತೆ–ನಮ್ಮ ಸ್ಥಿತಿಯೂ ಆಗುತ್ತದೆ. ನಮ್ಮ ಪರಾಕ್ರಮವೆಲ್ಲವೂ ವ್ಯರ್ಥವಾದಂತಾಗುತ್ತದೆ.

**ಯಥಾರುಹ್ಯ ಮಹಾವೃಕ್ಷಮುಪಹೃತ್ಯ ತತೋ ಮಧು ।**
**ಅಪ್ರಾಶ್ಯ ನಿಧನಂ ಗಚ್ಛೇತ್ಕರ್ಮೇದಂ ನಸ್ತಥೋಪಮಮ್ ॥೧೦॥**

ದೊಡ್ಡಮರವನ್ನು ಹತ್ತಿ ಜೇನುಹುಳುಗಳಿಂದ ಕಡಿಸಿಕೊಂಡು ಬಹಳ ಕಷ್ಟಪಟ್ಟು ಜೇನುತುಪ್ಪವನ್ನು ಬಿಡಿಸಿಕೊಂಡು ಅದನ್ನು ಸವಿಯುವ ಮುನ್ನವೇ ನಿಧನಹೊಂದಿದವನ ಸಾದೃಶ್ಯವೇ ನಮ್ಮದೂ ಆಗುತ್ತದೆ.

**ಯಥಾ ಮಹಾನ್ತಮಧ್ವಾನಮಾಶಯಾ ಪುರುಷಃ ಪತನ್ ।**
**ಸ ನಿರಾಶೋ ನಿವರ್ತೇತ ಕರ್ಮೈತನ್ನಸ್ತಥೋಪಮಮ್ ॥೧೧॥**

ಯಾವುದೋ ದೊಡ್ಡ ನಿಧಿಯು ಸಿಗುವುದೆಂಬ ಆಶೆಯಿಂದ ಸಾವಿರಾರು ಯೋಜನಗಳಷ್ಟು ದೂರ ಹೋಗಿ ಅಲ್ಲಿ ಏನೂ ಇಲ್ಲವೆಂದು ತಿಳಿದೊಡನೆಯೇ ನಿರಾಶೆಯಿಂದ ಹಿಂದಿರುಗುವವನ ಕೆಲಸಕ್ಕೆ ಈಗಿನ ನಮ್ಮ ಕಾರ್ಯವೂ ಅನುಗುಣವಾಗುತ್ತದೆ.

**ಯಥಾ ಶತ್ರೂನ್ಘಾತಯಿತ್ವಾ ಪುರುಷಃ ಕುರುನನ್ದನ ।**
**ಆತ್ಮಾನಂ ಘಾತಯೇತ್ಪಶ್ಚಾತ್ಕರ್ಮೇದಂ ನಸ್ತಥೋಪಮಮ್ ॥೧೨॥**

ಕುರುನಂದನನೇ! ವೀರನೊಬ್ಬನು ತನ್ನ ಶತ್ರುಗಳೆಲ್ಲರನ್ನೂ ಸಂಹರಿಸಿದ ಬಳಿಕ ತಾನೂ ಆತ್ಮಹತ್ಯೆಮಾಡಿಕೊಂಡಂತೆ ನಮ್ಮ ಇಂದಿನ ಕೃತಿಯಾಗುತ್ತದೆ.

**ಯಥಾನ್ನಂ ಕ್ಷುಧಿತೋ ಲಬ್ಧ್ವಾ ನ ಭುಞ್ಜೀಯಾದ್ಯದೃಚ್ಛಯಾ ।**
**ಕಾಮೀವ ಕಾಮಿನೀಂ ಲಬ್ಧ್ವಾ ಕರ್ಮೇದಂ ನಸ್ತಥೋಪಮಮ್ ॥೧೩॥**

ಹಸಿವಿನಿಂದ ಬಳಲುತ್ತಿರುವವನು, ಅನ್ನವನ್ನು ಪಡೆದುಕೊಳ್ಳುತ್ತಾನೆ. ಆದರೆ ಅದನ್ನು ಸ್ವೇಚ್ಛೆಯಿಂದ ತಿನ್ನಲು ಅವನಿಗೆ ಸಾಧ್ಯವಾಗುವುದಿಲ್ಲ. ಕಾಮುಕನಾದವನು ತಾನು ಕಾಮಿಸಿದ ಸ್ತ್ರೀಯನ್ನು ವಶಪಡಿಸಿಕೊಳ್ಳುತ್ತಾನೆ. ಆದರೆ ಅವಳೊಡನೆ ಸ್ವೇಚ್ಛೆಯಿಂದ ರತಿಸುಖವನ್ನು ಅನುಭವಿಸಲು ಸಾಧ್ಯ ವಾಗುವುದಿಲ್ಲ. ನೀನು ಹೇಳುವುದನ್ನು ನೋಡಿದರೆ ನಮ್ಮ ಕಾರ್ಯವೂ ಹಾಗೆಯೇ ನಿಷ್ಫಲವಾಗುವುದು.

**ವಯಮೇವಾತ್ರ ಗರ್ಹ್ಯಾ ಹಿ ಯದ್ವಯಂ ಮನ್ದಚೇತಸಮ್ ।**
**ತ್ವಾಂ ರಾಜನ್ನನುಗಚ್ಛಾಮೋ ಜ್ಯೇಷ್ಠೋಽಯಮಿತಿ ಭಾರತ ॥೧೪॥**

ಭಾರತ! ನಿಜವಾಗಿ ಹೇಳುವುದಾದರೆ ನಾವೇ ನಿಂದನೀಯರು. ನಮ್ಮದೇ ಅಪರಾಧ. ನಾವಾದರೋ ಮಂದಬುದ್ಧಿಯವನಾದ ನಿನ್ನನ್ನು ದೊಡ್ಡವನೆಂದು ಪುರಸ್ಕರಿಸಿ ನಿನ್ನನ್ನೇ ಅನುಸರಿಸಿ ನಡೆಯುತ್ತಿರುವೆವಲ್ಲವೇ?

**ವಯಂ ಹಿ ಬಾಹುಬಲಿನಃ ಕೃತವಿದ್ಯಾ ಮನಸ್ವಿನಃ ।**
**ಕ್ಲೀಬಸ್ಯ ವಾಕ್ಯೇ ತಿಷ್ಠಾಮೋ ಯಥೈವಾಶಕ್ತಯಸ್ತಥಾ ॥೧೫॥**

ಯುಧಿಷ್ಠಿರ! ಈ ವಿಚಿತ್ರವನ್ನಾದರೂ ನೋಡು. ನಾವು ಬಾಹುಬಲ ವುಳ್ಳವರಾಗಿದ್ದೇವೆ. ಅಸ್ತ್ರ-ಶಸ್ತ್ರಗಳಲ್ಲಿ ವಿಶೇಷವಾದ ಪಾಂಡಿತ್ಯವುಳ್ಳವರಾಗಿ ದ್ದೇವೆ. ಜಿತೇಂದ್ರಿಯರಾಗಿದ್ದೇವೆ. ಹೀಗಿದ್ದರೂ ಅಸಮರ್ಥರಾದ ಮನುಷ್ಯ ರಂತೆ ನಪುಂಸಕನೊಬ್ಬನ ಮಾತಿನಂತೆ ನಡೆದುಕೊಳ್ಳುತ್ತಿದ್ದೇವೆ.

**ಅಗತೀಕಗತೀನಸ್ಮಾನ್ನಷ್ಟಾರ್ಥಾನರ್ಥಸಿದ್ಧಯೇ ।**
**ಕಥಂ ವೈ ನಾನುಪಶ್ಯೇಯುರ್ಜನಾಃ ಪಶ್ಯತ ಯಾದೃಶಮ್ ॥೧೬॥**

ಅನಾಥರಕ್ಷಕರಾದ ನಾವು ಅರ್ಥಹೀನರಾಗಿರುವುದನ್ನು ಜನಗಳು ಹೇಗೆ ತಾನೇ ನೋಡದೇ ಇರುತ್ತಾರೆ? ಆದುದರಿಂದ ನಾನು ಹೇಳುವುದು ಯುಕ್ತವೋ ಅಯುಕ್ತವೋ ಎಂಬುದನ್ನು ಎಲ್ಲರೂ ಯೋಚಿಸಿರಿ. ಸಮರ್ಥರಾದವರು ಸ್ವಾರ್ಥಸಿದ್ಧಿಗಾಗಿ ಪ್ರಯತ್ನಿಸಲೇಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. (ಅನಾಥರಕ್ಷಕರಾಗಿರುವ ನಾವು ದೌರ್ಬಲ್ಯವನ್ನು ತೋರಬಾರದು. ಅರ್ಥಸಿದ್ಧಿಗಾಗಿ ಜನರು ನಮ್ಮನ್ನೇ ಆಶ್ರಯಿಸಿರುತ್ತಾರೆ. ಒಂದು ವೇಳೆ ನಾವೇ ರಾಜ್ಯಪರಿಪಾಲನೆಯಲ್ಲಿ ದೌರ್ಬಲ್ಯವನ್ನು ತೋರಿಸಿದರೆ ಜನರು ನಮ್ಮ ವಿಷಯದಲ್ಲಿ ಏನೆಂದುಕೊಂಡಾರು? ನಮ್ಮ ದೌರ್ಬಲ್ಯವನ್ನು ಅವರು ಕಾಣದೇ ಇರುವರೇ? ಆದುದರಿಂದ ಈ ಸಮಯದಲ್ಲಿ ರಾಜ್ಯಪರಿತ್ಯಾಗಮಾಡುವುದು ಸರ್ವಥಾ ಯುಕ್ತವಲ್ಲ.)

**ಆಪತ್ಕಾಲೇ ಹಿ ಸಂನ್ಯಾಸಃ ಕರ್ತವ್ಯ ಇತಿ ಶಿಷ್ಯತೇ ।**
**ಜರಯಾಭಿಪರೀತೇನ ಶತ್ರುಭಿರ್ವ್ಯಂಸಿತೇನ ವಾ ॥೧೭॥**

ಸಂನ್ಯಾಸವನ್ನು ಯಾವಾಗ ತೆಗೆದುಕೊಳ್ಳಬೇಕೆಂಬುದಕ್ಕೆ ಶಾಸ್ತ್ರವು ಹೀಗೆ ಹೇಳುತ್ತದೆ : ಆಪತ್ಕಾಲದಲ್ಲಿ ಮಾತ್ರವೇ ಸಂನ್ಯಾಸವನ್ನು ತೆಗೆದುಕೊಳ್ಳಬೇಕು. ಮುಪ್ಪಿನಿಂದ ಗಲಿತವಾದ ಶರೀರವುಳ್ಳವನೂ ಸಂನ್ಯಾಸವನ್ನು ತೆಗೆದು ಕೊಳ್ಳಬಹುದು. ಶತ್ರುಗಳಿಂದ ರಾಜ್ಯ-ಧನ-ಸಂಪತ್ತುಗಳನ್ನು ಕಳೆದುಕೊಂಡು ವಂಚಿತನಾದವನೂ ಸಂನ್ಯಾಸವನ್ನು ತೆಗೆದುಕೊಳ್ಳಬಹುದು.

**ತಸ್ಮಾದಿಹ ಕೃತಪ್ರಜ್ಞಾಸ್ತ್ಯಾಗಂ ನ ಪರಿಚಕ್ಷತೇ ।**
**ಧರ್ಮವ್ಯತಿಕ್ರಮಂ ಚೈವ ಮನ್ಯನ್ತೇ ಸೂಕ್ಷ್ಮದರ್ಶಿನಃ ॥೧೮॥**

ಈಗ ನಮಗೆ ಆಪತ್ಕಾಲವು ಒದಗಿರುವುದಿಲ್ಲ ; ನಾವು ವೃದ್ಧರೂ ಆಗಿಲ್ಲ; ಶತ್ರುಗಳಿಂದ ಪರಾಜಯವನ್ನೂ ಹೊಂದಿರುವುದಿಲ್ಲ. ಇಂತಹ ಸಂದರ್ಭದಲ್ಲಿ ಪ್ರಾಜ್ಞರಾದವರು ರಾಜ್ಯತ್ಯಾಗವನ್ನು ಅಥವಾ ಸಂನ್ಯಾಸಸ್ವೀಕಾರವನ್ನು ಖಂಡಿತವಾಗಿಯೂ ಪ್ರಶಂಸಿಸುವುದಿಲ್ಲ. ಧರ್ಮಸೂಕ್ಷ್ಮವನ್ನು ತಿಳಿದವರು, ರಾಜ್ಯವನ್ನು ಧರ್ಮದಿಂದ ಪರಿಪಾಲಿಸಬೇಕಾಗಿರುವ ಈ ಸಮಯದಲ್ಲಿ ರಾಜ್ಯಪರಿತ್ಯಾಗಮಾಡಿ ಹೋಗುವುದನ್ನು ಧರ್ಮದ ವ್ಯತಿಕ್ರಮವೆಂದೇ ಭಾವಿಸುತ್ತಾರೆ.

**ಕಥಂ ತಸ್ಮಾತ್ಸಮುತ್ಪನ್ನಾಸ್ತನ್ನಿಷ್ಠಾಸ್ತದುಪಾಶ್ರಯಾಃ ।**
**ತದೇವ ನಿನ್ದಾಂ ಭಾಷೇಯುರ್ಧಾತಾ ತತ್ರ ನ ಗರ್ಹ್ಯತೇ ॥೧೯॥**

ಯಾರು ಕ್ಷತ್ರಿಯವರ್ಣದಲ್ಲಿ ಜನ್ಮತಾಳಿರುವರೋ, ಯಾರು ಕ್ಷತ್ರಿಯ ಧರ್ಮದಲ್ಲಿಯೇ ನಿರತರಾಗಿರುವರೋ, ಯಾರು ಕ್ಷತ್ರಿಯಧರ್ಮವನ್ನೇ ಆಶ್ರಯಿಸಿ ಜೀವನವನ್ನು ನಿರ್ವಹಿಸುತ್ತಿರುವರೋ, ಅವರೇ ಕ್ಷಾತ್ರಧರ್ಮವನ್ನು ಹೇಗೆ ನಿಂದಿಸುವರು? ಇದರಿಂದ ಕ್ಷತ್ರಿಯರು, ಯುದ್ಧಧರ್ಮವನ್ನು ವಿಧಿಸಿದ ವಿಧಾತನನ್ನೇ ನಿಂದನೆಮಾಡಿದಂತಾಗುವುದಲ್ಲವೇ?

*** ಶ್ರಿಯಾ ವಿಹೀನೈರಧನೈರ್ನಾಸ್ತಿಕೈಃ ಸಂಪ್ರವರ್ತಿತಮ್ ।**
**ವೇದವಾದಸ್ಯ ವಿಜ್ಞಾನಂ ಸತ್ಯಾಭಾಸಮಿವಾನೃತಮ್ ॥೨೦॥**

---

* ಶ್ರಿಯಾ ಎಂಬುದಕ್ಕೆ ವ್ಯಾಖ್ಯಾನಕಾರರು : ಋಚಃ ಸಾಮಾನಿ ಯಜೂಗ್ಂಷಿ ।

ಋಕ್ಸಾಮ-ಯಜುಸ್ಸುಗಳೆಂಬ ಶ್ರೀಯಿಂದ (ರಾಜ್ಯಶ್ರೀಯಿಂದ) ವಿಹೀನರಾದವರು, ನಿರ್ಧನರು ಮತ್ತು ನಾಸ್ತಿಕರು-ವೇದಗಳ ಅರ್ಥವಾದ ವಾಕ್ಯಗಳಿಂದ (ಪ್ರಶಂಸಾತ್ಮಕವಾದ ವಾಕ್ಯಗಳಿಂದ) ಪ್ರತಿಪಾದಿತವಾದ ವಿಜ್ಞಾನದ (ಅಧ್ಯಾತ್ಮಜ್ಞಾನದ) ಆಶ್ರಯವನ್ನು ಪಡೆದವರಾಗಿ ಸತ್ಯದಂತೆ ಕಾಣುವ ಮಿಥ್ಯಾಮತವನ್ನು (ಸಂನ್ಯಾಸಮತವನ್ನು ) ಪ್ರಚಾರಮಾಡುತ್ತಾರೆ. ಅಂತಹ ಅರ್ಥವಾದಗಳನ್ನು ಆಧಾರವಾಗಿಟ್ಟುಕೊಂಡು ಕ್ಷತ್ರಿಯನಾದವನು ಸಂನ್ಯಾಸವನ್ನು ಸ್ವೀಕರಿಸುವುದು ಖಂಡಿತವಾಗಿಯೂ ಉಚಿತವಲ್ಲ.

**ಶಕ್ಯಂ ತು ಮೌನಮಾಸ್ಥಾಯ ಬಿಭ್ರತಾತ್ಮಾನಮಾತ್ಮನಾ ।**
**ಧರ್ಮಚ್ಛದ್ಮ ಸಮಾಸ್ಥಾಯ ಚ್ಯವಿತುಂ ನ ತು ಜೀವಿತುಮ್ ॥೨೧॥**

ಧರ್ಮದ ಸೋಗನ್ನು ಹಾಕಿಕೊಂಡು ಮೌನಿಯಾಗಿ ತನ್ನ ಹೊಟ್ಟೆಯನ್ನು ಮಾತ್ರವೇ ಹೊರೆದುಕೊಳ್ಳುತ್ತಾ ಇರಬಹುದು. ಆದರೆ ಇದರಿಂದ ಕಾಲಯಾಪನೆಮಾಡಬಹುದೇ ಹೊರತು ಜೀವನದ ಸಾರ್ಥಕ್ಯವನ್ನು ಹೊಂದಲು ಸಾಧ್ಯವಾಗುವುದಿಲ್ಲ.

**ಶಕ್ಯಂ ಪುನರರಣ್ಯೇಷು ಸುಖಮೇಕೇನ ಜೀವಿತುಮ್ ।**
**ಅಬಿಭ್ರತಾ ಪುತ್ರಪೌತ್ರಾನ್ದೇವರ್ಷೀನತಿಥೀನ್ಪಿತೄನ್ ॥೨೨॥**

ಮಕ್ಕಳು-ಮೊಮ್ಮಕ್ಕಳನ್ನು ಸಾಕಲಾಗದವನೂ ದೇವರ್ಷಿ-ಪಿತೃಗಳನ್ನೂ ಮತ್ತು ಅತಿಥಿಗಳನ್ನೂ ಪಂಚಮಹಾಯಜ್ಞಗಳಿಂದ ತೃಪ್ತಿಪಡಿಸಲಾಗದವನೂ ಏಕಾಕಿಯಾಗಿ ಅರಣ್ಯದಲ್ಲಿ ಸುಖವಾಗಿ ಜೀವಿಸಿಕೊಂಡಿರಲು ಸಾಧ್ಯ. ಆದರೆ ನಿನ್ನಂತಹವನಿಗೆ ಹಾಗೆ ಜೀವಿಸುವುದು ಉಚಿತವೆನಿಸುವುದಿಲ್ಲ.

**ನೇಮೇ ಮೃಗಾಃ ಸ್ವರ್ಗಜಿತೋ ನ ವರಾಹಾ ನ ಪಕ್ಷಿಣಃ ।**
**ಅಥಾನ್ಯೇನ ಪ್ರಕಾರೇಣ ಪುಣ್ಯಮಾಹುರ್ನ ತಂ ಜನಾಃ ॥೨೩॥**

ಪುಣ್ಯಸಂಪಾದನೆಯು ಅಥವಾ ಸ್ವರ್ಗಪ್ರಾಪ್ತಿಯು ಅರಣ್ಯವಾಸ ದಿಂದಲೇ ಸಿದ್ಧವಾಗಿಬಿಡುವುದಿಲ್ಲ. ಅರಣ್ಯವಾಸದಿಂದಲೇ ಸ್ವರ್ಗವು ಲಭಿಸು

---

ಸಾ ಹಿ ಶ್ರೀರಮೃತಾ ಸತಾಮ್–ಎಂಬ ಶ್ರುತಿಪ್ರಮಾಣದಂತೆ ತ್ರಯ್ಯಾ ವಿದ್ಯಯಾ ವಿಹೀನೈಃ = ಮೂರು ವೇದಗಳಿಂದ ವಿಹೀನರಾದವರು–ಎಂದು ಅರ್ಥಮಾಡಿರುತ್ತಾರೆ.

ವುದಾಗಿದ್ದರೆ–ಮೃಗಗಳೂ, ಹಂದಿಗಳೂ ಮತ್ತು ಪಕ್ಷಿಗಳೂ ಸ್ವರ್ಗವನ್ನು ಜಯಿಸಿಬಿಡಬಹುದಾಗಿದ್ದಿತು. ಆದರೆ ವನವಾಸದಿಂದಲೇ ಮೃಗಗಳಾಗಲೀ, ಹಂದಿಗಳಾಗಲೀ, ಪಕ್ಷಿಗಳಾಗಲೀ ಸ್ವರ್ಗಕ್ಕೆ ಹೋಗಲಾರವು. ವನವಾಸ ವಲ್ಲದೇ ಇನ್ನೂ ಅನೇಕ ವಿಧಾನಗಳಿಂದ ಪುಣ್ಯವನ್ನು ಸಂಪಾದಿಸಬಹುದೆಂದು ಶ್ರೇಷ್ಠಪುರುಷರು ಹೇಳುತ್ತಾರೆ. ಅರಣ್ಯವಾಸಮಾತ್ರದಿಂದಲೇ ಪುಣ್ಯವು ಲಭಿಸುವುದೆಂದು ಅವರು ಭಾವಿಸುವುದಿಲ್ಲ.

**ಯದಿ ಸಂನ್ಯಾಸತಃ ಸಿದ್ಧಿಂ ರಾಜಾ ಕಶ್ಚಿದವಾಪ್ನುಯಾತ್ ।**
**ಪರ್ವತಾಶ್ಚ ದ್ರುಮಾಶ್ಚೈವ ಕ್ಷಿಪ್ರಂ ಸಿದ್ಧಿಮವಾಪ್ನುಯುಃ ॥೨೪॥**

ಯಾವನಾದರೂ ರಾಜನು ಸರ್ವಸಂಗಪರಿತ್ಯಾಗಮಾಡಿ ಸಂನ್ಯಾಸಾ ಶ್ರಮವನ್ನು ಸ್ವೀಕರಿಸುವುದರಿಂದಲೇ ಸಿದ್ಧಿಯನ್ನು ಪಡೆಯುವನೆನ್ನುವು ದಾದರೆ–ಅರಣ್ಯದಲ್ಲಿ ಯಾವ ಗೋಜಿಗೂ ಹೋಗದೇ ಸರ್ವಸಂಗಪರಿತ್ಯಾಗ ಮಾಡಿ ಸದಾಕಾಲದಲ್ಲಿಯೂ ಒಂದೇ ಸ್ಥಳದಲ್ಲಿ ಪ್ರತಿಷ್ಠಿತವಾಗಿರುವ ಪರ್ವತ ಗಳೂ ಮತ್ತು ವೃಕ್ಷಗಳೂ ಬಹಳ ಬೇಗ ಸಿದ್ಧಿಯನ್ನು ಪಡೆದುಕೊಂಡು ಬಿಡುತ್ತಿದ್ದುವು.

**ಏತೇ ಹಿ ನಿತ್ಯಸಂನ್ಯಾಸಾ ದೃಶ್ಯನ್ತೇ ನಿರುಪದ್ರವಾಃ ।**
**ಅಪರಿಗ್ರಹವನ್ತಶ್ಚ ಸತತಂ ಬ್ರಹ್ಮಚಾರಿಣಃ ॥೨೫॥**

ನಾವು ನೋಡುತ್ತಿರುವಂತೆಯೇ ಪರ್ವತ-ವೃಕ್ಷಗಳು ನಿತ್ಯಸಂನ್ಯಾಸಿ ಗಳಂತೆಯೇ ನಮಗೆ ಕಾಣಿಸಿಕೊಳ್ಳುತ್ತಿವೆ. ಸಂನ್ಯಾಸಿಯಲ್ಲಿರಬೇಕಾದ ಎಲ್ಲ ಲಕ್ಷಣಗಳೂ ಇವುಗಳಲ್ಲಿವೆ. ಇವು ಯಾರಿಗೂ ಉಪದ್ರವವನ್ನು ಕೊಡುವುದಿಲ್ಲ. ಅವುಗಳನ್ನು ತುಳಿದು-ಕಡಿದು-ಕತ್ತರಿಸಿದವನಿಗೂ ಅವು ಪ್ರತೀಕಾರಮಾಡಲು ಹೋಗುವುದಿಲ್ಲ. ಅವು ಅಷ್ಟು ಸಾತ್ತ್ವಿಕವೃತ್ತಿ ಯುಳ್ಳವುಗಳು. ತಮ್ಮಲ್ಲಿರುವ ಹಣ್ಣು-ಹಂಪಲುಗಳನ್ನು ಬೇರೆಯವರಿಗೆ ಹಂಚಿಕೊಡುವುವೇ ಹೊರತು ಬೇರೆಯವರಿಂದ ಪರಿಗ್ರಹಮಾಡುವು ದೆಂದರೇನೆಂಬುದೇ ಅವುಗಳಿಗೆ ತಿಳಿಯದು. ಆದುದರಿಂದ ಸಂನ್ಯಾಸಿ ಯಂತೆಯೇ ಪರ್ವತ-ವೃಕ್ಷಗಳೂ ಅಪರಿಗ್ರಹವನ್ನೇ ಆಚರಿಸುತ್ತವೆ. ಮೇಲಾಗಿ ಅವುಗಳು ಯಾವಾಗಲೂ ಬ್ರಹ್ಮಚರ್ಯವ್ರತದಲ್ಲಿಯೇ ಇರುತ್ತವೆ. ಸರ್ವ

ಸಂಗಪರಿತ್ಯಾಗಮಾಡಿ ಸಂನ್ಯಾಸಿಯಾಗುವುದೇ ಸಿದ್ಧಿಗೆ ಮೂಲವಾಗಿದ್ದರೆ ಸ್ವಭಾವತಃ ಸರ್ವಸಂಗಪರಿತ್ಯಾಗಮಾಡಿ ಸಂನ್ಯಾಸಿಗಳಂತೆಯೇ ಇರುವ ಕಾಡಿನಲ್ಲಿರುವ ಪರ್ವತಗಳೂ, ವೃಕ್ಷಗಳೂ ಸಿದ್ಧಿಪಡೆಯಲೇಬೇಕಾಗಿತ್ತಲ್ಲವೇ?

**ಅಥ ಚೇದಾತ್ಮಭಾಗ್ಯೇಷು ನಾನ್ಯೇಷಾಂ ಸಿದ್ಧಿಮಶ್ನುತೇ ।**
**ತಸ್ಮಾತ್ಕರ್ಮೈವ ಕರ್ತವ್ಯಂ ನಾಸ್ತಿ ಸಿದ್ಧಿರಕರ್ಮಣಃ ॥೨೬॥**

ಪರ್ವತ-ವೃಕ್ಷ-ಮೃಗಗಳು ಕರ್ಮಯೋನಿಗಳಲ್ಲ. ಹಿಂದೆ ಮಾಡಿದ ಕರ್ಮಫಲವನ್ನು ಈಗ ಅನುಭವಿಸುತ್ತಿವೆ. ನಾವು ಕರ್ಮಯೋನಿಗಳಲ್ಲಿ ಹುಟ್ಟಿದವರು. ಸ್ವಪ್ರಯತ್ನದಿಂದಲೇ ಶಾಶ್ವತವಾದ ಪರಮಪದವನ್ನು ಸೇರಬೇಕು. ನಮಗೆ ಸಂಬಂಧಿಸಿದ ಭಾಗ್ಯದ ವಿಷಯದಲ್ಲಿ ನಾವು ಕರ್ಮಮಾಡಿ ಭಾಗ್ಯವನ್ನು ಪಡೆದುಕೊಳ್ಳಬೇಕೇ ಹೊರತು ಬೇರೆಯವರು ಸಿದ್ಧಿಪಡೆದುಕೊಳ್ಳುವುದರಿಂದ ನಮ್ಮ ಭಾಗ್ಯವು ವೃದ್ಧಿಯಾಗುವುದಿಲ್ಲ–ಎಂದರೆ : ಈಗ ಯಾವುದೇ ಸಿದ್ಧಿಯನ್ನು ಪಡೆದುಕೊಳ್ಳಬೇಕಾದರೂ ಕರ್ಮಮಾಡುವುದೇ ಮುಖ್ಯಕರ್ತವ್ಯವಾಗಿರುತ್ತದೆ. ಸರ್ವಸಂಗಗಳನ್ನೂ–ಸರ್ವಕರ್ಮಗಳನ್ನೂ ಪರಿತ್ಯಾಗಮಾಡಿದವನಿಗೆ ಯಾವುದೂ ಸಿದ್ಧಿಸುವುದಿಲ್ಲ.

**ಔದಕಾಃ ಸೃಷ್ಟಯಶ್ಚೈವ ಜನ್ತವಃ ಸಿದ್ಧಿಮಾಪ್ನುಯುಃ ।**
**ತೇಷಾಮಾತ್ಮೈವ ಭರ್ತವ್ಯೋ ನಾನ್ಯಃ ಕಶ್ಚನ ವಿದ್ಯತೇ ॥೨೭॥**

ಯಾರ ಸಂಗವನ್ನೂ ಸೇರದೇ ತನ್ನೊಬ್ಬನ ಭರಣ-ಪೋಷಣಗಳಿಂದಲೇ ಪರಮಪದವು ಸಿದ್ಧಿಸುವುದೆನ್ನುವುದಾದರೆ ಜಲಚರಪ್ರಾಣಿಗಳೂ ಮತ್ತು ಭೂಮಿಯ ಮೇಲಿರುವ ಎಲ್ಲ ವಿಧವಾದ ಪ್ರಾಣಿಗಳೂ ಆ ಸಿದ್ಧಿಯನ್ನು ಪಡೆಯಬೇಕಾಗಿದ್ದಿತು. ಏಕೆಂದರೆ : ಆ ಪ್ರಾಣಿಗಳೆಲ್ಲವೂ ತಮ್ಮ ಹೊಟ್ಟೆಯನ್ನು ತಾವೇ ಹೊರೆದುಕೊಳ್ಳಬೇಕಾಗಿದೆ. ಆ ಪ್ರಾಣಿಗಳು ಇತರ ಪ್ರಾಣಿಗಳ ಸಹವಾಸವನ್ನೂ ಮಾಡಬೇಕಾಗಿಲ್ಲ. ಇತರ ಪ್ರಾಣಿಗಳ ಪೋಷಣೆಯ ಭಾರವನ್ನೂ ವಹಿಸಬೇಕಾಗಿಲ್ಲ. ಆದರೆ ಇಂತಹ ಸ್ವಭಾವವಿರುವ ಪ್ರಾಣಿಗಳಿಗೆ ಪರಮಪದವು ಸಿದ್ಧಿಯಾಯಿತೆಂದು ಯಾರೂ ಇದುವರೆಗೂ ಹೇಳಿಲ್ಲ. ಹಾಗದು ಸಿದ್ಧಿಸುವುದೂ ಇಲ್ಲ.

**ಅವೇಕ್ಷಸ್ವ ಯಥಾ ಸ್ವೈಃ ಸ್ವೈಃ ಕರ್ಮಭಿರ್ವ್ಯಾಪೃತಂ ಜಗತ್ ।**
**ತಸ್ಮಾತ್ಕರ್ಮೈವ ಕರ್ತವ್ಯಂ ನಾಸ್ತಿ ಸಿದ್ಧಿರಕರ್ಮಣಃ ॥೨೮॥**

ಅಣ್ಣ! ಈ ಅಖಂಡವಿಶ್ವವೂ, ವಿಶ್ವದಲ್ಲಿರುವ ಪ್ರಾಣಿಗಳೂ ತಮ-ತಮಗೆ ಸಂಬಂಧಿಸಿದ ಕರ್ಮಗಳಿಂದ ಹೇಗೆ ಬಂಧಿಸಲ್ಪಟ್ಟಿವೆಯೆಂಬುದನ್ನು ನೀನೇ ನೋಡು. ಯಾವ ಪ್ರಾಣಿಯೇ ಆಗಲೀ, ಮನುಷ್ಯನೇ ಆಗಲೀ ತಮ್ಮ ಕರ್ಮಗಳನ್ನು ಅನವರತವಾಗಿ ಮಾಡುತ್ತಲೇ ಇರುತ್ತಾರೆ. ಅಖಂಡವಿಶ್ವವೇ ಕರ್ಮದಿಂದ ವ್ಯಾಪ್ತವಾಗಿದೆ. ಕರ್ಮವಿಲ್ಲದೇ ಪ್ರಪಂಚವೇ ಇಲ್ಲ. ಈ ವಿಷಯವನ್ನು ನೀನು ಚೆನ್ನಾಗಿ ಪರಿಶೀಲಿಸಿ ನೋಡು. ಕರ್ಮಹೀನನಾದವನಿಗೆ ಯಾವುದೂ ಸಿದ್ಧಿಸುವುದಿಲ್ಲ. ಆದುದರಿಂದ ನೀನು ಕ್ಷತ್ರಿಯೋಚಿತವಾದ ಕರ್ಮವನ್ನು ಮಾಡುವುದೇ ನಿನ್ನ ಮುಖ್ಯ ಕರ್ತವ್ಯವಾಗಿರುತ್ತದೆ.”

೧೦ನೆಯ ಅಧ್ಯಾಯವು ಮುಗಿಯಿತು.

೧೧ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಅರ್ಜುನನು ಪಕ್ಷಿರೂಪಿಯಾದ ಇಂದ್ರನಿಗೂ ಮತ್ತು ಋಷಿಕುಮಾರರಿಗೂ ನಡೆದ ಸಂಭಾಷಣೆಯನ್ನು ಉದಾಹರಿಸುತ್ತಾ ಗೃಹಸ್ಥಧರ್ಮವೇ ಶ್ರೇಷ್ಠವೆಂದು ಪ್ರತಿಪಾದಿಸಿದುದು

ಭೀಮಸೇನನು ಸಮಾಧಾನ ಹೇಳಿದನಂತರವೂ ಯುಧಿಷ್ಠಿರನ ಮನಸ್ಸು ಬದಲಾಯಿಸಿದಂತೆ ಕಾಣಲಿಲ್ಲ. ಅರ್ಜುನನು ಪುನಃ ಸಮಾಧಾನ ಹೇಳಲು ಪ್ರಾರಂಭಿಸುತ್ತಾನೆ :

“ಭರತರ್ಷಭನೇ! ಯುಧಿಷ್ಠಿರ! ಈ ವಿಷಯದಲ್ಲಿ ಜ್ಞಾನಿಗಳಾದವರು ಬಹಳ ಹಿಂದಿನ ಇತಿಹಾಸರೂಪವಾದ ಇಂದ್ರ-ತಾಪಸಕುಮಾರರಲ್ಲಿ ನಡೆದ ಸಂಭಾಷಣೆಯನ್ನು ಉದಾಹರಿಸುತ್ತಾರೆ. ಅದನ್ನೇ ನಿನಗೂ ಹೇಳುತ್ತೇನೆ.

ಹಿಂದೊಂದು ಕಾಲದಲ್ಲಿ ಕುಲೀನರಾದ ಮಂದಬುದ್ಧಿಯ ಕೆಲವು ಬ್ರಾಹ್ಮಣಬಾಲಕರು ಮನೆಯನ್ನು ಪರಿತ್ಯಜಿಸಿ ಕಾಡಿಗೆ ಹೊರಟುಹೋದರು. ಆ ಬಾಲಕರಿಗೆ ಇನ್ನೂ ಗಡ್ಡ-ಮೀಸೆಗಳೂ ಬೆಳೆದಿರಲಿಲ್ಲ. ಸರ್ವಸಂಗಪರಿ

ತ್ಯಾಗಮಾಡಿ ಅರಣ್ಯಕ್ಕೆ ಹೋಗುವುದೇ ಶ್ರೇಷ್ಠಧರ್ಮವೆಂದು ಭಾವಿಸಿ ಸಂಪದ್ಯುಕ್ತರಾಗಿದ್ದ ಆ ಬ್ರಹ್ಮಚಾರಿಗಳು ಸಹೋದರರನ್ನೂ, ಪಿತೃಗಳನ್ನೂ, ಅಪಾರವಾದ ಸಂಪತ್ತನ್ನೂ ಪರಿತ್ಯಜಿಸಿ ಕಾಡಿಗೆ ಹೋದರು. ಅವರು ಕಾಡಿನಲ್ಲಿದ್ದಾಗ ಇಂದ್ರನು ಅವರ ಮೇಲೆ ಕೃಪೆತೋರಿದನು. ಭಗವಾನ್ ಇಂದ್ರನು ಸುವರ್ಣಮಯವಾದ ಪಕ್ಷಿಯ ರೂಪವನ್ನು ಧರಿಸಿ ಆ ಬ್ರಾಹ್ಮಣ ವಟುಗಳೊಡನೆ ಮಾತನಾಡಿದನು :

**ಸುದುಷ್ಕರಂ ಮನುಷ್ಯೈಶ್ಚ ಯತ್ಕೃತಂ ವಿಘಸಾಶಿಭಿಃ ।**
**ಪುಣ್ಯಂ ಭವತಿ ಕರ್ಮೇದಂ ಪ್ರಶಸ್ತಂ ಚೈವ ಜೀವಿತಮ್ ।**
**ಸಿದ್ಧಾರ್ಥಾಸ್ತೇ ಗತಿಂ ಮುಖ್ಯಾಂ ಪ್ರಾಪ್ತಾ ಧರ್ಮಪರಾಯಣಾಃ ॥೫॥**

* "ಅಮೃತರೂಪವಾದ ಯಜ್ಞಶೇಷವನ್ನೂ ಮತ್ತು ಭೋಜನಶೇಷವನ್ನೂ ಭಕ್ಷಿಸುವ ಮನುಷ್ಯರ (ಗೃಹಸ್ಥರ) ಕರ್ಮಗಳು ಅತಿಕಠಿನವಾದುವುಗಳು. ಅವರ ಕರ್ಮಗಳು ಪುಣ್ಯದಾಯಕವೂ ಮತ್ತು ಜೀವನಕ್ರಮವು ಅತ್ಯಂತಪ್ರಶಸ್ತವೂ ಆಗಿವೆ. ಧರ್ಮಪರಾಯಣರಾದ ಅವರು ಸಫಲಮನೋರಥರಾಗಿ ಶ್ರೇಷ್ಠವಾದ ಗತಿಯನ್ನು ಪಡೆದಿರುತ್ತಾರೆ."

ಪಕ್ಷಿಯ ಮಾತನ್ನು ಕೇಳಿದ ಬ್ರಹ್ಮಚಾರಿಗಳು ಆನಂದಭರಿತರಾಗಿ ಹೇಳುತ್ತಾರೆ :

**ಅಹೋ ಬತಾಯಂ ಶಕುನಿರ್ವಿಘಸಾಶಾನ್ಪ್ರಶಂಸತಿ ।**
**ಅಸ್ಮಾನ್ನೂನಮಯಂ ಶಾಸ್ತಿ ವಯಂ ಚ ವಿಘಸಾಶಿನಃ ॥೬॥**

"ಆಶ್ಚರ್ಯ! ಅಲ್ಲಿ ಕೇಳಿರಿ. ಆ ಪಕ್ಷಿಯು ವಿಘಸಾಶಿಗಳನ್ನು ಪ್ರಶಂಸಿಸುತ್ತಿದೆ. ನಮ್ಮನ್ನೂ ಇದು ನಿಶ್ಚಯವಾಗಿಯೂ ವಿಘಸಾಶಿಗಳಾಗಬೇಕೆಂದು ಅನುಶಾಸನಮಾಡುತ್ತಿದೆ. ನಾವೂ ವಿಘಸಾಶಿಗಳೇ (ಅನ್ನವನ್ನು

---

* ವಿಘಸಾಶಿನಃ : ವಿಘಸಃ = ಎಂದರೆ ಯಜ್ಞಶೇಷ ಅಥವಾ ಭೋಜನಶೇಷ. ಅದನ್ನು ತಿನ್ನುವವರು. ಯಜ್ಞವನ್ನು ಯಥಾವಿಧಿಯಾಗಿ ಮಾಡಿ, ಹೋಮಶೇಷವನ್ನು ಪ್ರಸಾದ ರೂಪವಾಗಿ ಭಕ್ಷಿಸುವವರು. ಅತಿಥಿ-ಅಭ್ಯಾಗತರನ್ನು ಸತ್ಕರಿಸಿ ಅವರಿಗೆ ಭೋಜನಮಾಡಿಸಿದ ನಂತರ ಉಳಿದ ಅನ್ನಶೇಷವನ್ನು ಭಕ್ಷಿಸುವವರು. ಅರ್ಥಾತ್ ಗೃಹಸ್ಥರು. ಈ ವಿಘಸಕ್ಕೆ ಅಮೃತವೆಂದೂ ಹೆಸರು. ವಿಘಸವು ಅಮೃತಕ್ಕೆ ಸಮಾನವಾದುದು. ಅಮೃತಂ ವಿಘಸೋ ಯಜ್ಞಶೇಷಭೋಜನಶೇಷಯೋಃ ( ಅಮರಃ )

ಬಿಟ್ಟು ಕಾಡಿನಲ್ಲಿ ಸಿಕ್ಕುವ ಕಂದ-ಮೂಲ-ಫಲಗಳನ್ನು ತಿನ್ನುವವರೇ) ಆಗಿರುತ್ತೇವೆ. ಆದರೆ ನಾವು ವಿಘಸಾಶಿಗಳೆಂಬ ವಿಷಯವು ಈ ಪಕ್ಷಿಗೆ ತಿಳಿದಿಲ್ಲವೆಂದು ತೋರುತ್ತದೆ."[1]

ಬ್ರಹ್ಮಚಾರಿಗಳ ಮಾತನ್ನು ಕೇಳಿಸಿಕೊಂಡ ಸುವರ್ಣಪಕ್ಷಿಯು ಹೇಳುತ್ತದೆ:



ನಾಹಂ ಯುಷ್ಮಾನ್ಪ್ರಶಂಸಾಮಿ ಪಙ್ಕದಿಗ್ಧಾನ್ರಜಸ್ವಲಾನ್ ।
ಉಚ್ಛಿಷ್ಟಭೋಜಿನೋ ಮನ್ದಾನನ್ಯೇ ವೈ ವಿಘಸಾಶಿನಃ ॥೭॥

---

1 ಬ್ರಹ್ಮಚಾರಿಗಳು ವಿಘಸ ಎಂಬುವುದನ್ನು ಯಜ್ಞಶೇಷ ಅಥವಾ ಭೋಜನಶೇಷ ಎಂಬ ಅರ್ಥದಲ್ಲಿ ತೆಗೆದುಕೊಳ್ಳುವುದಿಲ್ಲ. ವಿಗತಃ ಘಸಃ = ಅನ್ನಂ ಯಸ್ಯ ತತ್ ಅನ್ನಂ

"ಬ್ರಾಹ್ಮಣವಟುಗಳೇ! ಕೆಸರಿನಿಂದಲೂ–ಧೂಳಿನಿಂದಲೂ ಆವೃತ ರಾಗಿರುವ, ಪಕ್ಷಿಗಳ ಉಚ್ಚಿಷ್ಟವನ್ನು (ಪಕ್ಷಿಗಳು ಕಡಿದುಹಾಕಿದ ಫಲಗಳನ್ನು) ತಿನ್ನುವ ನಿಮ್ಮನ್ನು ನಾನು ಪ್ರಶಂಸೆಮಾಡುತ್ತಿಲ್ಲ. ವಿಘಸಾಶಿಗಳೆಂಬ ಮಹಾತ್ಮರು ಬೇರೆಯೇ ಇದ್ದಾರೆ. ಅವರನ್ನು ನಾನು ಪ್ರಶಂಸೆಮಾಡುತ್ತಿದ್ದೇನೆ."

"ಪಕ್ಷಿರಾಜ! ಅರಣ್ಯದಲ್ಲಿ ಕಂದ-ಮೂಲ-ಫಲಗಳನ್ನೂ, ತರಗೆಲೆ ಗಳನ್ನೂ ತಿಂದುಕೊಂಡು, ಸರ್ವಸಂಗಗಳನ್ನೂ, ಸಕಲಕರ್ಮಗಳನ್ನೂ ಪರಿತ್ಯಾಗಮಾಡಿ ಅರಣ್ಯದಲ್ಲಿ ವಾಸಮಾಡುವುದು ನಮಗೆ ಶ್ರೇಯಸ್ಕರವೆಂದು ಭಾವಿಸಿ ಈ ಮಾರ್ಗದಲ್ಲಿಯೇ ಹೋಗುತ್ತಿದ್ದೇವೆ. ನಿನ್ನ ದೃಷ್ಟಿಯಲ್ಲಿ ನಾವು ಅನುಸರಿಸಲು ಯೋಗ್ಯವಾದ ಶ್ರೇಷ್ಠವಾದ ಧರ್ಮವು ಯಾವುದೆಂಬುದನ್ನಾದರೂ ಹೇಳು. ನಾವು ನಿನ್ನ ಮಾತಿನ ಮೇಲೆ ಹೆಚ್ಚು ಶ್ರದ್ಧೆ ಮತ್ತು ವಿಶ್ವಾಸವುಳ್ಳವರಾಗಿರುತ್ತೇವೆ."

"ಬ್ರಹ್ಮಚಾರಿಗಳೇ! ನೀವು ನನ್ನ ವಿಷಯದಲ್ಲಿ ಸಂದೇಹಪಡದಿದ್ದರೆ ನೀವು ಅನುಸರಿಸಲು ಯೋಗ್ಯವಾದ ಮಾರ್ಗವು ಯಾವುದು? ಯಾವ ಮಾರ್ಗವು ನೀವು ಅನುಸರಿಸಲು ಯೋಗ್ಯವಲ್ಲ? ನಿಮಗೆ ಶ್ರೇಯಃ-ಪ್ರೇಯಗಳು ಯಾವ ಕರ್ಮದಿಂದ ಲಭ್ಯವಾಗುತ್ತವೆ?–ಈ ಎಲ್ಲ ವಿಷಯಗಳನ್ನೂ ಮನಸ್ಸಿನಲ್ಲಿಯೇ ತರ್ಕಿಸಿ ವಿಭಜಿಸಿ ನಿಮಗೆ ಹಿತವಾದ ಮಾತನ್ನು ಯಥಾವತ್ತಾಗಿ ಹೇಳುತ್ತೇನೆ."

"ತಾತ! ಪಕ್ಷಿರಾಜ! ನಾವು ನಿನ್ನ ಮಾತನ್ನು ಕೇಳುತ್ತೇವೆ. ಸಿದ್ಧಿಗೆ ಸಾಧಕವಾದ ಅನೇಕಮಾರ್ಗಗಳು ನಿನಗೆ ತಿಳಿದಿವೆ. ಧರ್ಮಾತ್ಮನೇ! ನೀನು ಹೇಳಿದಂತೆಯೇ ನಾವು ನಡೆದುಕೊಳ್ಳಲೂ ಸಿದ್ಧರಾಗಿದ್ದೇವೆ. ನಮ್ಮನ್ನು ನಿಯಂತ್ರಿಸು. ನಮಗೆ ಉಪದೇಶಮಾಡು."

---

ವಿಘಸಂ, ಅನ್ನದಿಂದ ವಿಹೀನವಾದುದು : ಅನ್ನಕ್ಕಿಂತಲೂ ಬೇರೆಯಾದುದು ಶೀರ್ಣ ತೃಣಪರ್ಣಫಲಾದಿಕಂ = ಒಣಗಿದ ಹುಲ್ಲು-ಎಲೆ ಹಣ್ಣು ಮೊದಲಾದುವುಗಳು. ಇವುಗಳನ್ನು ಭಕ್ಷಿಸುವವರು–ವಿಘಸಾಶಿಗಳು.

**ಚತುಷ್ಪದಾಂ ಗೌಃ ಪ್ರವರಾ ಲೋಹಾನಾಂ ಕಾಞ್ಚನಂ ವರಮ್ ।**
**ಶಬ್ದಾನಾಂ ಪ್ರವರೋ ಮನ್ತ್ರೋ ಬ್ರಾಹ್ಮಣೋ ದ್ವಿಪದಾಂ ವರಃ ॥೧೧॥**

"ಕುಮಾರರೇ! ನಾಲ್ಕು ಕಾಲುಗಳಿರುವ ಪ್ರಾಣಿಗಳಲ್ಲಿ ಹಸುವು ಶ್ರೇಷ್ಠವಾದುದು. ಲೋಹಗಳಲ್ಲಿ ಚಿನ್ನವು ಶ್ರೇಷ್ಠವಾದುದು. ಶಬ್ದಗಳಲ್ಲಿ ಮಂತ್ರವು ಶ್ರೇಷ್ಠವಾದುದು. ದ್ವಿಪಾದಿಗಳಲ್ಲಿ ( ಮನುಷ್ಯರಲ್ಲಿ) ಬ್ರಾಹ್ಮಣನು ಶ್ರೇಷ್ಠನು.

**ಮನ್ತ್ರೋಽಯಂ ಜಾತಕರ್ಮಾದಿರ್ಬ್ರಾಹ್ಮಣಸ್ಯ ವಿಧೀಯತೇ ।**
**ಜೀವತೋಽಪಿ ಯಥಾಕಾಲಂ ಶ್ಮಶಾನನಿಧನಾದಿಭಿಃ ॥೧೨॥**

ಬ್ರಾಹ್ಮಣನಿಗೆ ಮಂತ್ರಪೂರ್ವಕವಾದ ಜಾತಕರ್ಮಾದಿ ಸಂಸ್ಕಾರಗಳಿವೆ. ಅವನು ಎಲ್ಲಿಯವರೆಗೆ ಜೀವಿಸಿರುವನೋ ಅಲ್ಲಿಯವರೆಗೂ ಆಯಾ ಸಮಯಗಳಲ್ಲಿ ಉಪನಯನ-ವಿವಾಹಾದಿ ಸಂಸ್ಕಾರಗಳು ನಡೆಯುತ್ತಲೇ ಇರುತ್ತವೆ. ಮರಣಾನಂತರವೂ ಸ್ಮಶಾನದಲ್ಲಿ ಅಂತ್ಯೇಷ್ಟಿಸಂಸ್ಕಾರಗಳು ನಡೆಯುತ್ತವೆ.

**ಕರ್ಮಾಣಿ ವೈದಿಕಾನ್ಯಸ್ಯ ಸ್ವರ್ಗ್ಯಃ ಪನ್ಥಾಸ್ತ್ವನುತ್ತಮಃ ।**
**ಅಥ ಸರ್ವಾಣಿ ಕರ್ಮಾಣಿ ಮನ್ತ್ರಸಿದ್ಧಾನಿ ಚಕ್ಷತೇ ॥೧೩॥**

**ಆಮ್ನಾಯದೃಢವಾದೀನಿ ತಥಾ ಸಿದ್ಧಿರಿಹೇಷ್ಯತೇ ।**
**ಮಾಸಾರ್ಧಮಾಸಾ ಋತವ ಆದಿತ್ಯಶಶಿತಾರಕಮ್ ॥೧೪॥**

**ಈಹನ್ತೇ ಸರ್ವಭೂತಾನಿ ತದಿದಂ ಕರ್ಮಸಂಜ್ಞಿತಮ್ ।**
**ಸಿದ್ಧಿಕ್ಷೇತ್ರಮಿದಂ ಪುಣ್ಯಮಯಮೇವಾಶ್ರಮೋ ಮಹಾನ್ ॥೧೫॥**

ಬ್ರಾಹ್ಮಣನಾದವನಿಗೆ ವೈದಿಕಕರ್ಮಗಳೇ ಶ್ರೇಷ್ಠವಾದುವುಗಳು ಮತ್ತು ಸ್ವರ್ಗಪ್ರಾಪಕಗಳು. ಸಮಸ್ತಕರ್ಮಗಳೂ ವೇದಮಂತ್ರಗಳ ಮೂಲಕ ವಾಗಿಯೇ ಸಿದ್ಧಿಸುವುದೆಂದು ಮುನಿಗಳು ಹೇಳುತ್ತಾರೆ. ವೇದಗಳಲ್ಲಿ ಈ ಕರ್ಮಗಳ ಪ್ರತಿಪಾದನೆಯು ದೃಢವಾಗಿ ಮಾಡಲ್ಪಟ್ಟಿದೆ. ಆದುದರಿಂದ ವೇದೋಕ್ತವಾದ ಕರ್ಮಗಳ ಅನುಷ್ಠಾನದಿಂದಲೇ ಅಭೀಷ್ಟಸಿದ್ಧಿಯಾಗುತ್ತದೆ. ಮಾಸ, ಪಕ್ಷ, ಋತು, ಸೂರ್ಯ, ಚಂದ್ರ, ನಕ್ಷತ್ರಗಳು– ಇವುಗಳಿಂದ ಉಪಲಕ್ಷಿತವಾದ ಯಜ್ಞಗಳನ್ನು ಮಾಡಲು ಎಲ್ಲ ಪ್ರಾಣಿಗಳೂ ಇಚ್ಛಿ

ಪಡುತ್ತವೆ. ಯಜ್ಞಮಾಡುವುದೇ ಕರ್ಮವೆಂದು ಋಷಿಗಳೂ ಹೇಳುತ್ತಾರೆ. ಇಂತಹ ಯಜ್ಞಗಳನ್ನು ಮಾಡಿ ಸಿದ್ಧಿಯನ್ನು ಪಡೆದುಕೊಳ್ಳಲು ಗೃಹಸ್ಥಾಶ್ರಮವೇ ಪುಣ್ಯತಮವಾದ ಮಹಾನ್ ಸಿದ್ಧಿಕ್ಷೇತ್ರವಾಗಿದೆ.

**ಅಥ ಯೇ ಕರ್ಮ ನಿನ್ದನ್ತೋ ಮನುಷ್ಯಾಃ ಕಾಪಥಂ ಗತಾಃ ।**
**ಮೂಢಾನಾಮರ್ಥಹೀನಾನಾಂ ತೇಷಾಮೇನಸ್ತು ವಿದ್ಯತೇ ॥೧೬॥**

ಯಾವ ಮನುಷ್ಯರು ವೇದೋಕ್ತವಾದ ಕರ್ಮಗಳನ್ನು ನಿಂದಿಸುತ್ತಾ ವೇದೋಕ್ತಕರ್ಮಗಳಿಂದ ಹೀನವಾದ, ಕುತ್ಸಿತವಾದ ಮಾರ್ಗವನ್ನು ಅನುಸರಣೆಮಾಡುತ್ತಾರೆಯೋ–ಅವರು ಪುರುಷಾರ್ಥಗಳಿಂದ ಹೀನರಾಗಿ ಪಾಪಿಗಳಾಗುತ್ತಾರೆ. ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ಪುರುಷಾರ್ಥಗಳು ವೇದೋಕ್ತಕರ್ಮಮಾರ್ಗದಿಂದ ಚ್ಯುತರಾದವರಿಗೆ ಲಭಿಸುವುದಿಲ್ಲ. ಅಂತಹ ಮೂಢರಿಗೆ ಪಾಪವೇ ಸಂಘಟಿಸುತ್ತದೆ. ವೇದೋಕ್ತಮಾರ್ಗಗಳ ತ್ಯಾಗದಿಂದ ಅವರು ಪಾಪಿಷ್ಠರಾಗುತ್ತಾರೆ. ವೇದೋಕ್ತವಾದ ಕರ್ಮಗಳನ್ನು ಮಾಡದ ಮೂಢರು ಪುರುಷಾರ್ಥಹೀನರಾಗಿ (ಪುಣ್ಯಲೋಕಗಳು ಲಭಿಸದೇ) ಕ್ಷುದ್ರವಾದ ಸರ್ಪವೇ ಮುಂತಾದ ಯೋನಿಗಳಲ್ಲಿ ಹುಟ್ಟುತ್ತಾರೆ.

**ದೇವವಂಶಾನ್ಪಿತೃವಂಶಾನ್ಬ್ರಹ್ಮವಂಶಾಂಶ್ಚ ಶಾಶ್ವತಾನ್ ।**
**ಸಂತ್ಯಜ್ಯ ಮೂಢಾ ವರ್ತನ್ತೇ ತತೋ ಯಾನ್ತ್ಯಶ್ರುತೀಪಥಮ್ ॥೧೭॥**

ವೇದೋಕ್ತವಾದ ಕರ್ಮಗಳ ಮೂಲಕವಾಗಿ ಬ್ರಾಹ್ಮಣರು ದೇವರ್ಷಿ-ಪಿತೃಗಳನ್ನು ಆರಾಧಿಸಬೇಕು. ಆದರೆ ಮೂಢರಾದವರು ಯಜ್ಞ-ಯಾಗಾದಿಗಳಿಂದ ದೇವತೆಗಳನ್ನೂ, ಶ್ರಾದ್ಧ-ತರ್ಪಣಾದಿಗಳಿಂದ ಪಿತೃಗಳನ್ನೂ, ಸ್ವಾಧ್ಯಾಯ-ಬ್ರಹ್ಮಯಜ್ಞಗಳಿಂದ ಬ್ರಹ್ಮವಂಶೀಯರಾದ ಸನಾತನರಾದ ಋಷಿಗಳನ್ನೂ ಆರಾಧಿಸುವುದನ್ನು ಬಿಟ್ಟು ವೇದವಿರುದ್ಧವಾದ ಮಾರ್ಗವನ್ನು ಆಶ್ರಯಿಸುತ್ತಾರೆ. (ಕಿವಿಗೆ ಅವರ ಹೆಸರೂ ಬೀಳದಂತೆ ಹಾಳಾಗುತ್ತಾರೆ.)

**ಏತದ್ವೋಽಸ್ತು ತಪೋಯುಕ್ತಂ ದದಾಮೀತ್ಯೃಷಿಚೋದಿತಮ್ ।**
**ತಸ್ಮಾತ್ತತ್ತದ್ವ್ಯವಸ್ಥಾನಂ ತಪಸ್ವಿತಪ ಉಚ್ಯತೇ ॥೧೮॥**

("ಹಾಗಾದರೆ 'ತಪಸ್ಸು' ಎಂಬುದೊಂದು ಇಲ್ಲವೇ?"–ಎಂದರೆ ಅದಕ್ಕೆ ಪಕ್ಷಿಯು ಉತ್ತರಿಸುತ್ತದೆ.) ಈ ನಿಮ್ಮ ವೇದೋಕ್ತಕರ್ಮಗಳೇ (ಯಜ್ಞಗಳೇ) ತಪೋಯುಕ್ತವಾಗಲಿ. (ತಪೋಯುಕ್ತವಾಗುವುದೆಂದರೇನು? ನಿಷ್ಠಾಪೂರ್ವಿಕಾ ಸ್ಥಿತಿಃ –ನಿಷ್ಠಾಪೂರ್ವಕವಾದ ಕರ್ಮಾನುಷ್ಠಾನಗಳೇ ತಪಸ್ವಿಗಳ ತಪಸ್ಸೆಂದು ಹೇಳಲ್ಪಟ್ಟಿದೆ. ಶರೀರಶೋಷಣಾದಿಗಳೆಂದಿಗೂ ತಪಸ್ಸಾಗುವುದಿಲ್ಲ. ಇದರ ಫಲವೇನು? ಎಂದರೆ : ಋಷಿಗಳು ಮಂತ್ರದ ಮೂಲಕವಾಗಿಯೇ ಇದರ ಫಲವನ್ನೂ ಹೇಳಿದ್ದಾರೆ. ಕರ್ಮಕಾಂಡದಲ್ಲಿ (ಸಂಹಿತೆಯಲ್ಲಿ) ಇಂದ್ರನು ಹೇಳುವ ಈ ವಾಕ್ಯವು ಬರುತ್ತದೆ. **ದೇಹಿ ಮೇ ದದಾಮಿ ತೇ = ದೇವತೋದ್ದೇಶೇನ ದ್ರವ್ಯತ್ಯಾಗರೂಪಂ ದಾನಂ ಕುರು**–ದೇವತೋದ್ದೇಶದಿಂದ ದ್ರವ್ಯತ್ಯಾಗರೂಪವಾದ ದಾನವನ್ನು ಮಾಡು. **ತುಭ್ಯಂ ಚಾಹಂ ಪುತ್ರಪಶುವರ್ಗಾದಿಕಂ ಫಲಂ ದಾಸ್ಯಾಮಿ**–ನಾನು ನಿನಗೆ ಪುತ್ರ-ಪಶುವರ್ಗರೂಪವಾದ ಫಲವನ್ನು ಕೊಡುತ್ತೇನೆ.)

**ದೇವವಂಶಾನ್ಬ್ರಹ್ಮವಂಶಾನ್ಪಿತೃವಂಶಾಂಶ್ಚ ಶಾಶ್ವತಾನ್ ।**
**ಸಂವಿಭಜ್ಯ ಗುರೋಶ್ಚರ್ಯಾಂ ತದ್ವೈ ದುಷ್ಕರಮುಚ್ಯತೇ ॥೧೯॥**

ದಿನದ ಕಾಲವನ್ನು ವಿಭಜಿಸಿ ಯಜ್ಞಗಳ ಮೂಲಕವಾಗಿ ದೇವತೆಗಳನ್ನೂ, ಸ್ವಾಧ್ಯಾಯ-ಬ್ರಹ್ಮಯಜ್ಞಾದಿಗಳ ಮೂಲಕವಾಗಿ ಬ್ರಹ್ಮವಂಶೀಯರಾದ ಋಷಿಗಳನ್ನೂ ಮತ್ತು ಶ್ರಾದ್ಧ-ತರ್ಪಣಾದಿಗಳ ಮೂಲಕವಾಗಿ ಪಿತೃಗಳನ್ನೂ ತೃಪ್ತಿಗೊಳಿಸುವುದೂ ಮತ್ತು ಗುರುಶುಶ್ರೂಷೆ ಮಾಡುವುದೂ ದುಷ್ಕರವೆಂದೇ ವಿದ್ವಾಂಸರು ಹೇಳುತ್ತಾರೆ. ಈ ಕರ್ಮಗಳು ದುಷ್ಕರಗಳೇ ಆದರೂ ಮಾಡಿಯೇ ತೀರಬೇಕು. ದುಷ್ಕರವಾದ ಕರ್ಮಗಳನ್ನು ಮಾಡುವುದರಿಂದಲೇ ಮಹಾಫಲವು ಲಭ್ಯವಾಗುತ್ತದೆ. ಇದಕ್ಕೆ ದೇವತೆಗಳೇ ಸಾಕ್ಷಿ.

**ದೇವಾ ವೈ ದುಷ್ಕರಂ ಕೃತ್ವಾ ವಿಭೂತಿಂ ಪರಮಾಂ ಗತಾಃ ।**
**ತಸ್ಮಾದ್ಗಾರ್ಹಸ್ಥ್ಯಮುದ್ವೋಢುಂ ದುಷ್ಕರಂ ಪ್ರಬ್ರವೀಮಿ ವಃ ॥೨೦॥**

ಇಂತಹ ದುಷ್ಕರವಾದ ವ್ರತಾನುಷ್ಠಾನಗಳಿಂದಲೇ ದೇವತೆಗಳು ಶ್ರೇಷ್ಠವಾದ ವೈಭವವನ್ನು ಪಡೆದುಕೊಂಡಿರುತ್ತಾರೆ. ಆದುದರಿಂದ ದುಷ್ಕರ

ವಾದ–ಆದರೂ ಹೆಚ್ಚು ಫಲದಾಯಕವಾದ ಈ ಗಾರ್ಹಸ್ಥ್ಯಧರ್ಮವನ್ನು ಎತ್ತಿಹಿಡಿಯಬೇಕೆಂದು ನಾನು ನಿಮಗೆ ಹೇಳುತ್ತಿದ್ದೇನೆ.

**ತಪಃ ಶ್ರೇಷ್ಠಂ ಪ್ರಜಾನಾಂ ಹಿ ಮೂಲಮೇತನ್ನ ಸಂಶಯಃ ।**
**ಕುಟುಮ್ಬವಿಧಿನಾನೇನ ಯಸ್ಮಿನ್ಸರ್ವಂ ಪ್ರತಿಷ್ಠಿತಮ್ ॥೨೧॥**

ವೇದೋಕ್ತಕರ್ಮರೂಪವಾದ ಈ ಗೃಹಸ್ಥಧರ್ಮವೆಂಬ ತಪಸ್ಸೇ ಶ್ರೇಷ್ಠವಾದುದು. ಈ ಧರ್ಮವೇ ಪ್ರಜೆಗಳ ಹಿತಸಾಧನೆಗೆ ಮೂಲಕಾರಣ ವಾಗಿದೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಕುಟುಂಬವಿಧಿಯೆಂಬ ಶಾಸ್ತ್ರಾನುಸಾರವಾಗಿ ಎಲ್ಲ ಆಶ್ರಮಗಳೂ ಈ ಗೃಹಸ್ಥಧರ್ಮದಲ್ಲಿಯೇ ಪ್ರತಿಷ್ಠಿತವಾಗಿವೆ.

**ಏತದ್ವಿದುಸ್ತಪೋ ವಿಪ್ರಾ ದ್ವನ್ದ್ವಾತೀತಾ ವಿಮತ್ಸರಾಃ ।**
***ತಸ್ಮಾದ್ವ್ರತಂ ಮಧ್ಯಮಂ ತು ಲೋಕೇಷು ತಪ ಉಚ್ಯತೇ ॥೨೨॥**

ಶೀತೋಷ್ಣ, ಸುಖ-ದುಃಖಗಳೇ ಮೊದಲಾದ ದ್ವಂದ್ವಗಳಿಂದ ಅತೀತ ರಾದ, ಅನಸೂಯರಾದ ಬ್ರಾಹ್ಮಣರು ಗೃಹಸ್ಥಾಶ್ರಮಕ್ಕೆ ಸಂಬಂಧಿಸಿದ ವೇದೋಕ್ತಕರ್ಮಗಳನ್ನೇ ತಪಸ್ಸೆಂದು ಹೇಳುತ್ತಾರೆ. ಆದುದರಿಂದಲೇ ಈ ಮಧ್ಯಮವ್ರತವನ್ನು (ನಿಷ್ಠೆಯಿಂದ ಕೂಡಿದ ವೈದಿಕಕರ್ಮಾನುಷ್ಠಾನಗಳನ್ನು) ಲೋಕದಲ್ಲಿ ತಪಸ್ಸೆಂದೇ ಹೇಳುತ್ತಾರೆ.

---

* ವ್ರತಂ ಮಧ್ಯಮಂ ತಪ ಉಚ್ಯತೇ = ವ್ರತಂ ಮಧ್ಯಮಂ ಎಂಬುದಕ್ಕೆ ಸಂದರ್ಭಾನುಸಾರವಾಗಿ ನಿಷ್ಠೆಯಿಂದ ಕೂಡಿದ ವೈದಿಕಕರ್ಮಾನುಷ್ಠಾನಗಳೆಂದು ಅರ್ಥ ಮಾಡಲಾಗಿದೆ. ವ್ಯಾಖ್ಯಾನಕಾರರು ಇದಕ್ಕೆ ಹೀಗೆ ವ್ಯಾಖ್ಯೆಮಾಡಿರುತ್ತಾರೆ : ವ್ರತಂ ಬ್ರಹ್ಮಚರ್ಯಾದ್ಯುಪೇತಂ ಅಧ್ಯಯನಂ–ಬ್ರಹ್ಮಚರ್ಯವೇ ಮೊದಲಾದುವುಗಳಿಂದ ಕೂಡಿದ ಅಧ್ಯಯನ. ಮಧ್ಯಮಂ ಚ ತದ್ರಹಿತಂ ಯಜ್ಞಾದಿ ಚ ತಪಃಶಬ್ದೇನೋಚ್ಯತೇ– ಆದರಿಂದ ರಹಿತವಾದ ಯಜ್ಞಾದಿಗಳು 'ತಪಃ' ಎಂಬ ಶಬ್ದದಿಂದ ಕರೆಯಲ್ಪಟ್ಟಿವೆ. ಮಧ್ಯಮಂ ಎಂಬುದಕ್ಕೆ ತದ್ರಹಿತಂ ಯಜ್ಞಾದಿ ಚ–ಎಂದು ಹೇಗೆ ಅರ್ಥಮಾಡಿದರೋ ತಿಳಿಯದು. ತದ್ರಹಿತಂ ಎಂದರೆ ಯಜ್ಞವು ಯಾವುದರಿಂದ ರಹಿತವಾದುದೆಂದು ಹೇಳುವುದು ಕಷ್ಟವೇ ಸರಿ. ತದ್ವಿಹಿತಂ : ಎಂದಾದರೂ ಇರಬೇಕಾಗಿದ್ದಿತೋ ಎನಿಸು ತ್ತದೆ. ಈ ಕಾರಣದಿಂದ ವ್ಯಾಖ್ಯಾನಕಾರರ ವ್ಯಾಖ್ಯಾನವೂ ವ್ರತಂ ಮಧ್ಯಮಂ ಎಂಬ ಪದಗಳಿಗೆ ನಿರ್ದಿಷ್ಟವಾದ ಅರ್ಥವನ್ನು ಕೊಡುವುದಾಗಿಲ್ಲ. ತಸ್ಮಾದ್ವನಂ ಮಧ್ಯಮಂ ಚ

**ದುರಾಧರ್ಷಂ ಪದಂ ಚೈವ ಗಚ್ಛನ್ತಿ ವಿಘಸಾಶಿನಃ ।**
**ಸಾಯಂಪ್ರಾತರ್ವಿಭಜ್ಯಾನ್ನಂ ಸ್ವಕುಟುಮ್ಬೇ ಯಥಾವಿಧಿ ॥೨೩॥**
**ದತ್ವಾತಿಥಿಭ್ಯೋ ದೇವೇಭ್ಯಃ ಪಿತೃಭ್ಯಃ ಸ್ವಜನಾಯ ಚ ।**
**ಅವಶಿಷ್ಟಾನಿ ಯೇಽಶ್ನನ್ತಿ ತಾನಾಹುರ್ವಿಘಸಾಶಿನಃ ॥೨೪॥**

ವಿಘಸಾಶಿಗಳು (ಯಜ್ಞಶೇಷವನ್ನು–ಭೋಜನಶೇಷವನ್ನು ಭುಂಜಿಸುವವರು) ಸಾಮಾನ್ಯರಿಂದ ಜಯಿಸಲು ಅಸಾಧ್ಯವಾದ ಪುಣ್ಯಲೋಕಗಳಿಗೆ ಹೋಗುತ್ತಾರೆ. ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ತಮ್ಮ ಸಂಸಾರದಲ್ಲಿ ಯಥಾವಿಧಿಯಾಗಿ ಅನ್ನವನ್ನು ವಿಭಾಗಿಸಿ, ದೇವ-ಪಿತೃಗಳಿಗೆ ನಿವೇದನಮಾಡಿ, ಅತಿಥಿಗಳಿಗೂ ಮತ್ತು ಬಂಧುವರ್ಗದವರಿಗೂ ಭೋಜನಮಾಡಿಸಿ ಅನ್ನಶೇಷವನ್ನು ಯಾರು ತಿನ್ನುತ್ತಾರೆಯೋ–ಅವರು ವಿಘಸಾಶಿಗಳೆಂದು ಕರೆಯಲ್ಪಡುತ್ತಾರೆ.

**ತಸ್ಮಾತ್ಸ್ವಧರ್ಮಮಾಸ್ಥಾಯ ಸುವ್ರತಾಃ ಸತ್ಯವಾದಿನಃ ।**
**ಲೋಕಸ್ಯ ಗುರವೋ ಭೂತ್ವಾ ತೇ ಭವನ್ತ್ಯನುಪಸ್ಕೃತಾಃ ॥೨೫॥**

ಆದುದರಿಂದ ವಿಘಸಾಶಿಗಳು ಸ್ವಧರ್ಮದಲ್ಲಿಯೇ ನಿರತರಾಗಿದ್ದುಕೊಂಡು ವರ್ಣಾಶ್ರಮೋಕ್ತವಾದ ವ್ರತಾನುಷ್ಠಾನಗಳನ್ನು ಶ್ರದ್ಧೆಯಿಂದ ಮಾಡುತ್ತಾ ಸತ್ಯನಿಷ್ಠರಾಗಿ ಯಾವ ವಿಧವಾದ ಸಂಶಯವೂ ಇಲ್ಲದವರಾಗಿ ಲೋಕಕ್ಕೇ ಗುರುಗಳಾಗಿ (ಮಾರ್ಗದರ್ಶಕರಾಗಿ) ವಿರಾಜಿಸುತ್ತಾರೆ.

---

ಎಂದು ಪಾಠಾಂತರವಿದೆ. ವಾನಪ್ರಸ್ಥ-ಗೃಹಸ್ಥಾಶ್ರಮಧರ್ಮಗಳೆಲ್ಲವೂ 'ತಪಸ್ಸು' ಎಂದು ಹೇಳಲ್ಪಟ್ಟಿದೆ ಎಂದು ಅರ್ಥವಾಗುತ್ತದೆ. ಮಧ್ಯಮ ಎಂದರೆ ಬ್ರಹ್ಮಚರ್ಯ-ಗೃಹಸ್ಥ-ವಾನಪ್ರಸ್ಥಾಶ್ರಮಗಳಲ್ಲಿ ಮಧ್ಯಮವು ಗೃಹಸ್ಥಾಶ್ರಮವಾಗುತ್ತದೆ. ಆದರೆ ಆಶ್ರಮಗಳಿರುವುದು ನಾಲ್ಕು. ಹಿಂದೀ ವ್ಯಾಖ್ಯಾನಕಾರರು : ಯದ್ಯಪಿ ಲೋಕದಲ್ಲಿ ವ್ರತಕ್ಕೂ, 'ತಪಸ್ಸು' ಎಂದೇ ಹೇಳುವ ವಾಡಿಕೆಯಿದ್ದರೂ ಪಂಚಯಜ್ಞಗಳ ಅನುಷ್ಠಾನಾಪೇಕ್ಷೆಯಿಂದ ವ್ರತವೆಂಬುದು ಮಧ್ಯಮಶ್ರೇಣಿಯದು. ಲೋಕಮೇ ವ್ರತಕೋ ಭೀ ತಪ ಕಹಾ ಜಾತಾ ಹೈ. ಕಿಂತು ವಹ ಪಞ್ಚಯಜ್ಞಕೇ ಅನುಷ್ಠಾನಕೀ ಅಪೇಕ್ಷಾ ಮಧ್ಯಮ ಶ್ರೇಣೀಕಾ ಹೈ-ವ್ರತ ಎಂದರೆ ಯಾವುದೆಂಬುದನ್ನು ಇಲ್ಲಿ ನಿರೂಪಿಸಿಲ್ಲ. ವ್ರತಂ ಮಧ್ಯಮಂ ಚ ಎಂದು ವ್ಯಾಖ್ಯಾನಕಾರರೂ ಹೇಳಿರುವುದರಿಂದ ವ್ರತಾದಿಗಳು ಮಧ್ಯಮಶ್ರೇಣಿಯ ತಪಸ್ಸು ಎಂದು ಅರ್ಥಮಾಡುವುದು ಸಾಧುವಾಗಿ ಕಾಣುವುದಿಲ್ಲ.

**ತ್ರಿದಿವಂ ಪ್ರಾಪ್ಯ ಶಕ್ರಸ್ಯ ಸ್ವರ್ಗಲೋಕೇ ವಿಮತ್ಸರಾಃ ।**
**ವಸನ್ತಿ ಶಾಶ್ವತಾನ್ವರ್ಷಾಣ್ಣಿನಾ ದುಷ್ಕರಕಾರಿಣಃ ॥೨೮॥**

ದುಷ್ಕರವಾದ ವೇದೋಕ್ತಗಳಾದ ಗೃಹಸ್ಥಕರ್ಮಗಳಲ್ಲಿ ಅನುಷ್ಠಾನ ಪರರಾದ, ಅನಸೂಯರಾದ ಪುಣ್ಯಾತ್ಮರು ತ್ರಿದಿವಕ್ಕೆ ಹೋಗಿ ಇಂದ್ರನ ಸ್ವರ್ಗ ಲೋಕದಲ್ಲಿ ಶಾಶ್ವತವರ್ಷಗಳ (ಅನೇಕವರ್ಷಗಳ) ಪರ್ಯಂತವಾಗಿ ವಾಸ ಮಾಡುತ್ತಿರುತ್ತಾರೆ."

ಅರ್ಜುನನು ಧರ್ಮರಾಜನಿಗೆ ಹೇಳುತ್ತಾನೆ :

"ಅಣ್ಣ! ಪಕ್ಷಿಯು ಹೇಳಿದ, ಧರ್ಮಾರ್ಥಗಳಿಂದ ಕೂಡಿದುದೂ ಮತ್ತು ಹಿತಕರವೂ ಆಗಿದ್ದ ಮಾತುಗಳನ್ನು ಕೇಳಿ ಆ ಬ್ರಹ್ಮಚಾರಿಗಳು ತಾವು ಹಿಡಿದಿದ್ದ ಸಂನ್ಯಾಸಮಾರ್ಗವನ್ನು–ಈ ಮಾರ್ಗವು ತಮಗೆ ತಕ್ಕುದಲ್ಲ ಮತ್ತು ಹಿತಕರವೂ ಅಲ್ಲ ; ಆಶ್ರಮಾಂತರದಿಂದ ಯಾವ ಸಿದ್ಧಿಯೂ ಆಗುವುದಿಲ್ಲ–ಎಂಬುದಾಗಿ ನಿರ್ಧರಿಸಿ, ಸಂನ್ಯಾಸವನ್ನು ಪರಿತ್ಯಜಿಸಿ, ಪಟ್ಟಣಕ್ಕೆ ಹಿಂದಿರುಗಿ ಪುನಃ ಗೃಹಸ್ಥಾಶ್ರಮವನ್ನೇ ಅವಲಂಬಿಸಿದರು. ಆದುದರಿಂದ ಸರ್ವಜ್ಞನೇ! ನರೋತ್ತಮನೇ! ನೀನೂ ಸಹ ಸರ್ವದಾ ಧೈರ್ಯವನ್ನೇ ಆಶ್ರಯಿಸಿಕೊಂಡಿರುತ್ತಾ ಶತ್ರುಗಳಿಂದ ರಹಿತವಾಗಿರುವ ಈ ಅಖಂಡ ಭೂಮಂಡಲವನ್ನು ಅನುಶಾಸನಮಾಡು."

ಒ೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ನಕುಲನು ಗೃಹಸ್ಥಧರ್ಮವನ್ನು ಪ್ರಶಂಸೆಮಾಡುತ್ತಾ ಯುಧಿಷ್ಠಿರನನ್ನು ಸಮಾಧಾನಗೊಳಿಸಲು ಯತ್ನಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಅರಿಂದಮನೇ! ಜನಮೇಜಯ! ಅರ್ಜುನನು ಹೇಳಿದ ಮಾತನ್ನು ಕೇಳಿದ ಮಹಾಪ್ರಾಜ್ಞನಾದ, ವಿಶಾಲವಕ್ಷನಾದ, ಮಹಾಬಾಹುವಾದ, ಎಣೆಗೆಂಪಾದ ಮುಖವನ್ನು ಹೊಂದಿದ್ದ, ಮಿತಭಾಷಿಯಾದ ನಕುಲನು ರಾಜ್ಯವನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗಬೇಕೆನ್ನುವ ಅಣ್ಣನ ಚಿತ್ತವೃತ್ತಿ

ಯನ್ನು ರಾಜ್ಯಾಡಳಿತದ ಕಡೆಗೆ ಒಲಿಸಿಕೊಳ್ಳಲು, ಧರ್ಮಾತ್ಮರಲ್ಲಿ ಶ್ರೇಷ್ಠನಾದ ಧರ್ಮರಾಜನನ್ನು ದಿಟ್ಟಿಸಿ ನೋಡುತ್ತಾ ಹೇಳಿದನು :

"ಮಹಾರಾಜ! ವಿಶಾಖಯೂಪವೆಂಬ ಕ್ಷೇತ್ರದಲ್ಲಿರುವ ವೇದಿಗಳಲ್ಲಿ ಎಲ್ಲ ದೇವತೆಗಳ ಅಗ್ನಿಗಳೂ ಪ್ರತಿಷ್ಠಿತವಾಗಿದ್ದುವು. ( ವಿಶಾಖಯೂಪವೆಂಬ ಸ್ಥಳದಲ್ಲಿ ಯಜ್ಞಮಾಡುವ ಸಲುವಾಗಿ ಎಲ್ಲ ದೇವತೆಗಳೂ ಅಗ್ನಿಗಳನ್ನು ಪ್ರತಿಷ್ಠಾಪಿಸಿದ್ದರು. ) ದೇವತೆಗಳೂ ವೇದೋಕ್ತವಾದ ಕರ್ಮಗಳಲ್ಲಿ ಮತ್ತು ಫಲಗಳಲ್ಲಿ ಆಸಕ್ತಿಯುಳ್ಳವರೆಂಬುದನ್ನು ನೀನು ಇದರಿಂದಲೇ ತಿಳಿದುಕೊಳ್ಳಬಹುದಾಗಿದೆ.

**ಅನಾಸ್ತಿಕಾನಾಂ ಭೂತಾನಾಂ ಪ್ರಾಣದಾಃ ಪಿತರಶ್ಚ ಯೇ ।**
**ತೇಽಪಿ ಕರ್ಮೈವ ಕುರ್ವನ್ತಿ ವಿಧಿಂ ಸಂಪ್ರೇಕ್ಷ್ಯ ಪಾರ್ಥಿವ ॥೪॥**

ಆಸ್ತಿಕರಲ್ಲದ ಪ್ರಾಣಿಗಳಿಗೂ ಪ್ರಾಣದರಾದ ( ವೃಷ್ಟಿಯ ಮೂಲಕವಾಗಿ ಅನ್ನವನ್ನು ದಯಪಾಲಿಸುವ ) ಪಿತೃಗಳೂ ವಿಧಿದೃಷ್ಟವಾದ ರೀತಿಯಲ್ಲಿ ಕರ್ಮವನ್ನೇ ಮಾಡುತ್ತಿರುತ್ತಾರೆ.

**ವೇದವಾದಾಪವಿದ್ಧಾಂಸ್ತು ತಾನ್ವಿದ್ಧಿ ಭೃಶನಾಸ್ತಿಕಾನ್ ॥೫॥**
**ನ ಹಿ ವೇದೋಕ್ತಮುತ್ಸೃಜ್ಯ ವಿಪ್ರಃ ಸರ್ವೇಷು ಕರ್ಮಸು ।**
**ದೇವಯಾನೇನ ನಾಕಸ್ಯ ಪೃಷ್ಠಮಾಪ್ನೋತಿ ಭಾರತ ॥೬॥**

ವೇದದಲ್ಲಿರುವ ಅರ್ಥವಾದಗಳಿಂದ (ಜ್ಞಾನಪ್ರಶಂಸಾರೂಪವಾದ ವಾಕ್ಯಗಳಿಂದ) ಮೋಹಗೊಂಡವರನ್ನು ಹೆಚ್ಚು ನಾಸ್ತಿಕರೆಂದು ತಿಳಿ. ಬ್ರಾಹ್ಮಣನಾದವನೂ ಎಲ್ಲ ಧರ್ಮಗಳಲ್ಲಿಯೂ ವೇದೋಕ್ತವಾದ ವಿಧಾನವನ್ನು ಪರಿತ್ಯಜಿಸಿ ಕರ್ಮಗಳನ್ನು ಮಾಡಿದ್ದೇ ಆದರೆ ಅವನು ದೇವಯಾನ ಮಾರ್ಗದ ಮೂಲಕವಾಗಿ ಲೋಕದ ಮೇಲುಭಾಗವನ್ನು (ಪುಣ್ಯಲೋಕವನ್ನು) ಹೊಂದಲಾರನು.

**ಅತ್ಯಾಶ್ರಮಾನಯಂ ಸರ್ವಾನಿತ್ಯಾಹುರ್ವೇದನಿಶ್ಚಯಾಃ ।**
**ಬ್ರಾಹ್ಮಣಾಃ ಶ್ರುತಿಸಂಪನ್ನಾಸ್ತಾನ್ನಿಬೋಧ ನರಾಧಿಪ ॥೭॥**

ವೇದಗಳ ಸಿದ್ಧಾಂತಗಳನ್ನು ತಿಳಿದಿರುವ ಮತ್ತು ಶ್ರುತಿಸಂಪನ್ನರಾದ ಬ್ರಾಹ್ಮಣರು ಈ ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳನ್ನೂ ಅತಿಶಯಿಸಿದೆ ಯೆಂದೂ ಹೇಳುತ್ತಾರೆ. ಅವರು ಹೇಳುವ ಮಾತುಗಳನ್ನಾದರೂ ಕೇಳು.

**ವಿತ್ತಾನಿ ಧರ್ಮಲಬ್ಧಾನಿ ಕ್ರತುಮುಖ್ಯೇಷ್ವವಾಸೃಜನ್ ।**
**ಕೃತಾತ್ಮಾ ಸ ಮಹಾರಾಜ ಸ ವೈ ತ್ಯಾಗೀ ಸ್ಮೃತೋ ನರಃ ॥೮॥**

'ತ್ಯಾಗಿ' ಎಂದರೆ ಸರ್ವಸಂಗಪರಿತ್ಯಾಗಮಾಡಿದವನಾಗಲೀ, ವೇದೋಕ್ತವಾದ ಸರ್ವಕರ್ಮಗಳನ್ನೂ ತ್ಯಾಗಮಾಡಿದವನಾಗಲೀ–ಅಲ್ಲ. ಧರ್ಮಮೂಲವಾಗಿ ಆರ್ಜಿಸಿದ ಐಶ್ವರ್ಯಗಳನ್ನು ಯಾವನು ಶ್ರೇಷ್ಠವಾದ ಯಜ್ಞಗಳಿಗಾಗಿ ವಿನಿಯೋಗಿಸುತ್ತಾನೆಯೋ ಮತ್ತು ಯಾವನು ತನ್ನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರುವನೋ–ಅಂತಹ ಮನುಷ್ಯನೇ 'ತ್ಯಾಗಿ' ಎನಿಸಿಕೊಳ್ಳುತ್ತಾನೆ.

**ಅನವೇಕ್ಷ್ಯ ಸುಖಾದಾನಂ ತಥೈವೋರ್ಧ್ವಂ ಪ್ರತಿಷ್ಠಿತಃ ।**
**ಆತ್ಮತ್ಯಾಗೀ ಮಹಾರಾಜ ಸ ತ್ಯಾಗೀ ತಾಮಸೋ ಮತಃ ॥೯॥**

ಯಾವನು ಗೃಹಸ್ಥಾಶ್ರಮದಲ್ಲಿರುವ ಸುಖ-ಭೋಗಗಳನ್ನು ತಿರಸ್ಕರಿಸಿ ವಾನಪ್ರಸ್ಥಾಶ್ರಮ–ಸಂನ್ಯಾಸಾಶ್ರಮಗಳಲ್ಲಿಯೇ ನಿಷ್ಠೆಯನ್ನು ಹೊಂದಿ ದೇಹವನ್ನು ಸವೆಸುತ್ತಾ ಶರೀರವನ್ನು ಬಲಿಗೊಡುವನೋ–ಅವನು ತಾಮಸ ತ್ಯಾಗೀ ಎನಿಸುವನು.*

**ಅನಿಕೇತಃ ಪರಿಪತನ್ವೃಕ್ಷಮೂಲಾಶ್ರಯೋ ಮುನಿಃ ।**
**ಅಪಾಚಕಃ ಸದಾ ಯೋಗೀ ಸ ತ್ಯಾಗೀ ಪಾರ್ಥ ಭಿಕ್ಷುಕಃ ॥೧೦॥**

ಮನೆ-ಮಠಗಳಿಲ್ಲದೇ, ಅಡಿಗೆಯನ್ನು ತಾನೇ ಮಾಡಿಕೊಳ್ಳಲಾರದೇ ಭಿಕ್ಷೆಗಾಗಿ ಎಲ್ಲೆಲ್ಲಿಯೋ ತಿರುಗಾಡುತ್ತಾ, ವೃಕ್ಷದ ಬುಡವನ್ನೇ ಆಶ್ರಯಿಸಿರುವ, ಸದಾ ಯೋಗಪರಾಯಣನಾದ, ಮೌನಿಯಾದ, ಸರ್ವಕರ್ಮಗಳನ್ನೂ

---

* ವೇದೋಕ್ತವಾದ ಕರ್ಮಗಳನ್ನು ಮಾಡದೇ ಮೋಕ್ಷವನ್ನು ಇಚ್ಛಿಸುವವನು ನರಕ ಭಾಜನನಾಗುವನೆಂದು ಮನುಸ್ಮೃತಿಯಲ್ಲಿ ಹೇಳಿದೆ. **ಅನಧೀತ್ಯ ದ್ವಿಜೋ ವೇದಾನನುತ್ಪಾದ್ಯ ಸುತಾನಪಿ । ಅನಿಷ್ಟ್ವಾ ಶಕ್ತಿತೋ ಯಜ್ಞೈರ್ಮೋಕ್ಷಮಿಚ್ಛನ್ವ್ರಜತ್ಯಧಃ ॥** ಅಧ್ಯಾಯ ೬-ಶ್ಲೋಕ ೩೭-ದ್ವಿಜನಾದವನು ( ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು ) ವೇದಗಳನ್ನು ಅಧ್ಯಯನಮಾಡದೇ, ಪುತ್ರಸಂಪತ್ತಿಯನ್ನು ಪಡೆಯದೇ, ಯಥಾಶಕ್ತಿ ಯಜ್ಞಗಳನ್ನು ಮಾಡದೇ ಮೋಕ್ಷವನ್ನು ಇಚ್ಛಿಸಿದರೆ ಅಂತಹವನಿಗೆ ದುರ್ಗತಿಯುಂಟಾಗುತ್ತದೆಯೇ ಹೊರತು ಮೋಕ್ಷವು ಲಭಿಸುವುದಿಲ್ಲ.

ಮತ್ತು ಸರ್ವಸಂಗವನ್ನೂ ಪರಿತ್ಯಾಗಮಾಡಿದ ತ್ಯಾಗಿಯನ್ನು ಭಿಕ್ಷುಕ ನೆಂದು ಕರೆಯುತ್ತಾರೆ.

**ಕ್ರೋಧಹರ್ಷಾವನಾದೃತ್ಯ ಪೈಶುನಂ ಚ ವಿಶೇಷತಃ I**
**ವಿಪ್ರೋ ವೇದಾನಧೀತೇ ಯಃ ಸ ತ್ಯಾಗೀ ಪಾರ್ಥ ಉಚ್ಯತೇ ll೧೧ll**

ಕ್ರೋಧ-ಹರ್ಷಗಳನ್ನು–ಅದರಲ್ಲಿಯೂ ವಿಶೇಷವಾಗಿ ಮತ್ತೊಬ್ಬನ ವಿಷಯದಲ್ಲಿ ದೋಷವೆಣಿಸುವುದನ್ನೂ ತಿರಸ್ಕರಿಸಿ ಯಾವ ಬ್ರಾಹ್ಮಣನು ವೇದಗಳನ್ನು ಅಧ್ಯಯನಮಾಡಿ ವೇದೋಕ್ತವಾದ ಕರ್ಮಗಳನ್ನು ಮಾಡಿ ಕೊಂಡಿರುತ್ತಾನೆಯೋ–ಅಂತಹವನನ್ನು ತ್ಯಾಗೀ ಎಂದು ಹೇಳುತ್ತಾರೆ. (ಕ್ರೋಧ-ಹರ್ಷಗಳನ್ನೂ ಮತ್ತು ಇತರರ ವಿಷಯದಲ್ಲಿ ದೋಷವೆಣಿಸು ವುದನ್ನೂ ಪರಿತ್ಯಾಗಮಾಡುವುದು ಸಾಮಾನ್ಯಜನರಿಂದ ಸಾಧ್ಯವಾಗುವುದಿಲ್ಲ. ಸಾಮಾನ್ಯಮಾನವನು ದುಃಖಬಂದಾಗ ಕುಗ್ಗುತ್ತಾನೆ. ಸುಖ- ಸಂತೋಷಗಳು ಬಂದಾಗ ಹಿಗ್ಗುತ್ತಾನೆ. ಮನಸ್ಸಿಗೆ ಸ್ವಲ್ಪವೇ ಆಘಾತವುಂಟಾದರೂ ಕೋಪಿಸಿಕೊಳ್ಳುತ್ತಾನೆ. ತನಗಾಗಬಹುದಾದ ಯಾವುದೇ ತೊಂದರೆಗೂ ಇತರರನ್ನು ಹೊಣೆಮಾಡುತ್ತಾನೆ. ಸುಖದಲ್ಲಿ ಹಿಗ್ಗದೇ ಉದ್ವೇಗವುಂಟಾಗುವ ಸಮಯದಲ್ಲಿಯೂ ಉದ್ವೇಗಗೊಳ್ಳದೇ ಅಥವಾ ಕೋಪಗೊಳ್ಳದೇ ಇರುವುದು, ಯಾವುದೇ ಕಾರಣದಿಂದಲೂ ಇತರರನ್ನು ನಿಂದಿಸದೇ ಇರುವುದು, ಚಾಡಿಹೇಳದೇ ಇರುವುದು–ಜಿತೇಂದ್ರಿಯನಾದವನೊಬ್ಬನಿಗೆ ಮಾತ್ರವೇ ಸಾಧ್ಯವಾಗುತ್ತದೆ. ಅಂತಹವನನ್ನು ತ್ಯಾಗೀ ಎಂದು ಕರೆಯುವುದು ಸಾಧುವಾಗಿಯೇ ಇದೆ. )

**ಆಶ್ರಮಾಂಸ್ತುಲಯಾ ಸರ್ವಾನ್ಧೃತಾನಾಹುರ್ಮನೀಷಿಣಃ I**
**ಏಕತಶ್ಚ ತ್ರಯೋ ರಾಜನ್ಗೃಹಸ್ಥಾಶ್ರಮ ಏಕತಃ ll೧೨ll**

ಮಹಾರಾಜ! ಒಮ್ಮೆ ವಿದ್ವಾಂಸರು ಈ ನಾಲ್ಕು ಆಶ್ರಮಗಳ ವೈಶಿಷ್ಟ್ಯವೆಷ್ಟೆಂಬುದನ್ನು ತಕ್ಕಡಿಯಲ್ಲಿಟ್ಟು ತೂಕಮಾಡಿದರಂತೆ. ತಕ್ಕಡಿಯ ಒಂದು ತಟ್ಟೆಯಲ್ಲಿ ಗೃಹಸ್ಥಾಶ್ರಮದ ವೈಶಿಷ್ಟ್ಯವನ್ನೂ ಮತ್ತೊಂದು ತಟ್ಟೆಯಲ್ಲಿ ಬ್ರಹ್ಮಚರ್ಯ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮಗಳ ವೈಶಿಷ್ಟ್ಯವನ್ನೂ ಜೊತೆಗೂಡಿಸಿ ಇಟ್ಟರಂತೆ.

**ಸಮೀಕ್ಷ್ಯ ತುಲಯಾ ಪಾರ್ಥ ಕಾಮಂ ಸ್ವರ್ಗಂ ಚ ಭಾರತ ।**
**ಅಯಂ ಪನ್ಥಾ ಮಹರ್ಷೀಣಾಮಿಯಂ ಲೋಕವಿದಾಂ ಗತಿಃ ॥೧೩॥**

ಹೀಗೆ ವಿವೇಕವೆಂಬ ತಕ್ಕಡಿಯ ತಟ್ಟೆಗಳಲ್ಲಿ ಇಟ್ಟು ತೂಗಿದನಂತರ ಗೃಹಸ್ಥಾಶ್ರಮವೇ ಮಹತ್ತ್ವಪೂರ್ಣವಾದುದೆಂದು ಸಿದ್ಧವಾಯಿತಂತೆ. ಇದಕ್ಕೆ ಕಾರಣವಿಷ್ಟೇ : ಗೃಹಸ್ಥಾಶ್ರಮದ ಮೂಲಕವಾಗಿ ಇಹದಲ್ಲಿ ಕಾಮೋಪ ಭೋಗಗಳನ್ನು ಅನುಭವಿಸಬಹುದು ; ಅವಸಾನಾನಂತರ ಶ್ರೇಷ್ಠವಾದ ಲೋಕಗಳನ್ನೂ ಪಡೆದುಕೊಳ್ಳಬಹುದು. ಆದುದರಿಂದಲೇ ಗೃಹಸ್ಥಧರ್ಮವು ಮಹರ್ಷಿಗಳೂ ಅನುಸರಿಸುವ ಮಾರ್ಗವಾಗಿದೆ ಮತ್ತು ಲೋಕಗಳನ್ನು ತಿಳಿದವರಿಗೆ ( ಲೋಕವ್ಯವಹಾರಗಳನ್ನು ತಿಳಿದವರಿಗೆ ) ಆಶ್ರಯಸ್ಥಾನವೂ ಆಗಿದೆ.

**ಇತಿ ಯಃ ಕುರುತೇ ಭಾವಂ ಸ ತ್ಯಾಗೀ ಭರತರ್ಷಭ ।**
**ನ ಯಃ ಪರಿತ್ಯಜ್ಯ ಗೃಹಾನ್ವನಮೇತಿ ವಿಮೂಢವತ್ ॥೧೪॥**

ಭರತರ್ಷಭನೇ! ಗೃಹಸ್ಥಾಶ್ರಮದಲ್ಲಿದ್ದು ವೇದೋಕ್ತವಾದ ಕರ್ಮಗಳನ್ನು ಮಾಡುವುದೇ ಯೋಗ್ಯವೆಂದು ಭಾವಿಸಿ, ಫಲೇಚ್ಛೆಯನ್ನು ಬಿಟ್ಟು ಯಾವನು ವೈದಿಕಕರ್ಮಗಳನ್ನು ಮಾಡುತ್ತಾನೆಯೋ–ಅವನೇ ತ್ಯಾಗಿಯು. ಸರ್ವಸಂಗಗಳನ್ನೂ–ಸರ್ವಕರ್ಮಗಳನ್ನೂ ಪರಿತ್ಯಾಗಮಾಡಿ ಮನೆಯನ್ನು ಪರಿತ್ಯಜಿಸಿ ಮೂಢನಂತೆ ಯಾವನು ಅರಣ್ಯಕ್ಕೆ ಹೋಗುತ್ತಾನೆಯೋ ಅವನು ಖಂಡಿತವಾಗಿಯೂ ತ್ಯಾಗಿಯಲ್ಲ.

**ಯದಾ ಕಾಮಾನ್ಸಮೀಕ್ಷೇತ ಧರ್ಮವೈತಂಸಿಕೋ ನರಃ ।**
**ಅಥೈನಂ ಮೃತ್ಯುಪಾಶೇನ ಕಣ್ಠೇ ಬಧ್ನಾತಿ ಮೃತ್ಯುರಾಟ್ ॥೧೫॥**

ಧರ್ಮದ ಸೋಗಿನಿಂದ ಅರಣ್ಯದಲ್ಲಿ ವಾಸಮಾಡುತ್ತಿರುವ ಮನುಷ್ಯನು ಕಾಲಕರ್ಮಸಂಯೋಗದಿಂದ ಕಾಮಭೋಗದ ಕಡೆಗೆ ದೃಷ್ಟಿಯನ್ನು ಹಾಯಿಸಿದ್ದೇ ಆದರೆ ಯಮಧರ್ಮನು ಒಡನೆಯೇ ಅವನ ಕಂಠವನ್ನು ಮೃತ್ಯುಪಾಶದಿಂದ ಬಿಗಿಯುತ್ತಾನೆ. ( ಸಂನ್ಯಾಸಧರ್ಮದಲ್ಲಿರುವವನು ಮನಸ್ಸು ಪಕ್ವವಾಗದೇ ಕಾಮಾಸಕ್ತನಾಗಿಬಿಟ್ಟರೆ ಪತಿತನಾಗುತ್ತಾನೆ. )

**ಅಭಿಮಾನಕೃತಂ ಕರ್ಮ ನೈತತ್ಫಲವದುಚ್ಯತೇ ।**
**ತ್ಯಾಗಯುಕ್ತಂ ಮಹಾರಾಜ ಸರ್ವಮೇವ ಮಹಾಫಲಮ್ ॥೧೬॥**

ಯಾವುದೇ ಕರ್ಮವೇ ಆಗಲೀ, ದುರಭಿಮಾನಪೂರ್ವಕವಾಗಿ (ನಾನು ಮಾಡುವವನು ಎಂಬ ಅಭಿಮಾನದಿಂದ) ಮಾಡಿದರೆ–ಆ ಕರ್ಮವು ಫಲಯುಕ್ತವಾಗುವುದಿಲ್ಲ. ಯಾವುದೇ ಕರ್ಮವನ್ನಾದರೂ ಮಮಕಾರವನ್ನು ತೊರೆದು ತ್ಯಾಗಬುದ್ಧಿಯಿಂದ ಮಾಡಿದರೆ ಮಹಾಫಲವೇ ಪ್ರಾಪ್ತವಾಗುತ್ತದೆ.

**ಶಮೋ ದಮಸ್ತಥಾ ಧೈರ್ಯಂ ಸತ್ಯಂ ಶೌಚಮಥಾರ್ಜವಮ್ ।**
**ಯಜ್ಞೋ ಧೃತಿಶ್ಚ ಧರ್ಮಶ್ಚ ನಿತ್ಯಮಾರ್ಷೋ ವಿಧಿಃ ಸ್ಮೃತಃ ॥೧೭॥**

ಶಮ, ದಮ, ಧೈರ್ಯ, ಸತ್ಯ, ಶೌಚ, ಸರಳತೆ, ಯಜ್ಞ, ಧೃತಿ, ಧರ್ಮ–ಇವುಗಳು ಋಷಿಗಳಿಗೆ ಹಿತವನ್ನುಂಟುಮಾಡುವಂತಹ ನಿತ್ಯವಾದ ವಿಧಿಗಳು.

**ಪಿತೃದೇವಾತಿಥಿಕೃತೇ ಸಮಾರಮ್ಭೋಽತ್ರ ಶಸ್ಯತೇ ।**
**ಅತ್ರೈವ ಹಿ ಮಹಾರಾಜ ತ್ರಿವರ್ಗಃ ಕೇವಲಂ ಫಲಮ್ ॥೧೮॥**

ಈ ಗೃಹಸ್ಥಾಶ್ರಮದಲ್ಲಿ ಪಿತೃಗಳ, ದೇವತೆಗಳ ಮತ್ತು ಅತಿಥಿಗಳ ಪೂಜಾಕಾರ್ಯಗಳು ಸಮಾವೇಶವಾಗುವುದರಿಂದ ಇದು ಪ್ರಶಂಸೆಗೆ ಪಾತ್ರ ವಾಗಿದೆ. ಈ ಗೃಹಸ್ಥಾಶ್ರಮದಲ್ಲಿಯೇ ಧರ್ಮಾರ್ಥ-ಕಾಮಗಳೆಂಬ ತ್ರಿವರ್ಗವೂ ಸಿದ್ಧಿಯಾಗುತ್ತದೆ.

**ಏತಸ್ಮಿನ್ವರ್ತಮಾನಸ್ಯ ವಿಧಾವಪ್ರತಿಷೇಧಿತೇ ।**
**ತ್ಯಾಗಿನಃ ಪ್ರಸೃತಸ್ಯೇಹ ನೋಚ್ಛಿತ್ತಿರ್ವಿದ್ಯತೇ ಕ್ವಚಿತ್ ॥೧೯॥**

ಆದರೆ ಗೃಹಸ್ಥಾಶ್ರಮದಲ್ಲಿಯೇ ಇದ್ದುಕೊಂಡು ವೇದವಿಹಿತವಾದ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೇ ನಿಷ್ಠೆಯಿಂದ ಮಾಡುತ್ತಾ ಇರುವ ವಿನಯಶೀಲನಾದ ತ್ಯಾಗಿಗೆ ಪಾರಲೌಕಿಕವಾದ ಉನ್ನತಿಯು ಕಡಿದುಹೋಗು ವುದಿಲ್ಲ. (ಹಿಂದಿನ ಶ್ಲೋಕದಲ್ಲಿ ಗೃಹಸ್ಥನಿಗೆ ತ್ರಿವರ್ಗಸಿದ್ಧಿಯೆಂದು ಹೇಳಿ ದರೂ ಈ ಶ್ಲೋಕದಲ್ಲಿ ನಿಷ್ಕಾಮಕರ್ಮನಿಗೆ ಮೋಕ್ಷವೂ ಸಿದ್ಧಿಸುವುದೆಂದು ಹೇಳಿದೆ.)

**ಅಸೃಜದ್ಧಿ ಪ್ರಜಾ ರಾಜನ್ಪ್ರಜಾಪತಿರಕಲ್ಮಷಃ ।**
**ಮಾಂ ಯಕ್ಷ್ಯನ್ತೀತಿ ಧರ್ಮಾತ್ಮಾ ಯಜ್ಞೈರ್ವಿವಿಧದಕ್ಷಿಣೈಃ ॥೨೦॥**

ಕಲ್ಮಷರಹಿತನಾದ ( ಪಾಪರಹಿತನಾದ ), ಧರ್ಮಾತ್ಮನಾದ ಪ್ರಜಾಪತಿ ಬ್ರಹ್ಮನು 'ವಿಧ-ವಿಧವಾದ ದಕ್ಷಿಣೆಗಳಿಂದ ಯುಕ್ತವಾದ ಯಜ್ಞಗಳ ಮೂಲಕವಾಗಿ ನನ್ನನ್ನು ಆರಾಧಿಸುತ್ತಾರೆ'–ಎಂಬ ಆಶಯದಿಂದಲೇ ಈ ಪ್ರಜಾಕೋಟಿಯನ್ನು ಸೃಷ್ಟಿಸಿದನು.

ಈ ಉದ್ದೇಶದಿಂದಲೇ ಪ್ರಜಾಪತಿಯು ಓಷಧಿಲತೆಗಳನ್ನೂ, ಯಜ್ಞಯೋಗ್ಯವಾದ ಮತ್ತು ಶುಚಿಯಾದ ಪಶುಗಳನ್ನೂ, ಯಜ್ಞಕ್ಕೆ ಸಂಬಂಧಿಸಿದ ಹವಿಸ್ಸುಗಳನ್ನೂ ಸೃಷ್ಟಿಸಿದನು.

**ಗೃಹಸ್ಥಾಶ್ರಮಿಣಸ್ತಚ್ಚ ಯಜ್ಞಕರ್ಮ ವಿರೋಧಕಮ್ ।**
**ತಸ್ಮಾದ್ಗಾರ್ಹಸ್ಥ್ಯಮೇವೇಹ ದುಷ್ಕರಂ ದುರ್ಲಭಂ ತಥಾ ॥೨೧॥**

ಗೃಹಸ್ಥಾಶ್ರಮಿಯಾದವನಿಗೆ ಯಜ್ಞಕರ್ಮವು ಸ್ವಾಭಾವಿಕವಾದ ಸಂಕೋಲೆಯಂತೆ ಮಾಡಲೇಬೇಕಾದ ಕರ್ಮವಾಗಿರುತ್ತದೆ. ಈ ಕಾರಣದಿಂದಲೇ ಗೃಹಸ್ಥಾಶ್ರಮವು ದುಷ್ಕರವೂ ಆಗಿರುತ್ತದೆ ; ದುರ್ಲಭವೂ ಆಗಿರುತ್ತದೆ.

(ಈ ಶ್ಲೋಕದಲ್ಲಿ ಬಂದಿರುವ ವಿರೋಧಕಂ ಎಂಬ ಪದಕ್ಕೆ ಸ್ವಾಭಾವಿಕವಾದ ಅರ್ಥ : ವಿರೋಧವನ್ನು ಅಥವಾ ತೊಂದರೆಯನ್ನು ಉಂಟುಮಾಡತಕ್ಕುದು–ಎಂದಾಗುತ್ತದೆ. ಆದರೆ ಹೀಗೆ ಅರ್ಥಮಾಡಿದರೆ ಗೃಹಸ್ಥನಾದವನಿಗೆ ಯಜ್ಞಕರ್ಮವು ತೊಂದರೆಯನ್ನುಂಟುಮಾಡುತ್ತದೆ–ಎಂದು ಅರ್ಥವಾಗುತ್ತದೆ. ಯಜ್ಞಕರ್ಮವನ್ನು ಪ್ರಶಂಸೆಮಾಡುವ ಪ್ರಕರಣವಾದುದರಿಂದ ವ್ಯಾಖ್ಯಾನಕಾರರು : **ನಿಗಡಮ್ ವಿಶೇಷೇಣ ರೋಧಕಂ** = ಸರಪಳಿಯಂತೆ ವಿಶೇಷವಾಗಿ ಬಂಧಿಸತಕ್ಕುದು. ಗೃಹಸ್ಥನಾದವನಿಗೆ ಯಜ್ಞಕರ್ಮವೆಂಬುದು ಬಂಧನ : ಮಾಡಲೇಬೇಕಾದ ಕರ್ಮ–ಹೀಗೆ ಅರ್ಥಮಾಡಿರುತ್ತಾರೆ.)

**ತತ್ಸಮ್ಪ್ರಾಪ್ಯ ಗೃಹಸ್ಥಾ ಯೇ ಪಶುಧಾನ್ಯಧನಾನ್ವಿತಾಃ ।**
**ನ ಯಜನ್ತೇ ಮಹಾರಾಜ ಶಾಶ್ವತಂ ತೇಷು ಕಿಲ್ಬಿಷಮ್ ॥೨೩॥**

ಇಂತಹ ಪರಮಶ್ರೇಷ್ಠವಾದ ಗಾರ್ಹಸ್ಥ್ಯಧರ್ಮವನ್ನು ಹೊಂದಿದ ಗೃಹಸ್ಥರು ಪಶು-ಧಾನ್ಯ-ಧನಸಮೃದ್ಧಿಯನ್ನು ಹೊಂದಿ ವಿಧಿಪೂರ್ವಕವಾಗಿ ಯಜ್ಞಮಾಡದಿದ್ದರೆ ಅವರಲ್ಲಿ ಪಾಪವು ಶಾಶ್ವತವಾಗಿ ಉಳಿಯುತ್ತದೆ.

**ಸ್ವಾಧ್ಯಾಯಯಜ್ಞಾ ಋಷಯೋ ಜ್ಞಾನಯಜ್ಞಾಸ್ತಥಾ ಪರೇ ।**
**ಅಥಾಪರೇ ಮಹಾಯಜ್ಞಾನ್ಮನಸ್ಯೇವ ವಿತನ್ವತೇ ॥೨೪॥**

ಕೆಲವು ಋಷಿಗಳು ವೇದ-ಶಾಸ್ತ್ರಗಳ ಅಧ್ಯಯನರೂಪವಾದ ಯಜ್ಞಗಳನ್ನು ಮಾಡುತ್ತಾರೆ. ಕೆಲವು ಋಷಿಗಳು ಬ್ರಹ್ಮಜ್ಞಾನರೂಪವಾದ ಯಜ್ಞಗಳಲ್ಲಿ ನಿರತರಾಗಿರುತ್ತಾರೆ. ಇನ್ನೂ ಕೆಲವರು ಮನಸ್ಸಿನಲ್ಲಿಯೇ ಧ್ಯಾನರೂಪವಾದ ಮಹಾಯಜ್ಞಗಳನ್ನು ಮಾಡುತ್ತಾರೆ.

ಹೀಗೆ ಮನಸ್ಸನ್ನು ಏಕಾಗ್ರಗೊಳಿಸಿ ಜ್ಞಾನಮಾರ್ಗವನ್ನು ಹಿಡಿದು ಬ್ರಹ್ಮಭೂತನಾದ ದ್ವಿಜನ ದಿವ್ಯದರ್ಶನವನ್ನು ದೇವತೆಗಳೂ ಅಪೇಕ್ಷಿಸುತ್ತಾರೆ. (ಹೀಗೆ ಒಂದೊಂದು ವರ್ಣಕ್ಕೂ ಪರಮಪದವನ್ನು ಸೇರುವ ವಿಧಾನಗಳು ಬೇರೆ-ಬೇರೆಯಾಗಿವೆ. ಬ್ರಾಹ್ಮಣನು ಷಟ್ಕರ್ಮನಿರತನಾಗಿ ಗೃಹಸ್ಥಾಶ್ರಮೋಕ್ತವಾದ ವೈದಿಕಕರ್ಮಗಳನ್ನು ಮಾಡುತ್ತಾ ಧ್ಯಾನಯೋಗದ ಮೂಲಕವಾಗಿ ಪರಮಪದವನ್ನು ಸೇರಬಹುದು. ಆದರೆ ಕ್ಷತ್ರಿಯನು ಹಾಗೆ ಮಾಡುವಂತಿಲ್ಲ. ಅವನಿಗೆ ಪ್ರಜಾಪಾಲನವೆಂಬುದೇ ಮುಖ್ಯ ಧರ್ಮ. ಯಜ್ಞಗಳನ್ನೂ ಮಾಡಿಯೇ ತೀರಬೇಕು. ಹೀಗೆ ಮಾಡುವುದರಿಂದಲೇ ಕ್ಷತ್ರಿಯನಾದವನು ಪರಮಪದವನ್ನು ಸೇರುತ್ತಾನೆ.)

ಈ ಮಹಾಯುದ್ಧದ ವಿಜಯದಿಂದಾಗಿ ನಾವು ವಿಚಿತ್ರವಾದ ರತ್ನಗಳನ್ನು ನಾನಾದೇಶಗಳಿಂದ ಸಂಗ್ರಹಿಸಿರುತ್ತೇವೆ. ಹೀಗೆ ಸಂಗ್ರಹಿಸಿರುವ ರತ್ನಗಳನ್ನು ನಾವು ಯಜ್ಞಗಳ ಮೂಲಕವಾಗಿ ವಿತರಣೆಮಾಡಬೇಕಾಗಿದೆ. ಅಣ್ಣ! ನೀನು ಹಾಗೆ ಮಾಡಲಿಚ್ಛಿಸದೇ ನಾಸ್ತಿಕತ್ವಕ್ಕೆ ಸಂಬಂಧಿಸಿದ ಮಾತುಗಳನ್ನೇ ಆಡುತ್ತಿರುವೆ.

**ಕುಟುಮ್ಬಮಾಸ್ಥಿತೇ ತ್ಯಾಗಂ ನ ಪಶ್ಯಾಮಿ ನರಾಧಿಪ ।**
**ರಾಜಸೂಯಾಶ್ವಮೇಧೇಷು ಸರ್ವಮೇಧೇಷು ವಾ ಪುನಃ ॥೨೭॥**

ಕುಟುಂಬವನ್ನು ಭರಿಸಿರಲಾಗಿ–ಅಂತಹವನು ಸರ್ವಸಂಗಪರಿತ್ಯಾಗ ಮಾಡುವುದೆಂಬುದನ್ನು ನಾನು ಇದುವರೆಗೂ ನೋಡಿಯೇ ಇಲ್ಲ. ಆದರೆ ತನ್ನಲ್ಲಿರುವ ಸರ್ವಸ್ವವನ್ನೂ ರಾಜಸೂಯ, ಅಶ್ವಮೇಧ ಅಥವಾ ಸರ್ವ ಮೇಧ–ಈ ಯಜ್ಞಗಳಲ್ಲಿ ತ್ಯಾಗಮಾಡಬಹುದಾಗಿದೆ. (ಗೃಹಸ್ಥನಾದವನು ಸರ್ವಸಂಗಪರಿತ್ಯಾಗವನ್ನಾಗಲೀ ಸರ್ವಧರ್ಮತ್ಯಾಗವನ್ನಾಗಲೀ ಮಾಡಲು ಸಾಧ್ಯವೇ ಇಲ್ಲ. ಯಜ್ಞಗಳ ಮೂಲಕವಾಗಿ ತನ್ನಲ್ಲಿರುವ ಸಕಲೈಶ್ವರ್ಯಗಳನ್ನೂ ದಕ್ಷಿಣಾರೂಪವಾಗಿ ವಿನಿಯೋಗಿಸಬಹುದು. ಹೀಗೆ ಅನೇಕರು ಮಾಡಿಯೂ ಇದ್ದಾರೆ.)

ಮಹಾರಾಜ! ರಾಜಸೂಯಾಶ್ವಮೇಧಗಳೇ ಅಲ್ಲದೇ ಬ್ರಾಹ್ಮಣರ ಪ್ರಶಂಸೆಗೆ ಪಾತ್ರವಾದ ಯಾವುದೇ ಇತರ ಯಜ್ಞಗಳಿದ್ದರೂ ಅವುಗಳನ್ನೂ ನೀನು ಮಾಡು. ದೇವಪತಿಯಾದ ಇಂದ್ರನಂತೆ ಆ ಮಹಾಯಜ್ಞಗಳ ಮೂಲಕವಾಗಿ ದೇವತೆಗಳನ್ನು ಆರಾಧಿಸು. ಆದರೆ ಎಲ್ಲವನ್ನೂ ಪರಿತ್ಯಜಿಸಿ ಅರಣ್ಯಕ್ಕೆ ಹೋಗುವುದು ಖಂಡಿತವಾಗಿಯೂ ಉಚಿತವಲ್ಲ.

**ರಾಜ್ಞಃ ಪ್ರಮಾದದೋಷೇಣ ದಸ್ಯುಭಿಃ ಪರಿಮುಷ್ಯತಾಮ್ ।**
**ಅಶರಣ್ಯಃ ಪ್ರಜಾನಾಂ ಯಃ ಸ ರಾಜಾ ಕಲಿರುಚ್ಯತೇ ॥೨೯॥**

ಯಾವ ರಾಜನು ತನ್ನ ಪ್ರಮಾದದೋಷದಿಂದಾಗಿ (ಅಜಾಗರೂಕತೆ ಯಿಂದಾಗಿ) ಕಳ್ಳ-ಕಾಕರ ದಾಂಧಲೆಗೆ ಒಳಗಾಗುವ ಪ್ರಜೆಗಳಿಗೆ ರಕ್ಷಕ ನಾಗುವುದಿಲ್ಲವೋ–ಅಂತಹ ರಾಜನು ಕಲಿ ಎಂಬ ಹೆಸರಿನಿಂದ ಕರೆಯಲ್ಪಡು ತ್ತಾನೆ.

ಯುಧಿಷ್ಠಿರ! ನಾವೇನಾದರೂ ಮಾತ್ಸರ್ಯಪೂರಿತವಾದ ಮನಸ್ಸಿನಿಂದ ಕೂಡಿದವರಾಗಿ ಕುದುರೆಗಳು, ಹಸುಗಳು, ದಾಸಿಯರು, ಸುವರ್ಣಾ ಭರಣಗಳಿಂದ ಸಮಲಂಕೃತವಾದ ಆನೆಗಳು, ಗ್ರಾಮಗಳು, ಕ್ಷೇತ್ರಗಳು, ಹಳ್ಳಿಗಳು ಮತ್ತು ಮನೆಗಳು–ಇವೇ ಮೊದಲಾದ ರಾಜಭೋಗಯೋಗ್ಯವಾದ ಪದಾರ್ಥಗಳನ್ನು ಯಜ್ಞಕಾಲದಲ್ಲಿ ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಡದಿದ್ದರೆ ನಾವೂ ಕಲಿರಾಜರೇ ಆಗುತ್ತೇವೆ.

**ಅದಾತಾರಃ ಶರಣ್ಯಾಶ್ಚ ರಾಜಕಿಲ್ಬಿಷಭಾಗಿನಃ ।**
**ದೋಷಾಣಾಮೇವ ಭೋಕ್ತಾರೋ ನ ಸುಖಾನಾಂ ಕದಾಚನ ॥೩೨॥**

(ದಾನಗಳನ್ನು ಮಾಡದಿರುವುದು, ಶರಣಾಗತರಾಗಿ ಬಂದವರಿಗೆ ರಕ್ಷಣೆಯನ್ನು ಕೊಡದಿರುವುದು–ರಾಜಕಿಲ್ಬಿಷಗಳೆಂದು ಹೇಳಲ್ಪಟ್ಟಿವೆ.) ಯಾರು ದಾನಕೊಡುವುದಿಲ್ಲವೋ ಮತ್ತು ಶರಣಾಗತರನ್ನು ರಕ್ಷಿಸಬಲ್ಲವರಾಗಿದ್ದರೂ ರಕ್ಷಣೆಯನ್ನು ಕೊಡುವುದಿಲ್ಲವೋ ಅವರು ಈ ರಾಜಕಿಲ್ಬಿಷಕ್ಕೆ ಭಾಗಿಗಳಾಗುತ್ತಾರೆ. ಈ ರಾಜಕಿಲ್ಬಿಷದ ಫಲವೇನೆಂದರೆ : ಇಂತಹವರು ಯಾವಾಗಲೂ ದುಃಖವನ್ನೇ ಅನುಭವಿಸುತ್ತಿರುತ್ತಾರೆ. ಇವರಿಗೆ ಸುಖವೆಂಬುದು ಸ್ವಪ್ನದಲ್ಲಿಯೂ ಲಭಿಸುವುದಿಲ್ಲ.

**ಅನಿಷ್ಟ್ವಾ ಚ ಮಹಾಯಜ್ಞೈರಕೃತ್ವಾ ಚ ಪಿತೃಸ್ವಧಾಮ್ ।**
**ತೀರ್ಥೇಷ್ವನಭಿಸಂಪ್ಲುತ್ಯ ಪ್ರವ್ರಜಿಷ್ಯಸಿ ಚೇತ್ಪ್ರಭೋ ॥೩೩॥**

**ಛಿನ್ನಾಭ್ರಮಿವ ಗನ್ತಾಸಿ ವಿಲಯಂ ಮಾರುತೇರಿತಮ್ ।**
**ಲೋಕಯೋರುಭಯೋರ್ಭ್ರಷ್ಟೋ ಹ್ಯನ್ತರಾಲೇ ವ್ಯವಸ್ಥಿತಃ ॥೩೪॥**

ಪ್ರಭುವೇ! ಮಹಾಯಜ್ಞಗಳಿಂದ ದೇವತೆಗಳನ್ನು ಆರಾಧಿಸದೆ, ಪಿತೃಗಳಿಗೆ ಶ್ರಾದ್ಧಾದಿಗಳನ್ನು ಮಾಡದೆ, ಭೂಮಂಡಲದಲ್ಲಿರುವ ಪುಣ್ಯತೀರ್ಥಗಳಲ್ಲಿ ಸ್ನಾನಮಾಡದೆ ನೀನೇನಾದರೂ ಕ್ಷತ್ರಿಯರಿಗೆ ಉಚಿತವಲ್ಲದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಕಾಡಿಗೆ ಹೊರಟುಹೋದೆಯಾದರೆ–ಬಿರುಗಾಳಿಯ ಹೊಡೆತದಿಂದ ಭಿನ್ನ-ಭಿನ್ನವಾಗಿ ಚದುರಿಹೋಗುವ ಮೋಡದಂತೆ–ನಾಶಹೊಂದುವೆ. ಇಹಲೋಕ-ಪರಲೋಕಸುಖಗಳೆರಡರಿಂದಲೂ ಭ್ರಷ್ಟನಾಗಿ ತ್ರಿಶಂಕುವಿನಂತಾಗುವೆ. (ವ್ಯಾಖ್ಯಾನಕಾರರ ಪ್ರಕಾರ ಅನ್ತರಾಲೇ ಪಿಶಾಚಯೋನೌ–ಪಿಶಾಚಯೋನಿಯಲ್ಲಿ ವ್ಯವಸ್ಥಿತನಾಗಿರಬೇಕಾಗುತ್ತದೆ. ಅರ್ಥಾತ್ ಪಿಶಾಚಿಯ ಜನ್ಮವನ್ನು ಪಡೆಯಬೇಕಾಗುತ್ತದೆ.)

**ಅನ್ತರ್ಬಹಿಶ್ಚ ಯತ್ಕಿಂಚಿನ್ಮನೋವ್ಯಾಸಙ್ಗಕಾರಕಮ್ ।**
**ಪರಿತ್ಯಜ್ಯ ಭವೇತ್ತ್ಯಾಗೀ ನ ಹಿತ್ವಾ ಪ್ರತಿತಿಷ್ಠತಿ ॥೩೫॥**

ಬಹಿರಂಗವಾಗಿ ಮತ್ತು ಅಂತರಂಗವಾಗಿ ಮನಸ್ಸನ್ನು ಯಾವಾಗಲೂ

ಸಂಗದಲ್ಲಿಯೇ ತೊಡಗಿಸುವ ಅಹಂಕಾರ-ಮಮಕಾರಗಳನ್ನು ಪರಿತ್ಯಜಿಸುವುದರಿಂದ ಮಾತ್ರವೇ ಒಬ್ಬನು 'ತ್ಯಾಗೀ' ಎನಿಸಿಕೊಳ್ಳುತ್ತಾನೆ. ಅದನ್ನು ಬಿಟ್ಟು ಕೇವಲ ಗೃಹವನ್ನು ತ್ಯಾಗಮಾಡಿ ಹೋಗುವವನನ್ನು ಯಾರೂ 'ತ್ಯಾಗೀ' ಎನ್ನುವುದಿಲ್ಲ. ಅಂತಹವನು ತ್ಯಾಗಿಯೂ ಆಗಲಾರನು.

**ಏತಸ್ಮಿನ್ವರ್ತಮಾನಸ್ಯ ವಿಧಾವಪ್ರತಿಷೇಧಿತೇ ।**
**ಬ್ರಾಹ್ಮಣಸ್ಯ ಮಹಾರಾಜ ನೋಚ್ಛಿತ್ತಿರ್ವಿದ್ಯತೇ ಕ್ವಚಿತ್ ॥೩೬॥**

ಇಂತಹ ಪರಮಶ್ರೇಷ್ಠವಾದ ಗೃಹಸ್ಥಾಶ್ರಮದಲ್ಲಿಯೇ ಇದ್ದುಕೊಂಡು ಧರ್ಮಾವಿರೋಧವಾದ, ವೇದವಿಹಿತವಾದ ಮಾರ್ಗದಲ್ಲಿ ಕರ್ಮಾನುಷ್ಠಾನಗಳನ್ನು ಮಾಡಿಕೊಂಡಿರುವ ಬ್ರಾಹ್ಮಣನಿಗೆ ಯಾವುದೇ ಕಾರಣದಿಂದಲೂ ಪತನದ ಭಯವಿರುವುದಿಲ್ಲ. (ಅಂತಹವನೆಂದಿಗೂ ಪತಿತನಾಗುವುದಿಲ್ಲ.)

**ನಿಹತ್ಯ ಶತ್ರೂಂಸ್ತರಸಾ ಸಮೃದ್ಧಾ-**
**ನ್ಶಕ್ರೋ ಯಥಾ ದೈತ್ಯಬಲಾನಿ ಸಂಖ್ಯೇ ।**
**ಕಃ ಪಾರ್ಥ ಶೋಚೇನ್ನಿರತಃ ಸ್ವಧರ್ಮೇ**
**ಪೂರ್ವೈಃ ಸ್ಮೃತೇ ಪಾರ್ಥಿವ ಶಿಷ್ಟಜುಷ್ಟೇ ॥೩೭॥**

ಕುಂತೀಪುತ್ರ! ಯುದ್ಧದಲ್ಲಿ ಇಂದ್ರನು ದೈತ್ಯರ ಸೈನ್ಯಗಳನ್ನು ಸಂಹರಿಸಿದಂತೆ–ಅಸಂಖ್ಯಾತರಾದ ಶತ್ರುಗಳನ್ನು ಬಹಳ ಬೇಗ ವಿನಾಶಗೊಳಿಸಿ, ಹಿಂದಿನ ರಾಜರಿಂದ ಸಂಸೇವಿತವಾದ ಮತ್ತು ಶಿಷ್ಟರಿಂದ ಅನುಷ್ಠಿತವಾದ ಸ್ವಧರ್ಮದಲ್ಲಿ ನಿರತನಾದ ಯಾವ ರಾಜನು ತಾನೇ ನಿನ್ನಂತೆ ಶೋಕಪಡುತ್ತಾನೆ?

**ಕ್ಷಾತ್ರೇಣ ಧರ್ಮೇಣ ಪರಾಕ್ರಮೇಣ**
**ಜಿತ್ವಾ ಮಹೀಂ ಮನ್ತ್ರವಿದ್ಭ್ಯಃ ಪ್ರದಾಯ ।**
**ನಾಕಸ್ಯ ಪೃಷ್ಠೇಽಸಿ ನರೇನ್ದ್ರ ಗನ್ತಾ**
**ನ ಶೋಚಿತವ್ಯಂ ಭವತಾದ್ಯ ಪಾರ್ಥ ॥೩೮॥**

ನರೇಂದ್ರ! ಕುಂತೀಕುಮಾರ! ನೀನು ಕ್ಷತ್ರಧರ್ಮಾನುಸಾರವಾಗಿ ಭುಜಬಲ-ಪರಾಕ್ರಮಗಳಿಂದ ಈ ಭೂಮಂಡಲವನ್ನು ಜಯಿಸಿರುವೆ. ಮುಂದೆ ನೀನು ಅನೇಕ ಯಜ್ಞಗಳನ್ನು ಮಾಡಿ ಮಂತ್ರವಿದರಾದ ಬ್ರಾಹ್ಮಣ

ರಿಗೆ ಯಥೇಚ್ಛವಾಗಿ ದಕ್ಷಿಣೆಗಳನ್ನು ದಾನಮಾಡಿ ಸ್ವರ್ಗಕ್ಕಿಂತಲೂ ಮೇಲಿರುವ ಪುಣ್ಯಲೋಕಗಳಿಗೂ ಹೋಗುವೆ. ಆದುದರಿಂದ ನೀನು ಈ ಸಮಯದಲ್ಲಿ ಶೋಕಿಸುವುದು ಖಂಡಿತವಾಗಿಯೂ ಉಚಿತವಲ್ಲ."

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಸಹದೇವನು ಮಮತೆ ಮತ್ತು ಆಸಕ್ತಿಗಳನ್ನು ತೊರೆದು ರಾಜ್ಯಭಾರಮಾಡುವಂತೆ ಯುಧಿಷ್ಠಿರನಿಗೆ ಸಲಹೆ ನೀಡಿದುದು

"ಜನಮೇಜಯ! ಅರ್ಜುನ-ಭೀಮ-ನಕುಲರ ಮಾತಿಗೆ ಧರ್ಮ ರಾಜನು ಯಾವ ವಿಧವಾದ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸದೇ ಇದ್ದುದರಿಂದ ಸಹದೇವನು ಮಾತನಾಡಲು ಪ್ರಾರಂಭಿಸಿದನು :

**ನ ಬಾಹ್ಯಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ಭಾರತ ।**
**ಶಾರೀರಂ ದ್ರವ್ಯಮುತ್ಸೃಜ್ಯ ಸಿದ್ಧಿರ್ಭವತಿ ವಾ ನ ವಾ ॥೧॥**

"ಭರತನಂದನ! ಬಾಹ್ಯಸಂಪತ್ತುಗಳನ್ನು ( ಮನೆ-ಮಠ-ಐಶ್ವರ್ಯ ಮುಂತಾದುವು ) ತ್ಯಾಗಮಾಡಿಹೋದ ಮಾತ್ರದಿಂದಲೇ ಸಿದ್ಧಿಯುಂಟಾಗು ವುದಿಲ್ಲ. ಶರೀರಕ್ಕೆ ಸಂಬಂಧಿಸಿದ ಅಹಂಕಾರ-ಮಮಕಾರಗಳನ್ನು ಬಿಡುವುದ ರಿಂದ ಸಿದ್ಧಿಯಾದರೂ ಆಗಬಹುದು ; ಆಗದೆಯೂ ಇರಬಹುದು.

**ಬಾಹ್ಯದ್ರವ್ಯವಿಮುಕ್ತಸ್ಯ ಶಾರೀರೇಷ್ವನುಗೃಧ್ಯತಃ ।**
**ಯೋ ಧರ್ಮೋ ಯತ್ಸುಖಂ ವಾ ಸ್ಯಾದ್ದ್ವಿಷತಾಂ ತತ್ತಥಾಸ್ತು ನಃ ॥**

ಬಾಹ್ಯದ್ರವ್ಯಗಳಾದ ಗೃಹ-ಪಶು-ಸಂಪತ್ತುಗಳಿಂದ ವಿಹೀನನಾಗಿ ದೈಹಿಕವಾದ ಸುಖೋಪಭೋಗಗಳನ್ನು ಯಾವನು ಬಯಸುತ್ತಾನೆಯೋ ಅಂತಹವನ ಧರ್ಮವು ಮತ್ತು ಅಂತಹವನಿಗೆ ಪ್ರಾಪ್ತವಾಗುವ ಸುಖವು ನಮ್ಮ ಶತ್ರುಗಳಿಗೆ ಮಾತ್ರವೇ ಮೀಸಲಾಗಿರಲಿ. (ರಾಜ್ಯ-ಕೋಶ-ಧನ-ಕನಕಾದಿ ವಸ್ತುಗಳೆಲ್ಲವೂ ಕಳೆದುಹೋಗಿವೆ. ವಾಸಿಸಲು ಮನೆಯೂ ಇಲ್ಲ ; ಊಟಮಾಡಲು ಅನ್ನವೂ ಇಲ್ಲ. ಒಂದರ್ಥದಲ್ಲಿ ಇವನೂ ತ್ಯಾಗಿಯೇ. ಆದರೆ ಇವನಿಗೆ ದೈಹಿಕಸುಖಗಳನ್ನು ಅನುಭವಿಸಬೇಕೆನ್ನುವ ಆಶೆಯಿದೆ. ಎಲ್ಲ

ವನ್ನೂ ಕಳೆದುಕೊಂಡ ನಿರ್ಗತಿಕನು ಇಂತಹ ಆಶೆಯವನ್ನಿಟ್ಟುಕೊಂಡರೆ ಏನು ಮಾಡಿಯಾನು? ಯಾವ ಧರ್ಮವನ್ನು ಅನುಸರಿಸಿ ನಡೆಯುವನು? ಅವನಿಗೆ ಸುಖವೆಂಬುದೆಲ್ಲಿದೆ? ಧರ್ಮವೆಂಬುದೆಲ್ಲಿದೆ? ಅಂತಹ ದುಃಸ್ಥಿತಿಯು ನಮ್ಮ ಶತ್ರುಗಳಿಗೆ ಬರಲಿ. ನಮಗೆಂದಿಗೂ ಅಂತಹ ದುಃಸ್ಥಿತಿಯುಂಟಾಗುವುದು ಬೇಡ. )

**ಶಾರೀರಂ ದ್ರವ್ಯಮುತ್ಸೃಜ್ಯ ಪೃಥಿವೀಮನುಶಾಸತಃ ।**
**ಯೋ ಧರ್ಮೋ ಯತ್ಸುಖಂ ವಾ ಸ್ಯಾತ್ಸುಹೃದಾಂ ತತ್ತಥಾಸ್ತು ನಃ ॥**

ಶರೀರಸಂಬಂಧವಾದ ಅಹಂಕಾರ-ಮಮಕಾರಗಳನ್ನು ತ್ಯಜಿಸಿ ಪೃಥಿವಿಯನ್ನು ಪಾಲನೆಮಾಡುವವನಿಗೆ ಯಾವ ಧರ್ಮವಿರುವುದೋ ಮತ್ತು ಯಾವ ಸುಖವಿರುವುದೋ–ಅಂತಹ ಸುಖವೂ ಮತ್ತು ಧರ್ಮವೂ ನಮ್ಮ ಸುಹೃದರಿಗೆ ಇರಲಿ.

(ಅಹಂಕಾರ-ಮಮಕಾರಗಳನ್ನು ತೊರೆಯುವುದೆಂದರೆ ಅದೊಂದು ತಪಸ್ಸೇ ಸರಿ. ಮನೆಯನ್ನಾದರೂ ಬಿಟ್ಟುಹೋಗಬಹುದು. ಮಡದಿ-ಮಕ್ಕಳನ್ನಾದರೂ ಬಿಟ್ಟುಹೋಗಬಹುದು. ಮನಸ್ಸಿನಿಂದ ಅಹಂಕಾರ-ಮಮಕಾರಗಳನ್ನು ತೊಲಗಿಸುವುದು ಮಹಾಯೋಗಿಯಾದವನಿಗೂ ದುಃಸಾಧ್ಯವೇ. ಅಹಂಕಾರ-ಮಮಕಾರಹೀನನಾಗಿ [ ನಾನು-ನನ್ನದು ಎಂಬ ಭಾವನೆಯಿಲ್ಲದೇ ನಿರಹಂಕಾರಿಯಾಗಿ ] ರಾಜ್ಯಭಾರಮಾಡುವವನ ಧರ್ಮವು ಸನಾತನವಾದುದು. ಅವನು ಯಾವ ವಿಧವಾದ ಫಲಾಪೇಕ್ಷೆಯೂ ಇಲ್ಲದೇ ಕೇವಲ ಕರ್ತವ್ಯದೃಷ್ಟಿಯಿಂದ ಸರ್ವಸಮದೃಷ್ಟಿಯಿಂದ ರಾಜ್ಯಭಾರಮಾಡುತ್ತಾನೆ. ಅವನಿಗೆ ಸುಖವೆಂಬುದೂ ಇಲ್ಲ ; ದುಃಖವೆಂಬುದೂ ಇಲ್ಲ. ದ್ವಂದ್ವಾತೀತನಾಗಿರುತ್ತಾನೆ. ಆತ್ಮಾರಾಮನಾಗಿರುತ್ತಾನೆ. ಅಂತಹ ಧರ್ಮವನ್ನು ನಮ್ಮ ಸುಹೃದರೂ ಅನುಸರಿಸಲಿ. ಅಂತಹ ಆತ್ಮಾನಂದವು ನಮ್ಮ ಸುಹೃದರಿಗೂ ಲಭಿಸಲಿ. )

**ದ್ವ್ಯಕ್ಷರಸ್ತು ಭವೇನ್ಮೃತ್ಯುಸ್ತ್ರ್ಯಕ್ಷರಂ ಬ್ರಹ್ಮ ಶಾಶ್ವತಮ್ ।**
**ಮಮೇತಿ ಚ ಭವೇನ್ಮೃತ್ಯುರ್ನ ಮಮೇತಿ ಚ ಶಾಶ್ವತಮ್ ॥೪॥**

'ಮಮ' ಎಂಬ ಎರಡಕ್ಷರಗಳ ಅನುಸಂಧಾನಮಾಡುವುದರಿಂದ ಮೃತ್ಯುವುಂಟಾಗುತ್ತದೆ. ಮಾನವನು ಮರಣಧರ್ಮಿಯಾಗುತ್ತಾನೆ. 'ನ

**ಮಮ** ' ಎಂಬ ಮೂರಕ್ಷರಗಳ ಅನುಸಂಧಾನದಿಂದ ಅದೇ ಮಾನವನೇ ಅಮರನಾಗಿ ಶಾಶ್ವತವಾದ ಬ್ರಹ್ಮಲೋಕವನ್ನು ಪಡೆದುಕೊಳ್ಳುತ್ತಾನೆ.

( ದ್ವ್ಯಕ್ಷರಾನುಸಂಧಾನವೆಂದರೆ **'ಮಮ-ಮಮ'** **'ನನ್ನದು–ನನ್ನದು'** ಎಂಬುದನ್ನೇ ಮೂಲಮಂತ್ರವನ್ನಾಗಿಟ್ಟುಕೊಂಡು ಜಪಿಸುತ್ತಾ ಹೋಗುವುದು. ಆದರೆ ಈ ಮಮಕಾರವನ್ನು ಅನುಸಂಧಾನಮಾಡುವ ಅಥವಾ ಜಪಿಸುವ ಕಾರಣವೂ ಇಲ್ಲ. 'ನಾನು-ನನ್ನದು' ಎಂಬುದು ಹುಟ್ಟಿನಿಂದಲೇ ಬರುತ್ತದೆ. ಎಳೆಯ ಮಗುವಿನ ಕೈಗೆ ಆಡುವ ಪದಾರ್ಥವನ್ನು ಕೊಟ್ಟು 'ನನ್ನದು' ಎಂಬ ಭಾವನೆಯನ್ನು ನಾವೇ ಹುಟ್ಟಿಸುತ್ತೇವೆ. ಆದುದರಿಂದ ನಾನು-ನನ್ನದು ಎಂಬ ಸ್ವಾರ್ಥಬುದ್ಧಿಯು ರಕ್ತಗತವಾಗಿಬಿಟ್ಟಿರುತ್ತದೆ. ಇದನ್ನು ಅಳಿಸಲು ಸಾಧ್ಯವಾಗುವುದೇ ಇಲ್ಲ. ಈ 'ನಾನು' ಎಂಬುದೇ ಸಂಸಾರಕ್ಕೆ ಮೂಲಕಾರಣ. 'ನಾನು' ಎಂಬ ಅಹಂಕಾರವನ್ನು ಬಿಡಲು ಮಹಾಸಾಧನೆಯನ್ನೇ ಮಾಡಬೇಕಾಗುತ್ತದೆ. ಹುಟ್ಟಿನಿಂದಲೇ ಬಂದ ಸ್ವಭಾವವನ್ನು ಬಿಟ್ಟುಬಿಡುವುದು ಅಷ್ಟು ಸುಲಭವಲ್ಲ. ಆದರೆ 'ನ **ಮಮ**' ಇದು ನನ್ನದಲ್ಲ– ಎಂಬ ತ್ರ್ಯಕ್ಷರಮಂತ್ರಾನುಸಂಧಾನದಿಂದ ಶಾಶ್ವತವಾದ ಬ್ರಹ್ಮಲೋಕವು ಲಭಿಸುತ್ತದೆ.

ಅಹಂಕಾರ-ಮಮಕಾರಗಳ ತ್ಯಾಗವೇ ಬ್ರಹ್ಮಪದಕ್ಕೆ ಸೋಪಾನವಾಗುತ್ತದೆ. ಎಲ್ಲವನ್ನೂ 'ನನ್ನದಲ್ಲ' ಎಂದು ಹೇಳಹೊರಟಾಗ ಹಾಗೆ ಹೇಳಿಕೊಂಡು ಅನುಸಂಧಾನಮಾಡಿದಾಗ ನನ್ನದಾಗಿ ಉಳಿಯುವುದು ಆತ್ಮವೊಂದೇ. ಆದುದರಿಂದ 'ನನ್ನದು' ಎಂದರೆ ಮೃತ್ಯು ; 'ನನ್ನದಲ್ಲ' ಎಂದರೆ ಶಾಶ್ವತವಾದ ಬ್ರಹ್ಮಲೋಕ. )

**ಬ್ರಹ್ಮಮೃತ್ಯೂ ತತೋ ರಾಜನ್ನಾತ್ಮನ್ಯೇವ ಸಮಾಶ್ರಿತೌ ।**
**ಅದೃಶ್ಯಮಾನೌ ಭೂತಾನಿ ಯೋಧಯೇತಾಮಸಂಶಯಮ್ ॥೫॥**

ಮಹಾರಾಜ! ಬ್ರಹ್ಮ ಮತ್ತು ಮೃತ್ಯು ಇವೆರಡೂ ನಮ್ಮ ಶರೀರದಲ್ಲಿಯೇ ಆಶ್ರಯವನ್ನು ಪಡೆದುಕೊಂಡಿವೆ. ಶರೀರದಲ್ಲಿಯೇ ಇರುವ ಬ್ರಹ್ಮನನ್ನು ಅರಣ್ಯಕ್ಕೆ ಹೋಗಿ ಹುಡುಕಬೇಕಾಗಿಲ್ಲ. ಇವುಗಳೆರಡೂ ಅದೃಶ್ಯವಾಗಿ

ಶರೀರದಲ್ಲಿ ಸೇರಿಕೊಂಡು ಪ್ರಾಣಿಗಳೊಡನೆ ಹೋರಾಡುತ್ತಿರುತ್ತವೆ. ಈ ವಿಷಯದಲ್ಲಿ ಸಂಶಯವೇ ಇಲ್ಲ.

( 'ನಾನು-ನನ್ನದು' ಎಂಬ ಭಾವನೆಯೇ ಮೃತ್ಯು. ಇದು ಮಾನವನನ್ನು ಆಕ್ರಮಿಸಿಬಿಟ್ಟಿರುತ್ತದೆ. ಶಾಸ್ತ್ರಜ್ಞಾನದಿಂದ ಉಂಟಾದ ಬ್ರಹ್ಮಜ್ಞಾನವು 'ನಾನು-ನನ್ನದು' ಎಂಬ ಭಾವನೆಯನ್ನು ಹೋಗಲಾಡಿಸಲು ಬಹಳವಾಗಿ ಪ್ರಯತ್ನಿಸುತ್ತದೆ. ಈ ಜ್ಞಾನ ಮತ್ತು ಅಜ್ಞಾನಗಳ ಘೋರಸಮರವು ಮನಸ್ಸೆಂಬ ರಣರಂಗದಲ್ಲಿ ಅನವರತವಾಗಿ ನಡೆಯುತ್ತಲೇ ಇರುತ್ತದೆ. ಈ ಸಮರವು ಅರಣ್ಯಕ್ಕೆ ಹೋದರೂ ನಡೆಯುತ್ತದೆ ; ನಗರದಲ್ಲೇ ವಾಸವಾಗಿದ್ದರೂ ನಡೆಯುತ್ತದೆ. ನಗರದಲ್ಲಿಯೇ ಇದ್ದರೂ ಬ್ರಹ್ಮಜ್ಞಾನದ ಕೈ ಮೇಲಾಗಿ ಚಿತ್ತವು ಬ್ರಹ್ಮನಲ್ಲಿಯೇ ರಮಿಸತೊಡಗಿದರೆ ಮಾನವನು ಬ್ರಹ್ಮಾನಂದವನ್ನು ಇಲ್ಲಿಯೇ ಅನುಭವಿಸುತ್ತಾನೆ. ಅರಣ್ಯಕ್ಕೆ ಹೋದರೂ ಅಹಂಕಾರ-ಮಮಕಾರಗಳು ಬಿಟ್ಟು ತೊಲಗದಿದ್ದರೆ ಮನಸ್ಸೇ ಸಂಸಾರದ ನಾಟ್ಯಶಾಲೆಯಾಗಿ ಪರಿಣಮಿಸುತ್ತದೆ. ಆದುದರಿಂದ ಮಾನವನು ಎಲ್ಲಿಯೇ ಇದ್ದರೂ ತನ್ನ ಹೃದಯದಲ್ಲಿಯೇ ಅಡಗಿರುವ ಗೃಹ-ಪಶು-ಸಂಪತ್ತುಗಳನ್ನು ಮಾತ್ರವೇ ತ್ಯಜಿಸಿ ಕಾಡಿಗೆ ಹೋಗುವುದು ಉಚಿತವಲ್ಲ. )

**ಅವಿನಾಶೋऽಸ್ಯ ಸತ್ತ್ವಸ್ಯ ನಿಯತೋ ಯದಿ ಭಾರತ ।**
**ಹತ್ವಾ ಶರೀರಂ ಭೂತಾನಾಂ ನ ಹಿಂಸಾ ಪ್ರತಿಪತ್ಸ್ಯತೇ ॥೬॥**

( ಸಹದೇವನೀಗ ಮತ್ತೊಂದು ರೀತಿಯಲ್ಲಿ ಧರ್ಮರಾಜನಿಗೆ ಸಮಾಧಾನ ಹೇಳುತ್ತಾನೆ. ) ಅಣ್ಣ! ನೀನು ತಿಳಿದುಕೊಂಡಿರುವಂತೆ ಈ ಜೀವಕ್ಕೆ ವಿನಾಶವೆಂಬುದೇ ಇಲ್ಲವಾದಲ್ಲಿ ಪ್ರಾಣಿಗಳ ಶರೀರವನ್ನು ಕತ್ತರಿಸಿಹಾಕಿದರೂ ಆ ಶರೀರದಲ್ಲಡಗಿರುವ ಜೀವಕ್ಕೆ ಯಾವ ಹಿಂಸೆಯೂ ಆಗದಲ್ಲವೇ? ('ಅನೇಕ ಬಂಧುಗಳ, ಮಕ್ಕಳ, ಸಹೋದರರ ಸಾವಿಗೆ ನಾನು ಕಾರಣ ನಾದೆನು' ಎಂದೇಕೆ ನೀನು ಭಾವಿಸಬೇಕು? ಬಂಧುಗಳೇ ಆಗಲೀ ; ಮಕ್ಕಳೇ ಆಗಲೀ ; ಮಿತ್ರರೇ ಆಗಲೀ ; ಸಹೋದರರೇ ಆಗಲೀ–ಕಳೆದುಕೊಂಡಿರು ವುದು ಸಂಪೂರ್ಣವಾಗಿ ಜೀರ್ಣವಾಗಿದ್ದ ಅಥವಾ ಅರ್ಧಜೀರ್ಣವಾಗಿದ್ದ ಅವರ ಅವಯವಗಳಿಂದ ಕೂಡಿದ ಶರೀರಗಳನ್ನು. ಆ ಶರೀರಗಳೊಳಗಿದ್ದ

ಜೀವಾತ್ಮರಂತೂ ನಾಶಹೊಂದಿಯೂ ಇಲ್ಲ ; ಹೊಂದುವುದೂ ಇಲ್ಲ. ಜೀವವು ಹರಿದುಹೋದ ಹಳೇ ಅಂಗಿಯಿಂದ ಹೊರಬಿದ್ದು ತನ್ನ ಕರ್ಮಾನುಗುಣವಾಗಿ ಹೊಸ ಅಂಗಿಯೊಳಗೆ ಸೇರಿಕೊಳ್ಳುತ್ತದೆ. ಇದಕ್ಕಾಗಿ ನೀನು ಏಕೆ ದುಃಖಿಸಬೇಕು?

**ಅಥಾಪಿ ಚ ಸಹೋತ್ಪತ್ತಿಃ ಸತ್ತ್ವಸ್ಯ ಪ್ರಲಯಸ್ತಥಾ ।**
**ನಷ್ಟೇ ಶರೀರೇ ನಷ್ಟಃ ಸ್ಯಾದ್ವೃಥಾ ಚ ಸ್ಯಾತ್ಕ್ರಿಯಾಪಥಃ ॥೭॥**

ಒಂದು ವೇಳೆ ನೀನೇನಾದರೂ ಜೀವವೂ ಶರೀರದೊಡನೆಯೇ ಹುಟ್ಟುತ್ತದೆ ; ಶರೀರದೊಡನೆಯೇ ಜೀವವೂ ವಿನಾಶಹೊಂದುತ್ತದೆ ; ಜೀವವೂ ನಷ್ಟವಾದಂತೆಯೇ ಸರಿ–ಎಂದೇ ಸಿದ್ಧಾಂತಮಾಡುವುದಾದರೆ ಈ ಎಲ್ಲ ವೈದಿಕ ಕರ್ಮಮಾರ್ಗಗಳೂ ವ್ಯರ್ಥವೇ ಸರಿ. ಜೀವವು ಅವಿನಾಶೀ. 'ನಾನು- ನನ್ನದು' ಎಂಬುದನ್ನು ತೊರೆದು ಕಾಲಾನುಕ್ರಮವಾಗಿ ಜೀವನು ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಬಹುದು ಎಂದು ಭಾವಿಸಿ ಇದರ ಸಾಧನೆಗಾಗಿ ಮಾಡುವ (ಜೀವನಿಗೆ ಸಂಸ್ಕಾರವಾಗಲು ಮಾಡುವ) ಷೋಡಶಕರ್ಮಗಳನ್ನೂ, ಯಜ್ಞಗಳನ್ನೂ, ಸತ್ಕರ್ಮಗಳನ್ನೂ ವ್ಯರ್ಥಕರ್ಮಗಳೆಂದೇ ಹೇಳಬೇಕಾಗುತ್ತದೆ.

**ತಸ್ಮಾದೇಕಾನ್ತಮುತ್ಸೃಜ್ಯ ಪೂರ್ವೈಃ ಪೂರ್ವತರೈಶ್ಚ ನಃ ।**
**ಪನ್ಥಾ ನಿಷೇವಿತಃ ಸದ್ಭಿಃ ಸ ನಿಷೇವ್ಯೋ ವಿಜಾನತಾ ॥೮॥**

ಆದುದರಿಂದ ವಿದ್ಯಾವಂತನಾದವನು ಕರ್ತವ್ಯದಿಂದ ಪರಾಙ್ಮುಖನಾಗಿ, ಏಕಾಂತದಲ್ಲಿರುವ ಅಭಿಪ್ರಾಯವನ್ನು ಸಂಪೂರ್ಣವಾಗಿ ತ್ಯಜಿಸಿ, ನಮ್ಮ ಪೂರ್ವಜರು ಮತ್ತು ಅವರ ಪೂರ್ವಜರು ಮತ್ತು ಸತ್ಪುರುಷರು ಯಾವ ವೈದಿಕಮಾರ್ಗವನ್ನು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿರುವರೋ ಅದೇ ಮಾರ್ಗವನ್ನೇ ಆಶ್ರಯಿಸಬೇಕು.

**ಲಬ್ಧ್ವಾಪಿ ಪೃಥಿವೀಂ ಕೃತ್ಸ್ನಾಂ ಸಹಸ್ಥಾವರಜಙ್ಗಮಾಮ್ ।**
**ನ ಭುಙ್ಕ್ತೇ ಯೋ ನೃಪಃ ಸಮ್ಯಙ್ನಿಷ್ಫಲಂ ತಸ್ಯ ಜೀವಿತಮ್ ॥೯॥**

ಸ್ಥಾವರ-ಜಂಗಮಗಳಿಂದ ಯುಕ್ತವಾದ ಈ ಅಖಂಡಭೂಮಂಡಲವನ್ನು ಪಡೆದೂ ಯಾವ ರಾಜನು ಅದನ್ನು ಚೆನ್ನಾಗಿ ಪಾಲನೆಮಾಡುವುದಿಲ್ಲವೋ ಅಂತಹವನ ಜೀವನವು ವ್ಯರ್ಥವೇ ಸರಿ.

**ಅಥವಾ ವಸತೋ ರಾಜನ್ವನೇ ವನ್ಯೇನ ಜೀವತಃ ।**
**ದ್ರವ್ಯೇಷು ಯಸ್ಯ ಮಮತಾ ಮೃತ್ಯೋರಾಸ್ಯೇ ಸ ವರ್ತತೇ ॥೧೦॥**

ಒಂದು ವೇಳೆ ಅರಣ್ಯಕ್ಕೆ ಹೋಗಿ ಅಲ್ಲಿ ಸಿಗುವ ಕಂದ-ಮೂಲ-ಫಲಾ ಹಾರಗಳಿಂದಲೇ ಜೀವನವನ್ನು ನಡೆಸುತ್ತಿದ್ದರೂ ಅವನ ಮನಸ್ಸಿನಲ್ಲಿ ಹೊರಗಿನ ದ್ರವ್ಯಗಳ ಮೇಲೆ ( ಪಶು-ಪತ್ನೀ-ಸುತಾಲಯಗಳ ಮೇಲೆ ) ಮಮತೆಯು ಮೂಡಿಬಿಟ್ಟರೆ ಅವನು ಮೃತ್ಯುಮುಖನಾದಂತೆಯೇ ಸರಿ. (ಪಶು-ಪತ್ನೀ-ಸುತರ ಮಧ್ಯದಲ್ಲಿಯೇ ಇರಬೇಕಾಗಿಲ್ಲ. ಅವರನ್ನೇ ಯಾವಾ ಗಲೂ ನೆನೆಯುತ್ತಿದ್ದರೂ ಸಾಕು, ಅವನು ಸಂಸಾರಿಯಾಗುತ್ತಾನೆಯೇ ಹೊರತು ಸಂನ್ಯಾಸಿಯಾಗುವುದಿಲ್ಲ. ಇದರಿಂದಾಗಿ ಎಲ್ಲವನ್ನೂ ಪರಿತ್ಯಜಿಸಿ ಅರಣ್ಯಕ್ಕೇ ಹೋದರೂ ಅಂತಹವನಿಗೆ ಮೃತ್ಯುವು ತಪ್ಪಿದ್ದಲ್ಲ. ಬ್ರಹ್ಮಭೂತನಾಗಲು ಅಂತಹವನಿಂದ ಸಾಧ್ಯವೂ ಆಗುವುದಿಲ್ಲ. )

**ಬಾಹ್ಯನ್ತರಂ ಚ ಭೂತಾನಾಂ ಸ್ವಭಾವಂ ಪಶ್ಯ ಭಾರತ ।**
**ಯೇ ತು ಪಶ್ಯನ್ತಿ ತದ್ಭೂತಂ ಮುಚ್ಯನ್ತೇ ತೇ ಮಹಾಭಯಾತ್ ॥೧೧॥**

ಧರ್ಮಜ! ವಿಚಾರಮಾಡಿ ನೋಡು. ಪ್ರಾಣಿಗಳ ಹೊರಗಿನ ಸ್ವಭಾವವೇ ಒಂದಾಗಿರುತ್ತದೆ ; ಆಂತರಿಕಸ್ವಭಾವವೇ ಒಂದಾಗಿರುತ್ತದೆ. ಹೊರಗೆ ಕಾಣುವ ಸ್ವಭಾವಕ್ಕೆ ಅನುಗುಣವಾಗಿ ಅಂತಃಪ್ರವೃತ್ತಿಯೂ ಇರ ಬೇಕೆಂಬುದು ನಿಯಮವಾದರೂ ಹಾಗೆಯೇ ಎಲ್ಲ ಮನುಷ್ಯರಲ್ಲಿಯೂ ಅವರ ಆಕಾರ ಮತ್ತು ಮನೋವಿಕಾರಗಳು ಒಂದಕ್ಕೊಂದಕ್ಕೆ ಪೂರಕವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ.

ಸಂನ್ಯಾಸಿಯಾಗಿದ್ದರೂ ಅಹಂಕಾರ-ಮಮಕಾರಗಳನ್ನು ಮನಸ್ಸಿನಿಂದ ತೊರೆಯದೇ ದೊಡ್ಡ ಸಂಸಾರಿಯಾಗಿಯೇ ಆಗಿರಬಹುದು. ಗೃಹಸ್ಥನೇ ಆಗಿದ್ದರೂ ಅಹಂಕಾರ-ಮಮಕಾರಗಳನ್ನು ತೊರೆದು ಎಲ್ಲ ವೇದೋಕ್ತ ಕರ್ಮಗಳನ್ನೂ ಫಲಾಸಕ್ತಿಯಿಲ್ಲದೇ ಮಾಡುತ್ತಾ ಬ್ರಹ್ಮಭೂತನಾಗಿರಲೂ ಬಹುದು. ಆದುದರಿಂದ ಅವರವರ ಆಕಾರವೇನೇ ಇರಲಿ–ಅವರು ಎಲ್ಲಾ ದರೂ ಜೀವಿಸಿರಲಿ ; ಯಾರು ತಮ್ಮ ಹೃದಯಗುಹೆಯಲ್ಲಿ ಮಹಾಭೂತನಾಗಿ ರುವ ಮಹಾವಿಷ್ಣುವನ್ನು, ಜ್ಯೋತಿಸ್ವರೂಪನಾದ ಪರಮಾತ್ಮನನ್ನು ಕಾಣು

ತ್ತಾರೆಯೋ–ಅವರಿಗೆ ಮೃತ್ಯುವಿನಿಂದ ಮಹಾಭಯವಿರುವುದಿಲ್ಲ. ಮೃತ್ಯು ರೂಪವಾದ ಮಹಾಭಯದಿಂದ ವಿಮುಕ್ತರಾಗುತ್ತಾರೆ. ಅಮೃತತ್ವವನ್ನು ಹೊಂದುತ್ತಾರೆ.

**ಭವಾನ್ಪಿತಾ ಭವಾನ್ಮಾತಾ ಭವಾನ್ಭ್ರಾತಾ ಭವಾನ್ಗುರುಃ ।**
**ದುಃಖಪ್ರಲಾಪಾನಾರ್ತಸ್ಯ ತನ್ಮೇ ತ್ವಂ ಕ್ಷನ್ತುಮರ್ಹಸಿ ॥೧೨॥**

ಅಣ್ಣ! ನೀನು ಮಹಾಪ್ರಾಜ್ಞನು. ನೀನೇ ನನ್ನ ತಂದೆ. ನೀನೇ ನನ್ನ ತಾಯಿ. ನೀನೇ ನನ್ನ ಭ್ರಾತೃ. ನೀನೇ ನನ್ನ ಗುರು. ನಿನಗೆ ತಿಳಿಯದೇ ಇರುವುದು ಯಾವುದೂ ಇಲ್ಲ. ಆದರೂ ನೀನು ನಮ್ಮನ್ನಗಲಿ ಹೋಗಿಬಿಡುವೆಯೆಂಬ ದುಃಖದಿಂದಾಗಿ ಪ್ರಲಾಪರೂಪವಾದ ಅನೇಕ ಮಾತುಗಳನ್ನಾಡಿದ್ದೇನೆ. ಇದನ್ನು ನೀನು ಕ್ಷಮಿಸುವುದು ಯೋಗ್ಯವಾಗಿದೆ.

**ತಥ್ಯಂ ವಾ ಯದಿ ವಾತಥ್ಯಂ ಯನ್ಮಯೈತತ್ಪ್ರಭಾಷಿತಮ್ ।**
**ತದ್ವಿದ್ಧಿ ಪೃಥಿವೀಪಾಲ ಭಕ್ತ್ಯಾ ಭರತಸತ್ತಮ ॥೧೩॥**

ಭರತಸತ್ತಮನೇ! ನಾನು ಈಗ ಹೇಳಿರುವ ಮಾತುಗಳೆಲ್ಲವೂ ನಿಜ ವಾಗಿರಬಹುದು. ಅಥವಾ ಸುಳ್ಳಾಗಿಯೂ ಇರಬಹುದು. ನಾನು ನಿನ್ನ ಮೇಲಿನ ಭಕ್ತಿಯಿಂದಾಗಿ ಈ ಮಾತುಗಳನ್ನಾಡಿರುವೆನು. ಅದನ್ನು ನೀನು ಮನಗಾಣಬೇಕಾಗಿದೆ. ('ನಾನು ಹೇಳಿದುದೇ ಸರಿ' ಎಂದೂ ನಾನು ಹೇಳು ತ್ತಿಲ್ಲ. 'ನಿನಗೆ ತಿಳಿಯದೇ ಇರುವುದು ನನಗೆ ತಿಳಿದಿದೆ'–ಎಂಬ ಭಾವನೆ ಯಿಂದಲೂ ನಾನು ಈ ವಿಷಯಗಳನ್ನು ಹೇಳಲಿಲ್ಲ. ನಿನ್ನ ಮೇಲಿನ ಭಕ್ತಿ-ವಿಶ್ವಾಸಗಳು ದುಃಖಪ್ರಲಾಪಮಾಡುವಂತೆ ನನ್ನನ್ನು ಪ್ರಚೋದಿಸಿದುವು. ನಾನು ಹೇಳಿದುದನ್ನು ನೀನು ಹೀಗೆ ಭಾವಿಸಬೇಕಾಗಿದೆ.)"

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ರಾಜದಂಡವನ್ನು ಹಿಡಿದು ಪೃಥಿವಿಯನ್ನು ಶಾಸನಮಾಡುವಂತೆ ದ್ರೌಪದಿಯು ಯುಧಿಷ್ಠಿರನನ್ನು ಪ್ರೇರಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ತಮ್ಮಂದಿರು ವೇದ-ಶಾಸ್ತ್ರಗಳಿಂದ ಉದ್ಧರಿಸಿದ ವಿಧ-ವಿಧವಾದ ದೃಷ್ಟಾಂತಗಳಿಂದ ಕೂಡಿದ ಮಾತುಗಳನ್ನು ಹೇಳಿ ರಾಜ್ಯ ಪಾಲನೆಗಾಗಿ ಅಣ್ಣನನ್ನು ಒಪ್ಪಿಸಲು ಪ್ರಯತ್ನಿಸಿದರೂ ಕುಂತಿಯ ಮಗನಾದ ಧರ್ಮಾತ್ಮನಾದ ಯುಧಿಷ್ಠಿರನು ಯಾವ ಮಾತನ್ನೂ ಹೇಳದೇ ಸುಮ್ಮನೆ ಕುಳಿತಿದ್ದನು. ಆ ಸಮಯದಲ್ಲಿ ಸತ್ಕುಲಪ್ರಸೂತೆಯಾದ, ಕಾಂತಿಯುಕ್ತಳಾದ, ವಿಶಾಲನೇತ್ರೆಯಾದ, ಸ್ತ್ರೀಯರಲ್ಲಿ ಶ್ರೇಷ್ಠಳೆನಿಸಿದ, ಸ್ಥೂಲವಾದ ನಿತಂಬವನ್ನು ಹೊಂದಿದ್ದ, ತನ್ನ ಐವರು ಪತಿಗಳಲ್ಲಿಯೂ ಅಭಿಮಾನವನ್ನಿಟ್ಟುಕೊಂಡಿದ್ದ, ಅದರಲ್ಲಿಯೂ ವಿಶೇಷವಾಗಿ ಯುಧಿಷ್ಠಿರನ ವಿಷಯದಲ್ಲಿ ಹೆಚ್ಚು ಅಭಿಮಾನಶಾಲಿನಿಯಾಗಿದ್ದ, ಧರ್ಮದರ್ಶಿನಿಯಾದ, ಧರ್ಮರಾಜನಿಂದ ಸತತವಾಗಿ ಲಾಲಿಸಲ್ಪಡುತ್ತಿದ್ದ, ಧರ್ಮಜ್ಞಳಾದ ದ್ರೌಪದಿಯು ರಾಜರ್ಷಭನಾದ–ಆನೆಗಳಿಂದ ಪರಿವೃತವಾದ ಯೂಥಪತಿಯಾದ ಸಲಗ ನಂತೆ–ಸಿಂಹ-ಶಾರ್ದೂಲಸದೃಶರಾದ ಸಹೋದರರಿಂದ ಪರಿವೃತನಾಗಿದ್ದ, ಪತಿಯಾದ ಯುಧಿಷ್ಠಿರನ ಕಡೆಗೆ ದೃಷ್ಟಿಯನ್ನು ಹೊರಳಿಸಿ, ಅವನನ್ನು ಸಂಬೋಧಿಸಿ ಸಾಂತ್ವನಪೂರ್ಣವಾದ ಮತ್ತು ಅತ್ಯಂತಮಧುರವಾದ ಈ ಮಾತುಗಳನ್ನು ಹೇಳಿದಳು :

**ಇಮೇ ತೇ ಭ್ರಾತರಃ ಪಾರ್ಥ ಶುಷ್ಯನ್ತೇ ಸ್ತೋಕಕಾ ಇವ ।**
**ವಾವಾಶ್ಯಮಾನಾಸ್ತಿಷ್ಠನ್ತಿ ನ ಚೈನಾನಭಿನನ್ದಸೇ ॥೬॥**

"ಯುಧಿಷ್ಠಿರ! ಈ ನಿನ್ನ ತಮ್ಮಂದಿರು ಕಾಡಿಗೆ ಹೋಗುವೆನೆನ್ನುವ ನಿನ್ನ ನಿರ್ಧಾರವನ್ನು ಕೇಳಿ ಬಾಡಿದ ಮುಖವುಳ್ಳವರಾಗಿದ್ದಾರೆ. ಚಾತಕಪಕ್ಷಿ ಗಳಂತೆ ರಾಜ್ಯಪಾಲನೆಮಾಡಲು ನಿನ್ನನ್ನು ಬಾರಿಬಾರಿಗೂ ಅಂಗಲಾಚಿ ಬೇಡಿ

ಕೊಳ್ಳುತ್ತಿದ್ದಾರೆ. ಆದರೂ ನೀನು ಅವರನ್ನು (ಅವರ ಮಾತನ್ನು) ಅಭಿನಂದಿಸುತ್ತಿಲ್ಲ.

ಮಹಾರಾಜ! ಮದಿಸಿದ ಆನೆಗಳಂತೆಯೇ ಇರುವ ಈ ನಿನ್ನ ಸಹೋದರರರನ್ನು ಯುಕ್ತಿಯುಕ್ತವಾದ ಮಾತುಗಳಿಂದ ಸಂತೋಷಗೊಳಿಸು. ನಿಶ್ಚಯವಾಗಿಯೂ ಇವರು ಇದುವರೆಗೂ ನಿರಂತರವಾಗಿ ದುಃಖದಲ್ಲಿಯೇ ಕಾಲವನ್ನು ಕಳೆದಿರುತ್ತಾರೆ. ಈ ರಾಜ್ಯದ ವಿಷಯವಾಗಿ ಹಿಂದೆ ನೀನು ಹೇಳಿದ ಮಾತುಗಳನ್ನೇ ನಿನ್ನ ಸ್ಮರಣೆಗೆ ತರುತ್ತೇನೆ. ನಾವೆಲ್ಲರೂ ದ್ವೈತವನದಲ್ಲಿದ್ದೆವು. ಆ ಸಮಯದಲ್ಲಿ ನಿನ್ನ ಸಹೋದರರು ಚಳಿ-ಗಾಳಿ-ಬಿಸಿಲುಗಳಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದರು. ಆಗ ನೀನು ನಿನ್ನ ಸಹೋದರರರನ್ನು ಸಂತೈಸುವ ಸಲುವಾಗಿ ಈ ಮಾತುಗಳನ್ನಾಡಿದೆ :

**ವಯಂ ದುರ್ಯೋಧನಂ ಹತ್ವಾ ಮೃಧೇ ಭೋಕ್ಷ್ಯಾಮ ಮೇದಿನೀಮ್ ।**
**ಸಂಪೂರ್ಣಾಂ ಸರ್ವಕಾಮಾನಾಮಾಹವೇ ವಿಜಯೈಷಿಣಃ ॥೯॥**

**ವಿರಥಾಂಶ್ಚ ರಥಾನ್ಕೃತ್ವಾ ನಿಹತ್ಯ ಚ ಮಹಾಗಜಾನ್ ।**
**ಸಂಸ್ತೀರ್ಯ ಚ ರಥೈರ್ಭೂಮಿಂ ಸಸಾದಿಭಿರರಿಂದಮಾಃ ॥೧೦॥**

**ಯಜತಾಂ ವಿವಿಧೈರ್ಯಜ್ಞೈಃ ಸಮೃದ್ಧೈರಾಪ್ತದಕ್ಷಿಣೈಃ ।**
**ವನವಾಸಕೃತಂ ದುಃಖಂ ಭವಿಷ್ಯತಿ ಸುಖಾಯ ವಃ ॥೧೧॥**

'ಅರಿಂದಮರೇ! ವಿಜಯೇಚ್ಛುಗಳಾದ ನಾವು ದುರ್ಯೋಧನನನ್ನು ಸಂಹರಿಸಿ, ರಥಿಗಳನ್ನು ರಥಹೀನರನ್ನಾಗಿ ಮಾಡಿ, ಮಹಾಗಜಗಳನ್ನು ಸಂಹರಿಸಿ, ಕುದುರೆಸವಾರರಿಂದ ಕೂಡಿದ ರಥಗಳಿಂದ ಈ ಭೂಮಿಯನ್ನು ಮುಚ್ಚಿ, ಸಕಲಕಾಮನಾವಸ್ತುಗಳಿಂದಲೂ ಸಮೃದ್ಧವಾದ ಈ ಭೂಮಂಡಲವನ್ನು ಉಪಭುಂಜಿಸೋಣ. ಸಮೃದ್ಧವಾದ ದಾನ-ದಕ್ಷಿಣೆಗಳಿಂದ ಕೂಡಿದ ವಿಧ-ವಿಧವಾದ ಯಜ್ಞಗಳಿಂದ ದೇವತೆಗಳನ್ನು ಪೂಜಿಸುವ ನಮಗೆ ಈಗ ವನವಾಸಮಾಡುತ್ತಿರುವುದರಿಂದ ಪ್ರಾಪ್ತವಾಗಿರುವ ದುಃಖವು ಮುಂದೆ ಸುಖದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ.'

ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ಇವೇ ಮುಂತಾದ ಸಾಂತ್ವನದ ಮಾತುಗಳನ್ನು ನೀನೇ ಈ ಹಿಂದೆ ಹೇಳಿ ಈಗ ಪುನಃ ಅನುಚಿತವಾದ ಮಾತುಗಳಿಂದ ನಮ್ಮ ಮನಸ್ಸನ್ನೇಕೆ ನೋಯಿಸುತ್ತಿರುವೆ?

**ನ ಕ್ಲೀಬೋ ವಸುಧಾಂ ಭುಙ್ಕ್ತೇ ನ ಕ್ಲೀಬೋ ಧನಮಶ್ನುತೇ ।**
**ನ ಕ್ಲೀಬಸ್ಯ ಗೃಹೇ ಪುತ್ರಾ ಮತ್ಸ್ಯಾಃ ಪಙ್ಕ ಇವಾಸತೇ ||೧೩||**

ಹೇಡಿಯು ಎಂದಿಗೂ ರಾಜ್ಯವನ್ನು ಉಪಭೋಗಿಸುವುದಿಲ್ಲ. ಹೇಡಿಯಾದವನು ಧನವನ್ನು ಸಂಪಾದನೆಮಾಡಲಾರನು ಅಥವಾ ಧನದ ಉಪಯೋಗವನ್ನು ಪಡೆದುಕೊಳ್ಳಲಾರನು. ಕೆಸರಿನಲ್ಲಿ ಮೀನುಗಳು ಇರಲಾರದಂತೆ–ನಪುಂಸಕನ ಮನೆಯಲ್ಲಿ ಮಕ್ಕಳು-ಮರಿಗಳೂ ಇರಲಾರರು.

**ನಾದಣ್ಡಃ ಕ್ಷತ್ರಿಯೋ ಭಾತಿ ನಾದಣ್ಡೋ ಭೂಮಿಮಶ್ನುತೇ ।**
**ನಾದಣ್ಡಸ್ಯ ಪ್ರಜಾ ರಾಜ್ಞಃ ಸುಖಂ ವಿನ್ದನ್ತಿ ಭಾರತ ||೧೪||**

ಭಾರತನೇ! ದಂಡವನ್ನು ಹಿಡಿಯದಿರುವ (ದಂಡನೀತಿಯಿಲ್ಲದ) ಕ್ಷತ್ರಿಯನು ಶೋಭಿಸುವುದಿಲ್ಲ. ದಂಡವನ್ನು ಹಿಡಿಯದ ಕ್ಷತ್ರಿಯನು ಭೂಮಿಯನ್ನು ಭೋಗಿಸುವುದಿಲ್ಲ. ದಂಡನೀತಿಯಿಲ್ಲದ ರಾಜನ ಪ್ರಜೆಗಳು ಸುಖವಾಗಿರಲಾರರು.

**ಮಿತ್ರತಾ ಸರ್ವಭೂತೇಷು ದಾನಮಧ್ಯಯನಂ ತಪಃ ।**
**ಬ್ರಾಹ್ಮಣಸ್ಯೈವ ಧರ್ಮಃ ಸ್ಯಾನ್ನ ರಾಜ್ಞೋ ರಾಜಸತ್ತಮ ||೧೫||**

ರಾಜಸತ್ತಮನೇ! ಸರ್ವಪ್ರಾಣಿಗಳ ವಿಷಯದಲ್ಲಿಯೂ ಮೈತ್ರಿಯಿಂದಿರುವುದು, ದಾನ-ಪ್ರತಿಗ್ರಹಗಳು, ಅಧ್ಯಯನ-ಅಧ್ಯಾಪನಗಳು ಮತ್ತು ತಪಸ್ಸು–ಇವು ಬ್ರಾಹ್ಮಣನಿಗೆ ಮಾತ್ರವೇ ಉಕ್ತವಾಗಿರುವ ಧರ್ಮಗಳಾಗಿವೆ. ಇವು ರಾಜನು ಆಚರಿಸುವ ಧರ್ಮಗಳಲ್ಲ.

**ಅಸತಾಂ ಪ್ರತಿಷೇಧಶ್ಚ ಸತಾಂ ಚ ಪರಿಪಾಲನಮ್ ।**
**ಏಷ ರಾಜ್ಞಾ ಪರೋ ಧರ್ಮಃ ಸಮರೇ ಚಾಪಲಾಯನಮ್ ||೧೬||**

ಯುಧಿಷ್ಠಿರ! ದುಷ್ಟನಿಗ್ರಹ, ಶಿಷ್ಟಪರಿಪಾಲನೆ ಮತ್ತು ಯುದ್ಧದಲ್ಲಿ ಶತ್ರುವಿಗೆ ಬೆನ್ನುತೋರಿಸಿಕೊಂಡು ಪಲಾಯನಮಾಡದೇ ಇರುವುದು–ಇವುಗಳು ರಾಜರಿಗೆ ಶ್ರೇಷ್ಠವಾದ ಧರ್ಮಗಳಾಗಿವೆ.

ಯಸ್ಮಿನ್ಕ್ಷಮಾ ಚ ಕ್ರೋಧಶ್ಚ ದಾನಾದಾನೇ ಭಯಾಭಯೇ ।
ನಿಗ್ರಹಾನುಗ್ರಹೌ ಚೋಭೌ ಸ ವೈ ಧರ್ಮವಿದುಚ್ಯತೇ ॥೧೭॥

ಯಾವನಲ್ಲಿ ಶತ್ರುಗಳ ವಿಷಯದಲ್ಲಿ ಕ್ರೋಧವೂ, ಸತ್ಪುರುಷರ ವಿಷಯದಲ್ಲಿ ಕ್ಷಮೆಯೂ ಇರುತ್ತದೆಯೋ–ಯಾವನು ಸತ್ಪಾತ್ರರಲ್ಲಿ ದಾನ ಮಾಡುತ್ತಲೂ, ಆಶ್ರಿತರಾಜರಿಂದ ಕಪ್ಪಕಾಣಿಕೆಗಳನ್ನೂ, ಪ್ರಜೆಗಳಿಂದ ಕಾಲಕಾಲಕ್ಕೆ ರಾಜಾದಾಯವನ್ನೂ ತೆಗೆದುಕೊಳ್ಳುತ್ತಿರುವನೋ–ಯಾವನು ಶತ್ರುಗಳಿಗೆ ಭಯವನ್ನು ಹುಟ್ಟಿಸಬಲ್ಲನೋ–ಆಶ್ರಿತರಾಗಿ ಬಂದವರಿಗೆ ಅಭಯವನ್ನು ನೀಡಬಲ್ಲನೋ ಮತ್ತು ಯಾವನು ಶತ್ರುಗಳನ್ನು ನಿಗ್ರಹಿಸಿ ದೀನ-ದಲಿತರನ್ನು ಅನುಗ್ರಹದೃಷ್ಟಿಯಿಂದ ನೋಡುವನೋ–ಅಂತಹ ರಾಜ ನನ್ನು ಧರ್ಮವಿದನೆಂದು ಅಥವಾ ರಾಜಧರ್ಮವನ್ನು ತಿಳಿದವನೆಂದು ಹೇಳುತ್ತಾರೆ.

ನ ಶ್ರುತೇನ ದಾನೇನ ನ ಸಾನ್ತ್ವೇನ ನ ಚೇಜ್ಯಯಾ ।
ತ್ವಯೇಯಂ ಪೃಥಿವೀ ಲಬ್ಧಾ ನ ಸಂಕೋಚೇನ ಚಾಪ್ಯುತ ॥೧೮॥

ಮಹಾರಾಜ! ಈ ಭೂಮಂಡಲವು ನಿನಗೆ ವೇದ-ಶಾಸ್ತ್ರಗಳ ಅಧ್ಯ ಯನದಿಂದ ಲಭ್ಯವಾಗಲಿಲ್ಲ. ಗೋವುಗಳನ್ನೂ, ಸುವರ್ಣಗಳನ್ನೂ ಯಥೇಚ್ಛ ವಾಗಿ ದಾನಮಾಡಿರುವುದರಿಂದ ಈ ಭೂಮಂಡಲವು ನಿನ್ನ ಅಧೀನವಾಗ ಲಿಲ್ಲ. ಯಾರನ್ನಾದರೂ ಸಾಂತ್ವನಗೊಳಿಸಿ ನೀನು ಈ ರಾಜ್ಯವನ್ನು ಪಡೆದು ಕೊಳ್ಳಲಿಲ್ಲ. ರಾಜಸೂಯಾಶ್ವಮೇಧಯಾಗಗಳನ್ನು ಮಾಡಿದುದರಿಂದಲೂ ನೀನು ಈ ರಾಜ್ಯವನ್ನು ಪಡೆದುಕೊಳ್ಳಲಿಲ್ಲ ಅಥವಾ ಯಾರನ್ನಾದರೂ ಕಾಡಿ ಬೇಡಿಯೂ ನೀನು ಈ ಭೂಮಂಡಲವನ್ನು ಪಡೆದುಕೊಳ್ಳಲಿಲ್ಲ.

ಯತ್ತದ್ಬಲಮಮಿತ್ರಾಣಾಂ ತಥಾ ವೀರ್ಯಸಮುದ್ಯತಮ್ ।
ಹಸ್ತ್ಯಶ್ವರಥಸಂಪನ್ನಂ ತ್ರಿಭಿರಙ್ಗೈರನುತ್ತಮಮ್ ॥೧೯॥

ರಕ್ಷಿತಂ ದ್ರೋಣಕರ್ಣಾಭ್ಯಾಮಶ್ವತ್ಥಾಮ್ನಾ ಕೃಪೇಣ ಚ ।
ತತ್ತ್ವಯಾ ನಿಹತಂ ವೀರ ತಸ್ಮಾದ್ಭುಂಕ್ಷ್ವ ವಸುಂಧರಾಮ್ ॥೨೦॥

ವೀರನೇ! ವೀರ್ಯ-ಪರಾಕ್ರಮಗಳಲ್ಲಿ ಔನ್ನತ್ಯವನ್ನು ಹೊಂದಿದ್ದ,

ಆನೆ-ಕುದುರೆ ಮತ್ತು ರಥಗಳೆಂಬ ಮೂರು ಶ್ರೇಷ್ಠವಾದ ಸೇನಾಭಾಗಗಳಿಂದ ಕೂಡಿದ್ದ, ಮಹಾವೀರರಾದ ದ್ರೋಣ-ಕರ್ಣ-ಕೃಪಾಶ್ವತ್ಥಾಮರಿಂದ ರಕ್ಷಿಸಲ್ಪಡುತ್ತಿದ್ದ ಶತ್ರುಗಳ ಮಹಾಸೈನ್ಯವನ್ನು ಧ್ವಂಸಮಾಡಿ ನೀನು ಈ ರಾಜ್ಯವನ್ನು ಪಡೆದುಕೊಂಡಿರುವೆ. ಆದುದರಿಂದ ವೀರ್ಯಶುಲ್ಕವಾಗಿ ಲಭಿಸಿರುವ ಈ ಭೂಮಂಡಲವನ್ನು ನೀನು ಉಪಭೋಗಿಸುವುದು ಯೋಗ್ಯ ವಾಗಿದೆ. ಪುರುಷಸಿಂಹನೇ! ಅನೇಕ ದೇಶಗಳಿಂದ ಕೂಡಿರುವ ಈ ಜಂಬೂದ್ವೀಪವನ್ನು ನೀನು ದಂಡದಿಂದ ಶತ್ರುಗಳನ್ನು ಮರ್ದನಮಾಡಿ ಸ್ವಾಧೀನಪಡಿಸಿಕೊಂಡಿರುವೆ. ಮಹಾಮೇರುವಿನ ಕೆಳಭಾಗದಲ್ಲಿರುವ, ಜಂಬೂದ್ವೀಪಕ್ಕೆ ಸಮಾನವಾದ ಕ್ರೌಂಚದ್ವೀಪವನ್ನೂ ನೀನು ದಂಡದಿಂದ ಮರ್ದನಮಾಡಿ ಸ್ವಾಧೀನಪಡಿಸಿಕೊಂಡಿರುವೆ. ಮಹಾಮೇರುಪರ್ವತಕ್ಕೆ ಪೂರ್ವದಲ್ಲಿರುವ ಕ್ರೌಂಚದ್ವೀಪಕ್ಕೆ ಸಮಾನವಾಗಿರುವ ಶಾಕದ್ವೀಪವನ್ನೂ ನಿನ್ನ ದಂಡದ ಶಕ್ತಿಯಿಂದಲೇ ಸ್ವಾಧೀನಪಡಿಸಿಕೊಂಡಿರುವೆ. ಮಹಾಮೇರು ಪರ್ವತಕ್ಕೆ ಉತ್ತರದಲ್ಲಿ ಶಾಕದ್ವೀಪಕ್ಕೆ ಸಮಾನವಾದ ಭದ್ರಾಶ್ವವರ್ಷವಿದೆ. ಪುರುಷಸಿಂಹನೇ! ನೀನು ಆ ಭದ್ರಾಶ್ವವರ್ಷವನ್ನೂ ನಿನ್ನ ದಂಡಶಕ್ತಿಯಿಂದಲೇ ಸ್ವಾಧೀನಪಡಿಸಿಕೊಂಡಿರುವೆ. ಈ ದ್ವೀಪಗಳೂ ಮತ್ತು ವರ್ಷಗಳೇ ಅಲ್ಲದೇ ಅನೇಕ ದೇಶಗಳಿಗೆ (ಅನೇಕ ಜನರಿಗೆ) ಆಶ್ರಯಭೂತವಾಗಿರುವ ದ್ವೀಪ-ದ್ವೀಪಾಂತರಗಳನ್ನೂ, ಸಮುದ್ರವನ್ನೂ ದಾಟಿ ಹೋಗಿ ಆ ಎಲ್ಲ ಪ್ರದೇಶಗಳನ್ನೂ ನಿನ್ನ ದಂಡದ ಶಕ್ತಿಯಿಂದಲೇ ಅಧಿಕಾರಕ್ಕೆ ಒಳಪಡಿಸಿಕೊಂಡಿರುವೆ.

ಇಂತಹ ಅಪ್ರತಿಮವಾದ ಅನುಪಮವಾದ ಸಾಹಸಕಾರ್ಯಗಳನ್ನು ಮಾಡಿ ದ್ವಿಜರಿಂದ ಪುರಸ್ಕರಿಸಲ್ಪಡುತ್ತಿದ್ದರೂ ನಿನಗೆ ಇದರಿಂದ ಸ್ವಲ್ಪವಾದರೂ ಸಂತೋಷವೇ ಉಂಟಾಗಿರುವುದಿಲ್ಲ.

ನಿನ್ನ ಈ ವಿಜಯಯಾತ್ರೆಯಲ್ಲಿ–ಮದಿಸಿರುವ ಎತ್ತುಗಳಂತಿರುವ, ಬಲಿಷ್ಠವಾದ ಆನೆಗಳಂತಿರುವ ಈ ನಿನ್ನ ಸಹೋದರರು ಸಂಪೂರ್ಣವಾಗಿ ಸಹಕರಿಸಿದ್ದಾರೆ. ಅವರನ್ನೊಮ್ಮೆ ಕೃಪಾದೃಷ್ಟಿಯಿಂದ ನೋಡಿ ಅವರು ಇಂತಹ ಸಾಹಸಕಾರ್ಯವನ್ನು ಮಾಡಿರುವುದಕ್ಕಾಗಿ ಅವರನ್ನು ಅಭಿನಂದಿಸು.

ಪುರುಷಸಿಂಹನೇ! ಇವರೆಲ್ಲರೂ ಶತ್ರುಗಳ ವೇಗವನ್ನು ತಡೆಯುವ ಸಾಮರ್ಥ್ಯವುಳ್ಳವರು. ಶತ್ರುಗಳಿಗೆ ಪರಿತಾಪವನ್ನುಂಟುಮಾಡುವವರು. ದೇವಸದೃಶರು. ಇವರಲ್ಲಿ ಒಬ್ಬೊಬ್ಬರೂ ನನ್ನನ್ನು ಸುಖವಾಗಿಟ್ಟಿರಲು ಸಮರ್ಥರಾಗಿರುತ್ತಾರೆ. ಇವರೆಲ್ಲರೂ ನನಗೆ ಸುಖವನ್ನುಂಟುಮಾಡುವುದ ರಲ್ಲಿಯೇ ಸರ್ವದಾ ನಿರತರಾಗಿರುವಾಗ ಹೇಳುವುದೇನಿದೆ? ಶರೀರದಲ್ಲಿರುವ ಸರ್ವೇಂದ್ರಿಯಗಳೂ ಮನುಷ್ಯನನ್ನು ಸುಖಪಡಿಸಲು ಶ್ರಮಿಸುವಂತೆ– ಇವರೆಲ್ಲರೂ ನನ್ನ ಸುಖಕ್ಕಾಗಿಯೇ ಸರ್ವದಾ ಪ್ರಯತ್ನಿಸುತ್ತಿದ್ದಾರೆ.

ಸರ್ವಜ್ಞಳಾದ, ಎಲ್ಲ ವಿಷಯಗಳನ್ನೂ ಚೆನ್ನಾಗಿ ತಿಳಿದುಕೊಂಡಿರುವ ನನ್ನ ಅತ್ತೆಯಾದ ಕುಂತಿಯು ಯಾವಾಗಲೂ ಸುಳ್ಳುಹೇಳಿದವಳೇ ಅಲ್ಲ. ಅವಳೊಮ್ಮೆ ನನ್ನೊಡನೆ ಹೀಗೆ ಹೇಳಿದ್ದಳು :

**ಯುಧಿಷ್ಠಿರಸ್ತ್ವಾಂ ಪಾಞ್ಚಾಲಿ ಸುಖೇ ಧಾಸ್ಯತ್ಯನುತ್ತಮೇ ।**
**ಹತ್ವಾ ರಾಜಸಹಸ್ರಾಣಿ ಬಹೂನ್ಯಾಶುಪರಾಕ್ರಮಃ ॥೩೦॥**

'ಪಾಂಚಾಲಿ! (ನೀನು ನಿನಗೊದಗಿರುವ ಕಷ್ಟದ ವಿಷಯವಾಗಿ ಯೋಚಿಸಬೇಡ.) ನನ್ನ ಹಿರಿಯ ಮಗನಾದ, ಶೀಘ್ರಪರಾಕ್ರಮಿಯಾದ ಯುಧಿಷ್ಠಿರನು ಸಹಸ್ರಸಂಖ್ಯಾತರಾದ ರಾಜರನ್ನು ಸಂಹರಿಸಿ ನಿನ್ನನ್ನು ಶ್ರೇಷ್ಠವಾದ ಸುಖಸಿಂಹಾಸನದಲ್ಲಿ ಪ್ರತಿಷ್ಠಾಪಿಸುತ್ತಾನೆ.'

ನಮ್ಮತ್ತೆಯು ಹೇಳಿದಂತೆ ಸಾವಿರಾರು ರಾಜರನ್ನೇನೋ ಕೊಂದಿರುವೆ. ಆದರೆ ನಿನ್ನ ಭ್ರಾಂತಿಯ ಕಾರಣದಿಂದ ಕುಂತಿಯು ನನ್ನ ಸುಖದ ವಿಷಯ ವಾಗಿ ಹೇಳಿದ ಮಾತು ವ್ಯರ್ಥವಾಗುವುದೆಂದೇ ಕಾಣುತ್ತದೆ.

**ಯೇಷಾಮುನ್ಮತ್ತಕೋ ಜ್ಯೇಷ್ಠಃ ಸರ್ವೇ ತೇಽಸ್ಯಾನುಸಾರಿಣಃ ।**
**ತವೋನ್ಮಾದಾನ್ಮಹಾರಾಜ ಸೋನ್ಮಾದಾಃ ಸರ್ವಪಾಣ್ಡವಾಃ ॥೩೧॥**

ಹಿರಿಯಣ್ಣನು ಉನ್ಮತ್ತನಾಗಿದ್ದರೆ (ಹುಚ್ಚನಾಗಿದ್ದರೆ) ಅವನ ತಮ್ಮಂದಿರೂ ಹಿರಿಯಣ್ಣನನ್ನೇ ಅನುಸರಿಸುತ್ತಾರೆ. ('ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ'–ಎಂಬ ನಾಣ್ನುಡಿಯಂತೆ ಹಿರಿಯಣ್ಣನು ಉನ್ಮತ್ತನಾದರೆ ತಮ್ಮಂದಿರೂ ಉನ್ಮತ್ತರೇ ಆಗುತ್ತಾರೆ.) ಮಹಾರಾಜ! ನೀನೀಗ ಉನ್ಮತ್ತ ನಾಗಿರುವುದರಿಂದ ಉಳಿದ ನಾಲ್ವರು ಪಾಂಡವರೂ ಉನ್ಮತ್ತರೇ ಆಗಿದ್ದಾರೆ.

**ಯದಿ ಹಿ ಸ್ಯುರನುನ್ಮತ್ತಾ ಭ್ರಾತರಸ್ತೇ ನರಾಧಿಪ ।**
**ಬದ್ಧ್ವಾ ತ್ವಾಂ ನಾಸ್ತಿಕೈಃ ಸಾರ್ಧಂ ಪ್ರಶಾಸೇಯುರ್ವಸುನ್ಧರಾಮ್ ॥೩೩॥**

ನರಾಧಿಪನೇ! ಒಂದು ವೇಳೆ ನಿನ್ನಂತೆ ನಿನ್ನ ಸಹೋದರರೂ ಉನ್ಮತ್ತರೇ ಆಗಿರದಿದ್ದರೆ ಈ ವೇಳೆಗಾಗಲೇ ಅವರು ನಾಸ್ತಿಕರೊಡನೆ ನಿನ್ನನ್ನೂ ಬಂಧಿಸಿ ಈ ಭೂಮಂಡಲವನ್ನು ತಾವೇ ಆಳುತ್ತಿದ್ದರು.

**ಕುರುತೇ ಮೂಢ ಏವಂ ಹಿ ಯಃ ಶ್ರೇಯೋ ನಾಧಿಗಚ್ಛತಿ ।**
**ಧೂಪೈರಞ್ಜನಯೋಗೈಶ್ಚ ನಸ್ಯಕರ್ಮಭಿರೇವ ಚ ।**
**ಭೇಷಜೈಃ ಸ ಚಿಕಿತ್ಸ್ಯಃ ಸ್ಯಾದ್ಯ ಉನ್ಮಾರ್ಗೇಣ ಗಚ್ಛತಿ ॥೩೪॥**

ಯಾವ ಮೂಢನು ಹೀಗೆ ಪರಾಕ್ರಮದಿಂದ ಶತ್ರುಗಳನ್ನು ಜಯಿಸಿ ಪಡೆದುಕೊಂಡ ರಾಜ್ಯವನ್ನು ಉಪಭುಂಜಿಸದೇ ಕಾಡಿಗೆ ಹೋಗಲು ಇಚ್ಛಿಸುತ್ತಾನೆಯೋ–ಅಂತಹವನೆಂದಿಗೂ ಶ್ರೇಯಸ್ಸನ್ನು ಹೊಂದಲಾರನು. ಯಾವನು ಹೀಗೆ ಅಪಮಾರ್ಗದಲ್ಲಿ (ದಾರಿಯನ್ನು ಮೀರಿ) ಹೋಗುತ್ತಾನೆಯೋ–ಅವನಿಗೆ ಧೂಪಗಳಿಂದಲೂ, ಕಣ್ಣಿಗೆ ಅಂಜನವನ್ನು ಹಚ್ಚುವುದರಿಂದಲೂ, ಮೂಗಿಗೆ ಚೂರ್ಣವನ್ನು ಹಾಕುವುದರಿಂದಲೂ, ಇತರ ಔಷಧಿಗಳಿಂದಲೂ ಚಿಕಿತ್ಸೆಯನ್ನು ನಡೆಸಬೇಕು.

**ಸಾಹಂ ಸರ್ವಾಧಮಾ ಲೋಕೇ ಸ್ತ್ರೀಣಾಂ ಭರತಸತ್ತಮ ।**
**ತಥಾ ವಿನಿಕೃತಾ ಪುತ್ರೈರ್ಯಾಹಮಿಚ್ಛಾಮಿ ಜೀವಿತುಮ್ ॥೩೫॥**

ಭರತಶ್ರೇಷ್ಠನೇ! ನಾನು ಲೋಕದಲ್ಲಿರುವ ಸರ್ವಸ್ತ್ರೀಯರಲ್ಲಿಯೇ ಅಧಮಳಾಗಿರುತ್ತೇನೆ. ಏಕೆಂದರೆ : ಐವರು ಮಕ್ಕಳಿಂದಲೂ ಹೀನಳಾದ ನಾನು ಇನ್ನೂ ಜೀವಿಸಿರಲು ಇಚ್ಛೆಪಡುತ್ತಿದ್ದೇನೆ.

ಇವರೆಲ್ಲರೂ ನಿನ್ನನ್ನು ಸಮಾಧಾನಗೊಳಿಸಲು ಸತತವಾಗಿ ಪ್ರಯತ್ನಿಸುತ್ತಿದ್ದಾರೆ. ಇವರ ಮಾತನ್ನು ನೀನು ಗೌರವಿಸುತ್ತಿಲ್ಲ. ನಾನು ಈಗ ಹೇಳುತ್ತಿರುವ ಮಾತುಗಳೂ ಅಸತ್ಯವಲ್ಲ. ಈ ಸಮಯದಲ್ಲಿ ಅಖಂಡ ಭೂಮಂಡಲವನ್ನೂ ತ್ಯಜಿಸಿ ಕಾಡಿಗೆ ಹೋಗುವೆಯಾದರೆ ಆಪತ್ತನ್ನು ನೀನೇ ತಂದುಕೊಂಡಂತಾಗುವುದು. ಆದುದರಿಂದ ಹಾಗೆಂದಿಗೂ ಮಾಡಬೇಡ.

ಹಿಂದೆ ಅಂಬರೀಷ-ಮಾಂಧಾತರು ಯಾವ ರೀತಿಯಲ್ಲಿ ಎಲ್ಲ ರಾಜರಿಂದಲೂ ಪುರಸ್ಕೃತರಾಗಿ ರಾಜ್ಯಭಾರಮಾಡುತ್ತಿದ್ದರೋ–ಅದೇ ರೀತಿಯಲ್ಲಿ ನೀನೂ ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡಿದರೆ ಎಲ್ಲ ರಾಜರಿಂದಲೂ ಸಮ್ಮಾನ್ಯನಾಗಿ ವಿರಾಜಿಸುವೆ. ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಾ ಪರ್ವತ-ವನ-ದ್ವೀಪಗಳಿಂದ ಕೂಡಿರುವ ಈ ಭೂದೇವಿಯನ್ನು ಅನುಶಾಸನ ಮಾಡು. ರಾಜ್ಯಪರಿಪಾಲನೆಯ ವಿಷಯದಲ್ಲಿ ಉದಾಸೀನಭಾವವನ್ನು ತಾಳ ಬೇಡ. ನೃಪಶ್ರೇಷ್ಠನೇ! ಶತ್ರುಗಳೊಡನೆ ಯುದ್ಧಮಾಡು. ಅವರೆಲ್ಲರನ್ನೂ ಜಯಿಸು. ವಿಧ-ವಿಧವಾದ ಯಜ್ಞಗಳಿಂದ ದೇವತೆಗಳನ್ನು ಆರಾಧಿಸು. ಧನಗಳನ್ನೂ, ಭೋಗವಸ್ತುಗಳನ್ನೂ, ವಸ್ತ್ರಗಳನ್ನೂ ಬ್ರಾಹ್ಮಣರಿಗೆ ದಾನ ಮಾಡು."

೧೪ನೆಯ ಅಧ್ಯಾಯವು ಮುಗಿಯಿತು.

೧೫ನೆಯ ಅಧ್ಯಾಯ — ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಅರ್ಜುನನು ರಾಜದಂಡದ ಮಹತ್ತ್ವವನ್ನು ವರ್ಣಿಸಿದುದು

ವೈಶಂಪಾಯನರು ಹೇಳುತ್ತಾರೆ :

"( ದ್ರೌಪದಿಯ ನಿಷ್ಠುರೋಕ್ತಿಗಳೂ ರಾಜನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಿಲ್ಲ. ) ಯಾಜ್ಞಸೇನಿಯ ಮಾತುಗಳನ್ನು ಕೇಳಿದ ನಂತರ ಅರ್ಜುನನು–ಮಹಾಬಾಹುವಾದ, ಯಾವುದೇ ಕಾರಣದಿಂದಲೂ ಧರ್ಮದಿಂದ ಚ್ಯುತನಾಗದ ಹಿರಿಯಣ್ಣನನ್ನು ಗೌರವಿಸುತ್ತಾ ಅವನೊಡನೆ ಈ ಮಾತುಗಳನ್ನು ಹೇಳಿದನು :

( ಇಲ್ಲಿ ಅರ್ಜುನನು ದ್ರೌಪದಿಯು ಪ್ರಾರಂಭಿಸಿದ ದಂಡನೀತಿಯನ್ನೇ ಮುಂದುವರಿಸಿ ವಿಸ್ತಾರವಾಗಿ ಹೇಳುತ್ತಾನೆ. )

**ದಣ್ಡಃ ಶಾಸ್ತಿ ಪ್ರಜಾಃ ಸರ್ವಾ ದಣ್ಡ ಏವಾಭಿರಕ್ಷತಿ ।**
**ದಣ್ಡಃ ಸುಪ್ತೇಷು ಜಾಗರ್ತಿ ದಣ್ಡಂ ಧರ್ಮಂ ವಿದುರ್ಬುಧಾಃ ॥೨॥**

"ಮಹಾರಾಜ! ದಂಡವು ಸಮಸ್ತಪ್ರಜೆಗಳನ್ನೂ ಶಾಸನಮಾಡುತ್ತದೆ. ದಂಡವೇ ಪ್ರಜೆಗಳನ್ನು ರಕ್ಷಿಸುತ್ತದೆ. ಎಲ್ಲರೂ ಮಲಗಿರುವಾಗ ದಂಡವು

ಎಚ್ಚರಗೊಂಡಿರುತ್ತದೆ. ಆದುದರಿಂದಲೇ ವಿದ್ವಾಂಸರಾದವರು ದಂಡವನ್ನು ಧರ್ಮವೆಂದೇ ಹೇಳುತ್ತಾರೆ.

**ದಣ್ಡಃ ಸಂರಕ್ಷತೇ ಧರ್ಮಂ ತಥೈವಾರ್ಥಂ ಜನಾಧಿಪ ।**
**ಕಾಮಂ ಸಂರಕ್ಷಣೇ ದಣ್ಡಸ್ತ್ರಿವರ್ಗೋ ದಣ್ಡ ಉಚ್ಯತೇ ॥೩॥**

ಜನಾಧಿಪನೇ! ದಂಡವು ಧರ್ಮವನ್ನು ಸಂರಕ್ಷಿಸುತ್ತದೆ. ಅಂತೆಯೇ ಅರ್ಥವನ್ನೂ ಸಂರಕ್ಷಿಸುತ್ತದೆ. ಕಾಮವನ್ನೂ ರಕ್ಷಿಸುತ್ತದೆ. ಆದುದರಿಂದ ದಂಡವು ಧರ್ಮಾರ್ಥ-ಕಾಮಗಳೆಂಬ ತ್ರಿವರ್ಗರೂಪವಾಗಿರುವುದೆಂದು ವಿದ್ವಾಂಸರು ಹೇಳುತ್ತಾರೆ.

**ದಣ್ಡೇನ ರಕ್ಷ್ಯತೇ ಧಾನ್ಯಂ ಧನಂ ದಣ್ಡೇನ ರಕ್ಷ್ಯತೇ ।**
**ಏವಂ ವಿದ್ವಾನುಪಾಧತ್ಸ್ವ ಭಾವಂ ಪಶ್ಯಸ್ವ ಲೌಕಿಕಮ್ ॥೪॥**

ದಂಡದಿಂದ ಧಾನ್ಯದ ರಕ್ಷಣೆಯಾಗುತ್ತದೆ. ದಂಡದಿಂದ ಧನದ ರಕ್ಷಣೆ ಯಾಗುತ್ತದೆ. ಈ ರೀತಿಯಲ್ಲಿ ದಂಡದ ಪರಿಣಾಮಗಳೇನೆಂಬುದನ್ನು ತಿಳಿದು ಕೊಂಡಿರುವ ನೀನೂ ದಂಡಧಾರಣೆಮಾಡು ಮತ್ತು ಜಗತ್ತಿನ ವ್ಯವಹಾರದ ಕಡೆಗೂ ದೃಷ್ಟಿಯನ್ನು ಹೊರಳಿಸು.

**ರಾಜದಣ್ಡಭಯಾದೇಕೇ ಪಾಪಾಃ ಪಾಪಂ ನ ಕುರ್ವತೇ ।**
**ಯಮದಣ್ಡಭಯಾದೇಕೇ ಪರಲೋಕಭಯಾದಪಿ ॥೫॥**
**ಪರಸ್ಪರಭಯಾದೇಕೇ ಪಾಪಾಃ ಪಾಪಂ ನ ಕುರ್ವತೇ ।**
**ಏವಂ ಸಾಂಸಿದ್ಧಿಕೇ ಲೋಕೇ ಸರ್ವಂ ದಣ್ಡೇ ಪ್ರತಿಷ್ಠಿತಮ್ ॥೬॥**

'ಇತರರ ಸ್ವತ್ತನ್ನು ಅಪಹರಿಸಬಾರದು' 'ಇತರರಿಗೆ ಮೋಸಮಾಡ ಬಾರದು'–ಎಂಬ ಉದಾತ್ತಗುಣವು ಎಲ್ಲರಲ್ಲಿಯೂ ಇರುವುದಿಲ್ಲ. ರಾಜನು ಶಿಕ್ಷಿಸುವನೆಂಬ ಭಯದಿಂದ ಕೆಲವರು ಸ್ವಾಭಾವಿಕವಾಗಿಯೇ ಕುತ್ಸಿತವಾದ, ಪಾಪಕರವಾದ ಕಾರ್ಯಗಳಲ್ಲಿ ಪ್ರವರ್ತಿಸುವುದಿಲ್ಲ. ಕೆಲವರು ಯಮ ದಂಡದ ಭಯದಿಂದಾಗಿ ಪಾಪಕಾರ್ಯಗಳನ್ನು ಮಾಡುವುದಿಲ್ಲ. 'ನರಕ ವೆಂಬುದೊಂದಿದೆ. ಅಲ್ಲಿ ಎಲ್ಲರಿಗೂ ತಾರತಮ್ಯವಿಲ್ಲದೇ ಯಮನು ಪಾಪ ಕಾರ್ಯಕ್ಕೆ ತಕ್ಕ ಶಿಕ್ಷೆಯನ್ನು ಕೊಡುತ್ತಾನೆ' – ಎಂಬ ಭಯದಿಂದಾಗಿ ಕೆಲವರು

ಪಾಪಮಾಡುವುದಿಲ್ಲ. ಇಲ್ಲಿಯೂ ಸಹ ಪಾಪಕಾರ್ಯಗಳನ್ನು ಮಾಡದಿರಲು ಯಮದಂಡವೇ ಕಾರಣವಾಗಿದೆ. 'ಪರಲೋಕವೆಂಬುದೊಂದಿದೆ. ಉತ್ತಮ ಕಾರ್ಯಗಳನ್ನು ಮಾಡಿದವನು ಪುಣ್ಯಲೋಕಗಳಿಗೂ–ಕೆಟ್ಟಕೆಲಸಗಳನ್ನು ಮಾಡಿದವನು ಪಾಪಲೋಕಕ್ಕೂ ಹೋಗಬೇಕಾಗುವುದು. ಪಾಪಮಾಡಿದವನಿಗೆ ಪಾಪಲೋಕ ಅಥವಾ ಪಾಪಯೋನಿಯು ಪ್ರಾಪ್ತವಾಗುತ್ತದೆ. ಕರ್ಮಫಲದ ಕಾರಣದಿಂದಾಗುವ ಇಂತಹ ಶಿಕ್ಷೆಯನ್ನು ಯಾರಿಂದಲೂ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ'–ಎಂದು ಬಗೆದು ಅನೇಕರು ಪಾಪಕಾರ್ಯಗಳನ್ನು ಮಾಡುವುದಿಲ್ಲ. ಮತ್ತೆ ಕೆಲವರಲ್ಲಿ ಅನ್ಯೋನ್ಯವಾದ ಭಯವಿರುತ್ತದೆ. ಈ ದಿನ ಒಬ್ಬನು ಮತ್ತೊಬ್ಬನ ಗದ್ದೆಯನ್ನು ಹಸುಗಳಿಂದ ಮೇಯಿಸಿದರೆ ಮರುದಿನ ತನ್ನ ಗದ್ದೆಯನ್ನೂ ಮತ್ತೊಬ್ಬನು ಹಸುಗಳಿಂದ ಮೇಯಿಸುತ್ತಾನೆ–ಎಂಬುದು ಪರಸ್ಪರಭಯ. ಇಂದು ನಾನು ಒಬ್ಬನನ್ನು ವಂಚಿಸಿದರೆ ನಾಳೆ ಅವನು ನನ್ನನ್ನು ವಂಚಿಸುತ್ತಾನೆ–ಎಂಬುದು ಪರಸ್ಪರಭಯ. ಈ ವಿಧವಾದ ಪರಸ್ಪರಭಯದಿಂದಲೂ ಪಾಪಕಾರ್ಯಗಳಲ್ಲಿಯೇ ಆಸಕ್ತಿಯಿರುವ ಪಾಪಿಷ್ಠರು ಕೂಡ ಪಾಪಕಾರ್ಯಗಳನ್ನು ಮಾಡುವುದಿಲ್ಲ. ಆದುದರಿಂದ ಲೋಕಮರ್ಯಾದೆಯನ್ನು ಅತಿಕ್ರಮಿಸದಿರಲು ( ಪಶುಗಳಂತೆ ) ದಂಡವನ್ನೇ ಅಪೇಕ್ಷಿಸುವ ಈ ಲೋಕದಲ್ಲಿ ಎಲ್ಲ ಕಾರ್ಯಭಾರಗಳೂ ದಂಡನೀತಿಯಲ್ಲಿಯೇ ಪ್ರತಿಷ್ಠಿತವಾಗಿವೆ.

**ದಣ್ಡಸ್ಯೈವ ಭಯಾದೇಕೇ ನ ಖಾದನ್ತಿ ಪರಸ್ಪರಮ್ ।**
**ಅನ್ಧೇ ತಮಸಿ ಮಜ್ಜೇಯುರ್ಯದಿ ದಣ್ಡೋ ನ ಪಾಲಯೇತ್ ॥೭॥**

ದಂಡ ಅಥವಾ ಶಿಕ್ಷೆಯ ಭಯದಿಂದಲೇ ಜನರು ಒಬ್ಬರನ್ನು ಮತ್ತೊಬ್ಬರು ನುಂಗಿಹಾಕುತ್ತಿಲ್ಲ. ಶಿಕ್ಷೆಯ ಭಯವಿರದಿದ್ದರೆ ಜನಗಳೇ ಜನಗಳನ್ನು ಕೊಚ್ಚಿ ತಿಂದುಹಾಕುತ್ತಿದ್ದರು. ರಾಜದಂಡವೇನಾದರೂ ಪ್ರಜೆಗಳನ್ನು ರಕ್ಷಣೆ ಮಾಡದಿದ್ದಲ್ಲಿ ಪ್ರಜೆಗಳೆಲ್ಲರೂ ಅನಾಯಕತ್ವವೆಂಬ ಅಂಧಕಾರದಲ್ಲಿ ಮುಳುಗಿ ಹೋಗುತ್ತಿದ್ದರು.

( ಜನರು ಯಾವ ಕಾರಣದಿಂದ ಮೃಗಗಳಂತೆ ವರ್ತಿಸುವುದಿಲ್ಲವೆಂಬುದನ್ನು ಅರ್ಜುನನು ಈ ಎರಡು ಶ್ಲೋಕಗಳಲ್ಲಿ ಚೆನ್ನಾಗಿ ಚಿತ್ರಿಸಿದ್ದಾನೆ.

ಸಾಮಾನ್ಯವಾಗಿ ಜನರು ಮೇರೆತಪ್ಪಿ ಹೋಗದಿರಲು ಇಲ್ಲಿ ಕೊಟ್ಟಿರುವ ಕಾರಣಗಳಿಗಿಂತಲೂ ಬೇರೆ ಕಾರಣಗಳು ಇರಲಾರವು. ಆದರೆ ಎಲ್ಲ ಕಾರಣ ಗಳೂ ಶಿಕ್ಷೆಯಲ್ಲಿಯೇ ಪರ್ಯವಸಾನವನ್ನು ಹೊಂದಿವೆ. ಶಿಕ್ಷೆಯು ಯಾವು ದಾದರೂ ಆಗಿರಬಹುದು ; ಎಲ್ಲಿಯಾದರೂ ಆಗಬಹುದು. ಒಟ್ಟಿನಲ್ಲಿ ತಾವು ಮಾಡಿದ ಪಾಪಕಾರ್ಯಗಳಿಗೆ ಶಿಕ್ಷೆಯಿದೆಯೆಂಬ ಮನವರಿಕೆಯಿಂದಾಗಿ ಮನುಷ್ಯನು ಮಾನವಧರ್ಮವನ್ನು ಮೀರಿ ನಡೆಯುವುದಿಲ್ಲ. ರಾಜದಂಡವು ಸರಿಯಾಗಿ ಕಾರ್ಯಮಾಡದಿದ್ದರೆ, ಪಾಪದ ಭೀತಿಯು ಜನರಲ್ಲಿ ಅಳಿಸಿ ಹೋದರೆ–ಲೋಕದಲ್ಲಿ ಅನಾಯಕತ್ವವು ಹೆಚ್ಚುತ್ತದೆ. ಆದುದರಿಂದ ಯಾವುದೇ ಕಾಲಕ್ಕೂ ದಂಡನೀತಿಯು ಸುವ್ಯವಸ್ಥಿತವಾಗಿರಬೇಕು. )

**ಯಸ್ಮಾದದಾನ್ತಂದಮಯತ್ಯಶಿಷ್ಟಾನ್ದಣ್ಡಯತ್ಯಪಿ ।**
*** ದಮನಾದ್ದಣ್ಡನಾಚ್ಚೈವ ತಸ್ಮಾದ್ದಣ್ಡಂ ವಿದುರ್ಬುಧಾಃ ॥೮॥**

ಸ್ವೇಚ್ಛಾಚಾರಿಗಳನ್ನು ದಮನಮಾಡುವುದರಿಂದ ದಂಡವೆಂದು ಹೆಸರು ಬಂದಿದೆ. ದುಷ್ಟರನ್ನು ಶಿಕ್ಷಿಸುವುದಕ್ಕೂ ದಂಡವೆಂದು ಹೆಸರು. ದಮನ ಮಾಡುವುದರಿಂದಲೂ, ಶಿಕ್ಷಿಸುವುದರಿಂದಲೂ 'ದಂಡ'–ಎಂದಾಗಿದೆ ಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ವಾಚಾ ದಣ್ಡೋ ಬ್ರಾಹ್ಮಣಾನಾಂ ಕ್ಷತ್ರಿಯಾಣಾಂ ಭುಜಾರ್ಪಣಂ ।**
**ದಾನದಣ್ಡಾಃ ಸ್ಮೃತಾ ವೈಶ್ಯಾ ನಿರ್ದಣ್ಡಃ ಶೂದ್ರ ಉಚ್ಯತೇ ॥೯॥**

ಈ ಶಿಕ್ಷೆಯನ್ನೂ ಒಂದೊಂದು ವರ್ಣದವರಲ್ಲಿ ಒಂದೊಂದು ಬಗೆ ಯಾಗಿ ಉಪಯೋಗಿಸಬೇಕು. ಬ್ರಾಹ್ಮಣನು ಅಪರಾಧಮಾಡಿದರೆ ಮಾತಿ ನಿಂದ ಅವನನ್ನು ಗದರಿಸಿದರೇ ಸಾಕು. ಅದೇ ಅವನಿಗೆ ತಕ್ಕುದಾದ ಶಿಕ್ಷೆ ಯಾಗುತ್ತದೆ. ಕ್ಷತ್ರಿಯನಾದವನಿಗೆ ಭೋಜನಕ್ಕೆ ಸಾಕಾಗುವಷ್ಟು ಮಾತ್ರವೇ ವೇತನವನ್ನು ಕೊಟ್ಟು ಅವನಿಂದ ಕೆಲಸವನ್ನು ಮಾಡಿಸಬೇಕು. ಇದು

---

* ದಮಯತಿ ಮತ್ತು ದಣ್ಡಯತಿ ಎಂಬ ಶಬ್ದಗಳಿಗೆ ವ್ಯತ್ಯಾಸವನ್ನು ವ್ಯಾಖ್ಯಾನಕಾರರು ಹೇಳಿದ್ದಾರೆ. ದಣ್ಡಯತಿ = ತಾಡನಾದಿನಾ– ಛಡಿ ಏಟು ಕೊಡುವುದರಿಂದ ಸ್ವೇಚ್ಛಾಚಾರಿಗಳನ್ನು ದಂಡಿಸುತ್ತಾರೆ. ದಮಯತಿ = ವಿತ್ತಾಪಹಾರೇಣ–ಐಶ್ವರ್ಯವನ್ನು ಮುಟ್ಟುಗೋಲು ಹಾಕುವುದರಿಂದ ದುಷ್ಟರನ್ನು ಶಿಕ್ಷಿಸುತ್ತಾರೆ.

ಕ್ಷತ್ರಿಯನಿಗೆ ಉಚಿತವಾದ ಶಿಕ್ಷೆ. ರಾಜನಿಗೆ ದ್ರವ್ಯವನ್ನು ಅರ್ಪಣೆಮಾಡುವುದು ಅಥವಾ ದಂಡದ ರೂಪವಾಗಿ ಹಣವನ್ನು ವಸೂಲುಮಾಡುವುದು ವೈಶ್ಯನಿಗೆ ಉಚಿತವಾದ ದಂಡವಾಗಿರುತ್ತದೆ. ಶೂದ್ರರಿಗೆ ಶಿಕ್ಷೆಯೆಂಬುದೇ ಇಲ್ಲ. ಅರ್ಥಾತ್ ಅವರು ಸೇವಾವೃತ್ತಿಯಲ್ಲಿಯೇ ಇರುವುದರಿಂದ ಅದನ್ನು ಮುಂದುವರಿಸಿಕೊಂಡು ಹೋಗುವುದೇ ಶಿಕ್ಷೆಯ ರೂಪದಲ್ಲಿರುತ್ತದೆ.

(ಈ ಶ್ಲೋಕಕ್ಕೆ ಅರ್ಥಮಾಡಲು ವ್ಯಾಖ್ಯಾನಕಾರರ ನೆರವು ತೆಗೆದುಕೊಳ್ಳಲಾಗಿದೆ. **ಭುಜ್ಯತ ಇತಿ ಭುಜಂ ಭಕ್ತಂ, ತನ್ಮಾತ್ರಾರ್ಪಣಂ ವೇತನಪ್ರದಾನಮಿತ್ಯರ್ಥಃ** = ಎಂದರೆ ಊಟ ಎಂದರ್ಥ. ಊಟಕ್ಕೆ ಸಾಕಾಗುವಷ್ಟು ವೇತನ ಕೊಡುವುದು. ವೇತನ ಕೊಟ್ಟು ಕೆಲಸಮಾಡಿಸಿಕೊಳ್ಳುವುದು. **ದಾನಂ = ರಾಜ್ಞೇ ದ್ರವ್ಯಾರ್ಪಣಂ** = ರಾಜನಿಗೆ ಕಾಣಿಕೆಯನ್ನು ಒಪ್ಪಿಸುವುದು. ನಿರ್ದಣ್ಡಃ = **ದಾಸ್ಯಮೇವ ಕಾರಯೇತ್ ನ ತ್ವಸ್ಯ ದಣ್ಡೋಽಸ್ತಿ** ಶೂದ್ರನಾದವನು ದಾಸ್ಯವನ್ನು ಮಾಡಿಕೊಂಡಿರಬೇಕೇ ಹೊರತು ಅವನಿಗೆ ಬೇರೆ ಶಿಕ್ಷೆಯಿಲ್ಲ. ಶೂದ್ರನು ಸೇವಾವೃತ್ತಿಯನ್ನು ಮಾಡಬೇಕೆಂದು ಮನುಸ್ಮೃತಿಯಲ್ಲಿಯೇ ಇದೆ. **ಶೂದ್ರಂ ಚ ಕಾರಯೇದ್ದಾಸ್ಯಂ**–ಇವಿಷ್ಟೂ ಅಪರಾಧಗಳು ಅಲ್ಪವಾಗಿದ್ದರೆ ಕೊಡತಕ್ಕ ಶಿಕ್ಷೆಯೆಂದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. **ಏತಚ್ಚ ಅಲ್ಪಾಪರಾಧೇ ಜ್ಞೇಯಮ್**)

**ಅಸಮ್ಮೋಹಾಯ ಮರ್ತ್ಯಾನಾಮರ್ಥಸಂರಕ್ಷಣಾಯ ಚ ।**
**ಮರ್ಯಾದಾ ಸ್ಥಾಪಿತಾ ಲೋಕೇ ದಣ್ಡಸಂಜ್ಞಾ ವಿಶಾಮ್ಪತೇ ॥೧೦॥**

ಮಹಾರಾಜ! ಮನುಷ್ಯರು ಮೋಹಪರವಶರಾಗದಂತೆ ಮಾಡಲೂ ಮತ್ತು ಧನದ ಸಂರಕ್ಷಣೆಗಾಗಿಯೂ 'ಮರ್ಯಾದೆ' ಯೊಂದು ಸ್ಥಾಪಿತ ವಾಗಿದೆ. ಅದಕ್ಕೆ 'ದಂಡ' ಎಂದು ಹೆಸರು. (ದಂಡದಿಂದ ಮನುಷ್ಯರು ಅಪ್ರಮತ್ತರಾಗಿರುತ್ತಾರೆ. ಮನುಷ್ಯರಲ್ಲಿರುವ ಧನದ ಸಂರಕ್ಷಣೆಯಾಗುತ್ತದೆ.)

**ಯತ್ರ ಶ್ಯಾಮೋ ಲೋಹಿತಾಕ್ಷೋ ದಣ್ಡಶ್ಚರತಿ ಸೂದ್ಯತಃ ।**
**ಪ್ರಜಾಸ್ತತ್ರ ನ ಮುಹ್ಯನ್ತೇ ನೇತಾ ಚೇತ್ಸಾಧು ಪಶ್ಯತಿ ॥೧೧॥**

ಯಾವ ರಾಜ್ಯದಲ್ಲಿ ಶ್ಯಾಮಲವರ್ಣವಾಗಿಯೂ ಮತ್ತು ಕೆಂಪುಕಣ್ಣುಳ್ಳ ದ್ದಾಗಿಯೂ ಇರುವ ದಂಡವು ದುಷ್ಟಶಿಕ್ಷಣಕ್ಕಾಗಿ ಮತ್ತು ಶಿಷ್ಟಪರಿಪಾಲನಕ್ಕಾಗಿ ಎತ್ತಿಹಿಡಿಯಲ್ಪಟ್ಟು ರಾಜನಿಂದ ಸಮುಚಿತವಾದ ರೀತಿಯಲ್ಲಿ ಪ್ರಯೋಗಮಾಡಲ್ಪಡುತ್ತದೆಯೋ–ಆ ರಾಜ್ಯದಲ್ಲಿ ಪ್ರಜೆಗಳು ಮೋಹಪರ ವಶರಾಗುವುದಿಲ್ಲ. (ದಂಡವನ್ನು ಲೋಹಿತಾಕ್ಷ ಮತ್ತು ಶ್ಯಾಮಲವರ್ಣ– ಎಂದು ಇಲ್ಲಿ ವರ್ಣಿಸಿದ್ದಾರೆ. ಇಂತಹ ದಂಡವನ್ನು ಯಾರು ಎತ್ತಿಕೊಂಡು ಹೋದರೂ ಅವರ ಜೊತೆಯಲ್ಲಿಯೇ ಆ ದಂಡವು ಸಂಚರಿಸುತ್ತಿರುತ್ತದೆ. ಆದರೆ ದಂಡವು ಸಂಚರಿಸುವುದರಿಂದ ಮಾತ್ರವೇ ಧರ್ಮದ ಪಾಲನೆಯಾಗು ವುದಿಲ್ಲ. ದಂಡವನ್ನು ಹಿಡಿದಿರುವವನು ಸಮುಚಿತವಾದ ದೃಷ್ಟಿಯಿಂದ ಜನರ ವ್ಯವಹಾರಗಳನ್ನು ಪರಿಶೀಲಿಸಿ ಅಪರಾಧಿಗಳನ್ನು ಶಿಕ್ಷಿಸಬೇಕು. ಹಾಗೆ ಮಾಡುತ್ತಾ ಹೋದರೆ ಪ್ರಜೆಗಳು ಮೋಹಪರವಶರಾಗುವುದಿಲ್ಲ. ದಂಡಕ್ಕೆ ಲೋಹಿತಾಕ್ಷ ಮತ್ತು ಶ್ಯಾಮ ಎಂದು ಹೆಸರು ಕೊಟ್ಟಿರುವುದಕ್ಕೆ ವ್ಯಾಖ್ಯಾನ ಕಾರರು ಹೀಗೆ ವಿವರಿಸಿದ್ದಾರೆ : **ಶ್ಯಾಮಃ ದಂಡಾಭಿಘಾತೇನ ದಣ್ಡ್ಯಸ್ಯ ಆನ್ಧ್ಯಜನಕತ್ವಾತ್**–ಅಪರಾಧಿಯನ್ನು ದಂಡದಿಂದ ಪ್ರಹರಿಸಿದಾಗ ಅವನ ಕಣ್ಣಿನಲ್ಲಿ ಕತ್ತಲೆಯನ್ನುಂಟುಮಾಡುವುದರಿಂದ 'ಶ್ಯಾಮ' ಎಂದು ಹೆಸರು ಬಂದಿದೆ. ಲೋಹಿತಾಕ್ಷ = **ದಣ್ಡಯಿತುಃ ಕ್ರೋಧಾತಿಶಯಾತ್**–ಶಿಕ್ಷಿಸು ವವನ ಕ್ರೋಧಾತಿಶಯದಿಂದಾಗಿ ಅವನು ಕೆಂಗಣ್ಣನಾಗುತ್ತಾನೆ. ಅವ ನಂತೆಯೇ ದಂಡವೂ ಲೋಹಿತಾಕ್ಷವಾಗಿರುತ್ತದೆ. ಈ ವಿಧವಾದ ದೂರಾರ್ಥ ಕ್ಕಿಂತಲೂ ದಂಡವೆಂದರೆ ಯಮನ ಸ್ವರೂಪವೆಂದು ಅರ್ಥಮಾಡಿ ಆ ಕಾರಣ ದಿಂದ ದಂಡವು ಕಪ್ಪಾಗಿಯೂ–ಕೆಂಪಾದ ಕಣ್ಣುಳ್ಳದ್ದಾಗಿಯೂ ಇರುವುದೆಂದು ಅರ್ಥಮಾಡುವುದು ಸಮಂಜಸವಾಗಿ ಕಾಣುತ್ತದೆ.)

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥಶ್ಚ ಭಿಕ್ಷುಕಃ ।**
**ದಣ್ಡಸ್ಯೈವ ಭಯಾದೇತೇ ಮನುಷ್ಯಾ ವರ್ತ್ಮನಿ ಸ್ಥಿತಾಃ ॥೧೨॥**

ಬ್ರಹ್ಮಚಾರಿಯಾಗಲೀ ; ಗೃಹಸ್ಥನಾಗಲೀ ; ವಾನಪ್ರಸ್ಥನಾಗಲೀ ; ಸಂನ್ಯಾಸಿಯೇ ಆಗಲೀ–ತಮ್ಮ-ತಮ್ಮ ಆಶ್ರಮಧರ್ಮಗಳನ್ನು ಮೀರಿ ನಡೆ ದರೆ ಐಹಿಕವಾದ ಮತ್ತು ಆಮುಷ್ಮಿಕವಾದ ಶಿಕ್ಷೆಯಾಗುತ್ತದೆಯೆಂಬ ಭಯ

ದಿಂದಲೇ ಅವರೆಲ್ಲರೂ ತಮ್ಮ-ತಮ್ಮ ಆಶ್ರಮಧರ್ಮಗಳಲ್ಲಿಯೇ ನಿರತರಾಗಿರುತ್ತಾರೆ.

**ನಾಭೀತೋ ಯಜತೇ ರಾಜನ್ನಾಭೀತೋ ದಾತುಮಿಚ್ಛತಿ ।**
**ನಾಭೀತಃ ಪುರುಷಃ ಕಶ್ಚಿತ್ಸಮಯೇ ಸ್ಥಾತುಮಿಚ್ಛತಿ ॥೧೩॥**

ಶಿಕ್ಷೆಗೆ ( ಪಾಪಕ್ಕೆ ) ಭಯಪಡದವನು ಯಜ್ಞಮಾಡುವುದಿಲ್ಲ. ಪಾಪದ ಭಯವಿಲ್ಲದಿದ್ದರೆ ಮನುಷ್ಯನು ತನ್ನಲ್ಲಿರುವ ಧನವನ್ನು ಮತ್ತೊಬ್ಬನಿಗೆ ದಾನ ಮಾಡಲೂ ಇಚ್ಛಿಸುವುದಿಲ್ಲ. ಪಾಪದ ಭಯವಿಲ್ಲದಿದ್ದರೆ ಮನುಷ್ಯನು ತಾನು ಮಾಡಿದ ಪ್ರಮಾಣವಚನದಂತೆಯೂ ನಡೆದುಕೊಳ್ಳುವುದಿಲ್ಲ. ( ಭಯವೆಂದರೆ ಶಿಕ್ಷೆಯ ಭಯವಾಗಬಹುದು : ಪಾಪದ ಭಯವೂ ಆಗಬಹುದು. ಯಜ್ಞ-ದಾನಾದಿಗಳಲ್ಲಿ ಪಾಪದ ಭಯವೇ ಮುಖ್ಯವಾದುದು. ಏಕೆಂದರೆ : ಯಾಗಮಾಡಲಿಲ್ಲವೆಂದು ಅಥವಾ ದಾನಮಾಡಲಿಲ್ಲವೆಂದು ಯಾವ ರಾಜನೂ ಪ್ರಜೆಗಳನ್ನು ಶಿಕ್ಷಿಸಹೋಗುವುದಿಲ್ಲ. ಯಜ್ಞ-ದಾನಗಳು, ಮಾಡಿದ ಪಾಪಗಳನ್ನು ಪರಿಹಾರಮಾಡಿಕೊಳ್ಳುವುದಕ್ಕೆ ಮತ್ತು ಪುಣ್ಯಸಂಪಾದನೆಗೆ ಸಾಧಕಗಳಾಗಿರುತ್ತವೆ. ಮಾಡಿದ ಪ್ರತಿಜ್ಞೆಯಂತೆ ನಡೆದುಕೊಳ್ಳದಿದ್ದರೆ ಪ್ರತಿಜ್ಞಾಭಂಗಮಾಡಿದವನು ಪಾಪಿಷ್ಠನಾಗುತ್ತಾನೆ. ಪ್ರತಿಜ್ಞಾಭಂಗಮಾಡಿದವನನ್ನು ರಾಜನು ಶಿಕ್ಷಿಸುವ ಪ್ರಸಂಗವಿಲ್ಲ. ಆದುದರಿಂದ ಈ ಶ್ಲೋಕದಲ್ಲಿ ಹೇಳಿರುವ ಮೂರು ಪ್ರಸಂಗಗಳಲ್ಲಿಯೂ ಪಾಪಕ್ಕೆ ಭಯಪಡದವನು—ಎಂಬ ಅರ್ಥವೇ ಹೊಂದಿಕೊಳ್ಳುತ್ತದೆ. )

**ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮ ದುಷ್ಕರಮ್ ।**
**ನಾಹತ್ವಾ ಮತ್ಸ್ಯಘಾತೀವ ಪ್ರಾಪ್ನೋತಿ ಮಹತೀಂ ಶ್ರಿಯಮ್ ॥೧೪॥**

ಬೆಸ್ತರವನಂತೆ ಶತ್ರುಗಳ ಮರ್ಮಸ್ಥಾನಗಳನ್ನು ಕತ್ತರಿಸದಿದ್ದರೆ—ದುಷ್ಕರವಾದ ಕಾರ್ಯವನ್ನು ಮಾಡದಿದ್ದರೆ—ಯಾವುದಾದರೂ ರೀತಿಯಲ್ಲಿ ಶತ್ರುಗಳನ್ನು ಸಂಹಾರಮಾಡದಿದ್ದರೆ—ರಾಜನಾದವನು ಮಹೈಶ್ವರ್ಯವನ್ನು ಸಂಪಾದಿಸಲು ಸಾಧ್ಯವಾಗುವುದಿಲ್ಲ. ( ಬೆಸ್ತರವನಂತೆ ಕಾರ್ಯಮಾಡದಿದ್ದರೆ ಐಶ್ವರ್ಯಸಂಪಾದನೆಯು ಆಗಲಾರದು. ಬೆಸ್ತರವನು ಗಾಳಕ್ಕೆ ಹುಳುವನ್ನು ಕಟ್ಟಿ ಮೀನುಗಳನ್ನು ಆಕರ್ಷಿಸುವಂತೆ—ನಯ-ವಿನಯವಾದ ಮಾತುಗಳಿಂದ

ಶತ್ರುವನ್ನು ವಿಮೋಹಗೊಳಿಸಬೇಕು. ಹುಳುವಿನಿಂದ ಮೀನನ್ನು ಆಕರ್ಷಿಸಿ ಗಾಳಕ್ಕೆ ಸಿಕ್ಕಿಸುವಂತೆ–ಸಮಯನೋಡಿ ಶತ್ರುವಿನ ಮರ್ಮವನ್ನು ಭೇದಿಸಿ ಅವನನ್ನು ಸೆರೆಹಿಡಿಯಬೇಕು. ಕೈಗೆ ಸಿಕ್ಕಿದ ಮೀನನ್ನು ಬೆಸ್ತರವನು ಕತ್ತರಿಸುವಂತೆ–ಸೆರೆಸಿಕ್ಕಿದ ಶತ್ರುವನ್ನು ಕೊಲ್ಲಬೇಕು. ಶತ್ರುವಿನ ನಿರ್ಮೂಲಕ್ಕಾಗಿ ದಾರುಣವಾದ ಕಾರ್ಯಗಳನ್ನೂ ಮಾಡಬೇಕು. (ಆದಿಪರ್ವದ ೧೪೦ನೇ ಅಧ್ಯಾಯದ ಕಣಿಕನೀತಿಯಲ್ಲಿ ೭೭ನೆಯ ಶ್ಲೋಕವಾಗಿ ಇದೇ ಶ್ಲೋಕವೇ ಬಂದಿರುತ್ತದೆ. **ಮತ್ಸ್ಯಘಾತೀವ** ಎಂಬುದಕ್ಕೆ ವ್ಯಾಖ್ಯಾನಕಾರರು ಇಲ್ಲಿ ಅನಪಕಾರಿಗಳನ್ನೂ ವಧಿಸಬೇಕೆಂಬುದಕ್ಕೆ ಇದು ದೃಷ್ಟಾಂತವಾಗಿದೆಯೆಂದು ಹೇಳಿದ್ದಾರೆ. **ಅನಪಕಾರಿಣಾಮಪಿ ವಧಃ ಕಾರ್ಯ ಇತ್ಯತ್ರ ದೃಷ್ಟಾನ್ತಃ.** ಆದರೆ ಶ್ಲೋಕದ ಭಾವಾರ್ಥವು ಹಾಗೆ ಕಾಣುವುದಿಲ್ಲ. ಮೇಲಾಗಿ ಇಲ್ಲಿ ಈ ಶ್ಲೋಕವನ್ನು ಹೇಳುತ್ತಿರುವವನು ಅರ್ಜುನ. ಕೇಳುತ್ತಿರುವವನು ಯುಧಿಷ್ಠಿರ. ಅಪಕಾರಿಗಳನ್ನು ಸಂಹರಿಸಿರುವುದಕ್ಕೇ ಶೋಕತಪ್ತನಾಗಿರುವ ಯುಧಿಷ್ಠಿರನ ಮುಂದೆ ಅನಪಕಾರಿಗಳನ್ನು ಸಮಯದಲ್ಲಿ ಕೊಲ್ಲಬೇಕೆನ್ನುವ ಮಾತನ್ನು ಅರ್ಜುನನು ಹೇಳಲು ಸಾಧ್ಯವಾಗುವುದೇ ಇಲ್ಲ. ದಂಡನೀತಿಯ ಪ್ರಕರಣದಲ್ಲಿ ಶತ್ರುಗಳಾದವರನ್ನು ಹೇಗೆ ಧ್ವಂಸಮಾಡಬೇಕೆಂಬುದರ ಬಗೆಗೆ ಅರ್ಜುನನು ಹೇಳಿರುತ್ತಾನೆಯೇ ಹೊರತು ಸಮಯಗಳಲ್ಲಿ ಅನಪಕಾರಿಗಳನ್ನೂ ಸಂಹರಿಸಬೇಕೆಂಬ ಅಭಿಪ್ರಾಯದಿಂದ ಇಲ್ಲಿ ಹೇಳಿರುವುದಿಲ್ಲ. )

**ನಾಘ್ನತಃ ಕೀರ್ತಿರಸ್ತೀಹ ನ ವಿತ್ತಂ ನ ಪುನಃ ಪ್ರಜಾಃ ।**
**ಇನ್ದ್ರೋ ವೃತ್ರವಧೇನೈವ ಮಹೇನ್ದ್ರಃ ಸಮಪದ್ಯತ ॥೧೫॥**

ಶತ್ರುಗಳನ್ನು ಸಂಹರಿಸದೇ ಇರುವವನಿಗೆ ಕೀರ್ತಿಯಾಗಲೀ, ಐಶ್ವರ್ಯವಾಗಲೀ ಲಭಿಸುವುದಿಲ್ಲ. ಪ್ರಜೆಗಳಾಗಲೀ, ಪ್ರಜೆಗಳಿಂದ ಕೂಡಿರುವ ರಾಜ್ಯವಾಗಲೀ ಲಭಿಸುವುದಿಲ್ಲ. ಇಂದ್ರನು ತನ್ನ ಪರಮಶತ್ರುವಾದ ವೃತ್ರನನ್ನು ವಧೆಮಾಡಿದುದರಿಂದಲೇ ಮಹೇಂದ್ರನಾದನು.

**ಯ ಏವ ದೇವಾ ಹನ್ತಾರಸ್ತಾಂಲ್ಲೋಕೋಽರ್ಚಯತೇ ಭೃಶಮ್ ।**
**ಹನ್ತಾ ರುದ್ರಸ್ತಥಾ ಸ್ಕನ್ದಃ ಶಕ್ರೋಽಗ್ನಿರ್ವರುಣೋ ಯಮಃ ॥೧೬॥**

**ಹನ್ತಾ ಕಾಲಸ್ತಥಾ ವಾಯುರ್ಮೃತ್ಯುರ್ವೈಶ್ರವಣೋ ರವಿಃ ।**
**ವಸವೋ ಮರುತಃ ಸಾಧ್ಯಾ ವಿಶ್ವೇದೇವಾಶ್ಚ ಭಾರತ ॥೧೭॥**

**ಏತಾನ್ದೇವಾನ್ನಮಸ್ಯನ್ತಿ ಪ್ರತಾಪಪ್ರಣತಾ ಜನಾಃ ।**
**ನ ಬ್ರಹ್ಮಾಣಂ ನ ಧಾತಾರಂ ನ ಪೂಷಾಣಂ ಕಥಂಚನ ॥೧೮॥**

ಯುಧಿಷ್ಠಿರ! ಲೋಕದಲ್ಲಿರುವ ಮತ್ತೊಂದು ಸತ್ಯಸಂಗತಿಯನ್ನೂ ನಿನಗೆ ದೃಷ್ಟಾಂತವಾಗಿ ಹೇಳುತ್ತೇನೆ. ಯಾವ-ಯಾವ ದೇವತೆಗಳು ಪ್ರತಾಪ ವಂತರಾಗಿ ಶತ್ರುಗಳನ್ನು ಸಂಹರಿಸಿದ್ದಾರೆಯೋ–ಆ ದೇವತೆಗಳನ್ನೇ ಇಂದು ಲೋಕವು ವಿಶೇಷವಾಗಿ ಪೂಜಿಸುತ್ತಿದೆ. ರುದ್ರ, ಸ್ಕಂದ, ಇಂದ್ರ, ಅಗ್ನಿ, ವರುಣ, ಯಮ, ವಾಯು, ಮೃತ್ಯು, ಕುಬೇರ, ಸೂರ್ಯ, ವಸುಗಳು, ಮರುತ್ತುಗಳು, ಸಾಧ್ಯರು, ವಿಶ್ವೇದೇವತೆಗಳು–ಇವರೆಲ್ಲರೂ ಒಂದೊಂದು ಸಮಯದಲ್ಲಿ ತಮ್ಮ ಶತ್ರುಗಳನ್ನು ಸಂಹರಿಸಿಯೇ ಇದ್ದಾರೆ. ಆದರೆ ಈ ದೇವತೆಗಳನ್ನು ಜನರು ಕೊಲೆಪಾತಕರೆಂದು ಬಗೆದು ತಿರಸ್ಕರಿಸಿರುವುದಿಲ್ಲ. ಈ ದೇವತೆಗಳ ಪ್ರತಾಪದಿಂದ ವಿನೀತರಾಗಿರುವ ಪ್ರಜೆಗಳು ಸದಾಕಾಲ ದಲ್ಲಿಯೂ ಈ ದೇವತೆಗಳನ್ನು ನಮಿಸುತ್ತಾರೆ.

ಬ್ರಹ್ಮನನ್ನಾಗಲೀ, ಧಾತೃವನ್ನಾಗಲೀ, ಪೂಷ್ಣನನ್ನಾಗಲೀ ಯಾರೂ ಯಾವುದೇ ಕಾರಣದಿಂದಲೂ ಪೂಜೆಮಾಡುವುದೇ ಇಲ್ಲ. ಈ ದೇವತೆಗಳು ಸಂಪೂರ್ಣವಾಗಿ ಸಾತ್ವಿಕತೆಯಿಂದಿರುವುದೇ ಇದಕ್ಕೆ ಕಾರಣವಾಗಿದೆ.

**ಮಧ್ಯಸ್ಥಾನ್ಸರ್ವಭೂತೇಷು ದಾನ್ತಾಞ್ಶಮಪರಾಯಣಾನ್ ।**
**ಯಜನ್ತೇ ಮಾನವಾಃ ಕೇಚಿತ್ಪ್ರಶಾನ್ತಾಃ ಸರ್ವಕರ್ಮಸು ॥೧೯॥**

ಸರ್ವಭೂತಗಳ ವಿಷಯದಲ್ಲಿಯೂ ಸಮಭಾವದಲ್ಲಿರುವ, ಜಿತೇಂದ್ರಿಯರಾದ, ಶಾಂತಿಪರಾಯಣರಾದ ದೇವತೆಗಳನ್ನು, ಪ್ರಶಾಂತ ಮನಸ್ಕರಾದ ಕೆಲವು ಜನರು ಮಾತ್ರವೇ ಎಲ್ಲ ಕರ್ಮಗಳಲ್ಲಿಯೂ ಸಂಪೂಜಿ ಸುತ್ತಾರೆ.

**ನ ಹಿ ಪಶ್ಯಾಮಿ ಜೀವನ್ತಂ ಲೋಕೇ ಕಞ್ಚಿದಹಿಂಸಯಾ ।**
**ಸತ್ತ್ವೈಃ ಸತ್ತ್ವಾ ಹಿ ಜೀವನ್ತಿ ದುರ್ಬಲೈರ್ಬಲವತ್ತರಾಃ ॥೨೦॥**

ಯುಧಿಷ್ಠಿರ! ಈ ಲೋಕದಲ್ಲಿ ಕೇವಲ ಅಹಿಂಸೆಯಿಂದಲೇ ಜೀವಿಸಿರು ವವನನ್ನು ನಾನು ಇದುವರೆಗೂ ನೋಡಿಯೇ ಇಲ್ಲ. ದುರ್ಬಲವಾದ ಪ್ರಾಣಿ

ಗಳನ್ನು ಸಂಹರಿಸಿ ತಿನ್ನುವುದರಿಂದ ಪ್ರಬಲವಾದ ಪ್ರಾಣಿಗಳು ಜೀವಿಸುತ್ತವೆ. (ದೊಡ್ಡ ಮೀನುಗಳು ಸಣ್ಣ ಮೀನುಗಳನ್ನು ತಿಂದು ಜೀವಿಸುತ್ತವೆ. ) ಲೋಕದ ಸ್ವಭಾವವೇ ಹೀಗಿದೆ.

**ನಕುಲೋ ಮೂಷಿಕಾನತ್ತಿ ಬಿಡಾಲೋ ನಕುಲಂ ತಥಾ ।**
**ಬಿಡಾಮತ್ತಿ ಶ್ವಾ ರಾಜಞ್ಶ್ವಾನಂ ವ್ಯಾಲಮೃಗಸ್ತಥಾ ॥೨೧॥**

ಮುಂಗುಸಿಯು ಇಲಿಗಳನ್ನು ತಿನ್ನುತ್ತದೆ. ಬೆಕ್ಕು ಮುಂಗುಸಿಯನ್ನು ತಿನ್ನುತ್ತದೆ. ಬೆಕ್ಕನ್ನು ನಾಯಿಯು ತಿನ್ನುತ್ತದೆ. ನಾಯಿಯನ್ನು ಚಿರತೆಯು (ಹಿಂಸ್ರಮೃಗವು) ತಿನ್ನುತ್ತದೆ. ಹೀಗೆ ತಿನ್ನುವುದು ಅವುಗಳ ಜಾತಿಸ್ವಭಾವವೇ ಆಗಿರುತ್ತದೆ.

**ತಾನತ್ತಿ ಪುರುಷಃ ಸರ್ವಾನ್ಪಶ್ಯ ಕಾಲೋ ಯಥಾಗತಃ ।**
**ಪ್ರಾಣಸ್ಯಾನ್ನಮಿದಂ ಸರ್ವಂ ಜಙ್ಗಮಂ ಸ್ಥಾವರಂ ಚ ಯತ್ ॥೨೨॥**

ಆ ಎಲ್ಲ ಪ್ರಾಣಿಗಳನ್ನೂ ಮನುಷ್ಯನು ಕೊಂದು ತಿನ್ನುತ್ತಾನೆ. ಕಾಲವು ಹೇಗೆ ಪ್ರವರ್ತಿಸುತ್ತಿದೆಯೆಂಬುದನ್ನಾದರೂ ನೀನೇ ಗಮನಿಸು. ಈ ಭೂಮಂಡಲದಲ್ಲಿರುವ ಸ್ಥಾವರ-ಜಂಗಮಗಳೆಲ್ಲವೂ ಪ್ರಾಣಧಾರಣೆಗೆ ಅನ್ನ ರೂಪವಾಗಿಯೇ ಇವೆ.

**ವಿಧಾನಂ ದೈವವಿಹಿತಂ ತತ್ರ ವಿದ್ವಾನ್ನ ಮುಹ್ಯತಿ ।**
**ಯಥಾ ಸೃಷ್ಟೋಽಸಿ ರಾಜೇನ್ದ್ರ ತಥಾ ಭವಿತುಮರ್ಹಸಿ ॥೨೩॥**

ಪ್ರಾಣಿಗಳಿಂದಲೇ ಪ್ರಾಣಿಗಳು ಜೀವಿಸಬೇಕೆಂಬ ವಿಧಾನವು ದೈವ ದಿಂದಲೇ ಕಲ್ಪಿಸಿದ್ದಾಗಿದೆ. ದೈವದ ಇಚ್ಛೆಯಿಂದಲೇ ಹೀಗೆ ನಡೆಯುತ್ತಿದೆ. ಆದುದರಿಂದ ವಿದ್ವಾಂಸನಾದವನು ಈ ವಿಷಯದಲ್ಲಿ ಭ್ರಾಂತನಾಗ ಬಾರದು. ವಿಧಾತೃವು ಹೇಗೆ ನಿನ್ನನ್ನು ಸೃಷ್ಟಿಸಿರುವನೋ ( ಯಾವ ವರ್ಣದಲ್ಲಿ ನಿನ್ನನ್ನು ಸೃಷ್ಟಿಸಿರುವನೋ ) ಆ ವರ್ಣದ ಧರ್ಮಾನುಸಾರವಾಗಿ ನಡೆಯು ವುದೇ ನಿನಗೆ ಯೋಗ್ಯವಾಗಿದೆ. ( ನಿನ್ನ ಪೂರ್ವಕರ್ಮದ ಫಲವಾಗಿ ವಿಧಿಯು ನಿನ್ನನ್ನು ಕ್ಷತ್ರಿಯವಂಶದಲ್ಲಿ ಸೃಷ್ಟಿಸಿದೆ. ಕ್ಷತ್ರಿಯನು ಶೌರ್ಯ, ತೇಜಸ್ಸು, ಧೃತಿ ಮತ್ತು ದಾಕ್ಷ್ಯಗಳಿಂದ ಕೂಡಿರಬೇಕೆಂದು ಶ್ರುತಿ-ಸ್ಮೃತಿಗಳು

ತಿಳಿಸುತ್ತಿವೆ. ಆದುದರಿಂದ ನೀನೀಗ ಕ್ಷತ್ರಿಯಧರ್ಮಾನುಸಾರವಾಗಿಯೇ ನಡೆಯುವುದು ಯುಕ್ತವಾಗಿದೆ.)

**ವಿನೀತಕ್ರೋಧಹರ್ಷಾ ಹಿ ಮನ್ದಾ ವನಮುಪಾಶ್ರಿತಾಃ ।**
**ವಿನಾ ವಧಂ ನ ಕುರ್ವನ್ತಿ ತಾಪಸಾಃ ಪ್ರಾಣಯಾಪನಮ್ ॥೨೪॥**

ಕ್ರೋಧ-ಹರ್ಷಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವ ಮಂದ ಬುದ್ಧಿಯ ಕ್ಷತ್ರಿಯರು ಅರಣ್ಯಕ್ಕೆ ಹೋಗಿ ತಪಸ್ಸುಮಾಡಲು ಉದ್ಯುಕ್ತ ರಾಗುತ್ತಾರೆ. ಆದರೆ ಆ ತಪಸ್ವಿಗಳು ಆಹಾರಕ್ಕಾಗಿ ಪ್ರಾಣಿಗಳನ್ನು ಸಂಹರಿಸದೇ ಜೀವನವನ್ನೇ ನಿರ್ವಹಿಸಲಾರರು. (ಕ್ರೋಧ-ಹರ್ಷಗಳನ್ನಾದರೂ ದೂರೀಕರಿಸಬಹುದು. ಆದರೆ ಜೀವಿಗಳು ಅನ್ನಗತಪ್ರಾಣರಾದುದರಿಂದ ಆಹಾರವನ್ನು ತ್ಯಜಿಸಲು ಸಾಧ್ಯವಾಗುವುದೇ ಇಲ್ಲ. ಅಂತಹ ಸಂದರ್ಭದಲ್ಲಿ ಕ್ಷತ್ರಿಯರು ತಾಪಸವೃತ್ತಿಯಲ್ಲಿದ್ದರೂ ಪ್ರಾಣಿಗಳ ವಧೆಯನ್ನು ಮಾಡಲೇ ಬೇಕಾಗುತ್ತದೆ. ಅವರ ಕ್ಷಾತ್ರಸ್ವಭಾವವು ಅವರಿಂದ ಅನಿವಾರ್ಯವಾಗಿ ಆ ಕೆಲಸವನ್ನು ಮಾಡಿಸುತ್ತದೆ. **ಸ್ವಭಾವಸ್ತು ಪ್ರವರ್ತತೇ । ನಿಗ್ರಹಃ ಕಿಂ ಕರಿಷ್ಯತಿ**—ಈ ಗೀತಾವಾಕ್ಯಗಳೂ ಇದನ್ನೇ ಹೇಳುತ್ತವೆ.)

**ಉದಕೇ ಬಹವಃ ಪ್ರಾಣಾಃ ಪೃಥಿವ್ಯಾಂ ಚ ಫಲೇಷು ಚ ।**
**ನ ಚ ಕಶ್ಚಿನ್ನ ತಾನ್ಹನ್ತಿ ಕಿಮನ್ಯತ್ಪ್ರಾಣಯಾಪನಾತ್ ॥೨೫॥**

ಅರಣ್ಯದಲ್ಲಿರುವ ತಾಪಸಿಯು ಕಂದ-ಮೂಲ-ಫಲಗಳನ್ನೇ ತಿನ್ನುತ್ತಾ ನೀರುಕುಡಿಯುತ್ತಾ ಜೀವಿಸಿರುವನೆಂದು ಹೇಳಬಹುದು. ಇದು ಪ್ರಾಣಿಗಳ ಹತ್ಯೆಯಾಗದೆಂದೂ ಭಾವಿಸಬಹುದು. ನೀರಿನಲ್ಲಿಯೂ ಕಣ್ಣಿಗೆ ಕಾಣಿಸ ದಂತಹ ಅನೇಕ ಪ್ರಾಣಿಗಳು ಅಡಗಿವೆ. ಭೂಮಿಯಲ್ಲಿಯೂ ಮತ್ತು ಫಲ ಗಳಲ್ಲಿಯೂ ಸೂಕ್ಷ್ಮಾತಿಸೂಕ್ಷ್ಮವಾದ ಅನೇಕ ಪ್ರಾಣಿಗಳು ಅಡಗಿವೆ. ಅವು ಗಳಲ್ಲಡಗಿರುವ ಸೂಕ್ಷ್ಮಪ್ರಾಣಗಳನ್ನು ಹರಣಮಾಡದೇ ಅಥವಾ ಭಕ್ಷಿಸದೇ ಇರುವವನು ಯಾರೂ ಇರುವುದಿಲ್ಲ. (ಇದು ಜೀವನನಿರ್ವಹಣೆಗಾಗಿ ತಾಪಸನೂ ಮಾಡುವ ಪ್ರಾಣಿವಧೆಯಲ್ಲದೇ ಮತ್ತೇನು?)

**ಸೂಕ್ಷ್ಮಯೋನೀನಿ ಭೂತಾನಿ ತರ್ಕಗಮ್ಯಾನಿ ಕಾನಿಚಿತ್ ।**
**ಪಕ್ಷ್ಮಣೋಽಪಿ ನಿಪಾತೇನ ಯೇಷಾಂ ಸ್ಯಾತ್ಸ್ಕನ್ಧಪರ್ಯಯಃ ॥೨೬॥**

ಅಣ್ಣ! ಪ್ರಾಣಿಗಳಲ್ಲಿ ಸಾವಿರಾರು ಸೂಕ್ಷ್ಮಯೋನಿಗಳಿರುತ್ತವೆ. ಅವುಗಳನ್ನು ಕಣ್ಣುಗಳಿಂದ ನೋಡಲೂ ಸಾಧ್ಯವಾಗದಷ್ಟು ಸೂಕ್ಷ್ಮವಾಗಿರುತ್ತವೆ. ತರ್ಕದಿಂದ ಅಥವಾ ಊಹೆಯಿಂದ ಮಾತ್ರ ನಾವು ಆ ಪ್ರಾಣಿಗಳಿವೆಯೆಂಬುದು ಸಿದ್ಧಾಂತಿಸಬೇಕಾಗಿದೆ. ಅವುಗಳು ಎಷ್ಟು ಸೂಕ್ಷ್ಮವಾಗಿರುವುದೆಂದರೆ ಮನುಷ್ಯನ ರೆಪ್ಪೆಯ ಕೂದಲೇನಾದರೂ ಆ ಪ್ರಾಣಿಯ ಮೇಲೆ ಬಿದ್ದುದಾದರೆ ಆ ಪ್ರಾಣಿಯ ಹೆಗಲೇ ಮೊದಲಾದ ಅವಯವಗಳೇ ಅಸ್ತವ್ಯಸ್ತವಾಗಿಬಿಡುತ್ತವೆ.

**ಗ್ರಾಮಾನ್ನಿಷ್ಕ್ರಮ್ಯ ಮುನಯೋ ವಿಗತಕ್ರೋಧಮತ್ಸರಾಃ ।**
**ವನೇ ಕುಟುಮ್ಬಧರ್ಮಾಣೋ ದೃಶ್ಯನ್ತೇ ಪರಿಮೋಹಿತಾಃ ॥೨೭॥**

ಕೆಲವು ಮುನಿಗಳು ಕ್ರೋಧದಿಂದಲೂ ಮತ್ತು ಮಾತ್ಸರ್ಯದಿಂದಲೂ ವಿಹೀನರಾಗಿ ಗ್ರಾಮದಿಂದ ಅರಣ್ಯಕ್ಕೆ ಹೊರಟುಹೋಗುತ್ತಾರೆ. ಆದರೆ ಅರಣ್ಯದಲ್ಲಿ ಮೋಹಪರವಶರಾಗಿ ಪತ್ನಿಯರೊಡನೆ ಇರುತ್ತಾ ವಾನಪ್ರಸ್ಥರಾಗಿರುತ್ತಾರೆ. ಇಂತಹವರಿಗೆ ಇಹಲೋಕ-ಪರಲೋಕಗಳೆರಡೂ ಇಲ್ಲವಾಗುತ್ತದೆ.

**ಭೂಮಿಂ ಭಿತ್ವೌಷಧೀಶ್ಛಿತ್ವಾ ವೃಕ್ಷಾದೀನಣ್ಡಜಾನ್ಪಶೂನ್ ।**
**ಮನುಷ್ಯಾಸ್ತನ್ವತೇ ಯಜ್ಞಾಂಸ್ತೇ ಸ್ವರ್ಗಂ ಪ್ರಾಪ್ನುವನ್ತಿ ಚ ॥೨೮॥**

ಮನುಷ್ಯರು ಭೂಮಿಯನ್ನು ನೇಗಿಲಿನಿಂದ ಉತ್ತು ಹಸನುಮಾಡುತ್ತಾರೆ. ಯಜ್ಞೋಪಯುಕ್ತವಾದ ಭೂಮಿಯಲ್ಲಿರಬಹುದಾದ ಓಷಧಿಲತೆಗಳನ್ನೂ ಛೇದನಮಾಡುತ್ತಾರೆ. ಅಲ್ಲಿರುವ ವೃಕ್ಷಗಳನ್ನೂ ಛೇದನಮಾಡುತ್ತಾರೆ. ಅನೇಕ ಪಕ್ಷಿಗಳನ್ನೂ ಕೊಲ್ಲುತ್ತಾರೆ. ಬಳಿಕ ಅವರು ಯಜ್ಞಪಶುಗಳನ್ನು ಮಂತ್ರಪೂರ್ವಕವಾಗಿ ಹನನಮಾಡಿ ಅವುಗಳ ವಪೆಯಿಂದ ಯಜ್ಞಗಳನ್ನು ಮಾಡುತ್ತಾರೆ. ಇಂತಹ ಯಜ್ಞಗಳನ್ನು ಮಾಡುವುದರ ಮೂಲಕವಾಗಿಯೇ ಅವರು ಸ್ವರ್ಗಕ್ಕೆ ಹೋಗುತ್ತಾರೆ. (ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ ಕ್ರೋಧ-ಮಾತ್ಸರ್ಯಗಳನ್ನು ತ್ಯಜಿಸಿ ವಾನಪ್ರಸ್ಥರಾಗಿ ಅರಣ್ಯಕ್ಕೆ ಹೋದರೂ ಅವರಿಗೆ ಕಾಮದಿಂದ ಬಿಡುಗಡೆಯಾಗಿರುವುದಿಲ್ಲ. ಅರಣ್ಯದಲ್ಲಿಯೂ ಅವರು ಕೌಟುಂಬಿಕಸಂಬಂಧವಾದ ಮನಃಪ್ರವೃತ್ತಿಯನ್ನೇ ಹೊಂದಿರುತ್ತಾರೆ. ಇದರಿಂದ ಅವರಿಗೆ ಯಾವ ಪರಲೋಕಗಳೂ ಸಿದ್ಧಿಸುವುದಿಲ್ಲ.

ಗ್ರಾಮದಲ್ಲಿಯೇ ಇದ್ದುಕೊಂಡೇ ಇತರರಿಗೆ ಹಿಂಸಾಚಾರಗಳಂತೆ ಕಾಣುವಂತಹ ಕರ್ಮಗಳನ್ನು ಮಾಡಿಯೂ ಸ್ವರ್ಗಕ್ಕೆ ಹೋಗುತ್ತಾರೆ. ಆದುದರಿಂದ ಅರಣ್ಯಕ್ಕೆ ಹೋಗಿ ಭ್ರಷ್ಟಾಶ್ರಮಿಗಳಾಗುವುದಕ್ಕಿಂತಲೂ ರಾಜ್ಯದಲ್ಲಿಯೂ ಗೃಹಸ್ಥಾಶ್ರಮಿಗಳಾಗಿದ್ದು ವಿಧ್ಯುಕ್ತವಾದ ಯಜ್ಞ-ಯಾಗಾದಿಗಳನ್ನು ಮಾಡುವುದೇ ಶ್ರೇಯಸ್ಕರ. )

**ದಣ್ಡನೀತ್ಯಾಂ ಪ್ರಣೀತಾಯಾಂ ಸರ್ವೇ ಸಿಧ್ಯನ್ತ್ಯುಪಕ್ರಮಾಃ ।**
**ಕೌನ್ತೇಯ ಸರ್ವಭೂತಾನಾಂ ತತ್ರ ಮೇ ನಾಸ್ತಿ ಸಂಶಯಃ ॥೨೯॥**

ಕೌಂತೇಯ! ದಂಡನೀತಿಯನ್ನು ಸುವ್ಯವಸ್ಥಿತವಾಗಿ ಪ್ರಯೋಗಿಸಿದ್ದೇ ಆದರೆ ಪ್ರಾಣಿಗಳು ಉಪಕ್ರಮಿಸುವ ಎಲ್ಲ ಕಾರ್ಯಗಳೂ ಸಿದ್ಧಿಸಿಯೇ ಸಿದ್ಧಿಸುತ್ತವೆ. ಈ ವಿಷಯದಲ್ಲಿ ನನಗೆ ಸಂಶಯವೇ ಇಲ್ಲ. (ದಂಡನೀತಿಯು ಪ್ರಾಣಿಗಳು ಅಥವಾ ಮನುಷ್ಯರ ಒಳಿತಿಗಾಗಿಯೇ ಹೊರತು ರಾಜನ ಸ್ವಾರ್ಥಕ್ಕಾಗಿ ಅಲ್ಲ. ರಾಜನು ದಂಡನೀತಿಯನ್ನು ಸರಿಯಾಗಿ ಪ್ರಯೋಗಿಸಿದ್ದೇ ಆದರೆ ರಾಜ್ಯದಲ್ಲಿರುವ ಎಲ್ಲ ಪ್ರಜೆಗಳಿಗೂ ಹಿತವೇ ಉಂಟಾಗುತ್ತದೆ.)

**ದಣ್ಡಶ್ಚೇನ್ನ ಭವೇಲ್ಲೋಕೇ ವಿನಶ್ಯೇಯುರಿಮಾಃ ಪ್ರಜಾಃ ।**
**ಜಲೇ ಮತ್ಸ್ಯಾನಿವಾಭಕ್ಷ್ಯನ್ದುರ್ಬಲಾನ್ಬಲವತ್ತರಾಃ ॥೩೦॥**

ಲೋಕದಲ್ಲಿ ದಂಡನೀತಿಯೇ ಇರದಿದ್ದರೆ–ಈ ಪ್ರಜೆಗಳೆಲ್ಲರೂ ವಿನಾಶವನ್ನೇ ಹೊಂದುತ್ತಿದ್ದರು. ದೊಡ್ಡ ಮೀನುಗಳು ಚಿಕ್ಕಮೀನುಗಳನ್ನು ನುಂಗಿ ಹಾಕುವಂತೆ–ಬಲಿಷ್ಠರಾದವರು ದುರ್ಬಲರನ್ನು ವಿನಾಶಗೊಳಿಸಿಬಿಡು ತ್ತಿದ್ದರು.

**ಸತ್ಯಂ ಚೇದಂ ಬ್ರಹ್ಮಣಾ ಪೂರ್ವಮುಕ್ತಂ**
**ದಣ್ಡಃ ಪ್ರಜಾ ರಕ್ಷತಿ ಸಾಧು ನೀತಃ ।**
**ಪಶ್ಯಾಗ್ನಯಶ್ಚ ಪ್ರತಿಶಾಮ್ಯ ಭೀತಾಃ**
**ಸಂತರ್ಜಿತಾ ದಣ್ಡಭಯಾಜ್ಜ್ವಲನ್ತಿ ॥೩೧॥**

'ಸುವ್ಯವಸ್ಥಿತವಾದ ರೀತಿಯಲ್ಲಿ ಉಪಯೋಗಿಸುವ ದಂಡವು ಪ್ರಜೆಗಳನ್ನು ರಕ್ಷಿಸುತ್ತದೆ'–ಎಂಬ ಸತ್ಯವಚನವನ್ನು ಬ್ರಹ್ಮನು ಬಹಳ ಹಿಂದೆಯೇ ಹೇಳಿದ್ದಾನೆ. ಈ ಅಗ್ನಿಗಳನ್ನಾದರೂ ನೋಡು, ಯುಧಿಷ್ಠಿರ! ಶಾಂತವಾಗಿರುವ ಅಗ್ನಿಗಳು ಫೂತ್ಕಾರದಿಂದ (ಫೂ-ಫೂ ಎಂಬ ಶಬ್ದದ

ಮೂಲಕವಾಗಿ ಊದುವುದರಿಂದ) ಭಯಗೊಂಡು ಇಂತಹ ಶಿಕ್ಷೆಯು ಪುನಃ ಪುನಃ ಆಗುವುದೆಂಬ ಭಯದಿಂದಲೇ ಭುಗ್ ಎಂದು ಹೊತ್ತಿಕೊಂಡು ಉರಿಯಲು ತೊಡಗುತ್ತವೆ.*

**ಅನ್ಧಂ ತಮ ಇವೇದಂ ಸ್ಯಾನ್ನ ಪ್ರಜ್ಞಾಯತ ಕಿಂಚನ ।**
**ದಣ್ಡಶ್ಚೇನ್ನ ಭವೇಲ್ಲೋಕೇ ವಿಭಜನ್ಸಾಧ್ವಸಾಧುನೀ ॥೩೨॥**

'ಒಳ್ಳೆಯದು ಯಾವುದು? ಕೆಟ್ಟುದು ಯಾವುದು?'–ಎಂಬುದನ್ನು ವಿಭಜಿಸಿ ಶಿಷ್ಟರನ್ನು ಪರಿಪಾಲಿಸುವ ಮತ್ತು ದುಷ್ಟರನ್ನು ನಿಗ್ರಹಿಸುವ ದಂಡ ವೆಂಬುದು ಲೋಕದಲ್ಲಿ ಇಲ್ಲದೆಯೇ ಹೋಗಿದ್ದರೆ–ಈ ಲೋಕವೇ ಅಂಧ ಕಾರಮಯವಾಗಿಬಿಡುತ್ತಿದ್ದಿತು. ದುಷ್ಟರಾರು? ಶಿಷ್ಟರಾರು?–ಎಂಬುದೇ ತಿಳಿಯುತ್ತಿರಲಿಲ್ಲ.

**ಯೇಽಪಿ ಸಮ್ಭಿನ್ನಮರ್ಯಾದಾ ನಾಸ್ತಿಕಾ ವೇದನಿನ್ದಕಾಃ ।**
**ತೇಽಪಿ ಭೋಗಾಯ ಕಲ್ಪನ್ತೇ ದಣ್ಡೇನಾಶು ನಿಪೀಡಿತಾಃ ॥೩೩॥**

ಯಾರು ಧರ್ಮದ ಮರ್ಯಾದೆಯನ್ನೇ ಮೀರಿ ನಡೆಯುತ್ತಾ ನಾಸ್ತಿಕ ರಾಗಿ ವೇದನಿಂದಕರಾಗಿರುತ್ತಾರೆಯೋ–ಅಂತಹವರೂ ರಾಜದಂಡದಿಂದ ಪೀಡಿಸಲ್ಪಟ್ಟವರಾಗಿ ಧರ್ಮದ ಮರ್ಯಾದೆಗೆ ಅನುಸಾರವಾಗಿ ನಡೆಯು ವಂತೆ ನಿಯಂತ್ರಿಸಲ್ಪಡುತ್ತಾರೆ. (ಧರ್ಮಬಾಹಿರರನ್ನೂ ಮತ್ತು ನಾಸ್ತಿಕರನ್ನೂ ರಾಜದಂಡವು ಶಿಕ್ಷಿಸಿ ಅವರನ್ನೂ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುತ್ತದೆ.)

**ಸರ್ವೋ ದಣ್ಡಜಿತೋ ಲೋಕೋ ದುರ್ಲಭೋ ಹಿ ಶುಚಿರ್ಜನಃ ।**
**ದಣ್ಡಸ್ಯ ಹಿ ಭಯಾದ್ಭೀತೋ ಭೋಗಾಯೈವ ಪ್ರವರ್ತತೇ ॥೩೪॥**

ಎಲ್ಲ ಲೋಕವೂ (ಜನವೂ) ದಂಡದಿಂದಲೇ ಜಯಿಸಲ್ಪಡುತ್ತದೆ. (ಲೋಕದ ಎಲ್ಲ ಪ್ರಜೆಗಳೂ ಶಿಕ್ಷೆಗೆ ಮಾತ್ರವೇ ಹೆದರಿ ಸನ್ಮಾರ್ಗದಲ್ಲಿ ವರ್ತಿ

---

* ಬ್ರಾಹ್ಮಣನಿಗೆ ಮಾತಿನ ಮೂಲಕವಾಗಿ ವಿಧಿಸಲ್ಪಟ್ಟಿರುವಂತೆ ಅಗ್ನಿಗೆ ಫೂತ್ಕಾರದ ಮೂಲಕವಾಗಿ ದಂಡವು ವಿಧಿಸಲ್ಪಟ್ಟಿದೆ. ಶಿಕ್ಷೆಗೆ ಸಾರ್ಥಕ್ಯವು ನೆಟ್ಟಗೆ ಮಾಡುವುದರಲ್ಲಿ ತಾನೇ? ಫೂತ್ಕಾರದ ಮೂಲಕವಾಗಿ ಶಿಕ್ಷಿಸಿದೊಡನೆಯೇ ಆರಿಹೋಗುವುದರಲ್ಲಿರುವ ಅಗ್ನಿಯು ಭುಗ್–ಎಂದು ಹೊತ್ತಿಕೊಳ್ಳುತ್ತದೆ.

ಸುತ್ತಿರುತ್ತಾರೆ. ) ಸ್ವಭಾವತಃ ಶುದ್ಧನಾದ ಮನುಷ್ಯನು ( ಸತ್ಪುರುಷನು ) ಇರುವುದು ದುರ್ಲಭವೇ. ( ದಂಡವಿರಲಿ–ಇಲ್ಲದಿರಲಿ ನನ್ನ ಕರ್ತವ್ಯವನ್ನು ನಾನು ಮಾಡುತ್ತೇನೆ–ಎಂದು ಭಾವಿಸಿಕೊಂಡು ಕಾರ್ಯಮಾಡುವವನು ಬಹಳ ವಿರಳ. ) ದಂಡದ ಭಯದಿಂದ ಭೀತರಾದ ಜನರು ಧರ್ಮಪರಿಪಾಲನೆಯಲ್ಲಿ ಪ್ರವೃತ್ತರಾಗುತ್ತಾರೆ. ( ಇಂತಹ ತಪ್ಪುಮಾಡಿದರೆ ಇಂತಹ ಶಿಕ್ಷೆಯಾಗುವುದೆಂದು ಮನುಷ್ಯನಿಗೆ ತಿಳಿದಿದ್ದರೂ ಮನುಷ್ಯನು ತಪ್ಪುಮಾಡದೇ ಇರುವುದಿಲ್ಲ. ಇದು ಮನುಷ್ಯನ ಸ್ವಭಾವವಾಗಿರುತ್ತದೆ. 'ಯಾವ ತಪ್ಪುಮಾಡಿದರೂ ಏನೂ ಶಿಕ್ಷೆಯಿಲ್ಲ'–ಎಂದು ಒಂದು ದಿನದ ಮಟ್ಟಿಗಾದರೂ ಘೋಷಿಸಿದರೆ ಆಗುವ ಪರಿಣಾಮವನ್ನು ಊಹಿಸಲೂ ಸಾಧ್ಯವಾಗುವುದಿಲ್ಲ. ಜಗತ್ತು ಅಂಧಕಾರದಿಂದಲೇ ಮುಚ್ಚಿಹೋಗುವುದರಲ್ಲಿ ಸಂಶಯವೇ ಇಲ್ಲ. ಶಿಕ್ಷೆಯಾಗುವುದೆಂಬ ಭಯವಿರುವುದರಿಂದಲೇ ಜನರು ಲೋಕಮರ್ಯಾದೆಯನ್ನು ಮೀರಿ ನಡೆಯುತ್ತಿಲ್ಲ. ಹಿಂಸಾಚಾರ, ದುರ್ವ್ಯವಹಾರ, ಹಿಂಸೆ, ಭ್ರಷ್ಟಚಾರ–ಮೊದಲಾದುವು ಹೆಚ್ಚಲು ಕಾರಣ ಅಪರಾಧಿಗಳಿಗೆ ತಕ್ಕುದಾದ ಶಿಕ್ಷೆಯನ್ನು ಸಕಾಲದಲ್ಲಿ ವಿಧಿಸದಿರುವುದೇ ಆಗಿದೆ. ಇಂತಹ ಸಂದರ್ಭದಲ್ಲಿ ದೇಶದಲ್ಲಿ ದಂಡನೀತಿಯು ಸಡಿಲಗೊಂಡಿದೆಯೆಂದು ಧಾರಾಳವಾಗಿ ಹೇಳಬಹುದು.)

**ಚಾತುರ್ವರ್ಣ್ಯಪ್ರಮೋದಾಯ ಸುನೀತಿನಯನಾಯ ಚ ।**
**ದಣ್ಡೋ ವಿಧಾತ್ರಾ ವಿಹಿತೋ ಧರ್ಮಾರ್ಥೌ ಭುವಿ ರಕ್ಷಿತುಮ್ ॥೩೫॥**

ನಾಲ್ಕುವರ್ಣದವರೂ ಆನಂದದಿಂದ ಇರುವುದಕ್ಕೂ, ಎಲ್ಲರೂ ನೀತಿವಂತರಾಗಿ ಬಾಳುವುದಕ್ಕೂ ಮತ್ತು ಧರ್ಮ ಮತ್ತು ಅರ್ಥಗಳನ್ನು ಸಂರಕ್ಷಿಸುವುದಕ್ಕೂ ಬ್ರಹ್ಮನೇ ದಂಡನೀತಿಯನ್ನು ಲೋಕದಲ್ಲಿ ವಿಧಿಸಿದ್ದಾನೆ.

**ಯದಿ ದಣ್ಡಾನ್ನ ಬಿಭ್ಯೇಯುರ್ವಯಾಂಸಿ ಶ್ವಾಪದಾನಿ ಚ ।**
**ಅದ್ಯುಃ ಪಶೂನ್ಮನುಷ್ಯಾಂಶ್ಚ ಯಜ್ಞಾರ್ಥಾನಿ ಹವೀಂಷಿ ಚ ॥೩೬॥**

ಹಿಂಸ್ರಮೃಗಗಳಾಗಲೀ–ಪಕ್ಷಿಗಳಾಗಲೀ ದಂಡಕ್ಕೆ ಭಯಪಡದೇ ಇದ್ದಿದ್ದರೆ–ಆ ಹಿಂಸ್ರಮೃಗಗಳೂ ಮತ್ತು ಪಕ್ಷಿಗಳೂ ಸಾಧುಪಶುಗಳನ್ನೂ ಮನುಷ್ಯರನ್ನೂ ಮತ್ತು ಯಜ್ಞದ ಹವಿಸ್ಸುಗಳನ್ನೂ ತಿಂದೇಬಿಡುತ್ತಿದ್ದುವು.

**ನ ಬ್ರಹ್ಮಚಾರ್ಯಧೀಯೀತ ಕಲ್ಯಾಣೀ ಗೌರ್ನ ದುಹ್ಯತೇ ।**
**ನ ಕನ್ಯೋದ್ವಹನಂ ಗಚ್ಛೇದ್ಯದಿ ದಣ್ಡೋ ನ ಪಾಲಯೇತ್ ॥೩೭॥**

ದಂಡವೇನಾದರೂ ಲೋಕಮರ್ಯಾದೆಯನ್ನು ರಕ್ಷಿಸದೇ ಇದ್ದಿದ್ದರೆ– ಬ್ರಹ್ಮಚಾರಿಯು ವೇದಾಧ್ಯಯನವನ್ನು ಮಾಡುತ್ತಿರಲಿಲ್ಲ. ಮಂಗಳಮಯಿ ಯಾದ ಹಸುವು ಹಾಲುಕೊಡುತ್ತಿರಲಿಲ್ಲ. ಕನ್ಯೆಯು ಮದುವೆಯಾಗುತ್ತಲೇ ಇರಲಿಲ್ಲ.

(ಬ್ರಹ್ಮಚಾರಿಯಾದ ದ್ವಿಜನು ವೇದಾಧ್ಯಯನಮಾಡಬೇಕೆಂಬುದು ಇಂದಿನ ರಾಜಶಾಸನದಲ್ಲಿಲ್ಲ. ದ್ವಿಜನಾದವನು ವೇದಾಧ್ಯಯನಮಾಡದಿದ್ದರೆ ಪಾಪವು ಸಂಘಟಿಸುವುದೆಂಬ ಭಯವೂ ಇಲ್ಲವಾಗಿದೆ. ಇಹದಲ್ಲಿ ಶಿಕ್ಷೆಯಿಲ್ಲ ದಿರುವುದು ; ಪರದಲ್ಲಿ ಏನಾಗುವುದೆಂಬುದರ ಬಗೆಗೆ ತಿರಸ್ಕಾರ–ಈ ಎರಡೂ ಕಾರಣಗಳಿಂದ ಇಂದು ವೇದಾಧ್ಯಯನವು ಸಂಪೂರ್ಣವಾಗಿ ಲುಪ್ತವಾಗಿದೆ. ವರ್ಣಾಶ್ರಮಧರ್ಮವೆಂಬುದೇ ಇರಕೂಡದೆಂಬುದು ಇಂದಿನ ದಂಡನೀತಿಯಾಗಿರುವುದರಿಂದ ದ್ವಿಜನು ಮಾಡಬೇಕಾದ ವೇದಾಧ್ಯಯನದ ವಿಷಯವಾಗಿ ಪ್ರಸ್ತಾಪಿಸುವ ಕಾರಣವೇ ಇಲ್ಲ. )

**ವಿಷ್ವಗ್ಲೋಪಃ ಪ್ರವರ್ತೇತ ಭಿದ್ಯೇರನ್ಸರ್ವಸೇತವಃ ।**
**ಮಮತ್ವಂ ನ ಪ್ರಜಾನೀಯುರ್ಯದಿ ದಣ್ಡೋ ನ ಪಾಲಯೇತ್ ॥**

ದಂಡವೇನಾದರೂ ಲೋಕಮರ್ಯಾದೆಯನ್ನು ಪಾಲಿಸದೇ ಇದ್ದಿದ್ದರೆ–ಭೂಮಂಡಲದ ಎಲ್ಲ ಕಡೆಗಳಲ್ಲಿಯೂ ಧರ್ಮ-ಕರ್ಮಗಳೇ ಲೋಪ ವಾಗಿಬಿಡುತ್ತಿದ್ದುವು. ಸಕಲವಿಧವಾದ ಲೋಕಮರ್ಯಾದೆಗಳೂ ಭಗ್ನವಾಗಿ ಬಿಡುತ್ತಿದ್ದುವು. ಯಾವ ವಸ್ತುವು ನನ್ನದು–ಯಾವ ವಸ್ತುವು ನನ್ನದಲ್ಲ– ಎಂಬ ವಿವೇಚನೆಯೇ ಇರುತ್ತಿರಲಿಲ್ಲ. ಎಲ್ಲರೂ ಎಲ್ಲ ವಸ್ತುಗಳನ್ನೂ ತಮ್ಮದೇ ಎಂದು ಭಾವಿಸಿಕೊಂಡು ಪರಸ್ಪರವಾಗಿ ಬಡಿದಾಡಿ ವಿನಾಶಹೊಂದುತ್ತಿದ್ದರು.

**ನ ಸಂವತ್ಸರಸತ್ರಾಣಿ ತಿಷ್ಠೇಯುರಕುತೋಭಯಾಃ ।**
**ವಿಧವದ್ದಕ್ಷಿಣಾವನ್ತಿ ಯದಿ ದಣ್ಡೋ ನ ಪಾಲಯೇತ್ ॥೩೯॥**

ದಂಡವು ಧರ್ಮಾರ್ಥಗಳನ್ನು ಪಾಲನೆಮಾಡದೇ ಇದ್ದಿದ್ದರೆ–ಸಂವತ್ಸರ

ಗಳ ಕಾಲ ಮಾಡಬೇಕಾದ ದಕ್ಷಿಣಾಯುಕ್ತವಾದ ಸತ್ರಯಾಗಗಳನ್ನು ಯಾವ ಭೀತಿಯೂ ಇಲ್ಲದೇ ವಿಧಿಪೂರ್ವಕವಾಗಿ ಮಾಡಲು ಸಾಧ್ಯವಾಗುತ್ತಲೇ ಇರಲಿಲ್ಲ.

**ಚರೇಯುರ್ನಾಶ್ರಮೇ ಧರ್ಮಂ ಯಥೋಕ್ತಂ ವಿಧಿಮಾಶ್ರಿತಾಃ ।**
**ನ ವಿದ್ಯಾಂ ಪ್ರಾಪ್ನುಯಾತ್ಕಶ್ಚಿದ್ಯದಿ ದಣ್ಡೋ ನ ಪಾಲಯೇತ್ ॥೪೦॥**

ದಂಡವೇನಾದರೂ ಲೋಕಮರ್ಯಾದೆಯನ್ನು ರಕ್ಷಿಸದೇ ಇದ್ದಿದ್ದರೆ– ಮನುಷ್ಯರು ತಮ್ಮ ತಮ್ಮ ವರ್ಣಗಳಲ್ಲಿಯೂ ಇರುತ್ತಿರಲಿಲ್ಲ. ಶಾಸ್ತ್ರವಿಧಿಗಳನ್ನು ಆಶ್ರಯಿಸಿ ವರ್ಣಾಶ್ರಮೋಕ್ತವಾದ ಧರ್ಮಗಳನ್ನು ಆಚರಿಸುತ್ತಲೂ ಇರಲಿಲ್ಲ. ವರ್ಣಾಶ್ರಮಧರ್ಮಗಳೇ ಅಸ್ತವ್ಯಸ್ತವಾದನಂತರ ಯಾವನೊಬ್ಬನೂ ಯಾವ ವಿದ್ಯೆಯನ್ನೂ ಅಧ್ಯಯನಮಾಡುತ್ತಿರಲಿಲ್ಲ.

**ನ ಚೋಷ್ಟ್ರಾ ನ ಬಲೀವರ್ದಾ ನಾಶ್ವಾಶ್ವತರಗರ್ದಭಾಃ ।**
**ಯುಕ್ತಾ ವಹೇಯುರ್ಯಾನಾನಿ ಯದಿ ದಣ್ಡೋ ನ ಪಾಲಯೇತ್ ॥**

ದಂಡವೇನಾದರೂ ಲೋಕಮರ್ಯಾದೆಯನ್ನು ರಕ್ಷಿಸದೇ ಇದ್ದಿದ್ದರೆ ಒಂಟೆಗಳಾಗಲೀ, ಎತ್ತುಗಳಾಗಲೀ, ಕುದುರೆಗಳಾಗಲೀ, ಹೇಸರಕತ್ತೆಗಳಾಗಲೀ, ಕತ್ತೆಗಳಾಗಲೀ ಯಾನಗಳಿಂದ ಯುಕ್ತವಾಗಿದ್ದರೂ ಅವುಗಳನ್ನು ಎಳೆದುಕೊಂಡು ಹೋಗುತ್ತಿರಲಿಲ್ಲ. (ಗಾಡಿಗೆ ಕಟ್ಟಿದ ಎತ್ತುಗಳು ಒಂದು ಹೆಜ್ಜೆ ಮುಂದಿಡಬೇಕಾದರೂ ಚಾವಟಿಯನ್ನೊಮ್ಮೆ ಸೋಂಕಿಸಲೇಬೇಕು.)

**ನ ಪ್ರೇಷ್ಯಾ ವಚನಂ ಕುರ್ಯುರ್ನ ಬಾಲಾ ಜಾತು ಕರ್ಹಿಚಿತ್ ।**
**ನ ತಿಷ್ಠೇದ್ಯುವತೀ ಧರ್ಮೇ ಯದಿ ದಣ್ಡೋ ನ ಪಾಲಯೇತ್ ॥೪೨॥**

ದಂಡವು ಲೋಕಮರ್ಯಾದೆಯನ್ನು ರಕ್ಷಿಸದೆಯೇ ಇದ್ದಿದ್ದರೆ– ಸೇವಕರು ಯಜಮಾನನ ಮಾತಿನಂತೆ ನಡೆಯುತ್ತಿರಲಿಲ್ಲ. ಬಾಲಕರು ಯಾವಾಗಲೂ ತಂದೆ-ತಾಯಿಗಳ ಮಾತನ್ನು ಕೇಳುತ್ತಿರಲಿಲ್ಲ. ಯುವತಿಯಾದವಳು ತನ್ನ ಸತೀಧರ್ಮದಲ್ಲಿ ಸ್ಥಿರವಾಗಿ ಉಳಿಯುತ್ತಿರಲಿಲ್ಲ.

**ದಣ್ಡೇ ಸ್ಥಿತಾಃ ಪ್ರಜಾಃ ಸರ್ವಾ ಭಯಂ ದಣ್ಡೇ ವಿದುರ್ಬುಧಾಃ ।**
**ದಣ್ಡೇ ಸ್ವರ್ಗೋ ಮನುಷ್ಯಾಣಾಂ ಲೋಕೋಽಯಂ ಸುಪ್ರತಿಷ್ಠಿತಃ ॥**

ದಂಡನೀತಿಯಿಂದಲೇ ಪ್ರಜೆಗಳೆಲ್ಲರೂ ತಮ್ಮ ತಮ್ಮ ಧರ್ಮಗಳಲ್ಲಿ ಸ್ಥಿರವಾಗಿದ್ದಾರೆ. ಜನರು ತಪ್ಪುದಾರಿಗೆ ಹೋಗಗೊಡದ ಭಯವು ದಂಡ ದಲ್ಲಿಯೇ ಅಡಗಿರುವುದೆಂದು ವಿದ್ವಾಂಸರು ಹೇಳುತ್ತಾರೆ. ಆದುದರಿಂದ ಮನುಷ್ಯನಿಗೆ ಇಹಲೋಕ-ಸ್ವರ್ಗಲೋಕಗಳೆರಡೂ ದಂಡದಲ್ಲಿಯೇ ಪ್ರತಿಷ್ಠಿತವಾಗಿವೆ.

**ನ ತತ್ರ ಕೂಟಂ ಪಾಪಂ ವಾ ವಞ್ಚನಾ ವಾಪಿ ದೃಶ್ಯತೇ ।**
**ಯತ್ರ ದಣ್ಡಃ ಸುವಿಹಿತಶ್ಚರತ್ಯರಿವಿನಾಶನಃ ॥೪೪॥**

ಶತ್ರುಗಳನ್ನು ವಿನಾಶಗೊಳಿಸುವ ದಂಡನೀತಿಯು ಯಾವ ದೇಶದಲ್ಲಿ ಸರಿಯಾದ ವ್ಯವಸ್ಥೆಯಿಂದ ಇರುತ್ತದೆಯೋ–ಆ ದೇಶದಲ್ಲಿ ಮೋಸವಾಗಲೀ, ಪಾಪಕರ್ಮಗಳಾಗಲೀ, ಪರಸ್ಪರವಂಚನೆಯಾಗಲೀ ಇರುವುದಿಲ್ಲ. (ಸುವಿಹಿತಃ ಎಂಬುದು ಮುಖ್ಯವಾಗಿ ಗಮನಿಸಬೇಕಾದ ಪದ. ದಂಡವನ್ನು ದುರುಪಯೋಗಪಡಿಸಬಾರದು. ಸುವ್ಯವಸ್ಥಿತವಾದ ರೀತಿಯಲ್ಲಿ ದಂಡವನ್ನು ಪ್ರಯೋಗಿಸದಿದ್ದರೆ ಅನಾಹುತವೇ ಆಗಿಬಿಡುತ್ತದೆ. ಶಿಷ್ಟರು ಶಿಕ್ಷೆಗೊಳ ಗಾಗುತ್ತಾರೆ. ದುರ್ಜನರು ವೃದ್ಧಿಹೊಂದುತ್ತಾರೆ. ಕಾನೂನಿಗೆ ಕಣ್ಣಿಲ್ಲ. ಕಾನೂನು ಚಲಾಯಿಸುವವರು ಪ್ರಜ್ಞಾಚಕ್ಷುಗಳಾಗಿರಬೇಕು. ಆದುದರಿಂದ ಸುವಿಹಿತಃ ದಣ್ಡಃ–ಎಂದು ಅರ್ಜುನನು ಹಲವು ಬಾರಿ ಒತ್ತಿ ಹೇಳಿದ್ದಾನೆ.)

**ಹವಿಃ ಶ್ವಾ ಪ್ರಲೀಹೇದ್ದೃಷ್ಟ್ವಾ ದಣ್ಡಶ್ಚೇನ್ನೋದ್ಯತೋ ಭವೇತ್ ।**
**ಹರೇತ್ಕಾಕಃ ಪುರೋಡಾಶಂ ಯದಿ ದಣ್ಡೋ ನ ಪಾಲಯೇತ್ ॥೪೫॥**

ದಂಡವನ್ನು ಮೇಲೆತ್ತಿಕೊಂಡು ನಿಂತಿರದಿದ್ದರೆ ನಾಯಿಯು ಹವಿಸ್ಸನ್ನು ನೋಡಿದೊಡನೆಯೇ ನೆಕ್ಕಲು ಹೋಗುತ್ತಿತ್ತು. ದಂಡವೇನಾದರೂ ರಕ್ಷಣೆಗೆ ನಿಲ್ಲದಿದ್ದರೆ ಕಾಗೆಯು ಪುರೋಡಾಶವನ್ನೇ ಎತ್ತಿಕೊಂಡು ಹೋಗುತ್ತಿತ್ತು.

ಯುಧಿಷ್ಠಿರ! ಈ ರಾಜ್ಯವು ನಮಗೆ ಧರ್ಮದಿಂದ ಲಭ್ಯವಾಯಿತೋ ಅಥವಾ ಅಧರ್ಮದಿಂದ ಲಭ್ಯವಾಯಿತೋ–ಎಂಬ ವಿಷಯವು ಈಗ ಯೋಚಿಸಲ್ಪಡತಕ್ಕುದಲ್ಲ ಮತ್ತು ಅಧರ್ಮಮಾರ್ಗದಿಂದ ನಡೆದುಕೊಂಡೆ ನೆಂದು ಭಾವಿಸಿಕೊಂಡು ದುಃಖಪಡತಕ್ಕದ್ದೂ ಅಲ್ಲ. ಶೋಕ-ದುಃಖಗಳಿಗೆ ಇದು ಸಮಯವೇ ಅಲ್ಲ. ಹೇಗೋ, ಯಾವುದೋ ಮಾರ್ಗದಿಂದ ಶತ್ರು

ಗಳೆಲ್ಲರನ್ನೂ ಸಂಪೂರ್ಣವಾಗಿ ವಿನಾಶಮಾಡಿ ರಾಜ್ಯವನ್ನಂತೂ ಗೆದ್ದು ಕೊಂಡಾಗಿದೆ. ಈಗ ನಿನ್ನ ಮುಂದಿನ ಕರ್ತವ್ಯವೇನೆಂದರೆ ರಾಜ್ಯಸುಖವನ್ನು ಉಪಭೋಗಿಸುವುದು ಮತ್ತು ಯಜ್ಞಮಾಡುವುದು. ಇದನ್ನೇ ಈಗ ನೀನು ಮಾಡುವುದು ವಿಹಿತವಾಗಿದೆ. ಶುಭ್ರವಾದ ವಸ್ತ್ರಗಳನ್ನು ಧರಿಸುವ ಶ್ರೀಮಂತರು ಸುಖದಿಂದಲೇ ಧರ್ಮಾಚರಣೆಯನ್ನು ಮಾಡುತ್ತಾರೆ. ಶ್ರೇಷ್ಠ ವಾದ ಅನ್ನವನ್ನು ಊಟಮಾಡುತ್ತಾರೆ. ದೀನರ ಮುಂದೆ ಫಲಗಳ ಮತ್ತು ನಾನಾವಿಧವಾದ ದಾನಗಳ ಮಳೆಯನ್ನೇ ಸುರಿಸಿಬಿಡುತ್ತಾರೆ.

**ಅರ್ಥೇ ಸರ್ವೇ ಸಮಾರಮ್ಭಾಃ ಸಮಾಯತ್ತಾ ನ ಸಂಶಯಃ ।**
**ಸ ಚ ದಣ್ಡೇ ಸಮಾಯತ್ತಃ ಪಶ್ಯ ದಣ್ಡಸ್ಯ ಗೌರವಮ್ ॥೪೮॥**

ಅಣ್ಣ! ಎಲ್ಲ ಸಮಾರಂಭಗಳೂ (ಕಾರ್ಯಗಳೂ) ಹಣದ ಅಧೀನ ವಾಗಿರುವುವೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಯಾವ ಕಾರ್ಯವನ್ನೇ ಪ್ರಾರಂಭಿಸಬೇಕಾದರೂ ಹಣವಿದ್ದೇ ಇರಬೇಕು. ಶುಭಾಶುಭಕರ್ಮಗಳೆ ಲ್ಲವೂ ಬಹುಮುಖ್ಯವಾಗಿ ಧನವನ್ನೇ ಅವಲಂಬಿಸಿವೆ. ಆದರೆ ಧನವು ದಂಡಕ್ಕೆ ಅಧೀನವಾಗಿದೆ. ದಂಡದ ರಕ್ಷಣೆಯಿಲ್ಲದಿದ್ದರೆ ಒಂದೆಡೆಯಲ್ಲಿ ಧನವುಳಿಯುವ ಸಾಧ್ಯತೆಯೇ ಇಲ್ಲ. ದಂಡದ ರಕ್ಷಣೆಯಿರುವುದರಿಂದಲೇ ಒಬ್ಬನ ಬಳಿಯಲ್ಲಿ ಸಾಕಷ್ಟು ಧನವುಳಿಯಲು ಸಾಧ್ಯವಾಗಿದೆ. ಆದುದರಿಂದ ದಂಡಕ್ಕೆ ಎಷ್ಟು ಗೌರವವಿರುವುದೆಂಬುದನ್ನಾದರೂ ನೋಡು.

(ಲೋಕಯಾತ್ರೆಯ ನಿರ್ವಹಣೆಗಾಗಿ ವಿದ್ವಾಂಸರು ಧರ್ಮವನ್ನು ಪ್ರತಿಪಾದನೆಮಾಡಿದ್ದಾರೆ. ಹೀಗೆ ಮಾಡುವಾಗ 'ಅಹಿಂಸೆಯೇ ಒಳ್ಳೆಯದು' ಎಂಬುದನ್ನು ಪ್ರತಿಪಾದಿಸಿದ್ದಾರೆ. 'ಹಿಂಸಾಸಾಧು–ಹಿಂಸೆಮಾಡುವುದು ಕೆಟ್ಟದು'–ಎಂಬುದನ್ನೂ ಪ್ರತಿಪಾದಿಸಿದ್ದಾರೆ. ಈ ಪ್ರತಿಪಾದನೆಯಲ್ಲಿ ಆಯಾ ಸಮಯದಲ್ಲಿ ಧರ್ಮವೆನಿಸಿದುದನ್ನು ಪರಿಗ್ರಹಿಸಿ ಕಾರ್ಯಮಾಡುವುದು ಶ್ರೇಯಸ್ಕರ. ಅಹಿಂಸೆಯು ಸಾಧು–ಎನಿಸಿದರೂ ಎಲ್ಲ ಸಮಯಗಳಲ್ಲಿಯೂ ಧರ್ಮವಾಗುವುದಿಲ್ಲ. ಹಿಂಸೆಯು ಅಸಾಧು–ಎನಿಸಿದರೂ ಎಲ್ಲ ಸಮಯಗಳಲ್ಲಿಯೂ ಅದು ಅಧರ್ಮವಾಗುವುದಿಲ್ಲ. ಹಿಂಸೆಯು ಕೆಲವು ವೇಳೆ ಧರ್ಮವೂ ಆಗಬಹುದು. ಇದಕ್ಕೆ ವ್ಯಾಖ್ಯಾನಕಾರರ ದೃಷ್ಟಾಂತವೂ

ಹೀಗಿದೆ : ದನಗಳ ಕೊಟ್ಟಿಗೆಗೆ ಹುಲಿ ನುಗ್ಗುತ್ತದೆ. ಹುಲಿಯನ್ನು ಸಂಹರಿಸುವುದು ಪ್ರಾಣಿಹಿಂಸೆ ಎಂಬುದರಲ್ಲಿ ಸಂಶಯವೇ ಇಲ್ಲ. ಕಾರಣವಿಲ್ಲದೇ ಹುಲಿಯನ್ನು ಸಂಹರಿಸಿದರೆ ಅದು ಅಸಾಧು ಅಥವಾ ಅಧರ್ಮವೂ ಆಗಬಹುದು. ಆದರೆ ದನದ ಕೊಟ್ಟಿಗೆಗೆ ನುಗ್ಗಿರುವ ಹುಲಿಯನ್ನು ಕೊಲ್ಲಲೇಬೇಕು. ಹಾಗೆ ಕೊಲ್ಲದಿದ್ದರೆ ಹುಲಿಯು ಕೊಟ್ಟಿಗೆಯಲ್ಲಿರುವ ಎಲ್ಲ ಹಸುಗಳನ್ನೂ ಕೊಂದುಬಿಡುತ್ತದೆ. ಹಸುಗಳ ರಕ್ಷಣೆಗಾಗಿ ಹುಲಿಯನ್ನು ಕೊಲ್ಲುವುದು ಧರ್ಮ. ಒಂದು ವೇಳೆ ಪ್ರಾಣಿಹಿಂಸೆಯಾಗುವುದೆಂಬ ವ್ಯಾಜದಿಂದ ಹುಲಿಯನ್ನು ಕೊಲ್ಲದಿದ್ದರೆ ಅದು ಅಧರ್ಮ. ಅಹಿಂಸೆಯು ಅಧರ್ಮದಲ್ಲಿ ಪರ್ಯವಸಾನ ಹೊಂದುತ್ತದೆ. ಆದುದರಿಂದ ಅಹಿಂಸಾವ್ರತವನ್ನು ಆಚರಿಸುವಾಗಲೂ ಸಮಯಾಸಮಯಗಳನ್ನು ನೋಡಿ ಆಚರಿಸಬೇಕು. )

**ನಾತ್ಯನ್ತಂ ಗುಣವತ್ಕಿಂಚಿನ್ನ ಚಾಪ್ಯತ್ಯನ್ತನಿರ್ಗುಣಮ್ ।**
**ಉಭಯಂ ಸರ್ವಕಾರ್ಯೇಷು ದೃಶ್ಯತೇ ಸಾಧ್ವಸಾಧು ವಾ ॥೫೦॥**

ವಿಶ್ವದಲ್ಲಿ ಯಾವ ಕಾರ್ಯವೇ ಆದರೂ ಅತ್ಯಂತಗುಣಯುಕ್ತವಾಗಿರುವುದಿಲ್ಲ. ಅತ್ಯಂತ ನಿರ್ಗುಣವಾಗಿಯೂ ಇರುವುದಿಲ್ಲ. ಗುಣಾವಗುಣಗಳೆರಡೂ ಯಾವುದೋ ಒಂದು ಪ್ರಮಾಣದಲ್ಲಿರುತ್ತವೆ. ಹೆಚ್ಚು ಗುಣವಿರುವುದನ್ನು ಗುಣವುಳ್ಳದ್ದೆಂದೂ, ಹೆಚ್ಚು ದುರ್ಗುಣವಿರುವುದನ್ನು ದುಷ್ಟವೆಂದೂ ಕರೆಯುತ್ತಾರೆ. ಆದುದರಿಂದ ಮನುಷ್ಯನು ಮಾಡುವ ಎಲ್ಲ ಕಾರ್ಯಗಳಲ್ಲಿಯೂ ಕೆಟ್ಟುದು ಅಥವಾ ಒಳ್ಳೆಯದು–ಈ ಎರಡೂ ಇದ್ದೇ ಇರುತ್ತವೆ. (ಮನುಷ್ಯನು ಮಾಡುವ ಕಾರ್ಯದಲ್ಲಿ ಹೆಚ್ಚುಭಾಗ ಒಳ್ಳೆಯದಿದ್ದರೆ ಜನರು ಅವನನ್ನು ಒಳ್ಳೆಯ ಕಾರ್ಯವನ್ನು ಮಾಡಿದನು–ಎನ್ನುತ್ತಾರೆ. ಹೆಚ್ಚುಭಾಗ ಕೆಟ್ಟುದಿದ್ದರೆ ಜನರು ಅವನನ್ನು ಕೆಟ್ಟಕಾರ್ಯವನ್ನು ಮಾಡಿದನು–ಎನ್ನುತ್ತಾರೆ. ಇಷ್ಟು ಹೊರತಾಗಿ ಮನುಷ್ಯನು ಮಾಡುವ ಕಾರ್ಯಗಳೆಲ್ಲವೂ ಸಂಪೂರ್ಣವಾಗಿ ಒಳ್ಳೆಯವೇ ಆಗಿರುವುದಿಲ್ಲ. ಅಥವಾ ಕೆಟ್ಟುವೂ ಆಗಿರುವುದಿಲ್ಲ. **ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥** ಎಂಬ ಗೀತಾವಚನದಂತೆ ಬೆಂಕಿಯು ಹೊಗೆಯಿಂದ ಆವೃತವಾಗಿರುವಂತೆ ಎಲ್ಲ ಕರ್ಮಗಳೂ ಅಲ್ಪಸ್ವಲ್ಪ ದೋಷದಿಂದ ಯುಕ್ತವಾಗಿಯೇ ಇರುತ್ತವೆ. )

**ಪಶೂನಾಂ ವೃಷಣಂ ಛಿತ್ವಾ ತತೋ ಭಿನ್ದನ್ತಿ ಮಸ್ತಕಮ್ ।**
**ವಹನ್ತಿ ಬಹವೋ ಭಾರಾನ್ಬಧ್ನನ್ತಿ ದಮಯನ್ತಿ ಚ ॥೫೧॥**

(ದಂಡಿಸುವುದರಿಂದ ಆಗುವ ಉಪಯೋಗವನ್ನು ಅರ್ಜುನನು ಈ ಶ್ಲೋಕದಲ್ಲಿ ಹೋರಿಗಳ ಉದಾಹರಣೆಯೊಡನೆ ಹೇಳುತ್ತಾನೆ.) ಜನರು ಮೊದಲು ಹೋರಿಯ ಬೀಜವನ್ನು ಒಡೆಯುತ್ತಾರೆ. ಅನಂತರ ಹೆಚ್ಚು ಬೆಳೆಯದಂತೆ ಅವುಗಳ ಕೊಂಬುಗಳನ್ನು ಕತ್ತರಿಸುತ್ತಾರೆ. ನಾಲ್ಕು ಕಾಲುಗಳಿಗೂ ಹಗ್ಗವನ್ನು ಬಿಗಿದು ಬಂಧಿಸುತ್ತಾರೆ. ಹೀಗೆ ಅದರ ಪೊಗರನ್ನು ದಮನಮಾಡುತ್ತಾರೆ. ಹೀಗೆ ಮಾಡಿದುದರ ಪರಿಣಾಮವೇನೆಂದರೆ ಆ ಹೋರಿಗಳು ಮನುಷ್ಯನಿಗೆ ಅಧೀನವಾಗಿ ಎಷ್ಟೇ ಭಾರಹೊರಿಸಿದರೂ ಜಗ್ಗದೇ ಹೊರಲೂ ಅಥವಾ ಮಹಾಭಾರವಿರುವ ಗಾಡಿಯನ್ನು ಎಳೆಯಲೂ ಅನುವಾಗುತ್ತವೆ.

ಲೋಕವು ಮಿಥ್ಯಾವ್ಯವಹಾರಗಳಿಂದ ಪರ್ಯಾಕುಲವಾಗಿರಲಾಗಿ ಮತ್ತು ಜೀರ್ಣವಾಗುತ್ತಿರಲಾಗಿ, ತತ್ತತ್ಸಂಬಂಧವಾದ ನ್ಯಾಯಗಳಿಂದ ದಂಡನೀತಿಯ ಮೂಲಕವಾಗಿ ರಾಜ್ಯವನ್ನು ಪರಿಪಾಲಿಸುತ್ತಾ ಸನಾತನಧರ್ಮವನ್ನು ಪರಿಪಾಲಿಸು.

ಕೌಂತೇಯ! ಯಜ್ಞಗಳನ್ನು ಮಾಡು ; ದಾನಮಾಡು ; ಪ್ರಜೆಗಳನ್ನು ರಕ್ಷಿಸು ; ನಿರಂತರವಾಗಿ ಧರ್ಮವನ್ನು ಪಾಲಿಸು ; ಶತ್ರುಗಳನ್ನು ಜಯಿಸಿ ಮಿತ್ರರನ್ನು ಕಾಪಾಡು.

**ಮಾ ಚ ತೇ ನಿಘ್ನತಃ ಶತ್ರೂನ್ಮನ್ಯುರ್ಭವತು ಪಾರ್ಥಿವ ।**
**ನ ತತ್ರ ಕಿಲ್ಬಿಷಂ ಕಿಂಚಿತ್ಕರ್ತುರ್ಭವತಿ ಭಾರತ ॥೫೪॥**

ಮಹಾರಾಜ! ಶತ್ರುಗಳನ್ನು ಸಂಹರಿಸುತ್ತಿರುವಾಗ ನಿನಗೆ ದೀನತೆಯು ಉಂಟಾಗದಿರಲಿ. ಶತ್ರುಗಳ ವಧೆಮಾಡುವುದರಿಂದ ಶತ್ರುವಿನಾಶಕನಾದ ರಾಜನಿಗೆ ಸ್ವಲ್ಪವಾದರೂ ಪಾಪಸಂಘಟನೆಯಾಗುವುದಿಲ್ಲ.

**ಆತತಾಯೀ ಹಿ ಯೋ ಹನ್ಯಾದಾತತಾಯಿನಮಾಗತಮ್ ।**
**ನ ತೇನ ಭ್ರೂಣಹಾ ಸ ಸ್ಯಾನ್ಮನ್ಯುಸ್ತಂ ಮನ್ಯುಮಾರ್ಛತಿ ॥೫೫॥**

ಶಸ್ತ್ರವನ್ನು ಹಿಡಿದು ಕೊಲ್ಲಲು ಬರುವವನನ್ನು ಎದುರಿಸಿ ಶಸ್ತ್ರವನ್ನು

ಹಿಡಿದವನು ಕೊಲ್ಲಲೇಬೇಕು. ಅದರಿಂದ ಅವನು ಭ್ರೂಣಹತ್ಯೆಯನ್ನು ಮಾಡಿದಂತಾಗುವುದಿಲ್ಲ. (ಭ್ರೂಣಹತ್ಯೆಯನ್ನು ಮಾಡಿದುದರಿಂದ ಲಭ್ಯವಾಗುವ ಪಾಪಕ್ಕೆ ಅವನು ಭಾಗಿಯಾಗುವುದಿಲ್ಲ.) ಏಕೆಂದರೆ : ಅವನಲ್ಲಿರುವ ಕೋಪವು ಕೊಲ್ಲಲು ಬರುವವನ ಕೋಪವನ್ನು ಎದುರಿಸುತ್ತದೆ. (**ಮನ್ಯುಃ ಕರ್ತಾ ನಾಹಂ ಕರ್ತಾ ಮನ್ಯುಃ ಕಾರಯಿತಾ ನಾಹಂ ಕಾರಯಿತಾ ।** ಎಂಬ ಶ್ರುತಿವಚನದಂತೆ ಅಂತಹ ಸಮಯಗಳಲ್ಲಿ ಇಬ್ಬರ ಕೋಪವೂ ತಮಗೆ ಆಶ್ರಯವಿತ್ತವರ ವಿರೋಧಿಗಳ ವಿನಾಶದಲ್ಲಿ ಪರ್ಯವಸಾನವಾಗುತ್ತದೆ.)

**ಅವಧ್ಯಃ ಸರ್ವಭೂತಾನಾಮನ್ತರಾತ್ಮಾ ನ ಸಂಶಯಃ ।**
**ಅವಧ್ಯೇ ಚಾತ್ಮನಿ ಕಥಂ ವಧ್ಯೋ ಭವತಿ ಕಸ್ಯಚಿತ್ ॥೫೬॥**

ಎಲ್ಲ ಪ್ರಾಣಿಗಳಲ್ಲಿಯೂ ಇರುವ ಅಂತರಾತ್ಮನು ಅವಧ್ಯನೆಂಬುದರಲ್ಲಿ ಸಂಶಯವೇ ಇಲ್ಲ. ಆತ್ಮನು ಅವಧ್ಯನಾಗಿರಲಾಗಿ ಒಬ್ಬನು ಮತ್ತೊಬ್ಬನನ್ನು ಕೊಲ್ಲುವನೆಂಬುದು ಹೇಗೆ ಸಮಂಜಸವಾಗುತ್ತದೆ?

**ಯಥಾ ಹಿ ಪುರುಷಃ ಶಾಲಾಂ ಪುನಃ ಸಂಪ್ರವಿಶೇನ್ನವಾಮ್ ।**
**ಏವಂ ಜೀವಃ ಶರೀರಾಣಿ ತಾನಿ ತಾನಿ ಪ್ರಪದ್ಯತೇ ॥೫೭॥**

**ದೇಹಾನ್ಪುರಾಣಾನುತ್ಸೃಜ್ಯ ನವಾನ್ಸಂಪ್ರತಿಪದ್ಯತೇ ।**
**ಏವಂ ಮೃತ್ಯುಮುಖಂ ಪ್ರಾಹುರ್ಜನಾ ಯೇ ತತ್ತ್ವದರ್ಶಿನಃ ॥೫೮॥**

ಯಾವ ರೀತಿಯಲ್ಲಿ ಮನುಷ್ಯನು ಹೊಸ-ಹೊಸ ಮನೆಗಳಿಗೆ ವಾಸಕ್ಕೆ ಹೋಗುತ್ತಾನೆಯೇ–ಅದೇ ರೀತಿಯಲ್ಲಿ ನಮ್ಮಲ್ಲಿರುವ ಜೀವವೂ ಹೊಸ-ಹೊಸ ಶರೀರಗಳನ್ನು ಹೊಂದುತ್ತಲೇ ಇರುತ್ತದೆ. ಹಳೆಯ ಮತ್ತು ಜೀರ್ಣವಾಗಿಹೋದ ಶರೀರವನ್ನು ವಿಸರ್ಜಿಸಿ ಹೊಸ ಶರೀರಗಳನ್ನು ಹೊಂದುತ್ತದೆ. ತತ್ತ್ವದರ್ಶಿಗಳಾದ ಜನರು ಇದನ್ನೇ ಮೃತ್ಯುವಿನ ಮುಖವೆಂದೂ (ಮರಣವೆಂದೂ) ಹೇಳುತ್ತಾರೆ."

೧೫ನೆಯ ಅಧ್ಯಾಯವು ಮುಗಿಯಿತು.

## ಭೀಮಸೇನನು ಧರ್ಮರಾಜನಿಗೆ ತಾವು ಹಿಂದೆ ಅನುಭವಿಸಿದ ದುಃಖಗಳನ್ನು ಸ್ಮರಣೆಮಾಡಿಕೊಡುತ್ತಾ, ಮೋಹವನ್ನು ತ್ಯಜಿಸಿ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ರಾಜ್ಯಶಾಸನ ಮಾಡುವಂತೆಯೂ, ಯಜ್ಞಮಾಡುವಂತೆಯೂ ಸಲಹೆ ನೀಡಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಮಹಾರಾಜ! ಅರ್ಜುನನು ಯುಧಿಷ್ಠಿರನಿಗೆ ಹೇಳಿದ ಮಾತನ್ನು ಕೇಳಿ (ಮತ್ತು ಅದಕ್ಕೆ ಧರ್ಮಜನ ಯಾವ ವಿಧವಾದ ಪ್ರತಿಕ್ರಿಯೆಯೂ ಇಲ್ಲದಿರುವುದನ್ನು ನೋಡಿ ) ಅಸಹನಶೀಲನಾದ ಭೀಮಸೇನನು ಧೈರ್ಯವನ್ನು ತಂದುಕೊಂಡು ಜ್ಯೇಷ್ಠಭ್ರಾತೃವಾದ ಯುಧಿಷ್ಠಿರನೊಡನೆ ಹೇಳಿದನು :

"ಮಹಾರಾಜ! ನೀನು ಎಲ್ಲ ಧರ್ಮಗಳನ್ನೂ ತಿಳಿದವನಾಗಿರುವೆ. ನಿನಗೆ ತಿಳಿಯದೇ ಇರುವುದು ಯಾವುದೂ ಇಲ್ಲ. ನಿನ್ನಿಂದಲೇ ನಾವು ಯಾವಾಗಲೂ ಸದಾಚಾರ, ಸದ್ವ್ಯವಹಾರ, ಧರ್ಮ, ನ್ಯಾಯ–ಮುಂತಾದ ವಿಷಯದಲ್ಲಿ ಉಪದೇಶವನ್ನು ಪಡೆಯುತ್ತಲೇ ಇರುತ್ತೇವೆ. ಆದರೂ ನಿನ್ನಂತೆ ನಡೆಯಲು ಶಕ್ತರಾಗಿಲ್ಲ. ಆದುದರಿಂದ ನಿನ್ನಂತಹವನಿಗೆ ವಿವೇಕವನ್ನು ಹೇಳಲು ನಾವು ಖಂಡಿತವಾಗಿಯೂ ಸಮರ್ಥರಲ್ಲ. 'ನ ವಕ್ಷ್ಯಾಮಿ–ನ ವಕ್ಷ್ಯಾಮಿ' 'ಈ ಸಮಯದಲ್ಲಿ ಯಾವ ವಿಷಯವನ್ನೂ ಹೇಳುವುದಿಲ್ಲ. ಯಾವ ಮಾತನ್ನೂ ಆಡುವುದಿಲ್ಲ. ಯಾವ ಮಾತನ್ನೂ ಆಡಬಾರದೆಂದೇ ನಿಶ್ಚಯಿಸಿದ್ದೆನು.' ಆದರೆ ನಮ್ಮ ಸೋದರರೂ ಮತ್ತು ದ್ರೌಪದಿಯೂ ತತ್ಕಾಲೋಚಿತವಾದ ಮಾತುಗಳನ್ನು ಹೇಳಿದರೂ ನಿನ್ನ ಮನಸ್ಸು ಸ್ವಲ್ಪವಾದರೂ ಚಲಿಸದೇ ಇರುವುದನ್ನು ಕಂಡು ಅತಿದುಃಖದಿಂದ ಈಗ ಮಾತನಾಡಲು ಹೊರಟಿದ್ದೇನೆ. ಜನೇಶ್ವರ! ನಾನು ಹೇಳಲಿರುವುದನ್ನು ಮನಸ್ಸಿಟ್ಟು ಕೇಳು. ನಿನ್ನ ಈ ಅತಿಯಾದ ಮೋಹಪರವಶತೆಯಿಂದಾಗಿ ನಮ್ಮ ವ್ಯವಹಾರಗಳೆಲ್ಲವೂ ಸಂದೇಹಯುಕ್ತವಾಗಿವೆ. ನಮ್ಮ ಮನಸ್ಸಿನಲ್ಲಿ ಅಪಾರವಾದ ವ್ಯಾಕುಲತೆಯುಂಟಾಗಿದೆ ಮತ್ತು ದುರ್ಬಲತೆಯೂ ಉಂಟಾಗಿದೆ. ಸರ್ವಶಾಸ್ತ್ರವಿಶಾರದನಾಗಿ, ಜಗತ್ತಿಗೇ ರಾಜನಾಗಿರುವ ನೀನು ಹೇಡಿಯಂತೆ

(ಅಲ್ಪನಂತೆ) ದೈನ್ಯದಿಂದ ಏಕೆ ಮೋಹಪರವಶನಾಗಿರುವೆ? ನಿನಗೆ ಪ್ರಪಂಚದಲ್ಲಿ ದುರ್ಮಾರ್ಗವು ಯಾವುದೆಂಬುದು ತಿಳಿದಿದೆ. ಸನ್ಮಾರ್ಗವು ಯಾವುದೆಂಬುದೂ ತಿಳಿದಿದೆ. ಹಿಂದೆ ನಡೆದುದು ಇಂದು ನಡೆಯುತ್ತಿರುವುದು ಇವುಗಳಲ್ಲಿ ನಿನಗೆ ತಿಳಿಯದಿರುವ ವಿಷಯವೇ ಯಾವುದೂ ಇರುವುದಿಲ್ಲ. ಹೀಗಿರುವಾಗ ರಾಜ್ಯಭಾರವನ್ನು ವಹಿಸಿಕೊಳ್ಳುವಂತೆ ನಿನ್ನನ್ನು ನಾವು ಏಕೆ ಒತ್ತಾಯಿಸುತ್ತಿದ್ದೇವೆಂಬುದಕ್ಕೆ ಕಾರಣವನ್ನು ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು :

**ದ್ವಿವಿಧೋ ಜಾಯತೇ ವ್ಯಾಧಿಃ ಶಾರೀರೋ ಮಾನಸಸ್ತಥಾ ।**
**ಪರಸ್ಪರಂ ತಯೋರ್ಜನ್ಮ ನಿರ್ದ್ವನ್ದ್ವಂ ನೋಪಲಭ್ಯತೇ ॥೮॥**

ಶರೀರಸಂಬಂಧವಾದುದು ; ಮಾನಸಿಕವಾದುದು–ಎಂಬುದಾಗಿ ಎರಡು ವಿಧವಾದ ವ್ಯಾಧಿಗಳು ಮನುಷ್ಯನಲ್ಲಿ ಹುಟ್ಟಿಕೊಳ್ಳುತ್ತವೆ. ಆದರೆ ಒಂದನ್ನಾಶ್ರಯಿಸಿ ಇನ್ನೊಂದು ಹುಟ್ಟಿಕೊಳ್ಳುತ್ತದೆ. (ಮಾನಸಿಕವ್ಯಾಧಿಯಿಂದ ಶರೀರದ ವ್ಯಾಧಿಯು ಹುಟ್ಟಿಕೊಳ್ಳುತ್ತದೆ. ಶಾರೀರಿಕವ್ಯಾಧಿಯಿಂದ ಮಾನಸಿಕ ವ್ಯಾಧಿಯು ಹುಟ್ಟಿಕೊಳ್ಳುತ್ತದೆ. ಆದರೆ ಒಂದು ಹುಟ್ಟದೇ ಎರಡನೆಯದು ಹುಟ್ಟಲಾರದು.)

**ಶಾರೀರಾಜ್ಜಾಯತೇ ವ್ಯಾಧಿರ್ಮಾನಸೋ ನಾತ್ರ ಸಂಶಯಃ ।**
**ಮಾನಸಾಜ್ಜಾಯತೇ ವಾಪಿ ಶಾರೀರ ಇತಿ ನಿಶ್ಚಯಃ ॥೯॥**

ಮೊದಲು ಶಾರೀರಿಕವ್ಯಾಧಿಯು ಹುಟ್ಟಿ ಅನಂತರ ಆ ಶಾರೀರಿಕವ್ಯಾಧಿಯಿಂದಲೇ ಮಾನಸಿಕವ್ಯಾಧಿಯು ಹುಟ್ಟಿಕೊಳ್ಳುತ್ತದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಮೊದಲು ಮಾನಸಿಕವಾದ ವ್ಯಾಧಿಯು ಹುಟ್ಟಿ ಅನಂತರ ಆ ಮಾನಸಿಕವ್ಯಾಧಿಯಿಂದಲೇ ಶಾರೀರಿಕವ್ಯಾಧಿಯೂ ಹುಟ್ಟಿಕೊಳ್ಳುತ್ತದೆ. ಇದೂ ನಿಶ್ಚಯ.

**ಶಾರೀರಂ ಮಾನಸಂ ದುಃಖಂ ಯೋಽತೀತಮನುಶೋಚತಿ ।**
**ದುಃಖೇನ ಲಭತೇ ದುಃಖಂ ದ್ವಾವನರ್ಥೌ ಚ ವಿನ್ದತಿ ॥೧೦॥**

ಕಳೆದುಹೋದ ಶಾರೀರ ಮತ್ತು ಮಾನಸಿಕದುಃಖಗಳನ್ನು ಜ್ಞಾಪಿಸಿಕೊಂಡು ಯಾರು ಶೋಕಪಡುತ್ತಾರೆಯೋ–ಅವರು ದುಃಖದಿಂದ

ಮತ್ತೊಂದು ದುಃಖವನ್ನು ಪಡೆದುಕೊಳ್ಳುವರೇ ಹೊರತು ದುಃಖದ ಉಪಶಮನವೆಂದಿಗೂ ಆಗುವುದೇ ಇಲ್ಲ. ಅಂತಹವರು ಎರಡು ವಿಧವಾದ ಅನರ್ಥಗಳಿಗೂ ಭಾಗಿಗಳಾಗುತ್ತಾರೆ.

**ಶೀತೋಷ್ಣೇ ಚೈವ ವಾಯುಶ್ಚ ತ್ರಯಃ ಶಾರೀರಜಾ ಗುಣಾಃ ।**
**ತೇಷಾಂ ಗುಣಾನಾಂ ಸಾಮ್ಯಂ ಯತ್ತದಾಹುಃ ಸ್ವಸ್ಥಲಕ್ಷಣಮ್ ॥೧೧॥**

ಕಫ-ಪಿತ್ತಗಳು ಮತ್ತು ವಾತ–ಈ ಮೂರೂ ಶರೀರದಲ್ಲಿ ಹುಟ್ಟಿಕೊಂಡಿರುವ ಗುಣಗಳು. ಎಲ್ಲರ ಶರೀರಗಳೂ ಈ ತ್ರಿಗುಣಗಳಿಂದ ಕೂಡಿಯೇ ಇರುತ್ತವೆ. ಒಬ್ಬನ ಶರೀರದಲ್ಲಿ ಈ ಮೂರು ಗುಣಗಳ ಸಮತೆಯು ಆರೋಗ್ಯದ ಲಕ್ಷಣವೆಂದು ತಿಳಿದವರು ಹೇಳುತ್ತಾರೆ.

**ತೇಷಾಮನ್ಯತಮೋದ್ರೇಕೇ ವಿಧಾನಮುಪದಿಶ್ಯತೇ ।**
**ಉಷ್ಣೇನ ಬಾಧ್ಯತೇ ಶೀತಂ ಶೀತೇನೋಷ್ಣಂ ಪ್ರಬಾಧ್ಯತೇ ॥೧೨॥**

ಈ ಮೂರರಲ್ಲಿ ಯಾವುದಾದರೊಂದು ಗುಣವು ಉದ್ರಿಕ್ತವಾದರೆ ಅದಕ್ಕೆ ಚಿಕಿತ್ಸೆಯನ್ನು ಹೀಗೆ ಹೇಳಿದೆ : ಪಿತ್ತವನ್ನು ( ಉಷ್ಣವನ್ನು ) ಉತ್ಪತ್ತಿ ಮಾಡುವ ದ್ರವ್ಯದಿಂದ ( ಔಷಧಿಯಿಂದ ) ಶೀತವೂ, ಕಫವನ್ನು ( ಶೀತವನ್ನು ) ಉತ್ಪತ್ತಿಮಾಡುವ ದ್ರವ್ಯದಿಂದ ( ಔಷಧಿಯಿಂದ ) ಉಷ್ಣವೂ ಪರಿಹಾರವಾಗಿ ಪುನಃ ಮೂರು ಗುಣಗಳೂ ಸಮಸ್ಥಿತಿಗೆ ಬರುತ್ತವೆ.

**ಸತ್ತ್ವಂ ರಜಸ್ತಮ ಇತಿ ಮಾನಸಾಃ ಸ್ಯುಸ್ತ್ರಯೋ ಗುಣಾಃ ।**
**ತೇಷಾಂ ಗುಣಾನಾಂ ಸಾಮ್ಯಂ ಯತ್ತದಾಹುಃ ಸ್ವಸ್ಥಲಕ್ಷಣಮ್ ॥೧೩॥**

ಸತ್ತ್ವ, ರಜಸ್ಸು ಮತ್ತು ತಮಸ್ಸೆಂಬ ಮೂರು ಗುಣಗಳು ಮಾನಸಿಕವಾದುವುಗಳು. ಈ ಮೂರು ಗುಣಗಳ ಸಮತೆಯು ಮನಸ್ಸಿನಲ್ಲಿದ್ದರೆ ಅದು ಮನಸ್ಸಿನ ಸ್ವಾಸ್ಥ್ಯದ ಲಕ್ಷಣವೆಂದು ವಿದ್ವಾಂಸರು ಹೇಳುತ್ತಾರೆ.

**ತೇಷಾಮನ್ಯತಮೋತ್ಸೇಕೇ ವಿಧಾನಮುಪದಿಶ್ಯತೇ ।**
**ಹರ್ಷೇಣ ಬಾಧ್ಯತೇ ಶೋಕೋ ಹರ್ಷಃ ಶೋಕೇನ ಬಾಧ್ಯತೇ ॥೧೪॥**

ಮಾನಸಿಕವಾದ ಈ ಮೂರು ಗುಣಗಳಲ್ಲಿ ಯಾವುದಾದರೊಂದು ಗುಣವು ಉದ್ರೇಕಗೊಂಡರೆ ಅದಕ್ಕೆ ಈ ಚಿಕಿತ್ಸೆಯನ್ನು ಹೇಳಿದ್ದಾರೆ :

ರಜೋಗುಣರೂಪದ ಶೋಕವೇನಾದರೂ ಉದ್ರಿಕ್ತವಾದರೆ ಅದು ಸತ್ತ್ವಗುಣ ರೂಪವಾದ ಹರ್ಷದಿಂದ ಉಪಶಮನವಾಗುತ್ತದೆ. ಸತ್ತ್ವಗುಣರೂಪದ ಹರ್ಷವೇನಾದರೂ ಉದ್ರಿಕ್ತವಾದರೆ ಅದು ರಜೋಗುಣರೂಪದ ಶೋಕ ದಿಂದ ಉಪಶಮನಗೊಳ್ಳುತ್ತದೆ.

**ಕಶ್ಚಿತ್ಸುಖೇ ವರ್ತಮಾನೋ ದುಃಖಸ್ಯ ಸ್ಮರ್ತುಮಿಚ್ಛತಿ ।**
**ಕಶ್ಚಿದ್ದುಃಖೇ ವರ್ತಮಾನಃ ಸುಖಸ್ಯ ಸ್ಮರ್ತುಮಿಚ್ಛತಿ ॥೧೫॥**

ಈ ಕಾರಣದಿಂದಲೇ ಅತ್ಯಂತಸುಖದಲ್ಲಿರುವವನೊಬ್ಬನು ತಾನು ಹಿಂದೆ ಅನುಭವಿಸಿದ ದುಃಖದ ದಿನಗಳನ್ನು ಸ್ಮರಿಸಿಕೊಳ್ಳಲು ಇಚ್ಛಿಪಡುತ್ತಾನೆ. ಅಂತೆಯೇ ಅತ್ಯಂತದುಃಖದಲ್ಲಿರುವವನು ತಾನು ಹಿಂದೆ ಅನುಭವಿಸಿದ ಸುಖದ ದಿನಗಳನ್ನು ಸ್ಮರಿಸಿಕೊಳ್ಳಲು ಇಚ್ಛಿಸುತ್ತಾನೆ.

ಆದರೆ ನೀನು ಮಾತ್ರ ದುಃಖಿಯಾಗಿದ್ದುಕೊಂಡು ದುಃಖದ ದಿವಸ ಗಳನ್ನೂ ಸ್ಮರಿಸಿಕೊಳ್ಳುತ್ತಿಲ್ಲ ; ಸುಖಿಯಾಗಿದ್ದುಕೊಂಡು ಸುಖದ ದಿವಸ ಗಳನ್ನೂ ಸ್ಮರಿಸುತ್ತಿಲ್ಲ ಅಥವಾ ದುಃಖಿಯಾಗಿರುವಾಗ ಸುಖವಾಗಿದ್ದಾಗಿನ ಪರಿಸ್ಥಿತಿಯನ್ನೂ ಸ್ಮರಿಸಿಕೊಳ್ಳುವುದಿಲ್ಲ ; ಸುಖವಾಗಿರುವಾಗ ದುಃಖದಿಂದಿ ದ್ದಾಗಿನ ಪರಿಸ್ಥಿತಿಯನ್ನೂ ಸ್ಮರಿಸಿಕೊಳ್ಳುವುದಿಲ್ಲ. ಇದಕ್ಕೆ ಕಾರಣವು ದೈವವು ಬಲವತ್ತರವಾಗಿರುವುದೇ ಆಗಿದೆ ಅಥವಾ ದುಃಖದ ಸಮಯದಲ್ಲಾ ಗಲೀ–ಸುಖದ ಸಮಯದಲ್ಲಾಗಲೀ ಕ್ಲೇಶಪಡುವುದೇ ನಿನ್ನ ಸ್ವಭಾವವಾಗಿರ ಬಹುದು. ಆದುದರಿಂದಲೇ ನೀನು ಸಂತೋಷಪಡಬೇಕಾಗಿರುವ ಈ ಸಮಯದಲ್ಲಿಯೂ ಕ್ಲೇಶಪಡುತ್ತಿರುವೆ. ವಾಸ್ತವವಾಗಿ ನೀನೀಗ ಅತ್ಯಂತ ಸಂತೋಷಪಡಬೇಕಾದ ಕಾಲವಾಗಿದೆ. ಮನಸ್ಸಿನಲ್ಲುಂಟಾಗುವ ಸತ್ತ್ವ-ರಜಸ್ಸುಗಳ ಸಮತೋಲನಕ್ಕಾಗಿ ನೀನೀಗ ಹಿಂದೆ ನಾವು ಅನುಭವಿಸಿದ ದುಃಖವನ್ನು ಸ್ಮರಿಸುವುದು ಯುಕ್ತವಾಗಿದೆ. ಆದರೆ ನೀನು ಹಾಗೆ ಮಾಡು ತ್ತಿಲ್ಲ. ಪಾಂಡುವಿನ ಐವರು ಮಕ್ಕಳೂ ನೋಡುತ್ತಿದ್ದಂತೆಯೇ ಏಕವಸ್ತ್ರಧರ ಳಾಗಿದ್ದ, ರಜಸ್ವಲೆಯಾಗಿದ್ದ ದ್ರೌಪದಿಯನ್ನು ಕೌರವರ ಸಭೆಗೆ ಸೆಳೆದು ತಂದರು. ಆ ದೃಶ್ಯವನ್ನು ನೀನು ಪ್ರತ್ಯಕ್ಷವಾಗಿಯೇ ನೋಡಿರುವೆ. ಅಂತಹ

ಅತಿದುಃಖಕರವಾದ ಘಟನೆಯನ್ನೂ ನೀನೀಗ ಸ್ಮರಿಸಿಕೊಳ್ಳುತ್ತಿಲ್ಲ. ನಿರಪ ರಾಧಿಗಳಾದ ನಮ್ಮನ್ನು ಹಸ್ತಿನಾಪಟ್ಟಣದಿಂದಲೇ ಹೊರಕ್ಕಟ್ಟಿದರು. ನಾವೆಲ್ಲರೂ ಕೃಷ್ಣಾಜಿನವನ್ನೇ ಧರಿಸಿ ಅರಣ್ಯಕ್ಕೆ ಹೊರಟೆವು. ಹನ್ನೆರಡು ವರ್ಷಗಳನ್ನು ಮಹಾರಣ್ಯದಲ್ಲಿ ಅತಿದುಃಖದಿಂದ ಕಳೆದೆವು. ಅಂತಹ ದುಃಖವನ್ನೂ ನೀನೀಗ ಜ್ಞಾಪಿಸಿಕೊಳ್ಳುತ್ತಿಲ್ಲ.

ಜಟಾಸುರನಿಂದ ನಾವು ಅನುಭವಿಸಿದ ಕ್ಲೇಶ, ಶತ್ರುವಾದ ದುರ್ಯೋಧನನ ಸಲುವಾಗಿ ಚಿತ್ರಸೇನಗಂಧರ್ವನೊಡನೆ ನಾವು ಮಾಡಿದ ಯುದ್ಧ, ಆಶ್ರಮದಲ್ಲಿದ್ದ ದ್ರೌಪದಿಯನ್ನು ಸೈಂಧವನು ಅಪಹರಿಸಿಕೊಂಡು ಹೋದುದು ಮತ್ತು ಅದರಿಂದ ನಮ್ಮೆಲ್ಲರಿಗೂ ಉಂಟಾದ ಕ್ಲೇಶ–ಈ ಸಂದರ್ಭಗಳೆಲ್ಲವನ್ನೂ ನೀನು ಹೇಗೆ ಮರೆತಿರುವೆ? ಪುನಃ ಅಜ್ಞಾತವಾಸದ ಸಮಯದಲ್ಲಿ ರಾಜಪುತ್ರಿಯಾದ ದ್ರೌಪದಿಯನ್ನು ಕೀಚಕನು ನಿನ್ನ ಸಮ್ಮುಖದಲ್ಲಿಯೇ ಕಾಲಿನಿಂದ ಒದೆದನು. ಅಂತಹ ದಾರುಣದೃಶ್ಯವನ್ನಾದರೂ ನೀನು ಹೇಗೆ ಮರೆತೆ? ನಿನ್ನ ಸ್ಮೃತಿಪಥದಿಂದ ಆ ದೃಶ್ಯವು ಹೇಗೆ ಚ್ಯುತವಾಯಿತು? ಅರಿಂದಮನೇ! ದ್ರೋಣ-ಭೀಷ್ಮರೊಡನೆ ನೀನು ಯಾವ ಯುದ್ಧವನ್ನು ಮಾಡಿದೆಯೋ, ಅಂತಹುದೇ ಯುದ್ಧವನ್ನು ನೀನೀಗ ನಿನ್ನ ಮನಸ್ಸಿನೊಡನೆಯೇ ಮಾಡಬೇಕಾಗಿದೆ. ಹಾಗೆ ಮನಸ್ಸಿನೊಡನೆ ಯುದ್ಧಮಾಡಬೇಕಾದ ಸಂದರ್ಭವು ಈಗ ಒದಗಿಬಂದಿದೆ. ಈ ಸಂದರ್ಭದಲ್ಲಿ ನೀನು ಮಾಡಲಿರುವ ಯುದ್ಧಕ್ಕೆ ಬಾಣಗಳಿಂದೇನೂ ಪ್ರಯೋಜನವಾಗುವುದಿಲ್ಲ. ಮಿತ್ರರಿಂದಾಗಲೀ, ಬಂಧುಗಳಿಂದಾಗಲೀ ಯಾವ ಪ್ರಯೋಜನವೂ ಇಲ್ಲ. ಮನಸ್ಸಿ ನೊಡನೆ ಮಾಡುವ ಯುದ್ಧದಲ್ಲಿ ಬಾಣಗಳಾಗಲೀ, ಬಂಧು-ಮಿತ್ರರಾಗಲೀ ಯಾವ ಕಾರ್ಯವನ್ನೂ ಮಾಡಲಾರವು. ನೀನೊಬ್ಬನೇ ಏಕಾಕಿಯಾಗಿ ನಿನ್ನ ಮನಸ್ಸಿನೊಡನೆ ಯುದ್ಧಮಾಡಬೇಕಾಗಿದೆ. ಅಂತಹ ಯುದ್ಧವೀಗ ಸನ್ನಿಹಿತವಾಗಿದೆ. ನಿನ್ನ ಮನಸ್ಸಿನೊಡನೆ ಏಕಾಕಿಯಾಗಿ ಮಾಡುವ ಈ ಯುದ್ಧದಲ್ಲಿ ನೀನು ಜಯಗಳಿಸದೇ ಪ್ರಾಣಗಳನ್ನು ಪರಿತ್ಯಾಗಮಾಡಿದರೆ ಮತ್ತೊಂದು ದೇಹವನ್ನಾದರೂ ಧರಿಸಿ ಪುನಃ ನೀನು ನಿನ್ನ ಶತ್ರುಗಳೊಡನೆಯೇ ಯುದ್ಧಮಾಡಬೇಕಾಗುತ್ತದೆ. ಆದುದರಿಂದ ನೀನೀಗಲೇ ಯಮ-ನಿಯಮಗಳೇ ಮೊದಲಾದ ಅಷ್ಟಾಂಗಮಾರ್ಗಗಳಿಂದ–ವ್ಯಕ್ತವಾದ ಸ್ಥೂಲಶರೀರವನ್ನು

ಬಿಟ್ಟು–ಅವ್ಯಕ್ತವಾಗಿರುವ ಮನಸ್ಸಿನ ಶತ್ರುಭೂತವಾದ ಅಭೇದಭಾವವನ್ನು ಹೊಂದಬೇಕು. ಆದುದರಿಂದ ಮನಸ್ಸಿನೊಡನೆ ಯುದ್ಧಕ್ಕೆ ಸಿದ್ಧನಾಗು. (ಮನಸ್ಸನ್ನು ಜಯಿಸು.) ತಾರ್ಕಿಕವಾಗಿ ವಿಷಯಗಳೆಲ್ಲವನ್ನೂ ವಿಮರ್ಶಿಸುವ ಬುದ್ಧಿಯ ಮೂಲಕವಾಗಿ ನಿನ್ನ ಮನಸ್ಸಿನೊಡನೆ ಈಗಲೇ ಯುದ್ಧಮಾಡು. ನೀನು ಈ ಯುದ್ಧದಲ್ಲಿ ನಿನ್ನ ಮನಸ್ಸನ್ನೇನಾದರೂ ಪರಾಜಯಗೊಳಿಸದಿದ್ದರೆ ನಿನಗೆ ಎಂತಹ ಅವಸ್ಥೆಯು ಪ್ರಾಪ್ತವಾಗುವುದೆಂಬುದನ್ನೇ ಹೇಳಲಾಗುವುದಿಲ್ಲ. ಶೋಕಪರೀತವಾಗಿರುವ ನಿನ್ನ ಈಗಿನ ಮನಸ್ಸನ್ನು ಜಯಿಸಿದ್ದೇ ಆದರೆ ನೀನು ಕೃತಕೃತ್ಯನಾಗುವೆ. 'ಪ್ರಾಣಿಗಳೆಲ್ಲವೂ ಹುಟ್ಟುತ್ತಿರುತ್ತವೆ ಮತ್ತು ಸಾಯುತ್ತಿರುತ್ತವೆ; ಜೀವವು ಎಂದಿಗೂ ವಿನಾಶವಾಗುವುದಿಲ್ಲ. ಮಾನವನು ಹೊಸ ಮನೆಯನ್ನು ಪ್ರವೇಶಿಸುವಂತೆ ಪ್ರಾಣಿಗಳು ಕರ್ಮಾನುಸಾರವಾಗಿ ಹೊಸ-ಹೊಸ ಶರೀರಗಳನ್ನು ಧರಿಸಿ ಹುಟ್ಟುತ್ತಿರುತ್ತವೆ. ಆದುದರಿಂದ ಯುದ್ಧದಲ್ಲಿ ಕ್ಷತ್ರಿಯರು ವಿನಾಶಹೊಂದಿರುವುದಕ್ಕಾಗಿ ಶೋಕಿಸಬೇಕಾದ ಕಾರಣವಿಲ್ಲ. ಶ್ರುತಿವಚನದಂತೆ–ಯುದ್ಧದಲ್ಲಿ ಅಸುನೀಗಿರುವವರು ಒಳ್ಳೆಯ ಲೋಕಗಳಿಗೇ ಹೋಗಿರುತ್ತಾರೆ'–ಇಂತಹ ಬುದ್ಧಿಯನ್ನು ಸ್ಥಿರಗೊಳಿಸಿ ಪಿತೃ-ಪಿತಾಮಹರಿಗೆ ಸಂಬಂಧಿಸಿದ (ಅವರು ಆಚರಿಸುತ್ತಿದ್ದ) ಸದಾಚಾರ-ಸದ್ವ್ಯವಹಾರಗಳಲ್ಲಿಯೇ ಇರುತ್ತಾ ಯಥೋಚಿತವಾಗಿ ಈ ರಾಜ್ಯವನ್ನು ಶಾಸನಮಾಡು.

ಸೌಭಾಗ್ಯವಶದಿಂದ ಪಾಪಿಷ್ಠನಾದ ದುರ್ಯೋಧನನು ತನ್ನ ಅನುಯಾಯಿಗಳೊಡನೆ ಹತನಾದನು. ದುಃಶಾಸನನಿಂದ ಹಿಡಿಯಲ್ಪಟ್ಟಿದ್ದ ದ್ರೌಪದಿಯ ಕೇಶಪಾಶದ ಮೇಲಿನ ಅಧಿಕಾರವನ್ನು ನೀನು ಪುನಃ ಸೌಭಾಗ್ಯವಶದಿಂದಲೇ ಪಡೆದುಕೊಂಡಿರುವೆ. ಬಹುದಕ್ಷಿಣಾಕವಾದ ಅಶ್ವಮೇಧಯಾಗದಿಂದ ವಿಧಿವತ್ತಾಗಿ ದೇವತೆಗಳನ್ನು ಸಂಪೂಜಿಸು. ವೀರ್ಯವಂತನಾದ ವಾಸುದೇವನೂ ಮತ್ತು ನಾವೆಲ್ಲರೂ ನಿನ್ನ ಆಜ್ಞಾಧಾರಕರಾಗಿರುತ್ತೇವೆ."

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಭೀಮಸೇನನ ಮಾತನ್ನು ಖಂಡಿಸಿ ಮುನಿಗಳ ಮತ್ತು ಜ್ಞಾನಿಗಳ ಮಾರ್ಗವನ್ನು ಪ್ರಶಂಸೆಮಾಡಿದುದು

ನಕುಲ-ಸಹದೇವ-ದ್ರೌಪದೀ-ಭೀಮಾರ್ಜುನರು ಮಾತನಾಡಿದ ನಂತರ ಯುಧಿಷ್ಠಿರನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ :

**ಅಸಂತೋಷಃ ಪ್ರಮಾದಶ್ಚ ಮದೋ ರಾಗೋಽಪ್ರಶಾನ್ತತಾ ।**
**ಬಲಂ ಮೋಹೋಽಭಿಮಾನಶ್ಚಾಪ್ಯುದ್ವೇಗಶ್ಚೈವ ಸರ್ವಶಃ ॥೧॥**

**ಏಭಿಃ ಪಾಪ್ಮಭಿರಾವಿಷ್ಟೋ ರಾಜ್ಯಂ ತ್ವಮಭಿಕಾಂಕ್ಷಸೇ ।**
**ನಿರಾಮಿಷೋ ವಿನಿರ್ಮುಕ್ತಃ ಪ್ರಶಾನ್ತಃ ಸುಸುಖೀ ಭವ ॥೨॥**

“ಭೀಮಸೇನ! ಪಾಪಹೇತುಗಳಾದ ಅಸಂತೋಷ, ಪ್ರಮಾದ, ಮದ, ರಾಗ, ಅಶಾಂತಿ, ಬಲ, ಮೋಹ, ಅಭಿಮಾನ, ಉದ್ವೇಗ–ಈ ಎಲ್ಲ ದುರ್ಗುಣಗಳಿಂದಲೂ ನೀನು ಆವಿಷ್ಟನಾಗಿರುವೆ. ಪಾಪಹೇತುಗಳಾದ ಈ ಎಲ್ಲ ಗುಣಗಳೂ ನಿನ್ನಲ್ಲಿರುವುದರಿಂದಲೇ ನೀನು ರಾಜ್ಯಕ್ಕಾಗಿ ಆಸೆಪಡುತ್ತಿರುವೆ. ಆಸೆಗಳೆಲ್ಲವನ್ನೂ ತೊರೆದು ಸಂಸಾರಬಂಧನದಿಂದ ಮುಕ್ತನಾಗಿ ಪ್ರಶಾಂತವಾದ ಮನಸ್ಸನ್ನು ಹೊಂದಿ ಸುಖವಾಗಿ ಬಾಳು.

**ಯ ಇಮಾಮಖಿಲಾಂ ಭೂಮಿಂ ಶಿಷ್ಯಾದೇಕೋ ಮಹೀಪತಿಃ ।**
**ತಸ್ಯಾಪ್ಯುದರಮೇಕಂ ವೈ ಕಿಮಿದಂ ತ್ವಂ ಪ್ರಶಂಸಸಿ ॥೩॥**

ಯಾವ ಚಕ್ರೇಶ್ವರನು ಈ ಅಖಂಡಭೂಮಂಡಲವನ್ನೇ ಶಾಸನ ಮಾಡುತ್ತಾನೆಯೋ–ಅವನಿಗೂ ಇರುವುದು ಒಂದೇ ಹೊಟ್ಟೆ. (ಆ ಒಂದು ಚಿಕ್ಕ ಹೊಟ್ಟೆಯನ್ನು ತುಂಬಿಕೊಳ್ಳುವ ಸಲುವಾಗಿ ಅಖಂಡಭೂಮಂಡಲವನ್ನೇ ಶಾಸನಮಾಡಲು ಹೊರಟು ಅಸಂತೋಷವೇ ಮೊದಲಾದ ದುರ್ಗುಣಗಳಿಂದ ಪೂರಿತನಾಗಬೇಕೇ?) ವಿಷಯವು ಇಷ್ಟು ಸ್ಪಷ್ಟವಾಗಿರುವಾಗ ರಾಜ್ಯಾಡಳಿತವನ್ನು ಏಕೆ ಪ್ರಶಂಸೆಮಾಡುತ್ತಿರುವೆ?

**ನಾಹ್ನಾ ಪೂರಯಿತುಂ ಶಕ್ಯಾಂ ನ ಮಾಸೈರ್ಭರತರ್ಷಭ ।**
**ಅಪೂರ್ಯಾಂ ಪೂರಯನ್ನಿಚ್ಛಾಮಾಯುಷಾಪಿ ನ ಶಕ್ನುಯಾತ್ ॥೪॥**

ಭರತಶ್ರೇಷ್ಠನೇ! ರಾಜ್ಯವನ್ನು ಪಡೆದುಕೊಳ್ಳಬೇಕೆಂಬುದು ಮೊದಲನೆಯ ಇಚ್ಛೆ. ಆ ಇಚ್ಛೆಯು ಪೂರ್ಣವಾದೊಡನೆಯೇ ರಾಜ್ಯವನ್ನು ವಿಸ್ತರಿಸಬೇಕೆಂಬ ಮತ್ತೊಂದು ಇಚ್ಛೆಯು ಮೊಳೆಯುತ್ತದೆ. ಹೀಗೆ ಮನುಷ್ಯನ ಇಚ್ಛೆಯು ಬೆಳೆಯುತ್ತಲೇ ಹೋಗುತ್ತದೆ. ಹೀಗೆ ಮನುಷ್ಯನ ಮನಸ್ಸಿನಲ್ಲಿ ಹುಟ್ಟುವ ಇಚ್ಛೆಯನ್ನು ಒಂದು ಹಗಲಿನಲ್ಲಿ ಪೂರೈಸುವುದಕ್ಕಾಗುವುದಿಲ್ಲ. ಅನೇಕ ಮಾಸಗಳಲ್ಲಿಯೂ ಪೂರೈಸುವುದಕ್ಕಾಗುವುದಿಲ್ಲ. ಆಸೆಯೆಂಬುದು ಎಂದೆಂದಿಗೂ ಅಪೂರ್ಣವಾಗಿಯೇ ಉಳಿಯುವುದೇ ಹೊರತು ಅದು ಪೂರ್ಣವಾಗುವುದೇ ಇಲ್ಲ. ಆಸೆಯನ್ನು ಪೂರ್ಣಮಾಡಿಕೊಳ್ಳಲಿಚ್ಛಿಸಿ ಆಯುಷ್ಯಪೂರ್ತಿಯಾಗಿ ಪ್ರಯತ್ನಿಸಿದರೂ ಆಸೆಯು ಅಪೂರ್ಣವಾಗಿಯೇ ಉಳಿಯುವುದೇ ಹೊರತು ಮಾನವನು ಆಸೆಯನ್ನು ಪೂರ್ಣಗೊಳಿಸಲು ಶಕ್ತನಾಗಲಾರನು. ಆಸೆಯ ಸ್ವರೂಪವೇ ಅಂತಹುದು.

**ಯಥೇದ್ಧಃ ಪ್ರಜ್ವಲತ್ಯಗ್ನಿರಸಮಿದ್ಧಃ ಪ್ರಶಾಮ್ಯತಿ ।**
**ಅಲ್ಪಾಹಾರತಯಾ ತ್ವಗ್ನಿಂ ಶಮಯೌದರ್ಯಮುತ್ಥಿತಮ್ ॥೫॥**

ಆಸೆಯೆಂಬುದು ಅಗ್ನಿಯಿದ್ದಂತೆ. ಅಗ್ನಿಗೆ ಇಂಧನವನ್ನು ಹಾಕುತ್ತಿದ್ದಂತೆಲ್ಲಾ ಪ್ರಜ್ವಲಿಸುತ್ತಲೇ ಇರುತ್ತದೆ. ಎಷ್ಟೇ ಇಂಧನವನ್ನು ಹಾಕಿದರೂ ಅಗ್ನಿಗೆ ಸಾಕೆನಿಸುವುದೇ ಇಲ್ಲ. ಹಾಗೆಯೇ ಒಂದು ಆಸೆಯನ್ನು ಪೂರ್ಣಗೊಳಿಸಿದರೆ ಮತ್ತೊಂದು ಆಸೆಯು ಮೊಳಕೆಯೊಡೆಯುತ್ತದೆ. ಅದಾದ ಮೇಲೆ ಮತ್ತೊಂದು. ಹೀಗೆ ಆಸೆಗಳನ್ನು ಪೂರೈಸುತ್ತಿದ್ದಂತೆಲ್ಲಾ ಅವು ವೃದ್ಧಿಹೊಂದುತ್ತಲೇ ಇರುತ್ತವೆ. ಇಂಧನವನ್ನು ಹಾಕದಿದ್ದರೆ ಅಗ್ನಿಯು ತಾನಾಗಿಯೇ ಉಪಶಮನಗೊಳ್ಳುತ್ತದೆ. ಅದೇ ರೀತಿಯಲ್ಲಿ ಮನಸ್ಸಿನಲ್ಲಿ ಹುಟ್ಟಿದ ಮೊದಲನೆಯ ಆಸೆಯನ್ನೇ ನಿರಸ್ತಗೊಳಿಸಿಬಿಟ್ಟರೆ-ತೃಪ್ತಿಯೆಂಬ ಅಗ್ನಿಯಿಂದ ಸುಟ್ಟುಹಾಕಿಬಿಟ್ಟರೆ–ಮತ್ತೊಂದು ಆಸೆಯು ಮೊಳೆಯುವುದೇ ಇಲ್ಲ. ಹೆಚ್ಚು ತಿನ್ನುವುದನ್ನು ಅಭ್ಯಾಸಮಾಡಿಬಿಟ್ಟರೆ ಜಠರಾಗ್ನಿಗೆ ಎಷ್ಟು ಹಾಕಿದರೂ ಸಾಲದಾಗುತ್ತದೆ. ಸ್ವಲ್ಪವೇ ಆಹಾರವನ್ನು ತೆಗೆದುಕೊಂಡು ಹಸಿವಿನ ಮೂಲವಾಗಿ ಮೇಲೆದ್ದುಬರುವ ಜಠರಾಗ್ನಿಯನ್ನು ಶಾಂತಗೊಳಿಸು. (ಮಿತಹಾರಿಯಾಗಿ ದೇಹಧಾರಣೆಗೆ ಸಾಕಾಗುವಷ್ಟು ಸ್ವೀಕರಿಸು.)

**ಆತ್ಮೋದರಕೃತೇಽಪ್ರಾಜ್ಞಃ ಕರೋತಿ ವಿಘಸಂ ಬಹು ।**
**ಜಯೋದರಂ ಪೃಥಿವ್ಯಾ ತೇ *ಶ್ರೇಯೋ ನಿರ್ಜಿತಯಾ ಜಿತಮ್ ॥೬॥**

ಅಜ್ಞಾನಿಯಾದ ಮನುಷ್ಯನು ತನ್ನ ಹೊಟ್ಟೆಯನ್ನು ತುಂಬಿಕೊಳ್ಳಲು ಬಹಳವಾಗಿ ಭಕ್ಷಿಸುತ್ತಲೇ ಇರುತ್ತಾನೆ. ಆದುದರಿಂದ ನೀನು ಮುಖ್ಯವಾಗಿ ನಿನ್ನ ಹೊಟ್ಟೆಯನ್ನು ಜಯಿಸಬೇಕಾಗಿದೆ. ಭೂಮಿಯನ್ನು ಗೆಲ್ಲುವುದಕ್ಕಿಂತಲೂ ಹೊಟ್ಟೆಯನ್ನು ಗೆಲ್ಲುವುದೇ ಶ್ರೇಯಸ್ಕರವಾದುದು. ಹೊಟ್ಟೆಯನ್ನು ಜಯಿಸುವುದು ಪೃಥಿವಿಯನ್ನು ಜಯಿಸಿದುದಕ್ಕಿಂತಲೂ ಮಿಗಿಲಾದುದು.

**ಮಾನುಷಾನ್ಕಾಮಭೋಗಾಂಸ್ತ್ವಮೈಶ್ವರ್ಯಂ ಚ ಪ್ರಶಂಸಸಿ ।**
**ಅಭೋಗಿನೋಽಬಲಾಶ್ಚೈವ ಯಾನ್ತಿ ಸ್ಥಾನಮನುತ್ತಮಮ್ ॥೭॥**

ಭೀಮಸೇನ! ನೀನು ಮನುಷ್ಯಲೋಕಕ್ಕೆ ಸಂಬಂಧಿಸಿದ ಕಾಮೋಪ ಭೋಗಗಳನ್ನೂ ಮತ್ತು ಐಶ್ವರ್ಯವನ್ನೂ ಪ್ರಶಂಸಿಸುತ್ತಿರುವೆ. ಆದರೆ ಮನುಷ್ಯಲೋಕಕ್ಕೆ ಸಂಬಂಧಿಸಿದ ಕಾಮೋಪಭೋಗಗಳಿಗಿಂತಲೂ ಆತ್ಮ ಜ್ಞಾನದಿಂದ ಪ್ರಾಪ್ತವಾಗುವ ಆನಂದವೇ ಶ್ರೇಷ್ಠವೆಂಬ ಅರಿವು ನಿನಗಿರುವು ದಿಲ್ಲ. ಆತ್ಮಾನಂದವನ್ನು ಪಡೆಯಲು ಈ ಲೋಕದಲ್ಲಿ ಭೋಗಿಗಳಾಗಿಯೇ ಇರಬೇಕೆಂದೇನೂ ನಿಯಮವಿಲ್ಲ. ಈ ಲೋಕದಲ್ಲಿ ಭೋಗವನ್ನೇ ಕಾಣ ದವರೂ, ಕಠೋರವಾದ ತಪಸ್ಸುಗಳನ್ನು ಮಾಡಿ ದುರ್ಬಲರಾಗಿರುವವರೂ ಕೂಡ ಪರಮಶ್ರೇಷ್ಠವಾದ ಸದ್ಗತಿಯನ್ನು ಪಡೆಯುತ್ತಾರೆ. (ಆ ಸರ್ವ ಶ್ರೇಷ್ಠವಾದ ಸದ್ಗತಿಯ ದೃಷ್ಟಿಯಿಂದ ಇಲ್ಲಿಯ ಕಾಮೋಪಭೋಗಗಳೂ ಮತ್ತು ಐಶ್ವರ್ಯಗಳೂ ಅತಿಕ್ಷುಲ್ಲಕವಾದುವುಗಳು.)

**ಯೋಗಃ ಕ್ಷೇಮಶ್ಚ ರಾಷ್ಟ್ರಸ್ಯ ಧರ್ಮಾಧರ್ಮೌ ತ್ವಯಿ ಸ್ಥಿತೌ ।**
**ಮುಚ್ಯಸ್ವ ಮಹತೋ ಭಾರಾತ್ತ್ಯಾಗಮೇವಾಭಿಸಂಶ್ರಯ ॥೮॥**

**ಅಲಬ್ಧಸ್ಯ ಲಾಭಃ ಯೋಗಃ** –ಸಿಕ್ಕದೇ ಇರುವುದನ್ನು ಪಡೆದು ಕೊಳ್ಳುವುದೇ ಯೋಗ. **ಲಬ್ಧಸಂರಕ್ಷಣಂ ಕ್ಷೇಮಃ** – ಪಡೆದುಕೊಂಡುದನ್ನು

---

* ಶ್ರೇಯೋ ನಿರ್ಜಿತಯಾ –ಎಂಬುದಕ್ಕೆ ವ್ಯಾಖ್ಯಾನಕಾರರು ಶ್ರೇಯಸಾ ನಿರ್ಜಿತಯಾ= ಪರಲೋಕಜಯೇನ–ಪರಲೋಕದ ವಿಜಯದಿಂದ ಎಂದು ಅರ್ಥಮಾಡಿರುತ್ತಾರೆ. ಶ್ರೇಯಸಾ= ಪರಲೋಕಜಯೇನೈವ ಪೃಥಿವೀ ಜಿತಾ ಭವತೀತಿ ತೇ ತವ ಜಿತಂ ಜಯ

ಸಂರಕ್ಷಿಸುವುದೇ ಕ್ಷೇಮ. ರಾಷ್ಟ್ರದ ಯೋಗ-ಕ್ಷೇಮಗಳೂ ಮತ್ತು ಧರ್ಮಾಧರ್ಮಗಳೂ ನಿನ್ನಲ್ಲಿಯೇ ಪ್ರತಿಷ್ಠಿತವಾಗಿರುತ್ತವೆ. ಲೋಕದ ಯೋಗ-ಕ್ಷೇಮಗಳ ಭಾರವನ್ನು ವಹಿಸಿಕೊಳ್ಳುವುದು, ಅದಕ್ಕೆ ಸಂಬಂಧಿಸಿದಂತೆ ಧರ್ಮಾಧರ್ಮಗಳಲ್ಲಿ ತೊಡಗುವುದು–ಈ ಎರಡೂ ಮಹಾಭಾರವಾದುವುಗಳೇ ಸರಿ. ಈ ಮಹಾಭಾರವನ್ನು ಹೊತ್ತು ಧರ್ಮಾಧರ್ಮಗಳೆಂಬ ಸುಳಿಯಲ್ಲಿ ಸಿಕ್ಕಿ ನರಳುವುದಕ್ಕಿಂತಲೂ ಆ ಭಾರದಿಂದಲೇ ಬಿಡುಗಡೆ ಹೊಂದು. ತ್ಯಾಗವನ್ನೇ ಆಶ್ರಯಿಸು, ಮುಕ್ತನಾಗು. (ರಾಜ್ಯದ ಯೋಗ-ಕ್ಷೇಮಗಳನ್ನು ವಹಿಸುವುದೆಂದರೆ ಸಾಮಾನ್ಯವಾದ ಕಾರ್ಯಗಳಿಗೂ ರಾಜನೇ ಹೊಣೆಯಾಗುತ್ತಾನೆ. ರಾಜ್ಯದಲ್ಲಿ ಸತ್ಕಾರ್ಯಗಳು ನಡೆದರೆ ಅದರಲ್ಲಿ ಒಂದು ಭಾಗ ಪುಣ್ಯವು ರಾಜನಿಗೆ ಸೇರುತ್ತದೆ. ಅಂತೆಯೇ ದುಷ್ಕಾರ್ಯಗಳು ನಡೆದರೂ ಅದರ ಒಂದು ಭಾಗ ಪಾಪವು ರಾಜನಿಗೆ ಸೇರುತ್ತದೆ.)

**ಏಕೋದರಕೃತೇ ವ್ಯಾಘ್ರಃ ಕರೋತಿ ವಿಘಸಂ ಬಹು ।**
**ತಮನ್ಯೇಽಪ್ಯುಪಜೀವನ್ತಿ ಮನ್ದಾ ಲೋಭವಶಾ ಮೃಗಾಃ ॥೯॥**

ಹುಲಿಯು ತನ್ನ ಒಂದು ಹೊಟ್ಟೆಯ ಸಲುವಾಗಿ ಎದುರಿಗೆ ಸಿಕ್ಕುವ ಪ್ರಾಣಿಗಳನ್ನೆಲ್ಲಾ ಅರ್ಧಕಚ್ಚಿ ಶೇಷವನ್ನುಳಿಸಿ ಮುಂದೆ ಹೋಗುತ್ತಿರುತ್ತದೆ. ಮೂರ್ಖತ್ವದಿಂದ ಕೂಡಿದ ಲೋಭಿಗಳಾದ ಇತರ ಮೃಗಗಳು ಆ ವ್ಯಾಘ್ರವನ್ನೇ ಅನುಸರಿಸಿ ಹೋಗುತ್ತಾ ತಮ್ಮ ಜೀವನವನ್ನು ನಿರ್ವಹಿಸಿಕೊಳ್ಳುತ್ತವೆ. (ಹಸಿವನ್ನು ತೀರಿಸಿಕೊಳ್ಳಲು ಹುಲಿಗೆ ಬೇಕಾಗಿರುವುದು ಒಂದು ಪ್ರಾಣಿ ಮಾತ್ರ. ಆದರೆ ಒಂದೇ ಪ್ರಾಣಿಯನ್ನು ಕೊಂದು ಅದನ್ನು ತಿಂದು ತೃಪ್ತಿಪಡುವುದು ಅದರ ಸ್ವಭಾವವಲ್ಲ. ಎದುರಿಗೆ ಸಿಕ್ಕುವ ಎಲ್ಲ ಪ್ರಾಣಿಗಳ ಮೇಲೂ ಬಿದ್ದು ಸಾಯಿಸಿ ರಕ್ತವನ್ನು ಸ್ವಲ್ಪಕುಡಿದು ಅಥವಾ ಆ ಪ್ರಾಣಿಯನ್ನು ಗಾಯಗೊಳಿಸಿ ಕೆಡವಿ ಹೋಗುವುದು ಅದರ ಸ್ವಭಾವವಾಗಿರುತ್ತದೆ.

---

ಏವಾಸ್ತೀತಿ ಭಾವಃ. ವಿಘಸಃ ಎಂದರೆ ಅನ್ನಶೇಷ ಎಂದು ಅರ್ಥವಾಗುತ್ತದೆ. ಯಜ್ಞಶೇಷಕ್ಕೆ ವಿಘಸ ಅಥವಾ ಅಮೃತ ಎಂದೂ ಹೆಸರು. ಆದರೆ ಇಲ್ಲಿ ವಿಘಸಶಬ್ದಕ್ಕೆ ಹಿಂಸಾ ಎಂದು ಹಿಂದಿಯಲ್ಲಿ ಅರ್ಥಮಾಡಲಾಗಿದೆ. ಘಸ್ಲೃಧಾತುವಿಗೆ ಆದನಾರ್ಥ (ಭಕ್ಷಿಸುವುದು) ವಿರುವುದೇ ಹೊರತು ಹಿಂಸಾರ್ಥವಿಲ್ಲ. ಆದುದರಿಂದ ವಿಘಸಶಬ್ದಕ್ಕೆ ಪ್ರಕೃತದಲ್ಲಿ ಪ್ರಭೂತವಾದ ಆಹಾರ ಎಂಬ ಅರ್ಥವೇ ಸಮಂಜಸವಾಗಿದೆ.

ಹೀಗೆಯೇ ಅದು ಹತ್ತಾರು ಪ್ರಾಣಿಗಳನ್ನು ಶೇಷವಾಗಿ ಉಳಿಸಿ ಮುಂದೆ ಹೋಗುತ್ತದೆ. ಅದನ್ನೇ ಹಿಂಬಾಲಿಸುವ ಇತರ ಪ್ರಾಣಿಗಳು ವ್ಯಾಘ್ರವುಳಿಸಿದ ಪ್ರಾಣಿಶೇಷವನ್ನು ತಿಂದು ಜೀವಿಸುತ್ತವೆ. ಮನುಷ್ಯನ ಹೊಟ್ಟೆಗೂ ಬೇಕಾದುದು ಅತ್ಯಲ್ಪವಾದ ಆಹಾರವೇ. ಆದರೆ ಮನುಷ್ಯನು ಆಹಾರಮಾತ್ರದಿಂದ ತೃಪ್ತನಾಗುವುದಿಲ್ಲ. ಒಂದಾದರ ಮೇಲೆ ಮತ್ತೊಂದು ಬೇಕೆಂಬ ಆಸೆಯನ್ನು ಬೆಳೆಸಿಕೊಳ್ಳುತ್ತಾ ಹೋಗುತ್ತಾನೆ. ಆದರೆ ತಾನು ಅತ್ಯಾಸೆಯಿಂದ ಸಂಪಾದಿಸಿದುದೆಲ್ಲವನ್ನೂ ತಾನೊಬ್ಬನೇ ತಿನ್ನಲು (ಅನುಭವಿಸಲು) ಸಾಧ್ಯವಾಗುವುದಿಲ್ಲ. ಅವನು ಸಂಪಾದಿಸಿದುದನ್ನು ಕೆಲಸಮಾಡಲಾಗದ ಮೂರ್ಖರು ಅನುಭವಿಸುತ್ತಾರೆ. ಈ ಭಾಗ್ಯಕ್ಕೆ ಐಶ್ವರ್ಯವನ್ನೇಕೆ ಸಂಪಾದಿಸಬೇಕು? ಸರ್ವಸಂಗಪರಿತ್ಯಾಗವೇ ಶ್ರೇಷ್ಠವಾದ ಮಾರ್ಗ.

**ವಿಷಯಾನ್ಪ್ರತಿಸಂಗೃಹ್ಯ ಸಂನ್ಯಾಸಂ ಕುರುತೇ ಯತಿಃ ।**
**ನ ಚ ತುಷ್ಯನ್ತಿ ರಾಜಾನಃ ಪಶ್ಯ ಬುದ್ಧ್ಯನ್ತರಂ ಯಥಾ ॥೧೦॥**

ಭೀಮಸೇನ! ಯತಿಗೂ–ರಾಜನಿಗೂ ಬುದ್ಧಿಯಲ್ಲಿರುವ ವ್ಯತ್ಯಾಸವನ್ನಾದರೂ ನೋಡು. ಯತಿಯಾದವನು ವಿಷಯವಾಸನೆಗಳಿಂದ ಮನಸ್ಸನ್ನು ಹಿಂದಕ್ಕೆ ಸೆಳೆದುಕೊಂಡು ಮನಸ್ಸನ್ನು ಸಂಪೂರ್ಣವಾಗಿ ಪರಮಾತ್ಮನಲ್ಲಿಯೇ ಸ್ಥಿರಗೊಳಿಸುತ್ತಾನೆ. ಆನಂದಿಸುತ್ತಾನೆ. ಆದರೆ ರಾಜರಾದರೋ ವಿಷಯಸುಖಗಳೆಷ್ಟೇ ಇದ್ದರೂ ಅದರಿಂದ ತೃಪ್ತರಾಗುವುದೇ ಇಲ್ಲ.

**ಪತ್ರಾಹಾರೈರಶ್ಮಕುಟ್ಟೈರ್ದನ್ತೋಲೂಖಲಿಕೈಸ್ತಥಾ ।**
**ಅಬ್ಭಕ್ಷೈರ್ವಾಯುಭಕ್ಷೈಶ್ಚ ತೈರಯಂ ನರಕೋ ಜಿತಃ ॥೧೧॥**

ಭೀಮಸೇನ! ನರಕವನ್ನು ದಾಟಿರುವವರು ಸುಖೋಪಭೋಗಿಗಳಲ್ಲ. ತರಗೆಲೆಗಳನ್ನು ತಿನ್ನುವವರು, ಕಲ್ಲಮೇಲಿಟ್ಟು ಕುಟ್ಟಿದ ಧಾನ್ಯವನ್ನು ತಿನ್ನುವವರು, ಹಲ್ಲಿನಲ್ಲಿ ಜಗಿದು ತಿನ್ನಬಹುದಾದುದನ್ನು ಮಾತ್ರವೇ ತಿನ್ನುವವರು, ನೀರೇ ಆಹಾರವಾಗಿ ಉಳ್ಳವರು, ಗಾಳಿಯೇ ಆಹಾರವಾಗಿ ಉಳ್ಳವರು–ಇಂತಹ ಮುನಿಗಳು ನರಕವನ್ನು ಜಯಿಸುತ್ತಾರೆ.

**ಯಸ್ತ್ವಿಮಾಂ ವಸುಧಾಂ ಕೃತ್ಸ್ನಾಂ ಪ್ರಶಾಸೇದಖಿಲಾಂ ನೃಪಃ ।**
**ತುಲ್ಯಾಶ್ಮಕಾಞ್ಚನೋ ಯಶ್ಚ ಸ ಕೃತಾರ್ಥೋ ನ ಪಾರ್ಥಿವಃ ॥೧೨॥**

ಅಖಂಡವಾದ ಭೂಮಂಡಲವನ್ನೂ ಶಾಸನಮಾಡುವ ರಾಜ ಮತ್ತು

ಕಲ್ಲನ್ನೂ, ಚಿನ್ನವನ್ನೂ ಸಮನಾಗಿ ಕಾಣುವ ಯತಿ–ಈ ಇಬ್ಬರಲ್ಲಿ ಕಲ್ಲಿಗೂ ಚಿನ್ನಕ್ಕೂ ವ್ಯತ್ಯಾಸವನ್ನು ಕಾಣದ ಯತಿಯೇ ಕೃತಾರ್ಥನು. ಭೂಮಂಡಲ ವನ್ನಾಳುವ ರಾಜನೆಂದಿಗೂ ಕೃತಾರ್ಥನಾಗಲಾರನು.

**ಸಂಕಲ್ಪೇಷು ನಿರಾರಮ್ಭೋ ನಿರಾಶೋ ನಿರ್ಮಮೋ ಭವ ।**
**ಅಶೋಕಂ ಸ್ಥಾನಮಾತಿಷ್ಠ ಇಹ ಚಾಮುತ್ರ ಚಾವ್ಯಯಮ್ ॥೧೩॥**

ಮನಸ್ಸಿನಲ್ಲಿ ಕರ್ಮಗಳನ್ನು ಮಾಡಬೇಕೆಂದು ತೋರಿದರೂ ಕರ್ಮ ಗಳನ್ನು ಮಾಡಬೇಡ. ಕರ್ಮಗಳಿಗೆ ಕಾರಣವಾದ ಆಸೆಯನ್ನೂ ಆಸೆಗೆ ಮೂಲವಾದ ಮಮಕಾರವನ್ನೂ ತ್ಯಜಿಸು. ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಅಕ್ಷಯವಾದ ಮತ್ತು ಶೋಕರಹಿತವಾದ ಸ್ಥಾನವನ್ನು ಹೊಂದು.

**ನಿರಾಮಿಷಾ ನ ಶೋಚನ್ತಿ ಶೋಚಸಿ ತ್ವಂ ಕಿಮಾಮಿಷಮ್ ।**
**ಪರಿತ್ಯಜ್ಯಾಮಿಷಂ ಸರ್ವಂ ಮೃಷಾವಾದಾತ್ಪ್ರಮೋಕ್ಷ್ಯಸೇ ॥೧೪॥**

ಸುಖೋಪಭೋಗಗಳನ್ನು ಪರಿತ್ಯಜಿಸಿದವರು ಖಂಡಿತವಾಗಿಯೂ ಶೋಕಪಡುವುದಿಲ್ಲ. ಹೀಗಿರುವಾಗ ನೀನೇಕೆ ಭೋಗವಸ್ತುಗಳ ಉಪಭೋಗ ಕ್ಕಾಗಿ ಶೋಕಪಡುತ್ತಿರುವೆ? ಎಲ್ಲ ಸುಖೋಪಭೋಗಗಳನ್ನೂ ಪರಿತ್ಯಜಿಸುವುದರಿಂದ ಮಾತ್ರವೇ ಮಿಥ್ಯಾವಾದದಿಂದ ಮುಕ್ತನಾಗುವೆ. (ತ್ಯಾಗವೆಂಬುದು ಮನಸ್ಸಿನಲ್ಲಿ ಮಾತ್ರವೇ ಇದ್ದರೆ ಸಾಲದು. ಆಚರಣೆ ಯಲ್ಲಿಯೂ ಇರಬೇಕು. ಎಲ್ಲ ಸುಖೋಪಭೋಗಗಳನ್ನೂ ಅನುಭವಿಸುತ್ತಿದ್ದು 'ನಾನು ತ್ಯಾಗೀ' ಎಂದು ಹೇಳಿಕೊಂಡರೆ ಅದನ್ನು ಯಾರೂ ನಂಬುವುದೂ ಇಲ್ಲ. ಆದುದರಿಂದ ಮುನಿಯಾಗಬಯಸುವವನೂ, ಮೃತ್ಯು ಶೋಕರಹಿತವಾದ, ಅಕ್ಷಯವಾದ ಪರಮಪದವನ್ನು ಇಚ್ಛಿಸುವವನೂ ಮೊದಲು ಸಕಲವಿಧವಾದ ಕಾಮೋಪಭೋಗಗಳನ್ನೂ ಪರಿತ್ಯಜಿಸುವುದು ಮುಖ್ಯಕರ್ತವ್ಯವಾಗಿರುತ್ತದೆ.)

**ಪನ್ಥಾನೌ ಪಿತೃಯಾನಶ್ಚ ದೇವಯಾನಶ್ಚ ವಿಶ್ರುತೌ ।**
**ಈಜಾನಾಃ ಪಿತೃಯಾನೇನ ದೇವಯಾನೇನ ಮೋಕ್ಷಿಣಃ ॥೧೫॥**

ದೇವಯಾನ-ಪಿತೃಯಾನಗಳು ಪರಲೋಕಕ್ಕೆ ಹೋಗಬಹುದಾದ

ಎರಡು ಮುಖ್ಯಮಾರ್ಗಗಳು. ಯಾರು ಸಕಾಮರಾಗಿ ಯಜ್ಞಾನುಷ್ಠಾನಗಳನ್ನು ಮಾಡುವರೋ, ಅವರು ಪಿತೃಯಾನದ ಮೂಲಕವಾಗಿ ಪುಣ್ಯಲೋಕಗಳಿಗೆ ಹೋಗುತ್ತಾರೆ. ಮೋಕ್ಷಾಪೇಕ್ಷಿಗಳಾದ, ನಿಃಸಂಗರಾದ ಮುನಿಗಳು ದೇವಯಾನದ ಮೂಲಕವಾಗಿ ಮೋಕ್ಷವನ್ನು ಹೊಂದುತ್ತಾರೆ.

**ತಪಸಾ ಬ್ರಹ್ಮಚರ್ಯೇಣ ಸ್ವಾಧ್ಯಾಯೇನ ಮಹರ್ಷಯಃ ।**
**ವಿಮುಚ್ಯ ದೇಹಾಂಸ್ತೇ ಯಾನ್ತಿ ಮೃತ್ಯೋರವಿಷಯಂ ಗತಾಃ ॥೧೬॥**

ಮಹರ್ಷಿಗಳು ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ಅಧ್ಯಯನದಿಂದಲೂ ಕಾಲಯಾಪನೆಮಾಡುತ್ತಾ ಮೃತ್ಯುವಿಗೆ ವಿಷಯರಾಗದೇ ದೇಹಪರಿತ್ಯಾಗಮಾಡಿ ಶಾಶ್ವತಬ್ರಹ್ಮಲೋಕವನ್ನು ಪಡೆದುಕೊಳ್ಳುತ್ತಾರೆ. (ಮೃತ್ಯುವಿಗೆ ವಿಷಯರಾಗದೇ ಇರುವುದು ಎಂದರೆ ಮುಕ್ತರಾಗುವುದು ಎಂದರ್ಥ. ಮೃತ್ಯುವಶರಾದವರಿಗೆ ಪುನರ್ಜನ್ಮವು ತಪ್ಪಿದ್ದಲ್ಲ. ಜನನ-ಮರಣಗಳ ಬಾಧೆಯು ಇದ್ದೇ ಇರುತ್ತದೆ. ತಪಸ್ಸು, ಬ್ರಹ್ಮಚರ್ಯ ಮತ್ತು ಸ್ವಾಧ್ಯಾಯಗಳಿಂದ ಮನಸ್ಸನ್ನು ಆತ್ಮನಲ್ಲಿ ವಿಲೀನಗೊಳಿಸಿ, ಜೀವವು ಸೇರಬೇಕಾದ ಪರಮಪದವನ್ನು ಪ್ರಯತ್ನಪೂರ್ವಕವಾಗಿ ಸೇರಿಬಿಟ್ಟರೆ–ಅಲ್ಲಿ ಮೃತ್ಯುವು ಸುಳಿಯುವುದಿಲ್ಲ. ಮೃತ್ಯುವು ಅಂತಹ ಜೀವವನ್ನು ಜನ್ಮ-ಮೃತ್ಯುಗಳೆಂಬ ಚಕ್ರದಲ್ಲಿ ಸಿಕ್ಕಿಸಲಾರದು. ಈ ಕಾರಣದಿಂದಲೇ ಆತ್ಮಜ್ಞಾನವನ್ನು ಪಡೆದು ಮನಸ್ಸನ್ನು ಸಂಪೂರ್ಣವಾಗಿ ಪರಮಾತ್ಮನಲ್ಲಿ ಲೀನಗೊಳಿಸಿದವರು ಅವಸಾನಹೊಂದಿದರೆ, ಅಂತಹವರನ್ನು 'ಬ್ರಹ್ಮೀಭೂತರಾದರು' ಎಂದು ಕರೆಯುತ್ತಾರೆಯೇ ಹೊರತು 'ಮೃತರಾದರು' ಎಂದು ಹೇಳುವುದಿಲ್ಲ. ದೇಹವನ್ನು ಬಿಡುವುದೆಂದರೆ ಮರಣಹೊಂದುವುದು ಎಂದೇ ಅರ್ಥವಾದರೂ ಮೃತ್ಯುವಿಗೆ ವಿಷಯವಾಗದೇ ದೇಹವನ್ನು ಬಿಟ್ಟು ಪರಮಪದಕ್ಕೆ ಹೋಗುತ್ತಾರೆ–ಎಂದರೆ ಬ್ರಹ್ಮೀಭೂತರಾಗಿ ಪರಮಪದವನ್ನು ಸೇರುತ್ತಾರೆ–ಎಂದರ್ಥ.)

**ಆಮಿಷಂ ಬನ್ಧನಂ ಲೋಕೇ ಕರ್ಮೇಹೋಕ್ತಂ ತಥಾಮಿಷಮ್ ।**
**ತಾಭ್ಯಾಂ ವಿಮುಕ್ತಃ ಪಾಪಾಭ್ಯಾಂ ಪದಮಾಪ್ನೋತಿ ತತ್ಪರಮ್ ॥**

ಆಮಿಷವೆಂದರೆ ಲೋಕದಲ್ಲಿ ಆಸೆಗೊಳಿಸುವ ವಸ್ತುಗಳು. ಇವೇ

ಬಂಧನಕ್ಕೆ ಮೂಲಕಾರಣ. ಫಲಾಭಿಸಂಬಂಧವಾಗಿ ಮಾಡುವ ಕಾಮ್ಯ ಕರ್ಮವೂ ಆಮಿಷವೇ ಆಗುತ್ತದೆ. ಪಾಪಹೇತುಗಳಾದ ಈ ಎರಡು ಆಮಿಷಗಳಿಂದಲೂ ವಿಮುಕ್ತನಾದವನು ಶ್ರೇಷ್ಠವಾದ ಪರಮಪದವನ್ನು ಹೊಂದುತ್ತಾನೆ.

ಇದೇ ವಿಷಯದಲ್ಲಿ ಹಿಂದೆ ದ್ವಂದ್ವಗಳಿಂದ ರಹಿತನಾಗಿದ್ದ, ಜೀವನ್ಮುಕ್ತನಾಗಿದ್ದ, ಮೋಕ್ಷಮಾರ್ಗವನ್ನು ಚೆನ್ನಾಗಿ ತಿಳಿದಿದ್ದ ಜನಕರಾಜನು ಹೇಳಿದ್ದ ಶ್ಲೋಕವೊಂದನ್ನು ಪಂಡಿತರು ಈಗಲೂ ಉದಾಹರಿಸುತ್ತಾರೆ. ಅದನ್ನೇ ಈಗ ನಿನಗೂ ಹೇಳುತ್ತೇನೆ.

**ಅನನ್ತಂ ಬತ ಮೇ ವಿತ್ತಂ ಯಸ್ಯ ಮೇ ನಾಸ್ತಿ ಕಿಞ್ಚನ ।**
**ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ದಹ್ಯತಿ ಕಿಞ್ಚನ ॥೧೯॥**

“ಬೇರೆಯವರು ನನ್ನ ಬಳಿಯಲ್ಲಿ ಅಪಾರವಾದ ಐಶ್ವರ್ಯವಿದೆ ಎನ್ನುತ್ತಾರೆ. ಆದರೆ ನನ್ನಲ್ಲಿ ಕಿಂಚಿತ್ತಾದರೂ ಐಶ್ವರ್ಯವೇ ಇಲ್ಲವೆಂದು ನಾನು ಭಾವಿಸಿದ್ದೇನೆ. ನನ್ನದೆನ್ನುವುದು ಯಾವುದೂ ಇಲ್ಲ. ಮಿಥಿಲಾಪಟ್ಟಣವೇ ಬೆಂಕಿ ಬಿದ್ದು ಉರಿದುಹೋದರೂ ನನ್ನದಾವುದೂ ಸುಡುವುದಿಲ್ಲ. ( ಹಣವಿದ್ದರೂ ನನ್ನದಲ್ಲವೆಂಬ ಭಾವನೆಯನ್ನು ಬೆಳೆಸಿಕೊಂಡಿದ್ದೇನೆ. ನನ್ನ ಸಹಿತವಾಗಿ ಮಿಥಿಲಾಪಟ್ಟಣವೇ ಸುಟ್ಟುಹೋಗಬಹುದು. ಆದರೆ ನನ್ನನ್ನು ( ನನ್ನ ಆತ್ಮವನ್ನು) ಸುಡಲು ಯಾವ ದಾವಾಗ್ನಿಗೂ ಸಾಧ್ಯವಾಗುವುದಿಲ್ಲ. )

**ಪ್ರಜ್ಞಾಪ್ರಾಸಾದಮಾರುಹ್ಯ ಅಶೋಚಞ್ಶೋಚತೋ ಜನಾನ್ ।**
**ಜಗತೀಸ್ಥಾನಿವಾದ್ರಿಸ್ಥೋ ಮನ್ದಬುದ್ಧೀನವೇಕ್ಷತೇ ॥೨೦॥**

ಪರ್ವತದ ಮೇಲೆ ನಿಂತಿರುವವನು ನೆಲದ ಮೇಲೆ ನಿಂತಿರುವವನನ್ನು ನೋಡುವಂತೆ ಪ್ರಜ್ಞೆಯೆಂಬ ಪ್ರಾಸಾದದಲ್ಲಿ ಹತ್ತಿಕುಳಿತು ಶೋಕ-ಮೋಹ ರಹಿತನಾದ ಜ್ಞಾನಿಯು ಪ್ರಾಪಂಚಿಕಕರ್ಮಗಳಿಗಾಗಿ ದುಃಖಿಸುತ್ತಿರುವ ಮಂದಬುದ್ಧಿಯ ಜನರನ್ನು ನೋಡುತ್ತಾನೆ. ( ಈ ಶ್ಲೋಕದ ಅರ್ಥವನ್ನು ಹೀಗೆಯೇ ಸರಿ ಎಂದು ಹೇಳಲು ಬಹಳ ಕಷ್ಟವೇ ಸರಿ. ವ್ಯಾಖ್ಯಾನ ಕಾರರು ಹೀಗೆ ಅರ್ಥಮಾಡಿರುತ್ತಾರೆ : **ಯತ್ತೂಕ್ತಂ ದಿಷ್ಟ್ಯಾ ದುರ್ಯೋಧನೋ ಹತ ಇತಿ.** ಅದೃಷ್ಟವಶಾತ್ ದುರ್ಯೋಧನನು ಹತ

ನಾದನು–ಎಂದು ಭೀಮಸೇನನು ಹೇಳಿದುದಕ್ಕೆ ಉತ್ತರವಾಗಿ ಯುಧಿಷ್ಠಿರನು ಈ ಮಾತನ್ನು ಹೇಳಿರುತ್ತಾನೆ. **ಪ್ರಜ್ಞೇತಿ ಮನ್ದತ್ವಾದೇವ ಪ್ರಜ್ಞಾ ಪ್ರಾಸಾದಮಾರೋಢುಮಶಕ್ತಃ**–ಮಂದತ್ವದ ಕಾರಣದಿಂದಲೇ ಪ್ರಜ್ಞಾ ಪ್ರಾಸಾದವನ್ನು ಹತ್ತಲು ಅಸಮರ್ಥನಾಗಿ **ಅಶೋಚ್ಯಾನ್ ಸ್ವರ್ಗತಾನ್ ದುರ್ಯೋಧನಾದೀನ್** –ಸ್ವರ್ಗಕ್ಕೆ ಹೋಗಿರುವ, ಈ ಕಾರಣದಿಂದಲೇ ಶೋಕಪಡಲು ಅನರ್ಹರಾದ ದುರ್ಯೋಧನಾದಿಗಳನ್ನು ಕುರಿತು, **ಶೋಚತಃ** –ದುಃಖಿಸುತ್ತಿರುವ, **ತದ್ದಾರಾದೀನ್ನ ಪಶ್ಯಸಿ** ದುರ್ಯೋಧನನ ಪತ್ನಿಯರ ದುರವಸ್ಥೆಯನ್ನು ನೀನು ಕಾಣುತ್ತಿಲ್ಲ. **ಪರದುಃಖೇನ ಸುಖೀಭವನ್ ಮೂರ್ಖೋಽಸೀತಿ ಭಾವಃ** –ಇತರರ ದುಃಖದಿಂದ ಸುಖಪಡುತ್ತಾ ನೀನೀಗ ಮೂರ್ಖನಾಗಿರುವೆ. ಇದು ವ್ಯಾಖ್ಯಾನಕಾರರ ವ್ಯಾಖ್ಯಾನವಾಗಿದೆ. ಆದರೆ ಇವರು ಹೇಳಿರುವ ಪದಗಳು ಯಥಾವತ್ತಾಗಿ ಶ್ಲೋಕದಲ್ಲಿರುವುದಿಲ್ಲ. ಪದಗಳನ್ನು ವಿವೃತಗೊಳಿಸಿ ಅಥವಾ ಅಧ್ಯಾಹಾರಮಾಡಿ ಹೀಗವರು ಅರ್ಥಮಾಡಿರುತ್ತಾರೆ. **ಮನ್ದಬುದ್ಧೀನ್** ಎಂಬುದಾಗಿರುವುದೇ ಹೊರತು **ಮನ್ದತ್ವಾತ್** ಎಂಬುದಾಗಿ ಶ್ಲೋಕದಲ್ಲಿಲ್ಲ. **ಪ್ರಜ್ಞಾಪ್ರಾಸಾದಮಾರೋಢುಂ ಅಶಕ್ತಃ** ಎಂಬುದಾಗಿ ಶ್ಲೋಕದಲ್ಲಿರುವುದೆಂದು ಎಷ್ಟೇ ಪ್ರಯತ್ನಿಸಿದರೂ ತೋರಿಸಿಕೊಡಲು ಸಾಧ್ಯವಾಗುವುದಿಲ್ಲ. ಆದುದರಿಂದ ವ್ಯಾಖ್ಯಾನಕಾರರ ಅಭಿಪ್ರಾಯವು ಕೊಂಚಮಟ್ಟಿಗೆ ಸರಿ ಎನಿಸಿದರೂ ಸಂಪೂರ್ಣವಾಗಿ ಸಮಂಜಸವಾಗಿರುವುದೆಂದು ಹೇಳಲಾಗುವುದಿಲ್ಲ. ಮೇಲಾಗಿ ಅಧ್ಯಾಯದ ಕಡೆಯವರೆಗಿನ ಎಲ್ಲ ಶ್ಲೋಕಗಳೂ ಅಧ್ಯಾತ್ಮಪರವಾದ ಶ್ಲೋಕಗಳೇ ಆಗಿವೆ. ಆದುದರಿಂದ ಈ ಶ್ಲೋಕಗಳಲ್ಲಿ ದುರ್ಯೋಧನನ ಸ್ಮರಣೆಯು ಬರಲು ಅವಕಾಶವೇ ಇಲ್ಲ.

ಹಿಂದೀ ವ್ಯಾಖ್ಯಾನಕಾರರು–'ಯಾವ ರೀತಿಯಲ್ಲಿ ಪರ್ವತದ ಮೇಲೆ ಹತ್ತಿನಿಂತಿರುವವನು ನೆಲದ ಮೇಲೆ ನಿಂತಿರುವವನನ್ನು ನೋಡಿ ಅವರ ಪರಿಸ್ಥಿತಿಯ ಬಗೆಗೆ ಸ್ವಲ್ಪವೂ ಪ್ರಭಾವಿತನಾಗುವುದಿಲ್ಲವೋ–ಹಾಗೆಯೇ ಪ್ರಜ್ಞಾಸೌಧದಲ್ಲಿ ಹತ್ತಿಕುಳಿತನಂತರ ಜ್ಞಾನಿಯಾದವನು ಶೋಕಪಡುತ್ತಿರುವ ಮಂದಬುದ್ಧಿಯ ಜನರನ್ನು ನೋಡುತ್ತಿದ್ದರೂ ತಾನು ಅವರಂತೆ ದುಃಖಪಡುವುದಿಲ್ಲ'–ಎಂಬುದಾಗಿ ಹೇಳಿದ್ದಾರೆ.)

**ದೃಶ್ಯಂ ಪಶ್ಯತಿ ಯಃ ಪಶ್ಯನ್ಸ ಚಕ್ಷುಷ್ಮಾನ್ಸ ಬುದ್ಧಿಮಾನ್ ।**
**ಅಜ್ಞಾತಾನಾಂ ಚ ವಿಜ್ಞಾನಾತ್ಸಮ್ಬೋಧಾದ್ಬುದ್ಧಿರುಚ್ಯತೇ ॥೨೦॥**

ನೋಡುವಾಗ (ತಿಳಿಯುವಾಗ) ಯಾವನು ನೋಡಲೇಬೇಕಾದುದನ್ನು ನೋಡುತ್ತಾನೆಯೋ (ಕರ್ತವ್ಯಾಕರ್ತವ್ಯಗಳನ್ನು ಪರಿಶೀಲಿಸುತ್ತಾನೆಯೋ) ಅವನೇ ಬುದ್ಧಿವಂತನು ಮತ್ತು ಕಣ್ಣುಗಳುಳ್ಳವನು–ಎಂದು ಕರೆಯಲ್ಪಡುತ್ತಾನೆ. ನಿಗೂಢವಾಗಿರುವುದನ್ನು ಜ್ಞಾಪಿಸಿಕೊಡುವುದರಿಂದಲೂ, ಕರ್ತವ್ಯಾಕರ್ತವ್ಯಗಳನ್ನು ಬೋಧಿಸುವುದರಿಂದಲೂ– ಅಂತಃಕರಣದಲ್ಲಿರುವ ಒಂದು ವೃತ್ತಿಗೆ 'ಬುದ್ಧಿ' ಎಂದು ಹೆಸರು. (ಯಾವನು ಈ ವಿಶ್ವವನ್ನು ನೋಡುತ್ತಾ ಇದು ಕೇವಲ ನಾಟಕರೂಪವಾದುದು ಎಂಬುದನ್ನು ಮನಗಾಣುತ್ತಾನೆಯೋ ಅವನು ಕಣ್ಣಿರುವವನೂ ಹೌದು. ಬುದ್ಧಿವಂತನೂ ಹೌದು. ತಿಳಿಯದೇ ಇರುವುದನ್ನು (ಆತ್ಮವನ್ನು) ತಿಳಿಸಿಕೊಡುವುದೇ ಬುದ್ಧಿ. ಆತ್ಮಜ್ಞಾನವನ್ನು ಅನುಭವಪೂರ್ವಕವಾಗಿ ತಿಳಿಸಿಕೊಡುವುದರಿಂದಲೂ ಇದಕ್ಕೆ ಬುದ್ಧಿ ಎನ್ನುತ್ತಾರೆ–ಹೀಗೂ ಅರ್ಥಮಾಡಬಹುದಾಗಿದೆ.)

**ಯಸ್ತು ವಾಚಂ ವಿಜಾನಾತಿ ಬಹುಮಾನಮಿಯಾತ್ಸ ವೈ ।**
**ಬ್ರಹ್ಮಭಾವಪ್ರಪನ್ನಾನಾಂ ವೈದ್ಯಾನಾಂ ಭಾವಿತಾತ್ಮನಾಮ್ ॥೨೧॥**

ಬ್ರಹ್ಮಭಾವವನ್ನು ಹೊಂದಿರುವ ಶುದ್ಧಾತ್ಮರಾದ ವಿದ್ವಾಂಸರ ಮಾತನ್ನು ಯಾವನು ತಿಳಿದುಕೊಳ್ಳುತ್ತಾನೆಯೋ, ಅವನು ಹೆಚ್ಚು ಗೌರವವನ್ನು ಹೊಂದುತ್ತಾನೆ. (ಬ್ರಹ್ಮಜ್ಞಾನಿಗಳು ಹೇಳುವ ಉಪನಿಷದ್ರೂಪವಾದ ಮಾತನ್ನು ಮನನಮಾಡಿ ಅದನ್ನು ಇತರರಿಗೂ ಬೋಧಿಸುವವನನ್ನೇ ಜನರು ಬಹಳ ಗೌರವದಿಂದ ಕಾಣುತ್ತಾರೆ. ಹಾಗಿರುವಾಗ ಸಾಕ್ಷಾತ್ ಬ್ರಹ್ಮಭೂತನಾದವನೇ ಬಂದರೆ ಹೇಳತಕ್ಕದ್ದೇನು? ಬ್ರಹ್ಮಭೂತರಾದವರು ಅಥವಾ ಬ್ರಹ್ಮಜ್ಞಾನಿಗಳು ಸರ್ವಕಾಲದಲ್ಲಿಯೂ ಸರ್ವತ್ರ ಮಾನ್ಯರು. ಇಲ್ಲಿಯೂ ವ್ಯಾಖ್ಯಾನಕಾರರು ಬೇರೆಯ ರೀತಿಯಾಗಿಯೇ ಅರ್ಥಮಾಡಿರುತ್ತಾರೆ. **ಯಸ್ತು ವೈದ್ಯಾನಾಂ ವಿದ್ಯಾವತಾಂ ವಾಚಂ ವಿಜಾನಾತಿ ನ ತು ತದರ್ಥಂ । ಸ ತ್ವಾದೃಶೋ ಬಹುಮಾನಮಿಯಾತ್ ।** ವಿದ್ಯಾವಂತರಾದವರ ಮಾತನ್ನು ಯಾವನು ತಿಳಿದುಕೊಂಡಿರುತ್ತಾನೆಯೋ ಅವನು ಕೇವಲ ತಿಳಿವಳಿಕೆಯಿಂದ ಮಾತ್ರವೇ ನಿನ್ನಂತೆ ಅಹಂಕಾರವನ್ನು ಹೊಂದುವುದಿಲ್ಲ.

**ಗುರೂನಪ್ಯುಪದೇಷ್ಟುಂ ಯೋಗ್ಯಮಾತ್ಮಾನಂ ಮನ್ಯತೇ । ನ ತು ತತ್ತ್ವಂ ವಿನ್ದತಿ ।** ಗುರುವಿಗೂ ಉಪದೇಶಿಸಲು ತಾನು ಯೋಗ್ಯನಾಗಿರುವೆನೆಂದು ಭಾವಿಸುತ್ತಾನೆ. ಆದರೆ ಬ್ರಹ್ಮತತ್ತ್ವವನ್ನು ತಿಳಿದಿರುವುದಿಲ್ಲ–ಹೀಗೆ ಅರ್ಥ ಮಾಡಿರುತ್ತಾರೆ. ಬಹುಮಾನ ಎಂಬ ಪದಕ್ಕೆ ಗೌರವ ಎಂಬ ಅರ್ಥವಿರುತ್ತದೆಯೇ ಹೊರತು ಅಹಂಕಾರವೆಂಬ ಅರ್ಥವಿಲ್ಲ. ಹಿಂದಿಯಲ್ಲಿ ವ್ಯಾಖ್ಯಾನಕಾರರು ನೀಲಕಂಠರನ್ನೇ ಅನುಸರಿಸಿ ಬಹುಮಾನ ಎಂಬುದಕ್ಕೆ ಅಭಿಮಾನ ಎಂದು ಅರ್ಥಮಾಡಿದ್ದಾರೆ. ವಿದ್ವಾಂಸನಂತೆ ಮಾತನಾಡಲು ಕಲಿತಿರುವವನು ( ಬ್ರಹ್ಮತತ್ತ್ವದ ಅನುಭವವಿಲ್ಲದಿದ್ದರೂ ) ತನಗೆಲ್ಲವೂ ತಿಳಿದಿರುವುದೋ ಎಂಬಂತೆ ಹೆಚ್ಚು ಅಭಿಮಾನಿಯಾಗುತ್ತಾನೆ. ವಿದ್ವಾನೋಂಕಾ-ಸಾ ಬೋಲನಾ ಜಾನ್ ಲೇತಾ ಹೈ, ಉಸೇ ಅಪನೇ ಜ್ಞಾನಪರ ಬಡಾ ಅಭಿಮಾನ ಹೋ ಜಾತಾ ಹೈ (ಜೈಸೇ ಕಿ ತುಮ ಹೋ.)

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಮ್ಪದ್ಯತೇ ತದಾ ॥೨೩॥**

ಯಾವಾಗ ಮನುಷ್ಯನು ಪ್ರಾಣಿಗಳಲ್ಲಿರುವ ಪ್ರತ್ಯೇಕತೆಯನ್ನು ತೋರಿಕೆಗೆ ಮಾತ್ರವೆಂದೂ, ಅಖಂಡಬ್ರಹ್ಮಾಂಡದ ಎಲ್ಲ ಚರಾಚರಪ್ರಾಣಿಗಳೂ ಏಕಮಾತ್ರ ಪರಮಾತ್ಮನಲ್ಲಿಯೇ ಪ್ರತಿಷ್ಠಿತವಾಗಿರುವುವೆಂದೂ ಮತ್ತು ಪರಬ್ರಹ್ಮನಾದ ಪರಮಾತ್ಮನಿಂದಲೇ ಪ್ರಪಂಚದ ವಿಸ್ತಾರವಾಗುವುದೆಂದೂ ಅನುಭವದಿಂದ ತಿಳಿಯುತ್ತಾನೆಯೋ–ಆಗಲೇ ಅವನು ಬ್ರಹ್ಮಭಾವವನ್ನು ಹೊಂದುತ್ತಾನೆ ( ಶ್ರೀ ಗೀತಾ ಅ.೧೩ ಶ್ಲೋ.೩೦ )

**ತೇ ಜನಾಸ್ತಾಂ ಗತಿಂ ಯಾನ್ತಿ ನಾವಿದ್ವಾಂಸೋಽಲ್ಪಚೇತಸಃ ।**
**ನಾಬುದ್ಧಯೋ ನಾತಪಸಃ ಸರ್ವಂ ಬುದ್ಧೌ ಪ್ರತಿಷ್ಠಿತಮ್ ॥೨೪॥**

ಬುದ್ಧಿವಂತರಾದ ಮತ್ತು ತಪಸ್ವಿಗಳಾದ ಜನರು ಮಾತ್ರವೇ ಆ ಬ್ರಹ್ಮಭಾವವನ್ನು ಪಡೆಯುತ್ತಾರೆ. ಅಜ್ಞಾನಿಗಳು, ಮಂದಬುದ್ಧಿಯವರು, ಬುದ್ಧಿಹೀನರು, ತಾಪಸರಲ್ಲದವರು ಅಂತಹ ಬ್ರಹ್ಮಭಾವವನ್ನು ಖಂಡಿತವಾಗಿಯೂ ಪಡೆದುಕೊಳ್ಳುವುದಿಲ್ಲ. ಏಕೆಂದರೆ : ಬ್ರಹ್ಮಭಾವವನ್ನು ಪಡೆದುಕೊಳ್ಳುವುದು

ಅಥವಾ ಪಡೆದುಕೊಳ್ಳದೇ ಸಂಸಾರಸಾಗರದಲ್ಲಿಯೇ ಮುಳುಗೇಳುವುದು–ಎಲ್ಲವೂ ಬುದ್ಧಿಯಲ್ಲಿಯೇ ಪ್ರತಿಷ್ಠಿತವಾಗಿವೆ.”

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಅರ್ಜುನನು ಜನಕರಾಜನ ಮತ್ತು ಅವನ ಪತ್ನಿಯ ದೃಷ್ಟಾಂತವನ್ನು ಕೊಟ್ಟು ಸಂನ್ಯಾಸವನ್ನು ತೆಗೆದುಕೊಳ್ಳದಂತೆ ಯುಧಿಷ್ಠಿರನನ್ನು ತಡೆದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

“ಜನಮೇಜಯ! ರಾಜನ ಮಾತೆಂಬ ಮುಳ್ಳಿನಿಂದ ಪೀಡಿತನಾದ ಮತ್ತು ಶೋಕ-ದುಃಖಗಳಿಂದ ಸಂತಪ್ತನಾದ ಅರ್ಜುನನು ಹೀಗೆ ಹೇಳಿ ಸುಮ್ಮನಾದ ಯುಧಿಷ್ಠಿರನನ್ನು ಕುರಿತು ಪುನಃ ಹೇಳತೊಡಗಿದನು : “ಭಾರತನೇ! ಹಿಂದೆ ವಿದೇಹರಾಜನಾದ ಜನಕನಿಗೂ ಅವನ ಪತ್ನಿಗೂ ನಡೆದ ಸಂಭಾಷಣಾರೂಪವಾದ ಈ ಇತಿಹಾಸವನ್ನು ಜನರು ಇಂದೂ ಹೇಳುತ್ತಾರೆ. ಒಮ್ಮೆ ಜನಕರಾಜನು ರಾಜ್ಯವನ್ನು ಪರಿತ್ಯಾಗಮಾಡಿ ಭಿಕ್ಷೆಯಿಂದಲೇ ಜೀವನವನ್ನು ನಿರ್ವಹಿಸಬೇಕೆಂದು ನಿಶ್ಚಯಮಾಡಿದನು. ಪತಿಯ ನಿರ್ಧಾರವನ್ನು ಕೇಳಿ ಬಹಳ ದುಃಖಿತೆಯಾದ ಅವನ ಪತ್ನಿಯಾದ ಕೌಸಲ್ಯೆಯು ಜನಕರಾಜನೊಡನೆ ಏನು ಹೇಳಿದಳೆಂಬುದನ್ನಾದರೂ ಕೇಳು, ಧರ್ಮಜ!

ಮೌಢ್ಯವನ್ನಾಶ್ರಯಿಸಿದ್ದ (ಮೂರ್ಖನಾಗಿದ್ದ) ಜನಕನು ಒಮ್ಮೆ ಐಶ್ವರ್ಯ, ಮಕ್ಕಳು, ಭಾರ್ಯೆಯರು, ವಿಧ-ವಿಧವಾದ ರತ್ನಗಳು, ಅತಿಥಿಗಳು, ತ್ರೇತಾಗ್ನಿ–ಎಲ್ಲವನ್ನೂ ಪರಿತ್ಯಜಿಸಿ ಭಿಕ್ಷಾವೃತ್ತಿಯಿಂದ ಜೀವಿಸಿರಲು ನಿಶ್ಚಯಿಸಿದನು. ಭಿಕ್ಷಾವೃತ್ತಿಯನ್ನು ಅವಲಂಬಿಸಿದ, ಅಕಿಂಚನನಾದ, ಮುಷ್ಟಿಮಾತ್ರದ ಹುರಿದ ಧಾನ್ಯದ ಹಿಟ್ಟನ್ನೇ ಜೀವನನಿರ್ವಹಣೆಗಾಗಿ ಆಶ್ರಯಿಸಿದ್ದ, ನಿರೀಹನಾದ, ಅಸೂಯಾರಹಿತನಾದ ಜನಕನನ್ನು ಅವನ ಪ್ರಿಯ

ಭಾರ್ಯೆಯು ನೋಡಿದಳು. ಪತಿಯ ಸ್ಥಿತಿಯನ್ನು ತಿಳಿದು ಪರಮಕ್ರುದ್ಧಳಾದ, ಮನಸ್ವಿನಿಯಾದ ಅವನ ಭಾರ್ಯೆಯು ಭಯರಹಿತನಾಗಿದ್ದ ಗಂಡನ ಬಳಿಗೆ ಹೋಗಿ ಯುಕ್ತಿಯುಕ್ತವಾದ ಮಾತನ್ನು ಹೇಳಿದಳು :

"ಮಹಾರಾಜ! ಧನ-ಧಾನ್ಯಗಳಿಂದ ಸಮೃದ್ಧವಾಗಿರುವ ರಾಜ್ಯವನ್ನು ಪರಿತ್ಯಾಗಮಾಡಿ ಈ ಕಾಪಾಲ (ಸಂನ್ಯಾಸ) ವೃತ್ತಿಯನ್ನು ಏಕೆ ಅವಲಂಬಿಸಿದೆ? ಮುಷ್ಟಿಮಾತ್ರ ಹುರಿದ ಧಾನ್ಯದ ಹಿಟ್ಟನ್ನು ತಿಂದು ಜೀವಿಸುವುದು ನಿನಗೆ ಖಂಡಿತವಾಗಿಯೂ ಶೋಭಿಸುವುದಿಲ್ಲ. ನಿನ್ನ ಪ್ರತಿಜ್ಞೆಯೇ ಒಂದಾಗಿದೆ ; ನೀನು ಮಾಡುತ್ತಿರುವ ಕಾರ್ಯವೇ ಮತ್ತೊಂದಾಗಿದೆ. ಈ ವಿಶಾಲವಾದ ಸಂಪತ್ಸಮೃದ್ಧವಾದ ರಾಜ್ಯವನ್ನು ಪರಿತ್ಯಜಿಸಿ ನೀನೀಗ ಅಲ್ಪದಲ್ಲಿಯೇ ತೃಪ್ತಿಯನ್ನು ಹೊಂದುವವನಾಗಿರುವೆ. ನೀನು ಇಂತಹ ಅಕಿಂಚನವೃತ್ತಿಯನ್ನು ಅವಲಂಬಿಸಿರುವುದರಿಂದ ಇನ್ನು ಮುಂದೆ ನಿನಗೆ ಅತಿಥಿಗಳನ್ನು ಭರಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ನಿನ್ನ ಈ ಶ್ರಮವು ವ್ಯರ್ಥವೇ ಸರಿ. ಪಾರ್ಥಿವನೇ! ನೀನೀಗ ದೇವ-ಪಿತೃಗಳಿಂದಲೂ, ಅತಿಥಿಗಳಿಂದಲೂ ಪರಿತ್ಯಕ್ತನಾಗಿ ಅಕರ್ಮಣ್ಯನಾಗಿ ಮನೆಯನ್ನು ಬಿಟ್ಟು ಹೊರಡುತ್ತಿರುವೆ.

**ಯಸ್ತ್ವಂ ತ್ರೈವಿದ್ಯವೃದ್ಧಾನಾಂ ಬ್ರಾಹ್ಮಣಾನಾಂ ಸಹಸ್ರಶಃ ।**
**ಭರ್ತಾ ಭೂತ್ವಾ ಚ ಲೋಕಸ್ಯ ಸೋಽದ್ಯ ತ್ವೈರ್ಭೃತಿಮಿಚ್ಛಸಿ ॥೧೧॥**

ಮೂರು ವೇದಗಳಲ್ಲಿಯೂ ಪಾರಂಗತರಾದ, ವೃದ್ಧರಾದ ಸಾವಿರಾರು ಬ್ರಾಹ್ಮಣರ ಮತ್ತು ಈ ಲೋಕದ ಭರಣ-ಪೋಷಣೆಗಳನ್ನು ನಡೆಸುತ್ತಾ ಭರ್ತೃವೆನಿಸಿಕೊಂಡಿದ್ದ ನೀನು ಈಗ ಆ ಬ್ರಾಹ್ಮಣರಿಂದಲೂ ಮತ್ತು ಲೋಕದ ಜನರಿಂದಲೂ ನಿನ್ನ ಉದರಂಭರಣಕ್ಕಾಗಿ ಭಿಕ್ಷೆಯನ್ನಪೇಕ್ಷಿಸುತ್ತಿರುವೆ.

**ಶ್ರಿಯಂ ಹಿತ್ವಾ ಪ್ರದೀಪ್ತಾಂ ತ್ವಂ ಶ್ವವತ್ಸಂಪ್ರತಿ ವೀಕ್ಷ್ಯಸೇ ।**
**ಅಪುತ್ರಾ ಜನನೀ ತೇಽದ್ಯ ಕೌಸಲ್ಯಾ ಚಾಪತಿಸ್ತ್ವಯಾ ॥೧೨॥**

ಜಾಜ್ವಲ್ಯಮಾನವಾದ ರಾಜ್ಯಲಕ್ಷ್ಮಿಯನ್ನು ಪರಿತ್ಯಜಿಸುವ ನೀನೀಗ ನಾಯಿಯಂತೆಯೇ ಲೋಕದ ಜನರಿಗೆ ಕಾಣುತ್ತಿರುವೆ. ನಿನ್ನ ಈ ಚರ್ಯೆಯಿಂದಾಗಿ ನಿನ್ನ ತಾಯಿಯು ಮಗನೇ ಇಲ್ಲದವಳಂತಾದಳು. ಅಭಾಗಿನಿ

ಯಾದ ಕೌಸಲ್ಯೆಯೂ (ನಾನೂ) ಪತಿಹೀನಳಾದಳು. ಧರ್ಮಕಾಮರಾದ ಈ ಕ್ಷತ್ರಿಯರು ನಿನ್ನ ಮೂಲಕವಾಗಿ ತಮ್ಮ ಅನೇಕ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳಬೇಕೆಂಬ ಅಭಿಲಾಷೆಯುಳ್ಳವರಾಗಿ ನಿನ್ನನ್ನೇ ಉಪಾಸನೆ ಮಾಡುತ್ತಿದ್ದಾರೆ. ನಿನ್ನ ಸೇವೆಯಲ್ಲಿಯೇ ತತ್ಪರರಾಗಿರುತ್ತಾರೆ. ದೀನರಾದ ಆ ಕ್ಷತ್ರಿಯರು ಯಾವಾಗಲೂ ಫಲಾರ್ಥಿಗಳಾಗಿರುತ್ತಾರೆ.

ಮಹಾರಾಜ! ಸರ್ವಸ್ವವನ್ನೂ (ಬಾಹ್ಯವಾಗಿ) ತ್ಯಾಗಮಾಡಿರುವುದರಿಂದಲೇ ಮೋಕ್ಷವು ಲಭಿಸುವುದೆಂಬ ನಿಶ್ಚಯವೇನೂ ಇಲ್ಲ. ದೇಹಿಗಳು ಯಾವಾಗಲೂ ಪರತಂತ್ರರು. ವಿಧಿಯ ಅಧೀನರಾಗಿರುತ್ತಾರೆ. (ಆದುದರಿಂದ ಮೋಕ್ಷವನ್ನು ಪಡೆಯುವ ಮೊದಲೇ ಸಾಯಬಹುದು.) ಹೀಗಿರುವಾಗ ನಿನ್ನನ್ನು ಆಶ್ರಯಿಸಿರುವವರೆಲ್ಲರನ್ನೂ ವಿಫಲರನ್ನಾಗಿಸಿ ಮುಂದೆ ನೀನು ಯಾವ ಲೋಕಕ್ಕೆ ಹೋಗುವೆಯೆಂಬುದೇ ನನಗೆ ತಿಳಿಯದಾಗಿದೆ.

**ನೈವ ತೇಽಸ್ತಿ ಪರೋ ಲೋಕೋ ನಾಪರಃ ಪಾಪಕರ್ಮಣಃ ।**
**ಧರ್ಮ್ಯಾನ್ದಾರಾನ್ಪರಿತ್ಯಜ್ಯ ಯಸ್ತ್ವಮಿಚ್ಛಸಿ ಜೀವಿತುಮ್ ॥೧೫॥**

ಧರ್ಮಪತ್ನಿಯನ್ನು ಪರಿತ್ಯಜಿಸಿ, ಏಕಾಕಿಯಾಗಿ ಜೀವಿಸಲಿಚ್ಛಿಸಿರುವ ಪಾಪಕರ್ಮನಾದ ನಿನಗೆ–ನನ್ನ ಅಭಿಪ್ರಾಯದಲ್ಲಿ–ಈ ಲೋಕವೂ ಸುಖದಾಯಕವಾಗುವುದಿಲ್ಲ. ಪರಲೋಕವೂ ಸುಖದಾಯಕವಾಗುವುದಿಲ್ಲ.

ಜನಕರಾಜ! ಮಾಲೆಗಳನ್ನೂ, ಪರಿಮಳದ್ರವ್ಯಗಳನ್ನೂ, ಅಲಂಕಾರ ವಸ್ತುಗಳನ್ನೂ, ಅನೇಕವಿಧವಾದ ವಸ್ತ್ರಗಳನ್ನೂ ಪರಿತ್ಯಜಿಸಿ ಕರ್ತವ್ಯಹೀನನಾಗಿ ಏತಕ್ಕಾಗಿ ನೀನು ಮನೆಯಿಂದ ಹೊರಡಲಿಚ್ಛಿಸಿರುವೆ?

**ನಿಪಾನಂ ಸರ್ವಭೂತಾನಾಂ ಭೂತ್ವಾ ತ್ವಂ ಪಾವನಂ ಮಹತ್ ।**
**ಆಢ್ಯೋ ವನಸ್ಪತಿರ್ಭೂತ್ವಾ ಸೋಽನ್ಯಾಂಸ್ತ್ವಂ ಪರ್ಯುಪಾಸಸೇ ॥೧೭॥**

ನೀನು ಸರ್ವಪ್ರಾಣಿಗಳಿಗೂ ನೀರನ್ನು ಒದಗಿಸುವ ಪವಿತ್ರವಾದ ಮತ್ತು ವಿಶಾಲವಾದ ಜಲಾಶಯದಂತಿದ್ದೆ. ಪಶು-ಪಕ್ಷಿಗಳೇ ಆದಿಯಾಗಿ ಸರ್ವಪ್ರಾಣಿಗಳೂ ಜಲಾಶಯದ ಬಳಿಗೆ ಹೋಗಿ ಬಾಯಾರಿಕೆಯನ್ನು ತೀರಿಸಿ

ಕೊಳ್ಳುವಂತೆ–ಎಲ್ಲ ಮಾನವರೂ ನಿನ್ನ ಬಳಿಗೆ ಬಂದು ತಮ-ತಮಗೆ ಬೇಕಾದುದನ್ನು ಪಡೆದುಕೊಂಡು ಹೋಗುತ್ತಿದ್ದರು. ನೀನು ಎಲ್ಲರಿಗೂ ಆಶ್ರಯನೀಡುವ ಪತ್ರ-ಫಲ-ಪುಷ್ಪಭರಿತವಾದ ವೃಕ್ಷದಂತೆಯೂ ಇದ್ದೆ. ಅನೇಕ ಸಾಮಂತರಾಜರು ನಿನ್ನ ಬಳಿಗೆ ಬಂದು ಆಶ್ರಯವನ್ನು ಪಡೆದುಕೊಳ್ಳುತ್ತಿದ್ದರು. ಅಂತಹ ನೀನೀಗ ನಿನ್ನ ಹಸಿವು-ತೃಷೆಗಳನ್ನು ನಿವಾರಿಸಿಕೊಳ್ಳಲು ಇತರರನ್ನು ಆಶ್ರಯಿಸುತ್ತಿರುವೆ. ಬೇರೆಯವರ ಆಶ್ರಯದಿಂದ ( ಭೈಕ್ಷ್ಯದಿಂದ ) ಜೀವಿಸಲು ನಿಶ್ಚಯಿಸಿರುವೆ.

**ಖಾದನ್ತಿ ಹಸ್ತಿನಂ ನ್ಯಾಸ್ಯೈಃ ಕ್ರವ್ಯಾದಾ ಬಹವೋಽಪ್ಯುತ ।**
**ಬಹವಃ ಕೃಮಯಶ್ಚೈವ ಕಿಂ ಪುನಸ್ತ್ವಾಮನರ್ಥಕಮ್ ॥೧೮॥**

ಎಲ್ಲ ವಿಧವಾದ ಆಹಾರ-ವಿಹಾರಗಳನ್ನೂ ತೊರೆದು ( ಯಾವ ಕರ್ಮವನ್ನೂ ಮಾಡದೇ ) ಆನೆಯೊಂದು ಅರಣ್ಯದಲ್ಲಿ ಮಲಗಿದರೆ–ಒಡನೆಯೇ ಅದನ್ನು ಮಾಂಸಾಶಿಗಳಾದ ಅನೇಕ ಪ್ರಾಣಿಗಳೂ ಮತ್ತು ಕ್ರಿಮಿಗಳೂ ಜೀವಸಹಿತವಾಗಿಯೇ ತಿಂದುಬಿಡುತ್ತವೆ. ಹೀಗಿರುವಾಗ ಪುರಾಷಾರ್ಥಶೂನ್ಯನಾದ ನಿನ್ನ ವಿಷಯದಲ್ಲಿ ಹೇಳುವುದೇನಿದೆ? ಆನೆಯನ್ನೇ ತಿಂದುಹಾಕುವ ಹಿಂಸ್ರಮೃಗಗಳು ಕೃಶಾಂಗನಾದ ನಿಷ್ಕರ್ಮಿಯಾದ ನಿನ್ನನ್ನು ತಿನ್ನದೇ ಬಿಡುವುವೇ? ನೀನು ರಾಜ್ಯ-ಕೋಶಗಳೆಲ್ಲವನ್ನೂ ಬಿಟ್ಟು ಅರಣ್ಯಕ್ಕೆ ಹೋಗುವುದರಿಂದ ನಿನ್ನ ದೇಹವು ನರಿ-ಹದ್ದುಗಳ ಪಾಲಾಗುತ್ತದೆಯೇ ಹೊರತು ಮತ್ತಾವ ಪುರುಷಾರ್ಥದ ಸಾಧನೆಯೂ ಆಗುವುದಿಲ್ಲ.

**ಯ ಇಮಾಂ ಕುಣ್ಡಿಕಾಂ ಭಿನ್ದ್ಯಾತ್ತ್ರಿವಿಷ್ಟಬ್ಧಂ ಚ ಯೋ ಹರೇತ್ ।**
**ವಾಸಶ್ಚಾಪಿ ಹರೇತ್ತಸ್ಮಿನ್ಕಥಂ ತೇ ಮಾನಸಂ ಭವೇತ್ ॥೧೯॥**

ನೀನು ಈ ನಿನ್ನ ವೇಷದಲ್ಲಿಯೇ ಮನೆಯನ್ನು ತ್ಯಜಿಸಿ ಅರಣ್ಯಕ್ಕೆ ಹೋದರೆ–ಒಬ್ಬನು ಬಂದು ಈ ನಿನ್ನ ಕಮಂಡಲುವನ್ನೇ ಒಡೆದುಹಾಕಬಹುದು. ಮತ್ತೊಬ್ಬನು ಈ ನಿನ್ನ ತ್ರಿದಂಡವನ್ನೇ ಅಪಹರಿಸಿಕೊಂಡು ಹೋಗಬಹುದು. ಇನ್ನೊಬ್ಬನು ನೀನು ಕಟ್ಟಿಕೊಂಡಿರುವ ಈ ವಸ್ತ್ರವನ್ನೂ

ಕಿತ್ತುಕೊಳ್ಳಬಹುದು. ಆ ಸಮಯದಲ್ಲಿ ಅವರ ವಿಷಯದಲ್ಲಿ ನಿನ್ನ ಮನಃಸ್ಥಿತಿಯು ಹೇಗಿರುತ್ತದೆ? ಹೇಳಬಲ್ಲೆಯಾ?

**ಯಸ್ತ್ವಯಂ ಸರ್ವಮುತ್ಸೃಜ್ಯ ಧಾನಾಮುಷ್ಟೇರನುಗ್ರಹಃ ।**
**ಯದಾನೇನ ಸಮಂ ಸರ್ವಂ ಕಿಮಿದಂ ಹ್ಯವಸೀಯಸೇ ॥೨೦॥**

ನೀನು ರಾಜ್ಯ-ಕೋಶಾದಿಗಳೆಲ್ಲವನ್ನೂ ಪರಿತ್ಯಜಿಸಿ ಮುಷ್ಟಿಯಷ್ಟು ಹುರಿದ ಹಿಟ್ಟಿನ ಅನುಗ್ರಹವನ್ನು ಅಪೇಕ್ಷಿಸುವೆಯಲ್ಲವೇ? ಜೀವಧಾರಣೆಗೆ ನೀನು ಇತರರಿಂದ ಹುರಿದ ಹಿಟ್ಟನ್ನು ಭಿಕ್ಷಾರೂಪದಿಂದಲಾದರೂ ತೆಗೆದು ಕೊಳ್ಳಲೇಬೇಕು. ಆದುದರಿಂದ ನೀನು ಸಂನ್ಯಾಸಿಯಾದರೂ ನಿನಗೊಂದು ವಸ್ತುವಿನ ಅಗತ್ಯವಿದೆ ಎಂದಂತಾಯಿತು. ಎಲ್ಲ ವಸ್ತುಗಳಲ್ಲಿಯೂ ನೀನು ಸಮಾನಭಾವನೆಯನ್ನು ಹೊಂದಿರುವೆಯಷ್ಟೆ! ಹುರಿದ ಹಿಟ್ಟಿಗೂ ರಾಜ್ಯಕ್ಕೂ ಯಾವ ವ್ಯತ್ಯಾಸವನ್ನೂ ನೀನು ಕಾಣದನಂತರ ರಾಜ್ಯವನ್ನಾದರೂ ನೀನು ಏಕೆ ಪರಿತ್ಯಾಗಮಾಡುವೆ? ಕಲ್ಲಿಗೂ ಚಿನ್ನಕ್ಕೂ ವ್ಯತ್ಯಾಸವಿಲ್ಲವೆಂದು ಜ್ಞಾನಿಯು ಭಾವಿಸಿಕೊಳ್ಳಬಹುದು. ಹಾಗೆ ಭಾವಿಸಿದ ಮಾತ್ರಕ್ಕೆ ಇರುವ ಚಿನ್ನವೆಲ್ಲವನ್ನೂ ಹೊರಗೆಸೆಯುವುದರಲ್ಲಿ ಅರ್ಥವಿಲ್ಲ. ಜೀವನಕ್ಕಾಗಿ ಹುರಿದ ಹಿಟ್ಟಾದರೂ ಬೇಕೇಬೇಕು. ಒಂದು ಬೇಕಾದರೆ ಮತ್ತೊಂದು ಏಕೆ ಬೇಡ? ಯಾವುದೂ ಬೇಡ–ಎಂದು ಹೇಳಿಕೊಂಡು ಮನುಷ್ಯನು ಬದುಕಿರಲಾರನು. ಜ್ಞಾನಿಯ ದೃಷ್ಟಿಯಲ್ಲಿ ಹುರಿದ ಹಿಟ್ಟಿಗೂ ರಾಜ್ಯಕ್ಕೂ ವ್ಯತ್ಯಾಸವಿಲ್ಲವೆಂದ ಮೇಲೆ ಹುರಿದ ಹಿಟ್ಟನ್ನು ಬಿಡಲಾರದಂತೆ ಜ್ಞಾನಿಯಾದವನು ರಾಜ್ಯವನ್ನೂ ಬಿಡುವ ಅಗತ್ಯವಿಲ್ಲ.

**ಧಾನಾಮುಷ್ಟೇರಿಹಾರ್ಥಶ್ಚೇತ್ಪ್ರತಿಜ್ಞಾ ತೇ ವಿನಶ್ಯತಿ ।**
**ಕಾ ವಾಹಂ ತವ ಕೋ ಮೇ ತ್ವಂ ಕಶ್ಚ ತೇ ಮಯ್ಯನುಗ್ರಹಃ ॥೨೧॥**

ನಿನ್ನ ಜೀವನಾರ್ಥವಾಗಿ ಹುರಿದ ಹಿಟ್ಟಿನ ಅಪೇಕ್ಷೆಯು ನಿನಗಿರುವುದಾದರೆ ಸರ್ವತ್ಯಾಗಮಾಡುವೆನೆಂಬ ನಿನ್ನ ಪ್ರತಿಜ್ಞೆಯು ಭಂಗವಾದಂತಾಗುತ್ತದೆ. ಎಲ್ಲವನ್ನೂ ಪರಿತ್ಯಾಗಮಾಡಲು ಪ್ರತಿಜ್ಞೆಮಾಡಿ ಅನಂತರ ಒಂದು ವಸ್ತುವನ್ನು ಅಪೇಕ್ಷಿಸಿದರೂ ಪ್ರತಿಜ್ಞೆಯ ಭಂಗವಾದಂತಾಗುತ್ತದೆ. ಪ್ರತಿಜ್ಞೆಯ ಭಂಗವಂತೂ ಆಗುವಾಗ ಧಾನಾಮುಷ್ಟಿಯ ಮೇಲಿನ ಅನುಗ್ರಹ

ವನ್ನೇ ನನ್ನ ಮೇಲೂ ಏಕೆ ಇಟ್ಟುಕೊಳ್ಳಬಾರದು? ಸರ್ವಪರಿತ್ಯಾಗ ಮಾಡಿದ ನಂತರ ನಾನು ನಿನಗೇನಾಗಬೇಕು? ನೀನು ನನಗೇನಾಗಬೇಕು? ನನ್ನ ಮೇಲೆ ನಿನ್ನ ಅನುಗ್ರಹವಾದರೂ ಏನಿದೆ? ನನ್ನ ಮೇಲೆ ನಿನಗೆ ಅನುಗ್ರಹಬುದ್ಧಿಯಿರುವುದಾದರೆ ಹಿಂದಿನಂತೆಯೇ ಈ ರಾಜ್ಯವನ್ನು ಶಾಸನ ಮಾಡು. ಅರಮನೆಯಲ್ಲಿ ವಾಸಮಾಡು. ಹಂಸತೂಲಿಕಾತಲ್ಪದಲ್ಲಿ ಪವಡಿಸು. ಸಮಲಂಕೃತವಾದ ರಥದಲ್ಲಿ ಕುಳಿತು ವಿಹರಿಸು. ಶ್ರೇಷ್ಠವಾದ ವಸ್ತ್ರಗಳನ್ನೂ–ಆಭರಣಗಳನ್ನೂ ಧರಿಸು.

**ಶ್ರಿಯಾ ವಿಹೀನೈರಧನೈಸ್ತ್ಯಕ್ತಮಿತ್ರೈರಕಿಂಚನೈಃ ।**
**ಸೌಖಿಕೈಃ ಸಮ್ಭೃತಾನರ್ಥಾನ್ಯಃ ಸಂತ್ಯಜತಿ ಕಿಂ ನು ತತ್ ॥೨೩॥**

ಕಾಂತಿಯಿಂದ ವಿಹೀನರಾದ, ನಿರ್ಧನರಾದ, ಬಂಧು-ಮಿತ್ರರಿಂದ ರಹಿತರಾದ, ಅಕಿಂಚನರಾದ ಸಂನ್ಯಾಸಿಗಳು ಸುಖಾಪೇಕ್ಷೆಯಿಂದಲೇ ಕಮಂಡಲು-ಕೃಷ್ಣಾಜಿನಗಳನ್ನು ಸಂಗ್ರಹಿಸಿಟ್ಟುಕೊಳ್ಳುತ್ತಾರೆ. ವಾಸ್ತವವಾಗಿ ಅವರು ಮಾಡಿರುವುದು ಸಂಗ್ರಹವೇ ಹೊರತು ತ್ಯಾಗವಲ್ಲ. ನಿರ್ಧನರಾದ ವರಿಗೆ ತ್ಯಾಗಮಾಡಲು ತಾನೇ ಏನಿದೆ? (ಸಂನ್ಯಾಸಿಗೆ ತ್ಯಾಗವೆಂಬುದೆಲ್ಲಿ ಬಂತು? ಅವನು ಯಾವುದನ್ನು ತ್ಯಾಗಮಾಡಬಲ್ಲನು? ಆ ತ್ಯಾಗದಿಂದ ಪ್ರಯೋಜನವೇನು? ಇವುಗಳು ಇಲ್ಲಿಯ ಪ್ರಶ್ನೆ. ರಾಜನಾದವನು ಸಂನ್ಯಾಸಿ ಯಾಗಿಬಿಟ್ಟರೆ ಅವನು ತ್ಯಾಗಮಾಡುವುದೇನಿದೆ? ಕೇವಲ ಕಮಂಡಲು-ಕೃಷ್ಣಾಜಿನಗಳನ್ನಷ್ಟೇ ತ್ಯಾಗಮಾಡಬೇಕು. ಕಮಂಡಲುವನ್ನು ತ್ಯಾಗಮಾಡಿದರೆ ಅದರಿಂದ ಯಾರಿಗೆ ಯಾವ ಪ್ರಯೋಜನವಿದೆ? ಸಂನ್ಯಾಸಿಯಾಗುವುದಕ್ಕೆ ಮೊದಲು ತ್ಯಾಗಶಬ್ದಕ್ಕೆ ಅರ್ಥವಿದೆ. ರಾಜನಾದವನು ಸಂಪಾದಿಸಿದುದೆಲ್ಲ ವನ್ನೂ ದಾನವಾಗಿ ಕೊಡುವುದು ತ್ಯಾಗವೆನಿಸಿಕೊಳ್ಳುತ್ತದೆ. ರಾಜತ್ವವನ್ನೇ ಬಿಟ್ಟು ಸಂನ್ಯಾಸಿಯಾಗುವುದು ತ್ಯಾಗವೆನಿಸಿಕೊಳ್ಳುವುದಿಲ್ಲ. ಕಮಂಡಲು-ಕೃಷ್ಣಾಜಿನ-ಹುರಿದಹಿಟ್ಟುಗಳನ್ನಾದರೂ ಅವನು ಸಂಗ್ರಹಿಸಲೇಬೇಕಾಗಿರು ವುದರಿಂದ ತ್ಯಾಗವು ಸಂನ್ಯಾಸಿಯ ವಿಷಯದಲ್ಲಿ ಸರಿಬರುವುದಿಲ್ಲ. ರಾಜ್ಯ-ಕೋಶಗಳನ್ನು ಬಿಡುವುದರಿಂದ ಯಾವ ಪುರುಷಾರ್ಥವನ್ನೂ ಸಾಧಿಸಿದಂತಾ ಗುವುದಿಲ್ಲ. ಆದುದರಿಂದ ತ್ಯಾಗಬುದ್ಧಿಯಿರುವ ರಾಜನು ಧರ್ಮದಿಂದ

ರಾಜ್ಯಭಾರಮಾಡುತ್ತಿದ್ದು ನಿರ್ಗತಿಕರಾದ ಸಂನ್ಯಾಸಿಗಳಿಗೆ ಆಶ್ರಯವನ್ನು ಕೊಡುವುದು ಯೋಗ್ಯವಾಗಿದೆ. ಈ ಶ್ಲೋಕಕ್ಕೆ ಇಷ್ಟು ವಿವರಣೆ ಕೊಡಬಹುದಾಗಿದೆ. ಆದರೆ ಇಲ್ಲಿಯ ಕೆಲವು ಶ್ಲೋಕಗಳಿಗೆ 'ಇದು ಹೀಗೆಯೇ ಸರಿ' ಎಂದು ಅರ್ಥಮಾಡಲು ಸಾಧ್ಯವಾಗುವುದಿಲ್ಲ.

ಹಿಂದೀ ವ್ಯಾಖ್ಯಾನಕಾರರು ಈ ಶ್ಲೋಕಕ್ಕೆ ಈ ರೀತಿಯಲ್ಲಿ ಅರ್ಥ ಮಾಡಿರುತ್ತಾರೆ. 'ಶ್ರೀ-ಧನ-ಮಿತ್ರಹೀನರಾದ, ದರಿದ್ರರಾದ, ಆದರೆ ಸುಖಾಭಿಲಾಷಿಗಳಾದ ಜನರಂತೆ ಎಲ್ಲ ಪ್ರಕಾರಗಳಿಂದಲೂ ಪರಿಪೂರ್ಣವಾದ ರಾಜ್ಯಲಕ್ಷ್ಮಿಯನ್ನು ಯಾರು ಪರಿತ್ಯಾಗಮಾಡುತ್ತಾರೆಯೋ–ಅದರಿಂದ ಅವರಿಗೇನು ಲಾಭವಿದೆ? ಶ್ರೀಹೀನ, ನಿರ್ಧನ, ಮಿತ್ರೋಂದ್ವಾರಾ ತ್ಯಾಗೇ ಹುಯೇ, ಅಕಿಂಚನ ಏವಂ ಸುಖಕೀ ಅಭಿಲಾಷಾ ರಖನೇವಾಲೇ ಲೋಗೋಂಕೀ ಭಾಂತಿ ಸಬ ಪ್ರಕಾರಸೇ ಪರಿಪೂರ್ಣ ರಾಜ್ಯಲಕ್ಷ್ಮೀ ಕಾ ಜೋ ಪರಿತ್ಯಾಗ ಕರತಾ ಹೈ ಉಸಸೇ ಉಸೆ ಕ್ಯಾ ಲಾಭ್?

ನೀಲಕಂಠರು ಈ ಶ್ಲೋಕಕ್ಕೆ ಹೀಗೆ ಅರ್ಥಮಾಡಿದ್ದಾರೆ. **ಸೌಖಿಕೈಃ = ಪರಮಸುಖಾರ್ಥಿಭಿಃ ಸಂನ್ಯಾಸಿಭಿಃ** – ಪರಮಸುಖಾಭಿಲಾಷಿಗಳಾದ ಸಂನ್ಯಾಸಿಗಳಿಂದ, **ಸಂಭೃತಾನರ್ಥಾನ್ = ಕುಣ್ಡಿಕಾದೀನ್ ವೀಕ್ಷ್ಯ**– ಸಂಪಾದಿಸಲ್ಪಟ್ಟ ಕಮಂಡಲುವೇ ಮೊದಲಾದುವನ್ನು ನೋಡಿ, **ಯಃ ಸ್ವಯಮಪಿ ತಥಾ ಕರೋತಿ**–ಯಾವನು ತಾನೂ ಹಾಗೆಯೇ ಮಾಡಲು ಹೋಗುತ್ತಾನೆಯೋ ಅವನು, **ಕಿಂ ನು ತತ್ ರಾಜ್ಯಾದಿಕಂ ತ್ಯಜತ್ಯಪಿ** = ರಾಜ್ಯಾದಿಗಳನ್ನು ಪರಿತ್ಯಾಗಮಾಡಿದರೂ **ನೈವ ತ್ಯಜತಿ ಕಿಂ ನು ಉಚಿತಂ ಪರಿಗ್ರಹಂ ತ್ಯಕ್ತ್ವಾ**–ರಾಜೋಚಿತವಾದ ಪರಿಗ್ರಹಕಾರ್ಯವನ್ನು ತ್ಯಜಿಸಿ, **ದೈವೋಪಹತತ್ವಾದನುಚಿತಂ ಪರಿಗ್ರಹಾಂತರಮೇವ ಕರೋತಿ** = ದೈವೋಪಹತನಾದುದರಿಂದ ಅನುಚಿತವಾದ ಬೇರೆರೀತಿಯ ಪರಿಗ್ರಹವನ್ನೇ ಮಾಡುತ್ತಾನೆ. **ಇತ್ಯಸಂಗತ್ವಂ ಅಸ್ಯ ದುರ್ಲಭಮಿತ್ಯರ್ಥಃ** –ರಾಜನಿಗೆ ಯುಕ್ತವಾದ ಕರಾದಿ ಪರಿಗ್ರಹವನ್ನು ಬಿಟ್ಟಂತಾಯಿತು. ಅಹಿತವಾದ ಧಾನಾಮುಷ್ಟಿಯನ್ನು ಪರಿಗ್ರಹಿಸಿದಂತಾಯಿತು. ಆದುದರಿಂದ ಸಂನ್ಯಾಸಿಯಾದರೂ ಸಂಗವು ತಪ್ಪಲೇ ಇಲ್ಲ. ಇದು ವ್ಯಾಖ್ಯಾನಕಾರರ ವ್ಯಾಖ್ಯೆ

ಯಾಗಿದೆ. ವೀಕ್ಷ್ಯ ಎಂಬುದರಿಂದ ಮುಂದಿರುವ ವಾಕ್ಯಗಳೆಲ್ಲವೂ ಅಧ್ಯಾಹಾರ ಅಥವಾ ಅರ್ಥವಿಸ್ತಾರಗಳೇ ಆಗಿದೆ. )

**ಯೋಽತ್ಯನ್ತಂ ಪ್ರತಿಗೃಹ್ಣೀಯಾದ್ಯಶ್ಚ ದದ್ಯಾತ್ಸದೈವ ಹಿ ।**
**ತಯೋಸ್ತ್ವಮನ್ತರಂ ವಿದ್ಧಿ ಶ್ರೇಯಾಂಸ್ತಾಭ್ಯಾಂ ಕ ಉಚ್ಯತೇ ॥೨೪॥**

ಯಾರು ಯಾವಾಗಲೂ ಪರಿಗ್ರಹಮಾಡುವುದರಲ್ಲಿಯೇ ಆಸಕ್ತನಾಗಿರುತ್ತಾನೆಯೋ ಮತ್ತು ಯಾರು ಯಾವಾಗಲೂ ದಾನಕೊಡುವುದರಲ್ಲಿಯೇ ಆಸಕ್ತನಾಗಿರುತ್ತಾನೆಯೋ–ಅವರಿಬ್ಬರಲ್ಲಿರುವ ವ್ಯತ್ಯಾಸವನ್ನು ತಿಳಿ. ಇಬ್ಬರಲ್ಲಿ ಯಾರು ಶ್ರೇಷ್ಠರೆನಿಸಿಕೊಳ್ಳುತ್ತಾರೆ?–ಎಂಬುದನ್ನು ನೀನೇ ನಿರ್ಧರಿಸು. (ಸಂನ್ಯಾಸಿಯಾದವನು ಯಾವಾಗಲೂ ಪರಿಗ್ರಹಿಸುವವನೇ ಹೊರತು ಕೊಡುವವನಲ್ಲ. ಆ ಪರಿಗ್ರಹವು ಜೀವನನಿರ್ವಹಣೆಗಾಗಿ ಒಂದು ಮುಷ್ಟಿ ಹುರಿದ ಧಾನ್ಯವೇ ಆಗಿರಬಹುದು. ಅನವರತವಾಗಿ ಅದನ್ನು ಪರಿಗ್ರಹಿಸದೇ ಸಂನ್ಯಾಸಿಯು ಜೀವಿಸಿರಲಾರನು. ಮತ್ತೊಬ್ಬನು ದಾನಶೀಲನಾದ ಶ್ರೀಮಂತ ಅಥವಾ ರಾಜ. ಅವನು ಯಾವಾಗಲೂ ದಾನಮಾಡುತ್ತಾನೆ. ಈ ಇಬ್ಬರಲ್ಲಿರುವ ಅಂತರವನ್ನು ತಿಳಿದುಕೊಳ್ಳಬೇಕು. ಯಾವಾಗಲೂ ದಾನಮಾಡುವವನು ಶ್ರೇಷ್ಠನೋ? ಯಾವಾಗಲೂ ದಾನಪಡೆಯುವವನು ಶ್ರೇಷ್ಠನೋ? ಪ್ರತಿಗ್ರಹಮಾಡುವವನಿಗೆ ಪ್ರತಿಗ್ರಹಿಸುವ ಯೋಗ್ಯತೆಯಿದೆ. ಅವನು ಸತ್ಪಾತ್ರನಾದುದರಿಂದಲೇ ದಾನಶೀಲನು ಅಂತಹವನಿಗೆ ದಾನಮಾಡುತ್ತಾನೆ–ಎಂಬುದೂ ನಿಜ. ಆದರೆ ದಾನಮಾಡಿದ ನಂತರದ ಪರಿಣಾಮವೇನು? ನಿರಂತರದಾನದಿಂದಾಗಿ ರಾಜನು ನಿಷ್ಪಾಪನಾಗುತ್ತಾನೆ. ದುಷ್ಕರ್ಮಫಲಗಳನ್ನು ನಿವಾರಣೆಮಾಡಿಕೊಳ್ಳುತ್ತಾನೆ. ಶ್ರೇಯಸ್ಸಿಗೆ ಭಾಜನನಾಗುತ್ತಾನೆ. ಪ್ರತಿಗ್ರಹಕ್ಕೆ ಅನುಗುಣವಾದ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಳ್ಳಬಹುದು. ಆದರೆ ದಾನದ ಸ್ವೀಕಾರದಿಂದ ಪುಣ್ಯವು ಕಳೆದುಹೋಗುವಷ್ಟು ಶೀಘ್ರವಾಗಿ ಜಪ-ತಪಾದಿಗಳಿಂದ ಪುಣ್ಯವನ್ನು ಗಳಿಸಿಕೊಳ್ಳುವುದು ಕಷ್ಟ. ಆದುದರಿಂದ ದಾನಮಾಡುವವನು ಯಾವಾಗಲೂ ಶ್ರೇಯಸ್ಸಿಗೆ ಭಾಜನನಾಗುತ್ತಾನೆ. ನಿರಂತರವಾಗಿ ಪ್ರತಿಗ್ರಹಮಾಡುವವನು ಪಾಪಭೂಯಿಷ್ಠನಾಗದಿದ್ದರೂ ಶೀಘ್ರದಲ್ಲಿಯೇ ಶ್ರೇಯಸ್ಸಿಗೆ ಭಾಜನನಾಗು

ವುದಿಲ್ಲ. ಆದುದರಿಂದ ಯಾಚಕರಿಗೆ ಆಶ್ರಿತನಾಗಿರಬೇಕೇ ಹೊರತು, ತಾನೇ ಯಾಚಕ ( ಸಂನ್ಯಾಸಿ ) ನಾಗಬಾರದು.

**ಸದೈವ ಯಾಚಮಾನೇಷು ತಥಾ ದಮ್ಭಾನ್ವಿತೇಷು ಚ ।**
**ಏತೇಷು ದಕ್ಷಿಣಾ ದತ್ತಾ ದಾವಾಗ್ನಾವಿವ ದುರ್ಹುತಮ್ ॥೨೫॥**

ಉದರಂಭರಣಕ್ಕಾಗಿ ನಿರಂತರವಾಗಿ ಯಾಚನೆಮಾಡುವವನಿಗೆ ದಾನ ಮಾಡುವುದರಿಂದ ದಾನಿಗಾದರೂ ಪ್ರಯೋಜನವಿರುವುದೇ? ಅದೂ ಇಲ್ಲ. ಎಲ್ಲ ಕಾಲಗಳಲ್ಲಿಯೂ ಯಾಚನೆಮಾಡುತ್ತಿರುವವನಿಗೆ ಮತ್ತು ದಾಂಭಿಕನಿಗೆ (ತಾನು ಮಹಾಧರ್ಮಿಷ್ಠನೆಂದು ಸೋಗುಹಾಕುವವನಿಗೆ ) ಕೊಡುವ ದಕ್ಷಿಣೆಯು ದಾವಾಗ್ನಿಯಲ್ಲಿ ಹೋಮಮಾಡಿದಂತೆ ವ್ಯರ್ಥವೇ ಆಗುತ್ತದೆ.

**ಜಾತವೇದಾ ಯಥಾ ರಾಜನ್ನಾದಗ್ಧ್ವೈವೋಪಶಾಮ್ಯತಿ ।**
**ಸದೈವ ಯಾಚಮಾನೋ ಹಿ ತಥಾ ಶಾಮ್ಯತಿ ನ ದ್ವಿಜಃ ॥೨೬॥**

ಯಾವ ರೀತಿಯಲ್ಲಿ ಅಗ್ನಿಯು ತನ್ನಲ್ಲಿ ಹಾಕುವ ಇಂಧನವನ್ನು ಸುಟ್ಟು ಹಾಕದೇ ಉಪಶಮನಗೊಳ್ಳುವುದಿಲ್ಲವೋ–ಅದೇ ರೀತಿಯಲ್ಲಿ ಸದಾಕಾಲ ದಲ್ಲಿಯೂ ಯಾಚನೆಯನ್ನೇ ಮಾಡುವ ದ್ವಿಜನು ತನ್ನ ಯಾಚನೆಯು ಫಲಿತ ವಾಗುವವರೆಗೂ ಶಾಂತನಾಗುವುದಿಲ್ಲ. ( ಯಾಚನೆಯು ಫಲಿಸದಿದ್ದರೆ ಕೋಪವೂ ಬರಬಹುದು. )

**ಸತಾಂ ವೈ ದದತೋಽನ್ನಂ ಚ ಲೋಕೇಽಸ್ಮಿನ್ಪ್ರಕೃತಿರ್ಧ್ರುವಾ ।**
**ನ ಚೇದ್ರಾಜಾ ಭವೇದ್ದಾತಾ ಕುತಃಸ್ಯುರ್ಮೋಕ್ಷಕಾಂಕ್ಷಿಣಃ ॥೨೭॥**

ಈ ಪ್ರಪಂಚದಲ್ಲಿ ದಾನಿಗಳು ಕೊಡುವ ಅನ್ನವೇ ಸಾಧು-ಸತ್ಪುರುಷರ (ಸಂನ್ಯಾಸಿಗಳ ) ಜೀವಿಕೆಗೆ ಶಾಶ್ವತವಾದ ಆಧಾರವಾಗಿರುತ್ತದೆ. ಅಥವಾ ಸತ್ಪುರುಷರಿಗೆ ದಾನಮಾಡುವ ರಾಜನಿಗೆ ಈ ಲೋಕದಲ್ಲಿ ಸ್ವಾಮ್ಯಮಾತ್ಯ ಸುಹೃತ್ಕೋಶ ರಾಷ್ಟ್ರದುರ್ಗ ಸೈನ್ಯಪ್ರಜಾತ್ಮಕವಾದ ಪ್ರಕೃತಿಯು ( ರಾಜ್ಯವು ) ಸ್ಥಿರವಾಗಿರುತ್ತದೆ. ರಾಜನು ದಾನಿಯಾಗಿರದಿದ್ದರೆ ಮೋಕ್ಷಾಪೇಕ್ಷಿಗಳಾದ ಮುನಿಗಳು ಎಲ್ಲಿರುತ್ತಿದ್ದರು?

---

* ೨೭ನೆಯ ಶ್ಲೋಕದಲ್ಲಿರುವ ಪ್ರಕೃತಿಃ = ಎಂಬುದಕ್ಕೆ ವ್ಯಾಖ್ಯಾನಕಾರರು ಜೀವನಂ ಎಂದು ಅರ್ಥಮಾಡಿರುತ್ತಾರೆ. ಸತಾಂ = ಸಂನ್ಯಾಸಿನಾಂ, ಪ್ರಕೃತಿಃ = ಜೀವನಂ.

**ಅನ್ನಾದ್ಗೃಹಸ್ಥಾ ಲೋಕೇಽಸ್ಮಿನ್ಭಿಕ್ಷವಸ್ತತ ಏವ ಚ ।**
**ಅನ್ನಾತ್ಪ್ರಾಣಃ ಪ್ರಭವತಿ ಅನ್ನದಃ ಪ್ರಾಣದೋ ಭವೇತ್ ॥೨೮॥**

ಈ ಲೋಕದಲ್ಲಿ ಅನ್ನವನ್ನು ದಾನಮಾಡುವುದರಿಂದ ಗೃಹಸ್ಥರಾಗುತ್ತಾರೆ. ಅದೇ ಅನ್ನವನ್ನು ಭಿಕ್ಷೆ ಬೇಡುವುದರಿಂದ ಸಂನ್ಯಾಸಿಗಳಾಗುತ್ತಾರೆ. ಅನ್ನದಿಂದಲೇ ಪ್ರಾಣಶಕ್ತಿಯು ಅಭಿವೃದ್ಧಿಹೊಂದುತ್ತದೆ. ಆದುದರಿಂದ ಅನ್ನವನ್ನು ಕೊಡುವವನು ಪ್ರಾಣಪ್ರದನೂ ಆಗುತ್ತಾನೆ.

**ಗೃಹಸ್ಥೇಭ್ಯೋಽಪಿ ನಿರ್ಮುಕ್ತಾ ಗೃಹಸ್ಥಾನೇವ ಸಂಶ್ರಿತಾಃ ।**
**ಪ್ರಭವಂ ಚ ಪ್ರತಿಷ್ಠಾಂ ಚ ದಾನ್ತಾ ವಿನ್ದನ್ತ ಆಸತೇ ॥೨೯॥**

ಜಿತೇಂದ್ರಿಯರಾದ ಸಂನ್ಯಾಸಿಗಳು ಗೃಹಸ್ಥಾಶ್ರಮದಿಂದ ಮುಕ್ತರಾಗಿದ್ದರೂ ಗೃಹಸ್ಥರನ್ನೇ ಆಶ್ರಯಿಸಿರುತ್ತಾರೆ. ಆದುದರಿಂದ ಸಂನ್ಯಾಸಿಗಳ ಉಗಮಸ್ಥಾನವೂ ಮತ್ತು ಜೀವನನಿರ್ವಹಣೆಯ ಸ್ಥಾನವೂ ಗೃಹಸ್ಥಾಶ್ರಮವೇ ಆಗಿದೆ. ಮೊದಲು ಗೃಹಸ್ಥರಾಗಿದ್ದು ಅನಂತರ ಸಂನ್ಯಾಸಿಗಳಾಗುವುದರಿಂದ ಆ ಸಂನ್ಯಾಸಿಗಳ ಉಗಮಸ್ಥಾನವು ಗೃಹಸ್ಥಾಶ್ರಮವೇ ಆಗಿರುತ್ತದೆ. ಸಂನ್ಯಾಸಿಗಳು ಗೃಹಸ್ಥರನ್ನೇ ಆಶ್ರಯಿಸಿ ಜೀವನವನ್ನು ನಿರ್ವಹಿಸಬೇಕಾಗಿರುವುದರಿಂದ ಅವರು ಗೃಹಸ್ಥರಲ್ಲಿಯೇ ಪ್ರತಿಷ್ಠಿತರಾಗಿರುತ್ತಾರೆ.

**ತ್ಯಾಗಾನ್ನ ಭಿಕ್ಷುಕಂ ವಿದ್ಯಾನ್ನ ಮೌಢ್ಯಾನ್ನ ಚ ಯಾಚನಾತ್ ।**
**ಋಜುಸ್ತು ಯೋಽರ್ಥಂ ತ್ಯಜತಿ ನ ಸುಖಂ ವಿದ್ಧಿ ಭಿಕ್ಷುಕಮ್ ॥೩೦॥**

ಎಲ್ಲವನ್ನೂ ತ್ಯಾಗಮಾಡುವುದರಿಂದಲೇ ಒಬ್ಬನು ಸಂನ್ಯಾಸಿಯಾಗುವುದಿಲ್ಲ. ಸಂನ್ಯಾಸಸ್ವೀಕಾರದಿಂದಲೇ ಮೋಕ್ಷವು ಸಿಕ್ಕುವುದೆಂಬ ಮೌಢ್ಯದಿಂದ ಸಂನ್ಯಾಸವನ್ನು ತೆಗೆದುಕೊಂಡವನೂ ಸಂನ್ಯಾಸಿಯಾಗುವುದಿಲ್ಲ. ಯಾಚನೆ ಮಾಡುವುದರಿಂದಲೂ ಸಂನ್ಯಾಸಿಯಾಗುವುದಿಲ್ಲ. ಸರಳಸ್ವಭಾವದಿಂದಿರುತ್ತಾ ಯಾವನು ಸ್ವಾರ್ಥವನ್ನು ತ್ಯಜಿಸುವನೋ ಮತ್ತು ರಾಜೋಚಿತವಾದ ಸುಖವನ್ನು ಪರಿತ್ಯಜಿಸದೇ ನಿರ್ಲಿಪ್ತತೆಯಿಂದ ಅನುಭವಿಸುವನೋ– ಅವನನ್ನೇ ಭಿಕ್ಷುವೆಂದು ತಿಳಿ.

**ಅಸಕ್ತಃ ಸಕ್ತವದ್ಗಚ್ಛನ್ನಿಃಸಙ್ಗೋ ಮುಕ್ತ ಬನ್ಧನಃ ।**
**ಸಮಃ ಶತ್ರೌ ಚ ಮಿತ್ರೇ ಚ ಸ ವೈ ಮುಕ್ತೋ ಮಹೀಪತೇ ॥೩೧॥**

ಮಹೀಪತಿಯೇ! ಯಾವನು ಯಾವುದರಲ್ಲಿಯೂ ಆಸಕ್ತಿಯಿಲ್ಲದಿದ್ದರೂ ಆಸಕ್ತನಂತೆ ಲೋಕವ್ಯವಹಾರಗಳನ್ನು ನಡೆಸಿಕೊಂಡು ಹೋಗುತ್ತಾನೆಯೋ–ಸಂಗರಹಿತನಾಗಿ ಎಲ್ಲ ವಿಧವಾದ ಬಂಧನಗಳಿಂದಲೂ ಮುಕ್ತನಾಗಿರುವನೋ–ಮಿತ್ರನಲ್ಲಾಗಲೀ, ಶತ್ರುವಿನಲ್ಲಾಗಲೀ ಸಮಭಾವನೆಯನ್ನೇ ಇಟ್ಟಿರುವನೋ–ಅವನು ರಾಜ್ಯಾಧಿಪತಿಯೇ ಆಗಿದ್ದರೂ ಸರ್ವದಾ ಮುಕ್ತನಾಗಿಯೇ ಇರುತ್ತಾನೆ.

**ಪರಿವ್ರಜನ್ತಿ ದಾನಾರ್ಥಂ ಮುಣ್ಡಾಃ ಕಾಷಾಯವಾಸಸಃ ।**
**ಸಿತಾ ಬಹುವಿಧೈಃ ಪಾಶೈಃ ಸಂಚಿನ್ವನ್ತೋ ವೃಥಾಮಿಷಮ್ ॥೩೨॥**

ತಲೆಯನ್ನು ಮುಂಡನಮಾಡಿಸಿಕೊಂಡು ಕಾಷಾಯವಸ್ತ್ರಧಾರಿಗಳಾದ ಸಂನ್ಯಾಸಿಗಳು ಪರಿಗ್ರಹಾರ್ಥವಾಗಿ ಅಲೆದಾಡುತ್ತಿರುತ್ತಾರೆ. ನಾನಾವಿಧವಾದ ಆಶಾಪಾಶಗಳಿಂದ ಬದ್ಧರಾಗಿ ಸುಖಸಾಮಗ್ರಿಗಳನ್ನೇ ಯಾವಾಗಲೂ ಯೋಚಿಸುತ್ತಿರುತ್ತಾರೆ. (ವ್ಯಾಖ್ಯಾನಕಾರರು **ಸಿತಾಃ ಬಹುವಿಧೈಃ ಪಾಶೈಃ** = ಬಹುವಿಧವಾದ ಆಶಾಪಾಶಗಳಿಂದ ಬದ್ಧರಾಗಿ–ಎಂಬುದನ್ನು ಹೀಗೆ ವಿಸ್ತರಿಸಿದ್ದಾರೆ : **ಮಠೋ ಮೇ ಭೂಯಾತ್**–ನನಗೊಂದು ಮಠವಾಗಬೇಕು. **ಶಿಷ್ಯೋ ಮೇ ಭೂಯಾತ್**–ನನಗೊಬ್ಬ ಶಿಷ್ಯನು ಸಿಗಬೇಕು. **ಮಾನೋ ಮೇ ಭೂಯಾತ್**–ನನ್ನನ್ನು ಎಲ್ಲರೂ ಗೌರವಿಸಬೇಕು **ಇತ್ಯಾದಿಭಿಃ**)

**ತ್ರಯೀಂ ಚ ನಾಮ ವಾರ್ತಾಂ ಚ ತ್ಯಕ್ತ್ವಾ ಪುತ್ರಾನ್ವ್ರಜನ್ತಿ ಯೇ ।**
**ತ್ರಿವಿಷ್ಟಬ್ಧಂ ಚ ವಾಸಶ್ಚ ಪ್ರತಿಗೃಹ್ಣನ್ತ್ಯಬುದ್ಧಯಃ ॥೩೩॥**

ಯಾರು ಮೂರು ವೇದಗಳ ಅಧ್ಯಯನವನ್ನೂ ಮತ್ತು ವೇದಗಳಲ್ಲಿ ಉಕ್ತವಾಗಿರುವ ಕರ್ಮಗಳನ್ನೂ, ಕೃಷಿ-ಗೋರಕ್ಷಾ-ವಾಣಿಜ್ಯಾದಿ ಲೌಕಿಕ ವ್ಯವಹಾರಗಳನ್ನೂ ಮತ್ತು ಪುತ್ರರನ್ನೂ ಪರಿತ್ಯಜಿಸಿ ಹೊರಡುತ್ತಾರೆಯೋ–ತ್ರಿದಂಡವನ್ನು ಹಿಡಿದು ಕಾಷಾಯವಸ್ತ್ರವನ್ನು ಪ್ರತಿಗ್ರಹಿಸುತ್ತಾರೆಯೋ–ಅವರು ಬುದ್ಧಿಹೀನರೇ ಸರಿ. ಏಕೆಂದರೆ : ಅವರು ತ್ಯಾಗಮಾಡಬಾರದುದನ್ನು ತ್ಯಾಗಮಾಡಿದರೂ ಪ್ರತಿಗ್ರಹವು ತಪ್ಪುವುದಿಲ್ಲ.

**ಅನಿಷ್ಕಷಾಯೇ ಕಾಷಾಯಮೀಹಾರ್ಥಮಿತಿ ವಿದ್ಧಿ ತಮ್ ।**
**ಧರ್ಮಧ್ವಜಾನಾಂ ಮುಣ್ಡಾನಾಂ ವೃತ್ತ್ಯರ್ಥಮಿತಿ ಮೇ ಮತಿಃ ॥೩೪॥**

ಹೃದಯದಲ್ಲಡಗಿಕೊಂಡಿರುವ ಕಷಾಯವು (ರಾಗಾದಿಗಳು) ಸಂಪೂರ್ಣವಾಗಿ ಹೋಗದೇ ಬಹಿರಂಗವಾಗಿ ಕಾಷಾಯವಸ್ತ್ರವನ್ನು ಧರಿಸುವುದು ಸ್ವಾರ್ಥಸಾಧನೆಯ ಒಂದು ವೇಷವೆಂದೇ ತಿಳಿ. ಧರ್ಮದ ಸೋಗನ್ನು ಹಾಕಿಕೊಂಡು ತಿರುಗುವ ಈ ಮುಂಡರಿಗೆ ಸಂನ್ಯಾಸವೆಂಬುದು ಒಂದು ಜೀವಿಕೆಯ ವಿಧಾನವಾಗಿರುವುದೆಂದೇ ನನ್ನ ಅಭಿಪ್ರಾಯವಾಗಿದೆ.

**ಕಾಷಾಯೈರಜಿನೈಶ್ಚೀರೈರ್ನಗ್ನಾನ್ಮುಣ್ಡಾಞ್ಜಟಾಧರಾನ್ ।**
**ಬಿಭ್ರತ್ಸಾಧೂನ್ಮಹಾರಾಜ ಜಯ ಲೋಕಾಞ್ಜಿತೇನ್ದ್ರಿಯಃ ॥೩೫॥**

ಅವರು ಹೇಗಾದರೂ ತಮ್ಮ ಜೀವಿಕೆಯನ್ನು ನಡೆಸಿಕೊಳ್ಳಲಿ–ನೀನು ಮಾತ್ರ ಆ ಮಾರ್ಗವನ್ನು ಹಿಡಿದು ಹೋಗುವುದು ಉಚಿತವಲ್ಲ. ನೀನು ಜಿತೇಂದ್ರಿಯನಾಗಿ ರಾಜ್ಯಭಾರಮಾಡುತ್ತಾ ಮುಂಡನಮಾಡಿಸಿಕೊಂಡಿರುವ ಸಂನ್ಯಾಸಿಗಳನ್ನೂ, ನಗ್ನರನ್ನೂ (ಅವಧೂತರನ್ನೂ) ಮತ್ತು ಜಟಾಧಾರಿಗಳಾದ ಸಾಧುಗಳನ್ನೂ ಕಾಷಾಯ-ಕೃಷ್ಣಾಜಿನ-ವಲ್ಕಲಗಳ ಪ್ರದಾನಗಳಿಂದ ಸತ್ಕರಿಸುತ್ತಾ, ಅವರ ಭರಣ-ಪೋಷಣೆಗಳನ್ನು ಮಾಡುತ್ತಾ ಪುಣ್ಯಲೋಕಗಳನ್ನು ಜಯಿಸು. ಹೀಗೆ ಮಾಡುವುದೇ ನಿನ್ನ ಮುಖ್ಯಕರ್ತವ್ಯವಾಗಿರುತ್ತದೆ.

**ಅಗ್ನ್ಯಾಧೇಯಾನಿ ಗುರ್ವರ್ಥಂ ಕ್ರತೂನಪಿ ಸುದಕ್ಷಿಣಾನ್ ।**
**ದದಾತ್ಯಹರಹಃ ಪೂರ್ವಂ ಕೋ ನು ಧರ್ಮರತಸ್ತತಃ ॥೩೬॥**

ಯಾವನು ಅನುದಿನವೂ ಗುರುಗಳು ಮಾಡುವ ಅಗ್ನ್ಯಾಧಾನಾದಿ ಕಾರ್ಯಗಳ ಸಲುವಾಗಿ ಬೇಕಾಗುವ ಧನವನ್ನೂ, ಇತರ ಹೋಮದ್ರವ್ಯಗಳನ್ನೂ ಒದಗಿಸಿಕೊಡುವನೋ–ಉತ್ತಮದಕ್ಷಿಣೆಗಳಿಂದ ಯುಕ್ತವಾದ ಯಜ್ಞಗಳನ್ನು ಮಾಡಿ ಯಥೇಚ್ಛವಾಗಿ ದಾನಗಳನ್ನು ಕೊಡುವನೋ–ಅವನಿಗಿಂತಲೂ ಶ್ರೇಷ್ಠರಾದ ಧರ್ಮಪರಾಯಣರು ಬೇರೆ ಯಾರಿದ್ದಾರೆ?”

ಯುಧಿಷ್ಠಿರ! ಜನಕನ ಭಾರ್ಯೆಯು–ಇವೇ ಮುಂತಾದ ಯಥಾರ್ಥವಾದ ಯುಕ್ತಿಯುಕ್ತವಾದ ಮಾತುಗಳನ್ನು ಎಲ್ಲವನ್ನೂ ಪರಿತ್ಯಜಿಸಿ ಹೊರ

ಟಿದ್ದ ಜನಕನೊಡನೆ ಹೇಳಿದಳು. ಜನಕನು ಈ ಲೋಕದಲ್ಲಿ ಮಹಾ ತತ್ತ್ವಜ್ಞನೆಂದು ವಿಖ್ಯಾತನಾಗಿರುತ್ತಾನೆ. ಅವನೂ ಕೂಡ ಒಮ್ಮೆ ನಿನ್ನಂತೆಯೇ ಮೋಹವಶನಾಗಿದ್ದನು. ಅವನ ಪತ್ನಿಯು ಸಮಯೋಚಿತವಾದ ಮಾತು ಗಳನ್ನು ಹೇಳಿದ ನಂತರ ತನ್ನ ನಿರ್ಧಾರವನ್ನು ಬದಲಾಯಿಸಿ ಯಥಾ ಪೂರ್ವವಾಗಿ ರಾಜ್ಯಭಾರವನ್ನು ಮಾಡತೊಡಗಿದನು. ಜನಕನಂತೆ ನೀನೂ ಮೋಹವಶನಾಗಬೇಡ. ಸಂದರ್ಭಾನುಸಾರವಾಗಿ ಮೋಹವಶನಾಗಿದ್ದರೂ ನಮ್ಮೆಲ್ಲರ ಮಾತುಗಳನ್ನು ಕೇಳಿದ ಮೇಲಾದರೂ ನಿನಗುಂಟಾಗಿರುವ ಭ್ರಾಂತಿಯನ್ನು ದೂರೀಕರಿಸು. ಹೀಗೆ ನಾವೂ ಸಹ ಸದಾಕಾಲದಲ್ಲಿಯೂ ದಾನ ಮತ್ತು ತಪಸ್ಸುಗಳಲ್ಲಿಯೇ ನಿರತರಾಗಿರುತ್ತಾ, ಧರ್ಮಾನುಸರಣೆಯನ್ನು ಮಾಡುತ್ತಾ ದಯಾಗುಣಸಂಪನ್ನರಾಗಿ, ಕಾಮ-ಕ್ರೋಧಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿ, ದಾನಧರ್ಮವನ್ನೇ ಆಶ್ರಯಿಸಿ, ಪ್ರಜಾ ಪಾಲನತತ್ಪರರಾಗಿ, ಗುರುಜನರ ಮತ್ತು ವೃದ್ಧರ ಸೇವೆಯಲ್ಲಿ ನಿರತರಾಗಿದ್ದು, ನಮಗೆ ಇಷ್ಟವಾದ ಪುಣ್ಯಲೋಕಗಳನ್ನು ಪಡೆದುಕೊಳ್ಳೋಣ. ಅಂತೆಯೇ ನಾವು ದೇವತೆಗಳಿಗೂ, ಅತಿಥಿಗಳಿಗೂ, ಪ್ರಾಣಿಗಳಿಗೂ ಯಥಾವಿಧಿಯಾಗಿ ಅವರವರ ಭಾಗಗಳನ್ನು ಆಯಾ ಕಾಲಗಳಲ್ಲಿ ಸಮರ್ಪಿಸುತ್ತಾ ಬ್ರಾಹ್ಮಣ ಪ್ರಿಯರಾಗಿ ಸತ್ಯನಿಷ್ಠರಾಗಿದ್ದು ಇಷ್ಟವಾದ ಪುಣ್ಯಲೋಕಗಳನ್ನು ಪಡೆದು ಕೊಳ್ಳೋಣ. ಹೀಗಿದ್ದರೆ ನಮಗೆ ಉತ್ತಮವಾದ ಪುಣ್ಯಲೋಕಗಳು ಖಂಡಿತ ವಾಗಿಯೂ ಲಭಿಸುತ್ತವೆ."

ಗ೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ತನ್ನ ನಿಶ್ಚಿತಾಭಿಪ್ರಾಯವನ್ನೇ ಪುನಃ ಪ್ರತಿಪಾದಿಸಿದುದು

ಯುಧಿಷ್ಠಿರನು ಹೇಳುತ್ತಾನೆ :

"ಮಗು! ಅರ್ಜುನ! ನಾನು ಧರ್ಮಶಾಸ್ತ್ರವನ್ನೂ ಕರ್ಮ ಬ್ರಹ್ಮ ಶಾಸ್ತ್ರಪ್ರತಿಪಾದಕವಾದ ಅಪರ ಮತ್ತು ಪರ–ಈ ಎರಡು ಪ್ರಕಾರವಾದ

ಶಾಸ್ತ್ರಗಳನ್ನೂ ತಿಳಿದುಕೊಂಡಿರುತ್ತೇನೆ. ವೇದದಲ್ಲಿ 'ಕರ್ಮವನ್ನು ಮಾಡು, ಕರ್ಮವನ್ನು ಬಿಡು'–ಹೀಗೆ ಎರಡು ಪ್ರಕಾರವಾದ ವಚನಗಳೂ ಇವೆ. **ಉಭಯಂ ವೇದವಚನಂ ಕುರು ಕರ್ಮ ತ್ಯಜೇತಿ ಚ**–ಪರಸ್ಪರ ವಿರೋಧವಿರುವಂತೆ ಭಾಸವಾಗುವ ಶಾಸ್ತ್ರವಾಕ್ಯಗಳನ್ನೂ ಯುಕ್ತಿಪೂರ್ವಕ ವಾಗಿ ವಿಚಾರಮಾಡಿದ್ದೇನೆ. ವೇದದಲ್ಲಿಯೇ ಹೇಳಿರುವ ಈ ಎರಡು ಪ್ರಕಾರ ವಾದ ವಾಕ್ಯಗಳಲ್ಲಿ ಯಾವುದು ಸಿದ್ಧಾಂತವಾಕ್ಯವೆಂಬುದನ್ನೂ ನಾನು ಯಥಾಶಾಸ್ತ್ರವಾಗಿ ತಿಳಿದುಕೊಂಡಿರುತ್ತೇನೆ.

**ತ್ವಂ ತು ಕೇವಲಮಸ್ತ್ರಜ್ಞೋ ವೀರವ್ರತಸಮನ್ವಿತಃ ।**
**ಶಾಸ್ತ್ರಾರ್ಥಂ ತತ್ತ್ವತೋ ಗನ್ತುಂ ನ ಸಮರ್ಥಃ ಕಥಂಚನ ॥೩॥**

ನೀನಾದರೋ ಅಸ್ತ್ರವಿದ್ಯೆಯನ್ನು ಮಾತ್ರವೇ ತಿಳಿದವನಾಗಿದ್ದು ವೀರ ವ್ರತದಿಂದ ಯುಕ್ತನಾಗಿರುವೆ. ಶಾಸ್ತ್ರಗಳ ಅರ್ಥವನ್ನು ಯಥಾವತ್ತಾಗಿ ತಿಳಿದುಕೊಳ್ಳಲು ಯಾವುದೇ ರೀತಿಯಿಂದಲೂ ನೀನು ಸಮರ್ಥನಲ್ಲ. (ಶಾಸ್ತ್ರಾರ್ಥಜ್ಞಾನದಲ್ಲಿಯೂ ತತ್ತ್ವನಿರ್ಣಯದಲ್ಲಿಯೂ ನೀನು ಅಜ್ಞನೇ ಸರಿ.)

ನೀನು ಅಜ್ಞನೆಂಬುದನ್ನು ನಾನು ನಿರ್ಧಾರಪೂರ್ವಕವಾಗಿ ಹೇಳುವ ಕಾರಣವೇನೆಂದರೆ : ಶಾಸ್ತ್ರಾರ್ಥಗಳಲ್ಲಿ ಸೂಕ್ಷ್ಮವಾದ ದೃಷ್ಟಿಯುಳ್ಳವನೂ, ಮಾನವನಿಗೆ ಶ್ರೇಷ್ಠವಾದ ಧರ್ಮವು ಯಾವುದೆಂಬುದನ್ನು ನಿಶ್ಚಯ ಮಾಡುವುದರಲ್ಲಿ ವಿದ್ವಾಂಸನಾದವನೂ–ನನಗೆ ನೀನು ಉಪದೇಶಮಾಡಿದ ರೀತಿಯಲ್ಲಿ ಉಪದೇಶಮಾಡುತ್ತಿರಲಿಲ್ಲ. ನೀನು ಉಪದೇಶಿಸುತ್ತಿರುವ ತತ್ತ್ವಗಳಿಂದಲೇ ನಿನಗೆ ಶಸ್ತ್ರಾಸ್ತ್ರಗಳ ವಿದ್ಯೆಯು ತಿಳಿದಿರುವುದೇ ಹೊರತು ಶಾಸ್ತ್ರಾರ್ಥಗಳ ಸೂಕ್ಷ್ಮಪರಿಚಯವಿಲ್ಲವೆಂಬುದನ್ನೂ ನಿರ್ಧರಿಸಬಹುದಾಗಿದೆ. ನೀನು ಧರ್ಮವನ್ನೇನಾದರೂ ಸೂಕ್ಷ್ಮದೃಷ್ಟಿಯಿಂದ ವಿವೇಚಿಸಿದ್ದರೆ–ನನ್ನೊಡನೆ ಹೀಗೆ ಮಾತನಾಡುತ್ತಿರಲಿಲ್ಲ. ಭ್ರಾತೃಸ್ನೇಹವನ್ನೇ ಮುಖ್ಯ ವಾಗಿಟ್ಟುಕೊಂಡು ನೀನು ಯಾವ ಮಾತನಾಡಿರುವೆಯೋ ಅದು ನ್ಯಾಯವಾಗಿದೆ ; ಯುಕ್ತವೂ ಆಗಿದೆ. ಇದರಿಂದ ನಾನು ಪ್ರೀತನೂ ಆಗಿ ದ್ದೇನೆ. ಎಲ್ಲ ರೀತಿಯ ಯುದ್ಧಧರ್ಮಗಳಲ್ಲಿ , ಸಂಗ್ರಾಮಕೌಶಲಗಳಲ್ಲಿ

ನಿನಗೆ ಸಮಾನನಾದವನು ಮೂರು ಲೋಕಗಳಲ್ಲಿಯೇ ಇರುವುದಿಲ್ಲ. ಧರ್ಮವು ಅತಿ ಸೂಕ್ಷ್ಮವಾದುದೆಂದು ಹೇಳಲ್ಪಟ್ಟಿದೆ. ಆದರಲ್ಲಿ ನೀನು ಪ್ರವೇಶಮಾಡುವುದು ದುಃಸಾಧ್ಯವೇ ಸರಿ. ನನ್ನ ಬುದ್ಧಿಯೂ ಅತ್ಯಂತ ಗಹನವಾದ ಆ ಧರ್ಮವನ್ನು ತಿಳಿದಿರುವುದೋ ಇಲ್ಲವೋ–ಎಂದು ನೀನು ಸಂದೇಹಪಡುವ ಕಾರಣವಿಲ್ಲ.

**ಯುದ್ಧಶಾಸ್ತ್ರವಿದೇವ ತ್ವಂ ನ ವೃದ್ಧಾಃ ಸೇವಿತಾಸ್ತ್ವಯಾ ।**
**ಸಂಕ್ಷಿಪ್ತವಿಸ್ತರವಿದಾಂ ನ ತೇಷಾಂ ವೇತ್ಸಿ ನಿಶ್ಚಯಮ್ ॥೮॥**

ಅರ್ಜುನ! ನೀನು ಯುದ್ಧಶಾಸ್ತ್ರವನ್ನು ಮಾತ್ರವೇ ತಿಳಿದವನಾಗಿರುವೆ. ನೀನೆಂದೂ ಜ್ಞಾನವೃದ್ಧರ ಸೇವೆಯನ್ನು ಮಾಡಿದವನಲ್ಲ. ಆದುದರಿಂದಲೇ ಸಂಕ್ಷೇಪವಾಗಿಯೂ ಮತ್ತು ವಿಸ್ತಾರವಾಗಿಯೂ ಧರ್ಮದ ಸೂಕ್ಷ್ಮಾತಿ ಸೂಕ್ಷ್ಮವಾದ ವಿಷಯಗಳನ್ನು ತಿಳಿದುಕೊಂಡಿರುವವರ ಸಿದ್ಧಾಂತ ವೇನೆಂಬುದನ್ನು ನೀನು ತಿಳಿದವನಾಗಿಲ್ಲ.

**ತಪಸ್ತ್ಯಾಗೋಽವಿಧಿರಿತಿ ನಿಶ್ಚಯಸ್ತ್ವೇಷ ಧೀಮತಾಮ್ ।**
**ಪರಂ ಪರಂ ಜ್ಯಾಯ ಏಷಾಂ ಯೇಷಾಂ ನೈಃಶ್ರೇಯಸೀ ಮತಿಃ ॥೯॥**

ಧೀಮಂತರಾದ ಯಾರಿಗೆ ಮೋಕ್ಷಾಪೇಕ್ಷಿಯಾದ ಬುದ್ಧಿಯಿರು ತ್ತದೆಯೋ–ಅಂತಹ ಮಹಾನುಭಾವರ ನಿರ್ಣಯವು ಹೀಗಿರುತ್ತದೆ ; ತಪಸ್ಸು, ತ್ಯಾಗ ಮತ್ತು ವಿಧಿ-ವಿಧಾನಗಳಿಂದ ಅತೀತವಾದ ಬ್ರಹ್ಮಜ್ಞಾನ–ಈ ಮೂರರಲ್ಲಿ ಮೊದಲನೆಯದಕ್ಕಿಂತಲೂ ಎರಡನೆಯದು ಶ್ರೇಷ್ಠವಾದುದು ; ಎರಡನೆಯದಕ್ಕಿಂತಲೂ ಮೂರನೆಯದು ಶ್ರೇಷ್ಠವಾದುದು.

**ಯಸ್ತ್ವೇತನ್ಮನ್ಯಸೇ ಪಾರ್ಥ ನ ಜ್ಯಾಯೋಽಸ್ತಿ ಧನಾದಿತಿ ।**
**ತತ್ರ ತೇ ವರ್ತಯಿಷ್ಯಾಮಿ ಯಥಾ ನೈತತ್ಪ್ರಧಾನತಃ ॥೧೦॥**

ಪಾರ್ಥ! ನಿನ್ನ ಹೇಳಿಕೆಯಂತೆ ಧನಕ್ಕಿಂತಲೂ ಹಿರಿದಾದುದು ಮತ್ತೊಂದಿಲ್ಲವೆಂದು ನೀನು ಭಾವಿಸಿರುವೆ. ಧನವೇ ಪ್ರಧಾನವಲ್ಲವೆಂಬುದನ್ನು ನಾನೀಗ ತಿಳಿಯಹೇಳುತ್ತೇನೆ.

**ತಪಃಸ್ವಾಧ್ಯಾಯಶೀಲಾ ಹಿ ದೃಶ್ಯನ್ತೇ ಧಾರ್ಮಿಕಾ ಜನಾಃ ।**
**ಋಷಯಸ್ತಪಸಾ ಯುಕ್ತಾ ಯೇಷಾಂ ಲೋಕಾಃ ಸನಾತನಾಃ ॥೧೧॥**

ಈ ಜಗತ್ತಿನಲ್ಲಿ ತಪಃಸ್ವಾಧ್ಯಾಯಗಳಲ್ಲಿ ನಿರತರಾದ ಧಾರ್ಮಿಕರಾದ ಜನರು ಹಲವರಿದ್ದಾರೆ. ಋಷಿಗಳು ತಪಸ್ಸಿನಲ್ಲಿಯೇ ನಿರತರಾಗಿರುತ್ತಾರೆ. ಅವರೆಲ್ಲರಿಗೂ ಸನಾತನವಾದ ಪುಣ್ಯಲೋಕಗಳು ಲಭಿಸುತ್ತವೆ. (ಅವರಿಗೆ ಆ ಪುಣ್ಯಲೋಕಗಳನ್ನು ಹೊಂದಲು ಯಾವ ಹಣದ ಆಸರೆಯೂ ಬೇಕಾಗಿಲ್ಲ.)

**ಅಜಾತಶತ್ರವೋ ಧೀರಾಸ್ತಥಾನ್ಯೇ ವನವಾಸಿನಃ ।**
**ಅರಣ್ಯೇ ಬಹವಶ್ಚೈವ ಸ್ವಾಧ್ಯಾಯೇನ ದಿವಂ ಗತಾಃ ॥೧೨॥**

ಶತ್ರುಗಳೆಂಬುವರೇ ಹುಟ್ಟದಿರುವ ಧೀರರು, ಇನ್ನೂ ಹಲವಾರು ಅರಣ್ಯವಾಸಿಗಳು ಅರಣ್ಯದಲ್ಲಿ ಸರ್ವದಾ ಸ್ವಾಧ್ಯಾಯದಲ್ಲಿಯೇ ನಿರತ ರಾಗಿರುತ್ತಾ ( ಅಧ್ಯಯನ-ಅಧ್ಯಾಪನಗಳಲ್ಲಿಯೇ ನಿರತರಾಗಿರುತ್ತಾ ) ಅದರ ಫಲವಾಗಿ ಅವಸಾನಾನಂತರದಲ್ಲಿ ಸ್ವರ್ಗಕ್ಕೆ ಹೋಗುತ್ತಾರೆ.

**ಉತ್ತರೇಣ ತು ಪನ್ಥಾನಮಾರ್ಯಾ ವಿಷಯನಿಗ್ರಹಾತ್ ।**
**ಅಬುದ್ಧಿಜಂ ತಮಸ್ತ್ಯಕ್ತ್ವಾ ಲೋಕಾಂಸ್ತ್ಯಾಗವತಾಂ ಗತಾಃ ॥೧೩॥**

ಅನೇಕರಾದ ಆರ್ಯಪುರುಷರು ಇಂದ್ರಿಯಗಳನ್ನು ಅವುಗಳಿಗೆ ಸಂಬಂಧಿಸಿದ ವಿಷಯಗಳಿಂದ ಹಿಂದಕ್ಕೆಳೆದುಕೊಂಡು ( ಜಿತೇಂದ್ರಿಯರಾಗಿ ) ಅವಿವೇಕದಿಂದ ಹುಟ್ಟಿದ ಅಜ್ಞಾನವನ್ನು ಪರಿತ್ಯಜಿಸಿ, ಉತ್ತರಮಾರ್ಗದ (ದೇವಯಾನದ) ಮೂಲಕವಾಗಿ ತ್ಯಾಗಿಗಳಿಗೆ ಲಭಿಸುವ ಪುಣ್ಯಲೋಕಗಳನ್ನು ಹೊಂದಿದ್ದಾರೆ.

**ದಕ್ಷಿಣೇನ ತು ಪನ್ಥಾನಂ ಯಂ ಭಾಸ್ವನ್ತಂ ಪ್ರಚಕ್ಷತೇ ।**
**ಏತೇ ಕ್ರಿಯಾವತಾಂ ಲೋಕಾ ಯೇ ಶ್ಮಶಾನಾನಿ ಭೇಜಿರೇ ॥೧೪॥**

ದಕ್ಷಿಣಮಾರ್ಗದ (ಪಿತೃಯಾನದ) ಮೂಲಕವಾಗಿ ಹೋಗುವ ಯಾವ ಲೋಕಗಳನ್ನು ಪ್ರಕಾಶಮಾನವಾದ ಲೋಕಗಳೆಂದು ಹೇಳುವರೋ, ಆ ಲೋಕಗಳೆಲ್ಲವೂ ಸಕಾಮಕರ್ಮಿಗಳಾದ ಗೃಹಸ್ಥರು ಸೇರುವ ಲೋಕ

ಗಳಾಗಿವೆ. ಅವರು ಯಾವಾಗಲೂ ಶ್ಮಶಾನಯಾತ್ರೆಯನ್ನು ಮಾಡುತ್ತಲೇ ಇರುತ್ತಾರೆ. (ಹುಟ್ಟು-ಸಾವುಗಳೆಂಬ ಸಂಸಾರಚಕ್ರದಲ್ಲಿ ಸಿಲುಕಿಕೊಂಡು ನರಳುತ್ತಿರುತ್ತಾರೆ.)

**ಅನಿರ್ದೇಶ್ಯಾ ಗತಿಃ ಸಾ ತು ಯಾಂ ಪ್ರಪಶ್ಯನ್ತಿ ಮೋಕ್ಷಿಣಃ ।**
**ತಸ್ಮಾದ್ಯೋಗಃ ಪ್ರಧಾನೇಷ್ಟಃ ಸ ತು ದುಃಖಂ ಪ್ರವೇದಿತುಮ್ ॥೧೫॥**

ಮೋಕ್ಷಾರ್ಥಿಗಳು ಯಾವ ಮಾರ್ಗವನ್ನು ಹಿಡಿದು ಆತ್ಮಸಾಕ್ಷಾತ್ಕಾರ ವನ್ನು ಮಾಡಿಕೊಳ್ಳುತ್ತಾರೆಯೋ, ಆ ಮಾರ್ಗವು ಇಂತಹುದೇ ಎಂದು ನಿರ್ದೇಶಮಾಡಿ ಹೇಳಲು ಸಾಧ್ಯವಾಗುವುದಿಲ್ಲ. (ಇಂತಹುದೇ ಮಾರ್ಗ ದಿಂದಲೇ ಆತ್ಮಸಾಕ್ಷಾತ್ಕಾರವಾಗಬೇಕು. ಅನ್ಯಮಾರ್ಗವಿಲ್ಲ–ಎಂಬ ನಿಬಂಧನೆ ಯಿಲ್ಲ. ಮಹಾಗುರುವಿನ ಕೃಪಾಕಟಾಕ್ಷಮಾತ್ರದಿಂದಲೇ ಆತ್ಮಸಾಕ್ಷಾತ್ಕಾರ ವಾಗಬಹುದು. ಧ್ಯಾನಯೋಗದಿಂದಲೂ ಆಗಬಹುದು. ಜ್ಞಾನಯೋಗ ದಿಂದಲೂ ಆಗಬಹುದು. ಅನವರತವಾದ ಸಾಧನೆಯಿಂದಲೂ ಆತ್ಮಸಾಕ್ಷಾ ತ್ಕಾರವು ಸಿದ್ಧಿಸದೆಯೂ ಇರಬಹುದು. ಆದುದರಿಂದ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುವ ಮಾರ್ಗವು ಇಂತಹುದೇ ಎಂದು ನಿರ್ದೇಶಿಸಿ ಹೇಳಲಾಗುವುದಿಲ್ಲ.) ಜ್ಞಾನಯೋಗವೇ ಪ್ರಧಾನವಾದುದು ಮತ್ತು ಅಭೀಷ್ಟವಾದುದು. ಆದರೆ ಆ ಜ್ಞಾನಯೋಗದ ಸ್ವರೂಪವನ್ನು ತಿಳಿದು ಕೊಳ್ಳುವುದೇ ಬಹಳ ಕಷ್ಟ.

**ಅನುಸ್ಮೃತ್ಯ ತು ಶಾಸ್ತ್ರಾಣಿ ಕವಯಃ ಸಮವಸ್ಥಿತಾಃ ।**
**ಅಪೀಹ ಸ್ಯಾದಪೀಹ ಸ್ಯಾತ್ಸಾರಾಸಾರ ದಿದೃಕ್ಷಯಾ ॥೧೬॥**

ವಿದ್ವಾಂಸರೆಲ್ಲರೂ ಒಂದೆಡೆಯಲ್ಲಿ ಸೇರಿ ಈ ಮಾರ್ಗದಲ್ಲಿ ಸಾರವಿರು ವುದೇ? ಈ ಮಾರ್ಗಾನುಸರಣೆಯಿಂದ ಬ್ರಹ್ಮಸಾಕ್ಷಾತ್ಕಾರವು ಸಾಧ್ಯವಾಗು ವುದೇ? ಈ ಮಾರ್ಗವು ಕೇವಲ ಸಾರರಹಿತವಾದುದೇ? ಆಡಂಬರದಲ್ಲಿಯೇ ಪರ್ಯವಸಾನವಾಗತಕ್ಕುದೇ? ಈ ಮಾರ್ಗದಿಂದ ಜನನ-ಮರಣಗಳ ಬಾಧೆಯನ್ನು ತಪ್ಪಿಸಿಕೊಳ್ಳಲು ಸಾಧ್ಯವೇ?–ಹೀಗೆ ದಕ್ಷಿಣೋತ್ತರ ಮಾರ್ಗಗಳಲ್ಲಿನ ಸಾರಾಸಾರಗಳನ್ನು ಕಂಡುಕೊಳ್ಳಲು ಇಚ್ಛಿಸಿದವರಾಗಿ ಅದಕ್ಕೆ ಸಂಬಂಧಿಸಿದ ಶಾಸ್ತ್ರಗಳೆಲ್ಲವನ್ನೂ ಅವಲೋಕಿಸಿದ್ದಾರೆ.

**ವೇದವಾದಾನತಿಕ್ರಮ್ಯ ಶಾಸ್ತ್ರಾಣ್ಯಾರಣ್ಯಕಾನಿ ಚ ।**
**ವಿಪಾಟ್ಯ ಕದಲೀಸ್ತಮ್ಭಂ ಸಾರಂ ದದೃಶಿರೇ ನ ತೇ ॥೧೭॥**

ಆದರೆ ವೇದವಾಕ್ಯಗಳನ್ನೂ ಅತಿಕ್ರಮಿಸಿ ಮುಂದೆ ಹೋಗಿ ಬೃಹದಾರಣ್ಯಕವೇ ಮೊದಲಾದ ವೇದಾಂತಶಾಸ್ತ್ರಗಳನ್ನೂ–ಶಾಸ್ತ್ರವಿಧಿಗಳನ್ನೂ ಬಹುಪ್ರಕಾರವಾಗಿ ಅಧ್ಯಯನಮಾಡಿಯೂ ಚರ್ಚಿಸಿಯೂ–ಕಡಿದುಹಾಕಿರುವ ಬಾಳೇಕಂದಿನಲ್ಲಿ ಸಾರವನ್ನು ಕಾಣದಂತೆ–ಆ ವಿದ್ವಾಂಸರು ವೇದ-ಶಾಸ್ತ್ರಗಳಲ್ಲಿ ಯಾವ ಸಾರವನ್ನೂ ಕಂಡುಕೊಳ್ಳಲಿಲ್ಲ.

**ಅಥೈಕಾನ್ತವ್ಯುದಾಸೇನ ಶರೀರೇ ಪಾಞ್ಚಭೌತಿಕೇ ।**
**ಇಚ್ಛಾದ್ವೇಷಸಮಾಸಕ್ತಮಾತ್ಮಾನಂ ಪ್ರಾಹುರಿಙ್ಗಿತೈಃ ॥೧೮॥**

ಕೆಲವರು ಶಾಶ್ವತವಾದ ಪರಬ್ರಹ್ಮವಸ್ತುವನ್ನೇ ನಿರಾಕರಿಸುತ್ತಾ ಮನುಷ್ಯನಿಗಿರುವ ಅಹಂಕಾರ-ಮಮಕಾರಗಳ ಸಂಕೇತಗಳಿಂದ ಪಂಚಭೂತಾತ್ಮವಾದ ಈ ಶರೀರದಲ್ಲಿ ಇಚ್ಛಾ-ದ್ವೇಷಗಳಿಂದ ಕೂಡಿರುವ ಆತ್ಮನಿದ್ದಾನೆಂದು ಹೇಳುತ್ತಾರೆ. ('ಆತ್ಮನು ನಿರ್ವಿಕಾರನು, ನಿರ್ಲಿಪ್ತನು, ನಿರ್ಗುಣನು. ಅಂತಹವನೊಬ್ಬನು ನಮ್ಮ ಶರೀರದಲ್ಲಿದ್ದಾನೆ'–ಎಂಬುದು ಸುಳ್ಳು. ಅಂತಹ ಆತ್ಮನೇನಾದರೂ ಇದ್ದಿದ್ದರೆ ಮನುಷ್ಯನ ಅಹಂಕಾರ-ಮಮಕಾರಗಳಿಗೆ ಅವಕಾಶವೇ ಇರುತ್ತಿರಲಿಲ್ಲ. ಆದುದರಿಂದ ಪಂಚಭೂತಗಳಿಂದ ಯುಕ್ತವಾಗಿ ಹುಟ್ಟಿರುವ ಈ ಶರೀರದಲ್ಲಿ ಇಚ್ಛೆ, ದ್ವೇಷ, ಅಹಂಕಾರ-ಮಮಕಾರಗಳು, ಕ್ರೋಧ-ಮೋಹಗಳು ಇವುಗಳನ್ನೊಳಗೊಂಡ ಆತ್ಮನಿದ್ದಾನೆ. ಇದನ್ನು ಪ್ರತ್ಯಕ್ಷವಾಗಿಯೇ ಕಾಣುತ್ತಿರುವುದಕ್ಕೆ ಸಿದ್ಧಾಂತದ ಅವಶ್ಯಕತೆಯೇ ಇಲ್ಲ. ಮಗುವು ಹುಟ್ಟುತ್ತಲೇ ನಾನು-ನನ್ನದು ಎಂದು ಹೇಳಿಕೊಂಡೇ ಹುಟ್ಟುತ್ತದೆ. ಆದುದರಿಂದ ಶಾಶ್ವತವಾದ ಪರಬ್ರಹ್ಮವಸ್ತುವೊಂದಿರುವುದೆಂದು ನಂಬುವ ಕಾರಣವಿಲ್ಲ–ಎಂಬುದು ಕೆಲವರ ಅಭಿಮತವಾಗಿದೆ.)

**ಅಗ್ರಾಹ್ಯಂ ಚಕ್ಷುಷಾ ಸೂಕ್ಷ್ಮಮನಿರ್ದೇಶ್ಯಂ ಚ ತದ್ಗಿರಾ ।**
**ಕರ್ಮಹೇತುಪುರಸ್ಕಾರಂ ಭೂತೇಷು ಪರಿವರ್ತತೇ ॥೧೯॥**

ಆದರೆ ಅಂತರಾತ್ಮವೆಂಬ ವಸ್ತುವೊಂದಿದೆ. ಆ ಬ್ರಹ್ಮವಸ್ತುವು ಕಣ್ಣಿಗೆ ಕಾಣಿಸತಕ್ಕುದಲ್ಲ. ಸೂಕ್ಷ್ಮಾತಿಸೂಕ್ಷ್ಮವಾದುದು. ಮಾತಿನ ಮೂಲಕ ಆ

ಬ್ರಹ್ಮವಸ್ತುವಿನ ಸ್ವರೂಪವು ಇಂತಹುದೇ ಎಂದು ನಿರ್ದೇಶಿಸಿ ಹೇಳುವುದಕ್ಕಾಗುವುದಿಲ್ಲ. ಅದೇ ಬ್ರಹ್ಮವಸ್ತುವು ಕರ್ಮಹೇತುಭೂತವಾದ ಅವಿದ್ಯೆಯನ್ನು ಮುಂದಿಟ್ಟುಕೊಂಡು ಸ್ವಸ್ವರೂಪವನ್ನು ಮುಚ್ಚಿಕೊಂಡು ಪ್ರಾಣಿಗಳಲ್ಲಿ ಜೀವಗಳ ರೂಪದಲ್ಲಿ ಪರಿವರ್ತನೆಯನ್ನು ಹೊಂದಿರುತ್ತದೆ. ಬ್ರಹ್ಮವಸ್ತುವು ಜೀವಗಳ ರೂಪದಲ್ಲಿ ಪರಿವರ್ತನೆಯನ್ನು ಹೊಂದಿದಾಗ 'ಇವನು ಗೃಹಸ್ಥ, ಇವನು ಬ್ರಾಹ್ಮಣ, ಇವನು ಕ್ಷತ್ರಿಯ'–ಇವೇ ಮುಂತಾದ ನಾಮ-ರೂಪ ನಿರ್ದೇಶಗಳಿಂದ ಕರೆಯಲ್ಪಡುತ್ತದೆ.

**ಕಲ್ಯಾಣಗೋಚರಂ ಕೃತ್ವಾ ಮನಸ್ತೃಷ್ಣಾಂ ನಿಗೃಹ್ಯ ಚ ।**
**ಕರ್ಮಸಂತತಿಮುತ್ಸೃಜ್ಯ ಸ್ಯಾನ್ನಿರಾಲಮ್ಬನಃ ಸುಖೀ ॥೨೦॥**

ಮನಸ್ಸನ್ನು ಕಲ್ಯಾಣಮಾರ್ಗದಲ್ಲಿ ತೊಡಗಿಸಿ (ನಿಃಶ್ರೇಯಸ್ಸಿನ ಕಡೆಗೆ ವಾಲುವಂತೆ ಮಾಡಿ), ಆಸೆಯೆಂಬುದನ್ನು ಸಂಪೂರ್ಣವಾಗಿ ನಿಗ್ರಹಿಸಿ, ಕರ್ಮಗಳ ಪರಂಪರೆಯನ್ನು ಪರಿತ್ಯಾಗಮಾಡಿ, ಧನವನ್ನಾಗಲೀ–ಜನರನ್ನಾಗಲೀ ಅವಲಂಬಿಸದೇ ಇರುವವನು ಪರಮಸುಖಿಯಾಗಿರುತ್ತಾನೆ.

ಅರ್ಜುನ! ಸತ್ಪುರುಷರಿಂದ ಸೇವಿಸಲ್ಪಡುವ, ಸೂಕ್ಷ್ಮಬುದ್ಧಿಯಿಂದ ಅಥವಾ ಏಕಾಗ್ರವಾದ ಬುದ್ಧಿಯಿಂದ ತಿಳಿಯಲ್ಪಡುವ ಶ್ರೇಷ್ಠವಾದ ಜ್ಞಾನ ಮಾರ್ಗವಿರುವಾಗ ಅನರ್ಥಕಾರಿಯಾದ ಅರ್ಥವನ್ನು (ಧನವನ್ನು) ನೀನೇಕೆ ಪ್ರಶಂಸಿಸುತ್ತಿರುವೆ? ಯಜ್ಞ, ದಾನ–ಇತ್ಯಾದಿಕರ್ಮಗಳಲ್ಲಿ ಸರ್ವದಾ ನಿರತರಾದ ಪ್ರಾಚೀನಕಾಲದ ಶಾಸ್ತ್ರಜ್ಞಜನರೂ (ಪೂರ್ವಮೀಮಾಂಸಾ ಶಾಸ್ತ್ರಜ್ಞರು) ಈ ವಿಷಯದಲ್ಲಿ ನಾನು ಹೇಳುವ ಅಭಿಪ್ರಾಯವನ್ನೇ ಹೊಂದಿದವರಾಗಿದ್ದಾರೆ. (ಕರ್ಮಮಾರ್ಗವನ್ನೇ ಸಮರ್ಥಿಸುವವರೂ ಅರ್ಥವು ಅನರ್ಥಕಾರೀ ಎಂಬುದನ್ನು ಒಪ್ಪುತ್ತಾರೆ.) ಆದರೆ ಆತ್ಮಾ ಎಂಬುದೇ ಇಲ್ಲ. ಶರೀರವೇ ಆತ್ಮಾ–ಮುಂತಾಗಿ ಪ್ರತ್ಯಕ್ಷಪ್ರಮಾಣವನ್ನೇ ಆಶ್ರಯಿಸಿ ವಾದಮಾಡುವವರು ಕಾರ್ಯ-ಕಾರಣಗಳನ್ನು ಒಪ್ಪುವರಾದರೂ ತಮ್ಮ ಹಿಂದಿನ ದೃಢಸಂಸ್ಕಾರದಿಂದ ಪ್ರಭಾವಿತರಾಗಿ ಮೂರ್ಖರಾಗಿಬಿಡುತ್ತಾರೆ. ಆದುದರಿಂದಲೇ ಅವರು ಬಹಳ ಕಷ್ಟದಿಂದಲೂ ಈ ಸಿದ್ಧಾಂತವನ್ನು

ಅಂಗೀಕರಿಸುವುದಿಲ್ಲ. ಆದರೆ ಅನೇಕಶಾಸ್ತ್ರಗಳನ್ನೂ ತಿಳಿದವರೂ, ವಾಗ್ಮಿಗಳೂ ಆಗಿರುವ ವಿದ್ವಾಂಸರು ಜನರ ಸಭೆಗಳಲ್ಲಿ 'ಆತ್ಮವೇ ಇಲ್ಲ ; ಧರ್ಮವೇ ಇಲ್ಲ; ಪರಲೋಕವೇ ಇಲ್ಲ'–ಮುಂತಾಗಿ ಹೇಳುವ ಅನೃತವಾದಿಗಳಾದ ನಾಸ್ತಿಕರನ್ನು ಯುಕ್ತಿಯುಕ್ತವಾದ ವ್ಯಾಖ್ಯಾನಗಳಿಂದ ಖಂಡಿಸುತ್ತಾ ಅಖಂಡ ಭೂಮಂಡಲವನ್ನೂ ಸಂಚರಿಸುತ್ತಿರುತ್ತಾರೆ. ಅಂತಹ ಮಹಾಪಂಡಿತರು ಯಾರೆಂಬುದನ್ನು ನಾವೇ ತಿಳಿದಿಲ್ಲವೆಂದ ಮೇಲೆ ಸಾಧಾರಣಮನುಷ್ಯರು ಹೇಗೆ ತಾನೇ ತಿಳಿದುಕೊಳ್ಳುತ್ತಾರೆ? ಶಾಸ್ತ್ರವಿದರಾದ ಮಹಾಪಂಡಿತರು ಇದ್ದಾರೆಂದು ನಾವು ಕೇಳಿದ್ದೇವೆ. ಆದರೆ ಅವರು ಯಾರೆಂಬುದನ್ನು ಗುರುತಿಸುವುದು ಕಷ್ಟಸಾಧ್ಯವೇ ಸರಿ.

*** ತಪಸಾ ಮಹದಾಪ್ನೋತಿ ಬುದ್ಧ್ಯಾ ವೈ ವಿನ್ದತೇ ಮಹತ್ ।**
**ತ್ಯಾಗೇನ ಸುಖಮಾಪ್ನೋತಿ ಸದಾ ಕೌನ್ತೇಯ ತತ್ತ್ವವಿತ್ ॥೨೬॥**

ಕೌಂತೇಯ! ತತ್ತ್ವವನ್ನು ತಿಳಿದಿರತಕ್ಕವನು ( ಬ್ರಹ್ಮನಿಷ್ಠನು ) ತಪಸ್ಸಿನಿಂದ ಮಹಾವೈರಾಗ್ಯವನ್ನು ಪಡೆಯುತ್ತಾನೆ. ಬುದ್ಧಿಯಿಂದ ಪರಬ್ರಹ್ಮವಸ್ತುವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ತತ್ತ್ವವಿದನು ಸ್ವಾರ್ಥತ್ಯಾಗದಿಂದ ನಿರಂತರವಾಗಿ ಪರಮಸುಖವನ್ನೂ ಹೊಂದುತ್ತಾನೆ."

ಗ೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಮುನಿಶ್ರೇಷ್ಠರಾದ ದೇವಸ್ಥಾನರು ಯುಧಿಷ್ಠಿರನಿಗೆ ಯಜ್ಞಮಾಡಲು ಸಲಹೆನೀಡಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಈ ಮಧ್ಯದಲ್ಲಿ ವಾಗ್ಮಿಗಳಾದ, ಮಹಾತಪಸ್ವಿಗಳಾದ ದೇವಸ್ಥಾನರು ಯುಕ್ತಿಯುಕ್ತವಾದ ಮಾತುಗಳಿಂದ ಯುಧಿಷ್ಠಿರನನ್ನು ಕುರಿತು ಹೇಳತೊಡಗಿದರು :

---

* ೨೬ನೆಯ ಶ್ಲೋಕದ ಪೂರ್ವಾರ್ಧದಲ್ಲಿ ಬಂದಿರುವ ಎರಡು ಮಹಚ್ಛಬ್ದಗಳಿಗೆ ವ್ಯಾಖ್ಯಾನಕಾರರು ಬೇರೆ-ಬೇರೆ ಅರ್ಥಮಾಡಿರುತ್ತಾರೆ. ೧. ಮಹತ್ = ವೈರಾಗ್ಯಂ. ೨ ಮಹತ್ = ಪರಬ್ರಹ್ಮ.

"ಯುಧಿಷ್ಠಿರಮಹಾರಾಜ! ಧನಕ್ಕಿಂತಲೂ ಮಿಗಿಲಾಗಿದುದು ಯಾವುದೂ ಇಲ್ಲವೆಂಬ ಯಾವ ಮಾತನ್ನು ಅರ್ಜುನನು ಹೇಳಿದನೋ– ಅದೇ ವಿಷಯವಾಗಿಯೇ ನಾನೂ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು. ಅಜಾತಶತ್ರುವೇ! ಈ ಅಖಂಡಭೂಮಂಡಲವನ್ನೂ ನೀನು ಧರ್ಮದ ಮೂಲಕವಾಗಿಯೇ ಜಯಿಸಿರುವೆ. ಹೀಗೆ ಧರ್ಮಮಾರ್ಗದಿಂದಲೇ ಜಯಿಸಿರುವ ರಾಜ್ಯವನ್ನು ವ್ಯರ್ಥವಾಗಿ ತ್ಯಾಗಮಾಡುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ.

**ಚತುಷ್ಪದೀ ಹಿ ನಿಃಶ್ರೇಣೀ ಬ್ರಹ್ಮಣ್ಯೇವ ಪ್ರತಿಷ್ಠಿತಾ ।**
**ತಾಂ ಕ್ರಮೇಣ ಮಹಾಬಾಹೋ ಯಥಾವಜ್ಜಯ ಪಾರ್ಥಿವ ॥೪॥**

ಬ್ರಹ್ಮಸಾಕ್ಷಾತ್ಕಾರಕ್ಕೆ ಬ್ರಹ್ಮಚರ್ಯೆ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮಧರ್ಮಗಳಿವೆ. ಇವೆಲ್ಲವೂ ವೇದದಲ್ಲಿಯೇ ಪ್ರತಿಷ್ಠಿತವಾಗಿವೆ. (ವೇದದಲ್ಲಿಯೇ ಉಕ್ತವಾಗಿವೆ.) ಈ ನಾಲ್ಕು ಆಶ್ರಮ ಧರ್ಮಗಳನ್ನೂ ಯಥಾನುಕ್ರಮವಾಗಿ ಜಯಿಸುತ್ತಾ ಹೋಗುವುದು ಯುಕ್ತವಾಗಿದೆ. ಒಂದೊಂದು ಆಶ್ರಮದಲ್ಲಿಯೂ ಮಾಡಬೇಕಾದ ಕರ್ತವ್ಯಗಳೆಲ್ಲವನ್ನೂ ಮಾಡುತ್ತಾ ಯಥಾನುಕ್ರಮವಾಗಿ ಬ್ರಹ್ಮಚರ್ಯಾಶ್ರಮ ವಾದ ನಂತರ ಗೃಹಸ್ಥಾಶ್ರಮ ; ಗೃಹಸ್ಥಾಶ್ರಮವಾದ ನಂತರ (ಗೃಹಸ್ಥಾಶ್ರಮ ದಲ್ಲಿ ಮಾಡಬೇಕಾದ ಕರ್ತವ್ಯಗಳೆಲ್ಲವನ್ನೂ ಮಾಡಿ ಮುಗಿಸಿದ ನಂತರ) ವಾನಪ್ರಸ್ಥಾಶ್ರಮ; ಕಡೆಯದಾಗಿ ಸಂನ್ಯಾಸಾಶ್ರಮ–ಹೀಗೆ ಯಥಾನುಕ್ರಮ ವಾಗಿ ಹೋಗಬೇಕೇ ಹೊರತು ಆಶ್ರಮಗಳನ್ನು ದಾಟಿಹೋಗುವುದು ಯುಕ್ತವಲ್ಲ. ಬ್ರಹ್ಮಸಾಕ್ಷಾತ್ಕಾರಕ್ಕಾಗಿಯೇ ವೇದದಲ್ಲಿ ಹಾಕಿಕೊಟ್ಟಿರುವ ಏಣಿಯ ಮೆಟ್ಟಲುಗಳಿವು. ಆದುದರಿಂದ ಗೃಹಸ್ಥಾಶ್ರಮದಲ್ಲಿ ಮಾಡಬೇಕಾದ ಕರ್ತವ್ಯಗಳೆಲ್ಲವನ್ನೂ ಈಗ ಮಾಡಲೇಬೇಕು.

ಯುಧಿಷ್ಠಿರ! ಆದುದರಿಂದ ಬಹುದಕ್ಷಿಣಾಕವಾದ ಮಹಾಯಜ್ಞಗಳಿಂದ ದೇವತೆಗಳನ್ನು ಆರಾಧಿಸು. ಸ್ವಾಧ್ಯಾಯಯಜ್ಞವನ್ನು (ಅಧ್ಯಯನ-ಅಧ್ಯಾಪನಗಳನ್ನು) ಮಾಡತಕ್ಕವರು ಋಷಿಗಳು. ಜ್ಞಾನಯಜ್ಞದಲ್ಲಿ ನಿರತರಾಗಿರತಕ್ಕವರು ಸಂನ್ಯಾಸಿಗಳು. ವೇದಗಳಲ್ಲಿ ಹೇಳಿರುವಂತೆ ಪ್ರತಿ

ಯೊಬ್ಬರೂ ತಮ್ಮ-ತಮ್ಮ ವರ್ಣಾಶ್ರಮಗಳಿಗೆ ಅನುಸಾರವಾಗಿ ವೇದೋಕ್ತವಾದ ಕರ್ಮಗಳನ್ನು ಮಾಡಲೇಬೇಕು. ಗೃಹಸ್ಥನಾದ ಕ್ಷತ್ರಿಯನು ಅಶ್ವಮೇಧ-ರಾಜಸೂಯಾದಿ ಯಾಗಗಳನ್ನು ಮಾಡಬೇಕು. ಋಷಿಗಳು ಸ್ವಾಧ್ಯಾಯಯಜ್ಞವನ್ನೂ, ಮುನಿಗಳು ಜ್ಞಾನಯಜ್ಞವನ್ನೂ ಮಾಡಬೇಕು. (ಋಷಿಗಳು ಎಂದು ಹೇಳಿರುವುದರಿಂದ ಗೃಹಸ್ಥರಾದ ಋಷಿಗಳು ಎಂದು ಇಟ್ಟುಕೊಳ್ಳಬಹುದು.) ಅಧ್ಯಯನ-ಅಧ್ಯಾಪನಗಳೇ ಸ್ವಾಧ್ಯಾಯಯಜ್ಞ. ವಸಿಷ್ಠ-ವಾಮದೇವಾದಿಗಳಂತೆ ಸ್ವಾಧ್ಯಾಯಯಜ್ಞದಲ್ಲಿ ನಿರತರಾಗಿರತಕ್ಕವರು ಋಷಿಗಳು. ನಾಲ್ಕನೆಯ ಆಶ್ರಮವನ್ನು ಅವಲಂಬಿಸಿರುವ ಸಂನ್ಯಾಸಿಗಳು ಜ್ಞಾನಯಜ್ಞದಲ್ಲಿ ನಿರತರಾಗಿರುತ್ತಾರೆ. ಋಷಿಗಳಲ್ಲಿಯೇ ಕೆಲವರು ಕರ್ಮನಿಷ್ಠರೂ ಆಗಿರುತ್ತಾರೆ ; ಕೆಲವರು ತಪೋನಿಷ್ಠರೂ ಆಗಿರುತ್ತಾರೆ. ಈ ವಿಷಯವನ್ನು ನೀನು ತಿಳಿದುಕೊಳ್ಳಬೇಕು, ಯುಧಿಷ್ಠಿರ! ( ಈ ವಿಷಯದಲ್ಲಿ ವೈಖಾನಸರು ಹೀಗೆ ಹೇಳುತ್ತಿದ್ದರೆಂಬುದನ್ನು ನಾವು ಕೇಳಿದ್ದೇವೆ. )

**ಈಹೇತ ಧನಹೇತೋರ್ಯಸ್ತಸ್ಯಾನೀಹಾ ಗರೀಯಸೀ ।**
**ಭೂಯಾನ್ದೋಷೋ ಹಿ ವರ್ಧೇತ ಯಸ್ತಂ ಧನಮುಪಾಶ್ರಯೇತ್ ॥**

ಧನವನ್ನು ಕೂಡಿಡಬೇಕೆಂಬ ಉದ್ದೇಶದಿಂದಲೇ ಧನವನ್ನು ಆಶಿಸುವುದಕ್ಕಿಂತಲೂ ಅದನ್ನು ಅಪೇಕ್ಷಿಸದೆಯೇ ಇರುವುದು ಶ್ರೇಷ್ಠವಾದುದೇ ಸರಿ. ಏಕೆಂದರೆ : ಯಾವನು ಯಾವಾಗಲೂ ಧನದ ಉಪಾಸನೆಯಲ್ಲಿಯೇ ನಿರತನಾಗಿರುತ್ತಾನೆಯೋ ( ಧನಸಂಗ್ರಹದಲ್ಲಿಯೇ ನಿರತನಾಗಿರುತ್ತಾನೆಯೋ ) ಅವನಲ್ಲಿ ದೊಡ್ಡ ದೊಡ್ಡ ದೋಷಗಳೇ ವೃದ್ಧಿಹೊಂದುತ್ತಿರುತ್ತವೆ. ( ಧನಲೋಭಿಯು ಅನೇಕ ಪಾಪಕರ್ಮಗಳನ್ನು ಮಾಡುತ್ತಾನೆ. ಧನದಾಸೆಯು ಅವನಿಂದ ಪಾಪಕರ್ಮಗಳನ್ನು ಮಾಡಿಸುತ್ತದೆ. ಈ ದೃಷ್ಟಿಯಿಂದ ನೋಡಿದರೆ ಧನದ ನಿರಪೇಕ್ಷೆಯು ಶ್ರೇಷ್ಠವೇ ಸರಿ. )

**ಕೃಚ್ಛ್ರಾಚ್ಚ ದ್ರವ್ಯಸಂಹಾರಂ ಕುರ್ವನ್ತಿ ಧನಕಾರಣಾತ್ ।**
**ಧನೇನ ತೃಷಿತೋಽಬುದ್ಧ್ಯಾ ಭ್ರೂಣಹತ್ಯಾಂ ನ ಬುಧ್ಯತೇ ॥೮॥**

ಲೋಭಿಗಳಾದವರು ಧನವನ್ನು ಕೂಡಿಹಾಕಬೇಕೆಂಬ ಕಾರಣದಿಂದಾಗಿ

ಬಹಳ ಕಷ್ಟಪಟ್ಟು ಹಣವನ್ನು ಸಂಗ್ರಹಿಸುತ್ತಾರೆ. ಧನದಾಹದಿಂದ ಕೂಡಿರುವ ಮನುಷ್ಯನು ಹಣವನ್ನು ಹೇಗೆ ವ್ಯಯಮಾಡಬೇಕೆಂಬುದನ್ನು ತಿಳಿಯದೇ ಇರುವ ಕಾರಣದಿಂದಾಗಿ ಭ್ರೂಣಹತ್ಯಾಪಾಪಕ್ಕೆ ಗುರಿಯಾಗಬೇಕೆಂಬುದನ್ನು ತಿಳಿದಿರುವುದಿಲ್ಲ. (ಯೋಗ್ಯರಾದವರಿಗೆ ದಾನವನ್ನು ಕೊಡದಿರುವುದು, ಅಯೋಗ್ಯರಾದವರಿಗೆ ದಾನಕೊಡುವುದು ಇವೆರಡೂ ಪಾಪಕರ್ಮಗಳೇ ಆಗುತ್ತವೆ. ಹೀಗೆ ಮಾಡುವುದರಿಂದ ಭ್ರೂಣಹತ್ಯೆಯನ್ನು ಮಾಡಿದ ಪಾಪಕ್ಕೆ ಗುರಿಯಾಗುತ್ತಾನೆ. ಧನದ ಲೋಭದಿಂದಲೇ ಧನವನ್ನು ಸಂಗ್ರಹಿಸುವುದು ಸರಿಯಲ್ಲ. ಏಕೆಂದರೆ : ಲೋಭಗ್ರಸ್ತನಾದವನು ಧನಕ್ಕಾಗಿ ಮಹಾಪಾಪ ಗಳನ್ನು ಮಾಡಲೂ ಹಿಂಜರಿಯುವುದಿಲ್ಲ. ಆರ್ಜಿಸಿದ ಧನವನ್ನು ದಾನವಾಗಿ ಕೊಡಬಹುದು. ಆದರೆ ದಾನಧರ್ಮವೂ ಸುಖಕರವಲ್ಲ. ಪಾತ್ರಾಪಾತ್ರರನ್ನು ವಿವೇಚಿಸಿ ದಾನಮಾಡುವುದು ಕಷ್ಟ. ಆದುದರಿಂದ ಯಜ್ಞಮಾಡ ಬೇಕೆಂಬುದು ದೇವಸ್ಥಾನರ ಉಪದೇಶದ ಮುಖ್ಯಸಾರಾಂಶವಾಗಿದೆ.)

**ಅನರ್ಹತೇ ಯದ್ದದಾತಿ ನ ದದಾತಿ ಯದರ್ಹತೇ ।**
**ಅರ್ಹಾನರ್ಹಾಪರಿಜ್ಞಾನಾದ್ದಾನಧರ್ಮೋಽಪಿ ದುಷ್ಕರಃ ॥೯॥**

ಅನೇಕರು ಅಯೋಗ್ಯರಿಗೆ ಧನವನ್ನು ದಾನಮಾಡುತ್ತಾರೆ. ದಾನವನ್ನು ಸ್ವೀಕರಿಸಲು ಯೋಗ್ಯರಾದವರಿಗೆ ಧನವನ್ನು ಕೊಡುವುದಿಲ್ಲ. ದಾನವನ್ನು ತೆಗೆದುಕೊಳ್ಳಲು ಪಾತ್ರರು ಯಾರು? ಅಪಾತ್ರರು ಯಾರು?–ಎಂಬ ವಿಷಯದಲ್ಲಿಯೇ ಪರಿಜ್ಞಾನವಿಲ್ಲದಿರುವಾಗ ಈ ದಾನಧರ್ಮವೂ ಅತ್ಯಂತ ದುಷ್ಕರವೇ ಆಗುತ್ತದೆ. ಹೀಗೆ ಮಾಡುವುದರಿಂದ ಭ್ರೂಣಹತ್ಯಾಪಾಪಕ್ಕೆ ಸಮಾನವಾದ ಪಾಪವು ಸಂಭವಿಸುವುದು. ಆದುದರಿಂದ ದಾನಧರ್ಮವೂ ಅತ್ಯಂತಕಠಿಣವಾದುದು.

**ಯಜ್ಞಾಯ ಸೃಷ್ಟಾನಿ ಧನಾನಿ ಧಾತ್ರಾ**
**ಯಜ್ಞೋದ್ದಿಷ್ಟಃ ಪುರುಷೋ ರಕ್ಷಿತಾ ಚ ।**
**ತಸ್ಮಾತ್ಸರ್ವಂ ಯಜ್ಞ ಏವೋಪಯೋಜ್ಯಂ**
**ಧನಂ ತತೋಽನನ್ತರ ಏವ ಕಾಮಃ ॥೧೦॥**

ಬ್ರಹ್ಮನು ಧನವನ್ನು ಯಜ್ಞಕ್ಕಾಗಿಯೇ ಸೃಷ್ಟಿಸಿದ್ದಾನೆ. ಧನಸೃಷ್ಟಿಯ

ಮುಖ್ಯೋದ್ದೇಶವೇ ಯಜ್ಞಕ್ರಿಯೆಯಾಗಿದೆ. ಯಜ್ಞದ ಉದ್ದೇಶದಿಂದ ಮತ್ತು ಧನವನ್ನು ರಕ್ಷಿಸುವ ಉದ್ದೇಶದಿಂದ ಬ್ರಹ್ಮನು ಪುರುಷನನ್ನು ಸೃಷ್ಟಿಸಿದ್ದಾನೆ. ಆದುದರಿಂದ ಎಲ್ಲ ಧನವನ್ನೂ ಯಜ್ಞಕ್ಕಾಗಿಯೇ ವಿನಿಯೋಗಿಸಬೇಕು. ಯಜ್ಞಮಾಡಿದನಂತರ ಯಜಮಾನನು ಮನಸೋದ್ದಿಷ್ಟವಾದ ತನ್ನ ಎಲ್ಲ ಕಾಮನೆಗಳನ್ನೂ ಯಜ್ಞಮಾಡಿದ ಫಲವಾಗಿ ಪಡೆದುಕೊಳ್ಳುತ್ತಾನೆ. ( ಧನದ ಮೊದಲನೆಯ ಉದ್ದೇಶ್ಯ ಯಜ್ಞ; ಅನಂತರ ಕಾಮಭೋಗಗಳು. )

**ಯಜ್ಞೈರಿನ್ದ್ರೋ ವಿವಿಧೈ ರತ್ನವದ್ಭಿ-**
**ರ್ದೇವಾನ್ಸರ್ವಾನಭ್ಯಯಾದ್ಭೂರಿತೇಜಾಃ ।**
**ತೇನೇನ್ದ್ರತ್ವಂ ಪ್ರಾಪ್ಯ ವಿಭ್ರಾಜತೇಽಸೌ**
**ತಸ್ಮಾದ್ಯಜ್ಞೇ ಸರ್ವಮೇವೋಪಯೋಜ್ಯಮ್ ॥೧೧॥**

ಮಹಾತೇಜಸ್ವಿಯಾದ ಇಂದ್ರನು ಧನರತ್ನಗಳಿಂದ ಸಂಪನ್ನವಾಗಿದ್ದ ಅನೇಕಯಜ್ಞಗಳನ್ನು ಮಾಡಿ, ಯಜ್ಞಪುರುಷನನ್ನು ಸಂಪೂಜಿಸಿ–ಎಲ್ಲ ದೇವತೆಗಳಿಂದಲೂ ಅಧಿಕನಾದನು. ಈ ಕಾರಣದಿಂದಲೇ ಅವನು ಇಂದ್ರತ್ವವನ್ನು ( ಇಂದ್ರಪದವಿಯನ್ನು ) ಪಡೆದುಕೊಂಡು ಈಗಲೂ ರಾರಾಜಿಸುತ್ತಿದ್ದಾನೆ. ಆದುದರಿಂದ ರಾಜನಾದವನು ಯಜ್ಞದಲ್ಲಿಯೇ ತನ್ನ ಸಕಲೈಶ್ವರ್ಯಗಳನ್ನೂ ವಿನಿಯೋಗಿಸಬೇಕು.

**ಮಹಾದೇವಃ ಸರ್ವಯಜ್ಞೇ ಮಹಾತ್ಮಾ**
**ಹುತ್ವಾಽತ್ಮಾನಂ ದೇವದೇವೋ ಬಭೂವ ।**
**ವಿಶ್ವಾಲ್ಲೋಕಾನ್ವ್ಯಾಪ್ಯ ವಿಷ್ಟಭ್ಯ ಕೀರ್ತ್ಯಾ**
**ವಿರಾಜತೇ ದ್ಯುತಿಮಾನ್ಕೃತ್ತಿವಾಸಾಃ ॥೧೨॥**

ಗಜಚರ್ಮಧರನಾದ, ಮಹಾತ್ಮನಾದ ಮಹಾದೇವನು ಸರ್ವಸ್ವ ಸಮರ್ಪಣರೂಪವಾದ ಯಜ್ಞದಲ್ಲಿ ತನ್ನನ್ನೇ ಯಜ್ಞೇಶ್ವರನಲ್ಲಿ ಸಮರ್ಪಿಸಿಕೊಂಡು, ತತ್ಫಲವಾಗಿ ದೇವತೆಗಳಿಗೂ ದೇವನಾದನು. ಈ ವಿಧವಾದ ಆತ್ಮಸಮರ್ಪಣವೆಂಬ ಮಹಾಯಜ್ಞವನ್ನು ಮಾಡಿದುದರ ಫಲವಾಗಿಯೇ

ಕೃತ್ತಿವಾಸನು ಉತ್ತಮವಾದ ಕೀರ್ತಿಯಿಂದ ಸಂಪೂರ್ಣವಿಶ್ವವನ್ನೇ ವ್ಯಾಪಿಸಿಕೊಂಡು ಕಾಂತಿಮಂತನಾಗಿ ವಿರಾಜಿಸುತ್ತಿದ್ದಾನೆ.

**ಅವಿಕ್ಷಿತಃ ಪಾರ್ಥಿವೋಽಸೌ ಮರುತ್ತೋ ।**
**ವೃದ್ಧ್ಯಾ ಶಕ್ರಂ ಯೋಽಜಯೇದ್ದೇವರಾಜಮ್ ।**
**ಯಜ್ಞೇ ಯಸ್ಯ ಶ್ರೀಃ ಸ್ವಯಂ ಸಂನಿವಿಷ್ಟಾ**
**ಯಸ್ಮಿನ್ಭಾಣ್ಡಂ ಕಾಞ್ಚನಂ ಸರ್ವಮಾಸೀತ್ ॥೧೩॥**

ಸುಪ್ರಸಿದ್ಧರಾಜನಾದ, ಅವಿಕ್ಷಿತನ ಮಗನಾದ ಮರುತ್ತನು ತನ್ನ ಸಂಪತ್ಸಮೃದ್ಧಿಯಿಂದ ದೇವತೆಗಳ ರಾಜನಾದ ಇಂದ್ರನನ್ನೂ ಜಯಿಸಿದ್ದನು. ಅವನು ಮಾಡಿದ ಯಜ್ಞದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಯೇ ಸನ್ನಿಹಿತಳಾಗಿದ್ದಳು. ಮರುತ್ತನು ಮಾಡಿದ ಯಜ್ಞದಲ್ಲಿ ಯಜ್ಞದ ಎಲ್ಲ ಉಪಕರಣಗಳೂ ಸ್ವರ್ಣಮಯವೇ ಆಗಿದ್ದುವು.

**ಹರಿಶ್ಚನ್ದ್ರಃ ಪಾರ್ಥಿವೇನ್ದ್ರಃ ಶ್ರುತಸ್ತೇ**
**ಯಜ್ಞೈರಿಷ್ಟ್ವಾ ಪುಣ್ಯಭಾಗ್ವೀತಶೋಕಃ ।**
**ಋದ್ಧ್ಯಾ ಶಕ್ರಂ ಯೋಽಜಯನ್ಮಾನುಷಃ ಸಂ-**
**ಸ್ತಸ್ಮಾದ್ಯಜ್ಞೇ ಸರ್ವಮೇವೋಪಯೋಜ್ಯಮ್ ॥೧೪॥**

ಯುಧಿಷ್ಠಿರ! ರಾಜಾಧಿರಾಜನಾದ ಹರಿಶ್ಚಂದ್ರನನ್ನು ನೀನು ಕೇಳಿಯೇ ಇರುವೆ. ಅವನು ಮನುಷ್ಯನೇ ಆದರೂ ತನ್ನ ಧನಸಂಪತ್ತಿನಿಂದ ಇಂದ್ರನನ್ನೂ ಪರಾಜಯಗೊಳಿಸಿದ್ದನು. ಅನೇಕವಿಧವಾದ ಯಜ್ಞಗಳಿಂದ ದೇವತೆಗಳನ್ನು ಸಂಪೂಜಿಸಿ, ಶೋಕರಹಿತನೂ–ಪುಣ್ಯವಂತನೂ ಆದನು. ಆದುದರಿಂದ ರಾಜನಾದವನು ತನ್ನ ಎಲ್ಲ ಐಶ್ವರ್ಯವನ್ನೂ ಯಜ್ಞದಲ್ಲಿಯೇ ವಿನಿಯೋಗಿಸಬೇಕು."

೨೦ನೆಯ ಅಧ್ಯಾಯವು ಮುಗಿಯಿತು.

## ದೇವಸ್ಥಾನಮುನಿಗಳು ಯುಧಿಷ್ಠಿರನಿಗೆ ಉತ್ತಮಧರ್ಮವನ್ನು ತಿಳಿಸಿ ಯಜ್ಞಾದಿಗಳನ್ನು ಮಾಡಲು ಉಪದೇಶಿಸಿದುದು

"ಜನಮೇಜಯ! ದೇವಸ್ಥಾನರು ಸಂಭಾಷಣೆಯನ್ನು ಮುಂದುವರಿಸುತ್ತಾ ಯುಧಿಷ್ಠಿರನೊಡನೆ ಹೇಳುತ್ತಾರೆ :

"ಯುಧಿಷ್ಠಿರ! ಈ ವಿಷಯದಲ್ಲಿ ಪುರಾತನವಾದ ಇತಿಹಾಸವೊಂದನ್ನು ಉದಾಹರಣೆಯಾಗಿ ಹೇಳುತ್ತಾರೆ : ಹಿಂದೊಮ್ಮೆ ಪ್ರಶ್ನಿಸಿದ ಇಂದ್ರನಿಗೆ ಬೃಹಸ್ಪತಿಗಳು ಈ ಇತಿಹಾಸವನ್ನು ಹೇಳಿದ್ದರು.

**ಸಂತೋಷೋ ವೈ ಸ್ವರ್ಗತಮಃ ಸಂತೋಷಃ ಪರಮಂ ಸುಖಮ್ ।**
**ತುಷ್ಟೇರ್ನ ಕಿಂಚಿತ್ಪರತಃ ಸಾ ಸಮ್ಯಕ್ಪ್ರತಿತಿಷ್ಠತಿ ॥೨॥**

ಮನುಷ್ಯನಿಗೆ ಸಂತೋಷವೆಂಬುದು ಸ್ವರ್ಗಕ್ಕಿಂತಲೂ ಅತಿಶಯವಾದುದು. ಸಂತೋಷವೆಂಬುದೇ ಪರಮಸುಖ. ಸಂತೋಷವು ಮನುಷ್ಯನ ಮನಸ್ಸಿನಲ್ಲಿ ಚೆನ್ನಾಗಿ ಪ್ರತಿಷ್ಠಿತವಾಯಿತೆಂದರೆ ಅದಕ್ಕಿಂತಲೂ ಹೆಚ್ಚಿನ ವಸ್ತುವು ಮನುಷ್ಯನಿಗೆ ಮತ್ತೊಂದಿಲ್ಲ. (ರಾಜನಾದವನು ಯಾವಾಗಲೂ ತುಷ್ಟನಾಗಿರಕೂಡದೆಂದು ಹಿರಿಯರ ವಾಕ್ಯವಿದೆ. **ಅಸಂತುಷ್ಟೋ ದ್ವಿಜೋ ನಷ್ಟಃ ಸಂತುಷ್ಟಶ್ಚ ಮಹೀಪತಿಃ ।** ಅಸಂತುಷ್ಟನಾದ ರಾಜನು ಬೊಕ್ಕಸವನ್ನು ಹೆಚ್ಚಿಸುವುದಕ್ಕಾಗಿ ಪ್ರಜೆಗಳನ್ನು ಪೀಡಿಸುತ್ತಾನೆ. ಆದುದರಿಂದ ರಾಜನಾಗಿರುವವನು ತುಷ್ಟಿಯಿಂದಿರಬೇಕೆಂದು ಹೇಳಿ ಸಂತೋಷವನ್ನು ಅಥವಾ ತುಷ್ಟಿಯನ್ನು ಇಲ್ಲಿ ಹೊಗಳಿದ್ದಾರೆ. ಇದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ. ಆದರೆ ಈ ಪ್ರಕರಣದಲ್ಲಿ ಸಂತೋಷವೆಂದರೆ ಬ್ರಹ್ಮಾನಂದ ಅಥವಾ ಆತ್ಮಾನಂದ. ಮಾನವನು ಆತ್ಮಸಾಕ್ಷಾತ್ಕಾರಮಾಡಿಕೊಂಡು ಸಂತೋಷಪಡಬೇಕು. ಆ ಆನಂದವೇ ಶಾಶ್ವತವಾದುದು. ಉಳಿದ ಸಂತೋಷ-ಸುಖ-ದುಃಖಗಳು ಕ್ಷಣಿಕವಾದುವುಗಳು—ಎಂಬ ಅಭಿಪ್ರಾಯವು ಈ ಶ್ಲೋಕದಲ್ಲಿ ಕಾಣುತ್ತದೆ. ಮುಂದಿನ ಶ್ಲೋಕಗಳೂ ಇದೇ ಅಭಿಪ್ರಾಯವನ್ನೇ ಸಮರ್ಥಿಸುತ್ತವೆ. )

**ಯದಾ ಸಂಹರತೇ ಕಾಮಾನ್ಕೂರ್ಮೋಽಙ್ಗಾನೀವ ಸರ್ವಶಃ ।**
**ತದಾತ್ಮಜ್ಯೋತಿರಚಿರಾತ್ಸ್ವಾತ್ಮನ್ಯೇವ ಪ್ರಸೀದತಿ ॥೩॥**

ಆಮೆಯು ತನ್ನ ಎಲ್ಲ ಅವಯವಗಳನ್ನೂ ಚಿಪ್ಪಿನೊಳಗೆ ಸಂಕೋಚಿಸಿಕೊಳ್ಳುವಂತೆ–ಮನುಷ್ಯನು ಯಾವಾಗ ತನ್ನ ಕಾಮನೆಗಳೆಲ್ಲವನ್ನೂ ಒಳಸೆಳೆದುಕೊಳ್ಳುತ್ತಾನೆಯೋ–ತನ್ನಲ್ಲಿಯೇ ಉಪಸಂಹರಿಸಿಕೊಳ್ಳುತ್ತಾನೆಯೋ–ಆ ಕೂಡಲೇ ಜ್ಯೋತಿಸ್ವರೂಪನಾದ ಪರಮಾತ್ಮನು ಮನುಷ್ಯನ ಅಂತಃಕರಣದಲ್ಲಿ ಕಾಣಿಸಿಕೊಳ್ಳುತ್ತಾನೆ.

**ನ ಬಿಭೇತಿ ಯದಾ ಚಾಯಂ ಯದಾ ಚಾಸ್ಮಾನ್ನ ಬಿಭ್ಯತಿ ।**
**ಕಾಮದ್ವೇಷೌ ಚ ಜಯತಿ ತದಾತ್ಮಾನಂ ಚ ಪಶ್ಯತಿ ॥೪॥**

ಯಾವಾಗ ಮನುಷ್ಯನು ಯಾರಿಗೂ ಯಾವುದಕ್ಕೂ ಹೆದರುವುದಿಲ್ಲವೋ ಮತ್ತು ಯಾವಾಗ ಅವನಿಂದ ಯಾರಿಗೂ ಯಾವ ವಿಧವಾದ ಭಯವೂ ಇಲ್ಲವೋ, ಯಾವನು ಯಾವಾಗ ರಾಗ-ದ್ವೇಷಗಳನ್ನು ಜಯಿಸಿರುತ್ತಾನೆಯೋ–ಆಗ ಅಂತಹವನು ಹೃದಯಗುಹೆಯಲ್ಲಿ ಪರಮಾತ್ಮನನ್ನು ಕಂಡುಕೊಳ್ಳುತ್ತಾನೆ.

**ಯದಾಸೌ ಸರ್ವಭೂತಾನಾಂ ನ ದ್ರುಹ್ಯತಿ ನ ಕಾಂಕ್ಷತಿ ।**
**ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥೫॥**

ಯಾವಾಗ ಮಾನವನು ಕಾರ್ಯದಿಂದಾಗಲೀ, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ–ವಿಶ್ವದಲ್ಲಿರುವ ಎಲ್ಲ ಪ್ರಾಣಿಗಳಲ್ಲಿ ಯಾವುದೇ ಒಂದು ಪ್ರಾಣಿಯ ವಿಷಯದಲ್ಲಿಯೂ ದ್ರೋಹವನ್ನೆಸಗುವುದಿಲ್ಲವೋ ಮತ್ತು ಮತ್ತೊಬ್ಬನಿಗೆ ದ್ರೋಹವಾಗುವುದನ್ನೂ ಬಯಸುವುದಿಲ್ಲವೋ–ಯಾವ ವಸ್ತುವನ್ನೂ ಬಯಸುವುದಿಲ್ಲವೋ ಆಗ–ಅಂತಹವನು ಪರಬ್ರಹ್ಮಪರಮಾತ್ಮನನ್ನು ತನ್ನ ಹೃದಯಕಂದರದಲ್ಲಿಯೇ ಕಂಡುಕೊಳ್ಳುತ್ತಾನೆ. (ಬ್ರಹ್ಮನೇ ಆಗುತ್ತಾನೆ.)

ಯುಧಿಷ್ಠಿರ! ಹೀಗೆ ಸಮಸ್ತಪ್ರಾಣಿಗಳೂ (ಮನುಷ್ಯರು) ಆಯಾ ಧರ್ಮಗಳನ್ನು ಆಯಾ ಕಾಲಗಳಲ್ಲಿ ತತ್ತತ್ಪ್ರಕಾರವಾಗಿ ಮಾಡುತ್ತಾ ಬುದ್ಧಿಯಿಂದ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಆದುದರಿಂದ ನೀನಾದರೂ

ಈ ಸಮಯದಲ್ಲಿ ನಿನ್ನ ಧರ್ಮವೇನೆಂಬುದನ್ನು ತಿಳಿದುಕೊಂಡು ಅದ ರಂತೆಯೇ ಆಚರಿಸು.

( ದೇವಸ್ಥಾನಮುನಿಗಳ ಅಭಿಪ್ರಾಯವು ಹೀಗಿದೆ : ಸಂತೋಷ ಅಥವಾ ಆತ್ಮಾನಂದ–ಎಂಬುದು ಎಲ್ಲಕ್ಕಿಂತಲೂ ಶ್ರೇಷ್ಠವಾದುದು. ಅಂತಹ ಸಂತೋಷವನ್ನು ಪಡೆದುಕೊಳ್ಳಲು ಅರಣ್ಯಕ್ಕೆ ಹೋಗಬೇಕಾದ ಅವಶ್ಯಕತೆ ಯೇನೂ ಇಲ್ಲ. ತಾನಿರುವಲ್ಲಿಯೇ ಆ ಮಹಾನಂದವನ್ನು ಪಡೆದುಕೊಳ್ಳ ಬಹುದು. ಅದಕ್ಕೆ ಬೇಕಾದ ಉಪಕರಣಗಳು ಭಿಕ್ಷಾಟನೆಯೂ ಅಲ್ಲ; ಸರ್ವತ್ಯಾಗವೂ ಅಲ್ಲ.

ಮಾನಸಿಕಸಂನ್ಯಾಸವಾಗಬೇಕು. ಕಾಮನೆಗಳನ್ನೂ, ರಾಗ-ದ್ವೇಷ ಗಳನ್ನೂ ಮನಸ್ಸಿನಿಂದ ದೂರಮಾಡಬೇಕು. ಯಾವನೊಬ್ಬನಿಗೂ ದ್ರೋಹ ವನ್ನೆಸಗಬಾರದು ; ಅಸೂಯೆಪಡಬಾರದು. ಎಲ್ಲರಿಗೂ ಅಭಯಪ್ರದ ನಾಗಿರಬೇಕು. ತಾನೂ ಭಯವನ್ನು ದೂರಮಾಡಬೇಕು. ಹೀಗಿದ್ದುಕೊಂಡು ಆತ್ಮಾನುಸಂಧಾನವನ್ನು ಮಾಡುತ್ತಿದ್ದರೆ ಆತ್ಮಾನಂದವು ಲಭ್ಯವಾಗುತ್ತದೆ. ಇದನ್ನು ಅರಮನೆಯಲ್ಲಿಯೇ ಮಾಡಬಹುದು. ರಾಜಯೋಗ್ಯವಾದ ಕರ್ತವ್ಯ ಗಳನ್ನು ಮಾಡುತ್ತಲೇ ಈ ಕಾರ್ಯವನ್ನು ಮಾಡಬಹುದು. ತ್ಯಾಗವೆಂದರೆ ಮನಸ್ಸಿನಿಂದ ತ್ಯಾಗಮಾಡಬೇಕೇ ಹೊರತು ವಸ್ತುಗಳಿಂದ ದೂರವಾಗುವು ದಾಗಲೀ ಮತ್ತು ಆ ಕಾಮನಾವಸ್ತುಗಳನ್ನು ಪದೇ-ಪದೇ ಸ್ಮರಿಸಿಕೊಳ್ಳು ತ್ತಿರುವುದಾಗಲೀ ನಿಜವಾದ ತ್ಯಾಗವಾಗುವುದಿಲ್ಲ. ಕಾಮನಾವಸ್ತುಗಳು ದೂರವಾದಂತೆಲ್ಲಾ ಮನಸ್ಸು ಅವುಗಳನ್ನು ಪಡೆದುಕೊಳ್ಳಬೇಕೆಂದು ತವಕಿ ಸುತ್ತದೆ. ಕಾಡಿಗೆ ಹೋಗುವುದರಿಂದಲೇ ಮನಸ್ಸಿನ ಈ ವಿಷಯಸಂಸ್ಕಾರವನ್ನು ದೂರಮಾಡಲು ಸಾಧ್ಯವಾಗುವುದಿಲ್ಲ. ಆದುದರಿಂದ ಅರಮನೆಯಲ್ಲಿಯೇ ಇದ್ದು ಕಾಮ-ಕ್ರೋಧ-ಮದ-ಮಾತ್ಸರ್ಯಗಳನ್ನು ತ್ಯಾಗಮಾಡಿ ಮನಸ್ಸನ್ನು ಯಾವಾಗಲೂ ಹೃದಯಗುಹೆಯಲ್ಲಿರುವ ಪರಮಾತ್ಮನ ಕಡೆಗೆ ತಿರುಗಿಸಬೇಕು. ಆಗಲೇ ಮಹಾಸಂತೋಷವು ಲಭಿಸುತ್ತದೆ. )

ದೇವಸ್ಥಾನರು ಮುಂದುವರಿದು ಹೇಳುತ್ತಾರೆ :

**ಅನ್ಯೇ ಸಾಮ ಪ್ರಶಂಸನ್ತಿ ವ್ಯಾಯಾಮಮಪರೇ ಜನಾಃ ।**
**ನೈಕಂ ನ ಚಾಪರಂ ಕೇಚಿದುಭಯಂ ಚ ತಥಾಪರೇ ॥೭॥**

ಕೆಲವರು ಸಾಮೋಪಾಯವನ್ನು ಪ್ರಶಂಸೆಮಾಡುತ್ತಾರೆ. ಮತ್ತೆ ಕೆಲವರು ದಂಡೋಪಾಯವೇ ಶ್ರೇಷ್ಠವೆಂದು ಹೇಳುತ್ತಾರೆ. ಸಾಮಾನ್ಯವಾಗಿ ಒಂದನ್ನು ಪ್ರಶಂಸೆಮಾಡುವವರು ಮತ್ತೊಂದನ್ನು ಪ್ರಶಂಸೆಮಾಡುವುದಿಲ್ಲ. ಕೆಲವು ಜನರು ಮಾತ್ರ ಸಾಮ ಮತ್ತು ದಂಡೋಪಾಯಗಳೆರಡನ್ನೂ ಪ್ರಶಂಸೆಮಾಡುತ್ತಾರೆ. (ಸಾಮ ಎಂಬ ಪದಕ್ಕೆ ಸಾಮೋಪಾಯ-ಸಂತೈಸುವುದು-ರಾಜಿಮಾಡಿಕೊಳ್ಳುವುದು–ಮುಂತಾಗಿ ಅರ್ಥವಾಗುತ್ತದೆ. ವ್ಯಾಖ್ಯಾನಕಾರರು **ಸಾಮ** ಎಂಬುದಕ್ಕೆ **ಪ್ರೀತಿಂ** ಎಂಬುದಾಗಿಯೂ **ವ್ಯಾಯಾಮಂ**–ಎಂಬುದಕ್ಕೆ ಯತ್ನ ಮತ್ತು ಪರಿಶ್ರಮ–ಎಂಬುದಾಗಿಯೂ ಅರ್ಥಮಾಡಿರುತ್ತಾರೆ. **ನೈಕಂ ನ ಚಾಪರಂ ಕೇಚಿತ್** ಎಂಬುವುದಕ್ಕೆ **ಅಪರೇ ಏಕಂ ಧ್ಯಾನಂ ನ ಪ್ರಶಂಸನ್ತಿ ಇತಿ ನ**–ಬೇರೆಯವರು ಧ್ಯಾನವನ್ನು ಪ್ರಶಂಸಿಸುವುದಿಲ್ಲ ಎಂದಲ್ಲ. **ಅಪಿತು ಪ್ರಶಂಸತ್ಯೇವ** = ಧ್ಯಾನವನ್ನು ಬೇರೆಯವರು ಪ್ರಶಂಸೆ ಮಾಡಿಯೇತೀರುತ್ತಾರೆ. **ಉಭಯಂ ಸಾಮವ್ಯಾಯಾಮೌ ಏಕಸ್ಯೈವ ಅವಸ್ಥಾಭೇದೇನ ಪ್ರಶಂಸನ್ತಿ**–ಸಾಮ ಮತ್ತು ವ್ಯಾಯಾಮಗಳೆರಡನ್ನೂ ಅವಸ್ಥಾಭೇದಗಳಿಂದ ಪ್ರಶಂಸೆಮಾಡುತ್ತಾರೆ–ಎಂದು ಅರ್ಥಮಾಡಿರುತ್ತಾರೆ. ಪ್ರೀತಿ-ಯತ್ನ ಮತ್ತು ಧ್ಯಾನಗಳು ಈ ಪ್ರಕರಣಕ್ಕೆ ಹೇಗೆ ಸಂಬಂಧಿಸಿವೆಯೆಂದು ಹೇಳುವುದು ಕಷ್ಟವಾಗುತ್ತದೆ.)

**ಯಜ್ಞಮೇವ ಪ್ರಶಂಸನ್ತಿ ಸಂನ್ಯಾಸಮಪರೇ ಜನಾಃ ।**
**ದಾನಮೇಕೇ ಪ್ರಶಂಸನ್ತಿ ಕೇಚಿಚ್ಚೈವ ಪ್ರತಿಗ್ರಹಮ್ ॥೮॥**

ಕೆಲವರು ಯಜ್ಞವನ್ನು ಪ್ರಶಂಸೆಮಾಡುತ್ತಾರೆ. ಕೆಲವರು ಸಂನ್ಯಾಸವನ್ನು ಪ್ರಶಂಸೆಮಾಡುತ್ತಾರೆ. ಕೆಲವರು ದಾನಮಾಡುವುದನ್ನು ಪ್ರಶಂಸಿಸುತ್ತಾರೆ. ಕೆಲವರು ದಾನತೆಗೆದುಕೊಳ್ಳುವುದನ್ನು ಪ್ರಶಂಸೆಮಾಡುತ್ತಾರೆ.

**ಕೇಚಿತ್ಸರ್ವಂ ಪರಿತ್ಯಜ್ಯ ತೂಷ್ಣೀಂ ಧ್ಯಾಯನ್ತ ಆಸತೇ ॥೯॥**

ಕೆಲವರಾದರೋ ಎಲ್ಲವನ್ನೂ ಪರಿತ್ಯಾಗಮಾಡಿ ಮೌನಧ್ಯಾನಾಸಕ್ತರಾಗಿಯೇ ಇದ್ದುಬಿಡುತ್ತಾರೆ.

**ರಾಜ್ಯಮೇಕೇ ಪ್ರಶಂಸನ್ತಿ ಪ್ರಜಾನಾಂ ಪರಿಪಾಲನಮ್ ।**
**ಹತ್ವಾ ಭಿತ್ತ್ವಾ ಚ ಭಿತ್ತ್ವಾ ಚ ಕೇಚಿದೇಕಾನ್ತಶೀಲಿನಃ ॥೧೦॥**

ಕೆಲವರು ಶತ್ರುಗಳನ್ನು ಸಂಹರಿಸಿ ಶತ್ರುಸೈನಿಕರನ್ನು ತುಂಡರಿಸಿ ಕೋಟೆಯನ್ನು ಭೇದಿಸಿ ರಾಜ್ಯಗಳಿಸುವುದನ್ನೂ ಅನಂತರ ಧರ್ಮದಿಂದ ಪ್ರಜೆಗಳನ್ನು ಪಾಲಿಸುವುದನ್ನೂ ಪ್ರಶಂಸಿಸುತ್ತಾರೆ. ಕೆಲವರು ಯಾವ ವಿಧ ವಾದ ಸಂಪರ್ಕವೂ ಇಲ್ಲದೆ ಏಕಾಂತವಾಸವೇ ಶ್ರೇಷ್ಠವೆಂದೂ ಭಾವಿಸುತ್ತಾರೆ.

ಈ ಎಲ್ಲ ವಿಷಯಗಳನ್ನೂ ಸಂಪೂರ್ಣವಾಗಿ ಸಮಾಲೋಚಿಸಿ ವಿದ್ವಾಂಸರು ಈ ನಿರ್ಣಯಕ್ಕೆ ಬಂದಿರುತ್ತಾರೆ.

**ಅದ್ರೋಹೇಣೈವ ಭೂತಾನಾಂ ಯೋ ಧರ್ಮಃ ಸ ಸತಾಂ ಮತಃ ॥**

ಪ್ರಾಣಿಗಳ ವಿಷಯದಲ್ಲಿ ದ್ರೋಹವನ್ನೆಸಗದಿರುವ ಮತ್ತು ದ್ರೋಹವನ್ನು ಬಗೆಯದಿರುವ ಯಾವ ಧರ್ಮವಿರುವುದೋ–ಆ ಧರ್ಮವೇ ಸತ್ಪುರುಷರಿಗೆ ಅಭಿಮತವಾದ ಧರ್ಮವಾಗಿರುತ್ತದೆ.

**ಅದ್ರೋಹಃ ಸತ್ಯವಚನಂ ಸಂವಿಭಾಗೋ ದಯಾ ದಮಃ ॥೧೧॥**
**ಪ್ರಜನಂ ಸ್ವೇಷು ದಾರೇಷು ಮಾರ್ದವಂ ಹ್ರೀರಚಾಪಲಮ್ ।**
**ಏವಂ ಧರ್ಮಂ ಪ್ರಧಾನೇಷ್ಟಂ ಮನುಃ**
**ಸ್ವಾಯಮ್ಭುವೋಽಬ್ರವೀತ್ ॥೧೨॥**

ಯಾರಿಗೂ ದ್ರೋಹಮಾಡದಿರುವುದು ; ಸತ್ಯವನ್ನೇ ಹೇಳುವುದು ; ಬಲಿ, ವೈಶ್ವದೇವ, ಅತಿಥಿಪೂಜೆ–ಇತ್ಯಾದಿ ನಿತ್ಯ-ನೈಮಿತ್ತಿಕಕರ್ಮಾನುಷ್ಠಾನ ಗಳಿಂದ ಎಲ್ಲ ಪ್ರಾಣಿಗಳಿಗೂ ಯಥಾಯೋಗ್ಯವಾಗಿ ಭಾಗಗಳನ್ನು ಕೊಡುವುದು; ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಯಾಪರತೆ ಯಿಂದಿರುವುದು ; ಇಂದ್ರಿಯಗಳನ್ನು ಜಯಿಸುವುದು ; ಧರ್ಮಪತ್ನಿಯರಲ್ಲಿ ಸತ್ಸಂತಾನವನ್ನು ಪಡೆದುಕೊಳ್ಳುವುದು ; ಎಲ್ಲರ ವಿಷಯದಲ್ಲಿಯೂ ಮೃದುಭಾವ ದಿಂದಿರುವುದು ; ದುಷ್ಕಾರ್ಯಗಳನ್ನು ಮಾಡಲು ನಾಚುವುದು; ಜಿಹ್ವಾ ಚಾಪಲ್ಯ, ದೃಷ್ಟಿಚಾಪಲ್ಯ, ಶ್ರವಣಚಾಪಲ್ಯ, ಸ್ಪರ್ಶಚಾಪಲ್ಯ–ಇತ್ಯಾದಿ ಚಾಪಲ್ಯ ಗಳಿಂದ ವಿಹೀನನಾಗಿರುವುದು–ಇವು ಶ್ರೇಷ್ಠವಾದ ಮತ್ತು ಇಷ್ಟವಾದ ಧರ್ಮಗಳಾಗಿರುತ್ತವೆ.” ಈ ವಿಷಯವನ್ನು ಸ್ವಾಯಂಭುವಮನುವೇ ಹೇಳಿದ್ದಾನೆ.

ದೇವಸ್ಥಾನರು ಮುಂದುವರಿದು ಹೇಳುತ್ತಾರೆ :

“ಯುಧಿಷ್ಠಿರ! ನೀನೂ ಸಹ ಸ್ವಾಯಂಭುವಮನುವು ಹೇಳಿರುವ ಈ ಎಲ್ಲ ಧರ್ಮಗಳನ್ನೂ ಪ್ರಯತ್ನಪೂರ್ವಕವಾಗಿ ಪರಿಪಾಲಿಸು.

**ಯೋ ಹಿ ರಾಜ್ಯೇ ಸ್ಥಿತಃ ಶಶ್ವದ್ವಶೀ ತುಲ್ಯಪ್ರಿಯಾಪ್ರಿಯಃ ।**
**ಕ್ಷತ್ರಿಯೋ ಯಜ್ಞಶಿಷ್ಟಾಶೀ ರಾಜಾ ಶಾಸ್ತ್ರಾರ್ಥತತ್ತ್ವವಿತ್ ॥೧೩॥**
**ಅಸಾಧುನಿಗ್ರಹರತಃ ಸಾಧೂನಾಂ ಪ್ರಗ್ರಹೇ ರತಃ ।**
**ಧರ್ಮವರ್ತ್ಮನಿ ಸಂಸ್ಥಾಪ್ಯ ಪ್ರಜಾ ವರ್ತೇತ ಧರ್ಮತಃ ॥೧೪॥**
**ಪುತ್ರಸಂಕ್ರಾಮಿತಶ್ರೀಶ್ಚ ವನೇ ವನ್ಯೇನ ವರ್ತಯನ್ ।**
**ವಿಧಿನಾ ಶ್ರಾವಣೇನೈವ ಕುರ್ಯಾತ್ಕರ್ಮಾಣ್ಯತನ್ದ್ರಿತಃ ।**
**ಯ ಏವಂ ವರ್ತತೇ ರಾಜನ್ಸ ರಾಜಾ ಧರ್ಮನಿಶ್ಚಿತಃ ॥೧೫॥**

ರಾಜ್ಯಸಿಂಹಾಸನಾರೂಢನಾದ ಯಾವ ರಾಜನು ಇಂದ್ರಿಯಗಳನ್ನು ವಶಪಡಿಸಿಕೊಂಡಿರುತ್ತಾನೆಯೋ, ಪ್ರಿಯವಾದುದನ್ನೂ ಅಪ್ರಿಯವಾದು ದನ್ನೂ ಸಮಾನತೆಯಿಂದ ಕಾಣುವನೋ, ಯಜ್ಞವನ್ನು ಮಾಡಿ ವಿಘಸವನ್ನು ಭೋಜನಮಾಡುತ್ತಾನೆಯೋ, ರಾಜನೀತಿಯ ಅರ್ಥವನ್ನು ಯಥಾವತ್ತಾಗಿ ತಿಳಿದಿರುತ್ತಾನೆಯೋ, ದುಷ್ಟಶಿಕ್ಷಕನಾಗಿಯೂ, ಶಿಷ್ಟರಕ್ಷಕನಾಗಿಯೂ ಇರು ತ್ತಾನೆಯೋ, ದೇಶದ ಪ್ರಜೆಗಳೆಲ್ಲರನ್ನೂ ಧರ್ಮಾನುಯಾಯಿಗಳನ್ನಾಗಿ ಮಾಡುವುದಲ್ಲದೇ–ತಾನೂ ಸಹ ಧರ್ಮಮಾರ್ಗದಲ್ಲಿಯೇ ಇರುತ್ತಾ ನೆಯೋ, ವೃದ್ಧಾಪ್ಯದಲ್ಲಿ ರಾಜ್ಯಲಕ್ಷ್ಮಿಯನ್ನು ಮಗನಿಗೆ ವಹಿಸಿಕೊಟ್ಟು ಅರಣ್ಯಕ್ಕೆ ಹೋಗಿ ಅಲ್ಲಿ ಸಿಕ್ಕುವ ಗೆಡ್ಡೆ-ಗೆಣಸು ಮತ್ತು ಫಲಗಳಿಂದಲೇ ಜೀವನನಿರ್ವಹಣೆಯನ್ನು ಮಾಡುತ್ತಿರುತ್ತಾನೆಯೋ, ಅರಣ್ಯದಲ್ಲಿಯೂ ಅಲಸಿಕೆಯನ್ನು ತೊರೆದು ಶಾಸ್ತ್ರಗಳ ಶ್ರವಣದಿಂದ ತಿಳಿದುಕೊಂಡಿರುವ ವಿಧಿವತ್ತಾದ ಕರ್ಮಗಳನ್ನು ಮಾಡುತ್ತಿರುತ್ತಾನೆಯೋ–ಅಂತಹ ರಾಜನು ಧರ್ಮವನ್ನು ಯಥಾವತ್ತಾಗಿ ತಿಳಿದಿರುವ ಮತ್ತು ಕಾರ್ಯರೂಪದಲ್ಲಿ ಆಚರಣೆಗೆ ತಂದಿರುವ ಧರ್ಮಪ್ರಭು–ಎನಿಸಿಕೊಳ್ಳುತ್ತಾನೆ.

**ತಸ್ಯಾಯಂ ಚ ಪರಶ್ಚೈವ ಲೋಕಃ ಸ್ಯಾತ್ಸಫಲೋದಯಃ ।**
**ನಿರ್ವಾಣಂ ಹಿ ಸುದುಷ್ಪ್ರಾಪ್ಯಂ ಬಹುವಿಘ್ನಂ ಚ ಮೇ ಮತಮ್ ॥**

ಇಂತಹವನಿಗೆ ಇಹ-ಪರಗಳೆರಡರಲ್ಲಿಯೂ ಶುಭಫಲಗಳೇ ಪ್ರಾಪ್ತವಾಗುತ್ತವೆ. ನನ್ನ ಅಭಿಪ್ರಾಯದಲ್ಲಿ ಸಂನ್ಯಾಸದ ಮೂಲಕವಾಗಿ ಮೋಕ್ಷವನ್ನು ಹೊಂದುವುದು ಅತ್ಯಂತದುಷ್ಕರವಾದುದು ಮತ್ತು ಅನೇಕವಾದ ವಿಘ್ನಗಳಿಂದ ಕೂಡಿದುದೂ ಆಗಿರುತ್ತದೆ.

ಈ ಪ್ರಕಾರವಾಗಿ ಧರ್ಮಾನುಸರಣೆಯನ್ನು ಮಾಡುವ, ಸತ್ಯನಿಷ್ಠರಾದ, ದಾನಶೀಲರಾದ, ತಪೋನಿರತರಾದ, ದಯೆಯೇ ಮುಂತಾದ ಸದ್ಗುಣಗಳಿಂದ ಪರಿಪೂರ್ಣರಾದ, ಕಾಮ-ಕ್ರೋಧಗಳನ್ನು ಸಂಪೂರ್ಣವಾಗಿ ವರ್ಜಿಸಿ ಪ್ರಜೆಗಳ ಪಾಲನೆಯಲ್ಲಿಯೇ ನಿರತರಾದ, ಶ್ರೇಷ್ಠವಾದ ಧರ್ಮವನ್ನು ಆಶ್ರಯಿಸಿರುವ ರಾಜರು ಗೋಬ್ರಾಹ್ಮಣರ ಸಲುವಾಗಿಯೇ ಯುದ್ಧಮಾಡುತ್ತಾ ಅವಸಾನಾನಂತರದಲ್ಲಿ ಸದ್ಗತಿಯನ್ನೂ ಹೊಂದಿರುತ್ತಾರೆ.

ಪರಂತಪನೇ! ಯುಧಿಷ್ಠಿರ! ರುದ್ರರೂ, ವಸುಗಳೂ, ಆದಿತ್ಯರೂ, ಸಾಧ್ಯರೂ, ಅನೇಕ ರಾಜರ್ಷಿಗಳೂ ಅಪ್ರಮತ್ತರಾಗಿ ಇದೇ ಧರ್ಮವನ್ನೇ ಆಶ್ರಯಿಸಿ ತಮ್ಮ-ತಮ್ಮ ಪುಣ್ಯಕರ್ಮಗಳಿಂದ ಸ್ವರ್ಗಲೋಕವನ್ನು ಪಡೆದುಕೊಂಡಿರುವರು."

೨೧ನೆಯ ಅಧ್ಯಾಯವು ಮುಗಿಯಿತು.

೨೨ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಅರ್ಜುನನು ಕ್ಷತ್ರಿಯಧರ್ಮವನ್ನು ಪ್ರಶಂಸೆಮಾಡುತ್ತಾ ಯುಧಿಷ್ಠಿರನನ್ನು ಸಮಾಧಾನಗೊಳಿಸಲು ಪುನಃ ಪ್ರಯತ್ನಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಈ ಮಧ್ಯದಲ್ಲಿ ಅರ್ಜುನನು ಖಿನ್ನಮನಸ್ಕನಾಗಿದ್ದ, ತನ್ನ ನಿರ್ಧಾರದಿಂದ ಸ್ವಲ್ಪವಾದರೂ ವಿಚಲಿತನಾಗದೇ ಇದ್ದ ಹಿರಿಯಣ್ಣನೊಡನೆ ಪುನಃ ಈ ಮಾತನ್ನು ಹೇಳಿದನು :

"ನರಶ್ರೇಷ್ಠನೇ! ಧರ್ಮಜ್ಞನೇ! ಕ್ಷತ್ರಧರ್ಮಾನುಸಾರವಾಗಿ ಶತ್ರುಗಳನ್ನು ಗೆದ್ದು ದುರ್ಲಭವಾದ ರಾಜ್ಯವನ್ನು ಗಳಿಸಿಯೂ ನೀನು ಹೀಗೇಕೆ ಬಹಳವಾಗಿ ಪರಿತಪಿಸುತ್ತಿರುವೆ? ಮಹಾರಾಜ! ಕ್ಷಾತ್ರಧರ್ಮವು ಏನು

ಹೇಳುತ್ತದೆಯೆಂಬುದನ್ನಾದರೂ ಸ್ಮರಿಸು. ಅನೇಕಯಜ್ಞಗಳನ್ನು ಮಾಡು ವುದಕ್ಕಿಂತಲೂ ಕ್ಷತ್ರಿಯನಾದವನಿಗೆ ಯುದ್ಧದಲ್ಲಿ ಮರಣಹೊಂದುವುದೇ ಹೆಚ್ಚಿನದು.

**ಬ್ರಾಹ್ಮಣಾನಾಂ ತಪಸ್ತ್ಯಾಗಃ ಪ್ರೇತ್ಯ ಧರ್ಮವಿಧಿಃ ಸ್ಮೃತಃ ।**
**ಕ್ಷತ್ರಿಯಾಣಾಂ ಚ ನಿಧನಂ ಸಂಗ್ರಾಮೇ ವಿಹಿತಂ ಪ್ರಭೋ ॥೪॥**

ಬ್ರಾಹ್ಮಣರಿಗೆ ತ್ಯಾಗ (ಸಂನ್ಯಾಸ) ಮತ್ತು ತಪಸ್ಸುಗಳು ಮುಖ್ಯ ಧರ್ಮಗಳು. ಮರಣಾನಂತರ ಪುಣ್ಯಲೋಕವನ್ನು ಹೊಂದಲು ಬ್ರಾಹ್ಮಣ ನಾದವನಿಗೆ ಇದೇ ಧರ್ಮವಿಧಿಯೆಂದು ಹೇಳಲ್ಪಟ್ಟಿದೆ. ಕ್ಷತ್ರಿಯರಾದವರಿಗೆ ಯುದ್ಧದಲ್ಲಿ ನಿಧನಹೊಂದುವುದು ವಿಹಿತವಾದುದು. (ಶ್ರೇಯಸ್ಕರ ವಾದುದು.) ಭರತಶ್ರೇಷ್ಠನೇ! ಕ್ಷತ್ರಿಯರ ಧರ್ಮವು ಮಹಾಭಯಂಕರ ವಾದುದೆಂದು ಹೇಳಲ್ಪಟ್ಟಿದೆ. ಶಸ್ತ್ರವನ್ನು ನಿತ್ಯವೂ ಧರಿಸಿರಬೇಕಾದ ಧರ್ಮವದು. ಸಮಯಬಂದಾಗ ಯುದ್ಧದಲ್ಲಿ ಶಸ್ತ್ರದಿಂದ ಅವನ ವಧೆಯೂ ಆಗಿಹೋಗುತ್ತದೆ. (ಆದುದರಿಂದ ಇಂತಹ ನಿಧನಕ್ಕಾಗಿ ಖಂಡಿತವಾಗಿಯೂ ದುಃಖಿಸಬಾರದು.)

**ಬ್ರಾಹ್ಮಣಸ್ಯಾಪಿ ಚೇದ್ರಾಜನ್ ಕ್ಷತ್ರಧರ್ಮೇಣ ವರ್ತತಃ ।**
**ಪ್ರಶಸ್ತಂ ಜೀವಿತಂ ಲೋಕೇ ಕ್ಷತ್ರಂ ಹಿ ಬ್ರಹ್ಮಸಂಭವಮ್ ॥೬॥**

ಕ್ಷತ್ರಧರ್ಮವನ್ನೇ ಅವಲಂಬಿಸಿರುವ ಬ್ರಾಹ್ಮಣನ ಕ್ಷತ್ರಧರ್ಮಾನು ಸಾರವಾದ ಜೀವಿಕೆಯೂ ಪ್ರಶಸ್ತವಾದುದೇ. ಏಕೆಂದರೆ : ಕ್ಷತ್ರಿಯರ ಉತ್ಪತ್ತಿಯು ಬ್ರಾಹ್ಮಣರಿಂದಲೇ ಆಗಿದೆಯಲ್ಲವೇ?

(ಕ್ಷತ್ರಧರ್ಮವು ಕ್ಷತ್ರಿಯನಿಗೆ ಮಾತ್ರವಲ್ಲ; ಬ್ರಾಹ್ಮಣನೂ ಕ್ಷತ್ರ ಧರ್ಮವನ್ನು ಅವಲಂಬಿಸಬಹುದು. ಕ್ಷತ್ರಧರ್ಮದಿಂದ ಜೀವಿಸುವುದು ಬ್ರಾಹ್ಮಣನಿಗೂ ಪ್ರಶಸ್ತವಾಗಿದೆ. ಅವನಿಗೂ ಇದರಿಂದ ಇಹ-ಪರಗಳೆರಡರ ಸಾಧನೆಯೂ ಆಗುತ್ತದೆ. ಕ್ಷತ್ರಿಯವಂಶವು ಹುಟ್ಟಿದ್ದು ಬ್ರಾಹ್ಮಣರಿಂದಲೇ. ಆದುದರಿಂದ ತನ್ನ ಮೂಲಕವಾಗಿಯೇ ಹುಟ್ಟಿದ ವಂಶದ ಕರ್ಮಗಳನ್ನು ಮಾಡುವುದರಲ್ಲಿ ಅಥವಾ ಆ ಧರ್ಮವನ್ನು ಅವಲಂಬಿಸುವುದರಲ್ಲಿ ಯಾವ ದೋಷವೂ ಇಲ್ಲ. ಬ್ರಾಹ್ಮಣನಿಗೇ ಕ್ಷತ್ರಧರ್ಮವನ್ನು ಆಶ್ರಯಿಸಿರುವುದು

ಪ್ರಶಸ್ತವಾಗಿರುವಾಗ ಕ್ಷತ್ರಿಯನು ತನ್ನ ಧರ್ಮವನ್ನು ಬಿಟ್ಟು ಪರಧರ್ಮವನ್ನು ಅನುಸರಿಸುವುದು ಸರಿಯಲ್ಲ–ಇದು ಅರ್ಜುನನ ಅಭಿಪ್ರಾಯವಾಗಿದೆ. )

**ನ ತ್ಯಾಗೋ ನ ಪುನರ್ಯಜ್ಞೋ* ನ ತಪೋ ಮನುಜೇಶ್ವರ ।**
**ಕ್ಷತ್ರಿಯಸ್ಯ ವಿಧೀಯನ್ತೇ ನ ಪರಸ್ವೋಪಜೀವನಮ್ ॥೭॥**

ಮನುಜೇಶ್ವರನೇ! ಕ್ಷತ್ರಿಯನಾದವನಿಗೆ ತ್ಯಾಗವಾಗಲೀ, ಯಜ್ಞವಾಗಲೀ, ತಪಸ್ಸಾಗಲೀ, ಇತರರ ಸ್ವತ್ತಿನಿಂದ ಜೀವನನಿರ್ವಹಣೆಯಾಗಲೀ ವಿಧಿಸಲ್ಪಟ್ಟಿರುವುದಿಲ್ಲ.

ಅಣ್ಣ! ಈ ಎಲ್ಲ ವಿಷಯಗಳನ್ನೂ ನಾನು ಹೇಳಬೇಕಾಗಿಲ್ಲ. ಏಕೆಂದರೆ; ನೀನು ಸರ್ವಧರ್ಮಗಳನ್ನೂ ತಿಳಿದವನಾಗಿರುವೆ ; ಧರ್ಮಾತ್ಮನಾಗಿರುವೆ ; ಮನನಶೀಲನಾಗಿರುವೆ. ಲೋಕವ್ಯವಹಾರಗಳಲ್ಲಿ ನಿಪುಣನಾಗಿರುವೆ. ಲೋಕದಲ್ಲಿ ಶ್ರೇಷ್ಠವಾದುದು ಯಾವುದೆಂಬುದನ್ನೂ ಹೀನವಾದುದು ಯಾವುದೆಂಬುದನ್ನೂ ನೀನು ತಿಳಿದುಕೊಂಡಿರುವೆ. ಬಂಧುಜನರ ವಿಯೋಗದಿಂದುಂಟಾಗಿರುವ ಶೋಕ-ಸಂತಾಪಗಳನ್ನು ಪರಿತ್ಯಜಿಸಿ ರಾಜೋಚಿತವಾದ ಕಾರ್ಯವನ್ನು ಮಾಡಲು ಸನ್ನದ್ಧನಾಗು. ಅದರಲ್ಲಿಯೂ ವಿಶೇಷವಾಗಿ ಕ್ಷತ್ರಿಯನ ಹೃದಯವು ವಜ್ರದಂತೆ ಅತಿಕಠಿನವಾದುದು. ಅಂತಹ ಹೃದಯವನ್ನೇ ನೀನು ಹೊಂದಿರಬೇಕು. ಕ್ಷತ್ರಧರ್ಮಾನುಸಾರವಾಗಿ ಶತ್ರುಗಳನ್ನು ಗೆದ್ದು ನಿಷ್ಕಂಟಕವಾದ ರಾಜ್ಯವನ್ನು ಹೊಂದಿರುವೆ. ಈಗ ನೀನು ಶೋಕಾಭಿಭೂತವಾಗಿರುವ ಮನಸ್ಸನ್ನು ಜಯಿಸಿ ಯಜ್ಞಮಾಡುವುದರಲ್ಲಿಯೂ ದಾನಮಾಡುವುದರಲ್ಲಿಯೂ ನಿರತನಾಗು.

**ಇನ್ದ್ರೋ ವೈ ಬ್ರಹ್ಮಣಃ ಪುತ್ರಃ ಕ್ಷತ್ರಿಯಃ ಕರ್ಮಣಾಭವತ್ ।**
**ಜ್ಞಾತೀನಾಂ ಪಾಪವೃತ್ತೀನಾಂ ಜಘಾನ ನವತೀರ್ನವ ॥೧೧॥**

---

* ಯಜ್ಞಃ – ಎಂಬುದಕ್ಕೆ ವ್ಯಾಖ್ಯಾನಕಾರರು ಆತ್ಮಯಜ್ಞ ಅಥವಾ ಸಮಾಧಿಸ್ಥಿತಿ ಎಂದು ಅರ್ಥಮಾಡಿರುತ್ತಾರೆ. ದ್ರವ್ಯಯಜ್ಞವನ್ನು ರಾಜನಾದವನು ಸರ್ವಥಾ ಮಾಡಲೇಬೇಕೆಂದು ಈ ಹಿಂದೆ ಭೀಮಾರ್ಜುನರು ಹಲವು ಬಾರಿ ಹೇಳಿರುವುದರಿಂದ ಈ ಶ್ಲೋಕದಲ್ಲಿರುವ ಯಜ್ಞಪದಕ್ಕೆ ಆತ್ಮಯಜ್ಞ ಅಥವಾ ಸಮಾಧಿಸ್ಥಿತಿ ಎಂದು ಅರ್ಥಮಾಡುವುದು ಸಾಧುವಾಗಿದೆ.

ಇಂದ್ರನು ಕಶ್ಯಪಬ್ರಹ್ಮನ ಮಗನು. ಅವನು ಕಶ್ಯಪಬ್ರಹ್ಮನ ಮಗನಾಗಿ ಬ್ರಾಹ್ಮಣನಾಗಿದ್ದರೂ ಕರ್ಮದಿಂದ ಕ್ಷತ್ರಿಯನಾದನು. ಕ್ಷತ್ರಧರ್ಮಾನುಸಾರವಾಗಿ ಪಾಪಾಚಾರಿಗಳಾದ ಜ್ಞಾತಿಗಳಾದ ಎಂಟುನೂರು ಹತ್ತು ದೈತ್ಯರನ್ನು ಸಂಹಾರಮಾಡಿದನು.

ಬ್ರಾಹ್ಮಣನಾಗಿ ಹುಟ್ಟಿದ ಇಂದ್ರನು ಕ್ಷತ್ರಿಯವೃತ್ತಿಯಲ್ಲಿ ತೊಡಗಿದನೆಂದು ಯಾರೂ ಅವನನ್ನು ನಿಂದಿಸುತ್ತಿಲ್ಲ. ನಿಂದಿಸುವುದಕ್ಕೆ ಪ್ರತಿಯಾಗಿ ಅವನು ಮಾಡಿದ ಕರ್ಮವು (ದೈತ್ಯಸಂಹಾರವು) ಅಭಿನಂದನೀಯವೆಂಬ ಮತ್ತು ಪ್ರಶಂಸೆಗೆ ಯೋಗ್ಯವಾದುದೆಂಬ ಅಭಿಪ್ರಾಯವೇ ಲೋಕದಲ್ಲುಂಟಾಗಿದೆ. ಹೀಗವನು ಕ್ಷಾತ್ರಧರ್ಮವನ್ನು ಅವಲಂಬಿಸಿ ದೈತ್ಯರನ್ನು ಸಂಹಾರ ಮಾಡಿದುದರಿಂದಲೇ ಅವನಿಗೆ ದೇವೇಂದ್ರತ್ವವು (ದೇವತೆಗಳ ಮೇಲೆ ಸಾರ್ವಭೌಮತ್ವವು) ಲಭ್ಯವಾಯಿತೆಂಬುದನ್ನು ನಾವು ಕೇಳಿದ್ದೇವೆ. ಮಹಾರಾಜ! ನರೇಂದ್ರನೇ! ನೀನೂ ಸಹ ಚಿಂತಾ-ಶೋಕಗಳಿಂದ ರಹಿತನಾಗಿ ದೇವೇಂದ್ರನಂತೆ ಬಹುದಕ್ಷಿಣಾಕವಾದ ಯಜ್ಞಗಳಿಂದ ದೇವತೆಗಳನ್ನು ಸಂಪೂಜಿಸು. ಕ್ಷತ್ರಿಯರ್ಷಭನೇ! ಪರಿಸ್ಥಿತಿಯು ಹೀಗಿರಲಾಗಿ ನೀನು ಕಿಂಚಿತ್ತಾದರೂ ಶೋಕಪಡಬೇಡ. ಕ್ಷತ್ರಧರ್ಮಾನುಸಾರವಾಗಿ ಯುದ್ಧ ಮಾಡುತ್ತಿದ್ದ ಆ ನಿನ್ನ ಬಂಧು-ದಾಯಾದರೆಲ್ಲರೂ ಶಸ್ತ್ರಾಘಾತಗಳಿಂದ ಪಾವನರಾಗಿ ಪರಮಶ್ರೇಷ್ಠವಾದ ಸದ್ಗತಿಯನ್ನೇ ಹೊಂದಿರುತ್ತಾರೆ.

**ಭವಿತವ್ಯಂ ತಥಾ ತಚ್ಚ ಯದ್ವೃತ್ತಂ ಭರತರ್ಷಭ ।**
**ದಿಷ್ಟಂ ಹಿ ರಾಜಶಾರ್ದೂಲ ನ ಶಕ್ಯಮತಿವರ್ತಿತುಮ್ ॥೧೫॥**

ರಾಜಸಿಂಹನೇ! ಈಗ ಯಾವುದು ನಡೆದಿದೆಯೋ ಅದು ಹಾಗೆಯೇ ಆಗಬೇಕಾಗಿದ್ದಿತು. (ಇದಕ್ಕೆ ನಾನಾಗಲೀ, ನೀನಾಗಲೀ, ಮತ್ತಾರೇ ಆಗಲೀ ಕಾರಣರಲ್ಲ.) ದೈವದ ನಿಯಮವನ್ನು ಉಲ್ಲಂಘಿಸಿ ನಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ."

೨೨ನೆಯ ಅಧ್ಯಾಯವು ಮುಗಿಯಿತು.

## ವ್ಯಾಸರು ಶಂಖ-ಲಿಖಿತರ ಕಥೆಯನ್ನು ಹೇಳುವ ಪ್ರಸಂಗದಲ್ಲಿ ಸುದ್ಯುಮ್ನರಾಜನ ದಂಡಧರ್ಮಪಾಲನೆಯ ಮಹತ್ತ್ವವನ್ನು ಹೇಳಿ ಯುಧಿಷ್ಠಿರನನ್ನು ಕ್ಷತ್ರಿಯಧರ್ಮದಲ್ಲಿಯೇ ಇದ್ದು ರಾಜ್ಯ ಪರಿಪಾಲನೆ ಮಾಡುವಂತೆ ಆಜ್ಞಾಪಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಮಹಾರಾಜ! ಅರ್ಜುನನು ಹೀಗೆ ಹೇಳಿದ ನಂತರವೂ ಕುಂತಿಯ ಮಗನಾದ ಯುಧಿಷ್ಠಿರನು ಯಾವುದೊಂದು ಮಾತನ್ನೂ ಆಡದೇ ಸುಮ್ಮನೆ ಕುಳಿತಿದ್ದನು. ಅದನ್ನು ಗಮನಿಸಿದ ವ್ಯಾಸರು ಯುಧಿಷ್ಠಿರನಿಗೆ ಹಿತೋಪದೇಶ ಮಾಡಲು ಉಪಕ್ರಮಿಸಿದರು.

"ಯುಧಿಷ್ಠಿರ! ಸೌಮ್ಯನೇ! ಅರ್ಜುನನು ಹೇಳಿರುವ ಮಾತು ಸತ್ಯ. ಗೃಹಸ್ಥಧರ್ಮವನ್ನು ಆಶ್ರಯಿಸಿರುವ ಈ ರಾಜ್ಯಶಾಸನಧರ್ಮವು ಶಾಸ್ತ್ರ ವಿಹಿತವಾದುದು ಮತ್ತು ಅತ್ಯಂತಶ್ರೇಷ್ಠವಾದುದು. ಧರ್ಮಜ್ಞನೇ! ಯಥಾ ವಿಧಿಯಾಗಿ, ಯಥಾಶಾಸ್ತ್ರವಾಗಿ ಸ್ವಧರ್ಮಾಚರಣೆಯನ್ನು ಮಾಡು. ಗೃಹಸ್ಥಾಶ್ರಮವನ್ನು ಪರಿತ್ಯಜಿಸಿ ಅರಣ್ಯಜೀವಿಕೆಯು ಕ್ಷತ್ರಿಯನಾದ ನಿನಗೆ ವಿಹಿತವಾಗಿಲ್ಲ.

**ಗೃಹಸ್ಥಂ ಹಿ ಸದಾ ದೇವಾಃ ಪಿತರೋಽತಿಥಯಸ್ತಥಾ ।**
**ಭೃತ್ಯಾಶ್ಚೈವೋಪಜೀವನ್ತಿ ತಾನ್ಭರಸ್ವ ಮಹೀಪತೇ ॥೪॥**

ಮಹೀಪಾಲನೇ! ದೇವತೆಗಳೂ, ಪಿತೃಗಳೂ, ಅತಿಥಿಗಳೂ ಮತ್ತು ಸೇವಕರೂ–ಎಲ್ಲ ಕಾಲಗಳಲ್ಲಿಯೂ ಗೃಹಸ್ಥರನ್ನೇ ಆಶ್ರಯಿಸಿಕೊಂಡಿದ್ದು ಜೀವನನಿರ್ವಹಣೆಯನ್ನು ಮಾಡುತ್ತಾರೆ. ಆದುದರಿಂದ ನೀನೂ ಗೃಹ ಸ್ಥಾಶ್ರಮದಲ್ಲಿಯೇ ದೃಢವಾಗಿದ್ದುಕೊಂಡು ಅವರೆಲ್ಲರ ಭರಣ-ಪೋಷಣ ಗಳನ್ನು ಮಾಡು.

**ವಯಾಂಸಿ ಪಶವಶ್ಚೈವ ಭೂತಾನಿ ಚ ಜನಾಧಿಪ ।**
**ಗೃಹಸ್ಥೈರೇವ ಧಾರ್ಯನ್ತೇ ತಸ್ಮಾಚ್ಛ್ರೇಷ್ಠೋ ಗೃಹಾಶ್ರಮೀ ॥೫॥**

ನರಾಧಿಪನೇ! ಪಶು-ಪಕ್ಷಿಗಳೇ ಅಲ್ಲದೇ ಇತರ ಎಲ್ಲ ಪ್ರಾಣಿಗಳೂ ಗೃಹಸ್ಥರನ್ನೇ ರಕ್ಷಕರನ್ನಾಗಿ ಮಾಡಿಕೊಂಡಿವೆ. ಗೃಹಸ್ಥರೇ ಪಶು-ಪಕ್ಷಿ ಮುಂತಾದ ಪ್ರಾಣಿಗಳ ಭರಣ-ಪೋಷಣಗಳನ್ನು ಮಾಡುತ್ತಾರೆ. ಆದುದರಿಂದಲೇ ಗೃಹಸ್ಥಾಶ್ರಮಿಯು ಸರ್ವಶ್ರೇಷ್ಠನೆಂದು ಹೇಳಲ್ಪಟ್ಟಿದ್ದಾನೆ.

**ಸೋಽಯಂ ಚತುರ್ಣಾಮೇತೇಷಾಮಾಶ್ರಮಾಣಾಂ ದುರಾಚರಃ ।**
**ತಂ ಚರಾದ್ಯ ವಿಧಿಂ ಪಾರ್ಥ ದುಶ್ಚರಂ ದುರ್ಬಲೇನ್ದ್ರಿಯೈಃ ॥೭॥**

ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮದ ಆಚರಣೆಯು ಅತ್ಯಂತ ಕಠಿನವಾದುದು. ಇಂದ್ರಿಯಪಟುತ್ವವಿಲ್ಲದವರಿಂದ ಆಚರಿಸಲು ಅಸಾಧ್ಯ ವಾದ ಗೃಹಸ್ಥಾಶ್ರಮವಿಧಿಯನ್ನು ( ಧರ್ಮವನ್ನು ) ನೀನು ಆಚರಿಸು.

ಧರ್ಮಜ! ನಿನಗೆ ಎಲ್ಲ ವೇದಗಳ ಜ್ಞಾನವೂ ಇದೆ. ನೀನು ಮಹಾ ತಪಸ್ಸನ್ನು ಆಚರಿಸಿರುವೆ. ತಾತ-ಮುತ್ತಾತಂದಿರ ಕಾಲದಿಂದಲೂ ಬಂದಿರುವ ಈ ರಾಜ್ಯವನ್ನು ನೀನು ಜಗತ್ತಿನಭಾರವನ್ನು ಹೊತ್ತಿರುವ ಪರಮಾತ್ಮನಂತೆ (ನೊಗವನ್ನು ಹೊತ್ತಿರುವ ಎತ್ತಿನಂತೆ ) ಧರಿಸಲು ಯೋಗ್ಯನಾಗಿರುವೆ.

**ತಪೋ ಯಜ್ಞಸ್ತಥಾ ವಿದ್ಯಾ ಭೈಕ್ಷ್ಯಮಿನ್ದ್ರಿಯಸಂಯಮಃ।**
**ಧ್ಯಾನಮೇಕಾನ್ತಶೀಲತ್ವಂ ತುಷ್ಟಿರ್ಜ್ಞಾನಂ ಚ ಶಕ್ತಿತಃ ।**
**ಬ್ರಾಹ್ಮಣಾನಾಂ ಮಹಾರಾಜ ಚೇಷ್ಟಾ ಸಂಸಿದ್ಧಿಕಾರಿಕಾ ॥೮॥**

ತಪಸ್ಸು, ಯಜ್ಞ, ವಿದ್ಯೆ, ಭೈಕ್ಷ್ಯ, ಇಂದ್ರಿಯನಿಗ್ರಹ, ಧ್ಯಾನ, ಏಕಾಂತವಾಗಿಯೇ ಇರುವ ಸ್ವಭಾವ, ಸಂತೋಷ, ಯಥಾಶಕ್ತಿ ಶಾಸ್ತ್ರ ಜ್ಞಾನ–ಇವೆಲ್ಲವೂ ಬ್ರಾಹ್ಮಣರಾದವರಿಗೆ ಸಿದ್ಧಿಯನ್ನುಂಟುಮಾಡುವ ಕ್ರಿಯೆಗಳಾಗಿವೆ. ಕ್ಷತ್ರಿಯರು ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಹೇಳುತ್ತೇನೆ. ಅವೆಲ್ಲವೂ ನಿನಗೂ ತಿಳಿದೇ ಇವೆ ; ಆದರೂ ಹೇಳುತ್ತೇನೆ.

**ಯಜ್ಞೋ ವಿದ್ಯಾ ಸಮುತ್ಥಾನಮಸಂತೋಷಃ ಶ್ರಿಯಂ ಪ್ರತಿ ।**
**ದಣ್ಡಧಾರಣಮುಗ್ರತ್ವಂ ಪ್ರಜಾನಾಂ ಪರಿಪಾಲನಮ್ ॥೧೦॥**

**ವೇದಜ್ಞಾನಂ ತಥಾಕೃತ್ಸ್ನಂ ತಪಃ ಸುಚರಿತಂ ತಥಾ ।**
**ದ್ರವಿಣೋಪಾರ್ಜನಂ ಭೂರಿ ಪಾತ್ರೇ ಚ ಪ್ರತಿಪಾದನಮ್ ॥೧೧॥**

**ಏತಾನಿ ರಾಜ್ಞಾಂ ಕರ್ಮಾಣಿ ಸುಕೃತಾನಿ ವಿಶಾಮ್ಪತೇ ।**
**ಇಮಂ ಲೋಕಮಮುಂ ಚೈವ ಸಾಧಯನ್ತೀತಿ ನಃ ಶ್ರುತಮ್ ॥೧೨॥**

ಯಜ್ಞಮಾಡುವುದು ; ವಿದ್ಯಾಭ್ಯಾಸ ; ಶತ್ರುಗಳ ಮೇಲೆ ಆಕ್ರಮಣ ; ಎಷ್ಟೇ ಐಶ್ವರ್ಯವು ಬಂದರೂ ತೃಪ್ತಿಹೊಂದದೇ ಇರುವುದು ; ದುಷ್ಟರ ವಿಷಯದಲ್ಲಿ ದಂಡವನ್ನು ಪ್ರಯೋಗಿಸುವುದು ; ಉಗ್ರತೆಯಿಂದಿರುವುದು ; ಪ್ರಜೆಗಳ ಪರಿಪಾಲನೆ ; ಎಲ್ಲ ವೇದಗಳ ಅರ್ಥವನ್ನೂ ಸಂಪೂರ್ಣವಾಗಿ ತಿಳಿಯುವುದು ; ತಪಸ್ಸನ್ನು ಮಾಡುವುದು; ಸದಾಚಾರನಾಗಿರುವುದು ; ಅಪಾರವಾದ ಐಶ್ವರ್ಯವನ್ನು ಗಳಿಸುವುದು ; ಸತ್ಪಾತ್ರರಲ್ಲಿ ದಾನಮಾಡು ವುದು–ಇವುಗಳು ರಾಜರು ಮಾಡಬೇಕಾದ ಪುಣ್ಯಕರ್ಮಗಳು. ಈ ಕರ್ಮ ಗಳನ್ನು ಮಾಡುವ ರಾಜರು ಇಹ-ಪರಗಳೆರಡನ್ನೂ ಸಾಧಿಸುತ್ತಾರೆಂದು ನಾವು ಕೇಳಿದ್ದೇವೆ. ಇಂತಹ ರಾಜರಿಗೆ ಇಹದಲ್ಲಿಯೂ ಸುಖವಿದೆ. ಅವಸಾನಾನಂತರದಲ್ಲಿ ಪುಣ್ಯಲೋಕಗಳೂ ಪ್ರಾಪ್ತವಾಗುತ್ತವೆ.

**ಏಷಾಂ ಜ್ಯಾಯಸ್ತು ಕೌನ್ತೇಯ ದಣ್ಡಧಾರಣಮುಚ್ಯತೇ ।**
**ಬಲಂ ಹಿ ಕ್ಷತ್ರಿಯೇ ನಿತ್ಯಂ ಬಲೇ ದಣ್ಡಃ ಸಮಾಹಿತಃ ॥೧೩॥**

ಕ್ಷತ್ರಿಯಧರ್ಮಗಳಲ್ಲಿ ದಂಡಧಾರಣವೇ ಅತ್ಯಂತಶ್ರೇಷ್ಠವಾದ ಧರ್ಮ ವೆಂದು ಹೇಳಲ್ಪಟ್ಟಿದೆ. ಕ್ಷತ್ರಿಯನಲ್ಲಿ ಬಲವು ನಿತ್ಯವಾದುದು. ಕ್ಷತ್ರಿಯನ ಬಲದಲ್ಲಿ ದಂಡವು ಪ್ರತಿಷ್ಠಿತವಾಗಿದೆ. ( ಬಲವಿಲ್ಲದಿದ್ದರೆ ದಂಡನೀತಿಯೂ ಇಲ್ಲ. ಬಲವಿಲ್ಲದವನು ಕ್ಷತ್ರಿಯನೂ ಆಗುವುದಿಲ್ಲ. ದಂಡಧಾರಣೆಯು ಬಲಿಷ್ಠನಾದ ಕ್ಷತ್ರಿಯನಿಗೆ ಮಾತ್ರವೇ ಸಾಧ್ಯವಾಗುತ್ತದೆ. )

ಈ ವಿದ್ಯೆಗಳು ( ಈ ಧಾರ್ಮಿಕ ಕ್ರಿಯೆಗಳು ) ಕ್ಷತ್ರಿಯರಾದವರಿಗೆ ಸಿದ್ಧಿಯನ್ನುಂಟುಮಾಡುತ್ತವೆ. ಈ ಧಾರ್ಮಿಕಕ್ರಿಯೆಗಳ ಆಚರಣೆಯಿಂದ ಕ್ಷತ್ರಿಯರು ಸಿದ್ಧಿಯನ್ನು ಪಡೆದುಕೊಳ್ಳುತ್ತಾರೆ. ಈ ವಿಷಯದಲ್ಲಿ ಬೃಹ ಸ್ಪತಿಯೂ ಈ ಶ್ಲೋಕವನ್ನು ಹಾಡಿದ್ದಾನೆ :

**ಭೂಮಿರೇತೌ ನಿಗಿರತಿ ಸರ್ಪೋ ಬಿಲಶಯಾನಿವ ।**
**ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥೧೪॥**

“ಸರ್ಪವು ಬಿಲದಲ್ಲಿರುವ ಇಲಿಗಳನ್ನು ನುಂಗುವಂತೆ–ಭೂಮಿಯು

ಶತ್ರುವನ್ನು ತಡೆದು ನಿಲ್ಲಿಸದಿರುವ ರಾಜನನ್ನೂ, ದೇಶಪರ್ಯಟನೆ ಮಾಡದಿರುವ ಬ್ರಾಹ್ಮಣನನ್ನೂ ನುಂಗಿಹಾಕುತ್ತದೆ."

ರಾಜರ್ಷಿಯಾದ ಸುದ್ಯುಮ್ನನೂ ದಂಡನೀತಿಯನ್ನು ಅನುಸರಿಸಿ ದುಷ್ಟ ಶಿಕ್ಷಣ-ಶಿಷ್ಟಪರಿಪಾಲನೆಯನ್ನು ಮಾಡುತ್ತಿದ್ದುದರಿಂದ ಪ್ರಚೇತಸನ ಮಗನಾದ ದಕ್ಷನಂತೆ ಶ್ರೇಷ್ಠವಾದ ಸಿದ್ಧಿಯನ್ನು ಪಡೆದನೆಂದು ನಾವು ಕೇಳಿದ್ದೇವೆ."

ವೈಶಂಪಾಯನರು ಹೇಳುತ್ತಾರೆ :



ಜನಮೇಜಯ! ವ್ಯಾಸರು ಹೇಳಿದ ಮಾತನ್ನು ಕೇಳಿ ಯುಧಿಷ್ಠಿರನು ಸುದ್ಯುಮ್ನನ ಸುಚರಿತೆಯನ್ನು ಕೇಳುವ ಅಭಿಲಾಷೆಯಿಂದ ವ್ಯಾಸರನ್ನು ಪ್ರಶ್ನಿಸುತ್ತಾನೆ :

"ಭಗವನ್! ಪೃಥಿವೀಪಾಲನಾದ ಸುದ್ಯುಮ್ನನು ಯಾವ ಕರ್ಮವನ್ನು ಮಾಡಿ ಶ್ರೇಷ್ಠವಾದ ಸಿದ್ಧಿಯನ್ನು ಪಡೆದನು? ನಾನು ಆ ಸುದ್ಯುಮ್ನನ ಸಂಬಂಧವಾದ ಚರಿತ್ರೆಯನ್ನು ಕೇಳುವ ಇಚ್ಛೆಯಿಂದಿರುತ್ತೇನೆ."

"ಯುಧಿಷ್ಠಿರ! ಈ ವಿಷಯದಲ್ಲಿ ಜನರು ಪ್ರಾಚೀನವಾದ ಈ ಇತಿಹಾಸವನ್ನು ಉದಾಹರಿಸುತ್ತಾರೆ :

ಕಠೋರವ್ರತನಿಷ್ಠರಾದ ಶಂಖ ಮತ್ತು ಲಿಖಿತರೆಂಬ ಇಬ್ಬರು ಸಹೋದರರಿದ್ದರು. ಬಾಹುದಾನದಿಯ ದಡದಲ್ಲಿ ಅವರಿಬ್ಬರಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಅತ್ಯಂತಸುಂದರವಾದ ಎರಡು ಆಶ್ರಮಗಳಿದ್ದುವು. ಆ ಆಶ್ರಮಗಳು ಸದಾಕಾಲದಲ್ಲಿಯೂ ಫಲ-ಪುಷ್ಪಗಳಿಂದ ತುಂಬಿರುತ್ತಿದ್ದ ವೃಕ್ಷಗಳಿಂದ ನಿಬಿಡವಾಗಿದ್ದುವು. ಒಮ್ಮೆ ಲಿಖಿತನು ಶಂಖನ ಆಶ್ರಮಕ್ಕೆ ಬಂದನು. ಆದರೆ ಅದೇ ಸಮಯಕ್ಕೆ ಸರಿಯಾಗಿ ಶಂಖನು ಆಕಸ್ಮಿಕವಾಗಿ ಆಶ್ರಮದಿಂದ ಹೊರಗೆ ಹೋಗಿದ್ದನು. ಅಣ್ಣನಾದ ಶಂಖನ ಆಶ್ರಮಕ್ಕೆ ಬಂದ ಲಿಖಿತನು ಅಣ್ಣನು ಆಶ್ರಮದಲ್ಲಿ ಇಲ್ಲದಿರುವುದನ್ನು ಕಂಡು ಆಶ್ರಮದ ಸುತ್ತಲೂ ಇದ್ದ ವೃಕ್ಷಗಳಲ್ಲಿ ಚೆನ್ನಾಗಿ ಮಾಗಿದ್ದ ಹಣ್ಣುಗಳನ್ನು ಕೆಳಕ್ಕೆ ಕೆಡವಿದನು. ಬಿದ್ದ ಹಣ್ಣುಗಳನ್ನು ಆರಿಸಿಕೊಂಡು ಒಂದೆಡೆಯಲ್ಲಿ ಕುಳಿತು ನಿಶ್ಚಿಂತೆಯಿಂದ ಎಲ್ಲ ಹಣ್ಣುಗಳನ್ನೂ ತಿಂದನು. ಹೀಗೆ ತಿನ್ನುತ್ತಿರುವಾಗಲೇ ಶಂಖನು ಆಶ್ರಮಕ್ಕೆ ಆಗಮಿಸಿದನು. ಯಾವ ವಿಧವಾದ ಸಂಕೋಚವೂ ಇಲ್ಲದೇ ಹಣ್ಣುಗಳನ್ನು ಭಕ್ಷಿಸುತ್ತಿದ್ದ ಲಿಖಿತನನ್ನು ನೋಡಿ ಶಂಖನು ಪ್ರಶ್ನಿಸಿದನು :

**ಕುತಃ ಫಲಾನ್ಯವಾಪ್ತಾನಿ ಹೇತುನಾ ಕೇನ ಖಾದಸಿ ॥೨೩॥**

"ನಿನಗೆ ಈ ಹಣ್ಣುಗಳು ಎಲ್ಲಿ ಸಿಕ್ಕಿದುವು? ಯಾವ ಕಾರಣದಿಂದ ನೀನು ಈ ಹಣ್ಣುಗಳನ್ನು ಭಕ್ಷಿಸುತ್ತಿರುವೆ?"

ಅಣ್ಣನು ಪ್ರಶ್ನಿಸುತ್ತಿದ್ದಂತೆಯೇ ಲಿಖಿತನು ಮೇಲೆದ್ದು ಅಣ್ಣನ ಬಳಿಗೆ ಹೋಗಿ ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ನಗುನಗುತ್ತಲೇ ಅಣ್ಣನು ಕೇಳಿದ ಪ್ರಶ್ನೆಗೆ ಉತ್ತರವನ್ನಿತ್ತನು. "ಇತ ಏವ ಗೃಹೀತಾನಿ ಮಯಾ–ನಾನು ಈ ಹಣ್ಣುಗಳನ್ನು ಇಲ್ಲಿಯೇ ತೆಗೆದುಕೊಂಡೆನು. (ಇಲ್ಲಿ

ರುವ ವೃಕ್ಷಗಳಿಂದಲೇ ಉದುರಿಸಿ ಸಂಗ್ರಹಿಸಿದೆನು.)" ಆ ಮಾತನ್ನು ಕೇಳು ತ್ತಲೇ ಶಂಖನು ಅತ್ಯಂತಕುಪಿತನಾಗಿ ಹೇಳಿದನು :

**ಸ್ತೇಯಂ ತ್ವಯಾ ಕೃತಮಿದಂ ಫಲಾನ್ಯಾದದತಾ ಸ್ವಯಮ್ ॥೨೫॥**

"ಯಾರನ್ನೂ ಕೇಳದೇ–ಯಾರಿಗೂ ಹೇಳದೇ ಈ ಹಣ್ಣುಗಳನ್ನು ತೆಗೆದುಕೊಂಡುದರಿಂದ ನೀನು ಕಳ್ಳತನಮಾಡಿದಂತೆಯೇ ಆಯಿತು.



ಆದುದರಿಂದ ನೀನು ಈ ಕೂಡಲೇ ರಾಜನ ಬಳಿಗೆ ಹೋಗು. ನೀನು ಮಾಡಿದ ಚೌರ್ಯಕರ್ಮವನ್ನು ಅವನೊಡನೆ ಹೀಗೆ ಹೇಳು :

**ಅದತ್ತಾದಾನಮೇವಂ ಹಿ ಕೃತಂ ಪಾರ್ಥಿವಸತ್ತಮ ॥೨೬॥**

**ಸ್ತೇನಂ ಮಾಂ ತ್ವಂ ವಿದಿತ್ವಾ ಚ ಸ್ವಧರ್ಮಮನುಪಾಲಯ ।**
**ಶೀಘ್ರಂ ಧಾರಯ ಚೌರಸ್ಯ ಮಮ ದಣ್ಡಂ ನರಾಧಿಪ ॥೨೭॥**

'ರಾಜಶ್ರೇಷ್ಠನೇ! ಯಾರಿಂದಲೂ ಕೊಡಲ್ಪಡದೇ ಇದ್ದ ಫಲವನ್ನು, ಯಾರನ್ನೂ ಕೇಳದೇ ಯಾರಿಗೂ ಹೇಳದೇ ನಾನಾಗಿಯೇ ತೆಗೆದುಕೊಂಡುಬಿಟ್ಟೆನು. ಆದುದರಿಂದ ನನ್ನನ್ನು ನೀನು ಕಳ್ಳನೆಂದು ಭಾವಿಸು. ರಾಜಧರ್ಮವನ್ನು ಪರಿಪಾಲಿಸು. ಕಳ್ಳನಾದವನಿಗೆ ಯಾವ ಶಿಕ್ಷೆಯಿರುವುದೋ ಆ ಶಿಕ್ಷೆಯನ್ನೇ ನನಗೂ ವಿಧಿಸು.'"

ಯುಧಿಷ್ಠಿರ! ಅಣ್ಣನು ಹೀಗೆ ಹೇಳಿದೊಡನೆಯೇ ಕಠೋರವ್ರತನಿಷ್ಠನಾದ ಲಿಖಿತನು ಅಣ್ಣನ ಮಾತಿನಂತೆ ನರಪತಿಯಾದ ಸುದ್ಯುಮ್ನನ ಬಳಿಗೆ ಹೋದನು.

ಲಿಖಿತನು ತನ್ನ ಅರಮನೆಗೆ ಬರುತ್ತಿರುವನೆಂಬುದನ್ನು ದ್ವಾರಪಾಲಕರಿಂದ ತಿಳಿದೊಡನೆಯೇ, ಜನೇಶ್ವರನಾದ ಸುದ್ಯುಮ್ನನು ಅಮಾತ್ಯಸಮೇತನಾಗಿ ಕಾಲ್ನಡಿಗೆಯಲ್ಲಿಯೇ ಲಿಖಿತನನ್ನು ಆದರಪೂರ್ವಕವಾಗಿ ಸ್ವಾಗತಿಸಲು ಹೋದನು. ಧರ್ಮಾತ್ಮನಾದ ಲಿಖಿತಮುನಿಯನ್ನು ಸಂಧಿಸಿ ವಿನಯಪೂರ್ವಕವಾಗಿ ಹೇಳಿದನು :

**ಕಿಮಾಗಮನಮಾಚಕ್ಷ್ವ ಭಗವನ್ಕೃತಮೇವ ತತ್ ।**

"ಭಗವತ್ಸ್ವರೂಪರೇ! ತಮ್ಮ ಆಗಮನದ ಕಾರಣವೇನೆಂಬುದನ್ನು ಹೇಳಿರಿ ಮತ್ತು ತಾವು ನನ್ನ ಬಳಿಗೆ ಬಂದ ಕಾರ್ಯವು ಪೂರ್ಣವಾಯಿತೆಂದೇ ಭಾವಿಸಿರಿ."

ಯುಧಿಷ್ಠಿರ! ರಾಜನು ಹೀಗೆ ಹೇಳಿದೊಡನೆಯೇ ವಿಪ್ರರ್ಷಿಯಾದ ಲಿಖಿತನು ಸುದ್ಯುಮ್ನನೊಡನೆ ಹೇಳಿದನು :

"ಮಹಾರಾಜ! ನೀನು ' **ಕೃತಮೇವ ತತ್** ' ಎಂಬುದಾಗಿ ಹೇಳಿ ನನ್ನ ಆಶಯವನ್ನು ಪೂರೈಸಿಕೊಡುವುದಾಗಿ ಪ್ರತಿಜ್ಞೆಯನ್ನೇ ಮಾಡಿರುವೆ. ಈಗ ನೀನು ನನ್ನ ಆಶಯವೇನೆಂಬುದನ್ನು ಕೇಳಿ ನನ್ನ ಮನೋರಥವನ್ನು ಈಡೇರಿಸಿಕೊಡುವುದು ನಿನ್ನ ಕರ್ತವ್ಯವಾಗಿವೆ.

ಮನುಜರ್ಷಭನೇ! ನನ್ನ ಹಿರಿಯ ಸಹೋದರನಾದ ಶಂಖನು

ಕೊಡದೆಯೇ ಅಥವಾ ಅವನನ್ನು ನಾನು ಕೇಳದೆಯೇ ಅವನ ತೋಟದಲ್ಲಿದ್ದ ಹಣ್ಣುಗಳನ್ನು ಮರದಿಂದ ಉದುರಿಸಿಕೊಂಡು ತಿಂದುಬಿಟ್ಟೆನು. ಈ ಅಪರಾಧಕ್ಕಾಗಿ ನನ್ನನ್ನು ಕೊಡಲೇ ಶಿಕ್ಷಿಸು."

**ಪ್ರಮಾಣಂ ಚೇನ್ಮತೋ ರಾಜಾ ಭವತೋ ದಣ್ಡಧಾರಣೇ ।**
**ಅನುಜ್ಞಾಯಾಮಪಿ ತಥಾ ಹೇತುಃ ಸ್ಯಾದ್ಬ್ರಾಹ್ಮಣರ್ಷಭಃ ॥೩೩॥**

"ಬ್ರಾಹ್ಮಣಶ್ರೇಷ್ಠರೇ! ನಿಮ್ಮನ್ನು ಶಿಕ್ಷಿಸಲು ರಾಜನೇ ಪ್ರಮಾಣಭೂತನು (ಅರ್ಹನಾದವನು) ಎಂಬುದು ನಿಮ್ಮ ಅಭಿಪ್ರಾಯವಾದರೆ ನಿಮ್ಮನ್ನು ಕ್ಷಮಿಸಿ ಹಿಂದಿರುಗುವಂತೆ ಅನುಜ್ಞೆಯನ್ನು ನೀಡಲೂ ರಾಜನೇ ಪ್ರಮಾಣಭೂತನಾಗಿರುತ್ತಾನೆ. (ರಾಜನಾದವನಿಗೆ ಶಿಕ್ಷಿಸಲೂ ಅಧಿಕಾರವಿದೆ; ಕ್ಷಮೆಯನ್ನು ನೀಡಿ ಬಿಟ್ಟುಬಿಡಲೂ ಅಧಿಕಾರವಿದೆ.)

**ಸ ಭವಾನಭ್ಯನುಜ್ಞಾತಃ ಶುಚಿಕರ್ಮಾ ಮಹಾವ್ರತಃ ।**
**ಬ್ರೂಹಿ ಕಾಮಾನತೋಽನ್ಯಾಂಸ್ತ್ವಂ ಕರಿಷ್ಯಾಮಿ ಹಿ ತೇ ವಚಃ ॥೩೪॥**

ಭಗವನ್! ನೀವು ಪವಿತ್ರವಾದ ಕರ್ಮಗಳನ್ನು (ಸತ್ಕರ್ಮಗಳನ್ನು) ಮಾಡುವವರು. ಮಹಾವ್ರತರಾಗಿದ್ದೀರಿ. ಆದುದರಿಂದ ನೀವು ಮಾಡಿರುವ ಅಪರಾಧವನ್ನು ಕ್ಷಮಿಸಿ ನೀವಿಲ್ಲಿಂದ ಹಿಂದಿರುಗುವಂತೆ ಅನುಜ್ಞೆಯನ್ನು ನೀಡಿದ್ದೇನೆ. ನಿಮಗೆ ಮತ್ತೇನಾದರೂ ಅಭಿಲಾಷೆಯಿರುವುದಾದರೆ ಅದನ್ನೂ ತಿಳಿಸಿರಿ. ನಿಮ್ಮ ಮಾತಿನಂತೆ ಆ ನಿಮ್ಮ ಕಾಮನೆಗಳನ್ನೂ ಪೂರೈಸಿಕೊಡುತ್ತೇನೆ."

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ :

"ಯುಧಿಷ್ಠಿರ! ಲಿಖಿತನು ರಾಜನ ಮಾತಿಗೆ ಒಪ್ಪಲಿಲ್ಲ. ಅವನಿಗೆ ತಾನು ಮಾಡಿದ ತಪ್ಪಿಗೆ ತಕ್ಕ ಶಿಕ್ಷೆಯಾಗಬೇಕಾಗಿದ್ದಿತೇ ಹೊರತು ರಾಜನ ಕ್ಷಮೆಯು ಬೇಕಾಗಿರಲಿಲ್ಲ. ವೇದ-ವೇದಾಂಗಪಾರಂಗತನಾದ ಬ್ರಾಹ್ಮಣನನ್ನು ಹೇಗೆ ಶಿಕ್ಷಿಸಬೇಕೆಂಬುದು ರಾಜನ ಆತಂಕ. ಮಹಾತ್ಮನಾದ ಸುದ್ಯುಮ್ನನು ನಾನಾಪ್ರಕಾರವಾಗಿ ಬ್ರಾಹ್ಮಣನಿಗೆ ಸಮಾಧಾನವನ್ನು ಹೇಳಿದನು. ಆದರೆ ಬ್ರಾಹ್ಮಣನು ಕೇಳಲೇ ಇಲ್ಲ. ಶಿಕ್ಷೆಯ ಹೊರತಾಗಿ ತನಗೆ ಮತ್ತೇನೂ ಬೇಡವೆಂದು ಲಿಖಿತನು ಹಠಹಿಡಿದನು.

ರಾಜನು ವಿಧಿಯಿಲ್ಲದೇ ಕಳ್ಳತನದ ತಪ್ಪಿಗಾಗಿ ಮಹಾತ್ಮನಾದ ಲಿಖಿತನ ಎರಡು ಕೈಗಳನ್ನು ಕತ್ತರಿಸುವಂತೆ ರಾಜಭಟರಿಗೆ ಆಜ್ಞೆಮಾಡಿದನು. ಯಥಾಶಾಸ್ತ್ರವಾಗಿ ಲಿಖಿತನು ರಾಜನಿಂದ ಶಿಕ್ಷೆಯನ್ನು ಪಡೆದುಕೊಂಡನಂತರ ರಾಜಧಾನಿಯಿಂದ ಹೊರಟುಹೋದನು. ಸುದ್ಯುಮ್ನನಿಂದ ಶಿಕ್ಷಿತನಾಗಿ ಹೊರಟ ಲಿಖಿತನು ಅಣ್ಣನಾದ ಶಂಖನ ಸಮೀಪಕ್ಕೆ ಹೋಗಿ ಅತ್ಯಂತ ದುಃಖಿತನಾಗಿ ಹೇಳಿದನು : "ಅಣ್ಣ! ನಿನ್ನ ಮಾತಿನಂತೆ ನಾನು ರಾಜನಿಂದ ಶಿಕ್ಷೆಯನ್ನು ಪಡೆದುಕೊಂಡು ಬಂದಿರುತ್ತೇನೆ. (ಆದರೂ ನನ್ನ ಮನಸ್ಸಿಗೆ ಸಮಾಧಾನವಾಗಿಲ್ಲ). ದುರ್ಬುದ್ಧಿಯಾದ ನಾನು ಮಾಡಿದ ಅಪರಾಧವನ್ನು ನೀನು ಕ್ಷಮಿಸುವುದು ಯುಕ್ತವಾಗಿದೆ."

ಅದಕ್ಕೆ ಉತ್ತರವಾಗಿ ಶಂಖನು ಹೇಳಿದನು :

**ನ ಕುಪ್ಯೇ ತವ ಧರ್ಮಜ್ಞ ನ ತ್ವಂ ದೂಷಯಸೇ ಮಮ ।**
**ಸುನಿರ್ಮಲಂ ಕುಲಂ ಬ್ರಹ್ಮನ್ನಸ್ಮಿಞ್ಜಗತಿ ವಿಶ್ರುತಮ್ ।**
**ಧರ್ಮಸ್ತು ತೇ ವ್ಯತಿಕ್ರಾನ್ತಸ್ತತಸ್ತೇ ನಿಷ್ಕೃತಿಃ ಕೃತಾ ॥೩೮॥**

"ಧರ್ಮಜ್ಞನೇ! ನಾನು ನಿನ್ನ ವಿಷಯದಲ್ಲಿ ಕೋಪಗೊಂಡಿಲ್ಲ. ನಿನ್ನನ್ನು ನಿಂದಿಸುವುದಿಲ್ಲ. ನೀನು ನನಗೆ ಯಾವ ಅಪರಾಧವನ್ನೂ ಮಾಡಿಲ್ಲ. ನಮ್ಮ ವಂಶವು ಈ ಜಗತ್ತಿನಲ್ಲಿಯೇ ಅತ್ಯಂತನಿರ್ಮಲವಾದುದೆಂದೂ–ಕಳಂಕರಹಿತವಾದುದೆಂದೂ ವಿಖ್ಯಾತವಾಗಿದೆ. ಇಂತಹ ಪವಿತ್ರಕುಲದಲ್ಲಿ ಹುಟ್ಟಿದ ನೀನು ಧರ್ಮವನ್ನು ಅತಿಕ್ರಮಿಸಿದೆ. ಆದುದರಿಂದ ನಿನಗೆ ಈ ವಿಧವಾದ ಪ್ರಾಯಶ್ಚಿತ್ತವಾಯಿತು.

ನೀನೀಗಲೇ ಬಾಹುದಾನದಿಯ ತೀರಕ್ಕೆ ಹೋಗು. ಅಲ್ಲಿ ಯಥಾವಿಧಿಯಾಗಿ ದೇವರ್ಷಿಗಳನ್ನೂ, ಪಿತೃಗಳನ್ನೂ ಆರಾಧಿಸು. ಮುಂದೆಂದೂ ಅಧರ್ಮದ ಕಡೆಗೆ ಮನಗೊಡಬೇಡ."

ಯುಧಿಷ್ಠಿರ! ಲಿಖಿತನು ಅಣ್ಣನಾದ ಶಂಖನು ಹೇಳಿದ ಮಾತನ್ನು ಕೇಳಿ ಪವಿತ್ರವಾದ ಬಾಹುದಾನದಿಯಲ್ಲಿ ಮಿಂದು ದೇವರ್ಷಿ-ಪಿತೃಗಳಿಗೆ ತರ್ಪಣಕೊಡಲು ಮೊಂಡು ಕೈಗಳನ್ನೇ ಅಳ್ಳಾಡಿಸಿದನು. ಅಷ್ಟರಲ್ಲಿಯೇ ಅವನಿಗೆ ಕಮಲಸದೃಶವಾದ ಕೈಗಳು ಪ್ರಾದುರ್ಭವಿಸಿದುವು. ಕೈಗಳಿಂದಲೇ

ತರ್ಪಣಮಾಡಲು ಲಿಖಿತನಿಗೆ ಸಾಧ್ಯವಾಯಿತು. ದೇವರ್ಷಿ-ಪಿತೃಗಳನ್ನು ಯಥಾವಿಧಿಯಾಗಿ ಅರ್ಚಿಸಿದನಂತರ ರಾಜದೂತರಿಂದ ಕತ್ತರಿಸಿಹಾಕಲ್ಪಟ್ಟಿದ್ದ ಕೈಗಳು ಪುನಃ ಹುಟ್ಟಿಕೊಂಡುದಕ್ಕಾಗಿ ಅತ್ಯಂತವಿಸ್ಮಿತನಾಗಿದ್ದ ಲಿಖಿತನು ತನ್ನೆರಡು ಕೈಗಳನ್ನೂ ಅಣ್ಣನಿಗೆ ತೋರಿಸಿದನು. ಲಿಖಿತನ ಕೈಗಳನ್ನು ನೋಡಿದ ಶಂಖನು ಸ್ವಲ್ಪವಾದರೂ ಅಚ್ಚರಿಯನ್ನು ವ್ಯಕ್ತಪಡಿಸದೇ ತಮ್ಮನೊಡನೆ ಹೇಳಿದನು : "ತಮ್ಮ! ತಪಸ್ಸಿನ ಶಕ್ತಿಯಿಂದ ನಾನು ಹೀಗಾಗುವಂತೆ ಮಾಡಿದೆನು. ಈ ವಿಷಯದಲ್ಲಿ ನೀನು ಸಂದೇಹಪಡುವ ಕಾರಣವಿಲ್ಲ. ದೈವವೇ ಎಲ್ಲವನ್ನೂ ಮಾಡಿಸುತ್ತದೆ."

"ಅಣ್ಣ! ಮಹಾದ್ಯುತಿಮಂತನೇ! ದ್ವಿಜಶ್ರೇಷ್ಠನೇ! ನಿನ್ನ ತಪಸ್ಸಿನ ಪ್ರಭಾವವು ಇಷ್ಟೊಂದು ಮಹತ್ತ್ವದ್ದಾಗಿರುವಾಗ ರಾಜನ ಬಳಿಗೆ ಕಳುಹಿಸದೇ ನೀನೇ ನನ್ನನ್ನು ನಿನ್ನ ತಪಃಪ್ರಭಾವದಿಂದ ಪವಿತ್ರಗೊಳಿಸಬಹುದಾಗಿತ್ತಲ್ಲವೇ? ಮೊದಲೇ ನೀನು ನನ್ನನ್ನು ಏಕೆ ಪೂತನನ್ನಾಗಿ ಮಾಡಲಿಲ್ಲ? ರಾಜನ ಬಳಿಗೇಕೆ ಕಳುಹಿಸಿದೇ?"

"ಲಿಖಿತ! ಹೀಗೆ ಮಾಡುವುದೇ ನನ್ನ ಕರ್ತವ್ಯವಾಗಿದ್ದಿತು. ನಾನು ನಿನಗೆ ಶಿಕ್ಷೆಯನ್ನು ವಿಧಿಸುವವನಲ್ಲ. ನಿನ್ನನ್ನು ದಂಡಿಸಲು ನನಗೆ ಅಧಿಕಾರವಿಲ್ಲ. ನನ್ನಿಂದ ನೀನು ಶಿಕ್ಷಿಸಲ್ಪಡತಕ್ಕವನೂ ಅಲ್ಲ. ಅಪರಾಧಿಗಳನ್ನು ದಂಡಿಸುವುದು ರಾಜರ ಕರ್ತವ್ಯ. ನ್ಯಾಯವಾದ ರೀತಿಯಲ್ಲಿ ರಾಜರು ಅಪರಾಧಿಗಳನ್ನು ದಂಡಿಸಿದರೆ ಅವರೂ ಪೂತರಾಗುತ್ತಾರೆ. ನಿನಗೆ ಯಥೋಚಿತವಾದ ಶಿಕ್ಷೆಯನ್ನು ವಿಧಿಸಿದುದರಿಂದ ನರಪತಿಯಾದ ಸುದ್ಯುಮ್ನನೂ ಪೂತನಾದನು. ಪಿತೃಗಳೊಡನೆ ನೀನೂ ಸಹ ಪರಿಶುದ್ಧನಾದೆ."

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ :

"ಪಾಂಡವಶ್ರೇಷ್ಠನೇ! ಅಪರಾಧಿಗೆ ಯಥೋಚಿತವಾದ ಶಿಕ್ಷೆಯನ್ನು ವಿಧಿಸಿದ ಕಾರಣ ಸುದ್ಯುಮ್ನನು ಶ್ರೇಯಸ್ಸನ್ನು ಹೊಂದಿದನು. ಪ್ರಚೇತಸನ ಮಗನಾದ ದಕ್ಷನಂತೆ–ಶ್ರೇಷ್ಠವಾದ ಸಿದ್ಧಿಯನ್ನೂ ಪಡೆದನು.

ಮಹಾರಾಜ! ಪ್ರಜೆಗಳ ಪರಿಪಾಲನೆಯೇ ಕ್ಷತ್ರಿಯರಿಗೆ ಮುಖ್ಯವಾದ ಧರ್ಮವಾಗಿರುತ್ತದೆ. ಕ್ಷತ್ರಿಯನಾದವನಿಗೆ ಪ್ರಜಾಪಾಲನಧರ್ಮವನ್ನು ಬಿಟ್ಟು

ಉಳಿದೆಲ್ಲ ಧರ್ಮಗಳೂ ಕುತ್ಸಿತವಾದುವುಗಳು. ಆದುದರಿಂದ ನಿನ್ನ ಮನಸ್ಸನ್ನು ಶೋಕದಲ್ಲಿ ಮುಳುಗಿಸಬೇಡ ( ಶೋಕಿಸಬೇಡ ).

ಧರ್ಮಜ್ಞನೇ! ಸತ್ಪುರುಷರಲ್ಲಿ ಶ್ರೇಷ್ಠನಾದವನೇ! ನಿನ್ನ ಈ ತಮ್ಮನ (ಅರ್ಜುನನ ) ಹಿತವಚನಗಳನ್ನು ಕೇಳು. ಅದರಂತೆಯೇ ಆಚರಿಸು.

**ದಣ್ಡ ಏವ ಹಿ ರಾಜೇನ್ದ್ರ ಕ್ಷತ್ರಧರ್ಮೋ ನ ಮುಣ್ಡನಮ್ ॥೪೭॥**

ದಂಡಧಾರಣವೇ ಕ್ಷತ್ರಧರ್ಮ. ಮುಂಡನಮಾಡಿಕೊಂಡು ಸಂನ್ಯಾಸಿಯಾಗುವುದು ಖಂಡಿತವಾಗಿಯೂ ಕ್ಷತ್ರಧರ್ಮವಲ್ಲ."

೨೩ನೆಯ ಅಧ್ಯಾಯವು ಮುಗಿಯಿತು.

೨೪ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ವ್ಯಾಸರು ಯುಧಿಷ್ಠಿರನಿಗೆ ಹಯಗ್ರೀವಚರಿತ್ರೆಯನ್ನು ಹೇಳಿ ರಾಜೋಚಿತವಾದ ಕರ್ತವ್ಯವನ್ನು ಮಾಡಲು ಸಲಹೆ ನೀಡಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಮಹರ್ಷಿಗಳಾದ ಕೃಷ್ಣದ್ವೈಪಾಯನಮುನಿಗಳು ಪುನಃ ಕುಂತಿಯ ಮಗನಾದ ಅಜಾತಶತ್ರುವನ್ನು ಕುರಿತು ಹೇಳಿದರು :

"ಯುಧಿಷ್ಠಿರಮಹಾರಾಜ! ನೀವೆಲ್ಲರೂ ಅರಣ್ಯದಲ್ಲಿದ್ದಾಗ ಮನನಶೀಲರಾದ ಮಹಾರಥರಾದ ನಿನ್ನ ಸಹೋದರರ ಮನಸ್ಸಿನಲ್ಲಿ ಉತ್ಪನ್ನವಾಗಿದ್ದ ಮನೋರಥವನ್ನು ಈಗವರು ಪಡೆದುಕೊಳ್ಳಲಿ. ನಹುಷನ ಮಗನಾದ ಯಯಾತಿಯಂತೆ ಈ ಭೂಮಂಡಲವನ್ನು ನೀನು ಅನುಶಾಸನಮಾಡು. ದಯನೀಯರಾದ ನಿನ್ನ ಸಹೋದರರು ಹನ್ನೆರಡು ವರ್ಷಗಳ ಕಾಲ ಅರಣ್ಯದಲ್ಲಿಯೇ ಇದ್ದು ಅನೇಕವಿಧವಾದ ಕಷ್ಟಗಳನ್ನು ಅನುಭವಿಸಿರುತ್ತಾರೆ. ನರವ್ಯಾಘ್ರನೇ! ಆ ದುಃಖಗಳೆಲ್ಲವನ್ನೂ ಅನುಭವಿಸಿದ ನಂತರ ಈಗಲಾದರೂ ಅವರು ರಾಜೋಚಿತವಾದ ಸುಖಗಳನ್ನು ಅನುಭವಿಸಲಿ. ನೀನಾದರೂ ಸಹೋದರರೊಡನೆ ಧರ್ಮಾರ್ಥ-ಕಾಮಗಳನ್ನು ಅನುಭವಿಸಿದ ನಂತರ ಅರಣ್ಯಕ್ಕೆ ಹೋಗಬಹುದಾಗಿದೆ. ಭರತನಂದನ! ಕೌಂತೇಯ!

ನೀನು ಮೊದಲು ಯಾಚಕರ, ಪಿತೃಗಳ ಮತ್ತು ದೇವತೆಗಳ ಋಣಗಳಿಂದ ಮುಕ್ತನಾಗು. ಬಳಿಕ ನಿನಗಿಚ್ಛೆಬಂದಂತೆ ಎಲ್ಲ ಕಾರ್ಯಗಳನ್ನೂ ಮಾಡ ಬಹುದಾಗಿದೆ. ಸರ್ವಮೇಧಾಶ್ವಮೇಧಯಾಗಗಳಿಂದ ದೇವತೆಗಳನ್ನು ತೃಪ್ತಿಗೊಳಿಸು. ಆ ಎರಡು ಮಹಾಕಾರ್ಯಗಳನ್ನು ಮಾಡಿದ ನಂತರ ತತ್ಫಲವಾಗಿಯೇ ನೀನು ಸದ್ಗತಿಯನ್ನು ಹೊಂದುವೆ. ಬಹುದಕ್ಷಿಣಾಕವಾದ ಯಜ್ಞಗಳಿಂದ ನಿನ್ನೆಲ್ಲ ಸಹೋದರರನ್ನೂ ಸಂಯೋಜಿಸು. ಆ ಯಜ್ಞಗಳಲ್ಲಿ ಅವರೂ ಸಮಭಾಗಿಗಳಾಗುವಂತೆ ಮಾಡು. ಇದರಿಂದ ನೀನು ಅಪಾರವಾದ ಕೀರ್ತಿಯನ್ನು ಪಡೆಯುವೆ. ಪುರುಷವ್ಯಾಘ್ರನೇ! ನೀನು ಹೇಳಿದ ಮಾತುಗಳನ್ನು ನಾವು ಚೆನ್ನಾಗಿ ಅರ್ಥಮಾಡಿಕೊಂಡಿರುತ್ತೇವೆ. ಆದರೆ ಈಗ ನಾನು ಹೇಳಿದಂತೆ ಮಾಡುವುದರಿಂದ ನೀನು ಧರ್ಮದಿಂದ ಭ್ರಷ್ಟನಾಗುವುದಿಲ್ಲ. ಸಮಾನಧರ್ಮಕುಶಲರಾದವರು ವಿಜಯೇಚ್ಛುವಾದ ರಾಜನ ಸಲುವಾಗಿ ಯುದ್ಧವನ್ನು ಸ್ಥಾಪಿಸಿರುತ್ತಾರೆ. ( ಯುದ್ಧಧರ್ಮವನ್ನು ಹೇಳಿರುತ್ತಾರೆ. )

**ದೇಶಕಾಲಪ್ರತೀಕ್ಷೀ ಯೋ ದಸ್ಯೂನ್ಮರ್ಷಯತೇ ನೃಪಃ ।**
**ಶಾಸ್ತ್ರಜಾಂ ಬುದ್ಧಿಮಾಸ್ಥಾಯ ಯುಜ್ಯತೇ ನೈನಸಾ ಹಿ ಸಃ ॥೧೦॥**

ದೇಶ ಮತ್ತು ಕಾಲಗಳನ್ನು ಪ್ರತೀಕ್ಷಿಸುತ್ತಿದ್ದು ಶಾಸ್ತ್ರೀಯಬುದ್ಧಿಯನ್ನು ಆಶ್ರಯಿಸಿ ದಸ್ಯುಗಳು ಮಾಡಿದ ಅಪರಾಧವನ್ನು ಯಾವ ರಾಜನು ಸಹಿಸಿಕೊಳ್ಳುವನೋ–( ದಸ್ಯುಗಳಿಗೆ ಒಡನೆಯೇ ಶಿಕ್ಷೆಕೊಡುವುದಿಲ್ಲವೋ ) ದಸ್ಯುಗಳನ್ನು ಶಿಕ್ಷಿಸಲು ಸಮಯವನ್ನು ಕಾಯುತ್ತಾನೆಯೋ–ಅಂತಹ ರಾಜನೆಂದಿಗೂ ಪಾಪದಿಂದ ಯುಕ್ತನಾಗುವುದಿಲ್ಲ. (ದುಷ್ಟರನ್ನು ಶಿಕ್ಷಿಸಲು ದಂಡನೀತಿಯನ್ನು ಅನುಸರಿಸಬೇಕು. ಆದರೆ ದುಷ್ಟರನ್ನು ಶಿಕ್ಷಿಸುವಾಗಲೂ ದೇಶ-ಕಾಲಗಳ ವಿವೇಚನೆಯನ್ನು ಮಾಡಬೇಕು. ಅವಸರದಿಂದ ಕಾರ್ಯ ಮಾಡಬಾರದು. ದುಷ್ಟನೆಂಬುದನ್ನು ಪ್ರತ್ಯಕ್ಷಾನುಮಾನಪ್ರಮಾಣಗಳಿಂದ ಸಿದ್ಧಪಡಿಸಿ ಶಿಕ್ಷಿಸಬೇಕಾಗುತ್ತದೆ. ಅವಸರದಿಂದ ಕಾರ್ಯಮಾಡಲು ಹೋದರೆ ಸತ್ಪುರುಷರೂ ಶಿಕ್ಷೆಗೆ ಒಳಗಾಗಬಹುದು. ಆದುದರಿಂದ ಒಬ್ಬನು ಅಪರಾಧಿಯೆಂಬುದನ್ನು ಶಾಸ್ತ್ರಾಧ್ಯಯನದಿಂದ ಪರಿಪಕ್ವವಾಗಿರುವ ಬುದ್ಧಿ

ಯಿಂದ ನಿಶ್ಚಯಿಸಿದನಂತರವೇ ಅವನನ್ನು ಯಥಾಶಾಸ್ತ್ರವಾಗಿ ಶಿಕ್ಷಿಸಬೇಕು. ಹೀಗೆ ಮಾಡುವುದರಿಂದ ಪಾಪದ ಸಂಘಟನೆಯಾಗುವುದಿಲ್ಲ. )

**ಆದಾಯ ಬಲಿಷಡ್ಭಾಗಂ ಯೋ ರಾಷ್ಟ್ರಂ ನಾಭಿರಕ್ಷತಿ ।**
**ಪ್ರತಿಗೃಹ್ಣಾತಿ ತತ್ಪಾಪಂ ಚತುರ್ಥಾಂಶೇನ ಭೂಮಿಪಃ ॥೧೨॥**

ಪ್ರಜೆಗಳ ಆದಾಯದಲ್ಲಿ ಆರನೆಯ ಒಂದು ಭಾಗವನ್ನು ಪಡೆದು ಕೊಂಡು ಯಾವ ರಾಜನು ಪ್ರಜೆಗಳನ್ನು ರಕ್ಷಿಸುವುದಿಲ್ಲವೋ–ಅವನು ತನ್ನ ಪ್ರಜೆಗಳು ಮಾಡುವ ಪಾಪದಲ್ಲಿಯೂ ನಾಲ್ಕನೆಯ ಒಂದು ಭಾಗವನ್ನು ಪಡೆದುಕೊಳ್ಳುತ್ತಾನೆ.

ಯುಧಿಷ್ಠಿರ! ಹೇಗಿದ್ದರೆ ಧರ್ಮದಿಂದ ಚ್ಯುತನಾಗುವುದಿಲ್ಲ? ಧರ್ಮಶಾಸ್ತ್ರಗಳ ನಿಯಮವನ್ನು ಉಲ್ಲಂಘಿಸಿ ನಡೆದರೆ ರಾಜನು ಹೇಗೆ ಪತಿತನಾಗುತ್ತಾನೆ? ಧರ್ಮಶಾಸ್ತ್ರಗಳ ನಿಯಮದಂತೆ ನಡೆದುಕೊಂಡರೆ ರಾಜನು ಹೇಗೆ ಭಯರಹಿತನಾಗುತ್ತಾನೆ?–ಈ ಎಲ್ಲ ವಿಷಯಗಳನ್ನೂ ಹೇಳುತ್ತೇನೆ ; ಕೇಳು.

**ಕಾಮಕ್ರೋಧಾವನಾದೃತ್ಯ ಪಿತೇವ ಸಮದರ್ಶನಃ ।**
**ಶಾಸ್ತ್ರಜಾಂ ಬುದ್ಧಿಮಾಸ್ಥಾಯ ಯುಜ್ಯತೇ ನೈನಸಾ ಹಿ ಸಃ ॥೧೪॥**

ಯಾವ ರಾಜನು ಕಾಮ-ಕ್ರೋಧಗಳೆರಡನ್ನೂ ಸಂಪೂರ್ಣವಾಗಿ ತ್ಯಜಿಸಿ, ಶಾಸ್ತ್ರಜನ್ಯವಾದ ಬುದ್ಧಿಯನ್ನು ಆಶ್ರಯಿಸಿ–ತಂದೆಯಾದವನು ತನ್ನೆಲ್ಲ ಮಕ್ಕಳನ್ನೂ ಸಮದೃಷ್ಟಿಯಿಂದ ಕಾಣುವಂತೆ–ತನ್ನ ಪ್ರಜೆಗಳೆಲ್ಲರನ್ನೂ ಸಮದೃಷ್ಟಿಯಿಂದ ಕಾಣುವನೋ–ಅಂತಹ ರಾಜನು ಪಾಪದಿಂದ ಯುಕ್ತನಾಗುವುದಿಲ್ಲ.

**ದೈವೇನಾಭ್ಯಾಹತೋ ರಾಜಾ ಕರ್ಮಕಾಲೇ ಮಹಾದ್ಯುತೇ ।**
**ನ ಸಾಧಯತಿ ಯತ್ಕರ್ಮ ನ ತತ್ರಾಹುರತಿಕ್ರಮಮ್ ॥೧೫॥**

ಮಹಾತೇಜಸ್ವಿಯೇ! ರಾಜನಾದವನು ಪ್ರಜೆಗಳ ಹಿತಕ್ಕಾಗಿ ಕಾರ್ಯ ಮಾಡುತ್ತಿರುವಾಗ ದೈವವಶಾತ್ ತೊಂದರೆಗೀಡಾಗಿ ಪ್ರಾರಂಭಿಸಿದ ಕಾರ್ಯ ವನ್ನು ಮುಗಿಸದಿದ್ದರೆ–ಆಗ ಅದು ರಾಜನ ಅತಿಕ್ರಮವೆಂದಾಗಲೀ ಅಪರಾಧ ವೆಂದಾಗಲೀ ಯಾರೂ ಹೇಳುವುದಿಲ್ಲ. ( ರಾಜನು ಪ್ರಜೆಗಳಿಗೆ ಹಿತವಾಗುವ

ಕಾರ್ಯಗಳನ್ನು ಮಾಡುತ್ತಲೇ ಇರಬೇಕು. ಅದು ಅವನ ಮುಖ್ಯಕರ್ತವ್ಯ ವಾಗಿರುತ್ತದೆ. ಹೀಗೆ ಪ್ರಜಾಹಿತಕ್ಕಾಗಿ ಮಾಡುವ ಅನೇಕ ಕಾರ್ಯಗಳಲ್ಲಿ ಯಾವುದೋ ಕಾರ್ಯವು ದೈವದುರ್ಯೋಗದಿಂದ ಫಲಿತವಾಗದೇ ಹೋಗ ಬಹುದು. ಅದರಿಂದ ರಾಜನು ಅಪರಾಧಿಯಾಗುವುದಿಲ್ಲ. )

**ತರಸಾ ಬುದ್ಧಿಪೂರ್ವಂ ವಾ ನಿಗ್ರಾಹ್ಯಾ ಏವ ಶತ್ರವಃ ।**
**ಪಾಪೈಃ ಸಹ ನ ಸಂದಧ್ಯಾದ್ರಾಜ್ಯಂ ಪಣ್ಯಂ ನ ಕಾರಯೇತ್ ॥೧೬॥**

ಬಲ-ಪರಾಕ್ರಮಗಳಿಂದಾಗಲೀ, ಬುದ್ಧಿಶಕ್ತಿಯಿಂದಾಗಲೀ–ಶತ್ರುಗಳನ್ನು ನಿಗ್ರಹಿಸಲೇಬೇಕು. ಪಾಪಿಷ್ಠನಾದವನೊಡನೆ ಸಹವಾಸವನ್ನು ಮಾಡಬಾರದು. ರಾಜ್ಯವನ್ನು ಮಾರುಕಟ್ಟೆಯ ಪದಾರ್ಥವನ್ನಾಗಿ ಮಾಡಬಾರದು.

**ಶೂರಾಶ್ಚಾರ್ಯಾಶ್ಚ ಸತ್ಕಾರ್ಯಾ ವಿದ್ವಾಂಸಶ್ಚ ಯುಧಿಷ್ಠಿರ ।**
**ಗೋಮಿನೋ ಧನಿನಶ್ಚೈವ ಪರಿಪಾಲ್ಯಾ ವಿಶೇಷತಃ ॥೧೭॥**

ಶೂರರಾದವರನ್ನೂ, ಶ್ರೇಷ್ಠಪುರುಷರನ್ನೂ, ವಿದ್ವಾಂಸರನ್ನೂ ರಾಜ ನಾದವನು ಯಥೋಚಿತವಾಗಿ ಸತ್ಕರಿಸಬೇಕು. ಗೋಧನವುಳ್ಳವರಿಗೂ ಅಪಾರವಾದ ಐಶ್ವರ್ಯವಿರುವವರಿಗೂ ವಿಶೇಷವಾದ ರಕ್ಷಣೆಯನ್ನು ಕೊಡ ಬೇಕು.

( **ಗೋಮಿನಃ**–ಎಂಬುದಕ್ಕೆ ವ್ಯಾಖ್ಯಾನಕಾರರು : **ಗಾಂ = ವಾಚಂ ಮಿಮತೇ ವಿಚಾರಯನ್ತಿ ತೇ ಗೋಮಿನಃ –ಬ್ರಹ್ಮಕರ್ಮಕಾಣ್ಡಾರ್ಥವಿದಃ ಬ್ರಾಹ್ಮಣಾಃ ।** ವೇದಗಳಲ್ಲಿರುವ ಕರ್ಮಕಾಂಡಗಳ ಅರ್ಥವನ್ನು ತಿಳಿದಿರುವ ಬ್ರಾಹ್ಮಣರು–ಎಂದು ವಿಶೇಷವಾದ ಅರ್ಥಮಾಡಿರುತ್ತಾರೆ. ಆದರೆ 'ಗೋಧನವುಳ್ಳವರು' ಎಂಬುದೇ ಇಲ್ಲಿಗೆ ಸರಿಯಾಗಿ ಹೊಂದಿಕೊಳ್ಳುತ್ತದೆ.)

**ವ್ಯವಹಾರೇಷು ಧರ್ಮೇಷು ಯೋಕ್ತವ್ಯಾಶ್ಚ ಬಹುಶ್ರುತಾಃ ।**
**ಗುಣಯುಕ್ತೇಽಪಿ ನೈಕಸ್ಮಿನ್ವಿಶ್ವಸೇತ ವಿಚಕ್ಷಣಃ ॥೧೮॥**

ಧರ್ಮಕ್ಕೆ ಸಂಬಂಧಿಸಿದ ವ್ಯವಹಾರಗಳಲ್ಲಿ ಸಕಲಶಾಸ್ತ್ರಗಳನ್ನೂ ಅಧ್ಯಯನಮಾಡಿರುವವರನ್ನೇ ನಿಯಮಿಸಬೇಕು. ಒಬ್ಬನು ಅತ್ಯಂತ

ಗುಣಶಾಲಿಯೇ ಆಗಿದ್ದರೂ ವಿಚಕ್ಷಣನಾದ ರಾಜನು ಅವನೊಬ್ಬನಲ್ಲಿಯೇ ಪೂರ್ಣವಿಶ್ವಾಸವನ್ನಿಡಬಾರದು.

**ಅರಕ್ಷಿತಾ ದುರ್ವಿನೀತೋ ಮಾನೀ ಸ್ತಬ್ಧೋಽಭ್ಯಸೂಯಕಃ ।**
**ಏನಸಾ ಯುಜ್ಯತೇ ರಾಜಾ ದುರ್ದಾನ್ತ ಇತಿ ಚೋಚ್ಯತೇ ॥೧೯॥**

ಪ್ರಜೆಗಳನ್ನು ರಕ್ಷಿಸದೇ ಇರುವ, ಉದ್ಧತನಾದ, ದುರಭಿಮಾನಿಯಾದ, ಮಾನ್ಯರಾದವರಲ್ಲಿ ಅವಿನೀತನಾಗಿರುವ, ಅನ್ಯರಲ್ಲಿ ದೋಷವನ್ನೇ ಹುಡುಕುವ ರಾಜನು ಪಾಪಯುಕ್ತನಾಗುತ್ತಾನೆ. ಇಂತಹವನನ್ನು ಅಡಗಿಸಲು ( ತಿದ್ದಿ ಸರಿಪಡಿಸಲು ) ಅಸಾಧ್ಯವೆಂದೂ ವಿದ್ವಾಂಸರು ಹೇಳುತ್ತಾರೆ.

**ಯೇಽರಕ್ಷ್ಯಮಾಣಾ ಹೀಯನ್ತೇ ದೈವೇನಾಭ್ಯಾಹತಾ ನೃಪ ।**
**ತಸ್ಕರೈಶ್ಚಾಪಿ ಹೀಯನ್ತೇ ಸರ್ವಂ ತದ್ರಾಜಕಿಲ್ಬಿಷಮ್ ॥೨೦॥**

ರಾಜನಿಂದ ರಕ್ಷಿಸಲ್ಪಡದೇ ಇರುವ ಪ್ರಜೆಗಳು ಅತಿವೃಷ್ಟಿ-ಅನಾವೃಷ್ಟಿ ಗಳೇ ಮೊದಲಾದ ದೈವಿಕವಾದ ಆಪತ್ತಿನಿಂದಲೂ ಮತ್ತು ಕಳ್ಳ-ಕಾಕರ ಉಪಟಳಗಳಿಂದಲೂ ವಿನಾಶಹೊಂದುತ್ತಾರೆ. ಆದುದರಿಂದ ಪ್ರಜೆಗಳ ವಿನಾಶಕ್ಕೆ ರಾಜನೇ ಕಾರಣನಾದಂತಾಗಿ ಮಹಾಪಾಪಕ್ಕೆ ಗುರಿಯಾಗುತ್ತಾನೆ. (ರಾಜನ ದುರ್ನೀತಿಯಿಂದಾಗಿ ದೇಶದಲ್ಲಿ ಮಳೆ-ಬೆಳೆಗಳೂ ಆಗುವುದಿಲ್ಲ. ಕಳ್ಳ-ಕಾಕರ ಭಯವೂ ಹೆಚ್ಚುತ್ತದೆ. ಪ್ರಜೆಗಳೂ ವಿನಾಶಹೊಂದುತ್ತಾರೆ. ಪ್ರಜಾನಾಶದ ಪಾಪವು ರಾಜನಿಗೇ ಅಂಟಿಕೊಳ್ಳುತ್ತದೆ. )

**ಸುಮನ್ತ್ರಿತೇ ಸುನೀತೇ ಚ ಸರ್ವತಶ್ಚೋಪಪಾದಿತೇ ।**
**ಪೌರುಷೇ ಕರ್ಮಣಿ ಕೃತೇ ನಾಸ್ತ್ಯಧರ್ಮೋ ಯುಧಿಷ್ಠಿರ ॥೨೧॥**

ಯುಧಿಷ್ಠಿರ! ಪ್ರಜೆಗಳಿಗೆ ಹಿತವು ಹೇಗಾಗುವುದೆಂಬುದನ್ನು ಚೆನ್ನಾಗಿ ಸಮಾಲೋಚಿಸಿ, ಧರ್ಮಮೂಲವಾದ ನೀತಿಯನ್ನು ಅನುಸರಿಸಿ, ಸರ್ವಪ್ರಕಾರದಿಂದಲೂ ಮನುಷ್ಯಪ್ರಯತ್ನದಿಂದ ರಾಜಕಾರ್ಯಗಳನ್ನು ಮಾಡಿಯೂ ಮಳೆ-ಬೆಳೆಗಳಾಗದೇ ಪ್ರಜೆಗಳು ವಿನಾಶಹೊಂದಿದಲ್ಲಿ– ರಾಜನು ಪಾಪಭಾಗಿಯಾಗುವುದಿಲ್ಲ. ಆ ರಾಜನನ್ನು ಧರ್ಮಬಾಹಿರನೆಂದು ಯಾರೂ ಹೇಳುವುದೂ ಇಲ್ಲ.

**ವಿಚ್ಛಿದ್ಯನ್ತೇ ಸಮಾರಬ್ಧಾಃ ಸಿದ್ಧ್ಯನ್ತೇ ಚಾಪಿ ದೈವತಃ ।**
**ಕೃತೇ ಪುರುಷಕಾರೇ ತು ನೈನಃ ಸ್ಪೃಶತಿ ಪಾರ್ಥಿವಮ್ ॥೩೨॥**

ಪ್ರಾರಂಭಿಸಿದ ಕಾರ್ಯಗಳು ದೈವದ ದುರ್ಯೋಗದಿಂದ ಹಾಳಾಗಲೂ ಬಹುದು ; ದೈವದ ಸುಯೋಗದಿಂದ ಪ್ರಾರಂಭಿಸಿದ ಕಾರ್ಯಗಳು ಸಿದ್ಧಿಸಲೂಬಹುದು. ಮನುಷ್ಯಪ್ರಯತ್ನಗಳಿಗೆಲ್ಲಕ್ಕೂ ಫಲವನ್ನೀಯುವುದು ದೈವವೇ ಆಗಿರುತ್ತದೆ. ಆದರೆ ಪ್ರಜೆಗಳ ಹಿತದ ದೃಷ್ಟಿಯಿಂದ ಎಲ್ಲ ಪ್ರಯತ್ನಗಳನ್ನೂ ಮಾಡುವುದು ರಾಜನ ಕರ್ತವ್ಯವಾಗಿರುತ್ತದೆ. ಹಾಗೆ ಶ್ರದ್ಧಾಪೂರ್ವಕವಾಗಿ ಪುರುಷಪ್ರಯತ್ನವನ್ನು ಮಾಡಿ ಮುಗಿಸಿದ ರಾಜನನ್ನು ಪಾಪವು ಸ್ಪರ್ಶಿಸುವುದಿಲ್ಲ.

ರಾಜಸಿಂಹನೇ! ಈ ಸಂದರ್ಭದಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಹಿಂದೆ ರಾಜರ್ಷಿಯಾದ ಹಯಗ್ರೀವನ ಜೀವನದಲ್ಲಿ ನಡೆದ ಒಂದು ಕಥೆಯನ್ನು ನಿನಗೆ ಹೇಳುತ್ತೇನೆ.

ರಾಜರ್ಷಿಯಾದ ಹಯಗ್ರೀವನು ಶತ್ರುಗಳನ್ನು ನಿಗ್ರಹಿಸಲು ಎಂತಹ ಪರಾಕ್ರಮವನ್ನು ತೋರಿದನು? ಪ್ರಜೆಗಳ ಪಾಲನದಲ್ಲಿ ಎಂತಹ ಶ್ರೇಷ್ಠವಾದ ಕಾರ್ಯವನ್ನು ಮಾಡಿದನು? ಮತ್ತು ಎಷ್ಟು ಏಕಾಗ್ರತೆಯಿಂದಿದ್ದನು?–ಈ ಎಲ್ಲವನ್ನೂ ಹೇಳುತ್ತೇನೆ. ಹಯಗ್ರೀವರಾಜನು ಸಮಯೋಚಿತವಾದ ಪುರುಷಪ್ರಯತ್ನದಿಂದ ಯುದ್ಧದಲ್ಲಿ ಕೀರ್ತಿಯನ್ನು ಗಳಿಸಿ ತನ್ನ ಕರ್ತವ್ಯವನ್ನು ಪೂರೈಸಿದುದರ ಫಲವಾಗಿ ಈಗ ಸ್ವರ್ಗಲೋಕದಲ್ಲಿ ಆನಂದಪಡುತ್ತಿದ್ದಾನೆ.

ಯಾವಾಗಲೂ ಆತ್ಮಚಿಂತನೆಯನ್ನೇ ಮಾಡುತ್ತಿದ್ದ ಹಯಗ್ರೀವರಾಜನು ಯುದ್ಧದಲ್ಲಿ ತನ್ನೆದುರಾಗಿ ಬಂದ ಶತ್ರುಗಳನ್ನು ಸಂಹರಿಸುತ್ತಿದ್ದನು. ಹೀಗೆ ಯುದ್ಧಮಾಡುತ್ತಿರಲಾಗಿ ಅವನೊಮ್ಮೆ ಅಸಹಾಯಕನಾಗಿ ದಸ್ಯುಗಳ ಶಸ್ತ್ರಗಳಿಂದ ಛಿನ್ನ-ಭಿನ್ನವಾಗಿ ಮಾಡಲ್ಪಟ್ಟು ಅಸುನೀಗಿದನು. ಕರ್ಮಶೀಲನಾದ, ಮಹಾತ್ಮನಾದ ಅಶ್ವಗ್ರೀವನು ಪೂರ್ಣಮನೋರಥನಾಗಿ ಸ್ವರ್ಗಲೋಕದಲ್ಲಿ ಆನಂದವನ್ನು ಅನುಭವಿಸುತ್ತಿದ್ದಾನೆ.

ಧನುರ್ಯೂಪೋ ರಶನಾ ಜ್ಯಾ ಶರಃ ಸ್ರುಕ್
ಸ್ರುವಃ ಖಡ್ಗೋ ರುಧಿರಂ ಯತ್ರ ಚಾಜ್ಯಮ್ ।
ರಥೋ ವೇದೀ ಕಾಮಗೋ ಯುದ್ಧಮಗ್ನಿ-
ಶ್ಚಾತುರ್ಹೋತ್ರಂ ಚತುರೋ ವಾಜಿಮುಖ್ಯಾಃ ॥೨೭॥
ಹುತ್ವಾ ತಸ್ಮಿನ್ಯಜ್ಞವಹ್ನಾವಥಾರೀ-
ನ್ಪಾಪಾನ್ಮುಕ್ತೋ ರಾಜಸಿಂಹಸ್ತರಸ್ವೀ ।
ಪ್ರಾಣಾನ್ಹುತ್ವಾ ಚಾವಭೃಥೇ ರಣೇ ಸ
ವಾಜಿಗ್ರೀವೋ ಮೋದತೇ ದೇವಲೋಕೇ ॥೨೮॥

ಯುದ್ಧವೆಂಬ ಮಹಾಯಾಗದಲ್ಲಿ ಹಯಗ್ರೀವನ ಧನುಸ್ಸೇ ಯೂಪ ಸ್ತಂಭವಾಗಿದ್ದಿತು. ಮೌರ್ವಿಯೇ ಬಂಧನರಜ್ಜುವಾಗಿದ್ದಿತು. ಬಾಣವು ಸ್ರುಕ್ಕಾಗಿದ್ದಿತು. ಖಡ್ಗವು ಸ್ರುವವಾಗಿದ್ದಿತು. ಯುದ್ಧದಲ್ಲಿ ಪರಸ್ಪರ ಪ್ರಹಾರಗಳಿಂದ ಹೊರಚೆಲ್ಲುತ್ತಿದ್ದ ರಕ್ತವೇ ಯುದ್ಧವೆಂಬ ಮಹಾಯಜ್ಞದಲ್ಲಿ ಆಜ್ಯವಾಗಿದ್ದಿತು. ರಥಿಕನ ಇಚ್ಛಾನುಸಾರವಾಗಿ ಸಂಚಲಿಸುವ ರಥವು ಯಜ್ಞವೇದಿಯಾಗಿದ್ದಿತು. ಯುದ್ಧವೇ ಅಗ್ನಿಯಾಗಿದ್ದಿತು. ರಥಕ್ಕೆ ಕಟ್ಟಿದ್ದ ಶ್ರೇಷ್ಠವಾದ ನಾಲ್ಕು ಕುದುರೆಗಳೇ ಬ್ರಹ್ಮನೇ ಮೊದಲಾದ ನಾಲ್ಕು ಋತ್ವಿಜರ ಸ್ಥಾನದಲ್ಲಿದ್ದುವು. ವೇಗಶಾಲಿಯಾದ ಹಯಗ್ರೀವರಾಜಸಿಂಹನು ಆ ಯುದ್ಧಾಗ್ನಿಯಲ್ಲಿ ಶತ್ರುಗಳನ್ನು ಹೋಮಮಾಡಿ ಸಕಲವಿಧವಾದ ಪಾಪ ಗಳಿಂದಲೂ ಮುಕ್ತನಾದನು. ರಣಯಜ್ಞದ ಅವಭೃಥದಲ್ಲಿ ತನ್ನ ಪ್ರಾಣಗಳನ್ನೂ ಹೋಮಮಾಡಿದ ವಾಜಿಗ್ರೀವನೀಗ ಸ್ವರ್ಗಲೋಕದಲ್ಲಿ ಆನಂದ ಪಡುತ್ತಿದ್ದಾನೆ.

ರಾಷ್ಟ್ರಂ ರಕ್ಷನ್ಬುದ್ಧಿಪೂರ್ವಂ ನಯೇನ
ಸಂತ್ಯಕ್ತಾತ್ಮಾ ಯಜ್ಞಶೀಲೇ ಮಹಾತ್ಮಾ ।
ಸರ್ವಾಂಲ್ಲೋಕಾನ್ವ್ಯಾಪ್ಯ ಕೀರ್ತ್ಯಾ ಮನಸ್ವೀ
ವಾಜಿಗ್ರೀವೋ ಮೋದತೇ ದೇವಲೋಕೇ ॥೨೯॥

ಯಜ್ಞಶೀಲನಾದ, ಮಹಾತ್ಮನಾದ, ಮನನಶೀಲನಾದ ಹಯಗ್ರೀವನು, ಬುದ್ಧಿಪೂರ್ವಕವಾಗಿ ಸುನೀತಿಯಿಂದ ರಾಷ್ಟ್ರವನ್ನು ರಕ್ಷಿಸುತ್ತಾ ಕಡೆಗೆ ರಾಷ್ಟ್ರ

ರಕ್ಷಣಾರೂಪವಾದ ರಣಯಜ್ಞದಲ್ಲಿಯೇ ಪ್ರಾಣಾರ್ಪಣೆಮಾಡಿ, ತನ್ನ ಕೀರ್ತಿಯು ಎಲ್ಲ ಲೋಕಗಳಲ್ಲಿಯೂ ವ್ಯಾಪಿಸುವಂತೆ ಮಾಡಿ ಈಗವನು ದೇವಲೋಕದಲ್ಲಿ ಆನಂದಪಡುತ್ತಿದ್ದಾನೆ.

**ದೈವೀಂ ಸಿದ್ಧಿಂ ಮಾನುಷೀಂ ದಣ್ಡನೀತಿಂ**
**ಯೋಗನ್ಯಾಸೈಃ ಪಾಲಯಿತ್ವಾ ಮಹೀಂ ಚ ।**
**ತಸ್ಮಾದ್ರಾಜಾ ಧರ್ಮಶೀಲೋ ಮಹಾತ್ಮಾ**
**ವಾಜಿಗ್ರೀವೋ ಮೋದತೇ ದೇವಲೋಕೇ ॥೩೦॥**

ಧರ್ಮಶೀಲನಾದ, ಮಹಾತ್ಮನಾದ ಹಯಗ್ರೀವನು ಯೋಗ ( ಕರ್ಮಗಳಲ್ಲಿ ಉತ್ಸಾಹ ) ದಿಂದಲೂ, ನ್ಯಾಸ ( ಅಹಂಕಾರಾದಿಗಳ ತ್ಯಾಗ ) ದಿಂದಲೂ ಯುಕ್ತವಾದ ದೈವೀಸಿದ್ಧಿಯನ್ನೂ–ದಂಡನೀತಿರೂಪವಾದ ಮಾನುಷೀಸಿದ್ಧಿಯನ್ನೂ ಪಡೆದು, ಪ್ರಜಾಪರಿಪಾಲನೆಯನ್ನೂ ಮಾಡಿ, ಈ ಎಲ್ಲದರ ಪುಣ್ಯವಿಶೇಷಗಳಿಂದ ಈಗ ದೇವಲೋಕದಲ್ಲಿ ಸುಖವನ್ನು ಅನುಭವಿಸುತ್ತಿದ್ದಾನೆ.

( **ಯೋಗನ್ಯಾಸೈಃ**ಎಂಬುದಕ್ಕೆ ವ್ಯಾಖ್ಯಾನಕಾರರು **ಯೋಗಃ ಕ್ರಿಯ ಶೀಲ ಉತ್ಸಾಹಃ**= ಕಾರ್ಯೋತ್ಸಾಹವೇ ಯೋಗ. **ನ್ಯಾಸಾಃ ಅಭಿಮಾನ ತ್ಯಾಗಾಃ ತೈಃ** = ಅಭಿಮಾನವನ್ನು ತೊರೆಯುವುದು ; ಇವುಗಳಿಂದ ಯುಕ್ತನಾಗಿ **ದೈವೀಂ ಸಿದ್ಧಿಂ = ಯಜ್ಞಾದಿಕ್ರಿಯಾಃ** – ಯಜ್ಞಕ್ರಿಯೆಗಳನ್ನು–ಎಂದು ಅರ್ಥಮಾಡಿರುತ್ತಾರೆ. ತಪಸ್ಸಿನಿಂದ ದೈವಸಂಬಂಧವಾದ ಸಿದ್ಧಿಯನ್ನು ಪಡೆದುಕೊಂಡು ಮಾನುಷವಾದ ದಂಡನೀತಿಯನ್ನು ಅನುಸರಿಸುತ್ತಾ, **ಯೋಗನ್ಯಾಸೈಃ** ಎಂದರೆ **ಯೋಗಃ = ಅಲಭ್ಯಸ್ಯ ಲಾಭಃ** – ಪ್ರಜಾಪಾಲನೆಗಾಗಿ ಅಲಬ್ಧವಾದುದೆಲ್ಲವನ್ನೂ ಸಂಗ್ರಹಿಸುತ್ತಾ, **ನ್ಯಾಸಃ**– ಎಂದರೆ ಸಮಯಬಂದಾಗ ಪ್ರಜೆಗಳಿಗೆ ಕೊಡಲು ಸಂಗ್ರಹಿಸಿದ ವಸ್ತುಗಳನ್ನು ನ್ಯಾಸಭೂತವಾಗಿ ತನ್ನಲ್ಲಿ ಇಟ್ಟುಕೊಳ್ಳುತ್ತಾ ಪ್ರಜೆಗಳನ್ನು ಪಾಲಿಸುತ್ತಿದ್ದನು. ಹೀಗೂ ಅರ್ಥಮಾಡಬಹುದಾಗಿದೆ. )

**ವಿದ್ವಾಂಸ್ತ್ಯಾಗೀ ಶ್ರದ್ದಧಾನಃ ಕೃತಜ್ಞ-**
**ಸ್ತ್ಯಕ್ತ್ವಾಲೋಕಂ ಮಾನುಷಂ ಕರ್ಮ ಕೃತ್ವಾ ।**

**ಮೇಧಾವಿನಾಂ ವಿದುಷಾಂ ಸಮ್ಮತಾನಾಂ**
**ತನುತ್ಯಜಾಂ ಲೋಕಮಾಕ್ರಮ್ಯ ರಾಜಾ ॥೩೧॥**

ವಿದ್ವಾಂಸನಾದ, ತ್ಯಾಗಿಯಾದ, ಶ್ರದ್ಧಾಳುವಾದ, ಕೃತಜ್ಞನಾದ ಹಯಗ್ರೀವರಾಜನು–ಮನುಷ್ಯರು (ರಾಜರು) ಮಾಡಬೇಕಾದ ದುಷ್ಟ ಶಿಕ್ಷಣ-ಶಿಷ್ಟಪರಿಪಾಲನರೂಪವಾದ ಕಾರ್ಯಗಳೆಲ್ಲವನ್ನೂ ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ಮಾಡಿ, ಯುದ್ಧವೆಂಬ ಯಜ್ಞದ ಮೂಲಕವಾಗಿ ಈ ಲೋಕವನ್ನು ತ್ಯಜಿಸಿ, ಮೇಧಾವಿಗಳಾದ, ಸರ್ವಸಮ್ಮಾನ್ಯರಾದ, ಜ್ಞಾನಿಗಳಾದ, ಯುದ್ಧದಲ್ಲಿ ಶರೀರವನ್ನು ತ್ಯಾಗಮಾಡುವ ಮಹಾನುಭಾವರು ಸೇರುವ ಪುಣ್ಯಲೋಕಗಳನ್ನು ಆಕ್ರಮಿಸಿ ಅಲ್ಲಿ ಆನಂದಪಡುತ್ತಿದ್ದಾನೆ.

ವೇದಗಳನ್ನು ಗುರುಮುಖೇನ ಚೆನ್ನಾಗಿ ಅಧ್ಯಯನಮಾಡಿ, ಶಾಸ್ತ್ರಗಳನ್ನು ತಿಳಿದುಕೊಂಡು, ರಾಜ್ಯವನ್ನು ಚೆನ್ನಾಗಿ ಪಾಲಿಸುತ್ತಾ ಚಾತುರ್ವರ್ಣ್ಯದವರನ್ನೂ ಅವರವರ ಧರ್ಮದಲ್ಲಿಯೇ ಇರುವಂತೆ ವ್ಯವಸ್ಥೆಗೊಳಿಸಿ, ಮಹಾತ್ಮನಾದ ಹಯಗ್ರೀವನೀಗ ದೇವಲೋಕದಲ್ಲಿ ಆನಂದವಾಗಿದ್ದಾನೆ.

**ಜಿತ್ವಾ ಸಂಗ್ರಾಮಾನ್ಪಾಲಯಿತ್ವಾ ಪ್ರಜಾಶ್ಚ**
**ಸೋಮಂ ಪೀತ್ವಾ ತರ್ಪಯಿತ್ವಾ ದ್ವಿಜಾಗ್ರ್ಯಾನ್ ।**
**ಯುಕ್ತ್ಯಾ ದಣ್ಡಂ ಧಾರಯಿತ್ವಾ ಪ್ರಜಾನಾಂ**
**ಯುದ್ಧೇ ಕ್ಷೀಣೋ ಮೋದತೇ ದೇವಲೋಕೇ ॥೩೩॥**

ಅನೇಕಸಂಗ್ರಾಮಗಳಲ್ಲಿ ಶತ್ರುಗಳನ್ನು ಜಯಿಸಿ, ಪ್ರಜೆಗಳನ್ನು ಧರ್ಮದಿಂದ ಪಾಲನೆಮಾಡುತ್ತಾ, ಅನೇಕಯಾಗಗಳನ್ನು ಮಾಡುವ ಮೂಲಕ ಸೋಮಪಾನವನ್ನು ಮಾಡಿ, ಶ್ರೇಷ್ಠರಾದ ಬ್ರಾಹ್ಮಣರನ್ನು ದಕ್ಷಿಣಾದಿಗಳಿಂದ ತೃಪ್ತಿಗೊಳಿಸಿ, ದಂಡನೀತಿಯ ಮೂಲಕವಾಗಿ ಯುಕ್ತಿಯಿಂದ ಪ್ರಜೆಗಳ ಭರಣ-ಪೋಷಣಾದಿಗಳನ್ನು ಮಾಡುತ್ತಿದ್ದು, ಕಡೆಯಲ್ಲಿ ಯುದ್ಧದಲ್ಲಿ ಅಸುನೀಗಿದ ಹಯಗ್ರೀವರಾಜನು ಈಗ ದೇವಲೋಕದಲ್ಲಿ ಆನಂದಪಡುತ್ತಿದ್ದಾನೆ.

**ವೃತ್ತಂ ಯಸ್ಯ ಶ್ಲಾಘನೀಯಂ ಮನುಷ್ಯಾಃ**
**ಸನ್ತೋ ವಿದ್ವಾಂಸೋಽರ್ಹಯನ್ತ್ಯರ್ಹಣೀಯಮ್ ।**

**ಸ್ವರ್ಗಂ ಜಿತ್ವಾ ವೀರಲೋಕಾನವಾಪ್ಯ**
**ಸಿದ್ಧಿಂ ಪ್ರಾಪ್ತಃ ಪುಣ್ಯಕೀರ್ತಿರ್ಮಹಾತ್ಮಾ ॥೩೪॥**

ಸಾಧು-ಸಂತರೂ, ವಿದ್ವಾಂಸರೂ ಹಯಗ್ರೀವರಾಜನ ಸ್ಪೃಹಣೀಯವಾದ ಮತ್ತು ಆದರಣೀಯವಾದ ಚರಿತೆಯನ್ನು ಅತಿಶಯವಾಗಿ ಪ್ರಶಂಸೆ ಮಾಡುತ್ತಲೇ ಇರುತ್ತಾರೆ. ಪುಣ್ಯಕೀರ್ತಿಯಾದ, ಮಹಾತ್ಮನಾದ ಹಯಗ್ರೀವ ರಾಜನು ಸ್ವರ್ಗವನ್ನು ಜಯಿಸಿ ವೀರರು ಪಡೆಯಬಹುದಾದ ಲೋಕಗಳಿಗೆ ಹೋಗಿ ಶ್ರೇಷ್ಠವಾದ ಸಿದ್ಧಿಯನ್ನು ಪಡೆದುಕೊಂಡಿರುತ್ತಾನೆ.”

ಇಳನೆಯ ಅಧ್ಯಾಯವು ಮುಗಿಯಿತು.

೨೫ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ವ್ಯಾಸರು ಸೇನಜಿತನ ಉಪದೇಶವನ್ನು ಉದ್ಧರಿಸುತ್ತಾ ಯುಧಿಷ್ಠಿರನಿಗೆ ಸಮಾಧಾನ ಹೇಳಿದುದು

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಧನಂಜಯನು ಕುಪಿತನಾಗಿರಲಾಗಿ, ವ್ಯಾಸರು ಹೇಳಿದ ಮಾತನ್ನು ಕೇಳಿ ಯುಧಿಷ್ಠಿರನು ವ್ಯಾಸರನ್ನು ಕುರಿತು ಹೇಳಿದನು :

“ಮಹರ್ಷಿಗಳೇ! ಭೂಮಿಯ ಸಂಬಂಧವಾದ ಈ ರಾಜ್ಯವೂ ಮತ್ತು ನಾನಾವಿಧವಾದ ಭೋಗಗಳೂ ನನ್ನ ಮನಸ್ಸಿಗೆ ಸಂತೋಷವನ್ನುಂಟು ಮಾಡುವುದಾಗಿಲ್ಲ. ಬಂಧು-ಮಿತ್ರರ ವಿನಾಶದಿಂದ ಉಂಟಾಗಿರುವ ಮಹಾ ಶೋಕವೇ ನನ್ನನ್ನು ಆವರಿಸಿಬಿಟ್ಟಿದೆ. ವೀರಪತಿಗಳಿಂದಲೂ, ಪುತ್ರರಿಂದಲೂ ವಿಹೀನರಾದ ಸ್ತ್ರೀಯರ ಕರುಣಾಜನಕವಾದ ವಿಲಾಪವನ್ನು ಕೇಳುತ್ತಿರುವ ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲವಾಗಿದೆ.”

ಜನಮೇಜಯ! ಯುಧಿಷ್ಠಿರನು ಹೀಗೆ ಹೇಳಲಾಗಿ, ಯೋಗಿಗಳಲ್ಲಿ ಶ್ರೇಷ್ಠರಾದ, ಮಹಾಪ್ರಾಜ್ಞರಾದ, ಧರ್ಮಜ್ಞರಾದ, ವೇದ-ವೇದಾಂಗ ಪಾರಂಗತರಾದ ವ್ಯಾಸರು ಯುಧಿಷ್ಠಿರನನ್ನು ಕುರಿತು ಹೇಳಿದರು :

**ನ ಕರ್ಮಣಾ ಲಭ್ಯತೇ ಚಿನ್ತಯಾ ವಾ**
**ನಾಪ್ಯಸ್ತಿ ದಾತಾ ಪುರುಷಸ್ಯ ಕಶ್ಚಿತ್ ।**

ಪರ್ಯಾಯಯೋಗಾದ್ವಿಹಿತಂ ವಿಧಾತ್ರಾ
ಕಾಲೇನ ಸರ್ವಂ ಲಭತೇ ಮನುಷ್ಯಃ ॥೫॥

"ಧರ್ಮಜ! ಅಪೇಕ್ಷಿತವಾದ ವಸ್ತುವು ಕರ್ಮವನ್ನು ಮಾಡುವುದರಿಂದಲೇ ಲಭ್ಯವಾಗುವುದಿಲ್ಲ. ಸರ್ವದಾ ಅದನ್ನೇ ಚಿಂತಿಸುತ್ತಾ ಕುಳಿತಿರುವುದರಿಂದಲೂ ಲಭ್ಯವಾಗುವುದಿಲ್ಲ. ಮನುಷ್ಯನಿಗೆ ತಾನು ಅಪೇಕ್ಷಿಸುವ ವಸ್ತುವನ್ನು ಕೊಡುವ ದಾತನೂ ಯಾರೂ ಇರುವುದಿಲ್ಲ. ಪರ್ಯಾಯವಾಗಿ ಬರುವ ಯೋಗದಿಂದ ಬ್ರಹ್ಮನ ನಿಯಮದಂತೆ ಮನುಷ್ಯನು ಪಡೆದುಕೊಳ್ಳಬಹುದಾದ ಎಲ್ಲವನ್ನೂ ಸಮಯಗಳಲ್ಲಿ ಪಡೆದುಕೊಳ್ಳುತ್ತಾನೆ.

ನ ಬುದ್ಧಿಶಾಸ್ತ್ರಾಧ್ಯಯನೇನ ಶಕ್ಯಂ
ಪ್ರಾಪ್ತುಂ ವಿಶೇಷಂ ಮನುಜೈರಕಾಲೇ ।
ಮೂರ್ಖೋಽಪಿ ಪ್ರಾಪ್ನೋತಿ ಕದಾಚಿದರ್ಥಾ-
ನ್ಕಾಲೋ ಹಿ ಕಾರ್ಯಂ ಪ್ರತಿ ನಿರ್ವಿಶೇಷಃ ॥೬॥

ಬುದ್ಧಿಯಿಂದಾಗಲೀ, ಶಾಸ್ತ್ರಗಳ ಅಧ್ಯಯನದಿಂದಾಗಲೀ–ಮನುಷ್ಯರು ಅಕಾಲದಲ್ಲಿ (ಯೋಗವಿರದ ಕಾಲದಲ್ಲಿ) ವಿಶೇಷವಾದ ಫಲವನ್ನು ಹೊಂದಲು ಸಾಧ್ಯವೇ ಆಗುವುದಿಲ್ಲ. ಕಾಲವು ಒದಗಿ ಬಂತೆಂದರೆ ಶಾಸ್ತ್ರಾಧ್ಯಯನಗಳನ್ನು ಮಾಡದ ಬುದ್ಧಿಹೀನನಾದ ಮೂರ್ಖನೂ ಯಥೇಚ್ಛವಾದ ಐಶ್ವರ್ಯವನ್ನು ಪಡೆದುಕೊಳ್ಳುತ್ತಾನೆ. ಆದುದರಿಂದ ಕಾರ್ಯದ ಸಿದ್ಧಿಗೆ ಸಾಮಾನ್ಯವಾಗಿ ಕಾಲವೇ ಪ್ರಾಜ್ಞ-ಮೂರ್ಖರೆಂಬ ಭೇದವಿಲ್ಲದೇ ಕಾರಣವಾಗಿರುತ್ತದೆ.

ನಾಭೂತಿಕಾಲೇಷು ಫಲಂ ದದನ್ತಿ
ಶಿಲ್ಪಾನಿ ಮನ್ತ್ರಾಶ್ಚ ತಥೌಷಧಾನಿ ।
ತಾನ್ಯೇವ ಕಾಲೇನ ಸಮಾಹಿತಾನಿ
ಸಿಧ್ಯನ್ತಿ ವರ್ಧನ್ತಿ ಚ ಭೂತಿಕಾಲೇ ॥೭॥

ಮನುಷ್ಯನು ಅವನತಿಯಲ್ಲಿರುವಾಗ ಮಂತ್ರಗಳಾಗಲೀ, ಔಷಧಗಳಾಗಲೀ, ಶಿಲ್ಪಾದಿ ಕಲೆಗಳಾಗಲೀ–ಯಾವ ವಿಧವಾದ ಫಲವನ್ನೂ ಕೊಡುವು

ದಿಲ್ಲ. ಆದರೆ ಇವೇ ಶಿಲ್ಪ-ಮಂತ್ರೌಷಧಗಳು ಮನುಷ್ಯನು ಔನ್ನತ್ಯದಲ್ಲಿರುವಾಗ (ಒಳ್ಳೆಯ ಯೋಗದಲ್ಲಿರುವಾಗ) ಕಾಲನ ಪ್ರೇರಣೆಯಿಂದ ಕೈಹಾಕಿದ ಕಾರ್ಯಗಳೆಲ್ಲವನ್ನೂ ಸಿದ್ಧಿಯಾಗುವಂತೆ ಮಾಡುತ್ತವೆ. ಮತ್ತಷ್ಟು ವೃದ್ಧಿ ಹೊಂದಲು ಸಹಾಯಕವಾಗುತ್ತವೆ.

**ಕಾಲೇನ ಶೀಘ್ರಾಃ ಪ್ರವಹನ್ತಿ ವಾತಾಃ**
**ಕಾಲೇನ ವೃಷ್ಟಿರ್ಜಲದಾನುಪೈತಿ ।**
**ಕಾಲೇನ ಪದ್ಮೋತ್ಪಲವಜ್ಜಲಂ ಚ**
**ಕಾಲೇನ ಪುಷ್ಯನ್ತಿ ವನೇಷು ವೃಕ್ಷಾಃ ॥೮॥**

ಆಯಾ ಕಾಲದಲ್ಲಿಯೇ ಬಿರುಗಾಳಿಯು ಬಹಳ ವೇಗವಾಗಿ ಬೀಸುತ್ತದೆ. ಆಯಾ ಕಾಲದಲ್ಲಿಯೇ ಮಳೆಯು ಮೋಡಗಳಲ್ಲಿ ಸೇರಿಕೊಳ್ಳುತ್ತದೆ. ಆಯಾ ಕಾಲದಲ್ಲಿಯೇ ಸರೋವರದ ನೀರು ಕಮಲಗಳಿಂದಲೂ, ಕನ್ನೈದಿಲೆಗಳಿಂದಲೂ ಪರಿಶೋಭಿಸುತ್ತದೆ. ಆಯಾ ಕಾಲದಲ್ಲಿಯೇ ಅರಣ್ಯ ದಲ್ಲಿರುವ ವೃಕ್ಷಗಳು ಚಿಗುರಿ ಹುಲುಸಾಗುತ್ತವೆ. (ವರ್ಷದ ಎಲ್ಲ ದಿವಸ ಗಳಲ್ಲಿಯೂ ಬಿರುಗಾಳಿಯು ಬೀಸುವುದಿಲ್ಲ. ಎಲ್ಲ ದಿವಸಗಳಲ್ಲಿಯೂ ಮೋಡಗಳಲ್ಲಿ ನೀರಿರುವುದಿಲ್ಲ. ಎಲ್ಲ ದಿನಗಳಲ್ಲಿಯೂ ಸರೋವರದಲ್ಲಿರುವ ಕಮಲಗಳು ಅರಳುವುದಿಲ್ಲ. ಎಲ್ಲ ಋತುಗಳಲ್ಲಿಯೂ ಗಿಡ-ಮರ- ಬಳ್ಳಿಗಳು ಚಿಗುರಿ ಪುಷ್ಪಿತವಾಗುವುದಿಲ್ಲ. ಇವೆಲ್ಲಕ್ಕೂ ಒಂದು ನಿಯತವಾದ ಕಾಲವಿದೆ. ಆ ಕಾಲಗಳಲ್ಲಿ ಮಾತ್ರವೇ ಇವೆಲ್ಲವೂ ನಡೆಯುವುವು. ಆದುದರಿಂದ ಎಲ್ಲ ಕಾರ್ಯಗಳೂ ಕಾಲದ ಅಧೀನವಾಗಿರುತ್ತವೆ.)

**ಕಾಲೇನ ಕೃಷ್ಣಾಶ್ಚ ಸಿತಾಶ್ಚ ರಾತ್ರ್ಯಃ**
**ಕಾಲೇನ ಚನ್ದ್ರಃ ಪರಿಪೂರ್ಣಬಿಮ್ಬಃ ।**
**ನಾಕಾಲತಃ ಪುಷ್ಪಫಲಂ ದ್ರುಮಾಣಾಂ**
**ನಾಕಾಲವೇಗಾಃ ಸರಿತೋ ವಹನ್ತಿ ॥೯॥**

ಕಾಲಾನುಗುಣವಾಗಿ ಕೆಲವು ರಾತ್ರಿಗಳು ಕಪ್ಪಾಗಿಯೂ (ಕತ್ತಲಿನಿಂದ ಕೂಡಿಯೂ) ಕೆಲವು ರಾತ್ರಿಗಳು ಬೆಳ್ಳಗೂ (ಬೆಳದಿಂಗಳಿಂದ ಕೂಡಿಯೂ) ಇರುತ್ತವೆ. ಒಂದು ನಿರ್ದಿಷ್ಟವಾದ ಕಾಲದಲ್ಲಿ ಮಾತ್ರವೇ (ಹುಣ್ಣಿಮೆಯ

ದಿವಸ ಮಾತ್ರ ) ಚಂದ್ರನು ಪೂರ್ಣಬಿಂಬದಿಂದ ಶೋಭಿಸುತ್ತಾನೆ. ವೃಕ್ಷಗಳಲ್ಲಿ ಪುಷ್ಪ-ಫಲಗಳು ಅಕಾಲದಲ್ಲಿ ಉಂಟಾಗುವುದಿಲ್ಲ. ನದಿಗಳು ಅಕಾಲದಲ್ಲಿ ಪೂರ್ಣವೇಗದಿಂದ ( ಪ್ರವಾಹಪೂರ್ಣವಾಗಿ ) ಪ್ರವಹಿಸುವುದಿಲ್ಲ.

**ನಾಕಾಲಮತ್ತಾಃ ಖಗಪನ್ನಗಾಶ್ಚ**
**ಮೃಗಾದ್ವಿಪಾಃ ಶೈಲಮೃಗಾಶ್ಚ ಲೋಕೇ ।**
**ನಾಕಾಲತಃ ಸ್ತ್ರೀಷು ಭವನ್ತಿ ಗರ್ಭಾ**
**ನಾಯಾನ್ತ್ಯಕಾಲೇ ಶಿಶಿರೋಷ್ಣವರ್ಷಾಃ ॥೧೦॥**

ಪಕ್ಷಿಗಳಾಗಲೀ, ಸರ್ಪಗಳಾಗಲೀ, ಮೃಗಗಳಾಗಲೀ, ಆನೆಗಳಾಗಲೀ, ಪರ್ವತದಲ್ಲಿ ವಾಸಮಾಡುವ ಮೃಗಗಳಾಗಲೀ–ಅಕಾಲದಲ್ಲಿ ಮದಿಸು ವುದಿಲ್ಲ. ಮದನವಿಕಾರವನ್ನು ಹೊಂದುವುದಿಲ್ಲ. ಅಕಾಲದಲ್ಲಿ ಸ್ತ್ರೀಯರು ಗರ್ಭವತಿಯರಾಗುವುದಿಲ್ಲ. ಅಕಾಲದಲ್ಲಿ ಶಿಶಿರರ್ತುವಾಗಲೀ ( ಚಳಿಗಾಲ ವಾಗಲೀ ), ಗ್ರೀಷ್ಮರ್ತುವಾಗಲೀ ( ಬೇಸಿಗೆಯಾಗಲೀ ), ವರ್ಷರ್ತುವಾಗಲೀ (ಮಳೆಗಾಲವಾಗಲೀ ) ಉಂಟಾಗುವುದಿಲ್ಲ.

**ನಾಕಾಲತೋ ಮ್ರಿಯತೇ ಜಾಯತೇ ವಾ**
**ನಾಕಾಲತೋ ವ್ಯಾಹರತೇ ಚ ಬಾಲಃ ।**
**ನಾಕಾಲತೋ ಯೌವನಮಭ್ಯುಪೈತಿ**
**ನಾಕಾಲತೋ ರೋಹತಿ ಬೀಜಮುಪ್ತಮ್ ॥೧೧॥**

ಶಿಶುವು ಅಕಾಲದಲ್ಲಿ ಹುಟ್ಟುವುದಿಲ್ಲ. ( ಅದು ತನ್ನ ಪೂರ್ವಕರ್ಮ ಗಳನ್ನು ಅನುಸರಿಸಿ ಹುಟ್ಟಬೇಕಾದ ಕಾಲವು ಸನ್ನಿಹಿತವಾಗಲೇಬೇಕು. ) ಅಕಾಲದಲ್ಲಿ ಆ ಶಿಶುವು ಮಾತನಾಡುವುದೂ ಇಲ್ಲ. ( ಹುಟ್ಟಿದ ಶಿಶುವು ಮಾತನಾಡಲೂ ಒಂದು ನಿರ್ದಿಷ್ಟವಾದ ಕಾಲವೇ ಸನ್ನಿಹಿತವಾಗಬೇಕು. ಎಲ್ಲ ಮಕ್ಕಳೂ ಹುಟ್ಟಿದ ಇಂತಿಷ್ಟು ಕಾಲದಲ್ಲಿಯೇ ಮಾತನಾಡುತ್ತವೆಯೆಂಬ ನಿಯಮವೇನೂ ಇಲ್ಲ. ಆ ಶಿಶುವಿನ ಕರ್ಮಾನುಸಾರವಾಗಿ ಅದು ಮಾತನಾಡಬೇಕಾದ ಕಾಲವೂ ನಿರ್ದಿಷ್ಟವಾಗಿಯೇ ಇರುತ್ತದೆ. ) ಅಂತೆಯೇ ಕಾಲವು ಸನ್ನಿಹಿತವಾಗದೇ ಒಬ್ಬನು ಮರಣವನ್ನು ಹೊಂದುವುದೂ ಇಲ್ಲ. (ಜೀವಚ್ಛವವಾಗಿ ಅನೇಕವರ್ಷಗಳ ಕಾಲ ಹಾಸಿಗೆಯನ್ನು ಹಿಡಿದು ಮಲಗಿರು

ವವರೂ ಇದ್ದಾರೆ. ಕುಳಿತಂತೆಯೇ ಪ್ರಾಣತೊರೆದವರೂ ಇದ್ದಾರೆ. ಆದುದರಿಂದ ಅವರವರ ಕರ್ಮಾನುಸಾರವಾಗಿ ಅವರವರ ಸಾವಿಗೆ ಒಂದು ಕಾಲವು ನಿರ್ದಿಷ್ಟವಾಗಿರುತ್ತದೆ. ಆ ಕಾಲವೇ ಬರಬೇಕು. ) ಅಕಾಲದಲ್ಲಿ ಯೌವನವು ಪ್ರಾಪ್ತವಾಗುವುದಿಲ್ಲ. ( ಬಾಲ್ಯ-ಕೌಮಾರಾವಸ್ಥೆಗಳನ್ನು ದಾಟಲೇಬೇಕು. ) ಹುಟ್ಟುಹಾಕಿದ ಬೀಜವು ಅಕಾಲದಲ್ಲಿ ಮೊಳಕೆಯಾಗುವುದೂ ಇಲ್ಲ. (ಹುಟ್ಟುಹಾಕಿದ ಬೀಜವು ಮೊಳೆಯಬೇಕಾದರೂ ಕಾಲದ ನಿಯಮವಿದೆ. ಅಷ್ಟು ಕಾಲದ ನಂತರವೇ ಆ ಬೀಜವು ಮೊಳೆಯುತ್ತದೆ. ಹಾಕಿದ ಬೀಜವು ಮೊಳೆಯಲೇಬೇಕೆಂಬ ನಿಯಮವೂ ಇಲ್ಲ. ಅದೂ ಸಹ ಕಾಲಾಧೀನವಾಗಿರುತ್ತದೆ. )

**ನಾಕಾಲತೋ ಭಾನುರುಪೈತಿ ಯೋಗಂ**
**ನಾಕಾಲತೋಽಸ್ತಂಗಿರಿಮಭ್ಯುಪೈತಿ ।**
**ನಾಕಾಲತೋ ವರ್ಧತೇ ಹೀಯತೇ ಚ**
**ಚನ್ದ್ರಃ ಸಮುದ್ರೋಽಪಿ ಮಹೋರ್ಮಿಮಾಲೀ ॥೧೨॥**

ಸೂರ್ಯನು ಅಕಾಲದಲ್ಲಿ ಉದಯಾಚಲದೊಡನೆ ಸಂಯೋಗವನ್ನು ಹೊಂದುವುದಿಲ್ಲ. ( ಅಕಾಲದಲ್ಲಿ ಉದಯಿಸುವುದಿಲ್ಲ. ) ಅಕಾಲದಲ್ಲಿ ಅಸ್ತಾಚಲವನ್ನೂ ಸೇರುವುದಿಲ್ಲ. ( ಅಕಾಲದಲ್ಲಿ ಅಸ್ತಂಗತನೂ ಆಗುವುದಿಲ್ಲ. ) ಮಹಾನುಭಾವನಾದ ಸೂರ್ಯನಿಗೂ ಒಂದು ಕಾಲನಿಯಮವಿದೆ. ಅವನೂ ಕಾಲಾಧೀನನೇ ಆಗಿದ್ದಾನೆ. ಚಂದ್ರನಾಗಲೀ, ದೊಡ್ಡ-ದೊಡ್ಡ ಅಲೆಗಳನ್ನು ಎಬ್ಬಿಸುವ ಸಮುದ್ರವಾಗಲೀ–ಅಕಾಲದಲ್ಲಿ ವರ್ಧಿಸುವುದೂ ಇಲ್ಲ ; ಕ್ಷೀಣಿಸುವುದೂ ಇಲ್ಲ.

ಯುಧಿಷ್ಠಿರ! ಈ ವಿಷಯದಲ್ಲಿ ಜನರು ಹಿಂದಿನ ಒಂದು ಇತಿಹಾಸವನ್ನು ಉದಾಹರಿಸುತ್ತಾರೆ. ದುಃಖಾರ್ತನಾದ ಸೇನಜಿದ್ರಾಜನು ಹೇಳಿದ ಗೀತವನ್ನೇ ಜನರು ಹೇಳುತ್ತಿರುತ್ತಾರೆ. ಅದನ್ನೇ ನಿನಗೂ ಹೇಳುತ್ತೇನೆ :

**ಸರ್ವಾನೇವೈಷ ಪರ್ಯಾಯೋ ಮರ್ತ್ಯಾನ್ಸ್ಪೃಶತಿ ದುಃಸಹಃ ।**
**ಕಾಲೇನ ಪರಿಪಕ್ವಾ ಹಿ ಮ್ರಿಯನ್ತೇ ಸರ್ವಪಾರ್ಥಿವಾಃ ॥೧೪॥**

“ ದುಃಸಹವಾದ ಈ ಕಾಲಚಕ್ರವು ಎಲ್ಲ ಮನುಷ್ಯರ ಮೇಲೂ ತನ್ನ

ಪ್ರಭಾವವನ್ನು ಬೀರುತ್ತಲೇ ಇರುತ್ತದೆ. ಕಾಲಚಕ್ರಕ್ಕೆ ಸಿಕ್ಕಿದ ಎಲ್ಲ ರಾಜರೂ ಕಾಲದಿಂದ ಪರಿಪಕ್ವರಾಗಿ ( ತಮ್ಮ ಕಾಲವು ಮುಗಿದೊಡನೆಯೇ ) ಒಂದು ದಿನ ಮರಣಹೊಂದುತ್ತಾರೆ.

**ಘ್ನನ್ತಿ ಚಾನ್ಯಾನ್ನರಾ ರಾಜಂಸ್ತಾನಪ್ಯನ್ಯೇ ತಥಾ ನರಾಃ ।**
**ಸಂಜ್ಞೈಷಾ ಲೌಕಿಕೀ ರಾಜನ್ನ ಹಿನಸ್ತಿ ನ ಹನ್ಯತೇ ॥೧೫॥**

ಕೆಲವು ಮನುಷ್ಯರು ಕೆಲವು ಮನುಷ್ಯರನ್ನು ಸಂಹರಿಸುತ್ತಾರೆ. ಹಾಗೆ ಸಂಹರಿಸಿದವರನ್ನೂ ಬೇರೆಯ ಕೆಲವು ಮನುಷ್ಯರು ಸಂಹರಿಸುತ್ತಾರೆ. ಒಬ್ಬನನ್ನು ಮೃತ್ಯುವಿಗೀಡುಮಾಡಿದವನೂ ಅನ್ಯನೊಬ್ಬನಿಂದ ಮೃತ್ಯುವಶನಾಗುತ್ತಾನೆ. ಒಬ್ಬರು ಮತ್ತೊಬ್ಬರನ್ನು ಕೊಂದರೆಂಬುದು ಕೇವಲ ವ್ಯಾವಹಾರಿಕವಾದ ಸಂಜ್ಞೆಯಾಗಿರುತ್ತದೆ. ತತ್ತ್ವಶಃ ಪರಿಶೀಲಿಸಿದರೆ ಒಬ್ಬನು ಮತ್ತೊಬ್ಬನನ್ನು ಕೊಲ್ಲುವುದೂ ಇಲ್ಲ ; ಒಬ್ಬನು ಮತ್ತೊಬ್ಬನಿಂದ ಕೊಲ್ಲಲ್ಪಡುವುದೂ ಇಲ್ಲ. ಕಾಲವು ಪಕ್ವವಾದೊಡನೆಯೇ ಎಲ್ಲ ಮನುಷ್ಯರೂ ಯಾವುದಾದರೊಂದು ರೀತಿಯಲ್ಲಿ ಕಾಲಾಧೀನರಾಗಿ ಮರಣಹೊಂದುತ್ತಾರೆ.

**ಹನ್ತೀತಿ ಮನ್ಯತೇ ಕಶ್ಚಿನ್ನ ಹನ್ತೀತಿ ಚಾಪರಃ ।**
**ಸ್ವಭಾವತಸ್ತು ನಿಯತೌ ಭೂತಾನಾಂ ಪ್ರಭವಾಪ್ಯಯೌ ॥೧೬॥**

'ಅವನು ಇವನನ್ನು ಕೊಲ್ಲುತ್ತಾನೆ ; ಇವನು ಅವನನ್ನು ಕೊಲ್ಲುತ್ತಾನೆ'–ಎಂದು ಒಬ್ಬನು ಭಾವಿಸುತ್ತಾನೆ. ಮತ್ತೊಬ್ಬನು ಹಾಗೆ ಭಾವಿಸುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಪ್ರಾಣಿಗಳ ಹುಟ್ಟು-ಸಾವುಗಳು ಸ್ವಾಭಾವಿಕವಾಗಿಯೇ ನಿಯತವಾಗಿವೆ.

**ನಷ್ಟೇ ಧನೇ ವಾ ದಾರೇ ವಾ ಪುತ್ರೇ ಪಿತರಿ ವಾ ಮೃತೇ ।**
**ಅಹೋ ದುಃಖಮಿತಿ ಧ್ಯಾಯನ್ದುಃಖಸ್ಯಾಪಚಿತಿಂ ಚರೇತ್ ॥೧೭॥**

ಧನವು ನಷ್ಟವಾಗಿ ಹೋದರೆ, ಪತ್ನಿ-ಪುತ್ರ-ಪಿತೃಗಳೇನಾದರೂ ಮೃತರಾದರೆ–'ಅಯ್ಯೋ! ಎಂತಹ ದುಃಖವು ಪ್ರಾಪ್ತವಾಯಿತು?' ಎಂದು ಚಿಂತಿಸುತ್ತಾ ದುಃಖವನ್ನು ಅನುಕ್ರಮವಾಗಿ ಕಡಿಮೆಮಾಡಿಕೊಳ್ಳಬೇಕು.

**ಸ ಕಿಂ ಶೋಚಸಿ ಮೂಢಃ ಸಞ್ಶೋಚ್ಯಾನ್ಕಿಮನುಶೋಚಸಿ ।**
**ಪಶ್ಯ ದುಃಖೇಷು ದುಃಖಾನಿ ಭಯೇಷು ಚ ಭಯಾನ್ಯಪಿ ॥೧೮॥**

ಆದರೆ ನೀನೀಗ ಮೂಢನಾಗಿ ಶೋಕವನ್ನು ಹೆಚ್ಚಿಸಿಕೊಳ್ಳುತ್ತಿರುವೆ ಯೇಕೆ? ಪತಿಗಳನ್ನೂ–ಪುತ್ರರನ್ನೂ ಕಳೆದುಕೊಂಡಿರುವ, ಶೋಕಪಡಲು ಯೋಗ್ಯರಾದ (ಶೋಚನೀಯರಾದ) ಅಂತಃಪುರಸ್ತ್ರೀಯರನ್ನು ನೋಡಿ ದುಃಖಿಸುತ್ತಲೇ ಇರುವೆಯೇಕೆ? (ನೀನೀಗ ಅವರನ್ನು ಸಂತಯಿಸಬೇಕೇ ಹೊರತು ನೀನೇ ಶೋಕಪಡುತ್ತಾ ಕುಳಿತುಕೊಳ್ಳಬಾರದು. ಇದರ ಫಲಿತಾಂಶವೇನೆಂದರೆ) ದುಃಖಗಳಲ್ಲಿ (ದುಃಖಿಸುತ್ತಲೇ ಇರುವುದರಿಂದ) ದುಃಖಗಳೇ ವರ್ಧಿಸುತ್ತಾ ಹೋಗುತ್ತವೆ. ಭಯಪ್ರಸಂಗಗಳಲ್ಲಿ (ಭಯ ಪಡುತ್ತಲೇ ಇರುವುದರಿಂದ) ಭಯವೇ ಹೆಚ್ಚುತ್ತಾ ಹೋಗುತ್ತದೆ.

(ನೀನೇ ದುಃಖಿಸುತ್ತಿದ್ದರೆ ರಾಜಸ್ತ್ರೀಯರೆಲ್ಲರೂ ತಮ್ಮ ದುಃಖವನ್ನು ಹೆಚ್ಚಿಸಿಕೊಂಡು ತಲೆಗಳನ್ನು ಚಚ್ಚಿಕೊಳ್ಳುವರು. ಅವರ ದುಃಖವು ಅಡಿಗಡಿಗೂ ಹೆಚ್ಚುತ್ತಲೇ ಇರುತ್ತದೆ. ಆದುದರಿಂದ ನೀನೀ ಸಮಯದಲ್ಲಿ ನಿನ್ನ ಮನಸ್ಸನ್ನು ಹತೋಟಿಗೆ ತಂದುಕೊಂಡು ದುಃಖವನ್ನು ದೂರೀಕರಿಸಿ ಇತರರನ್ನು ಸಂತೈಸಬೇಕಾಗಿದೆ. ಅದು ನಿನ್ನ ಕರ್ತವ್ಯವೂ ಆಗಿದೆ. ಭಯಪಟ್ಟುಕೊಂಡು ಕತ್ತಲೆಯ ಕೋಣೆಯೊಳಗೆ ಕಾಲಿಟ್ಟರೆ ಅಲ್ಲಿರುವ ಹಗ್ಗವೂ ಹಾವಿನಂತೆ ಭಾಸವಾಗಿ ಭಯವು ಇಮ್ಮಡಿಯಾಗುತ್ತದೆ. ಆದುದರಿಂದ ದುಃಖ-ಭಯಗಳು ವರ್ಧಿಸಲು ಅವಕಾಶಕೊಡಬಾರದು.)

**ಆತ್ಮಾಪಿ ಚಾಯಂ ನ ಮಮ ಸರ್ವಾಪಿ ಪೃಥಿವೀ ಮಮ ।**
**ಯಥಾ ಮಮ ತಥಾನ್ಯೇಷಾಮಿತಿ ಪಶ್ಯನ್ನ ಮುಹ್ಯತಿ ॥೧೯॥**

'ಈ ಶರೀರವೂ ನನ್ನದಲ್ಲ; ಈ ಕಾರಣದಿಂದಲೇ ಈ ಅಖಂಡ ಭೂಮಂಡಲವೂ ನನ್ನದು ; ಅಂತರ್ಯಾಮಿಯಾದ ಪರಮಾತ್ಮನ ಮೂಲಕ ವಾಗಿ ನಾನು ಸರ್ವತ್ರವ್ಯಾಪ್ತನಾಗಿದ್ದೇನೆ. ಈ ರೀತಿಯಲ್ಲಿ ಈ ಭೂಮಂಡಲವು ನನ್ನದು ಹೇಗೆ ಆಗಿರುವುದೋ ಹಾಗೆಯೇ ಬೇರೆಯವರದೂ ಆಗಿದೆ. ಅಂತರ್ಯಾಮಿಯಾದ ಪರಮಾತ್ಮನು ಸರ್ವತ್ರ ವ್ಯಾಪಿಸಿರುವುದರಿಂದ ಈ ಪ್ರಪಂಚವು ಎಲ್ಲರಿಗೂ ಸೇರಿದ್ದಾಗಿದೆ. ಆದರೆ 'ಶರೀರವು ನನ್ನದು'–ಎಂದು

ಭಾವಿಸಿದರೆ ಈ ಪ್ರಪಂಚವು ಯಾರದೂ ಆಗುವುದಿಲ್ಲ. ಅಧಿಕಾರವು ಏಕದೇಶವಾಗುತ್ತದೆ.' ಈ ವಿಷಯವನ್ನೇ ಜಿಜ್ಞಾಸೆಮಾಡುತ್ತಾ ಹೋದರೆ ಮನುಷ್ಯನು ಭ್ರಾಂತನಾಗುವುದಿಲ್ಲ.

**ಶೋಕಸ್ಥಾನಸಹಸ್ರಾಣಿ ಹರ್ಷಸ್ಥಾನ ಶತಾನಿ ಚ ।**
**ದಿವಸೇ ದಿವಸೇ ಮೂಢಮಾವಿಶನ್ತಿ ನ ಪಣ್ಡಿತಮ್ ॥೨೦॥**

ಶೋಕಪಡಲು ಸಾವಿರಾರು ಕಾರಣಗಳಿರುತ್ತವೆ. ಸಂತೋಷಪಡಲೂ ನೂರಾರು ಕಾರಣಗಳಿರುತ್ತವೆ. ಈ ಸುಖ-ದುಃಖಗಳು ಮೂಢನಾದವನ ಮೇಲೆ ಮಾತ್ರವೇ ಅನುದಿನವೂ ಪ್ರಭಾವವನ್ನು ಬೀರುತ್ತವೆ. ಇಂದು ಸಂತೋಷದಿಂದ ಹಿಗ್ಗುವವನು ಮರುದಿನವೇ ದುಃಖದಿಂದ ಕುಗ್ಗುತ್ತಾನೆ. ಆದರೆ ಇಂತಹ ಸುಖ-ದುಃಖಗಳು ಪಂಡಿತನಾದವನ ಮನಸ್ಸನ್ನು ಪ್ರವೇಶಿಸುವುದಿಲ್ಲ. ( ಪಂಡಿತನಾದವನಿಗೂ ಸುಖ-ದುಃಖಗಳೆಂಬುದು ನಿಯತ ವಾದರೂ ಅವನು ಆ ಎರಡನ್ನೂ ಸಮಾನವಾಗಿ ಭಾವಿಸುತ್ತಾನೆ. ಶ್ರೀಗೀತೆ ಯಲ್ಲಿ ಹೇಳಿದಂತೆ– ' **ಆಗಮಾಪಾಯಿನೋಽನಿತ್ಯಾಃ**'– ಸುಖ-ದುಃಖಗಳು ಆಗಾಗ್ಗೆ ಬಂದು-ಹೋಗತಕ್ಕುವುಗಳೂ ಅನಿತ್ಯಗಳೂ ಆದುದರಿಂದ ಪಂಡಿತನು ಸುಖ-ದುಃಖಗಳ ವಿಷಯದಲ್ಲಿ ಸಮತ್ವದಿಂದಿರುತ್ತಾನೆ. ಅವುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಸುಖದಲ್ಲಿ ಹಿಗ್ಗುವುದೂ ಇಲ್ಲ. ದುಃಖದಲ್ಲಿ ಕುಗ್ಗುವುದೂ ಇಲ್ಲ. ಜೀವನದ ಸುಖ-ದುಃಖಗಳು ಅವನ ಮನಸ್ಸಿನ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡುವುದಿಲ್ಲ. )

**ಏವಮೇತಾನಿ ಕಾಲೇನ ಪ್ರಿಯದ್ವೇಷ್ಯಾಣಿ ಭಾಗಶಃ ।**
**ಜೀವೇಷು ಪರಿವರ್ತನ್ತೇ ದುಃಖಾನಿ ಚ ಸುಖಾನಿ ಚ ॥೨೧॥**

ಹೀಗೆ ಪ್ರಿಯವಾದ ಮತ್ತು ಅಪ್ರಿಯವಾದ ಸುಖ-ದುಃಖಗಳು ಕಾಲಾನುಗುಣವಾಗಿ ಜೀವಿಗಳಲ್ಲಿ ಪ್ರತ್ಯೇಕವಾಗಿ ಪರಿವರ್ತನೆಯನ್ನು ಹೊಂದುತ್ತಲೇ ಇರುತ್ತವೆ.

**ದುಃಖಮೇವಾಸ್ತಿ ನ ಸುಖಂ ತಸ್ಮಾತ್ತದುಪಲಭ್ಯತೇ ।**
**ತೃಷ್ಣಾರ್ತಿಪ್ರಭವಂ ದುಃಖಂ ದುಃಖಾರ್ತಿಪ್ರಭವಂ ಸುಖಮ್ ॥೨೨॥**

ಪ್ರಪಂಚವೆಲ್ಲವೂ ದುಃಖದಿಂದಲೇ ತುಂಬಿಹೋಗಿದೆ. ಈ ಪ್ರಪಂಚದಲ್ಲಿ

ಸುಖವೆಂಬುದೇ ಇಲ್ಲ. ಆದುದರಿಂದಲೇ ಅಡಿಗಡಿಗೂ ದುಃಖವೇ ಪ್ರಾಪ್ತ ವಾಗುತ್ತದೆ. ಕಾರಣವೇನೆಂದರೆ ; ಅತ್ಯಾಶೆಯ ಪೀಡೆಯಿಂದ ಹುಟ್ಟುವುದೇ ದುಃಖ. ದುಃಖವೆಂಬ ಪೀಡೆಯ ವಿನಾಶವೇ ಸುಖ. ಅರ್ಥಾತ್ ಅತ್ಯಾಶೆಯ ಪರಿತ್ಯಾಗವೇ ಸುಖ.

( ಪ್ರಪಂಚವೆಲ್ಲವೂ ಆಸೆಯೆಂಬ ಸಂಕಟದಿಂದ ಪೀಡಿತವಾಗಿದೆ. ಆಸೆ ಯೆಂಬ ಸಂಕೋಲೆಯಿಂದ ಬಂಧಿತವಾಗಿದೆ. ಈ ಆಸೆಗೆ ಮಿತಿಯೇ ಇಲ್ಲ. ಒಂದು ಆಸೆಯು ಕೈಗೂಡಿತೆಂದರೆ ಮತ್ತೊಂದು ಆಸೆಯು ಮೊಳೆಯುತ್ತದೆ. ಆಶಾಪೀಡಿತವಾದ ಮನಸ್ಸಿಗೆ ಸುಖವೆಂಬುದೇ ಇಲ್ಲ. ಯಾವಾಗಲೂ ದುಃಖ ತಪ್ತವಾಗಿಯೇ ಇರುತ್ತದೆ. ತೃಷ್ಣಾ ಎಂಬ ಒಂದು ರೋಗವಿದೆ. ಈ ರೋಗ ಪೀಡಿತರಾದವರು ಯಾವಾಗಲೂ ನೀರುಕುಡಿಯುತ್ತಲೇ ಇರುತ್ತಾರೆ. ಅವರಿಗೆ ಬಾಯಾರಿಕೆ ಇಂಗುವುದೇ ಇಲ್ಲ. ಹೀಗೆಯೇ ಆಸೆಯೆಂಬ ತೃಷ್ಣಾ ಪೀಡಿತನಾದವನಿಗೆ ಯಾವುದರ ಮೇಲಿನ ಆಸೆಯೂ ಕಡಿಮೆಯಾಗುವುದಿಲ್ಲ. ಎಷ್ಟೇ ಐಶ್ವರ್ಯವಿದ್ದರೂ ಭೋಗಗಳಿದ್ದರೂ ತೃಷ್ಣಾಪೀಡಿತನಾದ ಅವನು ದುಃಖಿಯೇ ಆಗಿರುತ್ತಾನೆ. ಈ ವಿಶ್ವವೇ ತೃಷ್ಣಾಪೀಡಿತವಾಗಿದೆ. ಆದುದರಿಂದ ಸುಖವೆಂಬುದೇ ಈ ಲೋಕದಲ್ಲಿಲ್ಲ. ದುಃಖದ ಪೀಡನೆಯಾದರೆ ಅಥವಾ ವಿನಾಶವಾದರೆ ಸುಖವೇನೋ ಲಭಿಸುತ್ತದೆ. ದುಃಖಕ್ಕೆ ಮೂಲವಾದ ತೃಷ್ಣೆಯ ಪೀಡನೆಯಾಗಬೇಕು. ತೃಷ್ಣೆಯ ನಿವಾರಣೆಯಾಗಬೇಕು. ಆಸೆಯನ್ನು ಪೂರ್ಣವಾಗಿ ತ್ಯಜಿಸಬೇಕು. ಆಗಲೇ ಪರಮಸುಖ. (ನೈರಾಶ್ಯಂ ಪರಮಂ ಸುಖಂ.)

**ಸುಖಸ್ಯಾನನ್ತರಂ ದುಃಖಂ ದುಃಖಸ್ಯಾನನ್ತರಂ ಸುಖಮ್ ।**
**ನ ನಿತ್ಯಂ ಲಭತೇ ದುಃಖಂ ನ ನಿತ್ಯಂ ಲಭತೇ ಸುಖಮ್ ॥೨೩॥**

ಸುಖದ ನಂತರ ದುಃಖವು ಪ್ರಾಪ್ತವಾಗುತ್ತದೆ. ದುಃಖದ ನಂತರ ಸುಖವು ಪ್ರಾಪ್ತವಾಗುತ್ತದೆ. ಯಾರೇ ಆದರೂ ಅವಿಚ್ಛಿನ್ನವಾಗಿ ದುಃಖ ವನ್ನಾಗಲೀ–ಅವಿಚ್ಛಿನ್ನವಾಗಿ ಸುಖವನ್ನಾಗಲೀ ಪಡೆಯುವುದಿಲ್ಲ.

**ಸುಖಮೇವ ಹಿ ದುಃಖಾನ್ತಂ ಕದಾಚಿದ್ದುಃಖತಃ ಸುಖಮ್ ।**

**ತಸ್ಮಾದೇತದ್ದ್ವಯಂ ಜಹ್ಯಾದ್ಯ ಇಚ್ಛೇಚ್ಛಾಶ್ವತಂ ಸುಖಮ್ ।**
**ಸುಖಾನ್ತಪ್ರಭವಂ ದುಃಖಂ ದುಃಖಾನ್ತಪ್ರಭವಂ ಸುಖಮ್ ॥೨೪॥**

ಸುಖವು ಕೊನೆಯಲ್ಲಿ ದುಃಖವುಳ್ಳದ್ದೇ ಆಗುತ್ತದೆ. ಸಾಮಾನ್ಯವಾಗಿ ದುಃಖವು ಸುಖದ ಅಂತ್ಯದಲ್ಲೂ–ಸುಖವು ದುಃಖದ ಅಂತ್ಯದಲ್ಲೂ ಪ್ರಾರಂಭವಾಗುತ್ತದೆ. ಸುಖ-ದುಃಖಗಳೆಂಬುವುಗಳು ಅನಿತ್ಯವಾದುವುಗಳು. ಆದುದರಿಂದ ಯಾವನು ಶಾಶ್ವತವಾದ ಆತ್ಮಸುಖವನ್ನು ಇಚ್ಛಿಸುವನೋ ಅಂತಹವನು ಪ್ರಕೃತಿಗೆ ಸಂಬಂಧಿಸಿದ ಸುಖ-ದುಃಖಗಳೆರಡನ್ನೂ ಮನಸ್ಸಿನಿಂದ ದೂರೀಕರಿಸಬೇಕು. ಸುಖ-ದುಃಖಗಳೆರಡೂ ಸಮಾನವೆಂದು ಭಾವಿಸಬೇಕು.

**ಯನ್ನಿಮಿತ್ತೋ ಭವೇಚ್ಛೋಕಸ್ತಾಪೋ ವಾ ಭೃಶದಾರುಣಃ ।**
**ಆಯಾಸೋ ವಾಪಿ ಯನ್ಮೂಲಸ್ತದೇಕಾಙ್ಗಮಪಿ ತ್ಯಜೇತ್ ॥೨೫॥**

ಯಾವ ಕಾರಣದಿಂದ ಶೋಕವು ಪ್ರಾಪ್ತವಾಗಿದೆಯೋ, ಯಾವ ಕಾರಣ ದಿಂದ ದಾರುಣವಾದ ಪರಿತಾಪವುಂಟಾಗಿದೆಯೋ ಮತ್ತು ಯಾವ ಕಾರಣ ದಿಂದ ಆಯಾಸವು ಉಂಟಾಗಿದೆಯೋ–ಅದನ್ನು ಕಿತ್ತುಹಾಕಬೇಕು. ಒಂದು ವೇಳೆ ಶೋಕ-ಪರಿತಾಪಾಯಾಸಗಳು ಶರೀರದ ಅವಯವಗಳಿಂದಲೇ ಸಂಭವಿಸಿದರೂ–ಅಂತಹ ಅಂಗಗಳನ್ನೂ ಕತ್ತರಿಸಿಹಾಕಬೇಕು. (ಹಾಗೆ ಮಾಡದಿದ್ದರೆ ಪ್ರಾಣಕ್ಕೇ ಹಾನಿಯಾಗಬಹುದು.)

(ಈ ಶ್ಲೋಕವನ್ನೇ ಪಾಂಡವರಿಗೆ ಅನ್ವಯಿಸಿ ಹೀಗೆ ವಿವರಿಸ ಬಹುದಾಗಿದೆ. 'ಶೋಕ, ತಾಪ ಮತ್ತು ಆಯಾಸಗಳಿಗೆ ಮೂಲಕಾರಣರಾದ ದುರ್ಯೋಧನಾದಿಗಳನ್ನು ವಿನಾಶಗೊಳಿಸಿದುದು ಸರಿ. ಶೋಕ, ತಾಪ ಮತ್ತು ಆಯಾಸಗಳನ್ನುಂಟುಮಾಡುವ ದೇಹಾಂಗವನ್ನೇ ಕತ್ತರಿಸಿ ಹಾಕುವುದು ಕೆಲವು ಸಮಯಗಳಲ್ಲಿ ಯುಕ್ತವಾಗಿರುವಾಗ ಶೋಕಾಯಾಸಗಳಿಗೆ ಮೂಲಕಾರಣರಾದ ಶತ್ರುಗಳ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಅವರನ್ನು ಸಂಪೂರ್ಣವಾಗಿ ನಿರ್ಮೂಲಮಾಡಬೇಕು. ನೀನು ಹಾಗೆಯೇ ಮಾಡಿರುವೆ. ಅದು ಸಾಧುವಾಗಿಯೇ ಇದೆ. ಅದಕ್ಕಾಗಿ ಈಗ ದುಃಖಿಸುವ ಕಾರಣವಿಲ್ಲ'–ಎಂಬ ಅಭಿಪ್ರಾಯವು ಸೂಚಿತವಾಗುತ್ತದೆ.)

**ಸುಖಂ ವಾ ಯದಿ ವಾ ದುಃಖಂ ಪ್ರಿಯಂ ವಾ ಯದಿ ವಾಪ್ರಿಯಮ್ ।**
**ಪ್ರಾಪ್ತಂ ಪ್ರಾಪ್ತಮುಪಾಸೀತ ಹೃದಯೇನಾಪರಾಜಿತಃ ॥೨೬॥**

ಸುಖವಾಗಲೀ ; ದುಃಖವಾಗಲೀ ; ಪ್ರಿಯವಾಗಲೀ ; ಅಪ್ರಿಯ ವಾಗಲೀ–ನಮ್ಮ ಕರ್ಮಾನುಸಾರವಾಗಿ ಆಯಾ ಸಮಯಗಳಲ್ಲಿ ಪ್ರಾಪ್ತ ವಾಗುವುದೆಲ್ಲವನ್ನೂ ಸಂತೋಷದಿಂದಲೇ ಅನುಭವಿಸಬೇಕು. ದುಃಖವು ಬಂದಾಗ, ಅಪ್ರಿಯವಾದ ಕಾರ್ಯವು ನಡೆದಾಗ, ಮನಸ್ಸಿನಲ್ಲಿ ಪರಾಜಯದ ಶಂಕೆಯನ್ನು ಹೊಂದಬಾರದು. ಧೈರ್ಯದಿಂದ ಎದುರಿಸಬೇಕು.

**ಈಷದಪ್ಯಙ್ಗದಾರಾಣಾಂ ಪುತ್ರಾಣಾಂ ವಾ ಚರಾಪ್ರಿಯಮ್ ।**
**ತತೋ ಜ್ಞಾಸ್ಯಸಿ ಕಃ ಕಸ್ಯ ಕೇನ ವಾ ಕಥಮೇವ ಚ ॥೨೭॥**

ಅಂಗ! ( ಪ್ರಿಯಮಿತ್ರನೇ ) ನಿನ್ನ ಪತ್ನೀ-ಪುತ್ರರಿಗೆ ಸ್ವಲ್ಪಮಾತ್ರವೇ ಅಪ್ರಿಯವನ್ನು ಮಾಡು. ನೀನು ಯಾರು? ಯಾರಿಗೆ ಸೇರಿದವನು? ಯಾರಿಂದ ಇಲ್ಲಿಗೆ ಬಂದಿರುವೆ? ಹೇಗೆ ಬಂದಿರುವೆ?–ಎಂಬುದು ಅರ್ಥವಾಗುತ್ತದೆ. (ಪತ್ನೀ-ಪುತ್ರರಿಗೆ ಅಪ್ರಿಯವಾಗುವುದನ್ನು ಮಾಡಿದರೆ ಅವರು ಸಹಿಸಿಕೊಳ್ಳುವುದಿಲ್ಲ. ಅವರು ನಿನ್ನ ಮೇಲೆ ಅಸಮಾಧಾನಪಟ್ಟುಕೊಳ್ಳುತ್ತಾರೆ. ಹಿಂದೆ ನೀನು ಅವರ ವಿಷಯದಲ್ಲಿ ಎಷ್ಟೇ ಪ್ರೀತಿಯಿಂದಿದ್ದರೂ ಅದು ಅವರ ಮನಸ್ಸಿಗೆ ಬರುವುದೇ ಇಲ್ಲ. ಆದುದರಿಂದ ನೀನು ಎಲ್ಲರಿಗೂ ಪ್ರಿಯವಾದ ಕಾರ್ಯವನ್ನು ಮಾಡಿದರೆ ಎಲ್ಲರೂ ನಿನ್ನನ್ನು ಆದರಿಸುತ್ತಾರೆ. ಅಪ್ರಿಯವಾದ ಕಾರ್ಯವನ್ನು ಮಾಡಿದರೆ ನೀನವರ ಸಂಬಂಧಿಯೇ ಅಲ್ಲವೆಂಬ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಇಲ್ಲಿ ಶ್ರೀಶಂಕರರ ಎರಡು ಶ್ಲೋಕಗಳನ್ನು ಉದ್ಧರಿಸಬಹುದಾಗಿದೆ.

**ಯಾವದ್ವಿತ್ತೋಪಾರ್ಜನಸಕ್ತ-**
**ಸ್ತಾವನ್ನಿಜಪರಿವಾರೋ ರಕ್ತಃ ।**
**ಪಶ್ಚಾಜ್ಜೀವತಿ ಜರ್ಝರ ದೇಹೇ**
**ವಾರ್ತಾಂ ಪೃಚ್ಛತಿ ಕೋಽಪಿ ನ ಗೇಹೇ ॥**

ಎಲ್ಲಿಯವರೆಗೆ ನೀನು ದ್ರವ್ಯ ಸಂಪಾದಿಸಲು ಶಕ್ತನಿರುವೆಯೋ ಅಲ್ಲಿಯ ವರೆಗೆ ನಿನ್ನ ಕುಟುಂಬದಲ್ಲಿಯ ಎಲ್ಲ ಜನರೂ ನಿನ್ನ ಮೇಲೆ ಪ್ರೇಮವಿಡು

ತ್ತಾರೆ. ಮುಪ್ಪಿನ ಕಾಲದಲ್ಲಿ ದೇಹ ಜರ್ಝರಿತವಾದ ಮೇಲೆ ಕುಶಲವಾರ್ತೆಯನ್ನು ಕೂಡ ಯಾರೂ ಕೇಳುವುದಿಲ್ಲ.

**ಕಾ ತೇ ಕಾಂತಾ ಕಸ್ತೇ ಪುತ್ರಃ**
**ಸಂಸಾರೋಽಯಮತೀವ ವಿಚಿತ್ರಃ ।**
**ಕಸ್ಯ ತ್ವಂ ಕಃ ಕುತ ಆಯಾತಃ**
**ತತ್ತ್ವಂ ಚಿಂತಯ ಯದಿಹ ಭ್ರಾತಃ ॥**

ನಿನ್ನ ಹೆಂಡತಿಯು ಯಾರು? ನಿನ್ನ ಮಗನು ಯಾರು? ಈ ಸಂಸಾರವು ಬಹು ವಿಚಿತ್ರವಾದದ್ದು. ನೀನು ಯಾರವನು? ನೀನು ಯಾರು? ಎಲ್ಲಿಂದ ಬಂದೆ? ಸಹೋದರ! ಈ ಎಲ್ಲಾ ವಿಷಯಗಳಲ್ಲಿಯ ಗಹನವಾದ ರಹಸ್ಯವನ್ನು ವಿಚಾರಮಾಡು. ಎಷ್ಟರಮಟ್ಟಿಗೆ ನಿನಗೂ, ಸಂಸಾರಕ್ಕೂ ಸಂಬಂಧವಿದೆ ಯೆಂಬುದನ್ನು ತಿಳಿ. ಮನದಟ್ಟುಮಾಡಿಕೋ.

ವ್ಯಾಖ್ಯಾನಕಾರರು **ಪುತ್ರಾಣಾಂ ಚ ಚರನ್ಪ್ರಿಯಮ್** ಎಂಬ ಪಾಠವನ್ನಿಟ್ಟುಕೊಂಡು ವ್ಯಾಖ್ಯಾನಿಸಿದ್ದಾರೆ. **ಪ್ರಿಯಂ ಆಚರನ್ ಕುರ್ವನ್ ಕೇನ ಹೇತುನಾ** ಯಾವ ಕಾರಣದಿಂದ **ಕಥಂ** ಹೇಗೆ **ಕೇನ ಪ್ರಕಾರೇಣ** ಯಾವ ಪ್ರಕಾರದಿಂದ **ಸಂಬನ್ಧೀತಿ ಜ್ಞಾಸ್ಯಸಿ**–ಸಂಬಂಧಿಯು ನೀನೆಂಬುದನ್ನು ತಿಳಿದುಕೊಳ್ಳುವೆ?–ಪತ್ನೀ-ಪುತ್ರರಿಗೆ ನೀನು ಪ್ರಿಯವನ್ನುಂಟುಮಾಡುತ್ತಿದ್ದರೆ ಅವರೂ ನಿನ್ನನ್ನು ಪತಿ ಅಥವಾ ತಂದೆ ಎಂದು ಗೌರವಿಸುತ್ತಾರೆ ಎಂಬುದು ನಿನಗೆ ಮನವರಿಕೆಯಾಗುತ್ತದೆ–ಎಂಬುದು ಇವರ ವ್ಯಾಖ್ಯಾನದ ತಾತ್ಪರ್ಯವಾಗಿದೆ.)

**ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇಃ ಪರಂ ಗತಾಃ ।**
**ತ ಏವ ಸುಖಮೇಧನ್ತೇ ಮಧ್ಯಮಃ ಕ್ಲಿಶ್ಯತೇ ಜನಃ ॥೨೮॥**

ಅತ್ಯಂತ ಮೂಢರಾದವರು ಮತ್ತು ಬುದ್ಧಿಯ ಪಾರವನ್ನು ಕಂಡವರು (ಆತ್ಮದರ್ಶನವನ್ನು ಮಾಡಿದವರು ) ಇವರಿಬ್ಬರೇ ಈ ಲೋಕದಲ್ಲಿ ಸುಖ ವನ್ನು ಹೊಂದುತ್ತಾರೆ. ಮೂಢರೂ ಆತ್ಮದರ್ಶಿಗಳೂ ಅಲ್ಲದ ಮಧ್ಯವರ್ತಿ ಗಳಾದ ಜನರು ಕ್ಲೇಶಪಡುತ್ತಲೇ ಇರುತ್ತಾರೆ.”

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ :

“ಯುಧಿಷ್ಠಿರ! ಭೂತ-ಭವಿಷ್ಯಗಳನ್ನೂ, ಲೋಕದ ಸುಖ-ದುಃಖ

ಗಳನ್ನೂ ತಿಳಿದ ಮಹಾಪ್ರಾಜ್ಞನಾದ ಧರ್ಮವಿದನಾದ ಸೇನಜಿತನು ಹೀಗೆ ಹೇಳಿದನು.

**ಯೇನ ದುಃಖೇನ ಯೋ ದುಃಖೀ ನ ಸ ಜಾತು ಸುಖೀ ಭವೇತ್ ।**
**ದುಃಖಾನಾಂ ಹಿ ಕ್ಷಯೋ ನಾಸ್ತಿ ಜಾಯತೇ ಹ್ಯಪರಾತ್ಪರಮ್ ॥೨೯॥**

ಯಾವನು ತನಗೆ ಒದಗಿದ ಯಾವುದೋ ದುಃಖದಿಂದ ದುಃಖಶೀಲನಾಗಿಯೇ ಇರುತ್ತಾನೆಯೋ (ದುಃಖವನ್ನು ಧೈರ್ಯದಿಂದ ಸಹಿಸಿಕೊಳ್ಳದೇ ದುಃಖಿಸುತ್ತಲೇ ಇರುತ್ತಾನೆಯೋ)–ಅವನು ಎಂದೆಂದಿಗೂ ಸುಖಿಯಾಗುವುದೇ ಇಲ್ಲ. ತೃಷ್ಣಾಮೂಲವಾದ ದುಃಖಗಳಿಗೆ ಕೊನೆಯೆಂಬುದೇ ಇಲ್ಲ. ಒಂದು ದುಃಖವಾದ ಮೇಲೆ ಮತ್ತೊಂದು ದುಃಖವು ಹುಟ್ಟುತ್ತಲೇ ಇರುತ್ತದೆ.

**ಸುಖಂ ಚ ದುಃಖಂ ಚ ಭವಾಭವೌ ಚ**
**ಲಾಭಾಲಾಭೌ ಮರಣಂ ಜೀವಿತಂ ಚ ।**
**ಪರ್ಯಾಯತಃ ಸರ್ವಮಾವಾಪ್ನುವನ್ತಿ**
**ತಸ್ಮಾದ್ಧೀರೋ ನೈವ ಹೃಷ್ಯೇನ್ನ ಶೋಚೇತ್ ॥೩೦॥**

ಸುಖ-ದುಃಖಗಳನ್ನೂ, ಲಾಭ-ನಷ್ಟಗಳನ್ನೂ, ಜನನ-ಮರಣಗಳನ್ನೂ, ಉತ್ಪತ್ತಿ-ವಿನಾಶಗಳನ್ನೂ ಪರ್ಯಾಯವಾಗಿ ಒಂದಾದ ಮೇಲೆ ಮತ್ತೊಂದರಂತೆ ಮನುಷ್ಯರು ಪಡೆದುಕೊಳ್ಳುತ್ತಲೇ ಇರುತ್ತಾರೆ. ಆದುದರಿಂದ ಈ ದ್ವಂದ್ವಗಳ ವಿಷಯದಲ್ಲಿ ಮನುಷ್ಯನು ಹೃಷ್ಟನಾಗಲೂ ಕೂಡದು ; ಶೋಕಿಸಲೂ ಬಾರದು.

**ದೀಕ್ಷಾಂ ರಾಜ್ಞಃ ಸಂಯುಗೇ ಯುದ್ಧಮಾಹು-**
**ರ್ಯೋಗಂ ರಾಜ್ಯೇ ದಣ್ಡನೀತ್ಯಾಂ ಚ ಸಮ್ಯಕ್ ।**
**ವಿತ್ತತ್ಯಾಗೋ ದಕ್ಷಿಣಾನಾಂ ಚ ಯಜ್ಞೇ**
**ಸಮ್ಯಗ್ದಾನಂ ಪಾವನಾನೀತಿ ವಿದ್ಯಾತ್ ॥೩೧॥**

ಯುಧಿಷ್ಠಿರ! ಕ್ಷತ್ರಿಯರ ಜೀವನಕ್ರಮವೇ ಯಜ್ಞದೀಕ್ಷಿತನ ಯಜ್ಞ ರೂಪದಲ್ಲಿದೆ. ಸಂಗ್ರಾಮಭೂಮಿಯಲ್ಲಿ ಮಾಡುವ ಯುದ್ಧವನ್ನು ಯಾಗ

ದೀಕ್ಷೆ ಎನ್ನುತ್ತಾರೆ. ದಂಡನೀತಿಯಿಂದ ಚೆನ್ನಾಗಿ ರಾಜ್ಯವಾಳುವುದನ್ನೇ ಯೋಗಸಾಧನೆಯೆನ್ನುತ್ತಾರೆ. ಯಜ್ಞಗಳಲ್ಲಿ ಕೊಡುವ ದಕ್ಷಿಣಾ-ದಾನಗಳು ವಿತ್ತತ್ಯಾಗವಾಗುತ್ತವೆ. ಆದುದರಿಂದ ಶತ್ರುಗಳನ್ನು ಜಯಿಸುವುದಕ್ಕಾಗಿ ಯುದ್ಧಮಾಡುವುದು ; ದುಷ್ಟಶಿಕ್ಷಣ-ಶಿಷ್ಟಪರಿಪಾಲನಕ್ಕಾಗಿ ದಂಡನೀತಿಯನ್ನು ವಿವೇಕದಿಂದ ಪ್ರಯೋಗಿಸುವುದು ; ಸರ್ವಮೇಧಾಶ್ವಮೇಧಗಳೇ ಮುಂತಾದ ಯಾಗಗಳನ್ನು ಮಾಡಿ ಹೇರಳವಾಗಿ ದಾನ-ದಕ್ಷಿಣೆಗಳನ್ನು ಕೊಡುವುದು–ಈ ಮೂರು ಕರ್ಮಗಳೂ ಕ್ಷತ್ರಿಯನಿಗೆ ಪವಿತ್ರವಾದ ಕರ್ಮ ಗಳೆಂದು ತಿಳಿಯಬೇಕು.

**ರಕ್ಷನ್ರಾಜ್ಯಂ ಬುದ್ಧಿಪೂರ್ವಂ ನಯೇನ**
**ಸಂತ್ಯಕ್ತಾತ್ಮಾ ಯಜ್ಞಶೀಲೋ ಮಹಾತ್ಮಾ ।**
**ಸರ್ವಾಂಲ್ಲೋಕಾನ್ಧರ್ಮದೃಷ್ಟ್ಯಾ ಚರಂಶ್ಚಾ-**
**ಪ್ಯೂರ್ಧ್ವಂ ದೇಹಾನ್ಮೋದತೇ ದೇವಲೋಕೇ ॥೩೩॥**

ಅಹಂಕಾರ-ಮಮಕಾರಗಳನ್ನು ಬಿಟ್ಟು ಬುದ್ಧಿಪೂರ್ವಕವಾಗಿ ಸುನೀತಿ ಯಿಂದ ರಾಜ್ಯವನ್ನು ಸಂರಕ್ಷಿಸುತ್ತಾ, ಯಜ್ಞಶೀಲನಾಗಿ, ಧರ್ಮವನ್ನು ರಕ್ಷಿಸುವ ದೃಷ್ಟಿಯಿಂದ ಭೂಮಂಡಲದಲ್ಲಿರುವ ಎಲ್ಲ ದೇಶಗಳನ್ನೂ ಸಂಚರಿಸುತ್ತಾ (ಪ್ರಜೆಗಳೆಲ್ಲರನ್ನೂ ಧರ್ಮದೃಷ್ಟಿಯಿಂದ ನೋಡುತ್ತಾ ) ಇರುವ ಮಹಾತ್ಮನಾದ ರಾಜನು ದೇಹಾವಸಾನಾನಂತರದಲ್ಲಿ ದೇವಲೋಕಕ್ಕೆ ಹೋಗಿ ಅಲ್ಲಿ ಆನಂದಿಸುತ್ತಾನೆ.

**ಜಿತ್ವಾ ಸಂಗ್ರಾಮಾನ್ಪಾಲಯಿತ್ವಾ ಚ ರಾಷ್ಟ್ರಂ**
**ಸೋಮಂ ಪೀತ್ವಾ ವರ್ಧಯಿತ್ವಾ ಪ್ರಜಾಶ್ಚ ।**
**ಯುಕ್ತ್ಯಾ ದಣ್ಡಂ ಧಾರಯಿತ್ವಾ ಪ್ರಜಾನಾಂ**
**ಯುದ್ಧೇ ಕ್ಷೀಣೋ ಮೋದತೇ ದೇವಲೋಕೇ ॥೩೪॥**

ಯುದ್ಧಗಳಲ್ಲಿ ಶತ್ರುಗಳನ್ನು ಜಯಿಸಿ, ರಾಷ್ಟ್ರವನ್ನು ಧರ್ಮದಿಂದ ಪರಿಪಾಲನೆಮಾಡುತ್ತಾ, ಯಜ್ಞಗಳಲ್ಲಿ ಸೋಮರಸವನ್ನು ಪಾನಮಾಡುತ್ತಾ, ಮಕ್ಕಳನ್ನು ಪಡೆದು ಅವರನ್ನು ಸಂವರ್ಧನೆ ಮಾಡುತ್ತಾ, ದಂಡನೀತಿಯನ್ನು ಯುಕ್ತಿಪೂರ್ವಕವಾಗಿ ಉಪಯೋಗಿಸುತ್ತಾ, ಪ್ರಜೆಗಳ ಧಾರಣ-ಪೋಷಣೆ

ಗಳನ್ನು ಮಾಡುತ್ತಾ–ಕಟ್ಟಕಡೆಗೆ ಯುದ್ಧದಲ್ಲಿಯೇ ಪ್ರಾಣತ್ಯಾಗಮಾಡುವವನು ದೇವಲೋಕದಲ್ಲಿ ಆನಂದಪಡುತ್ತಾನೆ.

ಸಮ್ಯಗ್ವೇದಾನ್ಪ್ರಾಪ್ಯ ಶಾಸ್ತ್ರಾಣ್ಯಧೀತ್ಯ
ಸಮ್ಯಗ್ರಾಜ್ಯಂ ಪಾಲಯಿತ್ವಾ ಚ ರಾಜಾ ।
ಚಾತುರ್ವರ್ಣ್ಯಂ ಸ್ಥಾಪಯಿತ್ವಾ ಸ್ವಧರ್ಮೇ
ಪೂತಾತ್ಮಾ ವೈ ಮೋದತೇ ದೇವಲೋಕೇ ॥೩೫॥

ವೇದಗಳನ್ನೂ ಮತ್ತು ಶಾಸ್ತ್ರಗಳನ್ನೂ ಚೆನ್ನಾಗಿ ಅಧ್ಯಯನಮಾಡಿ, ರಾಜ್ಯವನ್ನು ಚೆನ್ನಾಗಿ ಪರಿಪಾಲನೆಮಾಡುತ್ತಾ, ನಾಲ್ಕು ವರ್ಣದವರನ್ನೂ ಅವರವರ ಧರ್ಮದಲ್ಲಿಯೇ ನಿಷ್ಠೆಯಿಂದ ಇರುವಂತೆ ವ್ಯವಸ್ಥೆಗೊಳಿಸುವ ರಾಜನು ಪವಿತ್ರಾತ್ಮನಾಗಿ ಅವಸಾನಾನಂತರದಲ್ಲಿ ದೇವಲೋಕದಲ್ಲಿ ಆನಂದ ಪಡುತ್ತಾನೆ.

ಯಸ್ಯ ವೃತ್ತಂ ನಮಸ್ಯನ್ತಿ ಸ್ವರ್ಗಸ್ಥಸ್ಯಾಪಿ ಮಾನವಾಃ ।
ಪೌರಜಾನಪದಾಮಾತ್ಯಾಃ ಸ ರಾಜಾ ರಾಜಸತ್ತಮಃ ॥೩೬॥

ಸ್ವರ್ಗಸ್ಥನಾದ ಮೇಲೆಯೂ ಯಾವ ರಾಜನ ಸದಾಚಾರಸಂಪನ್ನತೆಯನ್ನು ನಗರಗಳಲ್ಲಿರುವ ಮತ್ತು ಹಳ್ಳಿಗಳಲ್ಲಿರುವ ಜನರೂ, ಅಮಾತ್ಯರೂ ನಮಸ್ಕರಿಸುತ್ತಾರೆಯೋ ( ಹಾಡಿ-ಹೊಗಳುತ್ತಾರೆಯೋ ), ಆ ರಾಜನೇ ರಾಜಶ್ರೇಷ್ಠನೆನಿಸಿಕೊಳ್ಳುತ್ತಾನೆ."

೨೫ನೆಯ ಅಧ್ಯಾಯವು ಮುಗಿಯಿತು.

೨೬ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಸರ್ವತ್ಯಾಗದ ಮಹತ್ತ್ವವನ್ನೇ ಪುನಃ ಪ್ರತಿಪಾದಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಉದಾರಬುದ್ಧಿಯವನಾದ ಯುಧಿಷ್ಠಿರನು ಈ ಪ್ರಸಂಗದಲ್ಲಿಯೇ ಅರ್ಜುನನನ್ನು ಕಂಡು ಯುಕ್ತಿಯುಕ್ತವಾದ ಈ ಮಾತನ್ನು ಹೇಳಿದನು :

**ಯದೇತನ್ಮನ್ಯಸೇ ಪಾರ್ಥ ನ ಜ್ಯಾಯೋಽಸ್ತಿ ಧನಾದಿತಿ ।**
**ನ ಸ್ವರ್ಗೋ ನ ಸುಖಂ ನಾರ್ಥೋ ನಿರ್ಧನಸ್ಯೇತಿ ತನ್ಮೃಷಾ ॥೨॥**

"ಅರ್ಜುನ! ನೀನು 'ಧನಕ್ಕಿಂತಲೂ ಹೆಚ್ಚಿನದು ಯಾವುದೂ ಇಲ್ಲ ; ಧನವಿಲ್ಲದವನಿಗೆ ಸ್ವರ್ಗವೂ ಇಲ್ಲ ; ಸುಖವೂ ಇಲ್ಲ ; ಪುರುಷಾರ್ಥವೂ ಇಲ್ಲ'–ಎಂದು ಭಾವಿಸಿರುವೆಯಲ್ಲವೇ? ಅದು ಸುಳ್ಳು. ಸುಖಪ್ರಾಪ್ತಿಗೆ, ಸ್ವರ್ಗ ಪ್ರಾಪ್ತಿಗೆ, ಪುರುಷಾರ್ಥಸಾಧನೆಗೆ ಧನದ ಅವಶ್ಯಕತೆಯೇ ಇಲ್ಲ.

**ಸ್ವಾಧ್ಯಾಯಯಜ್ಞಸಂಸಿದ್ಧಾ ದೃಶ್ಯನ್ತೇ ಬಹವೋ ಜನಾಃ ।**
**ತಪೋರತಾಶ್ಚ ಮುನಯೋ ಯೇಷಾಂ ಲೋಕಾಃ ಸನಾತನಾಃ ॥೩॥**

ಎಷ್ಟೋ ಜನರು ಸ್ವಾಧ್ಯಾಯಯಜ್ಞದಿಂದಲೇ ( ವೇದಗಳ ಅಧ್ಯಯನ ಮತ್ತು ಅಧ್ಯಾಪನಗಳಿಂದಲೇ ) ಸಿದ್ಧಿಯನ್ನು ಪಡೆದಿರುವುದನ್ನು ನಾವು ಕಂಡಿದ್ದೇವೆ. ತಪೋನಿಷ್ಠರಾದ ಅನೇಕಮುನಿಗಳೂ ಸನಾತನವಾದ ಪುಣ್ಯ ಲೋಕಗಳನ್ನು ಪಡೆದುಕೊಂಡಿರುತ್ತಾರೆ. ( ಸ್ವಾಧ್ಯಾಯಯಜ್ಞನಿಷ್ಠರಾದ ಬ್ರಾಹ್ಮಣರೂ–ತಪಸ್ಸಿನಲ್ಲಿಯೇ ನಿರತರಾದ ಮುನಿಗಳೂ ನಿರ್ಧನರೇ ಅಲ್ಲವೇ? )

**ಋಷೀಣಾಂ ಸಮಯಂ ಶಶ್ವದ್ಯೇ ರಕ್ಷನ್ತಿ ಧನಂಜಯ ।**
**ಆಶ್ರಿತಾಃ ಸರ್ವಧರ್ಮಜ್ಞಾದೇವಾಸ್ತಾನ್ಬ್ರಾಹ್ಮಣಾನ್ವಿದುಃ ॥೪॥**

ಧನಂಜಯ! ಸರ್ವಧರ್ಮಗಳನ್ನೂ ತಿಳಿದುಕೊಂಡಿರುವ ಯಾವ ಮಾನವರು ಬ್ರಹ್ಮಚರ್ಯವನ್ನು ಆಶ್ರಯಿಸಿ, ಋಷಿಗಳ ಅಧ್ಯಯನಸಂಪ್ರದಾಯವನ್ನು ಯಥಾವತ್ತಾಗಿ ರಕ್ಷಿಸಿಕೊಂಡು ಬರುತ್ತಾರೆಯೋ–ಅವರನ್ನೇ ದೇವತೆಗಳು ಬ್ರಾಹ್ಮಣರನ್ನಾಗಿ ತಿಳಿಯುತ್ತಾರೆ.

**ಸ್ವಾಧ್ಯಾಯನಿಷ್ಠಾನ್ಹಿ ಋಷೀನ್ ಜ್ಞಾನನಿಷ್ಠಾಂಸ್ತಥಾಪರಾನ್ ।**
**ಬುದ್ಧ್ಯೇಥಾಃ ಸತತಂ ಚಾಪಿ ಧರ್ಮನಿಷ್ಠಾನ್ಧನಂಜಯ ॥೫॥**

ಅರ್ಜುನ! ಮುನಿಗಳಲ್ಲಿ ಕೆಲವರು ವೇದ-ಶಾಸ್ತ್ರಗಳ ಅಧ್ಯಯನಾಧ್ಯಾಪನಗಳಲ್ಲಿಯೇ ನಿಷ್ಠರಾಗಿರುತ್ತಾರೆ. ಕೆಲವರು ಜ್ಞಾನೋಪಾರ್ಜನೆಯಲ್ಲಿಯೇ ನಿಷ್ಠರಾಗಿರುತ್ತಾರೆ. ಅವರೆಲ್ಲರೂ ಸತತವಾಗಿ ಧರ್ಮಪಾಲನೆಯಲ್ಲಿಯೇ ನಿಷ್ಠೆಯುಳ್ಳವರಾಗಿರುವರೆಂಬುದನ್ನು ನೀನು ತಿಳಿಯಬೇಕು.

**ಜ್ಞಾನನಿಷ್ಠೇಷು ಕಾರ್ಯಾಣಿ ಪ್ರತಿಷ್ಠಾಪ್ಯಾನಿ ಪಾಣ್ಡವ ।**
**ವೈಖಾನಸಾನಾಂ ವಚನಂ ಯಥಾ ನೋ ವಿದಿತಂ ಪ್ರಭೋ ॥೬॥**

ಪಾಂಡುನಂದನ! ನಮಗೆ ತಿಳಿದಿರುವಂತೆ ಜ್ಞಾನನಿಷ್ಠರಾದವರಿಗೆ (ಆತ್ಮಜ್ಞಾನಿಗಳಿಗೆ ) ರಾಜ್ಯಾಡಳಿತಕಾರ್ಯವನ್ನು ಒಪ್ಪಿಸಬೇಕೆಂಬುದು ವೈಖಾನಸರ ಅಭಿಮತವಾಗಿದೆ.

ಅಜರು, ಪೃಶ್ನಿಗಳು, ಸಿಕತರು, ಅರುಣರು, ಕೇತುಗಳು–ಈ ಋಷಿ ಗಳೆಲ್ಲರೂ ಸ್ವಾಧ್ಯಾಯಯಜ್ಞದಲ್ಲಿಯೇ ನಿರತರಾಗಿದ್ದು ತತ್ಫಲವಾಗಿ ಅವಸಾನಾನಂತರದಲ್ಲಿ ಸ್ವರ್ಗಕ್ಕೆ ಹೋಗಿರುತ್ತಾರೆ. ದಾನ, ಅಧ್ಯಯನ, ಯಜ್ಞ, ಇಂದ್ರಿಯನಿಗ್ರಹ–ಇವುಗಳು ಆಚರಿಸಲು ಬಹಳ ಕಠಿಣವಾದ ಕರ್ಮಗಳು. ವೇದೋಕ್ತವಾದ ಈ ಕರ್ಮಗಳನ್ನು ಮಾಡಿ ಅನೇಕಗೃಹಸ್ಥರು ದಕ್ಷಿಣಾಯನಮಾರ್ಗದಿಂದ ( ಸೂರ್ಯನ ಮಾರ್ಗದ ದಕ್ಷಿಣಭಾಗದಿಂದ ) ಸ್ವರ್ಗಕ್ಕೆ ಹೋಗಿರುತ್ತಾರೆ. ವೇದೋಕ್ತಕರ್ಮಗಳನ್ನು ಮಾಡಿದವರಿಗೆ ಯಾವ-ಯಾವ ಪುಣ್ಯಲೋಕಗಳು ಲಭಿಸುತ್ತವೆಯೆಂಬುದನ್ನು ನಾನು ಈ ಹಿಂದೆಯೇ ಹೇಳಿದ್ದೇನೆ. ನೀನು ನಿಯಮಾನುಷ್ಠಾನದಲ್ಲಿರುವುದರಿಂದ ಯಾವ ಉತ್ತರಾಯಣಮಾರ್ಗಗಳನ್ನು ( ಸೂರ್ಯನ ಮಾರ್ಗದ ಉತ್ತರ ಭಾಗದ ಮಾರ್ಗಗಳನ್ನು ) ನೋಡುತ್ತಿರುವೆಯೋ–ಆ ಮಾರ್ಗಗಳು ಜ್ಞಾನಯಜ್ಞವನ್ನು ಮಾಡುವವರ ಮಾರ್ಗಗಳಾಗಿವೆ. ಸನಾತನವಾದ ಆ ಮಾರ್ಗಗಳು ಅತ್ಯಂತಪ್ರಕಾಶಮಾನವಾಗಿವೆ. ಹಿಂದಿನ ಇತಿಹಾಸವನ್ನು ತಿಳಿದವರು ಉತ್ತರಾಯಣಮಾರ್ಗವನ್ನು ಪ್ರಶಂಸೆಮಾಡುತ್ತಾರೆ. ( ಉತ್ತರಾಯಣ ಮಾರ್ಗಗಳಲ್ಲಿ ಆನಂದವು ಲಭಿಸುತ್ತದೆ. ) ಆ ಸಂತೋಷವೇ ( ಆತ್ಮಾ ನಂದವೇ ) ಸ್ವರ್ಗತಮವಾಗಿರುತ್ತದೆ. ಆ ಆತ್ಮಾನಂದವೇ ಪರಮಸುಖ ವಾಗಿರುತ್ತದೆ.

**ತುಷ್ಟೇರ್ನ ಕಿಞ್ಚಿತ್ಪರಮಂ ಸಾ ಸಮ್ಯಕ್ಪ್ರತಿತಿಷ್ಠತಿ ।**
**ವಿನೀತಕ್ರೋಧಹರ್ಷಸ್ಯ ಸತತಂ ಸಿದ್ಧಿರುತ್ತಮಾ ॥೧೨॥**

ಕ್ರೋಧ-ಹರ್ಷಗಳೆರಡನ್ನೂ ಜಯಿಸಿರುವವನಿಗೆ ತುಷ್ಟಿಗಿಂತಲೂ (ಆತ್ಮಾನಂದಕ್ಕಿಂತಲೂ ) ಅಧಿಕವಾದುದು ಮತ್ತಾವುದೂ ಇಲ್ಲ. ಆನಂದವು

ಹೃದಯಗುಹೆಯಲ್ಲಿ ಪ್ರತಿಷ್ಠಿತವಾಗಿರುತ್ತದೆ. ಆತ್ಮಾನಂದದ ಸಿದ್ಧಿಯೇ ಎಲ್ಲಕ್ಕಿಂತಲೂ ಉತ್ತಮವಾದ ಸಿದ್ಧಿಯು.

ಈ ವಿಷಯದಲ್ಲಿ ಯಯಾತಿಯು ಹೇಳಿದ ಶ್ಲೋಕಗಳನ್ನು ಉದಾಹರಿಸುತ್ತಾರೆ. ಆ ಗೀತಗಳಲ್ಲಿ ಹೇಳಿರುವ ಅನುಷ್ಠಾನಗಳಿಂದ–ಆಮೆಯು ತನ್ನ ಎಲ್ಲ ಅಂಗಗಳನ್ನೂ ಒಳಕ್ಕೆ ಸೆಳೆದುಕೊಳ್ಳುವಂತೆ–ಮನುಷ್ಯನು ಇಂದ್ರಿಯಗಳನ್ನು ವಿಷಯಗಳಿಂದ ಹಿಂದಿರುಗಿಸಿ ಒಳಕ್ಕೆ ಸೆಳೆದುಕೊಳ್ಳುತ್ತಾನೆ.

**ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ ।**
**ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಮ್ಪದ್ಯತೇ ತದಾ ॥೧೪॥**

ಯಾವಾಗ ಮನುಷ್ಯನು (ಅಧ್ಯಾತ್ಮಸಾಧಕನು) ಯಾರಿಗೂ ಭಯ ಪಡುವುದಿಲ್ಲವೋ, ಇವನಿಂದ ಯಾರಿಗೂ ಭಯವಾಗುವುದಿಲ್ಲವೋ, ಯಾವಾಗ ಯಾವುದನ್ನೂ ಇಚ್ಛಿಸುವುದಿಲ್ಲವೋ ಮತ್ತು ಯಾರನ್ನೂ ದ್ವೇಷಿಸುವುದಿಲ್ಲವೋ–ಆಗ ಅವನು ಬ್ರಹ್ಮಭಾವವನ್ನು ಹೊಂದುತ್ತಾನೆ.

**ಯದಾ ನ ಭಾವಂ ಕುರುತೇ ಸರ್ವಭೂತೇಷು ಪಾಪಕಮ್ ।**
**ಕರ್ಮಣಾ ಮನಸಾ ವಾಚಾ ಬ್ರಹ್ಮ ಸಮ್ಪದ್ಯತೇ ತದಾ ॥೧೫॥**

ಸಾಧಕನು ಕಾರ್ಯದಿಂದಾಗಲೀ, ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ–ಸರ್ವಪ್ರಾಣಿಗಳಲ್ಲಿಯೂ ಯಾವಾಗ ಪಾಪಭಾವವನ್ನು ಹೊಂದುವುದಿಲ್ಲವೋ (ವಿಶ್ವದಲ್ಲಿರುವ ಯಾವ ಪ್ರಾಣಿಗೇ ಆಗಲೀ ಕೇಡನ್ನು ಬಯಸುವುದಿಲ್ಲವೋ) ಆಗ ಬ್ರಹ್ಮಭಾವವನ್ನು ಹೊಂದುತ್ತಾನೆ.

**ವಿನೀತಮಾನಮೋಹಶ್ಚ ಬಹುಸಙ್ಗವಿವರ್ಜಿತಃ ।**
**ತದಾತ್ಮಜ್ಯೋತಿಷಃ ಸಾಧೋರ್ನಿರ್ವಾಣಮುಪಪದ್ಯತೇ ॥೧೬॥**

ಯಾವನಿಗೆ ಮಾನ-ಮೋಹಗಳು ದೂರವಾಗಿರುವುವೋ, ನಾನಾ ವಿಧವಾದ ಆಸಕ್ತಿಗಳನ್ನು ಯಾವನು ತೊರೆದಿರುವನೋ, ಯಾವಾಗ ಆತ್ಮಜ್ಞಾನವನ್ನು ಹೊಂದುವನೋ–ಆಗ ಆ ಸಾಧುವು ಮೋಕ್ಷವನ್ನು ಹೊಂದುತ್ತಾನೆ.

ಅರ್ಜುನ! ನಾನು ಹೇಳುವುದನ್ನು ಇಂದ್ರಿಯಗಳನ್ನು ಸಂಯಮ

ಮಾಡಿ ಏಕಾಗ್ರತೆಯಿಂದ ಕೇಳು. ಕೆಲವರು ಧರ್ಮಿಷ್ಠರಾಗಿರಬೇಕೆಂದು ಪ್ರಯತ್ನಿಸುತ್ತಾರೆ. ಕೆಲವರು ಸದಾಚಾರಿಗಳಾಗಿರಬೇಕೆಂದು ಯತ್ನಪಡುತ್ತಾರೆ. ಕೆಲವರು ಅಪಾರವಾದ ಧನವನ್ನು ಸಂಗ್ರಹಿಸಬೇಕೆಂಬ ಧಾವಂತದಲ್ಲಿರುತ್ತಾರೆ.

**ಧನಹೇತೋರ್ಯ ಈಹೇತ ತಸ್ಯಾನೀಹಾ ಗರೀಯಸೀ ।**
**ಭೂಯಾನ್ದೋಷೋ ಹಿ ವಿತ್ತಸ್ಯ ಯಶ್ಚ ಧರ್ಮಸ್ತದಾಶ್ರಯಃ ॥೧೮॥**

ಧನದ ಸಲುವಾಗಿಯೇ (ಹಣವನ್ನು ಕೂಡಿಡುವ ಸಲುವಾಗಿಯೇ) ಯಾವನು ಹಣವನ್ನು ಸಂಪಾದಿಸಲು ಪ್ರಯತ್ನಿಸುತ್ತಾನೆಯೋ ಅವನಿಗೆ ಹಣವನ್ನು ಬಯಸದಿರುವುದೇ ಶ್ರೇಯಸ್ಕರವಾಗಿರುತ್ತದೆ. ಏಕೆಂದರೆ : ವಿತ್ತ, ವಿತ್ತವನ್ನೇ ಆಶ್ರಯಿಸಿರುವ ಧರ್ಮ–ಇವೆರಡೂ ಅತ್ಯಂತದೋಷಯುಕ್ತವೇ ಆಗಿವೆ.

ನಾನಿದನ್ನು ಪ್ರತ್ಯಕ್ಷವಾಗಿಯೇ ಕಾಣುತ್ತಿದ್ದೇನೆ. ನೀನೂ ಅದನ್ನು ಕಾಣಬಹುದು.

**ವರ್ಜನಂ ವರ್ಜನೀಯಾನಾಮೀಹಮಾನೇನ ದುಷ್ಕರಮ್ ॥೧೯॥**

ಧನದ ಆರ್ಜನೆಯಲ್ಲಿಯೇ ತೊಡಗಿರುವ ಮನುಷ್ಯರಿಗೆ ಮಾಡಬಾರದುದನ್ನು ಬಿಟ್ಟುಬಿಡಲು ಖಂಡಿತವಾಗಿಯೂ ಸಾಧ್ಯವಾಗುವುದಿಲ್ಲ.

**ಯೇ ವಿತ್ತಮಭಿಪದ್ಯನ್ತೇ ಸಮ್ಯಕ್ತ್ವಂ ತೇಷು ದುರ್ಲಭಮ್ ।**
**ದ್ರುಹ್ಯತಃ ಪ್ರೈತಿ ತತ್ಪ್ರಾಹುಃ ಪ್ರತಿಕೂಲಂ ಯಥಾತಥಮ್ ॥೨೦॥**

ಯಾರು ಹಣದ ಬೆನ್ನಟ್ಟಿ ಹೋಗುತ್ತಾರೆಯೋ, ಅವರಲ್ಲಿ ಸಾಧುತ್ವವಿರುವುದೇ ಇಲ್ಲ. ಏಕೆಂದರೆ : ಹಣವು ಯಾವಾಗಲೂ ದ್ರೋಹಮಾಡುವವನಿಗೇ ಲಭಿಸುವುದೆಂದು ವಿದ್ವಾಂಸರು ಹೇಳುತ್ತಾರೆ. ಹಾಗೆ ಸಂಪಾದಿಸಿದ ಧನವು ಕಾಲಕ್ರಮೇಣ ಪ್ರತಿಕೂಲವೇ ಆಗುತ್ತದೆ.

**ಯಸ್ತು ಸಮ್ಭಿನ್ನವೃತ್ತಸ್ಯಾದ್ವೀತಶೋಕಭಯೋ ನರಃ ।**
**ಅಲ್ಪೇನ ತೃಷಿತೋ ದ್ರುಹ್ಯನ್ಭ್ರೂಣಹತ್ಯಾಂ ನ ಬುಧ್ಯತೇ ॥೨೧॥**

ಶೋಕ-ಭಯಗಳಿಂದ ರಹಿತನಾಗಿದ್ದರೂ ಮನುಷ್ಯನು ಅಲ್ಪವಾದ

ಧನದಾಸೆಯಿಂದ, ಸದಾಚಾರದಿಂದ ಭ್ರಷ್ಟನಾಗಿ, ಮತ್ತೊಬ್ಬರಿಗೆ ದ್ರೋಹ ವನ್ನೆಸಗುತ್ತಾನೆ. ಅಂತಹವನು ಭ್ರೂಣಹತ್ಯಾಪಾಪವನ್ನೂ ಲಕ್ಷ್ಯಕ್ಕೆ ತೆಗೆದುಕೊಳ್ಳುವುದಿಲ್ಲ. ( ಹಣಕ್ಕಾಗಿ ಮತ್ತೊಬ್ಬರಿಗೆ ದ್ರೋಹಮಾಡುವವನು ಮಾಡದಿರುವ ಪಾಪವೇ ಇಲ್ಲ. ಧನವು ಲಭಿಸುವುದೆಂದರೆ ಭ್ರೂಣಹತ್ಯೆ-ಬ್ರಹ್ಮಹತ್ಯೆ-ಸ್ತ್ರೀಹತ್ಯೆ-ಶಿಶುಹತ್ಯೆಗಳನ್ನೂ ನಿಸ್ಸಂಕೋಚವಾಗಿ ಮಾಡುತ್ತಾನೆ. )

**ದುಷ್ಯನ್ತ್ಯಾದದತೋ ಭೃತ್ಯಾ ನಿತ್ಯಂ ದಸ್ಯುಭಯಾದಿವ ।**
**ದುರ್ಲಭಂ ಚ ಧನಂ ಪ್ರಾಪ್ಯ ಭೃಶಂ ದತ್ತ್ವಾನುತಪ್ಯತೇ ॥೨೨॥**

ಭೃತ್ಯರು ತಮ್ಮ ವೇತನವನ್ನು ಕಾಲ-ಕಾಲಕ್ಕೆ ಪಡೆದುಕೊಳ್ಳುತ್ತಿದ್ದರೂ ತೃಪ್ತಿಹೊಂದದೇ ಯಜಮಾನನ ವಿಷಯದಲ್ಲಿ ತಪ್ಪನ್ನೇ (ದ್ರೋಹವನ್ನೇ ) ಮಾಡುತ್ತಾರೆ. ಇದಕ್ಕೆ ಪ್ರತಿಯಾಗಿ ಸುದುರ್ಲಭವಾದ (ಸುಲಭವಾಗಿ ಸಿಕ್ಕದ ) ಧನವನ್ನು ಸಂಪಾದಿಸಿರುವ ಯಜಮಾನನು, ಕಾಡಿ-ಬೇಡಿ-ಬೊಬ್ಬೆಹೊಡೆಯುವ ಭೃತ್ಯರಿಗೆ ಧನವನ್ನು ಕೊಟ್ಟು, ಬಳಿಕ- ಕಳ್ಳಕಾಕರಿಗೆ ಹೆದರಿ ಹಣಕೊಟ್ಟವನಂತೆ–ಬಹಳವಾಗಿ ಸಂಕಟಪಡುತ್ತಾನೆ.

**ಅಧನಃ ಕಸ್ಯ ಕಿಂ ವಾಚ್ಯೋ ವಿಮುಕ್ತಃ ಸರ್ವಶಃ ಸುಖೀ ।**
**ದೇವಸ್ವಮುಪಗೃಹ್ಯೈವ ಧನೇನ ನ ಸುಖೀ ಭವೇತ್ ॥೨೩॥**

ನಿರ್ಧನನಾದವನ ವಿಷಯದಲ್ಲಿ ಯಾರು ಏನು ಹೇಳುತ್ತಾರೆ? ಅವನನ್ನು ಯಾರೂ ಯಾವ ಕಾರಣದಿಂದಲೂ ನಿಂದಿಸಹೋಗುವುದಿಲ್ಲ. ಅವನು ಎಲ್ಲ ವಿಧವಾದ ಭಯಗಳಿಂದಲೂ ಮುಕ್ತನಾಗಿ ಸುಖವಾಗಿರುತ್ತಾನೆ. ದೇವತೆಗಳ ಸ್ವತ್ತಾದ ಧನವನ್ನು ಸಂಗ್ರಹಿಸಿದರೂ ಅದನ್ನು ಮನುಷ್ಯನು ಸ್ವಸುಖಕ್ಕಾಗಿ ಉಪಯೋಗಿಸಬಾರದು. ಧನವು ಮನುಷ್ಯನಿಗೆ ಸುಖವನ್ನು ಕೊಡುವುದಿಲ್ಲ.

ಈ ವಿಷಯದಲ್ಲಿ ಯಜ್ಞದ ಋತ್ವಿಜರಿಂದ ಹೇಳಲ್ಪಟ್ಟಿರುವ, ಮೂರು ವೇದಗಳನ್ನೇ ಆಧರಿಸಿ ಹೇಳಿರುವ, ಯಜ್ಞಪ್ರತಿಷ್ಠೆಯನ್ನು ಉಲ್ಲೇಖಿಸಿರುವ ಯಜ್ಞಗೀತಾಶ್ಲೋಕವನ್ನು ಪೂರ್ವೇತಿಹಾಸವನ್ನು ತಿಳಿದಿರುವ ಜನರು ಸಂಕೀರ್ತನೆಮಾಡಿದ್ದಾರೆ.

**ಯಜ್ಞಾಯ ಸೃಷ್ಟಾನಿ ಧನಾನಿ ಧಾತ್ರಾ**
**ಯಜ್ಞಾಯ ಸೃಷ್ಟಃ ಪುರುಷೋ ರಕ್ಷಿತಾ ಚ ।**
**ತಸ್ಮಾತ್ಸರ್ವಂ ಯಜ್ಞ ಏವೋಪಯೋಜ್ಯಂ**
**ಧನಂ ನ ಕಾಮಾಯಾ ಹಿತಂ ಪ್ರಶಸ್ತಮ್ ॥೨೫॥**

ಯಜ್ಞಮಾಡಲು ಉಪಯೋಗಿಸುವ ಸಲುವಾಗಿಯೇ ಬ್ರಹ್ಮನು ಧನಗಳನ್ನು ಸೃಷ್ಟಿಸಿರುವನು. ಯಜ್ಞವನ್ನು ರಕ್ಷಣೆಮಾಡುವ ಸಲುವಾಗಿಯೇ ಪುರುಷನನ್ನು ಸೃಷ್ಟಿಸಿದನು. ಆದುದರಿಂದ ಸಂಪಾದಿಸಿದ ಧನವೆಲ್ಲವನ್ನೂ ಯಜ್ಞದಲ್ಲಿಯೇ ವಿನಿಯೋಗಿಸಬೇಕು. ಯಜ್ಞಕ್ಕೆ ಉಪಯೋಗಿಸಬೇಕಾದ ಧನವನ್ನು ಕಾಮೋಪಭೋಗಗಳಿಗಾಗಿ ವಿನಿಯೋಗಿಸುವುದು ಹಿತವೂ ಅಲ್ಲ; ಪ್ರಶಸ್ತವೂ ಅಲ್ಲ. ಧನವಂತರಲ್ಲಿ ಶ್ರೇಷ್ಠನಾದ ಧನಂಜಯನೇ! ಆದುದರಿಂದ ಬ್ರಹ್ಮನು ಮನುಷ್ಯನ ( ಪ್ರಯತ್ನದ ಫಲವಾಗಿ ) ಸ್ವಾರ್ಥಕ್ಕಾಗಿಯೂ ಯಾವ ಧನವನ್ನೂ ದಯಪಾಲಿಸುತ್ತಾನೆಯೋ, ಆ ಧನವೂ ಯಜ್ಞದ ಸಲುವಾಗಿಯೇ ಎಂಬುದನ್ನು ನೀನು ತಿಳಿ.

**ತಸ್ಮಾದ್ಬುಧ್ಯನ್ತಿ ಪುರುಷಾ ನ ಹಿ ತತ್ಕಸ್ಯಚಿದ್ಧ್ರುವಮ್ ।**
**ಶ್ರದ್ದಧಾನಸ್ತತೋ ಲೋಕೋ ದದ್ಯಾಚ್ಚೈವ ಯಜೇತ ಚ ॥೨೬॥**

ಈ ಕಾರಣದಿಂದಲೇ ಬುದ್ಧಿವಂತರಾದವರು ಧನವು ಯಾರಲ್ಲಿಯೂ ಸ್ಥಿರವಾಗಿ ಉಳಿಯುವುದಿಲ್ಲವೆಂದು ಹೇಳುತ್ತಾರೆ. ಆದುದರಿಂದ ವೇದೋಕ್ತ ಕರ್ಮಗಳಲ್ಲಿ ಶ್ರದ್ಧೆಯಿರುವ ಮನುಷ್ಯರು ಅಸ್ಥಿರವಾದ ಧನವನ್ನು ಯಜ್ಞದ ಮೂಲಕವಾಗಿ ಮತ್ತು ದಾನದ ಮೂಲಕವಾಗಿ ವಿನಿಯೋಗಮಾಡುವುದು ಯುಕ್ತವಾಗಿದೆ.

**ಲಬ್ಧಸ್ಯ ತ್ಯಾಗಮಿತ್ಯಾಹುರ್ನ ಭೋಗಂ ನ ಚ ಸಂಚಯಮ್ ।**
**ತಸ್ಯ ಕಿಂ ಸಂಚಯೇನಾರ್ಥಃ ಕಾರ್ಯೇ ಜ್ಯಾಯಸಿ ತಿಷ್ಠತಿ ॥೨೮॥**

ಸಂಗ್ರಹಿಸಿದ ಧನವನ್ನು ಯಜ್ಞ-ದಾನಗಳ ಮೂಲಕವಾಗಿಯೇ ತ್ಯಾಗ ಮಾಡಬೇಕೆಂದು ವಿದ್ವಾಂಸರು ಹೇಳುತ್ತಾರೆ. ಆ ಧನವನ್ನು ಕೂಡಿಹಾಕಲೂ ಬಾರದು ; ಸುಖೋಪಭೋಗಗಳಿಗಾಗಿ ವ್ಯಯಮಾಡಲೂ ಬಾರದು. ಯಜ್ಞ ಮಾಡುವುದು ಬಹಳ ದೊಡ್ಡ ಕಾರ್ಯ ಮತ್ತು ದುಸ್ಸಾಧ್ಯವಾದ ಕಾರ್ಯ.

ಅದಕ್ಕಾಗಿ ಹಲವು ಉಪಕರಣಗಳನ್ನು ಹೊಂದಿಸಿಕೊಳ್ಳಬೇಕು. ಹೀಗಿರುವಾಗ ಧನವನ್ನು ಸಂಗ್ರಹಿಸುವುದರಿಂದ ಪ್ರಯೋಜನವೇನಿದೆ? ಮೇಲಾಗಿ ದ್ರವ್ಯಯಜ್ಞಕ್ಕಿಂತಲೂ ಶ್ರೇಷ್ಠವಾದ ಜ್ಞಾನಯಜ್ಞವಿರುವಾಗ ಕಷ್ಟಪಟ್ಟು ಹಣವನ್ನು ಗಳಿಸಿ ಕಷ್ಟಸಾಧ್ಯವಾದ ಯಜ್ಞಗಳನ್ನಾದರೂ ಏಕೆ ಮಾಡಬೇಕು? (ಯಜ್ಞಮಾಡುವುದಕ್ಕಾಗಿ ಧನವನ್ನು ಸಂಗ್ರಹಿಸಬೇಕು. ಧನವನ್ನು ಬ್ರಹ್ಮನು ಸೃಷ್ಟಿಸಿರುವುದೇ ಯಜ್ಞದ ಸಲುವಾಗಿ. ಸ್ವಾರ್ಥಸುಖಕ್ಕಾಗಿ ಧನವನ್ನು ವಿನಿಯೋಗಿಸಲೇಬಾರದು. ಆದರೆ ಯಜ್ಞಮಾಡುವುದು ಬಹಳ ಕಷ್ಟಸಾಧ್ಯ. ಇಲ್ಲಿ ಎರಡು ವಿಧವಾದ ಕಷ್ಟಗಳು ಸಂಭವಿಸುತ್ತವೆ. ಮೊದಲನೆಯದು : ಧನಸಂಗ್ರಹಣೆ. ಅದನ್ನು ಬಹಳ ಕಷ್ಟದಿಂದಲೇ ಮಾಡಬೇಕಾಗುವುದು. ಎರಡನೆಯದು : ಯಜ್ಞಕ್ರಿಯೆ. ಧನಸಂಪಾದನೆಗಿಂತಲೂ ಹೆಚ್ಚು ಕಷ್ಟಕರವಾದುದು. ಆದುದರಿಂದ ಧನಸಂಗ್ರಹದಲ್ಲಿ ಆಸಕ್ತಿಯಿಲ್ಲದಿರುವುದೇ ಲೇಸಲ್ಲವೇ? )

**ಯೇ ಸ್ವಧರ್ಮಾದಪೇತೇಭ್ಯಃ ಪ್ರಯಚ್ಛನ್ತ್ಯಲ್ಪಬುದ್ಧಯಃ ।**
**ಶತಂ ವರ್ಷಾಣಿ ತೇ ಪ್ರೇತ್ಯ ಪುರೀಷಂ ಭುಞ್ಜತೇ ಜನಾಃ ॥೨೯॥**

ದಾನಮಾಡುವುದರಲ್ಲಿಯೂ ದೊಡ್ಡ ಆತಂಕವೇ ಇದೆ. ಸತ್ಪಾತ್ರರಲ್ಲಿಯೇ ದಾನಮಾಡಬೇಕು. ಅಲ್ಪಬುದ್ಧಿಯವರು, ಸ್ವಧರ್ಮದಿಂದ ಭ್ರಷ್ಟರಾದವರಿಗೇನಾದರೂ ಧನವನ್ನು ದಾನಮಾಡಿದರೆ, ಅವಸಾನಾನಂತರದಲ್ಲಿ ನೂರು ವರ್ಷಗಳ ಕಾಲ ಅಮೇಧ್ಯವನ್ನು ತಿನ್ನುತ್ತಾ ಜೀವಿಸಬೇಕಾಗುತ್ತದೆ. ಅಪಾತ್ರನಿಗಿತ್ತ ದಾನದ ಫಲವಾಗಿ ದಾನಮಾಡಿದವನಿಗೆ ಇಂತಹ ದುಃಸ್ಥಿತಿಯು ಪ್ರಾಪ್ತವಾಗುತ್ತದೆ.

**ಅನರ್ಹತೇ ಯದ್ದದಾತಿ ನ ದದಾತಿ ಯದರ್ಹತೇ ।**
**ಅರ್ಹಾನರ್ಹಾಪರಿಜ್ಞಾನಾದ್ದಾನಧರ್ಮೋಽಪಿ ದುಷ್ಕರಃ ॥೩೦॥**

ಸಾಮಾನ್ಯವಾಗಿ ಜನರು ಅನರ್ಹನಾದವನಿಗೇ ( ಅಯೋಗ್ಯನಿಗೇ ) ದಾನಕೊಡುತ್ತಾರೆ. ಅರ್ಹನಾದವನಿಗೆ ದಾನಕೊಡುವುದಿಲ್ಲ. 'ಇಂತಹವನು ದಾನಕ್ಕೆ ಪಾತ್ರನು ಇಂತಹವನು ದಾನಕ್ಕೆ ಅಪಾತ್ರನು'–ಎಂದು ನಿರ್ಧರಿಸಲು ಸಾಧ್ಯವಾಗದೇ ಇರುವುದರಿಂದ ಅನರ್ಹನಿಗೇ ದಾನವು ಲಭಿಸುತ್ತದೆ. ಅರ್ಹ

ರಾದವರಿಗೆ ಲಭಿಸುವುದಿಲ್ಲ. ಆದುದರಿಂದ ಪಾತ್ರಾಪಾತ್ರದ ಪರಿಜ್ಞಾನ ವಿಲ್ಲದೇ ಇರುವುದರಿಂದ ದಾನಧರ್ಮವೂ ಅತ್ಯಂತದುಷ್ಕರವೇ ಆಗಿದೆ.

**ಲಬ್ಧಾನಾಮಪಿ ವಿತ್ತಾನಾಂ ಬೋದ್ಧವ್ಯೌ ದ್ವಾವತಿಕ್ರಮೌ ।**
**ಅಪಾತ್ರೇ ಪ್ರತಿಪತ್ತಿಶ್ಚ ಪಾತ್ರೇ ಚಾಪ್ರತಿಪಾದನಮ್ ॥೩೧॥**

ಸಂಗ್ರಹಿಸಿದ ಧನವನ್ನು ವಿನಿಯೋಗಿಸುವುದರಲ್ಲಿಯೂ ಅತಿಮುಖ್ಯ ವಾದ ಎರಡು ಅತಿಕ್ರಮಗಳು ನಡೆಯುತ್ತವೆ. ಇದನ್ನು ತಿಳಿದುಕೊಂಡಿರಬೇಕು. ಮೊದಲನೆಯ ಅತಿಕ್ರಮವೆಂದರೆ : ಅಪಾತ್ರನಾದವನಿಗೆ ದಾನಮಾಡುವುದು; ಎರಡನೆಯ ಅತಿಕ್ರಮವೆಂದರೆ : ಪಾತ್ರನಾದವನಿಗೆ ದಾನವನ್ನು ಕೊಡದಿರುವುದು—ಈ ಎರಡೂ ಪಾಪಕರವಾದ ಕಾರ್ಯಗಳೇ ಆಗುತ್ತವೆ.”

[ ಧರ್ಮರಾಜನ ಅಭಿಪ್ರಾಯವನ್ನು ಸಂಗ್ರಹಿಸಿ ಹೀಗೆ ಹೇಳಬಹು ದಾಗಿದೆ :

‘ಹಣವನ್ನು ಗಳಿಸಿದರೆ ಯಜ್ಞಮಾಡಬೇಕು ; ದಾನಮಾಡಬೇಕು. ಕೆಸರನ್ನು ತುಳಿದು ತೊಳೆದುಕೊಳ್ಳುವುದಕ್ಕಿಂತ ತುಳಿಯದಿರುವುದೇ ಮೇಲಲ್ಲವೇ? ಹಾಗೆಯೇ ಧನಸಂಗ್ರಹಕ್ಕೆ ಕೈಹಾಕದಿರುವುದೇ ಮೇಲು. ಯಜ್ಞಮಾಡುವುದೂ ಕಷ್ಟವೇ. ಪಾತ್ರಾಪಾತ್ರವಿವೇಕವು ಕಷ್ಟಸಾಧ್ಯ ವಾದುದರಿಂದ ದಾನಮಾಡುವುದೂ ದುಷ್ಕರವೇ. ಈ ಯಜ್ಞ-ದಾನಗಳಿ ಗಿಂತಲೂ ಉತ್ಕೃಷ್ಟವಾದ ಜ್ಞಾನಮಾರ್ಗವನ್ನು ಅವಲಂಬಿಸಲು ಸಾಧ್ಯವಿರು ವಾಗ ಈ ಧನಸಂಗ್ರಹ, ದಾನ-ಯಜ್ಞಗಳ ಗೊಂದಲವೇಕೆ?’]

೨೬ನೆಯ ಅಧ್ಯಾಯವು ಮುಗಿಯಿತು.

೨೭ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಶೋಕಾಧಿಕ್ಯದಿಂದ ಶರೀರಪರಿತ್ಯಾಗ ಮಾಡಲು ಸಿದ್ಧನಾದಾಗ ವ್ಯಾಸರು ಪುನಃ ಸಮಾಧಾನ ಹೇಳಿದುದು

ಯುಧಿಷ್ಠಿರನು ಮುಂದುವರಿದು ಹೇಳುತ್ತಾನೆ :

“ಮುನಿಶ್ರೇಷ್ಠರೇ! ಬಾಲಕನಾದ ಅಭಿಮನ್ಯು, ದ್ರೌಪದಿಯ ಐವರು

ಮಕ್ಕಳು, ಧೃಷ್ಟದ್ಯುಮ್ನ, ವಿರಾಟ, ಮಹೀಪತಿಯಾದ ದ್ರುಪದ, ಧರ್ಮಜ್ಞನಾದ ವೃಷಸೇನ, ರಾಜನಾದ ಧೃಷ್ಟಕೇತು, ನಾನಾದೇಶಗಳ ಇನ್ನೂ ಅನೇಕರಾಜರು–ಇವರೆಲ್ಲರೂ ಯುದ್ಧದಲ್ಲಿ ಹತರಾಗಲಾಗಿ ಜ್ಞಾತಿಗಳ ಹಂತಕನಾದ, ರಾಜ್ಯಲೋಭಿಯಾದ, ಅತ್ಯುಗ್ರವಾದ ಕರ್ಮವನ್ನು ಮಾಡಿರುವ, ವಂಶವನ್ನೇ ನಿರ್ಮೂಲಗೊಳಿಸಿರುವ, ಆತುರನಾದ ನನ್ನನ್ನು ಶೋಕವು ಬಿಟ್ಟುಹೋಗುತ್ತಿಲ್ಲ. ರಾಜ್ಯಲೋಭದಿಂದಾಗಿ ಯುದ್ಧದಲ್ಲಿ ಎಲ್ಲರನ್ನೂ ಬಲಿಗೊಟ್ಟೆನು. ಇದರಿಂದ ನನಗೆ ಅತ್ಯಂತಶೋಕವುಂಟಾಗಿದೆ. ಈ ಶೋಕದಿಂದ ನನಗೆ ಮುಕ್ತಿಯೇ ಇಲ್ಲವಾಗಿದೆ.

ಬಾಲ್ಯದಲ್ಲಿ ಆಟವಾಡುವಾಗ ಯಾವನ ತೊಡೆಯ ಮೇಲೆ ನಾನು ಹೊರಳಾಡುತ್ತಿದ್ದೆನೋ, ಧರ್ಮಾತ್ಮನಾದ ಅಂತಹ ಭೀಷ್ಮನನ್ನು ರಾಜ್ಯ ಲೋಭದಿಂದ ಯುದ್ಧದಲ್ಲಿ ಸಂಹರಿಸಿದೆನು.

ಮುದಿಯಾದ ಸಿಂಹದಂತಿದ್ದ, ಉನ್ನತಕಾಯನಾಗಿದ್ದ, ನರಶ್ರೇಷ್ಠನಾದ ಪಿತಾಮಹನಾದ ಭೀಷ್ಮನು ವಜ್ರಾಯುಧಸದೃಶವಾದ ಅರ್ಜುನನ ಬಾಣಗಳಿಂದ ಪೀಡಿತನಾಗಿ ಕಂಪಿಸುತ್ತಿದ್ದನು. ಆ ಸಮಯದಲ್ಲಿ ಶಿಖಂಡಿಯು ಅವನನ್ನು ಎವೆಯಿಕ್ಕದೆ ನೋಡುತ್ತಿದ್ದನು. ಅರ್ಜುನನ ಬಾಣಗಳಿಂದ ಶರೀರಾದ್ಯಂತವಾಗಿ ಮುಚ್ಚಲ್ಪಟ್ಟಿದ್ದ ನನ್ನ ಪಿತಾಮಹನನ್ನು ನೋಡಿ ಆ ಸಮಯದಲ್ಲಿ ನನ್ನ ಮನಸ್ಸು ಬಹಳವಾಗಿ ವ್ಯಥೆಗೊಂಡಿತು. ಶತ್ರುಪಕ್ಷದ ರಥಸೈನಿಕರನ್ನು ಧ್ವಂಸಮಾಡುವುದರಲ್ಲಿ ಅತ್ಯಂತಸಮರ್ಥನಾಗಿದ್ದ ಭೀಷ್ಮನು ರಥದಲ್ಲಿ ಪೂರ್ವಾಭಿಮುಖವಾಗಿ ಕುಳಿತು, ಅರ್ಜುನನ ಬಾಣಗಳ ಪ್ರಹಾರದಿಂದ ಕ್ಷಣ-ಕ್ಷಣಕ್ಕೂ ಕುಸಿಯುತ್ತಿದ್ದನು. ವಜ್ರಾಘಾತದಿಂದ ಭ್ರಮಿಸುವ ಪರ್ವತದಂತೆ ಭ್ರಮಿಸುತ್ತಿದ್ದನು. ಅಂತಹ ಭೀಷ್ಮನನ್ನು ನೋಡಿ ನನಗೆ ಮೂರ್ಛೆಬರುವಂತಾಯಿತು.

ಯಾವ ಕೌರವ್ಯನು ಕುರುಕ್ಷೇತ್ರದಲ್ಲಿ ನಡೆದ ಮಹಾಯುದ್ಧದಲ್ಲಿ ಧನುರ್ಬಾಣಗಳನ್ನು ಹಿಡಿದು ಪರಶುರಾಮನೊಡನೆ ಅನೇಕದಿವಸಗಳವರೆಗೆ ಯುದ್ಧಮಾಡಿದನೋ, ಗಂಗಾಪುತ್ರನಾದ ವೀರನಾದ ಯಾವ ಭೀಷ್ಮನು ವಾರಣಾಸಿಯಲ್ಲಿ ಕನ್ಯಾರ್ಥವಾಗಿ ಹೋಗಿದ್ದಾಗ ಒಗ್ಗಟ್ಟಿನಿಂದ ಬಂದ ಎಲ್ಲ

ಕ್ಷತ್ರಿಯರಾಜರನ್ನೂ ಯುದ್ಧಕ್ಕೆ ಆಹ್ವಾನಿಸಿ, ರಥೈಕಸಹಾಯನಾಗಿ ಎಲ್ಲರನ್ನೂ ಪರಾಜಯಗೊಳಿಸಿ ಕನ್ಯೆಯರನ್ನು ಹಸ್ತಿನಾಪುರಕ್ಕೆ ಕರೆತಂದನೋ, ಯಾವ ಭೀಷ್ಮನ ಅಸ್ತ್ರಪ್ರತಾಪದಿಂದ ದುರಾಸದನಾಗಿದ್ದ ಚಕ್ರವರ್ತಿಯಾದ ಉಗ್ರಾಯುಧರಾಜನು ದಗ್ಧನಾಗಿಹೋದನೋ, ಅಂತಹ ಭೀಷ್ಮನನ್ನು ನಾನು ಯುದ್ಧದಲ್ಲಿ ಸಂಹರಿಸಿದೆನು.

ಭೀಷ್ಮನು ತನಗೇ ಮೃತ್ಯುವಾಗಿದ್ದ ಪಾಂಚಾಲದೇಶೀಯನಾದ ಶಿಖಂಡಿಯನ್ನು ತಾನೇ ರಕ್ಷಿಸುತ್ತಾ ಅವನನ್ನು ಬಾಣಗಳಿಂದ ಸಂಹರಿಸಲಿಲ್ಲ. ಶಿಖಂಡಿಯು ಎದುರಾಗಿ ನಿಂತು ಬಾಣಗಳನ್ನು ಬಿಡುತ್ತಿದ್ದರೂ ಭೀಷ್ಮನು ಪ್ರತೀಕಾರಮಾಡದೇ ಸುಮ್ಮನೇ ಕುಳಿತಿದ್ದನು. ಆ ಸಮಯದಲ್ಲಿ ಅರ್ಜುನನು ಭೀಷ್ಮನನ್ನು ವಜ್ರಾಯುಧಕ್ಕೆ ಸಮಾನವಾದ ಬಾಣಗಳಿಂದ ಬೀಳಿಸಿದನು.

ಮುನಿಶ್ರೇಷ್ಠರೇ! ರಕ್ತದಿಂದ ತೋಯ್ದುಹೋಗಿದ್ದ ಭೀಷ್ಮನು ಭೂಮಿಯ ಮೇಲೆ ಬಿದ್ದುದನ್ನು ನೋಡಿದೊಡನೆಯೇ ಅತ್ಯುಗ್ರವಾದ ಮತ್ತು ಭಯಂಕರವಾದ ಶೋಕಜ್ವರವು ನನ್ನನ್ನು ಪ್ರವೇಶಿಸಿತು. ಬಾಲಕರಾಗಿದ್ದ ನಾವೈವರೂ ಯಾರಿಂದ ಸಂವರ್ಧಿತರಾದೆವೋ, ಯಾರು ನಮ್ಮನ್ನು ಸಂರಕ್ಷಿಸಿದನೋ ಅಂತಹ ಭೀಷ್ಮನನ್ನು ಗುರುಘಾತಿಯಾದ, ಪಾಪಿಷ್ಠನಾದ, ರಾಜ್ಯಲುಬ್ಧನಾದ, ಮೂಢನಾದ ನಾನು ಸ್ವಲ್ಪಕಾಲವೇ ನನ್ನಲ್ಲುಳಿಯುವ ಈ ರಾಜ್ಯದ ಸಲುವಾಗಿ ಸಂಹರಿಸಿದೆನು.

ಆಚಾರ್ಯರಾದ ದ್ರೋಣರು ಮಹಾಧನುಷ್ಮಂತರು. ಎಲ್ಲ ರಾಜರ ಪುರಸ್ಕಾರಕ್ಕೂ ಪಾತ್ರರಾಗಿದ್ದರು. ಪಾಪಿಷ್ಠನಾದ ನಾನು ಅಂತಹವರ ವಿಷಯದಲ್ಲಿಯೇ ಸುಳ್ಳುಹೇಳಿದೆನು. ಯುದ್ಧಸಮಯದಲ್ಲಿ ಅವರ ಬಳಿಗೆ ಹೋಗಿ ಅವರ ಪುತ್ರನ ಸಂಬಂಧವಾಗಿ ಇಲ್ಲದೇ ಇದ್ದುದನ್ನು ಹೇಳಿದೆನು. ಆ ಸಮಯದಲ್ಲಿ ನನ್ನ ಗುರುಗಳು ನನ್ನೊಡನೆ ಹೇಳಿದ ಮಾತುಗಳು ಈಗಲೂ ನನ್ನ ಅಂಗಾಂಗಗಳನ್ನು ಸುಡುತ್ತಿವೆ.

**ಸತ್ಯಮಾಖ್ಯಾಹಿ ರಾಜಂಸ್ತ್ವಂ ಯದಿ ಜೀವತಿ ಮೇ ಸುತಃ ॥೧೬॥**

'ಯುಧಿಷ್ಠಿರ! ನನ್ನ ಮಗನಾದ ಅಶ್ವತ್ಥಾಮನು ಜೀವಿಸಿರುವನೋ

ಇಲ್ಲವೋ ಎಂಬ ವಿಷಯದಲ್ಲಿ ನಿಜವನ್ನು ಹೇಳು'–ಎಂದು ದ್ರೋಣರು ನನ್ನನ್ನು ಪ್ರಶ್ನಿಸಿದರು. ಸತ್ಯವನ್ನು ನಿರ್ಣಯಿಸುವ ಸಲುವಾಗಿ ದ್ರೋಣರು ನನ್ನನ್ನು ಹೀಗೆ ಪ್ರಶ್ನಿಸಿದರು. ಆದರೆ ಪಾಪಿಷ್ಠನಾದ, ಗುರುಹಂತಕನಾದ, ರಾಜ್ಯಲುಬ್ಧನಾದ ನಾನು ಆನೆಯನ್ನು ನೆಪವನ್ನಾಗಿ ಮಾಡಿಕೊಂಡು ಅವರೊಡನೆ ಬಹಳ ಬೇಗ ಸುಳ್ಳುಹೇಳಿದೆನು. ನಾನು ಬಹಳದಿವಸಗಳಿಂದಲೂ ಸುಭದ್ರವಾಗಿ ತೊಟ್ಟುಕೊಂಡಿದ್ದ ಸತ್ಯದ ಅಂಗಿಯನ್ನು ತೆಗೆದುಹಾಕಿ, 'ಅಶ್ವತ್ಥಾಮಾ' ಎಂಬ ಹೆಸರಿನ ಆನೆಯು ನಮ್ಮ ಮುಂದೆ ಹತವಾಗಲಾಗಿ **"ಅಶ್ವತ್ಥಾಮಾ ಹತಃ** –ಅಶ್ವತ್ಥಾಮನು ಹತನಾದನು"–ಎಂದು ದ್ರೋಣರೊಡನೆ ಹೇಳಿದೆನು. ನಾನು ಈ ಮಾತನ್ನು ಹೇಳಿದುದರಿಂದ ನನ್ನ ಗುರುಗಳು ನಿಜವಾಗಿಯೂ ತಮ್ಮ ಮಗನಾದ ಅಶ್ವತ್ಥಾಮನೇ ಹತನಾಗಿರುವನೆಂದು ದೃಢಪಡಿಸಿಕೊಂಡರು. ಮುಂದೆ ಅವರು ಶಸ್ತ್ರವನ್ನು ಕೆಳಗಿಟ್ಟು ಧೃಷ್ಟದ್ಯುಮ್ನನಿಂದ ಕೊಲ್ಲಲ್ಪಟ್ಟರು. ಆದುದರಿಂದ ಗುರುಗಳ ಸಂಹಾರಕ್ಕೂ ನಾನೇ ಮುಖ್ಯಕಾರಣನಾದೆನು. ಯಾರಿಂದಲೂ ಮಾಡಲು ಸಾಧ್ಯವಾಗದ ಪಾಪಕರ್ಮಗಳನ್ನು ಮಾಡಿರುವ ನಾನು ಯಾವ ಲೋಕಗಳಿಗೆ ಹೋಗುವೆನೋ ತಿಳಿಯದು. ಯುದ್ಧಗಳಲ್ಲಿ ಪಲಾಯನವೆಂಬುದನ್ನೇ ಅರಿಯದ, ಅತ್ಯುಗ್ರನಾದ ನನ್ನ ಹಿರಿಯ ಸಹೋದರನಾದ ಕರ್ಣನನ್ನೇ ಯುದ್ಧದಲ್ಲಿ (ಅರ್ಜುನನ ಮೂಲಕವಾಗಿ) ಸಂಹರಿಸಿದೆನು. ನನಗಿಂತಲೂ ಹೆಚ್ಚಿನ ಪಾಪಕರ್ಮವನ್ನು ಮಾಡಿದವರು ಮತ್ತಾರಿದ್ದಾರೆ? ಪರ್ವತದಲ್ಲಿ ಹುಟ್ಟಿದ ಸಿಂಹದಂತೆಯೇ ಇದ್ದ ಬಾಲಕನಾದ ಅಭಿಮನ್ಯುವನ್ನು ರಾಜ್ಯಲೋಭದ ಕಾರಣದಿಂದ ದ್ರೋಣರಕ್ಷಿತವಾಗಿದ್ದ ವ್ಯೂಹದೊಳಗೆ ನುಗ್ಗುವಂತೆ ಪ್ರೋತ್ಸಾಹಿಸಿದೆನು. ಆ ವ್ಯೂಹದೊಳಗೆ ಸಿಕ್ಕಿಕೊಂಡು ಆ ಬಾಲಕನು ಮರಣ ಹೊಂದಿದನಂತರ ಭ್ರೂಣಹತ್ಯೆಮಾಡಿದ ಮಹಾಪಾಪಿಷ್ಠನಂತೆ ನಾನು ಅರ್ಜುನನನ್ನಾಗಲೀ, ಕಮಲಾಕ್ಷನಾದ ಶ್ರೀಕೃಷ್ಣನನ್ನಾಗಲೀ ಕಣ್ಣೆತ್ತಿ ನೋಡಲೂ ಅಸಮರ್ಥನಾಗಿದ್ದೇನೆ. (ಅವರನ್ನು ನೋಡಲು ನಾನು ನಾಚುತ್ತೇನೆ.) ಐದು ಪರ್ವತಗಳಿಂದ ವಿಹೀನಳಾದ ಪೃಥಿವೀದೇವಿಯಂತೆ ಐವರು ಪುತ್ರರಿಂದಲೂ ವಿಹೀನಳಾದ ದುಃಖತಪ್ತಳಾದ ದ್ರೌಪದಿಯನ್ನು ಕುರಿತು ನಾನು ಬಹಳವಾಗಿ ದುಃಖಿಸುತ್ತೇನೆ. ನಿಶ್ಚಯವಾಗಿಯೂ ನಾನು ಅಪರಾಧಿ

ಯಾಗಿದ್ದೇನೆ. ಮಹಾಪಾಪಿಷ್ಠನಾಗಿದ್ದೇನೆ. ರಾಜ್ಯಲೋಭದ ಕಾರಣದಿಂದಾಗಿ ವಿಶ್ವವನ್ನೇ ವಿನಾಶಗೊಳಿಸಿಬಿಟ್ಟಿದ್ದೇನೆ. ಆದುದರಿಂದ ಈ ಪಾಪದ ಪ್ರಾಯಶ್ಚಿತ್ತಾರ್ಥವಾಗಿ ನಾನು ಹೀಗೆಯೇ ಕುಳಿತಿದ್ದು ಆಹಾರವನ್ನೂ ತೆಗೆದುಕೊಳ್ಳದೇ ಶರೀರವನ್ನು ಶೋಷಿಸಿಬಿಡುತ್ತೇನೆ. ಗುರುಘಾತಕನಾದ ನನ್ನನ್ನು ಪ್ರಾಯೋಪವಿಷ್ಟನಾಗಿರುವನೆಂದು ಎಲ್ಲರೂ ತಿಳಿಯಿರಿ. ಮುಂದಿನ ಜನ್ಮಗಳಲ್ಲಾದರೂ ನಾನು ಕುಲಾಂತಕನಾಗಕೂಡದೆಂಬುದೇ ಈ ಪ್ರಾಯೋಪವೇಶದ ಉದ್ದೇಶವಾಗಿದೆ. ತಪೋಧನರೇ! ಯಾವುದೇ ಕಾರಣದಿಂದಲೂ ನಾನು ಊಟವನ್ನೂ ಮಾಡುವುದಿಲ್ಲ ; ನೀರನ್ನೂ ಕುಡಿಯುವುದಿಲ್ಲ. ಇಲ್ಲಿಯೇ ಕುಳಿತು ಪ್ರಿಯವಾದ ಪ್ರಾಣಗಳನ್ನು ಶೋಷಣೆಮಾಡುತ್ತೇನೆ. ನಿಮ್ಮೆಲ್ಲರನ್ನೂ ಪ್ರಸನ್ನಗೊಳಿಸುತ್ತಾ ಇಚ್ಛೆಬಂದಲ್ಲಿಗೆ ಹೋಗಬಹುದೆಂದು ಅನುಮತಿಯನ್ನು ಕೊಡುತ್ತಿದ್ದೇನೆ. ಅಂತೆಯೇ ನೀವೆಲ್ಲರೂ ಈ ಶರೀರವನ್ನು ಪ್ರಾಯೋಪವೇಶದ ಮೂಲಕವಾಗಿ ಪರಿತ್ಯಜಿಸಲು ಅನುಮತಿಯನ್ನು ನೀಡಿರಿ.”

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಬಂಧುವಿಯೋಗದ ಶೋಕದಿಂದ ವಿಹ್ವಲನಾಗಿದ್ದ, ಪ್ರಾಯೋಪವೇಶದ ಮೂಲಕವಾಗಿ ಪ್ರಾಣತ್ಯಾಗಮಾಡುವೆನೆಂದು ಹೇಳುತ್ತಿದ್ದ ಯುಧಿಷ್ಠಿರನನ್ನು ಕುರಿತು ಭಗವಾನ್ ವ್ಯಾಸರು “ಮೈವಂ–ನೀನು ಹೀಗೆಂದಿಗೂ ಮಾಡಬಾರದು” ಎಂದು ಹೇಳಿ ತಡೆಯುತ್ತಾ ಈ ಮಾತುಗಳನ್ನು ಹೇಳಿದರು :

“ಮಹಾರಾಜ! ನೀನು ಇಷ್ಟೊಂದು ದುಃಖಿಸಬೇಡ. ಹೇಳಿದುದನ್ನೇ ಪುನಃ ನಿನಗೆ ಹೇಳುತ್ತೇನೆ. ದೈವದ ನಿಯಮದಂತೆಯೇ ಎಲ್ಲವೂ ನಡೆದಿದೆ. ಇದಕ್ಕೆ ನೀನಾಗಲೀ ನಿನ್ನ ಅನುಜರಾಗಲೀ ಕಾರಣರಲ್ಲ.

**ಸಂಯೋಗಾ ವಿಪ್ರಯೋಗಾನ್ತಾ ಜಾತಾನಾಂ ಪ್ರಾಣಿನಾಂ ಧ್ರುವಂ ।**
**ಬುದ್ಬುದಾ ಇವ ತೋಯೇಷು ಭವನ್ತಿ ನ ಭವನ್ತಿ ಚ ॥೨೯॥**

ಹುಟ್ಟುವ ಪ್ರಾಣಿಗಳ ಸೇರುವಿಕೆಯು ಅಗಲಿಕೆಯಲ್ಲಿಯೇ ಪರ್ಯವಸಾನ ಹೊಂದುತ್ತದೆ. ಇದು ನಿಶ್ಚಯ. ಒಂದು ಸಂಸಾರದಲ್ಲಿ ತಾಯಿ, ತಂದೆ, ಮಕ್ಕಳು–ಎಂಬ ವ್ಯಾಜದಿಂದ ಒಟ್ಟಾಗಿ ಸೇರಿದವರು ಒಬ್ಬರು ಹಿಂದು

ಮತ್ತೊಬ್ಬರು ಮುಂದಾಗಿ ಅಗಲಲೇಬೇಕಾಗುವುದು. ಇದು ಪ್ರಕೃತಿ ನಿಯಮ. ಪ್ರಾಣಿಗಳು ಅಥವಾ ಮನುಷ್ಯರು ನೀರಿನ ಮೇಲಿನ ಗುಳ್ಳೆಗಳಂತೆ ಹುಟ್ಟುತ್ತಿರುತ್ತಾರೆ ; ಸಾಯುತ್ತಿರುತ್ತಾರೆ.

**ಸರ್ವೇ ಕ್ಷಯಾನ್ತಾ ನಿಚಯಾಃ ಪತನಾನ್ತಾಃ ಸಮುಚ್ಛ್ರಯಾಃ ।**
**ಸಂಯೋಗಾ ವಿಪ್ರಯೋಗಾನ್ತಾ ಮರಣಾನ್ತಂ ಹಿ ಜೀವಿತಮ್ ॥೩೦॥**

ಸಂಗ್ರಹಮಾಡಿಟ್ಟ ಐಶ್ವರ್ಯಾದಿಗಳು ವಿನಾಶದಲ್ಲಿಯೇ ಪರ್ಯವಸಾನಹೊಂದುತ್ತವೆ. ಮಿತಿಮೀರಿದ ಔನ್ನತ್ಯಗಳು (ಏರುವಿಕೆಯು) ಪತನದಲ್ಲಿಯೇ ಪರ್ಯವಸಾನಹೊಂದುತ್ತವೆ. ಪರಸ್ಪರ ಸೇರುವಿಕೆಗಳು ಅಗಲುವಿಕೆಗಳಲ್ಲಿ ಪರ್ಯವಸಾನಹೊಂದುತ್ತವೆ. ಜೀವನವು ಮರಣದಲ್ಲಿ ಪರ್ಯವಸಾನ ಹೊಂದುತ್ತದೆ.

**ಸುಖಂ ದುಃಖಾನ್ತಮಾಲಸ್ಯಂ ದಾಕ್ಷ್ಯಂ ದುಃಖಂ ಸುಖೋದಯಮ್ ।**
**ಭೂತಿಃ ಶ್ರೀರ್ಹ್ರೀರ್ಧೃತಿಃ ಕೀರ್ತಿರ್ದಕ್ಷೇ ವಸತಿ ನಾಲಸೇ ॥೩೧॥**

ಮನುಷ್ಯನು ಆಲಸ್ಯವನ್ನು ( ಸೋಮಾರಿತನವನ್ನು ) ಹೊಂದಿದರೆ (ಆಲಸ್ಯಂ ಅಮೃತಂ ವಿಷಂ ಎಂಬಂತೆ ) ಸುಖವೂ ಸಹ ದುಃಖಾಂತವಾಗಿ ಪರಿಣಮಿಸುತ್ತದೆ. ದಕ್ಷತೆಯನ್ನು ವಹಿಸಿ ಕಾರ್ಯಮಾಡಿದರೆ ಸುಖೋದಯಕ್ಕೆ ಕಾರಣವಾಗುತ್ತದೆ. ( ಈಗ ಧರ್ಮರಾಜನಿಗೆ ಬಂದಿರುವ ದುಃಖವು ಹೋಗಬೇಕಾದರೆ ದಕ್ಷತೆಯನ್ನೇ ಅವಲಂಬಿಸಬೇಕು. ) ಐಶ್ವರ್ಯ, ಲಕ್ಷ್ಮೀ, ಲಜ್ಜೆ, ಧೈರ್ಯ, ಕೀರ್ತಿ—ಇವುಗಳು ಕಾರ್ಯದಕ್ಷನಲ್ಲಿ ಮನೆಮಾಡಿಕೊಂಡಿರುತ್ತವೆಯೇ ಹೊರತು ಅಲಸನ ( ಸೋಮಾರಿಯ ) ಹತ್ತಿರವೂ ಸುಳಿಯುವುದಿಲ್ಲ.

**ನಾಲಂ ಸುಖಾಯ ಸುಹೃದೋ ನಾಲಂ ದುಃಖಾಯ ಶತ್ರವಃ ।**
**ನ ಚ ಪ್ರಜಾಲಮರ್ಥೇಭ್ಯೋ ನ ಸುಖೇಭ್ಯೋಪ್ಯಲಂ ಧನಮ್ ॥**

ಸುಹೃದರು ಸುಖವನ್ನುಂಟುಮಾಡಲು ಸಮರ್ಥರಲ್ಲ. ಶತ್ರುಗಳು ದುಃಖವನ್ನುಂಟುಮಾಡಲೂ ಸಮರ್ಥರಲ್ಲ. ಐಶ್ವರ್ಯಗಳನ್ನು ತುಂಬಿಕೊಡಲು ಪ್ರಜೆಗಳೂ ಸಮರ್ಥರಲ್ಲ. ಸುಖಗಳನ್ನುಂಟುಮಾಡಲು ಧನವೂ ಸಮರ್ಥವಲ್ಲ.

**ಯಥಾ ಸೃಷ್ಟೋಽಸಿ ಕೌನ್ತೇಯ ಧಾತ್ರಾ ಕರ್ಮಸು ತತ್ಕುರು ।**
**ಅತ ಏವ ಹಿ ಸಿದ್ಧಿಸ್ತೇ ನೇಶಸ್ತ್ವಂ ಕರ್ಮಣಾಂ ನೃಪ ॥೩೩॥**

ಬ್ರಹ್ಮನು ಯಾವ ಕರ್ಮಮಾಡಲೆಂದು ನಿನ್ನನ್ನು ಸೃಷ್ಟಿಸಿರುವನೋ– ಆ ಕರ್ಮವನ್ನೇ ನೀನು ಮಾಡಬೇಕು. ಹಾಗೆ ಮಾಡುವುದರಿಂದಲೇ ನಿನಗೆ ಸಿದ್ಧಿಯು ಲಭಿಸುತ್ತದೆ. ನೀನು ಕರ್ಮಗಳಿಗೆ ಸ್ವಾಮಿಯಲ್ಲ. ಕ್ಷತ್ರಿಯ ಕರ್ಮವನ್ನೇ ಮಾಡಬೇಕೆಂದು ಬ್ರಹ್ಮನು ನಿನ್ನನ್ನು ಕ್ಷತ್ರಿಯವಂಶದಲ್ಲಿ ಸೃಷ್ಟಿಮಾಡಿರುವುದರಿಂದ ನೀನು ಕ್ಷತ್ರಿಯಕರ್ಮವನ್ನು ಮಾಡಬೇಕೇ ಹೊರತು ಕರ್ಮತ್ಯಾಗಮಾಡುವ ಸ್ವಾತಂತ್ರ್ಯವು ನಿನಗಿಲ್ಲ."

ತಾನೆಯ ಅಧ್ಯಾಯವು ಮುಗಿಯಿತು.

೨೮ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

# ಅಶ್ಮಮಹರ್ಷಿ ಮತ್ತು ಜನಕರ ಸಂವಾದೋಪಾಖ್ಯಾನದ ಮೂಲಕವಾಗಿ ವ್ಯಾಸರು ಯುಧಿಷ್ಠಿರನನ್ನು ಸಮಾಧಾನಗೊಳಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಜ್ಞಾತಿಗಳ ವಿಯೋಗದಿಂದ ಅತಿದುಃಖಿತನಾಗಿದ್ದ, ಪ್ರಾಯಶ್ಚಿತ್ತಕ್ಕಾಗಿ ಪ್ರಾಯೋಪವೇಶದ ಮೂಲಕ ಪ್ರಾಣಗಳನ್ನೇ ಶೋಷಿಸಲು ಸಿದ್ಧನಾಗಿದ್ದ, ಪಾಂಡುವಿನ ಹಿರಿಯಮಗನಾದ ಯುಧಿಷ್ಠಿರನ ಶೋಕವನ್ನು ಹೋಗಲಾಡಿಸಲು ವ್ಯಾಸರು ಈ ಮಾತನ್ನು ಹೇಳಿದರು :

"ನರವ್ಯಾಘ್ರನೇ! ಯುಧಿಷ್ಠಿರ! ಈ ವಿಷಯದಲ್ಲಿ ಪುರಾತನವಾದ, ಇತಿಹಾಸರೂಪವಾದ ಅಶ್ಮಗೀತೆಯನ್ನು ಉದಾಹರಿಸುತ್ತಾರೆ. ಅದನ್ನೇ ಈಗ ಕೇಳು :

ಒಂದಾನೊಂದು ಸಮಯದಲ್ಲಿ ದುಃಖ-ಶೋಕಸಮನ್ವಿತನಾಗಿದ್ದ ಜನಕ ರಾಜನು ಜ್ಞಾತಿಯಾದ ಅಶ್ಮನೆಂಬ ಬ್ರಾಹ್ಮಣನನ್ನು ತನ್ನ ಮನಸ್ಸಿನಲ್ಲಿದ್ದ ಸಂದೇಹವನ್ನು ನಿವಾರಿಸಿಕೊಳ್ಳಲು ಹೀಗೆ ಪ್ರಶ್ನಿಸಿದನು :

**ಆಗಮೇ ಯದಿ ವಾಪಾಯೇ ಜ್ಞಾತೀನಾಂ ದ್ರವಿಣಸ್ಯ ಚ |**
**ನರೇಣ ಪ್ರತಿಪತ್ತವ್ಯಂ ಕಲ್ಯಾಣಂ ಕಥಮಿಚ್ಛತಾ ||೪||**

"ಬ್ರಾಹ್ಮಣೋತ್ತಮ! ಕುಟುಂಬದ ಜನರ ವೃದ್ಧಿ ಅಥವಾ ವಿನಾಶ ; ಐಶ್ವರ್ಯದ ವೃದ್ಧಿ ಅಥವಾ ವಿನಾಶ–ಇವುಗಳು ಪ್ರಾಪ್ತವಾದಲ್ಲಿ ಕಲ್ಯಾಣವನ್ನು ಅಪೇಕ್ಷಿಸುವ ಮನುಷ್ಯನು ಹೇಗೆ ನಡೆಯಲು ನಿಶ್ಚಯಿಸಬೇಕು? (ಅಂತಹ ಸಂದರ್ಭದಲ್ಲಿ ಹೇಗೆ ನಡೆದುಕೊಳ್ಳಬೇಕು? )"

**ಉತ್ಪನ್ನಮಿಮಮಾತ್ಮಾನಂ ನರಸ್ಯಾನನ್ತರಂ ತತಃ |**
**ತಾನಿ ತಾನ್ಯನುವರ್ತನ್ತೇ ದುಃಖಾನಿ ಚ ಸುಖಾನಿ ಚ ||೫||**

"ಮಹಾರಾಜ! ತಾಯಿಯ ಗರ್ಭದಿಂದ ಹೊರಬಂದ ಮನುಷ್ಯನ ಈ ಶರೀರವನ್ನು ಸ್ವಲ್ಪವಾದರೂ ವ್ಯವಧಾನವೇ ಇಲ್ಲದೇ ಅವನವನ ಕರ್ಮಾನು ಗುಣವಾದ ದುಃಖಗಳೂ–ಸುಖಗಳೂ ಅನುಸರಿಸಿಯೇ ಬರುತ್ತವೆ.

**ತೇಷಾಮನ್ಯತರಾಪತ್ತೌ ಯದ್ಯದೇವೋಪಪದ್ಯತೇ |**
**ತದಸ್ಯ ಚೇತನಾಮಾಶು ಹರತ್ಯಭ್ರಮಿವಾನಿಲಃ ||೬||**

ಒಂದಾದ ಮೇಲೊಂದರಂತೆ ಬರುವ ಈ ಸುಖ-ದುಃಖಗಳಲ್ಲಿ ಯಾವುದು ಪ್ರಾಪ್ತವಾಗುವುದೋ, ಆ ದುಃಖವೇ ಅಥವಾ ಸುಖವೇ ಮನುಷ್ಯನ ಬುದ್ಧಿಯನ್ನು–ಗಾಳಿಯು ಮೋಡವನ್ನು ಹಾರಿಸಿಕೊಂಡು ಹೋಗುವಂತೆ–ಬಹಳ ಬೇಗ ವಿಕಲ್ಪಗೊಳಿಸುತ್ತದೆ.

**ಅಭಿಜಾತೋಽಸ್ಮಿ ಸಿದ್ಧೋಽಸ್ಮಿ ನಾಸ್ಮಿ ಕೇವಲಮಾನುಷಃ |**
**ಇತ್ಯೇಭಿರ್ಹೇತುಭಿಸ್ತಸ್ಯ ತ್ರಿಭಿಶ್ಚಿತ್ತಂ ಪ್ರಸಿಚ್ಯತೇ ||೭||**

'ನಾನು ಸದ್ವಂಶದಲ್ಲಿ ಹುಟ್ಟಿದ್ದೇನೆ.' 'ನಾನು ಎಲ್ಲ ಸಿದ್ಧಿಗಳನ್ನೂ ಪಡೆದಿರುತ್ತೇನೆ'. 'ನಾನು ಸಾಧಾರಣಮನುಷ್ಯನಲ್ಲ'–ಈ ವಿಧವಾದ ಅಹಂಕಾರದ ಮೂರು ಕಾರಣಗಳಿಂದ ( ಧಾರೆಗಳಿಂದ ) ಮನುಷ್ಯನ ಬುದ್ಧಿಯು ನೆನೆದುಹೋಗುತ್ತದೆ. (ಈ ಭಾವನೆಗಳಿಂದ ಮನುಷ್ಯನ ಬುದ್ಧಿಯು ಗರ್ವಿತವಾಗುತ್ತದೆ. )

**ಸಮ್ಪ್ರಸಕ್ತಮನಾ ಭೋಗಾನ್ವಿಸೃಜ್ಯ ಪಿತೃಸಂಚಿತಾನ್ |**
**ಪರಿಕ್ಷೀಣಃ ಪರಸ್ವಾನಾಮಾದಾನಂ ಸಾಧು ಮನ್ಯತೇ ||೮||**

ಹಾಗೆ ಗರ್ವಿಷ್ಠನಾದ ಮನುಷ್ಯನು ಕಾಮೋಪಭೋಗಗಳಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಾಗಿ, ತಂದೆ-ತಾತ-ಮುತ್ತಾತಂದಿರು ಕೂಡಿಟ್ಟಿದ್ದ ಭೋಗಸಾಮಗ್ರಿಗಳನ್ನೂ ಧನ-ಕನಕಾದಿ ಐಶ್ವರ್ಯಗಳನ್ನೂ ಸಂಪೂರ್ಣವಾಗಿ ವ್ಯಯಮಾಡಿ, ನಿರ್ಧನನಾದ ಬಳಿಕ ಇತರರ ಸ್ವತ್ತನ್ನು ಅಪಹರಿಸುವುದೂ ಒಳ್ಳೆಯದೆಂದೇ ( ದೋಷವಿಲ್ಲವೆಂದೇ ) ಭಾವಿಸುತ್ತಾನೆ.

**ತಮತಿಕ್ರಾನ್ತಮರ್ಯಾದಮಾದದಾನಮಸಾಂಪ್ರತಮ್ ।**
**ಪ್ರತಿಷೇಧನ್ತಿ ರಾಜಾನೋ ಲುಬ್ಧಾ ಮೃಗಮಿವೇಷುಭಿಃ ॥೯॥**

ಲೋಕಮರ್ಯಾದೆಯನ್ನೇ ಮೀರಿ ಅನುಚಿತವಾದ ರೀತಿಯಲ್ಲಿ ಇತರರ ಸ್ವತ್ತನ್ನು ಅಪಹರಿಸುವುದರಲ್ಲಿ ನಿರತನಾಗುವ ಆ ಮನುಷ್ಯನನ್ನು–ಮೃಗಲುಬ್ಧರಾದ ವ್ಯಾಧರು ಬಾಣಗಳಿಂದ ಮೃಗಗಳನ್ನು ನಿರೋಧಿಸುವಂತೆ–ಧರ್ಮಲುಬ್ಧರಾದ ರಾಜರು ದಂಡದ ಮೂಲಕವಾಗಿ ನಿರೋಧಿಸುತ್ತಾರೆ. (ಶಿಕ್ಷಿಸುತ್ತಾರೆ.)

ಇಪ್ಪತ್ತು ಅಥವಾ ಮೂವತ್ತು ವರ್ಷಗಳ ಯಾವ ಯುವಕರು ಹೀಗೆ ಚೋರವೃತ್ತಿಯನ್ನಾರಂಭಿಸುವರೋ ಅವರು ನೂರು ವರ್ಷಗಳ ಪರ್ಯಂತ ವಾಗಿ ಜೀವಿಸಿರುವುದಿಲ್ಲ. ( ರಾಜನ ಶಿಕ್ಷೆಗೊಳಗಾಗಿ ಅಲ್ಪಾಯುಗಳಾಗಿಯೇ ಅವಸಾನಹೊಂದುವರು. ) ಹೀಗೆ ಪೂರ್ಣಾಯುಷ್ಯದ ಮಧ್ಯದಲ್ಲಿಯೇ ಅವಸಾನಹೊಂದಲು ಅವರ ನಿರ್ಧನತ್ವವೇ ಕಾರಣವಾಗಿರುತ್ತದೆ. (ಯಾರೋ ಗಳಿಸಿಟ್ಟಿದ್ದ ಧನವನ್ನು, ಧನದ ಮೌಲ್ಯವನ್ನು ತಿಳಿಯದೇ, ಅಪವ್ಯಯಮಾಡು ವುದರಿಂದಲೇ ಮನುಷ್ಯನು ನಿರ್ಧನನಾಗುತ್ತಾನೆ. ನಿರ್ಧನನಾದನಂತರ, ಸ್ವಾಭಾವಿಕವಾಗಿ ಕೆಲಸಮಾಡುವ ಪ್ರವೃತ್ತಿಯೇ ಮೊದಲಿನಿಂದಲೂ ಇಲ್ಲದೇ ಇರುವುದರಿಂದ, ಸುಲಭದಲ್ಲಿ ಐಶ್ವರ್ಯವನ್ನು ಗಳಿಸುವ ಸಲುವಾಗಿ ಪರಸ್ವಾಪಹರಣಕಾರ್ಯವನ್ನು ಆರಂಭಿಸುತ್ತಾನೆ. ಧನಮದ-ವಂಶಮದ ಗಳಿಂದಾಗಿ ಮೊದಲಿನಿಂದಲೂ ಧಾರ್ಮಿಕಜೀವನವನ್ನು ನಡೆಸುವ ಪ್ರವೃತ್ತಿಯೇ ಇಲ್ಲದಿರುವುದರಿಂದ ಅಂತಹ ಮನುಷ್ಯನಿಗೆ ಪರಸ್ವಾಪಹರಣ ದಲ್ಲಿ ಧರ್ಮಾಧರ್ಮಗಳ ವಿವೇಚನೆಯೇ ಉಂಟಾಗುವುದಿಲ್ಲ. ಅನೇಕ ದಿವಸಗಳವರೆಗೆ ರಾಜನ ( ರಾಜ್ಯಾಧಿಕಾರಿಗಳ ) ಕಣ್ಣುತಪ್ಪಿಸಿ ಕಳ್ಳತನವನ್ನು

ಮಾಡುತ್ತಿದ್ದರೂ ಕಡೆಗೊಮ್ಮೆ ಅವನು ರಾಜನ ಶಿಕ್ಷೆಗೆ ಗುರಿಯಾಗುವುದಂತೂ ನಿಜ. ಅವನ ಜೀವನವೂ ಮೊಟಕುಗೊಳ್ಳುತ್ತದೆ. ಇದಕ್ಕೆ ಮುಖ್ಯವಾದ ಕಾರಣಗಳೆಂದರೆ ಅಹಂಕಾರ ಮತ್ತು ನಿರ್ಧನತೆ. )

ಅಶ್ಮನು ಹೇಳುತ್ತಾನೆ :

"ಜನಕರಾಜ! ಹೀಗೆ ವಿಶ್ವದಲ್ಲಿರುವ ಎಲ್ಲ ಪ್ರಾಣಿಗಳ (ಮನುಷ್ಯರ) ವ್ಯವಹಾರಗಳನ್ನೂ ಅಲ್ಲಲ್ಲಿ ನೋಡುತ್ತಾ ಆ ಮಹಾದುಃಖಗಳಿಗೆ ನಿವಾರಣೋಪಾಯವನ್ನು ಬುದ್ಧಿಯಿಂದ ಯೋಚಿಸಿ ಚಿಕಿತ್ಸೆಯನ್ನು ನಡೆಸಬೇಕು.

**ಮಾನಸಾನಾಂ ಪುನರ್ಯೋನಿರ್ದುಃಖಾನಾಂ ಚಿತ್ತವಿಭ್ರಮಃ ।**
**ಅನಿಷ್ಟೋಪನಿಪಾತೋ ವಾ ತೃತೀಯಂ ನೋಪಪದ್ಯತೇ ॥೧೨॥**

ಮನುಷ್ಯರ ಮಾನಸಿಕವಾದ ದುಃಖಗಳಿಗೆ ಬುದ್ಧಿಭ್ರಮೆ ಮತ್ತು ಅನಿಷ್ಟಪ್ರಾಪ್ತಿಗಳೆಂಬ ಎರಡು ಕಾರಣಗಳಿವೆ. ಮಾನಸಿಕವಾದ ದುಃಖಕ್ಕೆ ಮೂರನೆಯ ಕಾರಣವು ಯಾವುದೂ ಇರುವುದಿಲ್ಲ.

ಹೀಗೆ ಈ ಎರಡು ಕಾರಣಗಳಿಂದಲೇ ಭಿನ್ನ-ಭಿನ್ನಪ್ರಕಾರವಾದ ದುಃಖಗಳು ಮನುಷ್ಯನನ್ನು ಆವರಿಸುತ್ತವೆ. ಅಲ್ಲದೇ ವಿಷಯಗಳ ಮೇಲಿನ ಆಸಕ್ತಿಯಿಂದಲೂ ದುಃಖಗಳು ಪ್ರಾಪ್ತವಾಗುತ್ತವೆ.

**ಜರಾಮೃತ್ಯೂ ಹಿ ಭೂತಾನಾಂ ಖಾದಿತಾರೌ ವೃಕಾವಿವ ।**
**ಬಲಿನಾಂ ದುರ್ಬಲಾನಾಂ ಚ ಹ್ರಸ್ವಾನಾಂ ಮಹತಾಮಪಿ ॥೧೪॥**

ಮುಪ್ಪು-ಸಾವುಗಳೆಂಬುವು ಪ್ರಾಣಿಗಳನ್ನು ತಿನ್ನತಕ್ಕ ಎರಡು ತೋಳಗಳಂತೆ. ಈ ಮುಪ್ಪು-ಸಾವುಗಳಿಗೆ ಯಾವ ತಾರತಮ್ಯವೂ ಇಲ್ಲ. ಬಲಿಷ್ಠರನ್ನೂ ತಿನ್ನುತ್ತವೆ ; ದುರ್ಬಲರನ್ನೂ ತಿನ್ನುತ್ತವೆ ; ಸಣ್ಣವರನ್ನೂ ತಿನ್ನುತ್ತವೆ ; ದೊಡ್ಡವರನ್ನೂ ತಿನ್ನುತ್ತವೆ.

**ನ ಕಶ್ಚಿಜ್ಜಾತ್ವತಿಕ್ರಾಮೇಜ್ಜರಾಮೃತ್ಯೂ ಹಿ ಮಾನವಃ ।**
**ಅಪಿ ಸಾಗರಪರ್ಯನ್ತಾಂ ವಿಜಿತ್ಯೇಮಾಂ ವಸುನ್ಧರಾಮ್ ॥೧೫॥**

ಯಾವನೇ ಒಬ್ಬ ಮನುಷ್ಯನು ಯಾವಾಗಲೂ ಈ ಮುಪ್ಪು ಮತ್ತು ಸಾವುಗಳನ್ನು ಅತಿಕ್ರಮಿಸಲಾರನು. ಸಾಗರಪರ್ಯಂತವಾದ ಈ

ಭೂಮಂಡಲವನ್ನೇ ಜಯಿಸಿದರೂ ಮುಪ್ಪು-ಸಾವುಗಳನ್ನು ಜಯಿಸಲು ಸಾಧ್ಯವಾಗುವುದೇ ಇಲ್ಲ.

**ಸುಖಂ ವಾ ಯದಿ ವಾ ದುಃಖಂ ಭೂತಾನಾಂ ಪರ್ಯುಪಸ್ಥಿತಮ್ ।**
**ಪ್ರಾಪ್ತವ್ಯಮವಶೈಃ ಸರ್ವಂ ಪರಿಹಾರೋ ನ ವಿದ್ಯತೇ ॥೧೬॥**

ಮನುಷ್ಯನಿಗೆ ಕಾಲಕರ್ಮಸಂಯೋಗದಿಂದ ಪ್ರಾಪ್ತವಾಗುವುದು ಸುಖವೇ ಆಗಿರಲಿ, ದುಃಖವೇ ಆಗಿರಲಿ–ಅಸ್ವತಂತ್ರರಾಗಿ ಸುಖ-ದುಃಖಗಳನ್ನು ಸಹನೆಯಿಂದ ಹೊಂದಲೇಬೇಕು. (ಅನುಭವಿಸಬೇಕು.) ಇದಲ್ಲದೇ ಬೇರೆಯ ಪರಿಹಾರವೇ ಇಲ್ಲ.

**ಪೂರ್ವೇ ವಯಸಿ ಮಧ್ಯೇ ವಾಪ್ಯುತ್ತರೇ ವಾ ನರಾಧಿಪ ।**
**ಅವರ್ಜನೀಯಾಸ್ತೇಽರ್ಥಾ ವೈ ಕಾಂಕ್ಷಿತಾ ಯೇ ತತೋಽನ್ಯಥಾ ॥೧೭॥**

ಮನುಷ್ಯನಿಗೆ ಪೂರ್ವವಯಸ್ಸಿನಲ್ಲಾಗಲೀ, ಮಧ್ಯವಯಸ್ಸಿನಲ್ಲಾಗಲೀ, ವೃದ್ಧಾಪ್ಯದಲ್ಲಾಗಲೀ ಸುಖ-ದುಃಖರೂಪಗಳಾದ ಈ ವಿಷಯಗಳು ತಪ್ಪಿದ್ದೇ ಅಲ್ಲ. ಸುಖ-ದುಃಖಗಳನ್ನು ತ್ಯಾಗಮಾಡಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಅನುಭವಿಸಿಯೇ ತೀರಬೇಕು. ಆದರೆ ಮನುಷ್ಯರು ಯಾವಾಗಲೂ ಸುಖವನ್ನೇ ಬಯಸುತ್ತಾರೆಯೇ ಹೊರತು ಕಷ್ಟವನ್ನು ಅಪೇಕ್ಷಿಸುವುದಿಲ್ಲ. ಮನುಷ್ಯನ ಜೀವನದಲ್ಲಿ ಸುಖ-ದುಃಖಗಳು ಪರಿವರ್ತನೆಗೊಳ್ಳುತ್ತಲೇ ಇರುತ್ತವೆ.

**ಅಪ್ರಿಯೈಃ ಸಹ ಸಂಯೋಗೋ ವಿಪ್ರಯೋಗಶ್ಚ ಸುಪ್ರಿಯೈಃ ।**
**ಅರ್ಥಾನರ್ಥೌ ಸುಖಂ ದುಃಖಂ ವಿಧಾನಮನುವರ್ತತೇ ॥೧೮॥**

ಅಪ್ರಿಯರಾದವರೊಡನೆ (ಅಪ್ರಿಯವಾದ ವಸ್ತುಗಳೊಡನೆ ) ಸಹವಾಸ, ಅತ್ಯಂತಪ್ರಿಯರಾದವರೊಡನೆ (ಅತ್ಯಂತಪ್ರಿಯವಸ್ತುಗಳೊಡನೆ) ವಿಯೋಗ, ಅರ್ಥಪ್ರಾಪ್ತಿ, ಅನರ್ಥಪ್ರಾಪ್ತಿ, ಸುಖ ಮತ್ತು ದುಃಖ–ಇವುಗಳು ಅವರವರ ಪ್ರಾರಬ್ಧವನ್ನು ಅನುಸರಿಸಿಯೇ ಬರತಕ್ಕುವುಗಳು.

**ಪ್ರಾದುರ್ಭಾವಶ್ಚ ಭೂತಾನಾಂ ದೇಹತ್ಯಾಗಸ್ತಥೈವ ಚ ।**
*** ಪ್ರಾಪ್ತಿರ್ವ್ಯಾಯಾಮಯೋಗಶ್ಚ ಸರ್ವಮೇತತ್ಪ್ರತಿಷ್ಠಿತಮ್ ॥೧೯॥**

---

* ಪ್ರಾಪ್ತಿಃ : ವ್ಯಾಯಾಮಯೋಗಶ್ಚ–ಎಂಬುದಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥ

ಪ್ರಾಣಿಗಳ (ಮನುಷ್ಯರ) ಹುಟ್ಟು-ಸಾವುಗಳೂ, ಲಾಭಲಾಭಗಳೂ ಅವರವರು ಪಡೆದುಕೊಂಡು ಬಂದ ಪ್ರಾರಬ್ಧಕರ್ಮಗಳ ಫಲದಲ್ಲಿಯೇ ಪ್ರತಿಷ್ಠಿತವಾಗಿರುತ್ತವೆ.

**ಗನ್ಧವರ್ಣರಸಸ್ಪರ್ಶಾ ನಿವರ್ತನ್ತೇ ಸ್ವಭಾವತಃ ।**
**ತಥೈವ ಸುಖದುಃಖಾನಿ ವಿಧಾನಮನುವರ್ತತೇ ॥೨೦॥**

ಗಂಧ-ರೂಪ-ರಸ-ಸ್ಪರ್ಶಗಳು ಸ್ವಾಭಾವಿಕವಾಗಿ ಬಂದು-ಹೋಗುತ್ತಿರುತ್ತವೆ. ಪುಷ್ಪವು ಅರಳುತ್ತಿದ್ದಂತೆಯೇ ಸುವಾಸನೆಯು ಹೊರಸೂಸುತ್ತದೆ. ಹೂವು ಬಾಡಿದಂತೆಲ್ಲಾ ಅದರಲ್ಲಿರುವ ವಾಸನೆಯೂ ಕಡಿಮೆಯಾಗುತ್ತದೆ. ಹಾಗೆಯೇ ಸುಖ-ದುಃಖಗಳೂ ಅವರವರ ಕರ್ಮಫಲಾನುಸಾರವಾಗಿ ದೈವದ ನಿಯಮವನ್ನು ಅನುಸರಿಸಿಯೇ ಬರುತ್ತವೆ.

**ಆಸನಂ ಶಯನಂ ಯಾನಮುತ್ಥಾನಂ ಪಾನಭೋಜನಮ್ ।**
**ನಿಯತಂ ಸರ್ವಭೂತಾನಾಂ ಕಾಲೇನೈವ ಭವತ್ಯುತ ॥೨೧॥**

ಕುಳಿತುಕೊಳ್ಳುವುದು, ಮಲಗುವುದು, ಓಡಾಡುವುದು, ಎದ್ದುನಿಲ್ಲುವುದು, ಕುಡಿಯುವುದು, ತಿನ್ನುವುದು–ಈ ಎಲ್ಲವೂ ಎಲ್ಲ ಪ್ರಾಣಿಗಳಿಗೂ ನಿಯತವಾದುವುಗಳು. ಈ ಎಲ್ಲ ಕಾರ್ಯಗಳೂ ಕಾಲಾನುಸಾರವಾಗಿ ನಿಯತವಾಗಿ ನಡೆಯುತ್ತವೆ. ಒಂದೊಂದು ಕ್ರಿಯೆಗೂ ಕಾಲವು ನಿಯತವಾಗಿದೆ. ಆಯಾ ಕಾಲಗಳಲ್ಲಿಯೇ ಆಯಾ ಕರ್ಮಗಳನ್ನು ಮಾಡಬೇಕಾಗುವುದು. ಮಾನವನ ಪ್ರತಿಯೊಂದು ಕ್ರಿಯೆಯೂ ಕಾಲಾಧೀನವಾಗಿರುತ್ತದೆ.

**ವೈದ್ಯಾಶ್ಚಾಪ್ಯಾತುರಾಃ ಸನ್ತಿ ಬಲವನ್ತಶ್ಚ ದುರ್ಬಲಾಃ ।**
**ಶ್ರೀಮನ್ತಶ್ಚಾಪರೇ ಷಣ್ಡಾ ವಿಚಿತ್ರಃ ಕಾಲಪರ್ಯಯಃ ॥೨೨॥**

ವೈದ್ಯರಾಗಿರುವವರೂ ರೋಗಿಗಳಾಗಿರುತ್ತಾರೆ. (ಜ್ಞಾನಿಗಳೂ ದುಃಖ ಪೀಡಿತರಾಗುತ್ತಾರೆ.) ಬಲಿಷ್ಠರಾಗಿದ್ದರೂ ಮಾನಸಿಕವಾದ ದೌರ್ಬಲ್ಯವನ್ನು

---

ಮಾಡಿದ್ದಾರೆ : ಪ್ರಾಪ್ತಿಃ = ಲಾಭಃ, ವ್ಯಾಯಾಮಃ = ಶ್ರಮಃ ಅಲಾಭ ಇತಿ ಯಾವತ್, ತಯೋರ್ಯೋಗಃ ವ್ಯಾಯಾಮ ಎಂದರೆ ಶ್ರಮ ಅರ್ಥಾತ್ ಅಲಾಭ. ಲಾಭಾಲಾಭಗಳ ಯೋಗ.

ಹೊಂದಿರುತ್ತಾರೆ. ಶ್ರೀಮಂತರಾಗಿರುತ್ತಾರೆ ; ಆದರೆ ಷಂಡರಾಗಿರುತ್ತಾರೆ. ಹೀಗೆ ಕಾಲದ ವೈಪರೀತ್ಯವು ಬಹಳ ವಿಚಿತ್ರವಾಗಿದೆ.

**ಕುಲೇ ಜನ್ಮ ತಥಾ ವೀರ್ಯಮಾರೋಗ್ಯಂ ರೂಪಮೇವ ಚ ।**
**ಸೌಭಾಗ್ಯಮುಪಭೋಗಶ್ಚ ಭವಿತವ್ಯೇನ ಲಭ್ಯತೇ ॥೨೩॥**

ಉತ್ತಮಕುಲದಲ್ಲಿ ಹುಟ್ಟುವುದು, ಬಲ-ಪರಾಕ್ರಮಗಳು, ಆರೋಗ್ಯ, ಸುಂದರವಾದ ರೂಪ, ಸೌಭಾಗ್ಯ, ಉಪಭೋಗಸಾಮಗ್ರಿಗಳು–ಇವುಗಳೆಲ್ಲವೂ ಅದೃಷ್ಟದಿಂದಲೇ ಲಭ್ಯವಾಗುತ್ತವೆ.

**ಸನ್ತಿ ಪುತ್ರಾಃ ಸುಬಹವೋ ದರಿದ್ರಾಣಾಮನಿಚ್ಛತಾಮ್ ।**
**ನಾಸ್ತಿ ಪುತ್ರಃ ಸಮೃದ್ಧಾನಾಂ ವಿಚಿತ್ರವಿಧಿಚೇಷ್ಟಿತಮ್ ॥೨೪॥**

ಮಕ್ಕಳೇ ಬೇಡವೆನ್ನುವ ದರಿದ್ರರಿಗೆ ಬಹುಪುತ್ರರಿರುತ್ತಾರೆ. ಮಕ್ಕಳಾಗಬೇಕೆಂದು ಹಂಬಲಿಸುವ ಐಶ್ವರ್ಯವಂತರಿಗೆ ಕುಲವೃದ್ಧಿಗಾದರೂ ಒಬ್ಬನಾದರೂ ಮಗನು ಇರುವುದಿಲ್ಲ. ನಿಶ್ಚಯವಾಗಿಯೂ ವಿಧಿಯ ಕಾರ್ಯವು ಅತ್ಯಂತ ವಿಚಿತ್ರವಾದುದು.

**ವ್ಯಾಧಿರಗ್ನಿರ್ಜಲಂ ಶಸ್ತ್ರಂ ಬುಭುಕ್ಷಾಶ್ವಾಪದೋ ವಿಷಮ್ ।**
**ಜ್ವರಶ್ಚ ಮರಣಂ ಜನ್ತೋರುಚ್ಚಾಚ್ಚ ಪತನಂ ತಥಾ ।**
**ನಿರ್ಯಾಣಂ ಯಸ್ಯ ಯದ್ದಿಷ್ಟಂ ತೇನ ಗಚ್ಛತಿ ಸೇತುನಾ ॥೨೫॥**

ವ್ಯಾಧಿ, ಅಗ್ನಿ, ನೀರು, ಶಸ್ತ್ರ, ಹಸಿವು, ಆಪತ್ತು (ಅಪಘಾತ), ವಿಷ, ಜ್ವರ, ಮೇಲಿನಿಂದ ಕೆಳಕ್ಕೆ ಬೀಳುವುದು–ಇವುಗಳು ಪ್ರಾಣಿಯ ಮರಣಕ್ಕೆ ಮುಖ್ಯನಿಮಿತ್ತಗಳಾಗಿರುತ್ತವೆ. ಪರಲೋಕಯಾತ್ರೆಗೆ ಇವುಗಳು ಸೇತುವೆಯಂತಿವೆ. ಪ್ರಾಣಿಯು (ಮನುಷ್ಯನು) ಹುಟ್ಟುವಾಗ ಅವನ ಹಣೆಯಲ್ಲಿ ಯಾವುದನ್ನು ಸೇತುವೆಯನ್ನಾಗಿ ಮಾಡಿಕೊಂಡು ಪರಲೋಕಕ್ಕೆ ಹೋಗಬೇಕೆಂದು ಬರೆದಿರುತ್ತದೆಯೋ, ಅದೇ ಸೇತುವೆಯ ಮೂಲಕವಾಗಿಯೇ ಅವನು ಪರಲೋಕಕ್ಕೆ ಹೋಗುತ್ತಾನೆ.

**ದೃಶ್ಯತೇ ನಾಪ್ಯತಿಕ್ರಾಮನ್ನ ನಿಷ್ಕ್ರಾನ್ತೋಽಥವಾ ಪುನಃ ।**
**ದೃಶ್ಯತೇ ಚಾಪ್ಯತಿಕ್ರಾಮನ್ನ ನಿಗ್ರಾಹ್ಯೋಽಥವಾ ಪುನಃ ॥೨೬॥**

ಕೆಲವು ಸಂದರ್ಭಗಳಲ್ಲಿ ಧರ್ಮವನ್ನು ಉಲ್ಲಂಘಿಸದೇ ಇರತಕ್ಕವನೂ, ಪಾಪವನ್ನೇ ಮಾಡದವನೂ ಆಪತ್ತಿನಿಂದ ಪಾರಾಗದೇ ಇರುವುದು ಕಾಣು ತ್ತದೆ. ಕೆಲವು ಸಂದರ್ಭಗಳಲ್ಲಿ ಧರ್ಮವನ್ನು ಅತಿಕ್ರಮಿಸಿ ನಡೆಯುವವನೂ, ಮಹಾಪಾಪಿಷ್ಠನೂ ಯಾವ ವಿಧವಾದ ಆಪತ್ತಿಗೂ ಒಳಗಾಗದೇ ಇರುವು ದನ್ನೂ ನಾವು ಕಾಣುತ್ತೇವೆ. (ಸತ್ಪುರುಷರು, ಋಜುಮಾರ್ಗದಿಂದ ವ್ಯವಹಾರ ನಡೆಸುವವರು, ಸತ್ಯಸಂಧರು, ಧರ್ಮಭೀರುಗಳು ಅನೇಕವಿಧವಾದ ತೊಂದರೆಗಳಿಗೆ ಒಳಗಾಗುತ್ತಲೇ ಇರುತ್ತಾರೆ. ಕುತ್ಸಿತವಾದ ರೀತಿಯಲ್ಲಿ ಹಣಗಳಿಸುವವರು, ಮೋಸ-ವಂಚನೆಗಳನ್ನೇ ವ್ಯವಹಾರದಲ್ಲಿಟ್ಟುಕೊಂಡಿರು ವವರು, ಅಪ್ಪಿ-ತಪ್ಪಿಯೂ ನಿಜಹೇಳದವರು, ಪರಸ್ವಾಪಹಾರಕರು ಸುಖ ವಾಗಿಯೇ ಇರುವುದನ್ನೂ ನಾವು ಕಾಣುತ್ತಿದ್ದೇವೆ.)

**ದೃಶ್ಯತೇ ಹಿ ಯುವೈವೇಹ ವಿನಶ್ಯನ್ವಸುಮಾನ್ನರಃ ।**
**ದರಿದ್ರಶ್ಚ ಪರಿಕ್ಲಿಷ್ಟಃ ಶತವರ್ಷೋ ಜರಾನ್ವಿತಃ ॥೨೭॥**

ಅಪಾರವಾದ ಐಶ್ವರ್ಯವನ್ನು ಹೊಂದಿರುವ ಮನುಷ್ಯನು ಯುವಕ ನಾಗಿದ್ದಾಗಲೇ ಸತ್ತುಹೋಗುತ್ತಾನೆ. ದರಿದ್ರನಾದವನು ಅತ್ಯಂತ ಕ್ಲೇಶದಿಂದ ಜೀವನವನ್ನು ನಡೆಸುತ್ತಾ ವೃದ್ಧಾಪ್ಯವನ್ನು ಹೊಂದಿ ನೂರು ವರ್ಷಗಳ ಕಾಲ ಬದುಕಿಯೇ ಇರುತ್ತಾನೆ. ಇದನ್ನೂ ನೋಡುತ್ತಿದ್ದೇವೆ. (ಐಶ್ವರ್ಯವಂತನಾದ ಯುವಕನಿಗೆ ಬಾಳಿ-ಬದುಕಬೇಕೆನ್ನುವ ಆಸೆಯು ಹಿರಿದಾಗಿರುತ್ತದೆ. ಮೃತ್ಯುವು ಅವನ ಆಸೆಯನ್ನು ಕೈಗೂಡಿಸದೇ ಯೌವನಮಧ್ಯದಲ್ಲಿಯೇ ಅವನ ಜೀವನವನ್ನು ಅಪಹರಿಸಿಬಿಡುತ್ತದೆ. ಹತ್ತಾರು ಮಕ್ಕಳನ್ನು ಪಡೆದ ದರಿದ್ರನಿಗೆ ಜೀವನವೇ ಬೇಡವಾಗಿರುತ್ತದೆ. ಸತ್ತುಬದುಕಬೇಕೆಂದು ಹಂಬಲಿಸುತ್ತಾನೆ. ಆದರೆ ಪೂರ್ಣಾಯುಷ್ಯವು ಮುಗಿಯುವವರೆಗೂ ಮೃತ್ಯುವು ಅವನ ಹತ್ತಿರವೂ ಸುಳಿಯುವುದಿಲ್ಲ.)

**ಅಕಿಞ್ಚನಾಶ್ಚ ದೃಶ್ಯನ್ತೇ ಪುರುಷಾಶ್ಚಿರಜೀವಿನಃ ।**
**ಸಮೃದ್ಧೇ ಚ ಕುಲೇ ಜಾತಾ ವಿನಶ್ಯನ್ತಿ ಪತಙ್ಗವತ್ ॥೨೮॥**

ಯಾರ ಬಳಿಯಲ್ಲಿ ಏನೂ ಇರುವುದಿಲ್ಲವೋ ಅಂತಹ ದಟ್ಟದರಿದ್ರರು ಚಿರಂಜೀವಿಗಳಾಗಿರುತ್ತಾರೆ. ಆದರೆ ಆಗರ್ಭಶ್ರೀಮಂತರ ವಂಶದಲ್ಲಿ

ಹುಟ್ಟಿದವರು ಪತಂಗದ ಹುಳುಗಳಂತೆ ಬಹಳ ಬೇಗ ( ಬಾಲ್ಯ-ಕೌಮಾರ-ಯೌವನಾವಸ್ಥೆಗಳಲ್ಲಿಯೇ ) ಅಸುನೀಗುತ್ತಾರೆ.

**ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನ ವಿದ್ಯತೇ ।**
**ಕಾಷ್ಠಾನ್ಯಪಿ ಹಿ ಜೀರ್ಯನ್ತೇ ದರಿದ್ರಾಣಾಂ ಚ ಸರ್ವಶಃ ॥೨೯॥**

ಸಾಮಾನ್ಯವಾಗಿ ಶ್ರೀಮಂತರಾದವರಿಗೆ ಭೋಜನಶಕ್ತಿಯೇ ( ಅನ್ನವನ್ನು ಅರಗಿಸಿಕೊಳ್ಳುವ ) ಇರುವುದಿಲ್ಲ. ಒಂದೆರಡು ತುತ್ತುಗಳಿಂದಲೇ ಅವರ ಹೊಟ್ಟೆಯು ತುಂಬಿಹೋಗುತ್ತದೆ. ಆದರೆ ದರಿದ್ರರಲ್ಲಿರುವ ಜಠರಾಗ್ನಿಗಳು ಕಟ್ಟಿಗೆಗಳನ್ನಾದರೂ ಸಂಪೂರ್ಣವಾಗಿ ಜೀರ್ಣಿಸಿಬಿಡುತ್ತವೆ. ದರಿದ್ರರಾದವರು ಯಾವ ಪದಾರ್ಥವನ್ನೇ ತಿಂದರೂ ಜೀರ್ಣಿಸಿಕೊಳ್ಳುತ್ತಾರೆ. ಎಷ್ಟು ತಿಂದರೂ ಅವರಿಗೆ ಹೊಟ್ಟೆಯು ತುಂಬುವುದೇ ಇಲ್ಲ.

**ಅಹಮೇತತ್ಕರೋಮೀತಿ ಮನ್ಯತೇ ಕಾಲನೋದಿತಃ ।**
**ಯದ್ಯದಿಷ್ಟಮಸಂತೋಷಾದ್ದುರಾತ್ಮಾ ಪಾಪಮಾಚರೇತ್ ॥೩೦॥**

ಕಾಲಚೋದಿತನಾದ, ದುರಾತ್ಮನಾದ ಮನುಷ್ಯನು "ನಾನೇ ಈ ಕಾರ್ಯವನ್ನು ಮಾಡುತ್ತೇನೆ"–ಎಂದು ಭಾವಿಸಿಕೊಳ್ಳುತ್ತಾನೆ. ಅವನಿಗೆ ಯಾವುದರಲ್ಲಿಯೂ ತೃಪ್ತಿಯೆಂಬುದೇ ಇರುವುದಿಲ್ಲ. ತನಗೆ ಯಾವು-ಯಾವುದು ಇಷ್ಟವೋ ಅದನ್ನು ಸಾಧಿಸಿಕೊಳ್ಳಲು ಪಾಪಕರ್ಮಗಳನ್ನು ಮಾಡುತ್ತಾನೆ.

**ಮೃಗಯಾಕ್ಷಾಃ ಸ್ತ್ರಿಯಃ ಪಾನಂ ಪ್ರಸಙ್ಗಾ ನಿನ್ದಿತಾ ಬುಧೈಃ ।**
**ದೃಶ್ಯನ್ತೇ ಪುರುಷಾಶ್ಚಾತ್ರ ಸಂಪ್ರಯುಕ್ತಾ ಬಹುಶ್ರುತಾಃ ॥೩೧॥**

ಬೇಟೆಯಾಡುವುದು ; ಪಗಡೆಯಾಟದ ಮೂಲಕ ದ್ಯೂತವಾಡುವುದು; ಸ್ತ್ರೀಯರಲ್ಲಿ ಅತ್ಯಾಸಕ್ತಿ ; ಸುರಾಪಾನ–ಈ ದುರಭ್ಯಾಸಗಳು ವಿದ್ವಾಂಸರಿಂದ ನಿಂದಿಸಲ್ಪಟ್ಟಿವೆ. ಇವುಗಳಲ್ಲಿ ಮನುಷ್ಯನು ಆಸಕ್ತನಾಗಬಾರದೆಂದು ವಿದ್ವಾಂಸರು ಹೇಳುತ್ತಾರೆ. ವೈಪರೀತ್ಯವೆಂದರೆ : ಎಲ್ಲ ಶಾಸ್ತ್ರಗಳನ್ನೂ ತಿಳಿದುಕೊಂಡಿರುವ ವಿದ್ವಾಂಸರೇ ಬೇಟೆ-ದ್ಯೂತಾದಿಗಳಲ್ಲಿ ಹೆಚ್ಚು ಆಸಕ್ತ ರಾಗಿರುವುದು ಕಂಡುಬರುತ್ತದೆ.

**ಇತಿ ಕಾಲೇನ ಸರ್ವಾರ್ಥಾನೀಪ್ಸಿತಾನೀಪ್ಸಿತಾನಿಹ ।**
**ಸ್ಪೃಶನ್ತಿ ಸರ್ವಭೂತಾನಿ ನಿಮಿತ್ತಂ ನೋಪಲಭ್ಯತೇ ॥೩೨॥**

ಹೀಗೆ ಕಾಲನ (ವಿಧಿಯ) ಪ್ರಭಾವದಿಂದಲೇ ಎಲ್ಲ ಪ್ರಾಣಿಗಳೂ ಸರ್ವಾರ್ಥಗಳನ್ನೂ, ಇಷ್ಟವಾದುವನ್ನೂ, ಇಷ್ಟವಲ್ಲದೇ ಇರುವುದನ್ನೂ ಪಡೆದುಕೊಳ್ಳುತ್ತವೆ. ಇಷ್ಟಾನಿಷ್ಟಗಳು ಅವರವರ ಅದೃಷ್ಟಾಯತ್ತವಾಗಿ ಲಭಿಸುವುದೇ ಹೊರತು ಅದಕ್ಕೆ ಬೇರಾವ ಕಾರಣವೂ ಇರುವುದಿಲ್ಲ.

ವಾಯು, ಆಕಾಶ, ಅಗ್ನಿ, ಚಂದ್ರ-ಸೂರ್ಯರು, ಹಗಲು-ರಾತ್ರಿಗಳು, ನಕ್ಷತ್ರಗಳು, ನದಿಗಳು, ಪರ್ವತಗಳು–ಇವುಗಳನ್ನು ಕಾಲನಲ್ಲದೇ ಮತ್ತಾರು ಸೃಷ್ಟಿಸುತ್ತಾರೆ? ಮತ್ತಾರು ಭರಿಸುತ್ತಾರೆ?

**ಶೀತಮುಷ್ಣಂ ತಥಾ ವರ್ಷಂ ಕಾಲೇನ ಪರಿವರ್ತತೇ ।**
**ಏವಮೇವ ಮನುಷ್ಯಾಣಾಂ ಸುಖದುಃಖೇ ನರರ್ಷಭ ॥೩೪॥**

ನರಶ್ರೇಷ್ಠನೇ! ಚಳಿ-ಬೇಸಿಗೆ-ಮಳೆಗಾಲಗಳು ಕಾಲನ ಪ್ರಭಾವ ದಿಂದಲೇ ಪರಿವರ್ತನೆ ಹೊಂದುತ್ತಿರುತ್ತವೆ. ಅಂತೆಯೇ ಮನುಷ್ಯರ ಸುಖ-ದುಃಖಗಳೂ ಕಾಲನ ನಿಯಮದಂತೆಯೇ ಬದಲಾಯಿಸುತ್ತಿರುತ್ತವೆ.

**ನೌಷಧಾನಿ ನ ಮನ್ತ್ರಾಶ್ಚ ನ ಹೋಮಾ ನ ಪುನರ್ಜಪಾಃ ।**
**ತ್ರಾಯನ್ತೇ ಮೃತ್ಯುನೋಪೇತಂ ಜರಯಾ ಚಾಪಿ ಮಾನವಮ್ ॥೩೫॥**

ಮುಪ್ಪಿನಿಂದ ಪೀಡಿತನಾದವನನ್ನೂ, ಮೃತ್ಯುವಶನಾದವನನ್ನೂ ಔಷಧವಾಗಲೀ, ಮಂತ್ರಗಳಾಗಲೀ, ಜಪ-ಹೋಮಾದಿಗಳಾಗಲೀ ರಕ್ಷಣೆ ಮಾಡುವುದಿಲ್ಲ.

**ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೌ ।**
**ಸಮೇತ್ಯ ಚ ವ್ಯಪೇಯಾತಾಂ ತದ್ವದ್ಭೂತಸಮಾಗಮಃ ॥೩೬॥**

ಮಹಾಸಮುದ್ರದಲ್ಲಿ ಎರಡು ಕಟ್ಟಿಗೆಗಳು ಎಲ್ಲಿಂದಲೋ ತೇಲಿ ಕೊಂಡು ಬಂದು ಒಂದು ಸಮಯದಲ್ಲಿ ಜೊತೆಗೂಡುತ್ತವೆ. ಸ್ವಲ್ಪಕಾಲ ಜೊತೆಯಲ್ಲಿಯೇ ತೇಲುತ್ತಿರುತ್ತವೆ. ಬಳಿಕ ಅವೆರಡೂ ಪ್ರತ್ಯೇಕವಾಗುತ್ತವೆ. ಪ್ರಾಣಿಗಳ ಸಮಾಗಮವೂ ಹಾಗೆಯೇ ಕ್ಷಣಿಕವಾಗಿರುತ್ತದೆ. (ಯಾವುದೋ ಜೀವಗಳು ಒಂದು ಸಂಸಾರದಲ್ಲಿ ಪಿತಾ-ಪುತ್ರ-ಪುತ್ರೀ-ಬಂಧುಗಳ ವ್ಯಾಜ

ದಲ್ಲಿ ಹುಟ್ಟುತ್ತವೆ. ಕೆಲವು ಕಾಲಾನಂತರದಲ್ಲಿ ಬೇರ್ಪಡುತ್ತವೆ. ಇದು ಹೀಗೆಯೇ ನಡೆಯುತ್ತಲೇ ಇರುತ್ತದೆ. )

**ಯೇ ಚೈವ ಪುರುಷಾಃ ಸ್ತ್ರೀಭಿರ್ಗೀತವಾದ್ಯೈರುಪಸ್ಥಿತಾಃ ।**
**ಯೇ ಚಾನಾಥಾಃ ಪರಾನ್ನಾದಾಃ ಕಾಲಸ್ತೇಷು ಸಮಕ್ರಿಯಃ ॥೩೭॥**

ಸ್ತ್ರೀಯರ ಸಮೂಹದಲ್ಲಿ ಗೀತ-ವಾದ್ಯಗಳನ್ನು ಕೇಳುತ್ತಾ ಆನಂದ ತುಂದಿಲರಾಗಿರುವ ಧನಿಕರ ವಿಷಯದಲ್ಲಿಯೂ, ಪರಾನ್ನವನ್ನೇ ತಿಂದು ಜೀವಿಸುವ ಅನಾಥರ ವಿಷಯದಲ್ಲಿಯೂ ಕಾಲವು ಸಮಾನವಾಗಿಯೇ ನಡೆದುಕೊಳ್ಳುತ್ತದೆ. ಕಾಲನಿಗೆ ಧನಿಕ-ದರಿದ್ರರಲ್ಲಿ, ಮೂರ್ಖ-ವಿದ್ವಾಂಸರಲ್ಲಿ, ಬ್ರಾಹ್ಮಣ-ಶ್ವಪಾಕರಲ್ಲಿ ಯಾವ ವಿಧವಾದ ತಾರತಮ್ಯವೂ ಇಲ್ಲ.

**ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿ ಚ ।**
**ಸಂಸಾರೇಷ್ವನುಭೂತಾನಿ ಕಸ್ಯ ತೇ ಕಸ್ಯ ವಾ ವಯಮ್ ॥೩೮॥**

ನಾವೆಲ್ಲರೂ ಈ ಸಂಸಾರದಲ್ಲಿ ಅನೇಕಾನೇಕ ಜನ್ಮಗಳನ್ನು ಪಡೆದು ಸಾವಿರಾರು ತಾಯಿ-ತಂದೆಗಳನ್ನೂ, ನೂರಾರು ಮಕ್ಕಳನ್ನೂ, ನೂರಾರು ಪತ್ನಿಯರನ್ನೂ ಪಡೆದುಕೊಂಡಿದ್ದೇವೆ. ಆದರೆ ಇಂದು ಅವರು ಯಾರಿಗೆ ಸಂಬಂಧಪಟ್ಟವರು? ನಾವು ತಾನೇ ಯಾರಿಗೆ ಸಂಬಂಧಿಸಿದವರು? (ಇದು ವರೆಗೆ ನಾವು ಎಷ್ಟೋ ಜನ್ಮಗಳನ್ನು ತಾಳಿದ್ದೇವೆ. ಎಷ್ಟೋ ಮಂದಿ ತಾಯಿ-ತಂದೆಗಳಿಗೆ ಮಕ್ಕಳಾಗಿದ್ದೇವೆ. ಎಷ್ಟೋ ಮಕ್ಕಳಿಗೆ ತಾಯಿ-ತಂದೆಯರೂ ಆಗಿದ್ದೇವೆ. ಎಷ್ಟೋ ಮಂದಿಗೆ ಪತಿ-ಪತ್ನಿಯರೂ ಆಗಿದ್ದೇವೆ. ಯಾವ ಜನ್ಮ ದಲ್ಲಿ ಯಾರಿಗೆ ತಾಯಿ-ತಂದೆಗಳಾಗಿದ್ದೆವು? ಯಾರಿಗೆ ಮಕ್ಕಳಾಗಿದ್ದೆವು? ಯಾರಿಗೆ ಪತಿ-ಪತ್ನಿಗಳಾಗಿದ್ದೆವು?–ಎಂಬ ಅರಿವು ನಮಗಿಲ್ಲ. ಈ ಜನ್ಮದಲ್ಲಿ ಅವರು ನಮ್ಮವರೂ ಆಗಿಲ್ಲ. ನಾವು ಅವರವರೂ ಆಗಿಲ್ಲ. ಈ ಜನ್ಮದಲ್ಲಿಯೂ ಪತಿ-ಪತ್ನೀ-ಪುತ್ರ-ಪೌತ್ರ-ಬಂಧು-ಮಿತ್ರರನೇಕರಿರುತ್ತಾರೆ. ಈ ಜನ್ಮದಲ್ಲಿ ಮಾತ್ರವೇ ಅವರು ನಮ್ಮವರೆನಿಸಿಕೊಳ್ಳುತ್ತಾರೆ. ನಾವೂ ಅವರಿಗೆ ಸಂಬಂಧಿಸಿದವರು–ಎನಿಸಿಕೊಳ್ಳುತ್ತೇವೆ. ನಮ್ಮ ಈ ಸಂಸಾರದಲ್ಲಿ ಯಾರಾ ದರೂ ಕಾಲವಾಗಿ ಹೋದರೆ ಅವರು ನಮ್ಮವರಾಗಿ ಉಳಿಯುವುದಿಲ್ಲ. ಬೇರೆ ಲ್ಲಿಯೋ ಜನ್ಮತಾಳುತ್ತಾರೆ. ನಾವು ಅವರವರಾಗಿಯೂ ಉಳಿಯುವುದಿಲ್ಲ. ಬೇರೆಯ ಜನ್ಮವನ್ನು ತಳೆದು ಅವರಿಗೆ ನಮ್ಮ ಸ್ಮರಣೆಯೂ ಇರುವುದಿಲ್ಲ. )

**ನೈವಾಸ್ಯ ಕಶ್ಚಿದ್ಭವಿತಾ ನಾಯಂ ಭವತಿ ಕಸ್ಯಚಿತ್ ।**
**ಪಥಿ ಸಙ್ಗತಮೇವೇದಂ ದಾರಬನ್ಧುಸುಹೃಜ್ಜನೈಃ ॥೩೯॥**

ಪ್ರಪಂಚದಲ್ಲಿ ಮನುಷ್ಯನು ಯಾವನೊಬ್ಬನವನೂ ಆಗುವುದಿಲ್ಲ. ಯಾವನೊಬ್ಬನೂ ಮನುಷ್ಯನಿಗೆ ಸಂಬಂಧಿಸಿದವನೂ ಆಗುವುದಿಲ್ಲ. ಮನುಷ್ಯ-ಮನುಷ್ಯರಿಗೆ ಯಾವ ಸಂಬಂಧವೂ ಇಲ್ಲ. ತಮ್ಮ-ತಮ್ಮ ಕರ್ಮಾನುಸಾರವಾಗಿ ಪ್ರತಿಯೊಬ್ಬರೂ ಹುಟ್ಟಿ-ಬೆಳೆದು-ಸಾಯುತ್ತಾರೆ. ಪತ್ನೀ-ಪುತ್ರ-ಸುಹೃದ್ಬಂಧುಗಳು ಒಂದೆಡೆಯಲ್ಲಿಯೇ ಸೇರಿದ್ದು ಒಬ್ಬರಿಗೊಬ್ಬ ರಿಗೆ ಸಂಬಂಧಿಸಿದಂತೆ ಒಬ್ಬರನ್ನೊಬ್ಬರು ಆಶ್ರಯಿಸಿರುವಂತೆ ಇರುವವ ರಲ್ಲವೇ?—ಇಂತಹ ಸಂಬಂಧವೂ ತಾತ್ಕಾಲಿಕವಾದುದು. ಪ್ರಯಾಣಿಕರು ತಮ್ಮ ಪಾಡಿಗೆ ತಾವು ಹೋಗುತ್ತಿರುತ್ತಾರೆ. ಯಾವುದೋ ಊರಿಗೆ ಹೋಗುವ ಕೆಲವು ಪ್ರಯಾಣಿಕರು ಯಾವುದೋ ಊರಿನಿಂದ ಬಂದು ಅವರ ಜೊತೆಗೆ ಸೇರಿಕೊಳ್ಳುತ್ತಾರೆ. ಹೀಗೆ ಎರಡು ಪಂಗಡದವರೂ ಸ್ವಲ್ಪದೂರದವರೆಗೆ ಜೊತೆಯಲ್ಲೇ ಹೋಗಿ ಪುನಃ ಒಬ್ಬೊಬ್ಬರೂ ತಮ್ಮ-ತಮ್ಮ ಹಾದಿಯನ್ನು ಹಿಡಿದು ಹೊರಟುಹೋಗುತ್ತಾರೆ. ಅಂತೆಯೇ ಈ ಸಂಸಾರದಲ್ಲಿಯೂ ಯಾವುದೋ ಜೀವಗಳು ಪತ್ನೀ-ಪುತ್ರ-ಭ್ರಾತೃ-ಸುಹೃದರೆಂಬ ವ್ಯಾಜದಿಂದ ಒಂದೆಡೆಯಲ್ಲಿ ಸೇರುತ್ತಾ ಕಾಲಬಂದೊಡನೆಯೇ ಪ್ರತ್ಯೇಕವಾಗುತ್ತವೆ. (ಪ್ರಯಾಣಿಕರ ಸಂಗದ ಮಿತಿಯು ಸ್ವಲ್ಪಹೊತ್ತಿನದು. ಪತಿ-ಪತ್ನೀ-ಪುತ್ರರ ಸಂಗದ ಮಿತಿಯು ಒಂದು ಜೀವಮಾನದ್ದು. ಇಷ್ಟು ಮಾತ್ರವೇ ವ್ಯತ್ಯಾಸ. )

**ಕ್ವಾಸೇ ಕ್ವ ಚ ಗಮಿಷ್ಯಾಮಿ ಕೋ ನ್ವಹಂ ಕಿಮಿಹಾಸ್ಥಿತಃ ।**
**ಕಸ್ಮಾತ್ಕಿಮನುಶೋಚೇಯಮಿತ್ಯೇವಂ ಸ್ಥಾಪಯೇನ್ಮನಃ ॥೪೦॥**

ಆದುದರಿಂದ ವಿವೇಕಿಯಾದವನು ತನ್ನ ಮನಸ್ಸಿನಲ್ಲಿಯೇ "ನಾನು ಎಲ್ಲಿದ್ದೇನೆ? ಎಲ್ಲಿಗೆ ಹೋಗುತ್ತಿದ್ದೇನೆ? ನಾನು ಯಾರಾಗಿದ್ದೇನೆ? ಇಲ್ಲಿಗೇಕೆ ಬಂದಿದ್ದೇನೆ? ಯಾರಿಗೋಸ್ಕರ ಏತಕ್ಕಾಗಿ ಚಿಂತಿಸುತ್ತಿದ್ದೇನೆ?" ಈ ಪ್ರಶ್ನೆಗಳನ್ನು ಹಾಕಿಕೊಂಡು ಚಿಂತಿಸಬೇಕು. ಮನಸ್ಸನ್ನು ಸ್ಥಿರಗೊಳಿಸಬೇಕು.

ಅನವರತವಾಗಿ ಹೀಗೆ ಚಿಂತಿಸಿದುದರ ಪರಿಣಾಮವಾಗಿ ಮಾನವನು ಈ ಸತ್ಯಸಂಗತಿಯನ್ನು ಕಂಡುಕೊಳ್ಳುತ್ತಾನೆ :

**ಅನಿತ್ಯೇ ಪ್ರಿಯಸಂವಾಸೇ ಸಂಸಾರೇ ಚಕ್ರವದ್ಗತೌ ।**
**ಪಥಿ ಸಙ್ಗತಮೇವೈತದ್ಭ್ರಾತಾ ಮಾತಾ ಪಿತಾ ಸಖಾ ॥೪೧॥**

ಸಂಸಾರವು ಚಕ್ರದಂತೆ ಸುತ್ತುತ್ತಿರುತ್ತದೆ. ಈ ಸಂಸಾರಚಕ್ರದಲ್ಲಿ ಪ್ರಿಯಜನರ ಸೇರುವಿಕೆಯು ಅನಿತ್ಯವಾದುದು ; ಶಾಶ್ವತವಲ್ಲ. ತಂದೆ, ತಾಯಿ, ಅಣ್ಣ, ತಮ್ಮ, ಸ್ನೇಹಿತ–ಇವರೆಲ್ಲರ ಸಂಗಮವು–ಹತ್ತಾರು ಹಳ್ಳಿಗಳಿಗೆ ಹೋಗುವ ಪ್ರಯಾಣಿಕರು ಹೆದ್ದಾರಿಯೊಂದರಲ್ಲಿ ಜೊತೆಗೂಡಿ ಹೋಗುವಂತೆಯೇ ಇರುತ್ತದೆ.

**ನ ದೃಷ್ಟಪೂರ್ವಂ ಪ್ರತ್ಯಕ್ಷಂ ಪರಲೋಕಂ ವಿದುರ್ಬುಧಾಃ ।**
**ಆಗಮಾಂಸ್ತ್ವನತಿಕ್ರಮ್ಯ ಶ್ರದ್ಧಾತವ್ಯಂ ಬುಭೂಷತಾ ॥೪೨॥**

ಪರಲೋಕವೆಂಬುದು ಪ್ರತ್ಯಕ್ಷದಲ್ಲಿಲ್ಲ. ಪರಲೋಕವನ್ನು 'ನಾನು ನೋಡಿದ್ದೇನೆ'–ಎಂದು ಹೇಳಿದವರೂ ಯಾರೂ ಇರುವುದಿಲ್ಲ ಎಂಬುದನ್ನು ವಿದ್ವಾಂಸರೂ ತಿಳಿದಿರುತ್ತಾರೆ. ಆದರೆ ಶ್ರೇಯಸ್ಕಾಮನಾದವನು ವೇದಗಳ ನಿರ್ದೇಶವನ್ನು ಉಲ್ಲಂಘಿಸದೇ ವೇದವಾಕ್ಯಗಳಲ್ಲಿ ಸಂಪೂರ್ಣವಾದ ಶ್ರದ್ಧೆಯನ್ನಿಡಬೇಕು. (ಪರಲೋಕವನ್ನು ನಾವು ನೋಡದೇ ಇರಬಹುದು. ನಮ್ಮ ಹಿಂದಿನವರೂ ನೋಡದೇ ಇರಬಹುದು. ಆದರೆ ಋಷಿದೃಷ್ಟವಾದ ವೇದಗಳು ಪರಲೋಕವಿರುವುದೆಂದು ಹೇಳುತ್ತವೆ. ಅದರಲ್ಲಿ ನಾವು ಶ್ರದ್ಧೆಯನ್ನಿಡಬೇಕು. ವೇದೋಕ್ತವಾದ ಕರ್ಮಗಳನ್ನು ಮಾಡುತ್ತಾ ವೇದವಿಹಿತವಾದ ಮಾರ್ಗದಲ್ಲಿಯೇ ನಡೆಯಬೇಕು. ಇದೇ ನಮಗೆ ಶ್ರೇಯಸ್ಕರವಾದುದು.)

**ಕುರ್ವೀತ ಪಿತೃದೈವತ್ಯಂ ಧರ್ಮಾಣಿ ಚ ಸಮಾಚರೇತ್ ।**
**ಯಜೇಚ್ಚ ವಿದ್ವಾನ್ವಿಧಿವತ್ತ್ರಿವರ್ಗಂ ಚಾಪ್ಯುಪಾಚರೇತ್ ॥೪೩॥**

ವಿದ್ವಾಂಸನಾದವನು ಪಿತೃಸಂಬಂಧವಾದ ಶ್ರಾದ್ಧ-ತರ್ಪಣಾದಿಗಳನ್ನೂ ದೇವತಾಸಂಬಂಧವಾದ ಪೂಜಾದಿಗಳನ್ನೂ ಮಾಡಬೇಕು. ಧರ್ಮಕಾರ್ಯ

ಗಳನ್ನು ಆಚರಿಸಬೇಕು. ವಿಧಿವತ್ತಾಗಿ ಯಜ್ಞಮಾಡಬೇಕು ; ಧರ್ಮಾರ್ಥ ಕಾಮಗಳನ್ನು ಸೇವಿಸಬೇಕು.

**ಸಂನಿಮಜ್ಜೇಜ್ಜಗದಿದಂ ಗಮ್ಭೀರೇ ಕಾಲಸಾಗರೇ ।**
**ಜರಾಮೃತ್ಯುಮಹಾಗ್ರಾಹೇ ನ ಕಶ್ಚಿದವಬುಧ್ಯತೇ ॥೪೪॥**

ಮುಪ್ಪು ಮತ್ತು ಮರಣಗಳೆಂಬ ಮೊಸಳೆಗಳಿಂದ ಕೂಡಿರುವ, ಗಂಭೀರವಾದ ಕಾಲವೆಂಬ ಸಾಗರದಲ್ಲಿ ಈ ಜಗತ್ತೆಲ್ಲವೂ ಮುಳುಗಿಹೋಗುತ್ತಿದೆ. ಆದರೆ ಯಾರೂ ಈ ವಿಷಯವನ್ನು ತಿಳಿದುಕೊಳ್ಳುವುದಿಲ್ಲ.

**ಆಯುರ್ವೇದಮಧೀಯಾನಾಃ ಕೇವಲಂ ಸಪರಿಗ್ರಹಮ್ ।**
**ದೃಶ್ಯನ್ತೇ ಬಹವೋ ವೈದ್ಯಾ ವ್ಯಾಧಿಭಿಃ ಸಮಭಿಪ್ಲುತಾಃ ॥೪೫॥**

**ತೇ ಪಿಬನ್ತಿ ಕಷಾಯಾಂಶ್ಚ ಸರ್ಪೀಂಷಿ ವಿವಿಧಾನಿ ಚ ।**
**ನ ಮೃತ್ಯುಮತಿವರ್ತನ್ತೇ ವೇಲಾಮಿವ ಮಹೋದಧಿಃ ॥೪೬॥**

ಆಯುರ್ವೇದವನ್ನು ಅಧ್ಯಯನಮಾಡಿರುವ ಅನೇಕ ವೈದ್ಯರು ಪರಿವಾರಸಮೇತರಾಗಿ ನಾನಾವಿಧವಾದ ರೋಗಗಳಿಗೆ ತುತ್ತಾಗಿರುವುದನ್ನು ನಾವು ಕಾಣುತ್ತಿದ್ದೇವೆ. ಆ ವೈದ್ಯರು ರೋಗನಿವಾರಣೆಗಾಗಿ ಅನೇಕವಿಧವಾದ ಕಷಾಯಗಳನ್ನೂ, ವಿಧ-ವಿಧವಾದ ಘೃತಗಳನ್ನೂ ಕುಡಿಯುತ್ತಲೇ ಇರುತ್ತಾರೆ. ಆದರೆ '**ನ ಮೃತ್ಯುಮತಿವರ್ತನ್ತೇ ವೇಲಾಮಿವ ಮಹೋದಧಿಃ**'– ಸಮುದ್ರವು ತೀರವನ್ನು ಉಲ್ಲಂಘಿಸಿ ಹೊರಬರದಿರುವಂತೆ–ಮೃತ್ಯುವನ್ನು ಅತಿಕ್ರಮಿಸಲು ಇಂತಹ ವೈದ್ಯರಿಂದಲೂ ಸಾಧ್ಯವಾಗುವುದಿಲ್ಲ. ಮೃತ್ಯುರೂಪವಾದ ರೋಗಗಳನ್ನು ನಿವಾರಣೆಮಾಡುವುದರಲ್ಲಿ ಅತಿಚತುರರಾದ ವೈದ್ಯರೂ ಮೃತ್ಯುವನ್ನು ದಾಟಲಾರರು. (ಮೃತ್ಯುಮುಖರಾಗಿರುವ ರೋಗಿಗಳಿಗೆ ಸಮಯೋಚಿತವಾದ ಔಷಧಗಳನ್ನು ಕೊಟ್ಟು ಬದುಕಿಸುತ್ತೇವೆಂದು ಹೇಳುವ ವೈದ್ಯರು ತಮಗೇ ಅಂತಹ ರೋಗವು ಒದಗಿಬಂದಾಗ ಚಿಕಿತ್ಸೆಮಾಡಿಕೊಂಡು ಮೃತ್ಯುವನ್ನೇಕೆ ಜಯಿಸುವುದಿಲ್ಲ? ಮನುಷ್ಯನಿಗೆ ಬಂದ ರೋಗಗಳೆಲ್ಲವೂ ಔಷಧಗಳಿಂದ ನಿವಾರಣೆಯಾಗುವುದಾಗಿದ್ದರೆ–ಎಷ್ಟೇ ಹಣವು ವ್ಯಯವಾದರೂ ಮನುಷ್ಯನು ಸಾವಿರಾರು ವರ್ಷಗಳ ಕಾಲದವರೆಗೆ

ಬದುಕಿರಲು ಯತ್ನಿಸುತ್ತಿದ್ದನು ಅಥವಾ ಚಿರಂಜೀವಿಯಾಗಿರಲು ಯತ್ನಿಸುತ್ತಿದ್ದನು. ವೈದ್ಯವಿಜ್ಞಾನವು ಎಷ್ಟೇ ಮುಂದುವರಿದಿದೆಯೆಂಬ ಭಾವನೆಯಿದ್ದರೂ ಆಯುಃಪರಿಮಿತಿಯನ್ನು ಮೀರಿ ವೈದ್ಯರ ಚಿಕಿತ್ಸೆಯಿಂದಲೇ ಹೆಚ್ಚು ಕಾಲ ಬದುಕಿರುವವರು ವಿಶ್ವದಲ್ಲಿ ಯಾರೂ ಇರುವುದಿಲ್ಲ. ಆದುದರಿಂದ ವೈದ್ಯನಿಗೇ ಆದರೂ ಮೃತ್ಯುವನ್ನು ಜಯಿಸುವ ಸಾಧ್ಯತೆಯಿಲ್ಲ. ರೋಗಿಯಾದವನು ಕಾಲಾಧೀನನಾಗಿ ಮರಣಹೊಂದುತ್ತಾನೆ. )

**ರಸಾಯನವಿದಶ್ಚೈವ ಸುಪ್ರಯುಕ್ತರಸಾಯನಾಃ ।**
**ದೃಶ್ಯನ್ತೇ ಜರಯಾ ಭಗ್ನಾ ನಗಾ ನಾಗೈರಿವೋತ್ತಮೈಃ ॥೪೭॥**

ಆಯುರ್ವೇದವನ್ನು ಅನುಸರಿಸಿ ರಸಾಯನಗಳನ್ನು ಸಿದ್ಧಪಡಿಸುವ ವಿಧಾನಗಳನ್ನು ತಿಳಿದಿರುವ ವೈದ್ಯರು ತಾವೇ ಆ ರಸಾಯನಗಳನ್ನೂ, ಪಥ್ಯ ವಿಧಾನಗಳನ್ನು ಅನುಸರಿಸಿ ಸರಿಯಾದ ರೀತಿಯಲ್ಲಿ ಸೇವಿಸಿದರೂ–ಬಲಿಷ್ಠವಾದ ಆನೆಗಳಿಂದ ಭಗ್ನವಾದ ವೃಕ್ಷಗಳಂತೆ–ಮುಪ್ಪಿನಿಂದ ಬಾಗಿದ ಬೆನ್ನಿನಿಂದ ಕೂಡಿದವರಾಗಿರುವುದನ್ನು ನಾವು ನೋಡುತ್ತಿದ್ದೇವೆ.

**ತಥೈವ ತಪಸೋಪೇತಾಃ ಸ್ವಾಧ್ಯಾಯಾಭ್ಯಸನೇ ರತಾಃ ।**
**ದಾತಾರೋ ಯಜ್ಞಶೀಲಾಶ್ಚ ನ ತರನ್ತಿ ಜರಾನ್ತಕೌ ॥೪೮॥**

ತಪಸ್ಸಿನಲ್ಲಿಯೇ ನಿರತರಾಗಿರತಕ್ಕವರೂ, ವೇದ-ಶಾಸ್ತ್ರಗಳ ಅಧ್ಯಯನ ಮತ್ತು ಅಭ್ಯಾಸಗಳಲ್ಲಿ ನಿರತರಾಗಿರತಕ್ಕವರೂ, ದಾನಿಗಳೂ ಮತ್ತು ಯಜ್ಞಶೀಲರೂ ವೈದ್ಯರಂತೆಯೇ ಮುಪ್ಪು-ಸಾವುಗಳನ್ನು ದಾಟಲಾರರು.

**ನ ಹ್ಯಹಾನಿ ನಿವರ್ತನ್ತೇ ನ ಮಾಸಾ ನ ಪುನಃ ಸಮಾಃ ।**
**ಜಾತಾನಾಂ ಸರ್ವಭೂತಾನಾಂ ನ ಪಕ್ಷಾ ನ ಪುನಃ ಕ್ಷಪಾಃ ॥೪೭॥**

ಈ ಪ್ರಪಂಚದಲ್ಲಿ ಹುಟ್ಟಿದ ಎಲ್ಲ ಪ್ರಾಣಿಗಳಿಗೂ ಕಳೆದುಹೋದ ದಿನಗಳಾಗಲೀ, ರಾತ್ರಿಗಳಾಗಲೀ, ಪಕ್ಷಗಳಾಗಲೀ, ಮಾಸಗಳಾಗಲೀ, ವರ್ಷಗಳಾಗಲೀ–ಪುನಃ ಹಿಂದಿರುಗಿ ಬರುವುದಿಲ್ಲ. ( ಕ್ಷಣ-ಕ್ಷಣಕ್ಕೂ ಆಯುಷ್ಯವು ಕ್ಷೀಣಿಸುತ್ತಲೇ ಇರುತ್ತದೆ. ಕಾಲದ ಬೆಲೆಯು ಎಷ್ಟೆಂಬುದನ್ನು ತಿಳಿಯದೇ ವೃಥಾ ಕಾಲಹರಣವಾಗುತ್ತದೆ. ಆಯುಷ್ಯದಲ್ಲಿ ಒಂದು ದಿವಸ–ಒಂದು

ವಾರ–ಒಂದು ತಿಂಗಳು ಕಳೆದುಹೋಯಿತೆಂದು ವಿವೇಚನೆ ಮೂಡಿದಲ್ಲಿ ಮನುಷ್ಯನು ಕಾಲಹರಣಮಾಡಲಾರನು. ಇತರರು ಮರಣಹೊಂದುವುದನ್ನು ಅನುದಿನವೂ ನೋಡುತ್ತಿದ್ದರೂ 'ತನಗೂ ಒಂದು ದಿವಸ ಇದೇ ಮೃತ್ಯುವು ಬರಲಿದೆ. ದಿವಸಗಳು ಕಳೆಯುತ್ತಿದ್ದಂತೆ ಮರಣದ ದಿವಸವೂ ಸನ್ನಿಹಿತವಾಗುತ್ತದೆ'–ಎಂಬ ಭಾವನೆಯು ಮನುಷ್ಯನಿಗೆ ಬರುವುದಿಲ್ಲ. ಅಂತಹ ಭಾವನೆ ಮೂಡಿದರೆ ಮನುಷ್ಯನೆಂದಿಗೂ ಅಲಸನಾಗುವುದಿಲ್ಲ. ಅಂತಹ ಸಂಸ್ಕಾರವಿಲ್ಲದಿರುವುದರಿಂದಲೇ ಕೋಟ್ಯನುಕೋಟಿ ಗಂಟೆಗಳು ಮನುಷ್ಯರ ಜೀವಮಾನದಲ್ಲಿ ವ್ಯರ್ಥವಾಗಿ ಹೋಗುತ್ತಿವೆ. )

**ಸೋಽಯಂ ವಿಪುಲಮಧ್ವಾನಂ ಕಾಲೇನ ಧ್ರುವಮಧ್ರುವಃ ।**
**ನರೋಽವಶಃ ಸಮಭ್ಯೇತಿ ಸರ್ವಭೂತನಿಷೇವಿತಮ್ ॥೫೦॥**

ಅಸ್ಥಿರನಾದ, ಅಸ್ವತಂತ್ರನಾದ ಮಾನವನು ಕಾಲವು ಸನ್ನಿಹಿತ ವಾದೊಡನೆಯೇ ಸರ್ವಪ್ರಾಣಿಗಳಿಂದಲೂ ಸೇವಿಸಲ್ಪಡುವ, ಶಾಶ್ವತವಾದ, ವಿಶಾಲವಾದ ಮೃತ್ಯುಪಥವನ್ನು ಹೊಂದುತ್ತಾನೆ.

**ದೇಹೋ ವಾ ಜೀವತೋಽಭ್ಯೇತಿ ಜೀವೋ ವಾಭ್ಯೇತಿ ದೇಹತಃ ।**
**ಪಥಿ ಸಙ್ಗಮಮಭ್ಯೇತಿ ದಾರೈರನ್ಯೈಶ್ಚ ಬನ್ಧುಭಿಃ ॥೫೧॥**

'ಆತ್ಮನು ನಿತ್ಯನು' ಎಂಬ ಆಸ್ತಿಕಸಿದ್ಧಾಂತದಂತೆ ಜೀವದಿಂದಾದರೂ ದೇಹದ ಉತ್ಪತ್ತಿಯಾಗಿರಲಿ–'ಆತ್ಮನು ಅನಿತ್ಯನು' ಎಂಬ ನಾಸ್ತಿಕ ಸಿದ್ಧಾಂತ ದಂತೆ ದೇಹದಿಂದಾದರೂ ಜೀವನ ಅವಿರ್ಭಾವವಾಗಿರಲಿ, ಮಾನವನು ದಾರಿಹೋಕರು ಒಟ್ಟಾಗಿ ಸೇರಿಕೊಂಡು ಸ್ವಲ್ಪದೂರ ನಡೆದುಹೋಗುವಂತೆ–ಪತ್ನಿಯೇ ಮೊದಲಾದ ಬಂಧುಗಳೊಡನೆ ಕೂಡಿಕೊಂಡು ಸ್ವಲ್ಪಕಾಲ ಇರು ತ್ತಾನೆ. ( ಬಡವ-ಬಲ್ಲಿದ, ಮೂರ್ಖ-ಪಂಡಿತ ಎಂಬ ತಾರತಮ್ಯವು ಕಾಲನಿ ಗಿರುವುದಿಲ್ಲ. ಮುಪ್ಪು-ಸಾವುಗಳೆಂಬುದು ಎಲ್ಲರಿಗೂ ಸಮಾನ–ಎಂದು ಹಿಂದೆಯೇ ಹೇಳಿದೆ. ಇಲ್ಲಿ ಯಾವುದಾದರೂ ಸಿದ್ಧಾಂತವನ್ನು ಅನುಸರಿಸು ವುದರಿಂದ ಜೀವನದ ಕ್ರಮವು ವ್ಯತ್ಯಾಸವಾಗುವುದಿಲ್ಲವೆಂದು ಹೇಳಿದ್ದಾರೆ. ಆತ್ಮವೇ ಬೇರೆ, ದೇಹವೇ ಬೇರೆ–ಎಂದು ಭಾವಿಸುವವರಿಗೂ ಮುಪ್ಪು-ಸಾವುಗಳುಂಟು. )

**ನಾಯಮತ್ಯನ್ತಸಂವಾಸೋ ಲಭ್ಯತೇ ಜಾತು ಕೇನಚಿತ್ ।**
**ಅಪಿ ಸ್ವೇನ ಶರೀರೇಣ ಕಿಮುತಾನ್ಯೇನ ಕೇನಚಿತ್ ॥೫೨॥**

ಯಾವ ಮನುಷ್ಯನಿಗೂ ಯಾವ ಮನುಷ್ಯನೊಡನೆಯೂ ಚಿರಕಾಲ ಒಂದೇ ಸ್ಥಳದಲ್ಲಿ ಇರಲು ಸಾಧ್ಯವಾಗುವುದಿಲ್ಲ. ಅತ್ಯಂತಪ್ರಿಯವಾದ ತನ್ನ ಶರೀರದಲ್ಲಿಯೇ ಜೀವನು ಹೆಚ್ಚುಕಾಲವಿರಲು ಸಾಧ್ಯವಾಗದೆಂದಮೇಲೆ ಇನ್ನೊಬ್ಬನ ವಿಷಯವಾಗಿ ಹೇಳುವುದೇನಿದೆ?

**ಕ್ವ ನು ತೇಽದ್ಯ ಪಿತಾ ರಾಜನ್ಕ್ವನು ತೇಽದ್ಯ ಪಿತಾಮಹಾಃ ।**
**ನ ತ್ವಂ ಪಶ್ಯಸಿ ತಾನದ್ಯ ನ ತ್ವಾಂ ಪಶ್ಯನ್ತಿ ತೇಽನಘ ॥೫೩॥**

ನಿಷ್ಪಾಪನೇ! ಜನಕರಾಜ! ಈಗ ನಿನ್ನ ತಂದೆಯೆಲ್ಲಿದ್ದಾನೆ? ನಿನ್ನ ಪಿತಾಮಹರೆಲ್ಲಿದ್ದಾರೆ? ಅವರನ್ನು ನೀನು ಈಗ ನೋಡಲಾಗುತ್ತಿಲ್ಲ. ಅವರೂ ನಿನ್ನನ್ನು ನೋಡಲಾಗುತ್ತಿಲ್ಲ.

**ನ ಚೈವ ಪುರುಷೋ ದ್ರಷ್ಟಾ ಸ್ವರ್ಗಸ್ಯ ನರಕಸ್ಯ ಚ ।**
**ಆಗಮಸ್ತು ಸತಾಂ ಚಕ್ಷುರ್ನೃಪತೇ ತಮಿಹಾಚರ ॥೫೪॥**

ರಾಜನೇ! ಯಾವ ಮನುಷ್ಯನಾಗಲೀ ಇಲ್ಲಿಂದಲೇ (ಈ ಸ್ಥೂಲನೇತ್ರ ದಿಂದಲೇ) ಸ್ವರ್ಗವನ್ನಾಗಲೀ, ನರಕವನ್ನಾಗಲೀ–ನೋಡುವುದಕ್ಕಾಗುವು ದಿಲ್ಲ. ಸತ್ಪುರುಷರಿಗೆ ವೇದವೇ ಸ್ವರ್ಗವನ್ನಾಗಲೀ, ನರಕವನ್ನಾಗಲೀ ನೋಡುವ (ತಿಳಿಸಿಕೊಡುವ) ಏಕಮಾತ್ರ ನೇತ್ರವಾಗಿದೆ. ಆದುದರಿಂದ ನೀನಿಲ್ಲಿ ವೇದೋಕ್ತವಾದ ಕರ್ಮಗಳನ್ನು ಆಚರಿಸು.

**ಚರಿತಬ್ರಹ್ಮಚರ್ಯೋ ಹಿ ಪ್ರಜಾಯೇತ ಯಜೇತ ಚ ।**
**ಪಿತೃದೇವಮನುಷ್ಯಾಣಾಮಾನೃಣ್ಯಾದನಸೂಯಕಃ ॥೫೫॥**

ಮಾನವನು ಮೊದಲು ಬ್ರಹ್ಮಚರ್ಯವ್ರತವನ್ನು ನಿಷ್ಠೆಯಿಂದ ಪರಿ ಪಾಲಿಸುತ್ತಾ, ಗುರುಶುಶ್ರೂಷೆಯಿಂದ ವೇದ-ಶಾಸ್ತ್ರಾಧ್ಯಯನಗಳನ್ನು ಮಾಡಿದನಂತರ ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕು. ಗೃಹಸ್ಥಾಶ್ರಮ ದಲ್ಲಿರುವಾಗ ಪಿತೃ-ದೇವ-ಮನುಷ್ಯರ ಋಣಗಳಿಂದ ಮುಕ್ತನಾಗಲು ಸುಪ್ರಜೆ

ಗಳನ್ನು ಪಡೆದು ಯಜ್ಞಗಳನ್ನು ಮಾಡಬೇಕು. ಯಾರಲ್ಲಿಯೂ ದೋಷವನ್ನೆಣಿಸಬಾರದು. (ಅಸೂಯೆಪಡಬಾರದು.)

**ಸ ಯಜ್ಞಶೀಲಃ ಪ್ರಜನೇ ನಿವಿಷ್ಟಃ**
**ಪ್ರಾಗ್ಬ್ರಹ್ಮಚಾರೀ ಪ್ರವಿವಿಕ್ತಚಕ್ಷುಃ ।**
**ಆರಾಧಯೇತ್ಸ್ವರ್ಗಮಿಮಂ ಚ ಲೋಕಂ**
**ಪರಂ ಚ ಮುಕ್ತ್ವಾ ಹೃದಯವ್ಯಲೀಕಮ್ ॥೫೬॥**

ಮಾನವನು ಮೊದಲು ಬ್ರಹ್ಮಚರ್ಯವ್ರತನಿಷ್ಠನಾಗಿದ್ದು, ಸಂತಾನ ಪ್ರಾಪ್ತಿಗಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ನೇತ್ರವೇ ಮೊದಲಾದ ಇಂದ್ರಿಯಗಳನ್ನು ಪರಿಶುದ್ಧವಾಗಿಟ್ಟುಕೊಂಡು, ಹೃದಯದಲ್ಲಿರುವ ಶೋಕಾ-ನೃತಗಳನ್ನೂ-ಅಹಂಕಾರ-ಮಮಕಾರಗಳನ್ನೂ ಪರಿತ್ಯಜಿಸಿ, ಯಜ್ಞಶೀಲನಾಗಿ ಸ್ವರ್ಗವನ್ನೂ ಈ ಲೋಕವನ್ನೂ ಮತ್ತು ಪರಮಾತ್ಮನನ್ನೂ ಆರಾಧಿಸಬೇಕು. (ಯಜ್ಞಮಾಡುವುದರಿಂದ ಈ ಮೂರನ್ನೂ ಆರಾಧಿಸಿದಂತಾಗುತ್ತದೆ. ಸ್ವರ್ಗದಲ್ಲಿರುವ ದೇವತೆಗಳು ತೃಪ್ತರಾಗುತ್ತಾರೆ. ದೇವತೆಗಳ ತೃಪ್ತಿಯಿಂದ ಭೂಮಿಯಲ್ಲಿ ಮಳೆ-ಬೆಳೆಗಳಾಗುತ್ತವೆ. ಭೂತತೃಪ್ತಿಯಿಂದ ಪರಮಾತ್ಮನ ಆರಾಧನೆಯೂ ಆಗುತ್ತದೆ. )

**ಸಮಂ ಹಿ ಧರ್ಮಂ ಚರತೋ ನೃಪಸ್ಯ**
**ದ್ರವ್ಯಾಣಿ ಚಾಭ್ಯಾಹರತೋ ಯಥಾವತ್ ।**
**ಪ್ರವೃತ್ತಧರ್ಮಸ್ಯ ಯಶೋಽಭಿವರ್ಧತೇ**
**ಸರ್ವೇಷು ಲೋಕೇಷು ಚರಾಚರೇಷು ॥೫೭॥**

ಎಲ್ಲ ಪ್ರಜೆಗಳನ್ನೂ ( ಮಕ್ಕಳೆಂದೇ ಭಾವಿಸಿ ) ಸಮನಾಗಿ ಕಾಣುತ್ತಾ, ಧರ್ಮದಿಂದ ಪ್ರಜೆಗಳನ್ನು ಪರಿಪಾಲಿಸುತ್ತಾ ( ಪ್ರಜೆಗಳಲ್ಲಿ ಧರ್ಮಪ್ರವೃತ್ತಿಯನ್ನು ಉಂಟುಮಾಡುತ್ತಾ ), ಪ್ರಜೆಗಳಿಂದ ಅವರವರ ಆದಾಯಾನುರೂಪವಾದ ಕರವನ್ನು ( ತೆರಿಗೆಯನ್ನು ) ಸಂಗ್ರಹಿಸುತ್ತಾ ಇರುವ ಧರ್ಮಿಷ್ಠನಾದ ರಾಜನ ಕೀರ್ತಿಯು ಚರಾಚರಗಳಿಂದ ಯುಕ್ತವಾದ ಸರ್ವಲೋಕಗಳಲ್ಲಿಯೂ ವಿಸ್ತಾರಗೊಳ್ಳುತ್ತದೆ.”

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ :

"ಯುಧಿಷ್ಠಿರ! ವಿಶುದ್ಧವಾದ ಬುದ್ಧಿಯಿಂದ ಕೂಡಿದ್ದ ವಿದೇಹರಾಜನಾದ ಜನಕನು, ಅಶ್ಮಮುನಿಯ ಯುಕ್ತಿಯುಕ್ತವಾದ ಸಂಪೂರ್ಣವಾದ ಉಪದೇಶವನ್ನು ಕೇಳಿ ಶೋಕರಹಿತನಾಗಿ, ಅಶ್ಮರ್ಷಿಯ ಅನುಜ್ಞೆಯನ್ನು ಪಡೆದುಕೊಂಡು ತನ್ನ ಅರಮನೆಗೆ ತೆರಳಿದನು.

ಅಚ್ಯುತನೇ! ಇಂದ್ರತುಲ್ಯನೇ! ಕೌಂತೇಯ! ಧರ್ಮಜ! ಜನಕರಾಜನು ಅಶ್ಮಮಹರ್ಷಿಯ ಉಪದೇಶದಿಂದ ಶೋಕ-ಮೋಹಗಳನ್ನು ತ್ಯಜಿಸಿದಂತೆ ಅದೇ ಉಪದೇಶದ ಪ್ರವಚನದಿಂದ ಪ್ರಭಾವಿತನಾಗಿ ನೀನೂ ಶೋಕವನ್ನು ತ್ಯಜಿಸು. ಎದ್ದೇಳು. ಹರ್ಷಿತನಾಗು. ಕ್ಷತ್ರಧರ್ಮಾನುಸಾರವಾಗಿ ಈ ಭೂಮಂಡಲವನ್ನು ಜಯಿಸಿರುವೆ. ಹಾಗೆ ಜಯಿಸಿರುವುದನ್ನು ಈಗ ಅವಹೇಳನಮಾಡಬೇಡ. ವೀರ್ಯಶುಲ್ಕದಿಂದಲೇ ಪಡೆದುಕೊಂಡಿರುವ ಈ ಭೂಮಿಯನ್ನು ಉಪಭೋಗಿಸು."

ಎಂಟನೆಯ ಅಧ್ಯಾಯವು ಮುಗಿಯಿತು.

೨೯ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ನಾರದ-ಸೃಂಜಯರ ಸಂವಾದರೂಪದಲ್ಲಿರುವ ಹದಿನಾರು ಮಂದಿ ರಾಜರ ಉಪಾಖ್ಯಾನಗಳನ್ನು ಹೇಳಿ ಯುಧಿಷ್ಠಿರನನ್ನು ಸಮಾಧಾನಗೊಳಿಸಲು ಯತ್ನಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಋಷಿ-ಮುನಿಗಳೇ ಆದಿಯಾಗಿ ಎಲ್ಲರೂ ಸಮಾಧಾನ ಹೇಳಿದರೂ ಧರ್ಮಪುತ್ರನಾದ ಯುಧಿಷ್ಠಿರನು ಯಾವುದೊಂದು ಮಾತನ್ನೂ ಆಡದೇ ಸುಮ್ಮನೆ ಕುಳಿತಿರಲಾಗಿ, ಪಾಂಡುವಿನ ಮಗನಾದ ಅರ್ಜುನನು ಶ್ರೀಕೃಷ್ಣನೊಡನೆ ಹೇಳಿದನು :

"ಮಾಧವ! ಶತ್ರುತಾಪನನಾದ ಧರ್ಮಪುತ್ರನು ಜ್ಞಾತಿಗಳ ವಿಯೋಗದಿಂದುಂಟಾಗಿರುವ ದುಃಖದಿಂದ ಬಹಳವಾಗಿ ಪರಿತಪಿಸುತ್ತಿದ್ದಾನೆ. ಇವನೀಗ ಶೋಕಸಾಗರದಲ್ಲಿ ಮುಳುಗಿಯೇ ಹೋಗಿದ್ದಾನೆ. ನೀನಾದರೂ ಇವನನ್ನು ಸಮಾಧಾನಗೊಳಿಸು. ಧರ್ಮರಾಜನು ದುಃಖಿತನಾಗಿರುವುದರಿಂದ ನಾವೆ

ಲ್ಲರೂ ಈಗ ಪುನಃ ಡೋಲಾಯಮಾನರಾಗಿದ್ದೇವೆ. (ಸಂಶಯಗ್ರಸ್ತರಾಗಿದ್ದೇವೆ.) ಆದುದರಿಂದ ಇವನ ಶೋಕವನ್ನು ಹೋಗಲಾಡಿಸಲು ನೀನೇ ಸಮರ್ಥನಾಗಿರುವೆ."

ಜನಮೇಜಯ! ಅರ್ಜುನನು ಹೀಗೆ ಹೇಳುತ್ತಲೇ ಪುಂಡರೀಕಾಕ್ಷನಾದ, ಅಚ್ಯುತನಾದ ಗೋವಿಂದನು ಧರ್ಮರಾಜನ ಕಡೆಗೆ ತಿರುಗಿ ಅವನಿಗೆ ಅಭಿಮುಖವಾಗಿ ಕುಳಿತನು. ಯುಧಿಷ್ಠಿರನು ಭಗವಾನ್ ಶ್ರೀಕೃಷ್ಣನ ಮಾತನ್ನು ಯಾವಾಗಲೂ ಉಲ್ಲಂಘಿಸಿದವನೇ ಅಲ್ಲ. ಏಕೆಂದರೆ : ಬಾಲ್ಯದಿಂದಲೂ ಶ್ರೀಕೃಷ್ಣನು ಯುಧಿಷ್ಠಿರನಿಗೆ ಅರ್ಜುನನಿಗಿಂತಲೂ ಹೆಚ್ಚು ಪ್ರಿಯನಾಗಿದ್ದನು. ಮಹಾಬಾಹುವಾದ ಶ್ರೀಕೃಷ್ಣನು ಶಿಲಾಸ್ತಂಭಸದೃಶವಾಗಿದ್ದ, ಚಂದನಚರ್ಚಿತವಾಗಿದ್ದ ಯುಧಿಷ್ಠಿರನ ಭುಜವನ್ನು ಹಿಡಿದುಕೊಂಡು ವಿನೋದಮಾಡುತ್ತಾ ಮಾತನಾಡಲು ಉಪಕ್ರಮಿಸಿದನು. ಸುಂದರವಾದ ಕಣ್ಣುಗಳಿಂದಲೂ ಮತ್ತು ಸುಂದರವಾದ ದಂತಪಙ್ತೆಗಳಿಂದಲೂ ಕೂಡಿದ್ದ ಶ್ರೀಕೃಷ್ಣನ ಮುಖಾರವಿಂದವು–ಸೂರ್ಯೋದಯದ ಸಮಯದಲ್ಲಿ ಸಂಪೂರ್ಣವಾಗಿ ಅರಳಿದ ಕಮಲದಂತೆ–ಪ್ರಕಾಶಿಸುತ್ತಿದ್ದಿತು.

ಭಕ್ತರ ಅಂತಃಕರಣವನ್ನು ಅರಳಿಸುವಂತಹ ಮುಗುಳ್ನಗೆಯಿಂದ ಕೂಡಿದ್ದ ಮುಖಾರವಿಂದವುಳ್ಳವನಾಗಿ ಶ್ರೀಕೃಷ್ಣನು ಧರ್ಮಜನೊಡನೆ ಹೇಳಿದನು :

"ಪುರುಷವ್ಯಾಘ್ರನೇ! ಶೋಕಿಸಬೇಡ. ಶೋಕವು ನಿನ್ನ ಶರೀರವನ್ನೇ ಶೋಷಿಸಿಬಿಡುತ್ತದೆ. ಈ ರಣಾಂಗಣದಲ್ಲಿ ಯಾರು ಅಸುನೀಗಿರುವರೋ ಅವರಾರೂ ಪುನಃ ನಿನಗೆ ಸುಲಭವಾಗಿ ಸಿಕ್ಕುವವರಾಗಿಲ್ಲ. ಎಷ್ಟೇ ದುಃಖಿಸಿದರೂ ಸತ್ತವರು ಪುನಃ ನಿನ್ನ ಬಳಿಗೆ ಬರಲಾರರು.

**ಸ್ವಪ್ನಲಬ್ಧಾ ಯಥಾ ಲಾಭಾ ವಿತಥಾಃ ಪ್ರತಿಬೋಧನೇ ।**
**ಏವಂ ತೇ ಕ್ಷತ್ರಿಯಾ ರಾಜನ್ಯೇ ವ್ಯತೀತಾ ಮಹಾರಣೇ ॥೯॥**

ಸ್ವಪ್ನದಲ್ಲಿ ಪಡೆದುಕೊಂಡ ಧನವು ಎಚ್ಚರವಾದೊಡನೆಯೇ ಮಿಥ್ಯೆಯಾಗಿಬಿಡುವಂತೆ–ಮಹಾಯುದ್ಧದಲ್ಲಿ ವಿನಾಶಹೊಂದಿರುವ ಕ್ಷತ್ರಿಯರು ಪುನಃ ನೋಡಲು ಸಿಕ್ಕಲಾರರು.

ಸಂಗ್ರಾಮಭೂಮಿಗೇ ಅಲಂಕಾರಪ್ರಾಯರಾಗಿದ್ದ ಆ ಎಲ್ಲ ಮಹಾ ಶೂರರೂ ಶತ್ರುಗಳಿಗೆ ಅಭಿಮುಖವಾಗಿ ನಿಂತು ಯುದ್ಧಮಾಡುತ್ತಿರುವಾಗಲೇ ವಿಜಿತರಾಗಿ ಶಸ್ತ್ರಗಳಿಂದ ಮರಣಹೊಂದಿರುತ್ತಾರೆ. ಅವರಲ್ಲಿ ಯಾರೂ ಬೆನ್ನಿನಲ್ಲಿ ಗಾಯಗೊಂಡಾಗಲೀ–ಓಡುತ್ತಿರುವಾಗ ಶಸ್ತ್ರಾಘಾತಗಳಿಂದಾಗಲೀ ಮರಣಹೊಂದಿರುವುದಿಲ್ಲ. ಮಹಾಸಂಗ್ರಾಮಭೂಮಿಯಲ್ಲಿ ಆ ವೀರರೆಲ್ಲರೂ ಯುದ್ಧಮಾಡುತ್ತಿರುವಾಗಲೇ ತಮ್ಮ ಪ್ರಾಣಗಳನ್ನು ಪರಿತ್ಯಾಗಮಾಡಿ ಶಸ್ತ್ರಗಳಿಂದ ಪರಿಶುದ್ಧರಾಗಿ ಸ್ವರ್ಗಕ್ಕೆ ಹೋಗಿದ್ದಾರೆ. ಅಂತಹ ಶ್ರೇಷ್ಠವೀರರ ವಿಷಯದಲ್ಲಿ ನೀನು ದುಃಖಪಡುವುದು ಸರ್ವಥಾ ಉಚಿತವಾಗಿ ಕಾಣುವುದಿಲ್ಲ. ಅವರೆಲ್ಲರೂ ಕ್ಷತ್ರಧರ್ಮಪರಾಯಣರಾಗಿದ್ದರು. ಶೂರರಾಗಿದ್ದರು. ವೇದ-ವೇದಾಂಗಪಾರಂಗತರಾಗಿದ್ದರು. ಅವರೆಲ್ಲರೂ ವೀರರು ಪಡೆಯುವ ಸದ್ಗತಿಯನ್ನೇ ಪಡೆದುಕೊಂಡಿರುತ್ತಾರೆ. ಅವರ ವಿಷಯದಲ್ಲಿ ನೀನು ದುಃಖಪಡುವುದು ಸರಿಯಲ್ಲ. ಹಿಂದೆ ಮೃತರಾದ ಮಹಾನುಭಾವರಾದ ಅನೇಕ ಭೂಪತಿಗಳ ಸುಚರಿತಗಳನ್ನು ಕೇಳಿಯಾದರೂ ನೀನು ದುಃಖವನ್ನು ಸಾಕುಮಾಡು. ಈ ವಿಷಯದಲ್ಲಿ ಪುತ್ರಶೋಕಪೀಡಿತನಾಗಿದ್ದ ಸೃಂಜಯನಿಗೆ ನಾರದರು ಹೇಳಿದ ಪುರಾತನವಾದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ. ಆ ಇತಿಹಾಸವನ್ನೇ ನಿನಗೂ ಹೇಳುತ್ತೇನೆ.

ಸೃಂಜಯನು ಪುತ್ರಶೋಕದಿಂದ ಪೀಡಿತನಾಗಿದ್ದಾಗ ನಾರದರು ಸೃಂಜಯನೊಡನೆ ಹೇಳುತ್ತಾರೆ :

**ಸುಖದುಃಖೈರಹಂ ತ್ವಂ ಚ ಪ್ರಜಾಃ ಸರ್ವಾಶ್ಚ ಸೃಂಜಯ ।**
**ಅವಿಮುಕ್ತಾ ಮರಿಷ್ಯಾಮಸ್ತತ್ರ ಕಾ ಪರಿದೇವನಾ ॥೧೪॥**

"ಸೃಂಜಯ! ನಾನಾಗಲೀ, ನೀನಾಗಲೀ, ನಿನ್ನ ಎಲ್ಲ ಪ್ರಜೆಗಳೇ ಆಗಲೀ–ಯಾರೂ ಸುಖ-ದುಃಖಗಳಿಂದ ವಿಮುಕ್ತರಾಗಿರುವುದಿಲ್ಲ. ಒಂದು ದಿನ ನಾವೆಲ್ಲರೂ ಮರಣಹೊಂದುತ್ತೇವೆ. ಅದಕ್ಕಾಗಿ ದುಃಖಿಸುವುದೇಕೆ?

ನಾನೀಗ ಹೇಳಲಿರುವ ಹಿಂದಿನ ರಾಜರ ಮಹಾಸೌಭಾಗ್ಯದ ವರ್ಣನೆ ಯನ್ನು ಸಾವಧಾನಚಿತ್ತನಾಗಿ ಕೇಳು. ರಾಜರ ಭವ್ಯವಾದ ಇತಿಹಾಸವನ್ನು ಕೇಳಿದಮೇಲಾದರೂ ದುಃಖವನ್ನು ದೂರಮಾಡುವೆ. ಮೃತರಾಗಿಹೋಗಿರುವ

ಮಹಾನುಭಾವರಾದ ಪೃಥಿವೀವಲ್ಲಭರ ಸುಚರಿತಗಳನ್ನು ಕೇಳಿದನಂತರ ಪುತ್ರವಿಯೋಗದಿಂದ ನಿನಗುಂಟಾಗಿರುವ ಮನಸ್ತಾಪವನ್ನು ಉಪಶಮನಗೊಳಿಸು. ಅವರ ಸುಚರಿತ್ರೆಗಳನ್ನು ವಿಸ್ತಾರವಾಗಿ ಕೇಳು :

**ಕ್ರೂರಗ್ರಹಾಭಿಶಮನಮಾಯುರ್ವರ್ಧನಮುತ್ತಮಮ್ ।**
**ಅಗ್ರಿಮಾಣಾಂ ಕ್ಷತಿಭುಜಾಮುಪಾದಾನಂ ಮನೋಹರಮ್ ॥೧೭॥**

ಹಿಂದಿನ ರಾಜರ ಉತ್ತಮೋತ್ತಮವಾದ ಈ ಇತಿಹಾಸದ ಶ್ರವಣವು ಮನಸ್ಸಿಗೆ ಆಪ್ಯಾಯಮಾನವನ್ನುಂಟುಮಾಡುತ್ತದೆ. ಇದರಿಂದ ಆಯುಷ್ಯವು ವರ್ಧಿಸುತ್ತದೆ. ಕ್ರೂರಗ್ರಹಗಳ ಬಾಧೆಯನ್ನೂ ಶಮನಮಾಡುತ್ತದೆ.

ಅವಿಕ್ಷಿತನ ಮಗನಾದ ಮರುತ್ತನೂ ಮರಣಹೊಂದಿದನೆಂದು ನಾವು ಕೇಳಿದೆವು. ಮಹಾತ್ಮನಾದ ಮರುತ್ತರಾಜನು ಮಾಡಿದ ಯಜ್ಞದಲ್ಲಿ ಇಂದ್ರ-ವರುಣಸಹಿತರಾದ ಸಮಸ್ತದೇವತೆಗಳೂ, ಪ್ರಜಾಪತಿಗಳೂ ಬೃಹಸ್ಪತಿಯನ್ನು ಮುಂದೆಮಾಡಿಕೊಂಡು ಭಾಗವಹಿಸಿದ್ದರು. ಮರುತ್ತನು ಯಜ್ಞಮಾಡುವುದರ ಮೂಲಕ ದೇವರಾಜನಾದ ಇಂದ್ರನೊಡನೆ ಸ್ಪರ್ಧಿಸಿ ಅವನನ್ನೂ ಸೋಲಿಸಿದ್ದನು. ಇಂದ್ರನಿಗೆ ಅತಿಪ್ರಿಯನಾದ ಬೃಹಸ್ಪತಿಯು ಮರುತ್ತನಿಗೆ ಯಜ್ಞಮಾಡಿಸುವುದಿಲ್ಲವೆಂದು ತಿರಸ್ಕರಿಸಿದಾಗ ಬೃಹಸ್ಪತಿಯ ಕಿರಿಯ ತಮ್ಮನಾದ ಸಂವರ್ತನು ಮರುತ್ತನಿಗೆ ಯಾಜಕನಾದನು.

**ಯಸ್ಮಿನ್ಪ್ರಶಾಸತಿ ಮಹೀಂ ನೃಪತೌ ರಾಜಸತ್ತಮ ।**
**ಅಕೃಷ್ಟಪಚ್ಯಾ ಪೃಥಿವೀ ವಿಬಭೌ ಚೈತ್ಯಮಾಲಿನೀ ॥೨೦॥**

ಸೃಂಜಯ! ರಾಜಶ್ರೇಷ್ಠನಾದ ಮರುತ್ತನು ರಾಜ್ಯವಾಳುತ್ತಿರುವಾಗ–ಕೃಷಿಮಾಡದೆಯೇ ಬೆಳೆಗಳು ಸಮೃದ್ಧಿಯಾಗಿ ಬೆಳೆಯುತ್ತಿದ್ದುವು. ಯಜ್ಞಶಾಲೆಗಳ (ದೇವಾಲಯಗಳ) ಸಾಲುಗಳಿಂದ ಭೂಮಂಡಲವು ಪ್ರಕಾಶಮಾನವಾಗಿ ಕಾಣುತ್ತಿದ್ದಿತು.

**ಆವಿಕ್ಷಿತಸ್ಯ ವೈ ಸತ್ರೇ ವಿಶ್ವೇದೇವಾಃ ಸಭಾಸದಃ ।**
**ಮರುತಃ ಪರಿವೇಷ್ಟಾರಃ ಸಾಧ್ಯಾಶ್ಚಾಸನ್ಮಹಾತ್ಮನಃ ॥೨೧॥**

ಅವಿಕ್ಷಿತನ ಮಗನಾದ, ಮಹಾತ್ಮನಾದ ಮರುತ್ತನ ಮಹಾಯಜ್ಞದಲ್ಲಿ

ವಿಶ್ವೇದೇವತೆಗಳೇ ಸಭಾಸದರಾಗಿದ್ದರು. ಮರುದ್ಗಣಗಳೂ ಮತ್ತು ಸಾಧ್ಯರೂ ಯಜ್ಞದಲ್ಲಿ ಭಾಗವಹಿಸಿದ್ದ ಋತ್ವಿಜರಿಗೆ ಊಣಬಡಿಸುವ ಪರಿಚಾರಕರಾಗಿದ್ದರು. (ಐತರೇಯಬ್ರಾಹ್ಮಣದಲ್ಲಿಯೂ ಈ ಶ್ಲೋಕವು ಮಂತ್ರರೂಪವಾಗಿ ಬಂದಿದೆ. **ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ಗೃಹೇ । ಆವಿಕ್ಷಿತಸ್ಯ ಕಾಮಪ್ರೇರ್ವಿಶ್ವೇದೇವಾಃ ಸಭಾಸದಃ ॥**)

ಮರುದ್ಗಣಗಳು (ಮರುತರು) ಆ ಮಹಾಯಜ್ಞದಲ್ಲಿ ಯಥೇಚ್ಛವಾಗಿ ಸೋಮರಸವನ್ನು ಪಾನಮಾಡಿದರು. ಮರುತ್ತನು ಯಜ್ಞಸಮಯದಲ್ಲಿ ದಾನಮಾಡಿದ ದಕ್ಷಿಣೆಗಳು ದೇವ-ಮನುಷ್ಯ-ಗಂಧರ್ವರು ಮಾಡಿದ ಯಜ್ಞಗಳಲ್ಲಿ ಕೊಟ್ಟ ದಕ್ಷಿಣೆಗಳನ್ನೂ ಅತಿಶಯಿಸಿದ್ದುವು. (ಹಲವು ಪಟ್ಟು ಹೆಚ್ಚಾಗಿದ್ದುವು.) ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ–ಈ ನಾಲ್ಕರಲ್ಲಿಯೂ ಮರುತ್ತರಾಜನು ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೇ ಮರಣ ಹೊಂದಿದಮೇಲೆ ನಿನ್ನ ಪುತ್ರನ ವಿಷಯವಾಗಿ ಹೇಳುವುದೇನಿದೆ? ಆದುದರಿಂದ ನಿನ್ನ ಮಗನ ವಿಯೋಗಕ್ಕಾಗಿ ದುಃಖಿಸಬೇಡ.

ಅತಿಥಿಸತ್ಕಾರಮಾಡುವುದರಲ್ಲಿಯೇ ಆಸಕ್ತನಾಗಿದ್ದ ಸುಹೋತ್ರನೆಂಬ ರಾಜನೂ ಕಾಲವಶನಾದನೆಂಬುದನ್ನು ನಾವು ಕೇಳಿದ್ದೇವೆ. ಸುಹೋತ್ರನ ರಾಜ್ಯದಲ್ಲಿ ಒಂದು ವರ್ಷಪರ್ಯಂತವಾಗಿ ಇಂದ್ರನು ಚಿನ್ನದ ಮಳೆಯನ್ನೇ ಕರೆದನು. ಭೂದೇವಿಯು ಸುಹೋತ್ರನನ್ನು ತನ್ನ ಸ್ವಾಮಿಯನ್ನಾಗಿ ಪಡೆದು 'ವಸುಮತೀ' ಎಂಬ ಹೆಸರಿನ ಸಾರ್ಥಕತೆಯನ್ನು ಪಡೆದುಕೊಂಡಳು. ಸುಹೋತ್ರನು ರಾಜನಾಗಿದ್ದ ದೇಶದಲ್ಲಿ ನದಿಗಳು ಸುವರ್ಣದ ನೀರಿನಿಂದ ಕೂಡಿ ಪ್ರವಹಿಸುತ್ತಿದ್ದುವು. ಸರ್ವಲೋಕಪೂಜಿತನಾದ ಇಂದ್ರನು ಆ ನದಿಗಳಲ್ಲಿ ಸುವರ್ಣಮಯವಾದ ಆಮೆಗಳನ್ನೂ, ಏಡಿಗಳನ್ನೂ, ಮೊಸಳೆಗಳನ್ನೂ, ಮೀನುಗಳನ್ನೂ, ಕಡಲುಹಂದಿಗಳನ್ನೂ ಬಿಟ್ಟಿದ್ದನು. ಸುವರ್ಣಮಯವಾದ ನೂರಾರು-ಸಾವಿರಾರು ಮೀನುಗಳನ್ನೂ, ಮೊಸಳೆಗಳನ್ನೂ ಮತ್ತು ಆಮೆಗಳನ್ನೂ ತನ್ನ ದೇಶದಲ್ಲಿದ್ದ ನದಿಗಳಲ್ಲಿ ಇಂದ್ರನು ಬಿಟ್ಟುದನ್ನು ನೋಡಿ ಅತಿಥಿಪ್ರಿಯನಾದ ಸುಹೋತ್ರನು ವಿಸ್ಮಯಗೊಂಡನು. ಅನಂತ

ವಾದ ಸುವರ್ಣರಾಶಿಯು ಕುರುಜಾಂಗಲದೇಶದ ಆದ್ಯಂತವಾಗಿ ವ್ಯಾಪಿಸಿ ಕೊಂಡಿದ್ದಿತು. ಸುಹೋತ್ರನು ಯಜ್ಞವನ್ನು ಮಾಡಿ ಆ ಸುವರ್ಣದ ರಾಶಿಯನ್ನು ಋತ್ವಿಜರಾಗಿ ಭಾಗವಹಿಸಿದ್ದ ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಅರ್ಪಿಸಿಬಿಟ್ಟನು.

ಸೃಂಜಯ! ಸುಹೋತ್ರನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿಯಾಗಿದ್ದನು. ಅಂತಹವನೇ ಮೃತನಾದನೆಂದಮೇಲೆ ನಿನ್ನ ಪುತ್ರನ ವಿಷಯವಾಗಿ ಹೇಳುವುದೇನಿದೆ? ಮೇಲಾಗಿ ನಿನ್ನ ಮಗನು ಯಜ್ಞ ಮಾಡಿದವನೂ ಅಲ್ಲ; ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಟ್ಟವನೂ ಅಲ್ಲ. ಆದುದರಿಂದ ನಿನ್ನ ಮಗನ ಸಲುವಾಗಿ ಶೋಕಿಸಬೇಡ. ಮನಸ್ಸಿನಲ್ಲಿ ಸಮಾಧಾನವನ್ನು ತಾಳು.

ಅಂಗದೇಶಕ್ಕೆ ರಾಜನಾಗಿದ್ದ ಬೃಹದ್ರಥನೂ ಮೃತನಾದನೆಂದು ನಾವು ಕೇಳಿದ್ದೇವೆ. ಅವನು ಮಾಡಿದ ವಿಸ್ತಾರವಾದ ಯಜ್ಞದಲ್ಲಿ ದೇವತೆಗಳನ್ನು ತೃಪ್ತಿಗೊಳಿಸುವ ಸಲುವಾಗಿ ಹತ್ತು ಲಕ್ಷ ಬಿಳೀ ಕುದುರೆಗಳನ್ನೂ, ಸುವರ್ಣಾ ಭರಣಗಳಿಂದ ವಿಭೂಷಿತೆಯರಾದ ಹತ್ತು ಲಕ್ಷ ಕನ್ಯೆಯರನ್ನೂ ದಕ್ಷಿಣಾ ರೂಪದಲ್ಲಿ ದಾನಮಾಡಿದನು. ವಿಸ್ತಾರವಾದ ಆ ಯಜ್ಞದಲ್ಲಿ ದೇವತೆಗಳನ್ನು ತೃಪ್ತಿಗೊಳಿಸುವ ಸಲುವಾಗಿ ಬೃಹದ್ರಥನು ಸುವರ್ಣಮಯವಾದ ಕಮಲ ಪುಷ್ಪಗಳ ಮಾಲಿಕೆಗಳಿಂದ ಸಮಲಂಕೃತವಾಗಿದ್ದ ಹತ್ತು ಲಕ್ಷ ಆನೆಗಳನ್ನೂ, ಸ್ವರ್ಣಮಾಲೆಗಳನ್ನು ಧರಿಸಿರುವ ಒಂದು ಕೋಟಿ ಗೋವುಗಳನ್ನೂ, ಎತ್ತು ಗಳನ್ನೂ, ಸಾವಿರಾರು ಸೇವಕರನ್ನೂ ದಕ್ಷಿಣಾರೂಪವಾಗಿ ದಾನಮಾಡಿದನು. ಅಂಗದೇಶದ ರಾಜನಾದ ಬೃಹದ್ರಥನು ವಿಷ್ಣುಪದವೆಂಬ ಪರ್ವತದಲ್ಲಿ ಯಜ್ಞಮಾಡಿದಾಗ ಇಂದ್ರನು ಸೋಮರಸವನ್ನು ಕುಡಿದು ಮತ್ತನಾದನು. ಬ್ರಾಹ್ಮಣರು ಅಪಾರವಾದ ದಕ್ಷಿಣೆಗಳಿಂದ ಆನಂದೋನ್ಮತ್ತರಾದರು. ಹೀಗೆಯೇ ಬೃಹದ್ರಥನು ನೂರಾರು ಯಜ್ಞಗಳನ್ನು ಮಾಡಿದನು. ಈ ಯಜ್ಞ ಗಳಲ್ಲಿ ರಾಜನು ಕೊಡುತ್ತಿದ್ದ ದಕ್ಷಿಣೆಗಳು ದೇವ-ಮನುಷ್ಯ-ಗಂಧರ್ವರು ಯಜ್ಞಸಮಯದಲ್ಲಿ ಕೊಡುತ್ತಿದ್ದ ದಕ್ಷಿಣೆಗಳಿಗಿಂತಲೂ ಅತ್ಯಧಿಕವಾಗಿದ್ದುವು.

ಅಂಗರಾಜನು ಮಾಡಿದ ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ ಮತ್ತು ಆಪ್ತೋರ್ಯಾಮಗಳೆಂಬ ಏಳು ಸೋಮಸಂಸ್ಥಗಳಲ್ಲಿ ಎಷ್ಟು ವಿತ್ತವನ್ನು ಬ್ರಾಹ್ಮಣರಿಗೆ ದಕ್ಷಿಣಾರೂಪದಲ್ಲಿ ದಾನವಾಗಿ ಕೊಟ್ಟನೋ ಅಷ್ಟು ವಿತ್ತವನ್ನು ದಾನಮಾಡಿದವರು ಹಿಂದೆಯೂ ಹುಟ್ಟಿಲ್ಲ-ಮುಂದೆಯೂ ಹುಟ್ಟುವುದಿಲ್ಲ. ಬೃಹದ್ರಥನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದನು. ಅಂತಹವನೇ ಕಾಲಗತಿಯನ್ನು ಹೊಂದಿದನೆಂದಮೇಲೆ ಬೇರೆಯವರ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಆದುದರಿಂದ ನಿನ್ನ ಮಗನು ಮರಣಹೊಂದಿದುದಕ್ಕಾಗಿ ನೀನು ಪರಿತಾಪಪಡಬೇಡ.

ಈ ಅಖಂಡಭೂಮಂಡಲವನ್ನೂ–ಸರ್ವತ್ರ ಚರ್ಮವನ್ನು ಹೊದಿಸಿದಂತೆ (ಕೃಷ್ಣಾಜಿನದ ಸುರುಳಿಯನ್ನು ಬಿಡಿಸಿ ಹರಡುವಷ್ಟು ಸುಲಭವಾಗಿ) ತನ್ನ ಸ್ವಾಧೀನಪಡಿಸಿಕೊಂಡಿದ್ದ ಉಶೀನರರ ಮಗನಾದ ಶಿಬಿಯೂ ಮರಣ ಹೊಂದಿದನೆಂಬ ವಾರ್ತೆಯನ್ನು ನಾವು ಕೇಳಿದ್ದೇವೆ. ಶಿಬಿಯು ತನ್ನ ರಥದ ಘೋಷದಿಂದ ಭೂಮಂಡಲವನ್ನೇ ಪ್ರತಿಧ್ವನಿಗೊಳಿಸುತ್ತಾ ಏಕಮಾತ್ರವಾದ ವಿಜಯರಥದ ಮೂಲಕವಾಗಿ ಅಖಂಡಭೂಮಂಡಲವನ್ನೂ ಒಂದೇ ಚಕ್ರಾಧಿಪತ್ಯದ ಅಧೀನದಲ್ಲಿರುವಂತೆ ಮಾಡಿದನು. ಉಶೀನರರ ಮಗನಾದ ಶಿಬಿಯು ತಾನು ಮಾಡಿದ ಯಾಗದಲ್ಲಿ–ಈ ವಿಶ್ವದಲ್ಲೀಗ, ಅರಣ್ಯದಲ್ಲಿರುವ ಪ್ರಾಣಿಗಳೂ ಸೇರಿ ಎಷ್ಟು ಹಸು-ಕುದುರೆಗಳಿವೆಯೋ–ಅಷ್ಟೇ ಸಂಖ್ಯೆಯ ಹಸುಗಳನ್ನು ದಾನವಾಗಿ ಕೊಟ್ಟನು. ಇಂದ್ರತುಲ್ಯಪರಾಕ್ರಮನಾದ, ಉಶೀನರರ ಮಗನಾದ ರಾಜರ್ಷಿಯಾದ ಶಿಬಿಯಂತೆ ಕಾರ್ಯದ ಭಾರವನ್ನು ವಹಿಸುವವನು (ಶಿಬಿಗೆ ಸಮಾನನಾದನು) ಪ್ರಪಂಚದ ರಾಜರಲ್ಲಿ ಹಿಂದೆ ಯಾರೂ ಇರಲಿಲ್ಲವೆಂಬುದೂ–ಮುಂದೆಯೂ ಇರುವುದಿಲ್ಲವೆಂಬುದೂ ಪ್ರಜಾಪತಿಬ್ರಹ್ಮನ ಭಾವನೆಯಾಗಿದ್ದಿತು.

ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದ ಮತ್ತು ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದ ಶಿಬಿಚಕ್ರವರ್ತಿಯೇ ಮರಣಹೊಂದಿದನೆಂದಮೇಲೆ ಬೇರೆಯವರ ವಿಷಯ

ದಲ್ಲಿ ಹೇಳುವುದೇನಿದೆ? ಯಜ್ಞಗಳನ್ನು ಮಾಡದ–ದಕ್ಷಿಣೆಗಳನ್ನೂ ಕೊಡದ ಮಗನ ವಿಷಯದಲ್ಲಿ ಇಷ್ಟೇಕೆ ಶೋಕಪಡುವೆ? ಶೋಕವನ್ನು ದೂರಮಾಡು.

ದುಷ್ಯಂತನಿಗೆ ಶಕುಂತಲೆಯಲ್ಲಿ ಹುಟ್ಟಿದ ಮಹಾಧನವಂತನಾದ, ಮಹಾತ್ಮನಾದ ಭರತನೂ ಕಾಲಗತಿಯನ್ನೈದಿದನೆಂದು ಕೇಳಿದ್ದೇವೆ. ಮಹಾ ತೇಜಸ್ವಿಯಾದ, ದುಷ್ಯಂತನ ಮಗನಾದ ಭರತನು ದೇವತೆಗಳನ್ನು ಪ್ರಸನ್ನ ಗೊಳಿಸುವ ಸಲುವಾಗಿ ಯಮುನಾನದಿಯ ತೀರದಲ್ಲಿ ಮೂರು ನೂರು ಅಶ್ವಮೇಧಾಶ್ವಗಳನ್ನು ಕಟ್ಟಿ ಮುನ್ನೂರು ಅಶ್ವಮೇಧಗಳನ್ನೂ, ಸರಸ್ವತೀ ನದಿಯ ತೀರದಲ್ಲಿ ಇಪ್ಪತ್ತು ಅಶ್ವಮೇಧಗಳನ್ನೂ, ಗಂಗಾನದಿಯ ತೀರದಲ್ಲಿ ಹದಿನಾಲ್ಕು ಅಶ್ವಮೇಧಗಳನ್ನೂ ಮಾಡಿದನು. ಭರತನು ತನ್ನ ಜೀವಮಾನದಲ್ಲಿ ಒಂದು ಸಾವಿರ ಅಶ್ವಮೇಧಯಾಗಗಳಿಂದಲೂ–ನೂರು ರಾಜಸೂಯ ಯಾಗಗಳಿಂದಲೂ ದೇವತೆಗಳನ್ನು ತೃಪ್ತಿಗೊಳಿಸಿದ್ದನು. ಮನುಷ್ಯರು ತಮ್ಮ ತೋಳುಗಳಿಂದ ಆಕಾಶಕ್ಕೆ ಹಾರಲು ಸಾಧ್ಯವಾಗಲಾರದಂತೆ (ಆಕಾಶವನ್ನು ತಬ್ಬಿಕೊಳ್ಳಲು ಆಗದಿರುವಂತೆ)–ವಿಶ್ವದ ಎಲ್ಲ ರಾಜರೂ ಭರತನು ಮಾಡಿದ ಮಹಾಕಾರ್ಯವನ್ನು ಅನುಕರಣೆಮಾಡಲು ಅಸಮರ್ಥರಾದರು. ಭರತನು ಸಾವಿರಕ್ಕಿಂತಲೂ ಅಧಿಕವಾದ ಸಂಖ್ಯೆಯಲ್ಲಿ ಅಶ್ವಮೇಧಾಶ್ವಗಳನ್ನು ಬಂಧಿಸಿ ಯಜ್ಞವೇದಿಗಳನ್ನು ವಿಸ್ತರಿಸಿ ಅಶ್ವಮೇಧಯಾಗಗಳನ್ನು ಮಾಡಿದನು. ಯಜ್ಞದಲ್ಲಿ ಸಾವಿರ ಚಿನ್ನದ ಕಮಲಗಳನ್ನು ಕಣ್ವಮಹರ್ಷಿಗಳಿಗೆ ದಾನವಾಗಿ ಕೊಟ್ಟನು.

ಸೃಂಜಯ! ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾದ, ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾದ ಭರತನೇ ಮರಣಹೊಂದಿದ ಮೇಲೆ ಬೇರೆಯವರ ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದ ಅಗಲಿದ ಮಗನಿಗಾಗಿ ಪರಿತಾಪಪಡಬೇಡ.

ಯಾವನು ಪ್ರಜೆಗಳನ್ನು ಔರಸಪುತ್ರರಂತೆಯೇ ಕಾಣುತ್ತಿದ್ದನೋ ಮತ್ತು ಅವರ ವಿಷಯದಲ್ಲಿ ಹೆಚ್ಚಿನ ಅನುಕಂಪದಿಂದಿದ್ದನೋ–ದಶರಥನ ಮಗನಾದ ಅಂತಹ ರಾಮನೂ ಮರಣಹೊಂದಿದನೆಂದು ನಾವು ಕೇಳಿದ್ದೇವೆ.

**ವಿಧವಾ ಯಸ್ಯ ವಿಷಯೇ ನಾನಾಥಾಃ ಕಾಶ್ಚನಾಭವನ್ ।**
**ಸದೈವಾಸೀತ್ಪಿತೃಸಮೋ ರಾಮೋ ರಾಜ್ಯಂ ಯದಾನ್ವಶಾತ್ ॥೨೫॥**

ಶ್ರೀರಾಮನ ರಾಜ್ಯದಲ್ಲಿ ಅನಾಥೆಯರಾದ ವಿಧವೆಯರೇ ಇರಲಿಲ್ಲ. ರಾಜ್ಯಶಾಸನಮಾಡುತ್ತಿದ್ದ ಸಮಯದಲ್ಲಿ ಶ್ರೀರಾಮನು ಪ್ರಜೆಗಳಿಗೆ ಸದಾ ಕಾಲದಲ್ಲಿಯೂ ತಂದೆಗೆ ಸಮಾನನಾಗಿದ್ದನು. (ತಂದೆಯು ಮಕ್ಕಳನ್ನು ನೋಡಿಕೊಳ್ಳುವಂತೆ ಪ್ರಜೆಗಳನ್ನು ನೋಡಿಕೊಳ್ಳುತ್ತಿದ್ದನು.)

**ಕಾಲವರ್ಷೀ ಚ ಪರ್ಜನ್ಯಃ ಸಸ್ಯಾನಿ ಸಮುಪಾದಯತ್ ।**
**ನಿತ್ಯಂ ಸುಭಿಕ್ಷಮೇವಾಸೀದ್ರಾಮೇ ರಾಜ್ಯಂ ಪ್ರಶಾಸತಿ ॥೫೩॥**

ಶ್ರೀರಾಮನು ರಾಜ್ಯಭಾರಮಾಡುತ್ತಿದ್ದ ಸಮಯದಲ್ಲಿ ಪರ್ಜನ್ಯನು ಕಾಲಕ್ಕೆ ಸರಿಯಾಗಿ ಮಳೆಗರೆಯುತ್ತಿದ್ದನು. ಬೆಳೆಗಳು ಚೆನ್ನಾಗಿ ಬೆಳೆಯುತ್ತಿದ್ದುವು. ರಾಮನ ರಾಜ್ಯದಲ್ಲಿ ಯಾವಾಗಲೂ ಸುಭಿಕ್ಷವೇ ಇದ್ದಿತು. ದುರ್ಭಿಕ್ಷವು ಯಾವಾಗಲೂ ಇರಲಿಲ್ಲ.

**ಪ್ರಾಣಿನೋ ನಾಪ್ಸು ಮಜ್ಜನ್ತಿ ನಾನ್ಯಥಾ ಪಾವಕೋಽದಹತ್ ।**
**ರುಜಾಭಯಂ ನ ತತ್ರಾಸೀದ್ರಾಮೇ ರಾಜ್ಯಂ ಪ್ರಶಾಸತಿ ॥೫೪॥**

ಶ್ರೀರಾಮನು ರಾಜ್ಯಭಾರಮಾಡುತ್ತಿದ್ದ ಸಮಯದಲ್ಲಿ ಪ್ರಾಣಿಗಳು ನೀರಿನಲ್ಲಿ ಮುಳುಗಿ ಸಾಯುತ್ತಿರಲಿಲ್ಲ. ಅನುಚಿತವಾದ ರೀತಿಯಲ್ಲಿ ಅಗ್ನಿಯೂ ಯಾರನ್ನೂ ಸುಡುತ್ತಿರಲಿಲ್ಲ. (ಬೆಂಕಿಗೆ ಬಿದ್ದು ಯಾರೂ ಅಸುನೀಗುತ್ತಿರಲಿಲ್ಲ.) ರೋಗಾದಿಗಳ ಭಯವಿರಲಿಲ್ಲ.

**ಆಸನ್ವರ್ಷಸಹಸ್ರಿಣ್ಯಸ್ತಥಾ ವರ್ಷಸಹಸ್ರಕಾಃ ।**
**ಆರೋಗಾಃ ಸರ್ವಸಿದ್ಧಾರ್ಥಾಃ ರಾಮೇ ರಾಜ್ಯಂ ಪ್ರಶಾಸತಿ ॥೫೫॥**

ಶ್ರೀರಾಮನು ರಾಜ್ಯಭಾರವನ್ನು ಮಾಡುತ್ತಿದ್ದ ಸಮಯದಲ್ಲಿ ಸ್ತ್ರೀಯರು ಸಾವಿರವರ್ಷಗಳು ಬದುಕಿರುತ್ತಿದ್ದರು. ಸಾವಿರವರ್ಷಗಳು ತುಂಬಿದ ಪುರುಷರಿದ್ದರು. ಪ್ರಜೆಗಳೆಲ್ಲರೂ ನೀರೋಗದೃಢಕಾಯರಾಗಿದ್ದರು. ಪೂರ್ಣ ಮನೋರಥರಾಗಿದ್ದರು.

**ನಾನ್ಯೋಽನ್ಯೇನ ವಿವಾದೋಽಭೂತ್ ಸ್ತ್ರೀಣಾಮಪಿ ಕುತೋ ನೃಣಾಮ್ ।**
**ಧರ್ಮನಿತ್ಯಾಃ ಪ್ರಜಾಶ್ಚಾಸನ್ರಾಮೇ ರಾಜ್ಯಂ ಪ್ರಶಾಸತಿ ॥೫೬॥**

ಶ್ರೀರಾಮನು ರಾಜ್ಯಭಾರಮಾಡುತ್ತಿರುವಾಗ ಒಬ್ಬರು ಮತ್ತೊಬ್ಬರೊಡನೆ ವೃಥಾ ವಿವಾದಮಾಡುತ್ತಿರಲಿಲ್ಲ. ಸ್ತ್ರೀಯರಲ್ಲಿಯೇ ಪರಸ್ಪರವಾಗಿ ವಿವಾದವಿರಲಿಲ್ಲವೆಂದಮೇಲೆ ಪುರುಷರಲ್ಲಿ ಹೇಗೆ ತಾನೇ ಇದ್ದೀತು? ಅಯೋಧ್ಯಾದೇಶದ ಪ್ರಜೆಗಳೆಲ್ಲರೂ ಧರ್ಮದಲ್ಲಿಯೇ ತತ್ಪರರಾಗಿದ್ದರು.

**ಸಂತುಷ್ಟಾಃ ಸರ್ವಸಿದ್ಧಾರ್ಥಾ ನಿರ್ಭಯಾಃ ಸ್ವೈರಚಾರಿಣಃ ।**
**ನರಾಃ ಸತ್ಯವ್ರತಾಶ್ಚಾಸನ್ರಾಮೇ ರಾಜ್ಯಂ ಪ್ರಶಾಸತಿ ॥೫೭॥**

ಶ್ರೀರಾಮಚಂದ್ರನು ರಾಜ್ಯಭಾರಮಾಡುತ್ತಿದ್ದಾಗ ಪ್ರಜೆಗಳು ಸಂತುಷ್ಟರಾಗಿದ್ದರು. ತಮಗೆ ಬೇಕಾದ ಎಲ್ಲ ಕಾಮನೆಗಳನ್ನೂ ಪಡೆದುಕೊಳ್ಳುತ್ತಿದ್ದರು. ಭಯರಹಿತರಾಗಿದ್ದರು. ಸ್ವತಂತ್ರರಾಗಿದ್ದರು ಮತ್ತು ಸತ್ಯನಿಷ್ಠರಾಗಿದ್ದರು.

**ನಿತ್ಯಪುಷ್ಪಫಲಾಶ್ಚೈವ ಪಾದಪಾ ನಿರುಪದ್ರವಾಃ ।**
**ಸರ್ವಾ ದ್ರೋಣದುಘಾ ಗಾವೋ ರಾಮೇ ರಾಜ್ಯಂ ಪ್ರಶಾಸತಿ ॥೫೮॥**

ಶ್ರೀರಾಮನು ರಾಜ್ಯಭಾರಮಾಡುತ್ತಿದ್ದಾಗ ವೃಕ್ಷಗಳು ಸರ್ವರ್ತುಗಳಲ್ಲಿಯೂ ಫಲ-ಪುಷ್ಪಭರಿತವಾಗಿದ್ದುವು. ವೃಕ್ಷಗಳಿಗೂ ಯಾವ ವಿಧವಾದ ಉಪದ್ರವವೂ ಇರಲಿಲ್ಲ. (ವೃಕ್ಷಗಳನ್ನು ಯಾರೂ ವೃಥಾ ಕಡಿದುಹಾಕುತ್ತಿರಲಿಲ್ಲ.) ಅವನ ರಾಜ್ಯದಲ್ಲಿ ಎಲ್ಲ ಹಸುಗಳೂ ಬಳ್ಳ-ಬಳ್ಳದಷ್ಟು ಹಾಲು ಕರೆಯುತ್ತಿದ್ದುವು.

ಮಹಾತಪಸ್ವಿಯಾದ ಶ್ರೀರಾಮಚಂದ್ರನು ಹದಿನಾಲ್ಕು ವರ್ಷಗಳ ಕಾಲ ವನವಾಸವನ್ನು ಮುಗಿಸಿ ರಾಜ್ಯಕ್ಕೆ ಹಿಂದಿರುಗಿದನಂತರ ಸ್ತುತ್ಯರ್ಹಗಳಾದ ಮತ್ತು ಕೊಡಬೇಕಾದುದಕ್ಕಿಂತಲೂ ಮೂರು ಪಟ್ಟು ಹೆಚ್ಚಿನ ದಕ್ಷಿಣೆಗಳಿಂದ ಕೂಡಿದ್ದ ಹತ್ತು ಅಶ್ವಮೇಧಗಳನ್ನು ಮಾಡಿದನು. ರಾಮನು ಅಶ್ವಮೇಧ ಯಾಗಗಳನ್ನು ಮಾಡುತ್ತಿದ್ದ ಸಮಯದಲ್ಲಿ ಯಜ್ಞಸಂಬಂಧವಾದ ಭೋಜನ ಶಾಲೆಯ ಬಾಗಿಲು ಅತಿಥಿ-ಅಭ್ಯಾಗತರಿಗೆ ಮತ್ತು ಯಾಚಕರಿಗೆ ಯಾವಾಗಲೂ ತೆರೆದೇ ಇರುತ್ತಿತ್ತು.

**ಯುವಾ ಶ್ಯಾಮೋ ಲೋಹಿತಾಕ್ಷೋ ಮಾತಙ್ಗ ಇವ ಯೂಥಪಃ ।**
**ಆಜಾನುಬಾಹುಃ ಸುಮುಖಃ ಸಿಂಹಸ್ಕನ್ಧೋ ಮಹಾಭುಜಃ ॥೬೦॥**

ಶ್ರೀರಾಮನು ನವಯುವಕನಾಗಿದ್ದನು. ಶ್ಯಾಮಲವರ್ಣದವನಾಗಿದ್ದನು. ಕೆಂಪಾದ ಕಣ್ಣುಗ್ಗಳನ್ನು ಹೊಂದಿದ್ದನು. ಆನೆಗಳ ಹಿಂಡಿನ ಅಗ್ರಭಾಗದಲ್ಲಿ ಹೋಗುವ ಮಹಾಸಲಗದಂತೆ–ಶ್ರೀರಾಮನು ಬಲಿಷ್ಠನಾಗಿದ್ದನು. ಅವನಿಗೆ ಉದ್ದವಾದ ತೋಳುಗಳಿದ್ದವು. ಅವನ ಮುಖವು ಸುಂದರವಾಗಿದ್ದಿತು. ಅವನಿಗೆ ಸಿಂಹದ ಹೆಗಲಿನಂತೆ ವಿಶಾಲವಾದ ಹೆಗಲಿದ್ದಿತು. ಅವನ ಭುಜಗಳು ಮಾಂಸಲವಾಗಿದ್ದುವು. ಎಲ್ಲ ಸಮಯಗಳಲ್ಲಿಯೂ ಸುಮುಖನಾಗಿಯೇ ಇರುತ್ತಿದ್ದನು.

ಶ್ರೀರಾಮನು ಹನ್ನೊಂದುಸಾವಿರ ವರ್ಷಗಳ ಕಾಲ ಅಯೋಧ್ಯೆಯ ಅಧಿಪತಿಯಾಗಿದ್ದು ಧರ್ಮದಿಂದ ರಾಜ್ಯಭಾರಮಾಡುತ್ತಿದ್ದನು.

ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಶ್ರೀರಾಮನು ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯಶಾಲಿ ಯಾಗಿದ್ದನು. ಅಂತಹವನೇ ಮರಣಹೊಂದಿದಮೇಲೆ ಬೇರೆಯವರು ಮರಣಹೊಂದಕೂಡದೆಂಬುವುದರಲ್ಲಿ ಅರ್ಥವೇನಿದೆ? ಆದುದರಿಂದ ನೀನು ನಿನ್ನ ಮಗನು ಮರಣಹೊಂದಿದುದಕ್ಕಾಗಿ ವೃಥಾ ಸಂಕಟಪಡಬೇಡ.

ಸೃಂಜಯ! ಮಹಾಮಹಿಮನಾದ ಭಗೀರಥನೂ ಕಾಲಗತಿಯನ್ನೈದಿದ ನೆಂದು ನಾವು ಕೇಳಿದ್ದೇವೆ. ಭಗೀರಥನು ಮಾಡಿದ ವಿಸ್ತಾರವಾದ ಯಜ್ಞದಲ್ಲಿ ಸುರಶ್ರೇಷ್ಠನಾದ, ಪಾಕಶಾಸನನಾದ ಇಂದ್ರನು ಸೋಮರಸವನ್ನು ಕುಡಿದು ಪ್ರಮತ್ತನಾಗಿ ಸಾವಿರಾರು ಮಂದಿ ಅಸುರರನ್ನು ತನ್ನ ಭುಜಬಲ-ಪರಾಕ್ರಮಗಳಿಂದ ಜಯಿಸಿದನು.

ಭಗೀರಥನು ಯಜ್ಞಮಾಡುತ್ತಿದ್ದಾಗ ಸುವರ್ಣಾಭರಣಗಳಿಂದ ಸಮ ಲಂಕೃತವಾದ ಹತ್ತು ಲಕ್ಷ ಕನ್ಯೆಯರನ್ನು ದಕ್ಷಿಣಾರೂಪವಾಗಿ ದಾನಮಾಡಿ ದನು. ಆ ಕನ್ಯೆಯರೆಲ್ಲರೂ ರಥಗಳಲ್ಲಿ ಕುಳಿತಿದ್ದರು. ಅವರು ಕುಳಿತಿದ್ದ ಪ್ರತಿಯೊಂದು ರಥಕ್ಕೂ ನಾಲ್ಕು ಕುದುರೆಗಳನ್ನು ಹೂಡಿದ್ದರು. ಒಂದೊಂದು ರಥದ ಹಿಂದೆಯೂ ಸುವರ್ಣಮಾಲೆಗಳಿಂದ ಸಮಲಂಕೃತವಾದ, ಹಣೆಯಲ್ಲಿ ಕಮಲದ ಚಿಹ್ನೆಗಳನ್ನು ಹೊಂದಿದ್ದ ನೂರು-ನೂರು ಆನೆಗಳಿದ್ದುವು. ಒಂದೊಂದು ಆನೆಯನ್ನೂ ಅನುಸರಿಸಿ ಒಂದೊಂದು ಸಾವಿರ ಕುದುರೆಗಳು

ಹೋಗುತ್ತಿದ್ದುವು. ಪ್ರತಿಯೊಂದು ಕುದುರೆಯ ಹಿಂದೆ ಸಾವಿರ ಹಸುಗಳಿ ದ್ದುವು. ಒಂದೊಂದು ಹಸುವಿನ ಹಿಂದೆಯೂ ಸಾವಿರ-ಸಾವಿರ ಆಡು ಮತ್ತು ಕುರಿಗಳು ಹೋಗುತ್ತಿದ್ದುವು.

**ಉಪಹ್ವರೇ ನಿವಸತೋ ಯಸ್ಯಾಙ್ಕೇ ನಿಷಸಾದ ಹ ।**
**ಗಙ್ಗಾ ಭಾಗೀರಥೀ ತಸ್ಮಾದುರ್ವಶೀ ಚಾಭವತ್ಪುರಾ ॥೬೮॥**

ಭಗೀರಥನು ಗಂಗಾನದಿಯ ತೀರದಲ್ಲಿ ವಾಸಮಾಡುತ್ತಿದ್ದಾಗ ಗಂಗೆಯು (ಗಂಗಾದೇವಿಯ ಅಧಿದೇವತೆಯು) ಸಶರೀರಳಾಗಿ ಬಂದು ಭಗೀರಥನ ತೊಡೆಯಮೇಲೆ ಕುಳಿತುಕೊಳ್ಳುತ್ತಿದ್ದಳು. ಆದುದರಿಂದ ಗಂಗೆಯು ಭಾಗೀರಥೀ ಮತ್ತು ಉರ್ವಶೀ–ಎಂಬ ಹೆಸರುಗಳಿಂದಲೂ ಪ್ರಸಿದ್ಧಳಾದಳು.

ಯಜ್ಞದಲ್ಲಿ ಯಜಮಾನನಾಗಿ ಯಥೇಚ್ಛವಾಗಿ ದಕ್ಷಿಣೆಯನ್ನು ಬ್ರಾಹ್ಮಣ ರಿಗೆ ಕೊಡುತ್ತಿದ್ದ ಇಕ್ಷ್ವಾಕುಕುಲಸಂಭೂತನಾದ ಭಗೀರಥನನ್ನು ತ್ರಿಪಥ ಗಾಮಿನಿಯಾದ ಗಂಗಾದೇವಿಯು ತಂದೆಯನ್ನಾಗಿ ಮಾಡಿಕೊಂಡಳು.

ಸೃಂಜಯ! ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಭಗೀರಥನು ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯವಂತನಾಗಿದ್ದನು. ಅಂತಹವನೇ ಮರಣಹೊಂದಿದ ಮೇಲೆ ಬೇರೆಯ ವರ ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದ ನಿನ್ನ ಮಗನ ವಿಷಯ ದಲ್ಲಿ ಶೋಕಿಸಬೇಡ.

ಯಾವನು ಮಾಡಿದ ಮಹಾಕಾರ್ಯಗಳನ್ನು ಬ್ರಾಹ್ಮಣರು ಈಗಲೂ ಪ್ರಶಂಸೆಮಾಡುವರೋ, ಅಂತಹ ಕೀರ್ತಿಮಂತನಾದ ದಿಲೀಪನೂ ಮರಣ ಹೊಂದಿದನೆಂಬುದನ್ನು ನಾವು ಕೇಳಿದ್ದೇವೆ. ಭೂಮಂಡಲಾಧಿಪತಿಯಾದ, ಏಕಾಗ್ರಚಿತ್ತನಾದ ದಿಲೀಪನು ತಾನು ಮಾಡಿದ ಮಹಾಯಜ್ಞದಲ್ಲಿ ಸಕಲೈ ಶ್ವರ್ಯಗಳಿಂದಲೂ ಸಂಪನ್ನವಾಗಿದ್ದ ಈ ವಸುಧೆಯನ್ನೇ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಯಜಮಾನನಾದ ದಿಲೀಪನ ಪ್ರತಿಯೊಂದು ಯಜ್ಞ ದಲ್ಲಿಯೂ ಪುರೋಹಿತರು ಸುವರ್ಣಮಯವಾದ ಸಾವಿರ ಆನೆಗಳನ್ನು ದಕ್ಷಿಣೆಯ ರೂಪದಲ್ಲಿ ದಿಲೀಪನಿಂದ ಪಡೆದುಕೊಂಡು ಹೋಗುತ್ತಿದ್ದರು. ದಿಲೀಪನ ಯಜ್ಞದಲ್ಲಿ ಸುವರ್ಣಮಯವಾದ, ಕಾಂತಿಯುಕ್ತವಾದ ಯೂಪ

ಸ್ತಂಭವು ಸ್ಥಾಪಿಸಲ್ಪಟ್ಟಿದ್ದಿತು. ಇಂದ್ರನೇ ಮೊದಲಾದ ದೇವತೆಗಳು ಯಜ್ಞದ ಕರ್ಮಗಳನ್ನು ಮಾಡುತ್ತಾ ಸುವರ್ಣಮಯವಾದ ಆ ಯೂಪಸ್ತಂಭವನ್ನು ಆಶ್ರಯಿಸಿ ಕುಳಿತಿದ್ದರು. ಸುವರ್ಣಮಯವಾದ ಆ ಯೂಪಸ್ತಂಭದ ಮೇಲುಭಾಗದಲ್ಲಿದ್ದ ಸುವರ್ಣಮಯವಾದ ಬಳೆಯ ಮಧ್ಯಭಾಗದಲ್ಲಿ ಕುಳಿತಿದ್ದ ವಿಶ್ವಾವಸುವು ಅವರು ಮಾಡುತ್ತಿದ್ದ ನೃತ್ಯಕ್ಕೆ ಅನುಗುಣವಾಗಿ ಸಪ್ತಸ್ವರಗಳಿಂದ ಯುಕ್ತವಾದ ವೀಣೆಯನ್ನು ನುಡಿಸುತ್ತಿದ್ದನು. ಆ ಸಮಯದಲ್ಲಿ ಎಲ್ಲ ಪ್ರಾಣಿಗಳೂ ವಿಶ್ವಾವಸುವು 'ತನ್ನ ಮುಂದೆಯೇ ವೀಣೆಯನ್ನು ನುಡಿಸುತ್ತಿದ್ದಾನೆ'–ಎಂದು ಭಾವಿಸಿದುವು.

ರಾಜನಾದ ದಿಲೀಪನ ಪರಮಾದ್ಭುತವಾದ ಯಜ್ಞಕರ್ಮವನ್ನು ಇತರ ರಾಜರು ಮಾಡಲು ಸಮರ್ಥರಾಗಲಿಲ್ಲ. ಸುವರ್ಣಮಯವಾದ ಆಭರಣ ಗಳಿಂದ ಸಮಲಂಕೃತವಾಗಿದ್ದ ದಿಲೀಪರಾಜನ ಸಾವಿರಾರು ಆನೆಗಳು ಮದೋನ್ಮತ್ತವಾಗಿ ಬೀದಿಯಲ್ಲಿ ಮಲಗುತ್ತಿದ್ದುವು. ಸತ್ಯವಾದಿಯಾದ, ಶತಧನ್ವನಾದ, ಮಹಾತ್ಮನಾದ ದಿಲೀಪನನ್ನು ಸಂದರ್ಶಿಸಿದವರೆಲ್ಲರೂ ಸ್ವರ್ಗಕ್ಕೆ ಹೋದರು. ದಿಲೀಪನ ಮನೆಯಲ್ಲಿ ಮೂರು ವಿಧವಾದ ಶಬ್ದಗಳು ಯಾವಾಗಲೂ ನಿಲ್ಲುತ್ತಲೇ ಇರಲಿಲ್ಲ. **ಸ್ವಾಧ್ಯಾಯಘೋಷೋ ಜ್ಯಾಘೋಷೋ ದೀಯತಾಮಿತಿ ವೈ ತ್ರಯಃ ||**–ವೇದಾಧ್ಯಯನದ ಘೋಷ, ಮೌರ್ವಿಯ ಟೇಂಕಾರಶಬ್ದ ಮತ್ತು 'ಕೊಡಿರಿ–ಯಥೇಚ್ಛವಾಗಿ ಯಾಚಕರಿಗೆ ದಾನಮಾಡಿರಿ!' ಎಂಬ ಕೂಗು–ಈ ಮೂರು ಶಬ್ದಗಳೂ ಅನವರತವಾಗಿ ಕೇಳಿಬರುತ್ತಿದ್ದುವು.

ದಿಲೀಪನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ ನಾಗಿದ್ದನು. ಅಂತಹವನೇ ಮರಣಹೊಂದಿದಮೇಲೆ ಬೇರೆಯವರ ವಿಷಯ ವಾಗಿ ಹೇಳುವುದೇನಿದೆ? ಆದುದರಿಂದ ನಿನ್ನ ಮಗನ ಮರಣಕ್ಕಾಗಿ ಶೋಕಿಸ ಬೇಡ.

ಮರುತ್ತರೆಂಬ ದೇವತೆಗಳು, ಗರ್ಭಾವಸ್ಥೆಯಲ್ಲಿದ್ದಾಗಲೇ ಯಾರನ್ನು

ತಂದೆಯ ಸಮೀಪದಿಂದ ಅಪಹರಿಸಿದರೋ (ಹೊರಕ್ಕೆ ತೆಗೆದರೋ) ಯುವನಾಶ್ವನ ಮಗನಾದ ಆ ಮಾಂಧಾತನೂ ಮರಣಹೊಂದಿದನೆಂಬುದನ್ನು ಕೇಳಿದ್ದೇವೆ. ಮೂರು ಲೋಕಗಳನ್ನೂ ಜಯಿಸಿದ್ದ, ಶ್ರೀಮಂತನಾದ ಮಾಂಧಾತನು ಪೃಷದಾಜ್ಯದಿಂದ (ಮೊಸರು ಬೆರೆಸಿದ ಹಾಲಿನಿಂದ) ಹುಟ್ಟಿದವನು. ತಂದೆಯಾದ ಮಹಾತ್ಮನಾದ ಯುವನಾಶ್ವನ ಹೊಟ್ಟೆಯಲ್ಲಿ ವೃದ್ಧಿಹೊಂದಿದವನು. ತಂದೆಯ ತೊಡೆಯ ಮೇಲೆ ಮಲಗಿದ್ದ ದೇವಸದೃಶ ವಾದ ಮಗುವನ್ನು ನೋಡಿ ದೇವತೆಗಳು “ತಾಯಿಯೇ ಇಲ್ಲದ ಈ ಶಿಶುವು ಯಾರ ಹಾಲನ್ನು ಕುಡಿಯುತ್ತದೆ?”–ಎಂದು ಪರಸ್ಪರವಾಗಿ ಮಾತನಾಡಿಕೊಂಡರು. ದೇವತೆಗಳು ಹೇಳಿದ ಆ ಮಾತನ್ನು ಕೇಳಿ ಇಂದ್ರನು **‘ಮಾಮೇವ ಧಾಸ್ಯತಿ’** ‘ನನ್ನನ್ನೇ (ನನ್ನ ಹಾಲನ್ನೇ) ಕುಡಿಯುತ್ತಾನೆ’ ಎಂದು ಹೇಳಿ ಹಾಲನ್ನು ಕುಡಿಸಲು ಇಂದ್ರನೇ ಆ ಶಿಶುವನ್ನು ಸ್ವೀಕರಿಸಿದನು. ಕೂಡಲೇ ಇಂದ್ರನು ಆ ಮಗುವಿಗೆ ‘ಮಾಂಧಾತಾ’ ಎಂದೇ ನಾಮಕರಣ ಮಾಡಿದನು.

**ತತಸ್ತು ಪಯಸೋ ಧಾರಾಂ ಪುಷ್ಟಿಹೇತೋರ್ಮಹಾತ್ಮನಃ ।**
**ತಸ್ಯಾಸ್ಯೇ ಯೌವನಾಶ್ವಸ್ಯ ಪಾಣಿರಿನ್ದ್ರಸ್ಯ ಚಾಸ್ರವತ್ ॥೮೫॥**

ಬಳಿಕ ಮಹಾತ್ಮನಾದ ಯೌವನಾಶ್ವನ ( ಮಾಂಧಾತನ ) ಪುಷ್ಟಿಗಾಗಿ ಆ ಮಗುವಿನ ಬಾಯಿಯಲ್ಲಿದ್ದ ಇಂದ್ರನ ಹಸ್ತವು ಹಾಲಿನ ಧಾರೆಯನ್ನೇ ಸುರಿಸಿತು.

ಇಂದ್ರನ ಹಸ್ತದಿಂದ ಧಾರಾಕಾರವಾಗಿ ಸುರಿಯುತ್ತಿದ್ದ ಹಾಲನ್ನು ಕುಡಿದು ಮಾಂಧಾತನು ಒಂದೇ ದಿವಸದಲ್ಲಿ ನೂರು ದಿವಸಗಳು ತುಂಬಿದ ಮಗುವಿನಂತೆ ವೃದ್ಧಿಹೊಂದಿದನು. ಹೀಗೆಯೇ ಹನ್ನೆರಡು ದಿವಸಗಳ ಪರ್ಯಂತವಾಗಿ ಇಂದ್ರನ ಹಸ್ತದಿಂದ ಸ್ರವಿಸುತ್ತಿದ್ದ ಹಾಲನ್ನು ಕುಡಿದು ಹನ್ನೆ ರಡು ವರ್ಷ ವಯಸ್ಸಿನ ಬಾಲಕನಂತಾದನು. ಈ ಅಖಂಡಭೂಮಂಡಲವೂ ಇಂದ್ರಸಮಪರಾಕ್ರಮನಾದ ಮಾಂಧಾತನ ಅಧೀನವಾಯಿತು. ಅಂಗಾರ ರಾಜನನ್ನೂ, ಮರುತ್ತನನ್ನೂ, ಅಸಿತನನ್ನೂ, ಗಯನನ್ನೂ, ಅಂಗರಾಜನಾದ

ಬೃಹದ್ರಥನನ್ನೂ ಮಾಂಧಾತನು ಯುದ್ಧದಲ್ಲಿ ಜಯಿಸಿದನು. ಯೌವನಾಶ್ವನು ಅಂಗರಾಜನೊಡನೆ ಯುದ್ಧಮಾಡುತ್ತಿದ್ದಾಗ ಉಂಟಾಗುತ್ತಿದ್ದ ಧನು ಷ್ಟೇಂಕಾರವನ್ನು ಕೇಳಿದ ದೇವತೆಗಳು ಮಾಂಧಾತನು ಆಕಾಶವನ್ನೇ ಸೀಳಿ ಬಿಡಬಹುದೆಂದು ಭಾವಿಸಿದರು.

ಸೂರ್ಯನು ಉದಯಿಸುವ ಸ್ಥಳದಿಂದ ಹಿಡಿದು ಅಸ್ತಮಿಸುವ ಸ್ಥಳದ ವರೆಗೆ ವಿಸ್ತಾರವಾದ ಎಷ್ಟು ಕ್ಷೇತ್ರವಿರುವುದೋ, ಆ ಎಲ್ಲ ಕ್ಷೇತ್ರವೂ ಯುವನಾಶ್ವನ ಮಗನಾದ ಮಾಂಧಾತನ ರಾಜ್ಯವೆಂದು ಹೇಳಲ್ಪಡುತ್ತಿದ್ದಿತು. (ಸೂರ್ಯನು ಹುಟ್ಟುವ ಮತ್ತು ಸೂರ್ಯನು ಅಸ್ತಮಿಸುವ ಪ್ರದೇಶಗಳೇ ಯೌವನಾಶ್ವನ ರಾಜ್ಯದ ಪೂರ್ವ-ಪಶ್ಚಿಮಗಳ ಎಲ್ಲೆಗಳಾಗಿದ್ದುವು. )

ಯೌವನಾಶ್ವನು ನೂರು ಅಶ್ವಮೇಧಗಳನ್ನೂ–ನೂರು ರಾಜಸೂಯ ಯಾಗಗಳನ್ನೂ ಮಾಡಿ ಹತ್ತು ಯೋಜನಗಳಷ್ಟು ದಪ್ಪವಾಗಿಯೂ ಒಂದು ಯೋಜನದಷ್ಟು ಎತ್ತರವಾಗಿಯೂ ಇದ್ದ ಸುವರ್ಣಮಯವಾದ ರೋಹಿತ ಗಳೆಂಬ ಮೀನುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ದಾನಮಾಡಿದ ನಂತರ ಉಳಿದುದನ್ನು ಇತರ ಜನರು ಹಂಚಿಕೊಂಡರು.*

ಸೃಂಜಯ! ಮಾಂಧಾತನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಪುಣ್ಯಶಾಲಿಯಾಗಿದ್ದನು. ಅಂತಹವನೇ ಮರಣಹೊಂದಿದಮೇಲೆ ನಿನ್ನ ಮಗನು ಮರಣಹೊಂದಿದುದರಲ್ಲಿ ವಿಶೇಷವೇನಿದೆ? ಆದುದರಿಂದ ನಿನ್ನ ಮಗನನ್ನು ಕುರಿತು ಶೋಕಪಡುವುದನ್ನು ನಿಲ್ಲಿಸು.

ನಹುಷನ ಮಗನಾದ ಯಯಾತಿಯೂ ಕಾಲಗತಿಯನ್ನೈದಿದ ನೆಂದು ನಾವು ಕೇಳಿದ್ದೇವೆ. ಯಯಾತಿಯು ಸಾಗರಪರ್ಯಂತವಾದ ಈ ಭೂ

---

* ದ್ರೋಣಪರ್ವದ ೬೨ನೆಯ ಅಧ್ಯಾಯದಲ್ಲಿ ಈ ಶ್ಲೋಕವು ಸ್ವಲ್ಪ ವ್ಯತ್ಯಾಸವಾಗಿ ಬಂದಿದೆ. 'ಹೈರಣ್ಯಾನ್ಯೋಜನೋತ್ಸೇಧಾನಾಯತಾನ್ದಶಯೋಜನಮ್'–ಎಂದು ಇಲ್ಲಿ ದ್ದರೆ '... ಯೋಜನೋತ್ಸೇಧಾನಾಯತಾನ್ಶತಯೋಜನಮ್'–ಎಂಬುದಾಗಿ ಅಲ್ಲಿದೆ. ಇಲ್ಲಿ ವ್ಯಾಖ್ಯಾನಕಾರರು ಮತ್ಸ್ಯಾನ್ - ಹೈರಣ್ಯಾನ್ ಇತಿ ಸಮ್ಬನ್ಧಃ ಹೈರಣ್ಯಾನ್

ಮಂಡಲವನ್ನು ಜಯಿಸಿ, ಶಮ್ಯಾಪಾತದಿಂದ[1] ಭೂಮಿಯನ್ನು ಗುರುತಿಸುತ್ತಾ, ಅಲ್ಲಲ್ಲಿಯೇ ಪ್ರತಿಷ್ಠಾಪಿಸಿದ ಯಜ್ಞವೇದಿಗಳಿಂದ ಭೂಮಂಡಲವನ್ನೇ ಚಿತ್ರಗೊಳಿಸುತ್ತಾ, ಮುಖ್ಯವಾದ ಕ್ರತುಗಳಿಂದ ದೇವತೆಗಳನ್ನು ತೃಪ್ತಿಗೊಳಿಸುತ್ತಾ, ಅಖಂಡಭೂಮಂಡಲವನ್ನೂ ಪ್ರದಕ್ಷಿಣೆಮಾಡಿದನು. ಯಯಾತಿಯು ಸಾವಿರ ಶ್ರೌತಯಜ್ಞಗಳನ್ನೂ, ನೂರು ವಾಜಪೇಯಯಾಗ ಗಳನ್ನೂ ಮಾಡಿ ತತ್ಸಂಬಂಧವಾಗಿ ಮೂರು ಕನಕಪರ್ವತಗಳನ್ನೇ ಬ್ರಾಹ್ಮಣರಿಗೆ ದಾನಕೊಟ್ಟು ಅವರನ್ನು ತೃಪ್ತಿಗೊಳಿಸಿದನು. ನಹುಷನ ಮಗನಾದ ಯಯಾತಿಯು ಯುದ್ಧದಲ್ಲಿ ವ್ಯೂಹಕ್ರಮದಲ್ಲಿ ನಿಲ್ಲಿಸಿದ್ದ ದೈತ್ಯ-ದಾನವರ ಸೈನ್ಯಗಳನ್ನು ಸಂಹರಿಸಿ ಅಖಂಡಭೂಮಂಡಲವನ್ನೂ ತನ್ನ ಮಕ್ಕಳಿಗೆ ವಿಭಾಗಮಾಡಿಕೊಟ್ಟನು.

ಯಯಾತಿಯು ತನ್ನ ದೇಶದ ಎಲ್ಲೆಗಳಲ್ಲಿದ್ದ ರಾಜ್ಯಗಳಲ್ಲಿ ಯದು, ತುರ್ವಸು, ದ್ರುಹ್ಯು ಮತ್ತು ಅನು ಎಂಬುವರನ್ನು ಸಂಸ್ಥಾಪಿಸಿ (ಗಡಿಯ ಪ್ರಾಂತ್ಯಗಳಿಗೆ ಆ ನಾಲ್ವರನ್ನೂ ರಾಜರನ್ನಾಗಿ ಮಾಡಿ) ಕೊನೆಯವನಾದ ಪೂರುವನ್ನು ಭಾರತರಾಜ್ಯಸಿಂಹಾಸನದಲ್ಲಿ ಪಟ್ಟಾಭಿಷೇಕಮಾಡಿ ಪತ್ನಿಯ ರೊಡನೆ ಅರಣ್ಯಕ್ಕೆ ಹೋದನು.

ಯಯಾತಿಯು ಧರ್ಮ, ಜ್ಞಾನ, ವೈರಾಗ್ಯ, ಮತ್ತು ಐಶ್ವರ್ಯಗಳಲ್ಲಿ

---

ಮತ್ಸ್ಯಾನ್ = ಸುವರ್ಣಮಯವಾದ ಮೀನುಗಳನ್ನು–ಎಂದು ಅನ್ವಯಿಸಿಕೊಳ್ಳ ಬೇಕು–ಎಂದು ಮಾತ್ರವೇ ಹೇಳಿದ್ದಾರೆ. ಅಲ್ಲಿ ಮತ್ಸ್ಯಾನ್ ಎಂಬುದಕ್ಕೆ ಮತ್ಸ್ಯದೇಶವೆಂದು ಹೇಳಿ ಈ ಶ್ಲೋಕದಲ್ಲಿರುವ ಎಲ್ಲ ಪದಗಳಿಗೂ ವಿಶೇಷವಾದ ವ್ಯಾಖ್ಯಾನವನ್ನೇ ಮಾಡಿದ್ದಾರೆ. ಸಂಪುಟ 16 ಪುಟ 2579ರಲ್ಲಿ ನೋಡಬಹುದು.

1 **ಶಮ್ಯಾಪಾತಃ**–ಶಮ್ಯಾ ಎಂಬುದಕ್ಕೆ ವ್ಯಾಖ್ಯಾನಕಾರರು **ಸ್ಥೂಲಬುಧ್ನಃ ಕಾಷ್ಠದಣ್ಡಃ** ಸ್ಥೂಲವಾದ ಬುಡವಿರುವ ಒಂದು ಮರದ ಕೋಲು ಗೂಟದಗೋಲು ಎಂದು ಅರ್ಥ ಮಾಡಿರುತ್ತಾರೆ. ಬಲಿಷ್ಠನಾದವನೊಬ್ಬನು ಆ ದಂಡವನ್ನು ಹಿಡಿದು ಬೀಸಿ ಎಸೆದರೆ ಅದು ಎಲ್ಲಿಗೆ ಹೋಗಿ ಬೀಳುವುದೋ, ಆ ಸ್ಥಳಕ್ಕೆ 'ಶಮ್ಯಾಪಾತ' ಎಂದು ಹೆಸರು. ಅದನ್ನೇ ಅಳತೆಯನ್ನಾಗಿಟ್ಟುಕೊಂಡು ಯಯಾತಿಯು ಪ್ರತಿಯೊಂದು ಶಮ್ಯಾಪಾತದ ಸ್ಥಳದಲ್ಲಿಯೂ ಯಜ್ಞವೇದಿಯನ್ನು ನಿರ್ಮಿಸಿ ಯಜ್ಞಮಾಡುತ್ತಾ ಅಖಂಡಭೂಮಂಡಲವನ್ನೂ ಹೀಗೆಯೇ ಪರ್ಯಟನಮಾಡಿದನು. ಅರ್ಥಾತ್ ಅಸಂಖ್ಯಾತವಾಗಿ ಯಜ್ಞಗಳನ್ನು ಮಾಡುತ್ತಾ ಭೂಮಂಡಲವನ್ನು ಪ್ರದಕ್ಷಿಣೆಮಾಡಿದನು.

ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಅವನು ಹೆಚ್ಚು ಪುಣ್ಯವಂತನು. ಅಂತಹವನೇ ಮರಣಹೊಂದಿದನೆಂದಮೇಲೆ ನಿನ್ನ ಮಗ ನಂತೂ ಗಣನೆಗೇ ಬರುವುದಿಲ್ಲ. ಆದುದರಿಂದ ಮಗನಿಗಾಗಿ ಪರಿತಪಿಸಬೇಡ.

ಸೃಂಜಯ! ನಾಭಾಗನ ಮಗನಾದ ಅಂಬರೀಷನೂ ಮೃತನಾದನೆಂಬು ದನ್ನು ನಾವು ಕೇಳಿದ್ದೇವೆ. ಪ್ರಜೆಗಳೆಲ್ಲರೂ ರಾಜಸತ್ತಮನಾದ ಅಂಬರೀಷ ಮಹಾರಾಜನನ್ನು ಪುಣ್ಯಮಯನಾದ ರಾಜ್ಯರಕ್ಷಕನೆಂದು ಭಾವಿಸಿದ್ದರು. ಬ್ರಾಹ್ಮಣರ ವಿಷಯದಲ್ಲಿ ಹೆಚ್ಚಿನ ಭಕ್ತಿಯಿಂದಿದ್ದ ಅಂಬರೀಷನು ಯಜ್ಞ ಮಾಡುತ್ತಿದ್ದ ಸಮಯದಲ್ಲಿ ಒಂದು ಲಕ್ಷ ಹತ್ತು ಸಾವಿರ ರಾಜರನ್ನು ಬ್ರಾಹ್ಮಣರ ಸೇವೆಗಾಗಿ ನಿಯಮಿಸಿದ್ದನು. ಬ್ರಾಹ್ಮಣರ ಸೇವೆಯನ್ನು ಮಾಡುತ್ತಿದ್ದ ಆ ರಾಜರೆಲ್ಲರೂ ಹತ್ತು ಸಾವಿರ ಯಜ್ಞಗಳನ್ನು ಮಾಡಿದ್ದರು. ಸರಳಸ್ವಭಾವದ ಬ್ರಾಹ್ಮಣರು 'ಅಂಬರೀಷರಾಜನು ಮಾಡಿದ ಯಾಗವನ್ನು ಹಿಂದೆ ಯಾರೂ ಮಾಡಿಲ್ಲ ; ಮುಂದೆ ಮಾಡುವುದೂ ಇಲ್ಲ'–ಎಂಬುದಾಗಿ ಹೇಳಿ ಅಂಬರೀಷನನ್ನು ಪ್ರಶಂಸೆಮಾಡಿದರು. ಅಂಬರೀಷರಾಜನು ಮಾಡಿದ ಮಹಾಯಜ್ಞದಲ್ಲಿ ಬ್ರಾಹ್ಮಣರ ಸೇವೆಯಲ್ಲಿಯೇ ನಿರತರಾಗಿದ್ದ ಒಂದು ಲಕ್ಷ ಹತ್ತು ಸಾವಿರ ರಾಜರೂ ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನೇ ಪಡೆದು *ದಕ್ಷಿಣಾಯನದ ಮಾರ್ಗವಾಗಿ ಪುಣ್ಯಲೋಕಗಳಿಗೆ ಹೋದರು.

ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ಅಂಬರೀಷನು ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ ನಾಗಿದ್ದನು. ಅಂತಹವನೇ ಮರಣಹೊಂದಿದನೆಂದಮೇಲೆ ಬೇರೆಯವರ

---

* ಅನ್ವಯುರ್ದಕ್ಷಿಣಾಯನಂ–ದಕ್ಷಿಣಾಯನವನ್ನು ಕುರಿತು ಹೋದರು ಅಥವಾ ದಕ್ಷಿಣಾಯನದ ಮೂಲಕವಾಗಿ ಪುಣ್ಯಲೋಕಗಳಿಗೆ ಹೋದರು–ಎಂದು ಸ್ವಾಭಾವಿಕವಾಗಿ ಅರ್ಥವಾಗುತ್ತದೆ. ಇವರೆಲ್ಲರೂ ವೇದೋಕ್ತವಾದ ಸಕಾಮಧರ್ಮಾನುಷ್ಠಾನಮಾಡುವವ ರಾದುದರಿಂದ ಈ ಅರ್ಥವೇ ಯುಕ್ತವಾಗಿ ಕಾಣುತ್ತದೆ. ಆದರೆ ವ್ಯಾಖ್ಯಾನಕಾರರು ಉತ್ತರಾಯಣಮಾರ್ಗದಲ್ಲಿ ಬ್ರಹ್ಮಲೋಕಕ್ಕೆ ಹೋದರು–ಎಂದು ಅರ್ಥಮಾಡಿರುತ್ತಾರೆ. ದಕ್ಷಿಣಾಯನಂ-ಅನು-ಅಯುಃ ಗತಾಃ = ದಕ್ಷಿಣಾಯನದ ನಂತರ ಹೋದರು. ಉತ್ತರಾಯಣಮಾರ್ಗೇಣ ಹಿರಣ್ಯಗರ್ಭಲೋಕಂ ಪ್ರಾಪ್ತಾಃ = ಉತ್ತರಾಯಣಮಾರ್ಗ ದಿಂದ ಬ್ರಹ್ಮಲೋಕಕ್ಕೆ ಹೋದರು ಎಂದು ಅರ್ಥಮಾಡಿದ್ದಾರೆ.

ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದ ನಿನ್ನ ಪುತ್ರನ ವಿಷಯವಾಗಿ ಅನುತಾಪಪಡಬೇಡ.

ಸೃಂಜಯ! ಚಿತ್ರರಥನ ಮಗನಾದ ಶಶಬಿಂದುವೂ ಮರಣಹೊಂದಿದನೆಂದು ಕೇಳಿದ್ದೇವೆ. ಮಹಾತ್ಮನಾದ ಶಶಬಿಂದುವಿಗೆ ಒಂದು ಲಕ್ಷ (ಅನೇಕ) ಭಾರ್ಯೆಯರಿದ್ದರು. ಅವರ ಗರ್ಭದಲ್ಲಿ ಶಶಬಿಂದುವಿಗೆ ಹತ್ತು ಲಕ್ಷ (ಅಸಂಖ್ಯ) ಮಕ್ಕಳು ಹುಟ್ಟಿದರು. ಆ ರಾಜಕುಮಾರರೆಲ್ಲರೂ ಸುವರ್ಣಖಚಿತವಾದ ಕವಚಗಳನ್ನು ತೊಟ್ಟಿದ್ದರು. ಶ್ರೇಷ್ಠರಾದ ಧನುರ್ಧಾರಿಗಳಾಗಿದ್ದರು. ಒಬ್ಬೊಬ್ಬ ರಾಜಪುತ್ರನನ್ನೂ ನೂರು-ನೂರು ಕನ್ಯೆಯರು ಅನುಸರಿಸಿ ಹೋಗುತ್ತಿದ್ದರು. ಪ್ರತಿಯೊಬ್ಬ ಕನ್ಯೆಯ ಹಿಂದೆಯೂ ನೂರು-ನೂರು ಆನೆಗಳು ಹೋಗುತ್ತಿದ್ದುವು. ಒಂದೊಂದು ಆನೆಯ ಹಿಂದೆಯೂ ನೂರು-ನೂರು ರಥಗಳು ಹೋಗುತ್ತಿದ್ದುವು. ಪ್ರತಿಯೊಂದು ರಥದ ಹಿಂದೆಯೂ ಸುವರ್ಣಮಾಲೆಗಳಿಂದ ಸಮಲಂಕೃತವಾಗಿದ್ದ ನೂರು-ನೂರು ದೇಶೀಯ (ಉತ್ತಮಜಾತಿಯ) ಕುದುರೆಗಳು ಹೋಗುತ್ತಿದ್ದುವು. ಪ್ರತಿಯೊಂದು ಕುದುರೆಯ ಹಿಂದೆಯೂ ನೂರು-ನೂರು ಗೋವುಗಳು ಹೋಗುತ್ತಿದ್ದುವು. ಪ್ರತಿಯೊಂದು ಗೋವಿನ ಹಿಂದೆಯೂ ನೂರು-ನೂರು ಆಡು-ಕುರಿಗಳು ಹೋಗುತ್ತಿದ್ದುವು. ಶಶಬಿಂದುರಾಜನು ತಾನು ಮಾಡಿದ ಅಶ್ವಮೇಧಮಹಾಯಾಗದಲ್ಲಿ ಇಷ್ಟು ಅಪಾರವಾದ ಧನರಾಶಿಯನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.

ಸೃಂಜಯ! ಶಶಬಿಂದುರಾಜನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದನು. ಅಂತಹವನೇ ಮರಣಹೊಂದಿದ ಮೇಲೆ ಬೇರೆಯವರ ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದ ನಿನ್ನ ಮಗನನ್ನು ಕುರಿತು ದುಃಖಿಸಬೇಡ.

ಅಮೂರ್ತರಯಸನ ಮಗನಾದ ಗಯನೂ ಮರಣಹೊಂದಿದನೆಂಬುದನ್ನು ಕೇಳಿದ್ದೇವೆ. ಗಯನು ನೂರು ವರ್ಷಗಳ ಕಾಲ ಹೋಮಮಾಡಿ ಹೋಮಶೇಷವನ್ನೇ ತಿನ್ನುತ್ತಿದ್ದನು. ಆದರಿಂದ ಅಗ್ನಿದೇವನು ಸುಪ್ರೀತ

ನಾಗಿ ಯಾವುದಾದರೂ ವರವನ್ನು ಕೇಳುವಂತೆ ಗಯನಿಗೆ ಹೇಳಿದನು. ಆ ಸಮಯದಲ್ಲಿ ಗಯನು ಅಗ್ನಿಯಿಂದ ಈ ವರಗಳನ್ನು ಕೇಳಿದನು :

**ದದತೋ ಮೇಽಕ್ಷಯಂ ವಿತ್ತಂ ಧರ್ಮೇ ಶ್ರದ್ಧಾ ಚ ವರ್ಧತಾಮ್ ।**
**ಮನೋ ಮೇ ರಮತಾಂ ಸತ್ಯೇ ತ್ವತ್ಪ್ರಸಾದಾದ್ಧುತಾಶನ ॥೧೧೨॥**

"ಯಜ್ಞೇಶ್ವರನೇ! ದಾನಕೊಡುತ್ತಿದ್ದಂತೆಲ್ಲಾ ಅಕ್ಷಯವಾಗುತ್ತಲೇ ಇರುವ ವಿತ್ತವನ್ನು ದಯಪಾಲಿಸು. (ಅಕ್ಷಯವಾದ ಐಶ್ವರ್ಯವನ್ನು ದಯಪಾಲಿಸು.) ನನಗೆ ಧರ್ಮಶ್ರದ್ಧೆಯು ಇನ್ನೂ ಹೆಚ್ಚಲಿ. ನಿನ್ನ ಅನುಗ್ರಹದಿಂದ ನನ್ನ ಮನಸ್ಸು ಯಾವಾಗಲೂ ಸತ್ಯದಲ್ಲೇ ಅನುರಕ್ತವಾಗಿರಲಿ."

ಸೃಂಜಯ! ಗಯನು ತನ್ನ ಎಲ್ಲ ಕಾಮನೆಗಳನ್ನೂ ಅಗ್ನಿದೇವನಿಂದ ಪಡೆದುಕೊಂಡನೆಂದೂ ನಾವು ಕೇಳಿದ್ದೇವೆ. ಬಳಿಕ ಗಯನು ಸಹಸ್ರವರ್ಷ ಪರ್ಯಂತವಾಗಿ ದರ್ಶಗಳಿಂದಲೂ, ಪೌರ್ಣಮಾಸಗಳಿಂದಲೂ, ಚಾತುರ್ಮಾಸ್ಯಗಳಿಂದಲೂ ಮತ್ತು ಅಶ್ವಮೇಧದಿಂದಲೂ, ದೇವತೆಗಳನ್ನು ಸಂತುಷ್ಟಿಗೊಳಿಸಿದನು. ಸಾವಿರ ವರ್ಷಗಳವರೆಗೆ ಗಯನು ಅನುದಿನವೂ ಮುಂಜಾನೆ ಏಳುತ್ತಲೇ ಒಂದು ಲಕ್ಷ ಗೋವುಗಳನ್ನೂ ನೂರು ಹೇಸರ ಗತ್ತೆಗಳನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಡುತ್ತಿದ್ದನು. ಹೀಗೆ ಗಯನು ದೇವತೆಗಳನ್ನು ಸೋಮರಸದಿಂದಲೂ, ಬ್ರಾಹ್ಮಣರನ್ನು ಯಥೇಚ್ಛವಾದ ಐಶ್ವರ್ಯಗಳಿಂದಲೂ, ಪಿತೃಗಳನ್ನು ಶ್ರಾದ್ಧ-ತರ್ಪಣಾದಿಗಳಿಂದಲೂ, ಸ್ತ್ರೀಯರನ್ನು ಕಾಮೋಪಭೋಗಗಳಿಂದಲೂ ತೃಪ್ತಿಪಡಿಸಿದನು. ಹತ್ತು ಮಾರುಗಳಷ್ಟು ಅಗಲವಾಗಿಯೂ ಇಪ್ಪತ್ತು ಮಾರುಗಳಷ್ಟು ಉದ್ದವಾಗಿಯೂ ಇರುವ ಸುವರ್ಣಮಯವಾದ ಭೂಮಿಯನ್ನು ಕಲ್ಪಿಸಿ, ಅಶ್ವಮೇಧಮಹಾಯಾಗದಲ್ಲಿ ಬ್ರಾಹ್ಮಣರಿಗೆ ದಕ್ಷಿಣಾರೂಪವಾಗಿ ಕೊಟ್ಟನು. ಗಂಗಾನದಿಯಲ್ಲಿ ಮರಳಿನ ಎಷ್ಟು ಕಣಗಳಿವೆಯೋ–ಅಷ್ಟೇ ಸಂಖ್ಯೆಯ ಗೋವುಗಳನ್ನು ಅಮೂರ್ತರಯಸನ ಮಗನಾದ ಗಯನು ಬ್ರಾಹ್ಮಣರಿಗೆ ದಾನಮಾಡಿದನು.

ಸೃಂಜಯ! ಗಯನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ ಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದನು. ಅಂತಹವನೇ ಮರಣಹೊಂದಿದಮೇಲೆ ಬೇರೆಯ

ವರ ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದ ನಿನ್ನ ಮಗನು ಮರಣಹೊಂದಿದುದಕ್ಕಾಗಿ ಶೋಕಪಡಬೇಡ.

ಸುಕೃತಿಯ ಮಗನಾದ ರಂತಿದೇವನೂ ಮರಣಹೊಂದಿದನೆಂದು ನಾವು ಕೇಳಿದ್ದೇವೆ. ಮಹಾತಪಸ್ವಿಯಾದ ರಂತಿದೇವನು ಇಂದ್ರನನ್ನು ಒಳ್ಳೆಯ ರೀತಿಯಲ್ಲಿ ಆರಾಧಿಸಿ ಪ್ರಸನ್ನನಾದ ಇಂದ್ರನಿಂದ ವರಗಳನ್ನು ಪಡೆದು ಕೊಂಡನು.

**ಅನ್ನಂ ಚ ನೋ ಬಹು ಭವೇದತಿಥೀಂಶ್ಚ ಲಭೇಮಹಿ ।**
**ಶ್ರದ್ಧಾ ಚ ನೋ ಮಾ ವ್ಯಗಮನ್ಮಾ ಚ ಯಾಚಿಷ್ಮ ಕಂಚನ ॥೧೨೧॥**

"ನಮ್ಮ ಬಳಿಯಲ್ಲಿ ಅನ್ನವು ಯಾವಾಗಲೂ ಯಥೇಚ್ಛವಾಗಿರಲಿ. ಸೇವೆಮಾಡಲು ಅತಿಥಿಗಳು ಯಾವಾಗಲೂ ನಮಗೆ ಲಭಿಸಲಿ. ಧರ್ಮ ಶ್ರದ್ಧೆಯು ಯಾವಾಗಲೂ ನಮ್ಮಿಂದ ದೂರಸರಿಯದಿರಲಿ. ನಾವು ಯಾವಾಗಲೂ ಯಾರನ್ನೂ ಯಾಚನೆಮಾಡದಿರುವಂತಾಗಲಿ."

**ಉಪಾತಿಷ್ಠನ್ತ ಪಶವಃ ಸ್ವಯಂ ತಂ ಸಂಶಿತವ್ರತಮ್ ।**
**ಗ್ರಾಮ್ಯಾರಣ್ಯಾ ಮಹಾತ್ಮಾನಂ ರನ್ತಿದೇವಂ ಯಶಸ್ವಿನಮ್ ॥೧೨೨॥**

ಕಠೋರವ್ರತನಿಷ್ಠನಾದ, ಮಹಾತ್ಮನಾದ, ಯಶೋವಂತನಾದ, ರಂತಿ ದೇವನ ಬಳಿಗೆ ಗ್ರಾಮ್ಯಪಶುಗಳೂ ( ಹಸು-ಕುರಿ-ಆಡು ಮುಂತಾದುವು ) ಅರಣ್ಯಪಶುಗಳೂ ( ಜಿಂಕೆ ಮುಂತಾದುವು ) ತಾವಾಗಿಯೇ ಬರುತ್ತಿದ್ದುವು.

**ಮಹಾನದೀ ಚರ್ಮರಾಶೇರುತ್ಕ್ಲೇದಾತ್ಸಸೃಜೇ ಯತಃ ।**
**ತತಶ್ಚರ್ಮಣ್ವತೀತ್ಯೇವಂ ವಿಖ್ಯಾತಾ ಸಾ ಮಹಾನದೀ ॥೧೨೩॥**

ಚರ್ಮರಾಶಿಯ ( ಪ್ರಾಣಿಗಳ ಸಮೂಹದ ) ಬೆವರಿನಿಂದಲೇ ( ಮೈ ತೊಳೆದ ನೀರಿನಿಂದಲೇ ) ಮಹಾನದಿಯು ಹುಟ್ಟಿತಾದ್ದರಿಂದ ಚರ್ಮಣ್ವತೀ (ಚಂಬಲ್) ಎಂಬ ಹೆಸರಿನಿಂದಲೇ ಆ ನದಿಯು ಖ್ಯಾತಿಯನ್ನು ಹೊಂದಿತು.

ವಿಸ್ತಾರವಾದ ಆ ಯಜ್ಞದ ಸದಸ್ಸಿನಲ್ಲಿ ರಂತಿದೇವನು ಬ್ರಾಹ್ಮಣರಿಗೆ ಸುವರ್ಣನಾಣ್ಯಗಳನ್ನು ಯಥೇಚ್ಛವಾಗಿ ಕೊಟ್ಟನು. ಆ ಸಮಯದಲ್ಲಿ ಬ್ರಾಹ್ಮಣರು ಇತರ ಬ್ರಾಹ್ಮಣರನ್ನು ಉದ್ದೇಶಿಸಿ–'ರಾಜನು ನಿನಗೆ ನಿಷ್ಕವನ್ನು

( ಸುವರ್ಣನಾಣ್ಯವನ್ನು ) ಕೊಡುತ್ತಿದ್ದಾನೆ!'–ಎಂದು ಕೂಗಿಕೊಳ್ಳುತ್ತಿದ್ದರು. ಹಾಗೆ ತಾವು ಮುಂದೆ ಬರದೇ ಇತರರ ಕಡೆ ಕೈನೀಡಿ ಕೂಗುತ್ತಿದ್ದ ಬ್ರಾಹ್ಮಣರ ಬಳಿಗೆ ಹೋಗಿ ರಂತಿದೇವನು 'ಈ ಸಾವಿರ ನಿಷ್ಕಗಳನ್ನು ನೀವೇ ತೆಗೆದುಕೊಳ್ಳಿರಿ'–ಎಂದು ಹೇಳಿ ಅವರಿಗೇ ಕೊಡುತ್ತಿದ್ದನು.

ಧೀಮಂತನಾದ ರಂತಿದೇವನ ಯಜ್ಞಕ್ಕೆ ಸಂಬಂಧಿಸಿದ ಅನ್ವಾಹಾರ್ಯಾಗ್ನಿಯಲ್ಲಿ ಹೋಮಮಾಡಲು ಬೇಕಾದ ಉಪಕರಣಗಳೂ ಮತ್ತು ಯಜ್ಞದ್ರವ್ಯಗಳನ್ನು ಸಂಗ್ರಹಿಸಲು ಬೇಕಾದ ಉಪಕರಣಗಳೂ ಚಿನ್ನದ್ದೇ ಆಗಿದ್ದುವು. ಘಟಗಳು, ಪಾತ್ರೆಗಳು, ಅಡಿಗೆಯ ಪಾತ್ರೆಗಳು ( ಕಡಾಯಿಗಳು), ಸ್ಥಾಲಿಗಳು, ಮಡಿಕೆಗಳು–ಎಲ್ಲವೂ ಚಿನ್ನದ್ದೇ ಆಗಿದ್ದುವು. ರಂತಿದೇವನ ಯಜ್ಞಶಾಲೆಯಲ್ಲಿ ಸ್ವರ್ಣಮಯವಲ್ಲದ ವಸ್ತುವೇ ಯಾವುದೂ ಇರಲಿಲ್ಲ.

**ಸಾಂಕೃತೇ ರನ್ತಿದೇವಸ್ಯ ಯಾಂ ರಾತ್ರಿಮುವಸನ್ಗೃಹೇ ।**
**ಅಲಭ್ಯನ್ತ ಶತಂ ಗಾವಃ ಸಹಸ್ರಾಣಿ ಚ ವಿಂಶತಿಃ ॥೧೨೭॥**

ಸಂಕೃತಿಯ ಮಗನಾದ ರಂತಿದೇವನ ಮನೆಯಲ್ಲಿ ಅತಿಥಿಗಳು ಯಾವ ರಾತ್ರಿಯಲ್ಲಿ ತಂಗುತ್ತಿದ್ದರೋ ಆ ಸಮಯದಲ್ಲಿ ಅವರು ಇಪ್ಪತ್ತು ಸಾವಿರದ ನೂರು ಗೋವುಗಳನ್ನು ಸ್ಪರ್ಶಿಸುವುದರ ಮೂಲಕವಾಗಿ ರಂತಿದೇವನಿಂದ ದಾನವಾಗಿ ಪಡೆಯುತ್ತಿದ್ದರು.

**ತತ್ರ ಸ್ಮ ಸೂದಾಃ ಕ್ರೋಶನ್ತಿ ಸುಮೃಷ್ಟಮಣಿಕುಣ್ಡಲಾಃ ।**
**ಸೂಪಂ ಭೂಯಿಷ್ಠಮಶ್ನೀಧ್ವಂ ನಾದ್ಯ ಭೋಜ್ಯಂ ಯಥಾ ಪುರಾ ॥**

ವಿಶುದ್ಧವಾದ ಮಣಿಮಯಕುಂಡಲಗಳನ್ನು ಧರಿಸಿದ್ದ ರಂತಿದೇವನ ಪಾಚಕರು ದಾನವನ್ನು ಪಡೆದು ಭೋಜನಾರ್ಥವಾಗಿ ಕುಳಿತ ಬ್ರಾಹ್ಮಣರನ್ನು ಕುರಿತು– "ಭೋಜ್ಯವಸ್ತುಗಳು ಈಗ ಹಿಂದಿನಂತಿಲ್ಲ. ( ಅದಕ್ಕಿಂತ ಬಹಳ ರುಚಿಕರವಾಗಿವೆ. ) ಆದುದರಿಂದ ತೊವ್ವೆಯನ್ನು ಚೆನ್ನಾಗಿ ತಿನ್ನಿರಿ"–ಎಂದು ಕೂಗಿಕೊಳ್ಳುತ್ತಿದ್ದರು.

ರಂತಿದೇವನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತ

ನಾಗಿದ್ದನು. ಅಂತಹವನೇ ಮರಣಹೊಂದಿದಮೇಲೆ ಬೇರೆಯವರ ವಿಷಯವಾಗಿ ಹೇಳುವುದೇನಿದೆ? ನಿನ್ನ ಮಗನ ಮರಣಕ್ಕಾಗಿ ವೃಥಾ ದುಃಖಿಸಬೇಡ.*

ಸೃಂಜಯ! ಮಹಾತ್ಮನಾದ, ಇಕ್ಷ್ವಾಕುವಂಶೀಯನಾದ, ಪುರುಷಸಿಂಹನಾದ, ಅತಿಮಾನುಷವಾದ ಪರಾಕ್ರಮವನ್ನು ಹೊಂದಿದ್ದ ಸಗರನೂ ಮೃತನಾದನೆಂಬ ವಿಷಯವನ್ನು ನಾವು ಕೇಳಿದ್ದೇವೆ. ಶರದೃತುವಿನಲ್ಲಿ ನಿರ್ಮಲವಾದ ಆಕಾಶದಲ್ಲಿ ನಕ್ಷತ್ರರಾಜನಾದ ಚಂದ್ರನನ್ನು ಅನುಸರಿಸಿ ನಕ್ಷತ್ರಗಳ ಸಮೂಹಗಳು ಹೋಗುವಂತೆ–ಸಗರಚಕ್ರವರ್ತಿಯನ್ನು ಅವನ ಅರವತ್ತು ಸಾವಿರ ಮಕ್ಕಳು ಅನುಸರಿಸಿ ಹೋಗುತ್ತಿದ್ದರು. ಸಗರನ ಭುಜಬಲ-ಪರಾಕ್ರಮಗಳಿಂದಾಗಿ ಭೂಮಂಡಲವು ಏಕಚ್ಛತ್ರವಾಗಿದ್ದಿತು. (ಸಗರಚಕ್ರವರ್ತಿಯೊಬ್ಬನಿಂದಲೇ ಆಳಲ್ಪಡುತ್ತಿದ್ದಿತು.) ಸಗರನು ಸಾವಿರ ಅಶ್ವಮೇಧಗಳನ್ನು ಮಾಡಿ ದೇವತೆಗಳನ್ನು ತೃಪ್ತಿಗೊಳಿಸಿದನು. ಚಿನ್ನದಕಂಬಗಳಿಂದ ಕೂಡಿದ್ದ, ಕಮಲದಲಾಯತಾಕ್ಷಿಯರಾದ ಸ್ತ್ರೀಯರಿಂದ ಸಂಪನ್ನವಾಗಿದ್ದ, ಹಂಸತೂಲಿಕಾತಲ್ಪಗಳಿಂದ ಸಮಲಂಕೃತವಾಗಿದ್ದ, ಸುವರ್ಣಮಯವಾದ ಪ್ರಾಸಾದವನ್ನೂ, ವಿಧ-ವಿಧವಾದ ಕಾಮೋಪಭೋಗ ಸಾಮಗ್ರಿಗಳನ್ನೂ ಯೋಗ್ಯರಾದ ಬ್ರಾಹ್ಮಣರಿಗೆ ದಾನಮಾಡಿದನು. ಸಗರನ ಆದೇಶದಂತೆ ಆ ಅಪಾರವಾದ ಐಶ್ವರ್ಯವನ್ನು ಬ್ರಾಹ್ಮಣರು ತಮ್ಮ-ತಮ್ಮಲ್ಲಿಯೇ ಹಂಚಿಕೊಂಡರು.

**ಖಾನಯಾಮಾಸ ಯಃ ಕೋಪಾತ್ಪೃಥಿವೀಂ ಸಾಗರಾಙ್ಕಿತಾಮ್ ।**
**ಯಸ್ಯ ನಾಮ್ನಾ ಸಮುದ್ರಶ್ಚ ಸಾಗರತ್ವಮುಪಾಗತಃ ॥೧೩॥**

ಒಮ್ಮೆ ಕುಪಿತನಾದ ಚಕ್ರವರ್ತಿಯು ಈಗ ಸಾಗರವೆಂಬ ಹೆಸರಿನಿಂದ ಕರೆಯಲ್ಪಡುವ ಭೂಭಾಗವನ್ನು ಅಗೆಸಿಬಿಟ್ಟನು. ಬಳಿಕ ಅವನ ಹೆಸರಿನಿಂದಲೇ ಸಮುದ್ರವು ಕರೆಯಲ್ಪಟ್ಟಿತು. ಸಾಗರತ್ವವನ್ನು ಹೊಂದಿತು.

ಸೃಂಜಯ! ಸಗರನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ

* ರಂತಿದೇವನ ಪ್ರಕರಣವನ್ನು ಪರಿಶಿಷ್ಟದಲ್ಲಿ ವಿಮರ್ಶಿಸಲಾಗಿದೆ.

ಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದನು. ಅವನೇ ಮರಣಹೊಂದಿದಮೇಲೆ ಬೇರೆಯವರ ವಿಷಯದಲ್ಲಿ ಹೇಳುವುದೇನಿದೆ? ಸರ್ವಸಾಮಾನ್ಯನಾದ ನಿನ್ನ ಮಗನು ಮರಣಹೊಂದಿದುದಕ್ಕಾಗಿ ದುಃಖಿಸಬೇಡ.

ವೇನನ ಮಗನಾದ ಪೃಥುವೂ ಮೃತನಾದನೆಂಬುದನ್ನು ನಾವು ಕೇಳಿದ್ದೇವೆ. ಮಹಾರಣ್ಯದಲ್ಲಿ ಋಷಿಗಳೆಲ್ಲರೂ ಸೇರಿ ಪೃಥುವಿಗೆ ರಾಜ್ಯಾಭಿಷೇಕವನ್ನು ಮಾಡಿದರು.

**ಪ್ರಥಯಿಷ್ಯತಿ ವೈ ಲೋಕಾನ್ಪೃಥುರಿತ್ಯೇವ ಶಬ್ದಿತಃ ।**
**ಕ್ಷತಾದ್ಯೋ ವೈ ತ್ರಾಯತೀತಿ ಸ ತಸ್ಮಾತ್ಕ್ಷತ್ರಿಯಃಸ್ಮೃತಃ ॥೧೩೮॥**

'ಧರ್ಮಮರ್ಯಾದೆಯನ್ನು ಲೋಕಗಳಲ್ಲಿ ಸ್ಥಾಪಿಸುತ್ತಾನೆ'–ಎಂಬ ಅಭಿಪ್ರಾಯದಿಂದ ಋಷಿಗಳು ಅವನನ್ನು 'ಪೃಥು' ಎಂಬ ಹೆಸರಿನಿಂದ ಕರೆದರು. ಆಪತ್ತಿನಿಂದ ಎಲ್ಲರನ್ನೂ ರಕ್ಷಿಸುವವನಾದುದರಿಂದ ಪೃಥುವು ಕ್ಷತ್ರಿಯನೂ ಆದನು.

**ಪೃಥುಂ ವೈನ್ಯಂ ಪ್ರಜಾ ದೃಷ್ಟ್ವಾ ರಕ್ತಾಃ ಸ್ಮೇತಿ ಯದಬ್ರುವನ್ ।**
**ತತೋ ರಾಜೇತಿ ನಾಮಾಸ್ಯ ಅನುರಾಗಾದಜಾಯತ ॥೧೩೯॥**

ವೇನನ ಮಗನಾದ ಪೃಥುವನ್ನು ನೋಡಿದೊಡನೆಯೇ ಪ್ರಜೆಗಳು–'ನಾವು ಪೃಥುವಿನಲ್ಲಿ ಅನುರಕ್ತರಾಗಿದ್ದೇವೆ'–ಎಂದು ಹೇಳಿದರು. ಪ್ರಜೆಗಳು ಪೃಥುವಿನ ಮೇಲಿಟ್ಟಿದ್ದ ಅನುರಾಗದ ಕಾರಣದಿಂದಲೇ ಅವನಿಗೆ 'ರಾಜಾ' ಎಂಬ ಹೆಸರೂ ಬಂದಿತು. ವೈನ್ಯನು ರಾಜ್ಯಭಾರವನ್ನು ಮಾಡುತ್ತಿರುವಾಗ ಉತ್ತು-ಬಿತ್ತದಿದ್ದರೂ ಭೂಮಿಯಲ್ಲಿ ಸಮೃದ್ಧವಾಗಿ ಬೆಳೆಯಾಗುತ್ತಿದ್ದಿತು. ಪ್ರತಿಯೊಂದು ವೃಕ್ಷದ ಎಲೆಗಳ ಮಧ್ಯದಲ್ಲಿಯೂ ಜೇನು ಕಟ್ಟಿರುತ್ತಿದ್ದಿತು. ಹಸುಗಳು ಬಳ್ಳ-ಬಳ್ಳದಷ್ಟು ಹಾಲನ್ನು ಕರೆಯುತ್ತಿದ್ದುವು. ಮನುಷ್ಯರು ನೀರೋಗದೃಢಕಾಯರಾಗಿದ್ದರು. ತಮಗೆ ಬೇಕಾದ ಸರ್ವಕಾಮನೆಗಳನ್ನೂ ಪಡೆದುಕೊಳ್ಳುತ್ತಿದ್ದರು. ಭಯರಹಿತರಾಗಿದ್ದರು. ವೈನ್ಯನ ಪ್ರಜೆಗಳು ಇಚ್ಛಾನುಸಾರವಾಗಿ ಕ್ಷೇತ್ರಗಳಲ್ಲಿಯೋ ಮನೆಗಳಲ್ಲಿಯೋ ನಿಶ್ಚಿಂತರಾಗಿ ವಾಸಿಸುತ್ತಿದ್ದರು.

ಪೃಥುವು ಸಮುದ್ರದ ಕಡೆಗೆ ಯಾತ್ರೆ ಹೊರಟಾಗ ಸಮುದ್ರದ ಮೇಲೆ ಸಂಚರಿಸಲು ಅನುಕೂಲವಾಗುವಂತೆ ಸಾಗರದ ನೀರು ಸ್ತಂಭಿತವಾಗುತ್ತಿದ್ದಿತು. ನದಿಗಳ ಪ್ರವಾಹವೂ ಇಳಿದು ಹೋಗುತ್ತಿದ್ದಿತು. (ನದಿಗಳು ಅಬ್ಬರವಿಲ್ಲದೇ ಶಾಂತವಾಗುತ್ತಿದ್ದುವು.) ಅವನ ರಥದ ಧ್ವಜವು ಯಾವುದೇ ಕಾರಣದಿಂದಲೂ ಭಗ್ನವಾಗುತ್ತಿರಲಿಲ್ಲ. ಅಶ್ವಮೇಧಮಹಾಯಜ್ಞದಲ್ಲಿ ಪೃಥುರಾಜನು *ಸಾವಿರದ ಇನ್ನೂರು ಮೊಳಗಳಷ್ಟು ಎತ್ತರವಿರುವ ಇಪ್ಪತ್ತೊಂದು ಸುವರ್ಣಪರ್ವತಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.

ಸೃಂಜಯ! ವೈನ್ಯನು ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಲ್ಲಿ ನಿನಗಿಂತಲೂ ಅಧಿಕನಾಗಿದ್ದನು. ನಿನ್ನ ಮಗನಿಗಿಂತಲೂ ಹೆಚ್ಚು ಪುಣ್ಯವಂತನಾಗಿದ್ದನು. ಅಂತಹವನೇ ಮರಣಹೊಂದಿದನೆಂದಮೇಲೆ ಉಳಿದವರ ವಿಷಯದಲ್ಲಿ ಹೇಳುವುದೇನಿದೆ? ಆದುದರಿಂದ ನಿನ್ನ ಮಗನು ಮರಣಹೊಂದಿದುದಕ್ಕಾಗಿ ವ್ಯಥೆಪಡಬೇಡ.

ಹೀಗೆ ಧರ್ಮಾತ್ಮರಾದ, ಯಶೋವಂತರಾದ, ಕೀರ್ತಿಮಂತರಾದ, ದಾನಿಗಳಾದ, ಯಜ್ಞಶೀಲರಾದ ರಾಜರೆಲ್ಲರೂ ಮರಣವನ್ನೈದಿದರು. ಮರಣವನ್ನು ತಪ್ಪಿಸಿಕೊಳ್ಳಲು ಮಹಾತ್ಮರಿಂದಲೂ ಸಾಧ್ಯವಾಗುವುದಿಲ್ಲ. ಹೀಗಿರುವಾಗ ನಿನ್ನ ಮಗನಿಗೇಕೆ ಶೋಕಿಸುವೆ?"–ಎಂದು ಸೋದಾಹರಣ ಪೂರ್ವಕವಾಗಿ ಹೇಳಿದರೂ ಸೃಂಜಯನು ಸುಮ್ಮನೆ ಕುಳಿತಿರಲು ನಾರದರು ಪುನಃ ಅವನೊಡನೆ ಹೇಳುತ್ತಾರೆ :

"ಸೃಂಜಯ! ನಾನು ಇಷ್ಟು ಹೇಳಿದನಂತರವೂ ನೀನು ಸುಮ್ಮನೆ ಕುಳಿತು ಏನನ್ನು ಯೋಚಿಸುತ್ತಿರುವೆ? ನಾನು ಹೇಳುತ್ತಿರುವ ಮಾತನ್ನು ಕೇಳುತ್ತಲೇ ಇಲ್ಲವೆಂದು ತೋರುತ್ತದೆ. ಮನುಷ್ಯನಿಗೆ ಮರಣವು ಸನ್ನಿಹಿತವಾದಾಗ ಸುಪ್ರಯುಕ್ತವಾಗಿ ಪ್ರಯೋಗಿಸುವ ಚಿಕಿತ್ಸೆಯೂ ವ್ಯರ್ಥವಾಗುವಂತೆ–ನನ್ನ ಈ ಪ್ರವಚನವು ವ್ಯರ್ಥಪ್ರಲಾಪವಾಗಿಲ್ಲ ತಾನೇ?"

---

* 'ತ್ರಿನಲೋತ್ಸೇಧಾನ್' – ನಲ ಎಂಬುದು ಛಾಂದಸವಾದುದರಿಂದ ವರ್ಣಲೋಪ ವಾಗಿದೆ. ನಲ್ವ ಎಂಬುದು ನಲವಾಗಿದೆ. ನಲ್ವಃ ಕಿಷ್ಕುಚತುಃಶತಮ್ – ನಲ್ವ ಎಂದರೆ ನಾಲ್ಕು ನೂರು ಮೊಳಗಳು. ತ್ರಿನಲ್ವ ಅಥವಾ ತ್ರಿನಲ ಎಂದರೆ ಸಾವಿರದ ಇನ್ನೂರು ಮೊಳಗಳು.

"ನಾರದರೇ! ಪವಿತ್ರಗಂಧದಿಂದ ಕೂಡಿರುವ ಮಾಲೆಯಂತಿರುವ, ವಿಚಿತ್ರಾರ್ಥಸಹಿತವಾದ ನಿಮ್ಮ ಈ ಮಾತುಗಳನ್ನು ಏಕಾಗ್ರಚಿತ್ತನಾಗಿಯೇ ಕೇಳುತ್ತಿದ್ದೇನೆ. ಪುಣ್ಯವಂತರಾದ ಮತ್ತು ಮಹಾತ್ಮರಾದ ರಾಜರ ಕೀರ್ತಿ ಕಥನದಿಂದ ಯುಕ್ತವಾದ ನಿಮ್ಮ ಈ ವಾಣಿಯು ಶೋಕವನ್ನು ಸಂಪೂರ್ಣ ವಾಗಿ ಹೋಗಲಾಡಿಸುವುದಾಗಿದೆ. ಮಹರ್ಷಿಗಳೇ! ತಮ್ಮ ಪ್ರವಚನವು ಖಂಡಿತವಾಗಿಯೂ ವ್ಯರ್ಥವಾಗಿಲ್ಲ. ತಮ್ಮ ದರ್ಶನಮಾತ್ರದಿಂದಲೇ ನಾನು ಶೋಕರಹಿತನಾದೆನು. ಬ್ರಹ್ಮವಾದಿಗಳೇ! ನಿಮ್ಮ ಮಾತನ್ನು ನಾನು ಮನಸ್ಸಿಟ್ಟು ಕೇಳುತ್ತಿದ್ದೇನೆ. ಅಮೃತಪಾನಕ್ಕೆ ಸಮಾನವಾದ ತಮ್ಮ ಮಾತನ್ನು ಪುನಃ ಪುನಃ ಕೇಳಬೇಕು–ಎನ್ನಿಸುತ್ತಿದೆ. ನನಗೆ ಇನ್ನೂ ತೃಪ್ತಿಯಾಗಿಲ್ಲ. ತಮ್ಮ ದರ್ಶನವೇ ಅತ್ಯಮೋಘವಾದುದು. ನಾನು ಪುತ್ರಶೋಕದ ತಾಪದಿಂದ ದಗ್ಧನಾಗಿ ಹೋಗಿದ್ದೇನೆ. ನೀವು ನನ್ನ ಮೇಲೆ ಪ್ರಸನ್ನರಾಗಿರುವುದಾದರೆ ಪುನಃ ನನ್ನ ಪುತ್ರನನ್ನು ಜೀವಂತನನ್ನಾಗಿ ಮಾಡಲು ನಿಮಗೆ ಸಾಧ್ಯವಿದೆ. ತಮ್ಮ ಅನುಗ್ರಹದಿಂದಾಗಿ ನನಗೆ ಪುನಃ ಪುತ್ರಸಂಗಮದ ಸುಖವೂ ಲಭಿಸುತ್ತದೆ."

ನಾರದರು ಹೇಳುತ್ತಾರೆ :

"ಸೃಂಜಯ! ಪರ್ವತನು ನಿನಗೆ ಅನುಗ್ರಹಿಸಿದ್ದ ಸುವರ್ಣಷ್ಠೀವಿಯೆಂಬ ಹೆಸರಿನ ಪುತ್ರನು ಹೊರಟುಹೋದನು. (ಮರಣಹೊಂದಿದವನು ಪುನಃ ಬರಲಾರನು.) ಆದರೆ ನಾನು ನಿನಗೆ ಹಿರಣ್ಯನಾಭನೆಂಬ ಮಗನೊಬ್ಬನನ್ನು ಅನುಗ್ರಹಿಸುತ್ತೇನೆ. ಅವನು ಒಂದು ಸಾವಿರ ವರ್ಷಗಳ ಕಾಲ ಜೀವಿಸಿರುತ್ತಾನೆ."

೨೯ನೆಯ ಅಧ್ಯಾಯವು ಮುಗಿಯಿತು.

೩೦ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಮಹರ್ಷಿಗಳಾದ ನಾರದ-ಪರ್ವತರ ಉಪಾಖ್ಯಾನ

ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ :

"ವಾಸುದೇವ! ಸುವರ್ಣಷ್ಠೀವಿಯು ಸೃಂಜಯನಿಗೆ ಹೇಗೆ ಮಗ

ನಾದನು? ಪರ್ವತಮುನಿಯು ಸುವರ್ಣಷ್ಠೀವಿಯನ್ನು ಸೃಂಜಯನಿಗೆ ಕೊಟ್ಟುದೇಕೆ? ಸುವರ್ಣಷ್ಠೀವಿಯೇಕೆ ಅಪ್ರಾಪ್ತವಯಸ್ಕನಾಗಿದ್ದಾಗಲೇ ಸತ್ತುಹೋದನು? ಈ ಎಲ್ಲ ವಿಷಯಗಳನ್ನೂ ಸವಿಸ್ತಾರವಾಗಿ ತಿಳಿಸು. ಆ ಕಾಲದಲ್ಲಿ ಮನುಷ್ಯನು ಸಾವಿರ ವರ್ಷಗಳವರೆಗೂ ಬದುಕಿರುತ್ತಿದ್ದನು. ಹೀಗಿದ್ದರೂ ಸೃಂಜಯನ ಮಗನು ಕೌಮಾರಾವಸ್ಥೆಗೂ ಮೊದಲೇ ಏಕೆ



ಮರಣಹೊಂದಿದನು? ಅವನು ನಾಮಮಾತ್ರಕ್ಕೆ ಸುವರ್ಣಷ್ಠೀವಿಯಾಗಿದ್ದನೇ?–ಈ ವಿಷಯವನ್ನು ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ."

"ಜನೇಶ್ವರ! ಯಾವುದು ಹೇಗೆ ನಡೆಯಿತೆಂಬುದನ್ನು ವಿವರಿಸಿ ಹೇಳುತ್ತೇನೆ. ನಾರದ ಮತ್ತು ಪರ್ವತರೆಂಬ ಋಷಿಗಳು ಲೋಕದಲ್ಲಿ ಶ್ರೇಷ್ಠ

ರಾದವರು. ಅವರಿಬ್ಬರೂ ಸೋದರಮಾವ ಮತ್ತು ಸೋದರಳಿಯಂದಿರು. ಇಬ್ಬರೂ ಭೂಲೋಕದಲ್ಲಿ ಸಂಚರಿಸಬೇಕೆಂಬ ಆಸೆಯಿಂದ ಸಂತೋಷ ಯುಕ್ತರಾಗಿ ದೇವಲೋಕದಿಂದ ಭೂಲೋಕಕ್ಕೆ ಆಗಮಿಸಿದರು.

ಸೋದರಮಾವಂದಿರಾದ ನಾರದರೂ–ಸೋದರಳಿಯಂದಿರಾದ ಪರ್ವತರೂ ಪವಿತ್ರವಾದ ಹವಿಸ್ಸನ್ನೂ, ದೇವತೆಗಳ ಭೋಜನಕ್ಕೆ ಯೋಗ್ಯ ವಾದ ಆಹಾರಪದಾರ್ಥಗಳನ್ನೂ ತಿನ್ನುತ್ತಾ ಭೂಲೋಕದಲ್ಲಿ ಸುಖವಾಗಿದ್ದರು. ತಪಸ್ವಿಗಳಾದ, ಭೂಚರರಾದ ಇಬ್ಬರೂ ಮನುಷ್ಯರ ಭೋಗಗಳನ್ನು ಉಪಭೋಗಿಸುತ್ತಾ ಸ್ವೇಚ್ಛೆಯಿಂದ ಭೂಮಂಡಲದಲ್ಲಿ ಸಂಚರಿಸುತ್ತಿದ್ದರು. ಅವರಿಬ್ಬರೂ ಪರಸ್ಪರ ಪ್ರೀತಿಯುಳ್ಳವರಾಗಿದ್ದರು. ಹೀಗೆಯೇ ಇರುತ್ತಿರಲಾಗಿ ಅವರೊಮ್ಮೆ ತಮ್ಮ-ತಮ್ಮಲ್ಲಿಯೇ ಒಂದು ಶಪಥವನ್ನು ಮಾಡಿಕೊಂಡರು.

**ಯೋ ಭವೇದ್ಧ್ಯದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ।**
**ಅನ್ಯೋನ್ಯಸ್ಯ ಸ ಆಖ್ಯೇಯೋ ಮೃಷಾ ಶಾಪೋಽನ್ಯಥಾ ಭವೇತ್ ॥**

'ನಮ್ಮಿಬ್ಬರ ಮನಸ್ಸಿನಲ್ಲಿ ಯಾವುದೇ ವಿಧವಾದ ಸಂಕಲ್ಪವು ಹುಟ್ಟಿ ದರೂ–ಅದು ಶುಭಸಂಕಲ್ಪವೇ ಆಗಿರಲಿ ; ಅಶುಭಸಂಕಲ್ಪವೇ ಆಗಿರಲಿ– ತಮ್ಮ ಮನಸ್ಸಿನ ಸಂಕಲ್ಪವನ್ನು ಮತ್ತೊಬ್ಬರಿಗೆ ಹೇಳಬೇಕು. ಹಾಗೆ ಹೇಳದಿದ್ದರೆ ಅಥವಾ ಸುಳ್ಳುಹೇಳಿದರೆ ಇಬ್ಬರಲ್ಲಿ ಯಾರೇ ಆದರೂ ಶಾಪಕ್ಕೆ ಭಾಗಿಗಳಾಗಬೇಕಾಗುತ್ತದೆ.'

ಲೋಕಪೂಜಿತರಾದ, ಮಹರ್ಷಿಗಳಾದ ನಾರದ-ಪರ್ವತರು ಹಾಗೆಯೇ ಆಗಲೆಂದು ಇಬ್ಬರೂ ಪ್ರತಿಜ್ಞಾವಚನವನ್ನು ಪರಸ್ಪರವಾಗಿ ವಿನಿ ಮಯ ಮಾಡಿಕೊಂಡು ಶ್ವೇತಪುತ್ರನಾದ ಸೃಂಜಯರಾಜನ ಬಳಿಗೆ ಹೋಗಿ ಹೇಳಿದರು :

"ಮಹಾರಾಜ! ನಿನಗೆ ಹಿತವನ್ನು ಮಾಡುವ ಸಲುವಾಗಿಯೇ ನಾವಿಬ್ಬರೂ ನಿನ್ನ ಸಮೀಪದಲ್ಲಿಯೇ ಸ್ವಲ್ಪಕಾಲ ಇರುತ್ತೇವೆ. ನಾವಿರುವಷ್ಟು ಕಾಲವೂ ನೀನು ನಮಗೆ ಅನುಕೂಲನಾಗಿರು."

ಸೃಂಜಯರಾಜನು ಹಾಗೆಯೇ ಆಗಲೆಂದು ಹೇಳಿ ಇಬ್ಬರನ್ನೂ ಯಥೋಚಿತವಾಗಿ ಸತ್ಕರಿಸಿ ಉಪಚರಿಸಿದನು. ಸ್ವಲ್ಪಕಾಲಾನಂತರ ಋಷಿಗಳ ವಿಷಯದಲ್ಲಿ ಪರಮಪ್ರೀತನಾದ ಸೃಂಜಯನು ಮಹಾತ್ಮರಾದ, ತಪೋಧನ

ರಾದ ನಾರದ-ಪರ್ವತರ ಸಮೀಪಕ್ಕೆ ತನ್ನ ಮಗಳನ್ನು ಕರೆದುಕೊಂಡು ಹೋಗಿ ಹೇಳಿದನು :

"ಮಹರ್ಷಿಗಳೇ! ಇವಳು ನನ್ನ ಏಕಮಾತ್ರಳಾದ ಪುತ್ರಿಯು. ಶ್ರೇಷ್ಠವಾದ ವರ್ಣದಿಂದ ಕೂಡಿದವಳಾಗಿದ್ದಾಳೆ. ದರ್ಶನೀಯಳಾಗಿದ್ದಾಳೆ. ( ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನಿಸುತ್ತದೆ. ) ದೋಷರಹಿತವಾದ ಅಂಗಾಂಗಗಳುಳ್ಳವಳಾಗಿದ್ದಾಳೆ. ಶೀಲ ಮತ್ತು ಸುಚಾರಿತ್ರ್ಯಗಳಿಂದ ಸಂಪನ್ನಳಾಗಿದ್ದಾಳೆ. ಕಮಲದ ಕುಸುರಿನಂತೆ ಕಾಂತಿಯುಕ್ತಳಾಗಿದ್ದಾಳೆ. ಕುಮಾರಿಯೂ (ಅವಿವಾಹಿತಳೂ) ಆಗಿರುತ್ತಾಳೆ. ಸುಕುಮಾರೀ ಎಂಬ ಹೆಸರಿನ ಈ ನನ್ನ ಪುತ್ರಿಯು ಇನ್ನು ಮುಂದೆ ನಿಮ್ಮ ಸೇವೆಯನ್ನು ಮಾಡುತ್ತಾಳೆ."

ಸೃಂಜಯರಾಜನು ಹೀಗೆ ಹೇಳಿದೊಡನೆಯೇ ನಾರದ-ಪರ್ವತರಿಬ್ಬರೂ 'ಒಳ್ಳೆಯದು. ಹಾಗೆಯೇ ಆಗಲಿ'–ಎಂದು ಉತ್ತರಿಸಿದರು :

ರಾಜನು ತನ್ನ ಮಗಳ ಕಡೆಗೆ ತಿರುಗಿ ಹೀಗೆ ಆಜ್ಞೆಮಾಡಿದನು :

**ಕನ್ಯೇ ವಿಪ್ರಾವುಪಚರ ದೇವವತ್ಪಿತೃವಚ್ಚ ಹ ॥೧೪॥**

"ಮಗಳೇ! ಈ ಇಬ್ಬರು ಬ್ರಾಹ್ಮಣರನ್ನೂ ದೇವತೆಗಳೆಂದೂ ಪಿತೃಗಳೆಂದೂ ಭಾವಿಸಿ ಇವರ ಸೇವೆಯನ್ನು ಮಾಡು."

ಧರ್ಮಚಾರಿಣಿಯಾದ ಆ ಕನ್ಯೆಯು ತಂದೆಯೊಡನೆ ಹಾಗೆಯೇ ಆಗಲೆಂದು ಹೇಳಿ ರಾಜನ ಆಜ್ಞಾನುಸಾರವಾಗಿ ಅವರಿಬ್ಬರನ್ನೂ ಸತ್ಕರಿಸಿ ಉಪಚರಿಸಲು ಉಪಕ್ರಮಿಸಿದಳು.

ಸೃಂಜಯನ ಮಗಳಾದ ಸುಕುಮಾರಿಯ ಪ್ರೀತ್ಯಾದರಗಳಿಂದ ಕೂಡಿದ ಸೇವೆಯಿಂದಲೂ ಮತ್ತು ಅವಳಲ್ಲಿದ್ದ ಅಪ್ರತಿಮವಾದ ರೂಪದಿಂದಲೂ ನಾರದರ ಹೃದಯದಲ್ಲಿ ಸುಪ್ತನಾಗಿದ್ದ ಕಾಮದೇವನು ಎಚ್ಚೆತ್ತು ನಾರದರನ್ನು ಆಕ್ರಮಿಸಿದನು. ( ನಾರದರು ಕಾಮವಶರಾದರು. ) ಶುಕ್ಲಪಕ್ಷದ ಆರಂಭದ ದಿನದಿಂದ ಚಂದ್ರನು ದಿನಾನುಕ್ರಮವಾಗಿ ಮೆಲ್ಲ-ಮೆಲ್ಲನೆ ವರ್ಧಿಸುವಂತೆ–ಮಹಾತ್ಮರಾದ ನಾರದರ ಮನಸ್ಸಿನಲ್ಲಿ ಜಾಗ್ರತನಾದ ಕಾಮನು ದಿನ-ದಿನಕ್ಕೂ ವರ್ಧಿಸತೊಡಗಿದನು. ಆದರೆ ಸೋದರಳಿಯಂದಿರಾದ, ಮಹಾತ್ಮ

ರಾದ ಪರ್ವತರೊಡನೆ ಶಪಥಮಾಡಿಕೊಂಡಿದ್ದಂತೆ ಧರ್ಮವಿದರಾದ ನಾರದರು ನಾಚಿಕೆಯ ಕಾರಣದಿಂದಾಗಿ ತಮ್ಮ ಹೃದಯದಲ್ಲಡಗಿದ್ದ ತೀವ್ರ ತರನಾದ ಕಾಮನ ವಿಷಯವನ್ನು ಸೋದರಳಿಯನಿಗೆ ಹೇಳಲಿಲ್ಲ. ಆದರೆ ತಪಃಪ್ರಭಾವದಿಂದಲೂ ಮತ್ತು ನಾರದರ ಅಂಗಚೇಷ್ಟೆ ಮತ್ತು ಮುಖ ವಿಕಾರಗಳಿಂದಲೂ ಪರ್ವತರು ನಾರದರ ಮನಸ್ಸಿನಲ್ಲುಂಟಾಗುತ್ತಿದ್ದ ಕಾಮನ ಪೀಡನೆಯನ್ನು ತಿಳಿದುಕೊಂಡರು. ಅವರು ಪರಮಕ್ರುದ್ಧರಾಗಿ ಕಾಮಾರ್ತ ರಾಗಿದ್ದ ನಾರದರನ್ನು ಒಡನೆಯೇ ಶಪಿಸಿಬಿಟ್ಟರು. ಅವರು ಶಾಪಕೊಡುವ ಮೊದಲು ನಾರದರನ್ನು ಕುರಿತು ಹೇಳಿದರು :

"ಯಾವ ರೀತಿಯ ವ್ಯಗ್ರತೆಯೂ ಇಲ್ಲದೇ ನೀನು ನನ್ನೊಡನೆ ಶಪಥ ವನ್ನು ಮಾಡಿಕೊಂಡಿರುವೆ. ನಾವಿಬ್ಬರೂ ಮಾಡಿಕೊಂಡ ಶಪಥವು ಹೀಗಿದ್ದಿತು. 'ಇಬ್ಬರ ಮನಸ್ಸಿನಲ್ಲಿ ಯಾವುದೇ ಶುಭಾಶುಭಸಂಕಲ್ಪಗಳು ಉದಯಿಸಿದರೂ ಅದನ್ನು ಇಬ್ಬರೂ ಹಂಚಿಕೊಳ್ಳಬೇಕು. (ಒಬ್ಬರು ಮತ್ತೊಬ್ಬರಿಗೆ ಹೇಳಬೇಕು. ಗುಟ್ಟುಮಾಡಬಾರದು.)' ಹೀಗೆ ಮಾಡಿ ಕೊಂಡಿದ್ದ ಶಪಥವನ್ನು ನೀನೀಗ ಸುಳ್ಳಾಗಿಸಿರುವೆ. ಆದುದರಿಂದ ಈಗ ನಾನು ನಿನ್ನನ್ನು ಶಪಿಸುತ್ತೇನೆ. ಕುಮಾರಿಯಾದ ಈ ಸುಕುಮಾರಿಯ ವಿಷಯದಲ್ಲಿ ನಿನ್ನ ಮನಸ್ಸಿನಲ್ಲಿ ಹುಟ್ಟಿದ ಕಾಮವಿಕಾರವನ್ನು ಪ್ರತಿಜ್ಞಾನುಸಾರವಾಗಿ ನನ್ನೊಡನೆ ಹೇಳಲಿಲ್ಲ. ಆದುದರಿಂದ ನಿನ್ನನ್ನೀಗ ಶಪಿಸುತ್ತೇನೆ. ನೀನು ಬ್ರಹ್ಮಚಾರೀ. ನನಗೆ ಸೋದರಮಾವನಾದುದರಿಂದ ಗುರುವಾಗಿರುವೆ. ತಪಸ್ವಿಯಾಗಿರುವೆ. ಮೇಲಾಗಿ ಬ್ರಾಹ್ಮಣನೂ ಆಗಿರುವೆ. ಹೀಗಿದ್ದರೂ ನಾವಿಬ್ಬರೂ ರಹಸ್ಯದಲ್ಲಿ ಮಾಡಿಕೊಂಡಿದ್ದ ಶಪಥವನ್ನು ಮುರಿದಿರುವೆ. ಇದರಿಂದ ಪರಮಕ್ರುದ್ಧನಾಗಿರುವ ನಾನು ನಿನ್ನನ್ನೀಗ ಶಪಿಸುತ್ತೇನೆ.

**ಸುಕುಮಾರೀ ಚ ತೇ ಭಾರ್ಯಾ ಭವಿಷ್ಯತಿ ನ ಸಂಶಯಃ ।**
**ವಾನರಂ ಚೈವ ತೇ ರೂಪಂ ವಿವಾಹಾತ್ಪ್ರಭೃತಿ ಪ್ರಭೋ ।**
**ಸಂದ್ರಕ್ಷ್ಯನ್ತಿ ನರಾಶ್ಚಾನ್ಯೇ ಸ್ವರೂಪೇಣ ವಿನಾಕೃತಮ್ ॥೨೫॥**

ನೀನು ಕಾಮಿಸಿರುವ ಸುಕುಮಾರಿಯೇ ನಿನ್ನ ಭಾರ್ಯೆಯಾಗುತ್ತಾಳೆ. ಇದರಲ್ಲಿ ಸಂಶಯವಿಲ್ಲ. ಆದರೆ ವಿವಾಹಕರ್ಮವು ಮುಗಿದೊಡನೆಯೇ

ನಿನಗೆ ಕಪಿಯ ರೂಪವು ಬರುತ್ತದೆ. ಸ್ವರೂಪವನ್ನು ಕಳೆದುಕೊಂಡು ಕಪಿ ಮುಖನಾಗುವ ನಿನ್ನನ್ನು ಜನರು ನೋಡುತ್ತಾರೆ."

ಯುಧಿಷ್ಠಿರ! ಪರ್ವತರ ಶಾಪವಾಕ್ಯವನ್ನು ಕೇಳಿದೊಡನೆಯೇ ಸೋದರಮಾವಂದಿರಾದ ನಾರದರೂ ಕ್ರೋಧಾಭಿಭೂತರಾಗಿ ಸೋದರಳಿ ಯಂದಿರಾದ ಪರ್ವತರನ್ನೂ ಶಪಿಸಿದರು :

**ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ ।**
**ಯುಕ್ತೋಽಪಿ ನಿತ್ಯಧರ್ಮಶ್ಚ ನ ವೈ ಸ್ವರ್ಗಮವಾಪ್ಸ್ಯಸಿ ॥೨೭॥**

"ತಪಸ್ಸು, ಬ್ರಹ್ಮಚರ್ಯ, ಸತ್ಯನಿಷ್ಠೆ, ಜಿತೇಂದ್ರಿಯತೆ–ಇವುಗಳಿಂದ ಯುಕ್ತನಾಗಿದ್ದರೂ, ನಿತ್ಯವೂ ಧರ್ಮಪರಾಯಣನಾಗಿದ್ದರೂ–ನೀನು ಪುನಃ ಸ್ವರ್ಗವನ್ನು ಹೊಂದುವುದಿಲ್ಲ. ( ನಿನಗೆ ಸ್ವರ್ಗಪ್ರಾಪ್ತಿಯಿಲ್ಲ. )"

ಧರ್ಮಜ! ಆ ಸಮಯದಲ್ಲಿ ಅಸಹನಶೀಲರಾಗಿದ್ದ, ಪರಮಕ್ರುದ್ಧ ರಾಗಿದ್ದ ನಾರದ-ಪರ್ವತರು ಪರಸ್ಪರವಾಗಿ ಶಾಪಗಳನ್ನು ಕೊಟ್ಟುಕೊಂಡು ಕೋಪಗೊಂಡ ಎರಡು ಸಲಗಗಳಂತೆ ವಿರುದ್ಧವಾದ ದಿಕ್ಕುಗಳನ್ನು ಹಿಡಿದು ಹೊರಟುಹೋದರು.

ಬಳಿಕ ಮಹಾಮತಿಗಳಾದ ಪರ್ವತರು ತಮ್ಮ ತೇಜಸ್ಸಿನ ಪ್ರಭಾವದಿಂದ ಪ್ರಪಂಚದ ಎಲ್ಲ ಕಡೆಗಳಲ್ಲಿಯೂ ಯಥೋಚಿತವಾದ ಸತ್ಕಾರವನ್ನು ಪಡೆಯುತ್ತಾ ಅಖಂಡಭೂಮಂಡಲವನ್ನೂ ಸಂಚರಿಸತೊಡಗಿದರು.

ಇತ್ತಲಾಗಿ ವಿಪ್ರಶ್ರೇಷ್ಠರಾದ ನಾರದರು ಸೃಂಜಯರಾಜನ ಮಗಳಾದ ನಿಷ್ಕಳಂಕಳಾದ ಸುಕುಮಾರಿಯನ್ನು ವೇದಧರ್ಮಾನುಸಾರವಾಗಿ ಪತ್ನಿ ಯನ್ನಾಗಿ ಪಡೆದುಕೊಂಡರು. ಪಾಣಿಗ್ರಹಣಸಂಬಂಧವಾದ ಮಂತ್ರಗಳು ಮುಗಿಯುತ್ತಿದ್ದಂತೆಯೇ ಪರ್ವತರಿತ್ತ ಶಾಪಾನುಸಾರವಾಗಿ ರಾಜಕನ್ಯೆಯಾದ ಸುಕುಮಾರಿಯು ನಾರದರನ್ನು ಕಪಿಯ ರೂಪದಲ್ಲಿ ಕಂಡಳು. ಕಪಿಯ ಮುಖಕ್ಕೆ ಸಮಾನವಾದ ಮುಖವನ್ನು ದೇವರ್ಷಿಗಳಾದ ನಾರದರು ಹೊಂದಿ ರುವುದನ್ನು ನೋಡಿಯೂ ಸುಕುಮಾರಿಯು ಅವರನ್ನು ಅವಹೇಳನಮಾಡ ಲಿಲ್ಲ. ಅವರ ಮುಖವು ವಿಕಾರವಾದುದನ್ನು ಗಮನಿಸದೆಯೇ ರಾಜ ಕುಮಾರಿಯು ನಾರದರನ್ನು ಬಹಳವಾಗಿ ಪ್ರೀತಿಸತೊಡಗಿದಳು. ಪತಿಪ್ರಿಯ

ಳಾದ ಸುಕುಮಾರಿಯು ಪತಿಯ ಸೇವೆಯಲ್ಲಿಯೇ ಸರ್ವದಾ ನಿರತಳಾಗಿರುತ್ತಿದ್ದಳು. ಪತಿಯು ಕಪಿಮುಖನಾಗಿರುವನೆಂಬ ಕಾರಣದಿಂದ ಸುಕುಮಾರಿಯು ಬೇರೆಯ ಯಾವ ಪುರುಷನನ್ನೇ ಆಗಲೀ, ದೇವತೆಯನ್ನೇ ಆಗಲೀ, ಮುನಿಯನ್ನೇ ಆಗಲೀ, ಯಕ್ಷನನ್ನೇ ಆಗಲೀ–ಮನಸ್ಸಿನಲ್ಲಿಯೂ ಪತಿರೂಪದಲ್ಲಿ ಚಿಂತಿಸಲಿಲ್ಲ.

ಹೀಗೆಯೇ ಇರುತ್ತಿರಲಾಗಿ ಒಮ್ಮೆ ಲೋಕಸಂಚಾರಮಾಡುತ್ತಿದ್ದ ಪರ್ವತರು ಜನರಹಿತವಾದ ಒಂದು ಅರಣ್ಯಕ್ಕೆ ಬಂದರು. ಅಲ್ಲಿಯೇ ಅವರು ಕಪಿಮುಖರಾಗಿದ್ದ ನಾರದರನ್ನು ನೋಡಿದರು. ಒಡನೆಯೇ ಪರ್ವತರು ನಾರದರಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಪ್ರಾರ್ಥಿಸಿದರು :

**ಭವಾನ್ಪ್ರಸಾದಂ ಕುರುತಾತ್ಸ್ವರ್ಗಾದೇಶಾಯ ಮೇ ಪ್ರಭೋ ॥**

"ಪ್ರಭುವೇ! ನೀನು ನನಗೆ ಸ್ವರ್ಗಕ್ಕೆ ಹೋಗಲು ಆಜ್ಞೆಯನ್ನು ದಯಪಾಲಿಸುವ ಕೃಪೆಮಾಡು."

ಪರ್ವತರು ಹೀಗೆ ಪ್ರಾರ್ಥಿಸಲಾಗಿ, ಕೈಜೋಡಿಸಿಕೊಂಡು ತಮ್ಮ ಬಳಿಯಲ್ಲಿ ನಿಂತಿದ್ದ, ದೀನರಾಗಿದ್ದ ಪರ್ವತರನ್ನು ನೋಡಿ ಅತ್ಯಂತದೀನರಾಗಿದ್ದ ನಾರದರು ಹೇಳಿದರು :

"ಪರ್ವತ! ನೀನೇ ಮೊದಲು ನನ್ನನ್ನು ವಾನರನಾಗುವಂತೆ ಶಪಿಸಿದೆ. ನಿನ್ನ ಶಾಪವನ್ನು ಕೇಳಿದೊಡನೆಯೇ ನಾನಾದರೂ ಮಾತ್ಸರ್ಯಪೂರಿತನಾಗಿ–ಇಲ್ಲಿಂದ ಮುಂದಕ್ಕೆ ಸ್ವರ್ಗವು ಲಭಿಸದಿರಲೆಂದು–ನಿನ್ನನ್ನೂ ಶಪಿಸಿದೆನು. ಈ ನನ್ನ ಶಾಪದ ಪ್ರಭಾವದಿಂದಾಗಿ ನಿನಗೆ ಇದುವರೆಗೆ ಸ್ವರ್ಗಕ್ಕೆ ಹೋಗಲು ಸಾಧ್ಯವಾಗಿಲ್ಲ. ಆದರೆ ನೀನು ಹೀಗೆ ಮಾಡಬಾರದಾಗಿದ್ದಿತು. ಏಕೆಂದರೆ : ನೀನು ನನ್ನ ಪುತ್ರನ ಸ್ಥಾನದಲ್ಲಿರತಕ್ಕವನು. ನನ್ನ ಸೋದರಳಿಯ."

ಯುಧಿಷ್ಠಿರ! ಹೀಗೆ ನಾರದ-ಪರ್ವತರು ತಾವು ಮಾಡಿದುದಕ್ಕೆ ಪಶ್ಚಾತ್ತಾಪಪಟ್ಟು ಇಬ್ಬರೂ ಪರಸ್ಪರ ಶಾಪಗಳನ್ನು ನಿವೃತ್ತಿಗೊಳಿಸಿದರು. ನಾರದರಿಗೆ ಕಪಿಯ ಮುಖವು ಹೋಯಿತು. ಪರ್ವತರಿಗೆ ಸ್ವರ್ಗಕ್ಕೆ ಹೋಗಲೂ ಸಾಧ್ಯವಾಯಿತು. ಆದರೆ ಕಾಂತಿಸಂಪನ್ನರಾಗಿದ್ದ, ದೇವತೆಗಳಂತೆ

ಸ್ಫುರದ್ರೂಪಿಗಳಾದ ನಾರದರನ್ನು ಕಂಡೊಡನೆಯೇ ಸುಕುಮಾರಿಯು ಪರಪುರುಷನೆಂಬ ಸಂದೇಹದಿಂದ ಓಡಿಹೋದಳು. ಹಾಗೆ ಭಯದಿಂದ ಓಡಿ ಹೋಗುತ್ತಿದ್ದ, ನಿಷ್ಕಳಂಕವಾದ ಸುಕುಮಾರಿಯನ್ನು ಪರ್ವತರು ಕೂಗಿ ಹೇಳಿದರು. "ಸುಕುಮಾರಿ! ಇವನೇ ನಿನ್ನ ಪತಿ. ಈ ವಿಷಯದಲ್ಲಿ ನೀನು ವಿಚಾರಮಾಡುವ ಕಾರಣವೇ ಇಲ್ಲ. ಇವನೇ ನಿನ್ನ ಅಭೇದ್ಯಹೃದಯನಾದ (ವಜ್ರಹೃದಯನಾದ ) ಪತಿ. ಋಷಿಯಾದ, ಪರಮಧಾರ್ಮಿಕನಾದ ಪ್ರಭು ವಾದ, ಭಗವಾನ್ ನಾರದನೇ ಇವನು. ಈ ವಿಷಯದಲ್ಲಿ ನಿನಗೆ ಎಳ್ಳಷ್ಟಾದರೂ ಸಂಶಯವುಂಟಾಗದಿರಲಿ."

ಯುಧಿಷ್ಠಿರ! ಹೀಗೆ ಮಹಾತ್ಮರಾದ ಪರ್ವತರು ಸುಕುಮಾರಿಯನ್ನು ನಾನಾಪ್ರಕಾರವಾಗಿ ಸಮಾಧಾನಗೊಳಿಸಿದರು. ತಾವಿತ್ತ ಶಾಪದ ವಿಷಯ ವನ್ನೂ ಸುಕುಮಾರಿಗೆ ಹೇಳಿದರು. ಶಾಪದ ದೋಷದಿಂದಾಗಿ ತನ್ನ ಪತಿಯು ಕಪಿವದನನಾಗಿದ್ದನೆಂಬುದನ್ನು ಪರ್ವತರಿಂದಲೇ ಕೇಳಿದನಂತರ ರಾಜ ಕುಮಾರಿಯು ಸ್ವಸ್ಥಚಿತ್ತಳಾದಳು. ಬಳಿಕ ಸಂತೋಷದಿಂದ ಪರ್ವತರೂ ಸ್ವರ್ಗಕ್ಕೆ ಹೋದರು. ನಾರದರೂ ಪತ್ನಿಯೊಡನೆ ಮನೆಗೆ ತೆರಳಿದರು.

ನರಶ್ರೇಷ್ಠನೇ! ಯುಧಿಷ್ಠಿರ! ಈಗ ಇಲ್ಲಿಯೇ ಇರುವ ನಾರದರೇ ಈ ಘಟನೆಯಲ್ಲಿ ಮುಖ್ಯವಾದ ಪಾತ್ರಧಾರಿಗಳಾಗಿದ್ದರು. ಸುವರ್ಣಷ್ಠೀವಿಯ ಹುಟ್ಟು-ಸಾವುಗಳನ್ನು ಪ್ರತ್ಯಕ್ಷವಾಗಿ ಇವರೇ ನೋಡಿದ್ದಾರೆ. ಆದುದರಿಂದ ನೀನು ನಾರದರನ್ನೇ ಪ್ರಶ್ನಿಸಿದೆಯಾದರೆ ಇವರೇ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ವಿವರಿಸಿ ಹೇಳುತ್ತಾರೆ."

೩೦ನೆಯ ಅಧ್ಯಾಯವು ಮುಗಿಯಿತು.

# ಸುವರ್ಣಷ್ಠೀವಿಯ ಜನನ-ಮರಣ-ಪುನರ್ಜನ್ಮಗಳ ವೃತ್ತಾಂತ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಶ್ರೀಕೃಷ್ಣನ ಸಲಹೆಯಂತೆ ಯುಧಿಷ್ಠಿರರಾಜನು ನಾರದರೊಡನೆ ಹೇಳಿದನು :

"ಭಗವನ್! ನಾರದರೇ! ಸುವರ್ಣಷ್ಠೀವಿಯ ಜನ್ಮವೃತ್ತಾಂತವನ್ನು ಕೇಳಬೇಕೆಂಬ ಆಶಯದಿಂದಿರುತ್ತೇನೆ. ಯಥಾವತ್ತಾಗಿ ತಿಳಿಸಿರಿ."

ಜನಮೇಜಯ! ಯುಧಿಷ್ಠಿರನು ನಾರದರನ್ನು ಹೀಗೆ ಪ್ರಾರ್ಥಿಸಲಾಗಿ, ನಾರದರು ಸುವರ್ಣಷ್ಠೀವಿಯ ಜನ್ಮವೃತ್ತಾಂತವನ್ನು ಯಥಾವತ್ತಾಗಿ ಹೇಳ ತೊಡಗಿದರು :

"ಯುಧಿಷ್ಠಿರ! ಮಹಾಬಾಹುವೇ! ಶ್ರೀಕೇಶವನು ಹೇಳಿದಂತೆಯೇ ಎಲ್ಲವೂ ನಡೆಯಿತು. ಈ ಪ್ರಸಂಗದಲ್ಲಿ ಉಳಿದಿರುವ ಸ್ವಲ್ಪ ವಿಷಯಗಳನ್ನು ನಿನ್ನ ಪ್ರಶ್ನೆಗೆ ಅನುಸಾರವಾಗಿ ನಾನು ಹೇಳುತ್ತೇನೆ. ನಾನೂ ಮತ್ತು ನನ್ನ ಸೋದರಿಯ ಮಗನಾದ, ಮಹಾಮುನಿಯಾದ, ಪರ್ವತನೂ ವಿಜಯಿಗಳಲ್ಲಿ ಶ್ರೇಷ್ಠನಾದ ಸೃಂಜಯನ ಅರಮನೆಯಲ್ಲಿ ಸ್ವಲ್ಪಕಾಲ ತಂಗುವ ಇಚ್ಛೆಯಿಂದ ಹೋಗಿದ್ದೆವು. ಅಲ್ಲಿಗೆ ಹೋದೊಡನೆಯೇ ರಾಜನು ವಿಧ್ಯುಕ್ತವಾದ ವಿಧಾನಗಳಿಂದ ನಮ್ಮಿಬ್ಬರನ್ನೂ ಆದರಪೂರ್ವಕವಾಗಿ ಸ್ವಾಗತಿಸಿ ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿದನು. ಸರ್ವಕಾಮನಾವಸ್ತುಗಳನ್ನೂ ಸುವಿಹಿತ ವಾಗಿ ಪಡೆದುಕೊಳ್ಳುತ್ತಾ ನಾವು ಸೃಂಜಯರಾಜನ ಅರಮನೆಯಲ್ಲಿಯೇ ವಾಸಮಾಡುತ್ತಿದ್ದೆವು. ಹೀಗೆಯೇ ವರ್ಷಾಕಾಲವು ಕಳೆದ ಬಳಿಕ ನಾವು ಅಲ್ಲಿಂದ ಹೊರಡುವ ಕಾಲವು ಸನ್ನಿಹಿತವಾಯಿತು. ಆ ಸಮಯದಲ್ಲಿ ಪರ್ವತನು ನನ್ನೊಡನೆ ಸಮಯೋಚಿತವಾದ ಈ ಮಾತನ್ನು ಹೇಳಿದನು. "ಬ್ರಾಹ್ಮಣೋತ್ತಮ! ನಾವಿಬ್ಬರೂ ಈ ರಾಜನ ಮನೆಯಲ್ಲಿ ಸುಸತ್ಕೃತರಾಗಿ ವಾಸಿಸುತ್ತಿದ್ದೇವೆ. ನಾವು ಹೊರಡುವ ಸಮಯದಲ್ಲಿ ರಾಜನಿಗೆ ಯಾವು ದಾದರೂ ರೀತಿಯಲ್ಲಿ ಉಪಕರಿಸುವುದು ಹೇಗೆಂಬುದನ್ನು ಚಿಂತಿಸು."

ಧರ್ಮಜ! ಶುಭದರ್ಶನನಾದ ನನ್ನ ಸೋದರಳಿಯನಿಗೆ ನಾನು ಹೀಗೆ ಹೇಳಿದೆನು :

"ಭಗಿನೀಪುತ್ರನೇ! ಯಾವ ರೀತಿಯಲ್ಲಿ ಉಪಕರಿಸಬೇಕೆಂಬುದನ್ನು ತಿಳಿಸುವುದು ನಿನಗೆ ಸೇರಿದ್ದಾಗಿದೆ. ರಾಜನಿಗೆ ಮನೋವಾಂಛಿತವಾದ ವರವನ್ನು ಕೊಟ್ಟು ಸಂತುಷ್ಟಿಗೊಳಿಸೋಣ. ನೀನು ಸೂಕ್ತವೆಂದು ಭಾವಿಸುವೆಯಾದರೆ ನಮ್ಮ ತಪಃಫಲದಿಂದ ರಾಜನು ಯಾವ ಸಿದ್ಧಿಯನ್ನು ಬೇಕಾದರೂ ಪಡೆದುಕೊಳ್ಳಲಿ."

ನಾನು ಹೀಗೆ ಹೇಳಿದ ಬಳಿಕ ನನ್ನ ಅನುಮತಿಯನ್ನು ಪಡೆದುಕೊಂಡ ಪರ್ವತನು ವಿಜಯಿಗಳಲ್ಲಿ ಶ್ರೇಷ್ಠನಾದ ಸೃಂಜಯನನ್ನು ಆಹ್ವಾನಿಸಿ ಅವನೊಡನೆ ಹೇಳಿದನು :

"ನರಶ್ರೇಷ್ಠನೇ! ಅತ್ಯಂತಸರಳತೆಯಿಂದಲೂ, ಪ್ರೀತಿ-ವಿಶ್ವಾಸಗಳಿಂದಲೂ ನೀನು ಮಾಡಿರುವ ಸತ್ಕಾರಕ್ಕೆ ನಾವಿಬ್ಬರೂ ಪ್ರಸನ್ನರಾಗಿದ್ದೇವೆ. ನೀನು ನಮ್ಮಿಂದ ಯಾವುದೇ ವರವನ್ನಾದರೂ ಪಡೆದುಕೊಳ್ಳಬಹುದೆಂದು ಅನುಮತಿಯನ್ನಿತ್ತಿದ್ದೇವೆ. ಯಾವ ವರವು ಬೇಕೆಂಬುದನ್ನು ಯೋಚಿಸಿ ಹೇಳು.

**ದೇವಾನಾಮವಿಹಿಂಸಾಯಾಂ ನ ಭವೇನ್ಮಾನುಷಕ್ಷಯಮ್ ।**
**ತದ್ಗೃಹಾಣ ಮಹಾರಾಜ ಪೂಜಾರ್ಹೋ ನೌ ಮತೋ ಭವಾನ್ ॥**

ನೀನು ವರವನ್ನು ಪಡೆಯುವ ಪರಿಣಾಮವಾಗಿ ದೇವತೆಗಳಿಗೆ ಹಿಂಸೆಯಾಗಬಾರದು. ಅದರ ಫಲವಾಗಿ ಮನುಷ್ಯರೂ ನಾಶಹೊಂದಬಾರದು. ದೇವತೆಗಳಿಗೆ ಹಿಂಸೆಯಾಗದಿದ್ದರೆ ಮನುಷ್ಯರಿಗೆ ನಾಶವು ಸಂಭವಿಸುವುದಿಲ್ಲ. ಆದುದರಿಂದ ದೇವತೆಗಳಿಗೆ ಹಿಂಸೆಯಾಗದಂತಹ ವರವನ್ನು ನೀನು ಪಡೆದುಕೊಳ್ಳಬಹುದಾಗಿದೆ. ನೀನು ಅಭಿನಂದನೀಯನೆಂಬುದು ನಮ್ಮ ಅಭಿಪ್ರಾಯವಾಗಿದೆ."

"ಬ್ರಾಹ್ಮಣೋತ್ತಮರೇ! ನೀವು ನನ್ನ ವಿಷಯದಲ್ಲಿ ಸುಪ್ರೀತರಾಗಿರುವ ಮಾತ್ರದಿಂದಲೇ ನಾನು ಕೃತಕೃತ್ಯನಾಗಿದ್ದೇನೆ. ನೀವು ಸುಪ್ರೀತರಾಗಿರುವುದೇ ನನಗೆ ಒಂದು ಮಹಾವರವಾಗಿದೆ. ನಿಮ್ಮ ಸುಪ್ರೀತಿ

ಯೆಂಬುದೇ ಮಹಾಫಲದಾಯಕವಾದ ಮತ್ತು ಶ್ರೇಷ್ಠವಾದ ಲಾಭವಾಗಿ ಪರಿಣಮಿಸಿದೆ."

ಯುಧಿಷ್ಠಿರ! ರಾಜನು ಈ ಮಾತನ್ನೇ ಪುನಃ ಪುನಃ ಹೇಳುತ್ತಿದ್ದರೂ ಪರ್ವತನು ಮತ್ತೊಮ್ಮೆ ಹೇಳಿದನು : "ಮಹಾರಾಜ! ನಿನ್ನ ಮನಸ್ಸಿನಲ್ಲಿ ಬಹಳ ಕಾಲದಿಂದಲೂ ಇರುವ ಸಂಕಲ್ಪವನ್ನು ಈಡೇರಿಸಿಕೊಳ್ಳಲು ವರವನ್ನು ಕೇಳು."

ಸೃಂಜಯನ ಮನಸ್ಸಿನಲ್ಲಿ ಬಹಳ ಕಾಲದಿಂದಲೂ ಆಶಯವೊಂದಿದ್ದುದು ನಿಜ. ಪರ್ವತನ ಮಾತಿಗೆ ಒಪ್ಪಿ ಒಂದು ವರವನ್ನು ಕೇಳಿದನು :

**ಅಭೀಪ್ಸಾಮಿ ಸುತಂ ವೀರಂ ವೀರವನ್ತಂ ದೃಢವ್ರತಮ್ ।**
**ಆಯುಷ್ಮನ್ತಂ ಮಹಾಭಾಗಂ ದೇವರಾಜಸಮದ್ಯುತಿಮ್ ॥೧೫॥**

"ಭಗವನ್! ವೀರನಾದ, ಬಲಿಷ್ಠನಾದ, ದೃಢವ್ರತನಾದ, ಆಯುಷ್ಮಂತನಾದ, ಪರಮಸೌಭಾಗ್ಯಶಾಲಿಯಾದ, ಇಂದ್ರಸಮಾನತೇಜಸ್ವಿಯಾದ ಮಗನನ್ನು ಪಡೆದುಕೊಳ್ಳಬೇಕೆನ್ನುವ ಆಸೆಯು ನನಗಿದೆ."

**ಭವಿಷ್ಯತ್ಯೇಷ ತೇ ಕಾಮೋ ನ ತ್ವಾಯುಷ್ಮಾನ್ಭವಿಷ್ಯತಿ ।**
**ದೇವರಾಜಾಭಿಭೂತ್ಯರ್ಥಂ ಸಂಕಲ್ಪೋ ಹ್ಯೇಷ ತೇ ಹೃದಿ ॥೧೬॥**

"ಸೃಂಜಯ! ನಿನ್ನ ಈ ಕಾಮನೆಯೇನೋ ಈಡೇರುತ್ತದೆ. ಆದರೆ ನಿನ್ನ ಪುತ್ರನು ದೀರ್ಘಾಯುಷ್ಮಂತನಾಗುವುದಿಲ್ಲ. ಏಕೆಂದರೆ : ದೇವರಾಜನಾದ ಇಂದ್ರನನ್ನು ಪರಾಭವಗೊಳಿಸುವ ಸಂಕಲ್ಪವು (ದೇವತೆಗಳನ್ನು ಹಿಂಸಿಸಬೇಕೆಂಬ ಸಂಕಲ್ಪವು) ನಿನ್ನ ಮನಸ್ಸಿನಲ್ಲಿದೆ. ನಿನ್ನ ಮಗನು ಸುವರ್ಣಷ್ಠೀವಿಯೆಂಬ ಹೆಸರಿನಿಂದ ವಿಖ್ಯಾತಿಯನ್ನು ಹೊಂದುತ್ತಾನೆ. ದೇವರಾಜನ ತೇಜಸ್ಸಿಗೆ ಸಮಾನವಾದ ತೇಜಸ್ಸಿನಿಂದ ಕೂಡಿರುವ ಅವನನ್ನು ನೀನು ದೇವರಾಜನಿಂದ ರಕ್ಷಿಸಿಕೊಳ್ಳಬೇಕು."

ಮಹಾತ್ಮನಾದ ಪರ್ವತನ ಮಾತನ್ನು ಕೇಳಿ ಸೃಂಜಯನು ಅವನನ್ನು ಪ್ರಸನ್ನಗೊಳಿಸುತ್ತಾ ಪ್ರಾರ್ಥಿಸಿದನು : "ಬ್ರಾಹ್ಮಣೋತ್ತಮರೆ! ನನ್ನ ಮಗನೆಂದಿಗೂ ಅಲ್ಪಾಯುವಾಗಬಾರದು. ಮುನಿಗಳೇ! ನಿಮ್ಮ ತಪಸ್ಸಿನ ಪ್ರಭಾವದಿಂದಾಗಿ ನನ್ನ ಪುತ್ರನು ದೀರ್ಘಾಯುಷ್ಮಂತನಾಗಬೇಕು."

ಹೀಗೆ ಪ್ರಾರ್ಥಿಸಿಕೊಂಡರೂ ಪರ್ವತನು ಇಂದ್ರನ ಮೇಲಿನ ಗೌರವದಿಂದಾಗಿ ಯಾವ ಮಾತನ್ನೂ ಆಡಲಿಲ್ಲ.

ಆ ಸಮಯದಲ್ಲಿ ಅತ್ಯಂತದೀನನಾಗಿದ್ದ ಸೃಂಜಯರಾಜನಿಗೆ ನಾನೇ ಸಮಾಧಾನವನ್ನು ಹೇಳಿದೆನು.

"ಮಹಾರಾಜ! ನಿನಗೆ ಸಂಕಟವು ಒದಗಿದ ಸಮಯದಲ್ಲಿ ನನ್ನನ್ನು ಸ್ಮರಿಸು. ಪ್ರೇತರಾಜನ ವಶವಾಗುವ ನಿನ್ನ ಪ್ರಿಯಪುತ್ರನನ್ನು ಅದೇ ರೂಪ ದಿಂದಲೇ ಪುನಃ ನಿನ್ನ ಬಳಿಗೆ ಕರೆತರುತ್ತೇನೆ. ನೀನು ದುಃಖಿಸುವ ಕಾರಣವಿಲ್ಲ."

"ಯುಧಿಷ್ಠಿರ! ಹೀಗೆ ಹೇಳಿ ರಾಜನನ್ನು ಸಮಾಧಾನಗೊಳಿಸಿ ನಮಗೆ ಇಚ್ಛೆಬಂದ ಸ್ಥಳಗಳಿಗೆ ನಾವು ಹೊರಟುಹೋದೆವು. ಸೃಂಜಯನೂ ತನ್ನ ಇಚ್ಛಾನುಸಾರವಾಗಿ ಅರಮನೆಯನ್ನು ಪ್ರವೇಶಿಸಿದನು.

ಸ್ವಲ್ಪ ದಿವಸಗಳು ಕಳೆದನಂತರ ರಾಜರ್ಷಿಯಾದ ಸೃಂಜಯನಿಗೆ ಮಹಾವೀರ್ಯನಾದ, ತೇಜಸ್ಸಿನಿಂದ ಪ್ರಜ್ವಲಿಸುವನೋ–ಎಂಬಂತಿದ್ದ ಮಗನು ಹುಟ್ಟಿದನು. ಸರೋವರದಲ್ಲಿರುವ ನೈದಿಲೆಹೂವು ವಿಕಸಿತವಾಗು ವಂತೆ ರಾಜಪುತ್ರನೂ ಕಾಲಾನುಗುಣವಾಗಿ ವರ್ಧಿಸತೊಡಗಿದನು. ಸುವರ್ಣ ವನ್ನೇ ಅವನು ಉಗುಳುತ್ತಿದ್ದುದರಿಂದ 'ಸುವರ್ಣಷ್ಠೀವೀ' ಎಂಬುದು ಅವನ ಅನ್ವರ್ಥನಾಮವೇ ಆಗಿದ್ದಿತು. ಸೃಂಜಯನ ಮಗನಾದ ಸುವರ್ಣಷ್ಠೀವಿಯು ಚಿನ್ನವನ್ನೇ ಉಗುಳುವನೆಂಬ ವಿಷಯವು ಎಲ್ಲ ಲೋಕಗಳಲ್ಲಿಯೂ ಪ್ರಖ್ಯಾತ ವಾಯಿತು. ಮಹರ್ಷಿಗಳಾದ ಪರ್ವತರ ವರದಾನದಿಂದಾಗಿ ಸೃಂಜಯನಿಗೆ ಅಂತಹ ಅದ್ಭುತನಾದ ಬಾಲಕನು ಹುಟ್ಟಿರುವನೆಂಬುದನ್ನು ಇಂದ್ರನೂ ತಿಳಿದುಕೊಂಡನು. ಬೃಹಸ್ಪತಿಯ ಅಭಿಪ್ರಾಯಾನುಸಾರವಾಗಿ ವರ್ತಿಸುತ್ತಿದ್ದ, ಬಲ ಮತ್ತು ವೃತ್ರರ ಹಂತಕನಾದ ಇಂದ್ರನು ಸುವರ್ಣಷ್ಠೀವಿಯಿಂದ ತನ್ನ ಪರಾಜಯವಾಗುವುದೆಂದು ಹೆದರಿ ಅವನನ್ನು ವಧಿಸಲು ಉಪಾಯವನ್ನು ಯೋಚಿಸುತ್ತಿದ್ದನು. ಬಳಿಕ ಇಂದ್ರನು ತನ್ನ ಮುಂದೆ ಮೂರ್ತಿಮತ್ತಾಗಿ ನಿಂತಿದ್ದ, ದಿವ್ಯಾಸ್ತ್ರವಾದ ವಜ್ರಾಯುಧಕ್ಕೆ ವ್ಯಾಘ್ರರೂಪವನ್ನು ತಾಳಿ ಸುವರ್ಣಷ್ಠೀವಿಯನ್ನು ಸಂಹರಿಸುವಂತೆ ಆಜ್ಞೆಮಾಡಿದನು.

ಇಂದ್ರನು ಕಾರಣವನ್ನು ನಿರೂಪಿಸುತ್ತಾ, ಮೂರ್ತಿಮತ್ತಾಗಿ ನಿಂತಿದ್ದ ವಜ್ರಾಯುಧದೊಡನೆ ಹೇಳಿದನು :

"ವಜ್ರ! ವೀರ್ಯ-ಪರಾಕ್ರಮಗಳಿಂದ ಪ್ರವೃದ್ಧನಾಗುವ ಈ ಸುವರ್ಣಷ್ಠೀವಿಯು ಮುಂದೆ ನನ್ನನ್ನೇ ಪರಾಜಯಗೊಳಿಸುತ್ತಾನೆ. ಈ ವಿಷಯವನ್ನು ಅವನ ಜನ್ಮಕ್ಕೆ ಕಾರಣರಾದ ಪರ್ವತರೇ ಹೇಳಿದ್ದಾರೆ. ಆದುದರಿಂದ ಅವನನ್ನು ಈಗಲೇ ಸಂಹರಿಸು."

ಯುಧಿಷ್ಠಿರ! ಶತ್ರುಗಳ ಪತ್ತನವನ್ನು ಜಯಿಸಲು ಸಮರ್ಥವಾದ ವಜ್ರಾಯುಧವು ಇಂದ್ರನಿಂದ ಹೀಗೆ ಆಜ್ಞಪ್ತವಾಗಿ ಸೃಂಜಯಕುಮಾರನನ್ನು ಸಂಹರಿಸುವ ಸಲುವಾಗಿ ಸಮಯವನ್ನು ಹುಡುಕುತ್ತಾ ನಿತ್ಯವೂ ಅವನನ್ನು ಅನುಸರಿಸಿಯೇ ಇರುತ್ತಿದ್ದಿತು.

ಸೃಂಜಯನು, ದೇವರಾಜನ ಕಾಂತಿಗೆ ಸಮಾನವಾದ ಕಾಂತಿಯನ್ನು ಹೊಂದಿದ್ದ ಪುತ್ರನನ್ನು ಪಡೆದು ಪರಮಹೃಷ್ಟನಾಗಿ ಪತ್ನಿಯೊಡನೆ ಯಾವಾಗಲೂ ಅರಣ್ಯದಲ್ಲಿಯೇ ಇರುತ್ತಿದ್ದನು. ಹೀಗೆಯೇ ಇರುತ್ತಿರಲಾಗಿ ಒಮ್ಮೆ ಗಂಗಾತೀರದ ನಿರ್ಜನಪ್ರದೇಶದಲ್ಲಿ ದಾದಿಯೊಬ್ಬಳೊಡನಿದ್ದ ಆ ಬಾಲಕನು ಆಟವಾಡುತ್ತಾ ಅತ್ತಲಿತ್ತ ಓಡಾಡುತ್ತಿದ್ದನು. ಐದು ವರ್ಷದವನೇ ಆಗಿದ್ದರೂ ಗಜರಾಜನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವನ್ನು ಹೊಂದಿದ್ದ ಆ ಬಾಲಕನು ಹಠಾತ್ತಾಗಿ ಮೇಲೇರಿ ಬರುತ್ತಿದ್ದ ಮಹಾಬಲಿಷ್ಠವಾದ ಹುಲಿಯನ್ನು ಸಮೀಪಿಸಿದನು. (ಹುಲಿಯು ಬಾಲಕನ ಬಳಿಗೆ ಬಂದಿತು.) ಆ ವ್ಯಾಘ್ರವು ತನ್ನನ್ನು ನೋಡಿ ಗಡ-ಗಡನೆ ನಡುಗುತ್ತಿದ್ದ ಬಾಲಕನನ್ನು ಕ್ಷಣಮಾತ್ರದಲ್ಲಿ ಅಗಿದುಹಾಕಿತು. ಪ್ರಾಣಶೂನ್ಯನಾದ ಬಾಲಕನು ನೆಲದ ಮೇಲೆ ಬಿದ್ದನು. ಅನತಿದೂರದಲ್ಲಿದ್ದ ದಾದಿಯು ಗಟ್ಟಿಯಾಗಿ ಕಿರುಚಿಕೊಂಡಳು. ಇಂದ್ರನು ಕಳುಹಿಸಿದ ವಜ್ರಾಯುಧವು ವ್ಯಾಘ್ರರೂಪವನ್ನು ಧರಿಸಿ ಬಾಲಕನನ್ನು ಸಂಹರಿಸಿ ಮಾಯೆಯಿಂದ ಅಲ್ಲಿಯೇ ಅದೃಶ್ಯವಾಯಿತು.

ಗಳ-ಗಳನೆ ಅಳುತ್ತಿದ್ದ ದಾದಿಯ ಆರ್ತನಾದವನ್ನು ಕೇಳಿ ಸೃಂಜಯ ರಾಜನೇ ಆ ಪ್ರದೇಶಕ್ಕೆ ಧಾವಿಸಿದನು. ಪ್ರಾಣಶೂನ್ಯನಾಗಿ ನೆಲದ ಮೇಲೆ ಬಿದ್ದಿದ್ದ, ಹುಲಿಯು ರಕ್ತಪಾನ ಮಾಡಿದ್ದುದರಿಂದ ರಕ್ತಶೂನ್ಯನೂ ಆಗಿದ್ದ, ಆನಂದರಹಿತನಾಗಿದ್ದ, ಆಕಾಶದಿಂದ ಕೆಳಕ್ಕೆ ಬಿದ್ದ ಚಂದ್ರನಂತೆಯೇ ಕಾಣು

ತ್ತಿದ್ದ ಕುಮಾರನನ್ನು ರಾಜನು ನೋಡಿದನು. ಪೀಡಾಯುಕ್ತವಾದ ಮನಸ್ಸಿನಿಂದ ಕೂಡಿದ್ದ, ವ್ಯಾಕುಲಿತನಾಗಿದ್ದ ಸೃಂಜಯನು ರಕ್ತಸಿಕ್ತನಾಗಿದ್ದ ಬಾಲಕನನ್ನು ತೊಡೆಯ ಮೇಲೆ ಮಲಗಿಸಿಕೊಂಡು ವಿಲಪಿಸತೊಡಗಿದನು. ಆ ಕುಮಾರನ ತಾಯಂದಿರೂ ಶೋಕಪೀಡಿತರಾಗಿ ಗಟ್ಟಿಯಾಗಿ ರೋದನ ಮಾಡುತ್ತಾ ಸೃಂಜಯರಾಜನಿದ್ದ ಪ್ರದೇಶಕ್ಕೆ ಓಡಿಬಂದರು. ಆ ಸಮಯಕ್ಕೆ



ಸರಿಯಾಗಿ ನಾನು ಹಿಂದೆ ಹೇಳಿದ್ದ ಮಾತು ರಾಜನ ಸ್ಮರಣೆಗೆ ಬಂದಿತು. ಮನಸ್ಸನ್ನು ನನ್ನಲ್ಲಿಯೇ ವಿಲೀನಗೊಳಿಸಿ ನನ್ನನ್ನು ಸ್ಮರಿಸಿದನು. ಅವನು ನನ್ನನ್ನು ಸ್ಮರಿಸಿಕೊಳ್ಳುತ್ತಿರುವನೆಂಬುದನ್ನು ತಿಳಿದ ನಾನು ಒಡನೆಯೇ ಅವನಿಗೆ ದರ್ಶನವನ್ನಿತ್ತೆನು. ಯದುವೀರನಾದ ಶ್ರೀಕೃಷ್ಣನು ನಿನ್ನನ್ನು

ಸಮಾಧಾನಗೊಳಿಸಲು ಯಾವ ಮಾತುಗಳನ್ನಾಡಿದನೋ–ಅದೇ ಮಾತುಗಳನ್ನೇ ನಾನು ಸೃಂಜಯನೊಡನೆ ಹೇಳಿದೆನು. ಇಂದ್ರನ ಅನುಮತಿಯನ್ನು ಪಡೆದು ಆ ಬಾಲಕನನ್ನು ಪುನಃ ಬದುಕಿಸಿದ್ದೂ ಆಯಿತು. ಅದು ಹಾಗೆಯೇ ಆಗಬೇಕಾಗಿದ್ದಿತು. ಅದನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿರಲಿಲ್ಲ. ಬಳಿಕ ಮಹಾಯಶೋವಂತನಾದ, ವೀರ್ಯವಂತನಾದ, ಕುಮಾರನಾದ ಸುವರ್ಣಷ್ಠೀವಿಯು ತಂದೆ-ತಾಯಿಗಳ ಮನಸ್ಸನ್ನು ಪ್ರಸನ್ನಗೊಳಿಸಿದನು.

ತಂದೆಯಾದ ಸೃಂಜಯರಾಜನು ಸ್ವರ್ಗಸ್ಥನಾದನಂತರ ಭೀಮವಿಕ್ರಮನಾದ ಸುವರ್ಣಷ್ಠೀವಿಯು ಹನ್ನೊಂದು ನೂರು ವರ್ಷಗಳ ಪರ್ಯಂತವಾಗಿ ಧರ್ಮದಿಂದ ರಾಜ್ಯಭಾರವನ್ನು ಮಾಡುತ್ತಿದ್ದನು. ಮಹಾದ್ಯುತಿಮಂತನಾದ ಸುವರ್ಣಷ್ಠೀವಿಯು ಅಪಾರವಾದ ಭೂರಿದಕ್ಷಿಣೆಗಳಿಂದ ಕೂಡಿದ ಮಹಾಯಜ್ಞಗಳಿಂದ ದೇವತೆಗಳನ್ನೂ, ಶ್ರಾದ್ಧ-ತರ್ಪಣಾದಿಗಳಿಂದ ಪಿತೃಗಳನ್ನೂ ತೃಪ್ತಿಗೊಳಿಸಿದನು. ವಂಶಪ್ರವರ್ತಕರಾದ ಹಲವು ಮಂದಿ ಮಕ್ಕಳನ್ನೂ ಪಡೆದು ದೀರ್ಘಕಾಲಾನಂತರದಲ್ಲಿ ಮರಣಹೊಂದಿದನು.

ಯುಧಿಷ್ಠಿರಮಹಾರಾಜ! ನೀನೂ ಸಹ ನಿನ್ನ ಮನಸ್ಸಿನಲ್ಲುಂಟಾಗಿರುವ ಈ ಕ್ಲೇಶವನ್ನು ದೂರಮಾಡು. ಶ್ರೀಕೇಶವನೂ ಮತ್ತು ಮಹಾ ತಪಸ್ವಿಗಳಾದ ವ್ಯಾಸರೂ ಹೇಳಿದಂತೆ ತಾತ-ಮುತ್ತಾತರಿಂದ ಪಾರಂಪರ್ಯವಾಗಿ ಬಂದಿರುವ ಈ ರಾಜ್ಯಸಿಂಹಾಸನದಲ್ಲಿ ಅಭಿಷಿಕ್ತನಾಗಿ ರಾಜ್ಯಭಾರವನ್ನು ನಡೆಸು. ಪುಣ್ಯಕರವಾದ ಮಹಾಯಜ್ಞಗಳಿಂದ ದೇವತೆಗಳನ್ನು ಆರಾಧಿಸು. ಬಳಿಕ ನೀನು ಅಭೀಷ್ಟವಾದ ಪುಣ್ಯಲೋಕಗಳನ್ನು ಪಡೆಯುವೆ."*

ಇ೧ನೆಯ ಅಧ್ಯಾಯವು ಮುಗಿಯಿತು.

---

* ೨೯ನೆಯ ಅಧ್ಯಾಯದ ಕಡೆಯಲ್ಲಿ ಪುನಸ್ತು ತೇ ಪುತ್ರಮಹಂ ದದಾಮಿ ಹಿರಣ್ಯ

## ವ್ಯಾಸರು ಯುಕ್ತಿಯುಕ್ತವಾದ ಮಾತುಗಳಿಂದ ಯುಧಿಷ್ಠಿರನನ್ನು ಸಮಾಧಾನಗೊಳಿಸಲು ಪುನಃ ಯತ್ನಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಮಹಾರಾಜ! ನಾರದರು ಹೇಳಿದ ವ್ಯಾಖ್ಯಾನವನ್ನು ಕೇಳಿಯೂ ದುಃಖಿತನಾಗಿಯೇ ಮೌನಧರಿಸಿ ಕುಳಿತಿದ್ದ ಯುಧಿಷ್ಠಿರನನ್ನು ನೋಡಿ ತಪಸ್ವಿಗಳಾದ, ಧರ್ಮರಹಸ್ಯವನ್ನು ಸಂಪೂರ್ಣವಾಗಿ ತಿಳಿದಿದ್ದ ಕೃಷ್ಣ ದ್ವೈಪಾಯನರು ಧರ್ಮಜನಿಗೆ ಹೇಳತೊಡಗಿದರು :

**ಪ್ರಜಾನಾಂ ಪಾಲನಂ ಧರ್ಮೋ ರಾಜ್ಞಾಂ ರಾಜೀವಲೋಚನ ।**
**ಧರ್ಮಃ ಪ್ರಮಾಣಂ ಲೋಕಸ್ಯ ನಿತ್ಯಂ ಧರ್ಮಾನುವರ್ತಿನಃ ॥೨॥**

"ಕಮಲನೇತ್ರನೇ! ರಾಜರಿಗೆ ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುವುದೇ ಮುಖ್ಯವಾದ ಧರ್ಮವಾಗಿರುತ್ತದೆ. ಸದಾಕಾಲದಲ್ಲಿಯೂ ಧರ್ಮವನ್ನೇ ಅನುಸರಿಸುತ್ತಿರುವವರಿಗೆ ಧರ್ಮವೇ ಪ್ರಮಾಣಭೂತವಾಗಿರುತ್ತದೆ.

ಆದುದರಿಂದ ಪಿತೃ-ಪಿತಾಮಹರಿಗೆ ಸಂಬಂಧಿಸಿದ ಈ ರಾಜ್ಯವನ್ನು ಪರಿಗ್ರಹಿಸು. ತಾತ-ಮುತ್ತಾತಂದಿರು ಧರ್ಮಾನುಸಾರವಾಗಿ ರಾಜ್ಯವನ್ನು ಪರಿಪಾಲಿಸುತ್ತಿದ್ದಂತೆ ನೀನೂ ಧರ್ಮಾನುಸಾರವಾಗಿ ರಾಜ್ಯವನ್ನು ಪರಿಪಾಲಿಸು.

ಬ್ರಾಹ್ಮಣರಿಗೆ ತಪಸ್ಸೇ ಧರ್ಮವಾಗಿದೆಯೆಂಬುದನ್ನು ವೇದವೇ ನಿರ್ಧರಿಸಿದೆ. ತಪಸ್ಸೆಂಬುದು ಬ್ರಾಹ್ಮಣನಿಗೆ ಶಾಶ್ವತವಾದ ಮತ್ತು ಪ್ರಮಾಣಭೂತವಾದ ಧರ್ಮವಾಗಿರುತ್ತದೆ. ಸಮಗ್ರವಾದ ಬ್ರಾಹ್ಮಣಧರ್ಮದ ಸಂರಕ್ಷಕನು ಕ್ಷತ್ರಿಯನೇ ಆಗಿದ್ದಾನೆ.

**ಯಃ ಸ್ವಯಂ ಪ್ರತಿಹನ್ತಿ ಸ್ಮ ಶಾಸನಂ ವಿಷಯೇ ರತಃ ।**
**ಸ ಬಾಹುಭ್ಯಾಂ ವಿನಿಗ್ರಾಹ್ಯೋ ಲೋಕಯಾತ್ರಾವಿಘಾತಕಃ ॥೫॥**

---

ನಾಭಂ–ಎಂಬ ನಾರದರ ವಾಕ್ಯವಿದೆ. ಸುವರ್ಣಷ್ಠೀವಿಯನ್ನೇ ಮುಂದೆ ಹಿರಣ್ಯನಾಭ ಎಂಬ ಹೆಸರಿನಿಂದ ಕರೆದರೆಂದು ಭಾವಿಸಬಹುದಾಗಿದೆ.

ಯಾವ ಮನುಷ್ಯನು ವಿಷಯಾಸಕ್ತನಾಗಿ ಧರ್ಮಶಾಸನವನ್ನು ಉಲ್ಲಂಘಿಸುತ್ತಾನೆಯೋ–ಅವನು ಲೋಕಮರ್ಯಾದೆಯನ್ನೇ ವಿನಾಶ ಗೊಳಿಸುತ್ತಾನೆ. ಕ್ಷತ್ರಿಯನು ಅಂತಹ ಧರ್ಮದ್ರೋಹಿಯನ್ನು ತನ್ನೆರಡು ಭುಜಗಳಿಂದಲೂ ದಮನಮಾಡಬೇಕು.

**ಪ್ರಮಾಣಮಪ್ರಮಾಣಂ ಯಃ ಕುರ್ಯಾನ್ಮೋಹವಶಂ ಗತಃ ।**
**ಭೃತ್ಯೋ ವಾ ಯದಿ ವಾ ಪುತ್ರಸ್ತಪಸ್ವೀ ವಾಥ ಕಶ್ಚನ ।**
**ಪಾಪಾನ್ಸರ್ವೈರುಪಾಯೈಸ್ತಾನ್ನಿಯಚ್ಛೇಚ್ಛಾತಯೀತ ವಾ ॥೬॥**

ಯಾವನು ಮೋಹವಶನಾಗಿ ಪ್ರಮಾಣಭೂತವಾದ ಧರ್ಮವನ್ನು ಪ್ರಮಾಣವಲ್ಲವೆಂದು ಸಾಧಿಸುತ್ತಾನೆಯೋ–ಅವನು ಸೇವಕನೇ ಆಗಿರಲಿ, ಮಗನೇ ಆಗಿರಲಿ, ತಪಸ್ವಿಯೇ ಆಗಿರಲಿ, ಬೇರೆ ಯಾರೇ ಆಗಿರಲಿ–ಸಕಲ ವಿಧವಾದ ಉಪಾಯಗಳಿಂದಲೂ ಆ ಪಾಪಿಷ್ಠನನ್ನು ವಿನಾಶಗೊಳಿಸಲೇಬೇಕು ಅಥವಾ ಅಂತಹವರ ದಮನವನ್ನಾದರೂ ಮಾಡಬೇಕು. (ಅಂತಹವರು ಸಮಾಜದಲ್ಲಿ ತಲೆ ಎತ್ತದಂತೆ ಮಾಡಬೇಕು.)

**ಅತೋಽನ್ಯಥಾ ವರ್ತಮಾನೋ ರಾಜಾ ಪ್ರಾಪ್ನೋತಿ ಕಿಲ್ಬಿಷಮ್ ।**
**ಧರ್ಮಂ ವಿನಶ್ಯಮಾನಂ ಹಿ ಯೋ ನ ರಕ್ಷೇತ್ಸ ಧರ್ಮಹಾ ॥೭॥**

ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ (ಧರ್ಮವು ಪ್ರಮಾಣವಲ್ಲ ವೆಂದು ಹೇಳುವ ಪಾಪಿಷ್ಠರನ್ನು ದಂಡಿಸದಿದ್ದರೆ) ಅಂತಹ ರಾಜನು ಪಾಪ ಭೂಯಿಷ್ಠನಾಗುತ್ತಾನೆ. ಪಾಪಿಗಳನ್ನು ಶಿಕ್ಷಿಸದ ರಾಜನು ತಾನೇ ಪಾಪಿಷ್ಠ ನಾಗುತ್ತಾನೆ. ಅನುಕ್ರಮವಾಗಿ ವಿನಾಶಹೊಂದುತ್ತಿರುವ ಧರ್ಮವನ್ನು ಸಂರಕ್ಷಿಸದಿರುವ ರಾಜನು ಧರ್ಮಹಂತಕನೇ ಆಗುತ್ತಾನೆ.

**ತೇ ತ್ವಯಾ ಧರ್ಮಹನ್ತಾರೋ ನಿಹತಾಃ ಸಪದಾನುಗಾಃ ।**
**ಸ್ವಧರ್ಮೇ ವರ್ತಮಾನಸ್ತ್ವಂ ಕಿಂ ನು ಶೋಚಸಿ ಪಾಣ್ಡವ ।**
**ರಾಜಾ ಹಿ ಹನ್ಯಾದ್ದದ್ಯಾಚ್ಚ ಪ್ರಜಾ ರಕ್ಷೇಚ್ಚ ಧರ್ಮತಃ ॥೮॥**

ಸ್ವಧರ್ಮನಿರತನಾಗಿರುವ ನೀನು ಧರ್ಮವನ್ನು ಪ್ರಮಾಣವಲ್ಲವೆಂದು ಹೇಳುತ್ತಿದ್ದ ಧರ್ಮಘಾತುಕರನ್ನು, ಅವರ ಅನುಯಾಯಿಗಳ ಸಮೇತ ವಾಗಿಯೇ ಧ್ವಂಸಮಾಡಿರುವೆ. ಇದಕ್ಕಾಗಿ ಏಕೆ ಶೋಕಿಸುವೆ? ಮಾಡ

ಬೇಕಾಗಿದ್ದ ಕರ್ತವ್ಯವನ್ನೇ ಮಾಡಿರುವುದಕ್ಕಾಗಿ ದುಃಖಪಡುವುದೇ? ರಾಜನಾದವನು ಶತ್ರುಗಳನ್ನು ಸಂಹಾರಮಾಡಲೇಬೇಕು. ಸತ್ಪಾತ್ರರಲ್ಲಿ ದಾನ ಮಾಡಲೇಬೇಕು. ಪ್ರಜೆಗಳನ್ನು ಧರ್ಮದಿಂದ ಪರಿಪಾಲನೆಮಾಡಲೇಬೇಕು."

ಯುಧಿಷ್ಠಿರನು ಹೇಳುತ್ತಾನೆ :

"ತಪೋಧನರೇ! ಸರ್ವಧರ್ಮಗಳನ್ನೂ ತಿಳಿದಿರುವವರಲ್ಲಿ ಶ್ರೇಷ್ಠ ರಾದವರೇ! ತಮಗೆ ಧರ್ಮದ ಸ್ವರೂಪದಲ್ಲಿ ಪ್ರತ್ಯಕ್ಷವಾದ ಜ್ಞಾನವಿದೆ. ಸಮಗ್ರಧರ್ಮವನ್ನೂ ತಾವು ಪ್ರತ್ಯಕ್ಷವಾಗಿಯೇ ಕಾಣುತ್ತಿರುವಿರಿ. ಆದುದ ರಿಂದ ತಾವು ಹೇಳುತ್ತಿರುವ ವಿಷಯದಲ್ಲಿ ನನಗೆ ಕಿಂಚಿತ್ತಾದರೂ ಸಂದೇಹವೇ ಇಲ್ಲ. ನಾನು ಈ ರಾಜ್ಯವನ್ನು ಪಡೆದುಕೊಳ್ಳುವ ಸಲುವಾಗಿಯೇ ಅವಧ್ಯರಾದ ಅನೇಕರನ್ನು ಸಂಹಾರಮಾಡಿದೆನೆಂಬುದು ನನ್ನ ಪರಿತಾಪಕ್ಕೆ ಕಾರಣವಾಗಿದೆ. ಬ್ರಾಹ್ಮಣೋತ್ತಮರೇ! ನಾನು ಮಾಡಿದ ಆ ಸಂಹಾರಕ್ರಿಯೆಗಳೇ ನನ್ನನ್ನೀಗ ದಹಿಸುತ್ತಿವೆ ಮತ್ತು ಬೇಯಿಸುತ್ತಿವೆ."

**ಈಶ್ವರೋ ವಾ ಭವೇತ್ಕರ್ತಾ ಪುರುಷೋ ವಾಪಿ ಭಾರತ ।**
**ಹಠೋ ವಾ ವರ್ತತೇ ಲೋಕೇ ಕರ್ಮಜಂ ವಾ ಫಲಂ ಸ್ಮೃತಮ್ ॥**

"ಯುಧಿಷ್ಠಿರ! 'ಅವಧ್ಯರಾದ ಅನೇಕರನ್ನು ನಾನು ಸಂಹರಿ ಸಿದೆನು'–ಎಂದು ಹೇಳಿದೆಯಲ್ಲವೇ? ಸಾವಿಗೆ ಕಾರಣಗಳನ್ನು ಅಷ್ಟು ಸುಲಭ ವಾಗಿ ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಕಾರ್ಯಗಳಿಗೆ ಕಾರಣಗಳನ್ನು ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದಾಗಿದೆ. ಶುಭಾಶುಭಕರ್ಮಗಳಿಗೆ ಪ್ರೇರಕನಾದ ಈಶ್ವರನೇ ಕಾರಣನಾಗಬಹುದು ; ಎಲ್ಲವನ್ನೂ ತಾನೇ ಮಾಡು ತ್ತಿರುವೆನೆಂದು ಭಾವಿಸಿಕೊಳ್ಳುವ ಪುರುಷನೇ ಕಾರಣನಾಗಬಹುದು ; ಆಗಿಂದಾಗ್ಗೆ ಸಂಭವಿಸುವ ಆಕಸ್ಮಿಕವೇ ಕಾರಣವಾಗಿರಬಹುದು ( ಸ್ವಾಭಾ ವಿಕವಾಗಿಯೇ ಎಲ್ಲ ನಡೆಯಬಹುದು ) ; ಅವನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಫಲವೇ ಕಾರಣವಾಗಿರಬಹುದು.

**ಈಶ್ವರೇಣ ನಿಯುಕ್ತೋ ಹಿ ಸಾಧ್ವಸಾಧು ಚ ಭಾರತ ।**
**ಕುರುತೇ ಪುರುಷಃ ಕರ್ಮ ಫಲಮೀಶ್ವರಗಾಮಿ ತತ್ ॥೧೩॥**

ಈಶ್ವರನ ನಿಯೋಗದಂತೆ ಪುರುಷನು ಶುಭವನ್ನೋ–ಅಶುಭವನ್ನೋ

ಮಾಡುತ್ತಾನೆ. ತೇನ ವಿನಾ ತೃಣಮಪಿ ನ ಚಲತಿ–ಎಂಬ ಸಿದ್ಧಾಂತದಂತೆ 'ಶುಭಾಶುಭಕರ್ಮಗಳೆಲ್ಲಕ್ಕೂ ಈಶ್ವರನೇ ಪ್ರೇರಕನು. ಆದುದರಿಂದ ಪುರುಷನು ಶುಭಾಶುಭಕರ್ಮಗಳನ್ನು ಮಾಡಿದ್ದೇ ಆದರೆ ಅದರ ಫಲಗಳು ಈಶ್ವರನಿಗೇ ಸೇರುತ್ತವೆ.

**ಯಥಾ ಹಿ ಪುರುಷಶ್ಛಿನ್ದ್ಯಾದ್ವೃಕ್ಷಂ ಪರಶುನಾ ವನೇ ।**
**ಛೇತ್ತುರೇವ ಭವೇತ್ಪಾಪಂ ಪರಶೋರ್ನ ಕಥಞ್ಚನ ॥೧೪॥**

(ಈಶ್ವರಪ್ರೇರಿತನಾಗಿ ಮಾಡಿದರೆ ಪಾಪವಿಲ್ಲವೇ?–ಎಂಬುದಕ್ಕೆ ಸಾದೃಶ್ಯವಾಗಿ ವ್ಯಾಸರು ಹೇಳುತ್ತಾರೆ.) ಪುರುಷನೊಬ್ಬನು ಅರಣ್ಯದಲ್ಲಿರುವ ವೃಕ್ಷವನ್ನು ಕೊಡಲಿಯಿಂದ ಕತ್ತರಿಸುತ್ತಾನೆ. ವೃಕ್ಷವನ್ನು ಕತ್ತರಿಸುವುದರಿಂದ ಪಾಪದ ಸಂಘಟನೆಯಾಗುವುದು ನಿಜ. ವೃಕ್ಷವನ್ನು ಕತ್ತರಿಸುವ ಸಂದರ್ಭದಲ್ಲಿ ಕೊಡಲಿಯೇ ವೃಕ್ಷವನ್ನು ಕತ್ತರಿಸುವುದೂ ನಿಜ. ಆದರೆ ಕೊಡಲಿಯನ್ನು ಹಿಡಿದು ಕತ್ತರಿಸುವ ಮನುಷ್ಯನಿಗೇ ಪಾಪಲೇಪವೇ ಹೊರತು ಕೊಡಲಿಗಲ್ಲ. ಕೊಡಲಿಯೇ ಮರವನ್ನು ಕತ್ತರಿಸಿದರೂ ಕೊಡಲಿಯು 'ನಾನು ಕತ್ತರಿಸಿದೆ' ಎಂದು ಹೇಳಿಕೊಳ್ಳುವುದಿಲ್ಲ. ಪುರುಷನು ಕೊಡಲಿಯ ಮೂಲಕವಾಗಿ ಕತ್ತರಿಸಿದರೂ ಕೊಡಲಿಯ ಪ್ರಸ್ತಾಪವನ್ನೇ ಎತ್ತದೇ 'ನಾನೇ ಕತ್ತರಿಸಿದೆ' ಎನ್ನುತ್ತಾನೆ. ಆದುದರಿಂದ ಈಶ್ವರಪ್ರೇರಣೆಯಿಂದ ಕೆಲಸ ಮಾಡಲು ಸಂಕಲ್ಪಿಸಿದವನು ಕೊಡಲಿಯಂತಿರಬೇಕು. 'ನಾನು-ನನ್ನದು'– ಎಂಬುದನ್ನೇ ಸಂಪೂರ್ಣವಾಗಿ ತೊಲಗಿಸಬೇಕು. ಕನಸು-ನನಸುಗಳಲ್ಲಿಯೂ ನಾನು ಎಂಬುದಿರಬಾರದು. ಅಂತಹವನು ಮಾಡುವ ಪಾಪ-ಪುಣ್ಯಗಳೆಲ್ಲವೂ ಪರಮಾತ್ಮನಿಗೇ ಸೇರುತ್ತವೆ.

**ಅಥವಾ ತದುಪಾದಾನಾತ್ಪ್ರಾಪ್ನುಯಾತ್ಕರ್ಮಣಃ ಫಲಮ್ ।**
**ದಣ್ಡಶಸ್ತ್ರಕೃತಂ ಪಾಪಂ ಪುರುಷೇ ತನ್ನ ವಿದ್ಯತೇ ॥೧೫॥**

ಹಾಗಲ್ಲದೇ 'ಕೊಡಲಿಯು ಜಡವಸ್ತು. ಅದಕ್ಕೆ ಕರ್ಮಮಾಡುವ ಸ್ವಾತಂತ್ರ್ಯವೇ ಇಲ್ಲ. ಆದುದರಿಂದ ಅದಕ್ಕೆ ಪಾಪ-ಪುಣ್ಯಗಳ ಲೇಪವಿಲ್ಲ'– ಎಂಬುದು ಸಹಜವಾಗಿಯೇ ಇದೆ. ಕೊಡಲಿಯನ್ನು ಹಿಡಿಯುವ ಮನುಷ್ಯನೇ ಕರ್ತೃವಾಗುತ್ತಾನೆ. ಆದುದರಿಂದ ಕೊಡಲಿಯನ್ನು ಹಿಡಿದು ವೃಕ್ಷವನ್ನು

ಕತ್ತರಿಸಿದವನು ಪಾಪಫಲವನ್ನು ಅನುಭವಿಸಲೇಬೇಕು'–ಎನ್ನುವುದಾದರೆ ಕೊಡಲಿಯನ್ನು ಮಾಡಿದವನಿಗಾದರೂ ಮತ್ತು ಅದಕ್ಕೆ ಕಾವನ್ನು ಹಾಕಿದವನಿಗಾದರೂ ವೃಕ್ಷವನ್ನು ಕಡಿದ ಪಾಪವು ಬರಬೇಕಾಗಿದ್ದಿತು. ಏಕೆಂದರೆ : ವೃಕ್ಷಗಳ ವಿನಾಶಕ್ಕೆ ಕೊಡಲಿಗಳನ್ನು ತಯಾರಿಸುವವನೇ ಮೂಲ ಕಾರಣನಾಗಿರುತ್ತಾನೆ. ಕೊಡಲಿಯನ್ನು ತಯಾರಿಸುವವನು ಮೊದಲು ಆ ಆಯುಧವನ್ನು ತಯಾರಿಸಿದುದರಿಂದಲ್ಲವೇ ಆ ಕೊಡಲಿಯನ್ನು ತೆಗೆದು ಕೊಂಡು ಮತ್ತೊಬ್ಬನು ವೃಕ್ಷವನ್ನು ಕತ್ತರಿಸಿದುದು! ಆದುದರಿಂದ ವೃಕ್ಷವನ್ನು ಕತ್ತರಿಸಿದವನಿಗೆ ಪಾಪವೇ ಇಲ್ಲ–ಎಂದೂ ಹೇಳಬಹುದಲ್ಲವೇ?

**ನ ಚೈತದಿಷ್ಟಂ ಕೌನ್ತೇಯ ಯದನ್ಯೇನ ಕೃತಂ ಫಲಮ್ ।**
**ಪ್ರಾಪ್ನುಯಾದಿತಿ ಯಸ್ಮಾಚ್ಚ ಈಶ್ವರೇ ತನ್ನಿವೇಶಯ ॥೧೬॥**

ಕುಂತೀನಂದನ! ಒಬ್ಬನು ಮಾಡಿದ ಕಾರ್ಯಕ್ಕೆ ಮತ್ತೊಬ್ಬನನ್ನು ಹೊಣೆಮಾಡುವುದು ಸರಿಯಲ್ಲ. ಕೊಡಲಿಯನ್ನು ಹಿಡಿದು ಮರಕಡಿದವನ ಅಪರಾಧವನ್ನು ಕೊಡಲಿಯ ನಿರ್ಮಾಪಕನ ಮೇಲೆ ಹಾಕುವುದು ಸರಿಯಲ್ಲ. (ಆ ವಿಷಯವು ಅಲ್ಲಿಗೇ ನಿಲ್ಲುವುದೂ ಇಲ್ಲ. ಏಕೆಂದರೆ ಕೊಡಲಿಯನ್ನು ತಯಾರಿಸಲು ಕಬ್ಬಿಣ ಬೇಕು. ಕಬ್ಬಿಣವೇ ಸಿಗದಿದ್ದರೆ ಅವನು ಕೊಡಲಿಯನ್ನೇ ತಯಾರಿಸುತ್ತಿರಲಿಲ್ಲ. ಆದುದರಿಂದ ವೃಕ್ಷವನ್ನು ಕಡಿದ ಪಾಪವು ಕಬ್ಬಿಣ ಮಾರುವವನಿಗೆ ಸೇರಬೇಕಾಗುತ್ತದೆ. ಹೀಗೆಯೇ ಹೇಳುತ್ತಾಹೋದರೆ ಪಾಪಮಾಡಿದವನು ಯಾರೆಂಬುದನ್ನು ನಿರ್ಣಯಿಸುವ ಸಾಧ್ಯತೆಯೇ ಇಲ್ಲ.) ಆದುದರಿಂದ ಶುಭಾಶುಭಕರ್ಮಗಳ ಫಲವನ್ನು ಈಶ್ವರನಲ್ಲಿಯೇ ಇರಿಸು. ಕರ್ಮಗಳ ಫಲವನ್ನೂ ಈಶ್ವರನಿಗೇ ಅರ್ಪಿಸು.

**ಅಥಾಪಿ ಪುರುಷಃ ಕರ್ತಾ ಕರ್ಮಣೋಃ ಶುಭಪಾಪಯೋಃ ।**
**ನ ಪರೋ ವಿದ್ಯತೇ ತಸ್ಮಾದೇವಮೇತಚ್ಛುಭಂ ಕೃತಮ್ ॥೧೭॥**

ಒಂದು ವೇಳೆ ಶುಭಾಶುಭಕರ್ಮಗಳನ್ನು ಮಾಡುವವನು ಪುರುಷನೇ ಹೊರತು ದೈವವು ಇದಕ್ಕೆ ಕಾರಣವಲ್ಲ–ಎಂಬುದಾಗಿಯೇ ನೀನು ಭಾವಿ ಸುವುದಾದರೆ ನೀನೀಗ ಅಶುಭಕಾರ್ಯಗಳನ್ನು ಮಾಡಿರುವ ದುರ್ಮಾರ್ಗಿ

ಗಳನ್ನೇ ಸಂಹರಿಸಿ ಶುಭಕಾರ್ಯವನ್ನೇ ಮಾಡಿರುವೆ. ಆದುದರಿಂದ 'ಪುರುಷನೇ ಕರ್ತೃವು ; ದೇವನು ಸಾಕ್ಷಿಮಾತ್ರನು'–ಎಂದೇ ಸಿದ್ಧಾಂತಿಸಿದರೂ ನೀನು ಮಾಡಿರುವ ಶತ್ರುಹನನದ ವಿಷಯವಾಗಿ ಯೋಚಿಸಬೇಕಾದ ಅಥವಾ ಶೋಕಿಸಬೇಕಾದ ಕಾರಣವಿಲ್ಲ.

**ನ ಹಿ ಕಶ್ಚಿತ್ಕ್ವಚಿದ್ರಾಜನ್ದಿಷ್ಟಂ ಪ್ರತಿನಿವರ್ತತೇ ।**
**ದಣ್ಡಶಸ್ತ್ರಕೃತಂ ಪಾಪಂ ಪುರುಷೇ ತನ್ನ ವಿದ್ಯತೇ ॥೧೮॥**

ಯಾವನೇ ಆಗಲೀ, ಎಲ್ಲಿಯೇ ಆಗಲೀ–ವಿಧಿನಿಯಮವನ್ನು ಉಲ್ಲಂಘಿಸಲಾರನು. ಆದುದರಿಂದ ವೃಕ್ಷವನ್ನು ಕತ್ತರಿಸಿದ ಪಾಪವು ಕೊಡಲಿಯನ್ನೂ ಮತ್ತು ಕೊಡಲಿಯ ಕಾವನ್ನೂ ಮಾಡಿದವನಿಗೆ ಸೇರದಿರುವಂತೆ–ವಿಧಿನಿಯಮದಂತೆ ಒಬ್ಬನು ಯುದ್ಧದಲ್ಲಿ ಪ್ರಾಣತ್ಯಾಗಮಾಡಿದರೆ ಅಂತಹ ಪ್ರಾಣತ್ಯಾಗಕ್ಕೆ ಕಾರಣನಾದವನಿಗೆ ಅವನನ್ನು ಕೊಲೆಮಾಡಿದ ಪಾಪವು ಅಂಟುವುದಿಲ್ಲ.

**ಯದಿ ವಾ ಮನ್ಯಸೇ ರಾಜನ್ಹತೇ ಲೋಕಂ ಪ್ರತಿಷ್ಠಿತಮ್ ।**
**ಏವಮಪ್ಯಶುಭಂ ಕರ್ಮ ನ ಭೂತಂ ನ ಭವಿಷ್ಯತಿ ॥೧೯॥**

ಒಂದು ವೇಳೆ ನೀನು–'ಸ್ವಭಾವ ಅಥವಾ ಆಕಸ್ಮಿಕಗಳಲ್ಲಿಯೇ ಲೋಕವು ಪ್ರತಿಷ್ಠಿತವಾಗಿದೆ. ಅದರಿಂದಲೇ ಅಶುಭಕರ್ಮಗಳು ನಡೆಯುತ್ತವೆ'–ಎನ್ನುವುದಾದರೆ ಸ್ವಾಭಾವಿಕವಾಗಿ ನಡೆಯುವ ಶುಭಾಶುಭಗಳ ವಿಷಯವಾಗಿ ಯೋಚಿಸಬೇಕಾಗಿಯೇ ಇಲ್ಲ. ನಿನಗೆ ಇಚ್ಛೆಯಿರಲಿ ; ಇಲ್ಲದಿರಲಿ, ಸ್ವಾಭಾವಿಕವಾದ ಅಥವಾ ಆಕಸ್ಮಿಕವಾದ ಶುಭಾಶುಭಕರ್ಮಗಳು ನಡೆಯುತ್ತಲೇ ಇರುತ್ತವೆ. ಸ್ವಭಾವಸಿದ್ಧವಾದ ಈ ಕರ್ಮಗಳಿಗೆ ಹಿಂದೆ ನಡೆದಿದ್ದು, ಈಗ ನಡೆಯುವುದು, ಮುಂದೆ ನಡೆಯಬೇಕಾದುದು ಎಂಬುದು ಯಾವುದೂ ಇರುವುದಿಲ್ಲ. ತಾನೇತಾನಾಗಿ ಎಲ್ಲವೂ ನಡೆಯುತ್ತಾ ಹೋಗುತ್ತದೆ. ಇದಕ್ಕೆ ಕಾರ್ಯ-ಕಾರಣಗಳೊಂದೂ ಇರುವುದಿಲ್ಲ.

ಇದ್ದಕ್ಕಿದ್ದಂತೆಯೇ ಭೂಕಂಪವಾಗುತ್ತದೆ. ಊರುಗಳೇ ನೆಲದಲ್ಲಿ ಹುದುಗಿಕೊಳ್ಳುತ್ತವೆ. ಸಾವಿರಾರು ಜನರು ಸಾಯುತ್ತಾರೆ. ಇಲ್ಲಿ ಕರ್ತೃ ಯಾರು? ಕಾರಣ ಯಾವುದು? ಫಲಾಫಲಗಳು ಯಾರಿಗೆ?–ಎಂಬ

ಯಾವುದನ್ನೂ ನಿರ್ಧರಿಸಿ ಹೇಳುವ ಸಾಧ್ಯತೆಯೇ ಇಲ್ಲ. (ಇದಕ್ಕೆ ಸ್ವಭಾವವಾದವೆಂದು ಹೆಸರು.) ಅಂತೆಯೇ ಭಾರತಯುದ್ಧವು ನಡೆದುದು ಸ್ವಾಭಾವಿಕ. ಇದಕ್ಕೆ ಯಾರೂ ಕಾರಣರಲ್ಲ. ಇದರ ಫಲಾಫಲಗಳು ಯಾರಿಗೂ ಸೇರುವುದಿಲ್ಲ.

**ಅಥಾಭಿಪತ್ತಿರ್ಲೋಕಸ್ಯ ಕರ್ತವ್ಯಾ ಪುಣ್ಯಪಾಪಯೋಃ ।**
**ಅಭಿಪನ್ನಮಿದಂ ಲೋಕೇ ರಾಜ್ಞಾಮುದ್ಯತದಣ್ಡನಮ್ ॥೨೦॥**

ಪುಣ್ಯ-ಪಾಪಗಳ ವಿಷಯದಲ್ಲಿ, ಧರ್ಮಾಧರ್ಮಗಳ ವಿಷಯದಲ್ಲಿ ಲೋಕದ ಮರ್ಯಾದೆಯನ್ನು ತಿಳಿದು ಕಾರ್ಯಮಾಡಬೇಕೆನ್ನುವುದಾದರೆ ಪುಣ್ಯ-ಪಾಪಗಳು ಪ್ರಾರಬ್ಧಕರ್ಮಗಳಿಗೆ ಸಂಬಂಧಿಸಿದುವುಗಳಾಗಿವೆ. ಧರ್ಮಾಧರ್ಮಗಳನ್ನು ಅಥವಾ ಶುಭಾಶುಭಕರ್ಮಗಳನ್ನೂ ಶಾಸ್ತ್ರವು ನಿರ್ಣಯಿಸಿ ಹೇಳುತ್ತದೆ ಮತ್ತು ಅಶುಭಕರ್ಮಗಳನ್ನು ಅಥವಾ ಅಧರ್ಮ ಕ್ರಿಯೆಗಳನ್ನು ಹೇಗೆ ತಡೆಯಬೇಕು ಅಥವಾ ಅಶುಭಕರ್ಮಿಗಳನ್ನು ಹೇಗೆ ಶಿಕ್ಷಿಸಬೇಕು ಎಂಬುದನ್ನು ಶಾಸ್ತ್ರವು ಹೇಳಿದೆ. ಲೋಕದಲ್ಲಿ ಉದ್ಧತರನ್ನು ಅಥವಾ ಅಧರ್ಮಿಗಳನ್ನು ದಂಡಿಸಲು ರಾಜರ ದಂಡವು ಸರ್ವದಾ ಸಿದ್ಧವಾಗಿರುವುದೆಂಬುದು ಸರ್ವಸಮ್ಮತವಾಗಿಯೇ ಇದೆ. ಆದುದರಿಂದ ದುರ್ಮಾರ್ಗಿಗಳನ್ನು ದಂಡಿಸಿದುದಕ್ಕಾಗಿ ವ್ಯಥೆಪಡಬೇಕಾಗಿಲ್ಲ.

**ತಥಾಪಿ ಲೋಕೇ ಕರ್ಮಾಣಿ ಸಮಾವರ್ತನ್ತಿ ಭಾರತ ।**
**ಶುಭಾಶುಭಫಲಂ ಚೈತೇ ಪ್ರಾಪ್ನುವನ್ತೀತಿ ಮೇ ಮತಿಃ ॥೨೧॥**
**ಏವಮಪ್ಯಶುಭಂ ಕರ್ಮ ಕರ್ಮಣಸ್ತತ್ಫಲಾತ್ಮಕಮ್ ।**
**ತ್ಯಜ ತ್ವಂ ರಾಜಶಾರ್ದೂಲ ಮೈವಂ ಶೋಕೇ ಮನಃ ಕೃಥಾಃ ॥೨೨॥**

ಹೀಗಿದ್ದರೂ ಲೋಕದಲ್ಲಿ ಶುಭಾಶುಭಕರ್ಮಗಳು ಚಕ್ರದಂತೆ ಸುತ್ತುತ್ತಲೇ ಇರುತ್ತವೆ. ಎಷ್ಟೇ ತಿಳಿವಳಿಕೆಯಿದ್ದರೂ, ರಾಜದಂಡದ ಭಯವಿದ್ದರೂ–ಎಲ್ಲ ಕಾಲಗಳಲ್ಲಿಯೂ ಶುಭಕರ್ಮಗಳೇ ನಡೆಯುವುವೆಂದು ಹೇಳಲಾಗುವುದಿಲ್ಲ. ಯಾವಾಗಲೂ ಪಾಪಕರ್ಮಗಳೇ ನಡೆಯುತ್ತವೆಂದೂ ಹೇಳುವುದಕ್ಕಾಗುವುದಿಲ್ಲ. ಶುಭಾಶುಭಕರ್ಮಗಳನ್ನು ಮಾಡುವ ಮಾನವರು ಶುಭಾಶುಭಫಲಗಳನ್ನು ಪಡೆಯುತ್ತಾರೆಂಬುದು ನನ್ನ ಅಭಿಪ್ರಾಯವಾಗಿದೆ.

ಧರ್ಮಜ! ಲೋಕವ್ಯವಹಾರವು ಹೀಗಿರುವಾಗ ಯಾವ ಕರ್ಮದಿಂದ ಪಾಪ ಫಲವುಂಟಾಗುವುದೋ ಅದನ್ನು ನೀನು ಮಾಡಬೇಡ. ಅಂತಹ ಕರ್ಮವನ್ನು ತ್ಯಜಿಸು. ಈಗಲೂ ನೀನು ಪಾಪಫಲದಾಯಕವಾಗಿರುವ ಕರ್ಮವನ್ನು ಮಾಡಿಲ್ಲವೆಂಬುದೇ ನನ್ನ ಖಚಿತವಾದ ಅಭಿಪ್ರಾಯವಾಗಿದೆ. ಆದುದರಿಂದ ಮನಸ್ಸನ್ನು ಶೋಕಕ್ಕೀಡುಮಾಡಬೇಡ.

**ಸ್ವಧರ್ಮೇ ವರ್ತಮಾನಸ್ಯ ಸಾಪವಾದೇಽಪಿ ಭಾರತ ।**
**ಏವಮಾತ್ಮಪರಿತ್ಯಾಗಸ್ತವ ರಾಜನ್ನ �ೋಭನಃ ॥೨೩॥**

ಯುಧಿಷ್ಠಿರ! ಒಂದೊಂದು ವರ್ಣಧರ್ಮದಲ್ಲಿಯೂ ಕೆಲವು ದೋಷ ಗಳಿದ್ದೇ ಇರುತ್ತವೆ. ಅದರಂತೆ ಕ್ಷತ್ರಿಯಧರ್ಮದಲ್ಲಿಯೂ ಕೆಲವು ದೋಷ ಗಳಿರಬಹುದು. (ಯುದ್ಧದಲ್ಲಿ ಹಿಂಸೆಯಿದೆ. ಆದರೂ ಯುದ್ಧವು ಕ್ಷತ್ರಿಯರಿಗೆ ಉಕ್ತವಾದ ಧರ್ಮವಾಗಿದೆ.) ಆದುದರಿಂದ ಸ್ವಧರ್ಮದಲ್ಲಿಯೇ ನಿರತ ನಾಗಿರುವ ನಿನಗೆ ಈ ಅಲ್ಪಕಾರಣಕ್ಕಾಗಿ ಹೀಗೆ ಆತ್ಮಪರಿತ್ಯಾಗಮಾಡುವುದು ಖಂಡಿತವಾಗಿಯೂ ಶೋಭಿಸುವುದಿಲ್ಲ.

**ವಿಹಿತಾನಿ ಹಿ ಕೌನ್ತೇಯ ಪ್ರಾಯಶ್ಚಿತ್ತಾನಿ ಕರ್ಮಣಾಮ್ ।**
**ಶರೀರವಾಂಸ್ತಾನಿ ಕುರ್ಯಾದಶರೀರಃ ಪರಾಭವೇತ್ ॥೨೪॥**

ಕುಂತೀಪುತ್ರ! ಎಲ್ಲ ಪಾಪಕರ್ಮಗಳಿಗೂ ಪ್ರಾಯಶ್ಚಿತ್ತಗಳಿದ್ದೇ ಇರುತ್ತವೆ. ಶರೀರವನ್ನು ಸುರಕ್ಷಿತವಾಗಿಟ್ಟುಕೊಂಡವನು ಯಾವುದೇ ವಿಧವಾದ ಪಾಪಮಾಡಿದ್ದರೂ ಶಾಸ್ತ್ರದೃಷ್ಟವಾದ ಪ್ರಾಯಶ್ಚಿತ್ತಾದಿಗಳಿಂದ ಆ ಪಾಪಗಳನ್ನು ನಿವಾರಿಸಿಕೊಳ್ಳಬಹುದು. ಜೀವಿಸಿರಲೇ ಇಷ್ಟವಿಲ್ಲದೇ ಪಾಪಮಾಡಿರುವೆ ನೆಂದು ಭಾವಿಸಿಕೊಂಡು ಪ್ರಾಣತೊರೆದರೆ ಅವಸಾನಾನಂತರದಲ್ಲಿಯೂ ಅದರಿಂದ ಮಹಾನಷ್ಟವು ಪ್ರಾಪ್ತವಾಗುವುದೇ ಹೊರತು ಸುಖವಿಲ್ಲ. ('ಕ್ಷತ್ರ ಧರ್ಮಾನುಸಾರವಾಗಿ ಯುದ್ಧವನ್ನು ಮಾಡಿದ್ದೇನೆ. ಧರ್ಮದ್ರೋಹಿಗಳನ್ನು ಸಂಹಾರಮಾಡಿದ್ದೇನೆ. ಧರ್ಮವನ್ನು ರಕ್ಷಿಸಿದ್ದೇನೆ'–ಎಂದು ಭಾವಿಸುವುದು ಉತ್ತಮಪಕ್ಷ. 'ರಾಜ್ಯಲೋಭದಿಂದಲೇ ಯುದ್ಧಮಾಡಿದೆನು. ಕೊಲ್ಲಬಾರ ದವರನ್ನು ಕೊಂದಿದ್ದೇನೆ. ಮಹಾಪಾಪವು ಸಂಘಟಿಸಿದೆ'–ಎಂದು ಭಾವಿಸು

ವುದು ಕ್ಷತ್ರಿಯನಿಗೆ ಉಚಿತವಲ್ಲ. ಒಂದು ವೇಳೆ ಹಾಗೆ ಭಾವಿಸಿಕೊಂಡು ಪಾಪವನ್ನು ತಲೆಯ ಮೇಲೆ ಹೊತ್ತುಕೊಂಡರೂ ಪಾಪದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತಾದಿಗಳನ್ನು ರಾಜನು ಮಾಡಿಕೊಳ್ಳಬೇಕು. ಅದರಿಂದ ಪಾಪವು ಪರಿಹಾರವಾಗುತ್ತದೆ. ಹಾಗೆ ಮಾಡದೇ ಪಾಪಮಾಡಿದೆನೆಂದು ಭಾವಿಸಿ ಕೊಂಡು ಪ್ರಾಣತೊರೆದರೆ ಮನಸ್ಸಿನಲ್ಲಿ ಆವಿರ್ಭವಿಸಿಕೊಂಡ ಆ ಪಾಪವು ಹಾಗೆಯೇ ಉಳಿದುಕೊಳ್ಳುತ್ತದೆ. ಅದರಿಂದ ನರಕಯಾತನೆಯನ್ನೇ ಅನು ಭವಿಸಬೇಕಾಗುತ್ತದೆ. ಇಂತಹ ಸೂಕ್ಷ್ಮವಿಷಯಗಳಲ್ಲಿ ಭಾವನೆಯೇ ಬಹಳ ಮುಖ್ಯವಾದುದು. ಆದುದರಿಂದ–'ನಾನು ಮಹಾಪಾಪವನ್ನು ಮಾಡಿ ಬಿಟ್ಟೆನು'–ಎಂದೇ ನೀನು ಭಾವಿಸುವೆಯಾದರೆ ಪ್ರಾಯಶ್ಚಿತ್ತಾದಿಗಳ ಮೂಲಕ ವಾಗಿ ಆ ಪಾಪವನ್ನು ನಿವಾರಣೆಮಾಡಿಕೊ. ಪ್ರಾಣಬಿಡುವ ಅಗತ್ಯವಿಲ್ಲ. ಪ್ರಾಣಬಿಟ್ಟರೆ ಇನ್ನೂ ಹೆಚ್ಚಿನ ದುಃಖವನ್ನೇ ಅನುಭವಿಸಬೇಕಾಗುತ್ತದೆ'–ಎಂಬುದು ವ್ಯಾಸರ ಉಪದೇಶದ ಸಾರವಾಗಿದೆ. ಈ ವಿಷಯವನ್ನೇ ಮುಂದಿನ ಶ್ಲೋಕದಲ್ಲಿಯೂ ವಿಸ್ತರಿಸುತ್ತಾರೆ. )

**ತದ್ರಾಜಞ್ಜೀವಮಾನಸ್ತ್ವಂ ಪ್ರಾಯಶ್ಚಿತ್ತಂ ಕರಿಷ್ಯಸಿ ।**
**ಪ್ರಾಯಶ್ಚಿತ್ತಮಕೃತ್ವಾ ತು ಪ್ರೇತ್ಯ ತಪ್ತಾಸಿ ಭಾರತ ॥೨೫॥**

ಮಹಾರಾಜ! ನೀನು ಜೀವಿಸಿರುವಾಗಲೇ ವಿಧ್ಯುಕ್ತವಾದ ಪ್ರಾಯ ಶ್ಚಿತ್ತಾದಿಗಳನ್ನು ಮಾಡಿಕೊಂಡರೆ ಸಂಭವಿಸಿರಬಹುದಾದ ಪಾಪಗಳೂ ಪರಿಹಾರಹೊಂದುತ್ತವೆ. ಒಂದು ವೇಳೆ ನೀನು ಪ್ರಾಯಶ್ಚಿತ್ತಗಳನ್ನು ಮಾಡಿ ಕೊಳ್ಳದೆಯೇ ಅಸುನೀಗಿದೆಯಾದರೆ ಅದಕ್ಕಾಗಿ ನೀನು ಲೋಕಾಂತರ ದಲ್ಲಿಯೂ ಪರಿತಪಿಸಬೇಕಾಗುತ್ತದೆ."

ಌ೨ನೆಯ ಅಧ್ಯಾಯವು ಮುಗಿಯಿತು.

೩೩ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ವ್ಯಾಸರು ಧರ್ಮರಾಜನನ್ನು ಸಮಾಧಾನಗೊಳಿಸುತ್ತಾ ಕಾಲದ ಪ್ರಾಬಲ್ಯವನ್ನು ಹೇಳಿದುದು : ದೇವಾಸುರರ ಸಂಗ್ರಾಮದ ನಿದರ್ಶನವನ್ನೂ ಕೊಟ್ಟು ಧರ್ಮದ್ರೋಹಿಗಳನ್ನು ದಮನಮಾಡುವುದರಲ್ಲಿನ ಔಚಿತ್ಯವನ್ನು ವಿವರಿಸಿ, ಪ್ರಾಯಶ್ಚಿತ್ತಮಾಡಿಕೊಳ್ಳುವುದರ ಆವಶ್ಯಕತೆಯನ್ನು ತಿಳಿಸಿದುದು

“ಜನಮೇಜಯ! ವ್ಯಾಸರ ಆ ಮಹೋಪದೇಶದಿಂದಲೂ ಯುಧಿಷ್ಠಿರನ ಮನಸ್ಸು ಶೋಕದಿಂದ ಮುಕ್ತವಾಗಲಿಲ್ಲ. ಹಿಂದಿನದನ್ನೇ ಹೇಳಿಕೊಂಡು ದುಃಖಿಸತೊಡಗಿದನು :

“ಪಿತಾಮಹರೇ! ರಾಜ್ಯಲೋಭಿಯಾದ ನಾನು ಸ್ವಲ್ಪವಾದರೂ ವಿವೇಚನೆಯೇ ಇಲ್ಲದೇ ಪುತ್ರರು, ಪೌತ್ರರು, ಸಹೋದರರು, ಪಿತೃಗಳು, ಮಾವಂದಿರು, ಗುರುಗಳು, ಸೋದರಮಾವಂದಿರು, ಪಿತಾಮಹರು, ಮಹಾತ್ಮರಾದ ಕ್ಷತ್ರಿಯರು, ಸಂಬಂಧಿಗಳು, ಸುಹೃದರು, ಸ್ನೇಹಿತರು, ಸೋದರಳಿಯಂದಿರು, ಜ್ಞಾತಿಗಳು, ನಾನಾದೇಶಗಳಿಂದ ಆಗಮಿಸಿದ್ದ ಅಸಂಖ್ಯಾತರಾದ ರಾಜರು–ಈ ಎಲ್ಲರನ್ನೂ ಸಂಹರಿಸಿದೆನು. ಆ ಭೂಪಾಲರೆಲ್ಲರೂ ಧರ್ಮನಿತ್ಯರಾಗಿದ್ದರು. ನೂರಾರು ಯಜ್ಞಗಳನ್ನು ಮಾಡಿ ಹಲವು ಬಾರಿ ಸೋಮಪಾನವನ್ನು ಮಾಡಿದ್ದರು. ಮಹಾವೀರರಾಗಿದ್ದರು. ತಪೋಧನರೇ! ಅಂತಹ ಮಹಾನುಭಾವರನ್ನು ಸಂಹರಿಸಿರುವ ನಾನು ಎಂತಹ ಫಲವನ್ನು ಪಡೆದುಕೊಂಡೇನು? ಈ ವಿಷಯವನ್ನೇ ಪುನಃ ಪುನಃ ಯೋಚಿಸುತ್ತಿರುವ ನಾನು ಸಂಕಟದಿಂದಾಗಿ ಬೆಂದುಹೋಗುತ್ತಿದ್ದೇನೆ. ಶ್ರೀಮಂತರಾದ ರಾಜಸಿಂಹರಿಂದ ಇಂದು ಈ ಭೂಮಂಡಲವು ಹೀನವಾಗಿರುವುದನ್ನು ಚಿಂತಿಸುತ್ತಾ ಸುಟ್ಟುಹೋಗುತ್ತಿದ್ದೇನೆ. ಜ್ಞಾತಿಗಳ ಘೋರ ವಧೆಯನ್ನೂ, ನೂರಾರು ಇತರ ರಾಜರ ಸಂಹಾರವನ್ನೂ ಮತ್ತು ಈ ಘೋರಯುದ್ಧದಲ್ಲಿ ಕೋಟ್ಯನುಕೋಟಿ ಜನರು ಪ್ರಾಣಬಿಟ್ಟಿರುವುದನ್ನೂ ನೋಡಿ ಬಹಳವಾಗಿ ಪರಿತಪಿಸುತ್ತಿದ್ದೇನೆ.

ಪಿತಾಮಹರೇ! ಮಕ್ಕಳನ್ನೂ, ಗಂಡಂದಿರನ್ನೂ, ಸಹೋದರರನ್ನೂ ಕಳೆದುಕೊಂಡಿರುವ ಶ್ರೇಷ್ಠರಾದ ಕ್ಷತ್ರಿಯಸ್ತ್ರೀಯರಿಗೆ ಎಂತಹ ದುರವಸ್ಥೆಯು ಬಂದಿತು? ಅವರೀಗ ತಮ್ಮ ಸಂಬಂಧಿಗಳೆಲ್ಲರ ವಿನಾಶಕ್ಕೆ ಕಾರಣರಾದ, ಅವರ ದೃಷ್ಟಿಯಿಂದ ಘೋರರೂಪಿಗಳಾಗಿರುವ, ವೃಷ್ಣಿಗಳಿಂದ ಕೂಡಿರುವ ಪಾಂಡವರನ್ನು ನಿಂದಿಸುತ್ತಾ–ಶಪಿಸುತ್ತಾ ದೀನರಾಗಿ, ದುರ್ಬಲರಾಗಿ ನೆಲದ ಮೇಲೆ ಬೀಳುತ್ತಿದ್ದಾರೆ. ಆ ಎಲ್ಲ ಸ್ತ್ರೀಯರೂ ತಮ್ಮ ಮಕ್ಕಳನ್ನೂ, ಪತಿಗಳನ್ನೂ, ಪಿತೃಗಳನ್ನೂ, ಸಹೋದರರನ್ನೂ ಕಾಣದೇ ಪ್ರಾಣಗಳನ್ನೂ ತ್ಯಾಗಮಾಡಿ ಯಮಲೋಕಕ್ಕೆ ಹೋಗುತ್ತಾರೆ. ಆ ಕುಲಸ್ತ್ರೀಯರು ತಮ್ಮ ಪತಿ-ಪುತ್ರ-ಪಿತೃ-ಭ್ರಾತೃಗಳ ಮೇಲಿರುವ ಅಧಿಕವಾದ ವಾತ್ಸಲ್ಯದ ಕಾರಣದಿಂದಾಗಿ ಪ್ರಾಣತೊರೆಯುವರೆಂಬುದರಲ್ಲಿ ನನಗೆ ಸಂಶಯವೇ ಇಲ್ಲ. ಧರ್ಮದ ಮಾರ್ಗವು ಅತಿಸೂಕ್ಷ್ಮವಾದುದರಿಂದ ನಿಶ್ಚಯವಾಗಿಯೂ ನಾವು ಅಸಂಖ್ಯಾತರಾದ ಕುಲಸ್ತ್ರೀಯರನ್ನು ವಧೆಮಾಡಿದ ಪಾಪಕ್ಕೂ ಭಾಗಿಗಳಾಗುತ್ತೇವೆ.

ಯದ್ವಯಂ ಸುಹೃದೋ ಹತ್ವಾ ಕೃತ್ವಾ ಪಾಪಮನನ್ತಕಮ್ ।
ನರಕೇ ನಿಪತಿಷ್ಯಾಮೋ ಹ್ಯಧಃಶಿರಸ ಏವ ಹ ॥೧೧॥

ನಾವು ನಮ್ಮ ಸುಹೃದರನ್ನು ಸಂಹರಿಸಿ ಅನಂತವಾದ ಪಾಪಮಾಡಿಬಿಟ್ಟಿದ್ದೇವೆ. (ಯಾವುದೇ ಪ್ರಾಯಶ್ಚಿತ್ತದಿಂದಲೂ ಈ ಅಪಾರವಾದ ಪಾಪವು ಪರಿಹಾರವಾಗುವ ಸಾಧ್ಯತೆಯೇ ಇಲ್ಲ.) ಈ ಪಾಪದ ಕಾರಣದಿಂದಾಗಿ ನಾವು ನರಕದಲ್ಲಿ ತಲೆಕೆಳಗಾಗಿ ಬೀಳುವೆವೆಂಬುದರಲ್ಲಿಯೂ ನನಗಾವ ಸಂಶಯವೂ ಇಲ್ಲ.

ಈ ಕಾರಣದಿಂದಲೇ ನಾವು ಅತ್ಯುಗ್ರವಾದ ತಪಸ್ಸನ್ನು ಮಾಡಿ ಶರೀರಗಳನ್ನು ತ್ಯಜಿಸುತ್ತೇವೆ. ಪಿತಾಮಹರೇ! ಸತ್ಪುರುಷರಲ್ಲಿ ಶ್ರೇಷ್ಠರಾದವರೇ! ಆಶ್ರಮಗಳ ವಿಶೇಷಧರ್ಮಗಳನ್ನು ತಿಳಿಸಿರಿ."

ಜನಮೇಜಯ! ಯುಧಿಷ್ಠಿರನು ಹೇಳಿದ ಮಾತನ್ನು ಕೇಳಿ ವ್ಯಾಸ ಮಹರ್ಷಿಗಳು ಯುಧಿಷ್ಠಿರನು ಕೇಳಿದ ವಿಷಯವನ್ನು ಬುದ್ಧಿಯಿಂದ ಚೆನ್ನಾಗಿ ಪರಿಶೀಲಿಸಿ ಪಾಂಡವನೊಡನೆ ಹೇಳಿದರು :

"ಮಹಾರಾಜ! ಕ್ಷತ್ರಿಯಶ್ರೇಷ್ಠನೇ! ಕ್ಷತ್ರಧರ್ಮವನ್ನು ಸ್ಮರಿಸಿಕೊಂಡು ವಿಷಾದಪಡುವುದನ್ನು ನಿಲ್ಲಿಸು. ಈ ಕ್ಷತ್ರಿಯರೆಲ್ಲರೂ ಸ್ವಧರ್ಮಾನುಸಾರವಾಗಿಯೇ ಹತರಾಗಿದ್ದಾರೆ. ಯುದ್ಧದಲ್ಲಿ ಪ್ರಾಣತ್ಯಾಗಮಾಡುವುದೇ ಕ್ಷತ್ರಿಯರಿಗೆ ಸ್ವಧರ್ಮ. ಭೂಮಂಡಲದಲ್ಲಿ ಸಮಗ್ರವಾದ ರಾಜ್ಯಲಕ್ಷ್ಮಿಯನ್ನೂ, ಪ್ರಥಿತವಾದ ಯಶಸ್ಸನ್ನೂ ಅಪೇಕ್ಷಿಸುತ್ತಾ ಯುದ್ಧಮಾಡುತ್ತಿದ್ದ ಆ ಎಲ್ಲ ರಾಜರೂ ಯಮರಾಜನ ನಿಯಮಕ್ಕೆ ಒಳಪಡುವ ಕಾಲವು ಸನ್ನಿಹಿತವಾದೊಡನೆಯೇ ನಿಧನಹೊಂದಿದರು.

**ನ ತ್ವಂ ಹನ್ತಾ ನ ಭೀಮೋಽಯಂ ನಾರ್ಜುನೋ ನ ಯಮಾವಪಿ ।**
**ಕಾಲಃ ಪರ್ಯಾಯಧರ್ಮೇಣ ಪ್ರಾಣಾನಾದತ್ತ ದೇಹಿನಾಮ್ ॥**

ನೀನೂ ಆ ರಾಜರ ಹಂತಕನಲ್ಲ. ಭೀಮಾರ್ಜುನ-ನಕುಲ-ಸಹದೇವರೂ ಅವರನ್ನು ಸಂಹಾರಮಾಡಲಿಲ್ಲ. ಕಾಲನು ಪರ್ಯಾಯಕ್ರಮದಿಂದ ದೇಹಿಗಳ (ಆ ರಾಜರ) ಪ್ರಾಣಗಳನ್ನು ಅಪಹರಿಸಿಕೊಂಡು ಹೋಗಿರುವನು.

**ನ ತಸ್ಯ ಮಾತಾಪಿತರೌ ನಾನುಗ್ರಾಹ್ಯೋ ಹಿ ಕಶ್ಚನ ।**
**ಕರ್ಮಸಾಕ್ಷೀ ಪ್ರಜಾನಾಂ ಯಸ್ತೇನ ಕಾಲೇನ ಸಂಹೃತಾಃ ॥೧೭॥**

ಕಾಲನಿಗೆ ತಂದೆಯೂ ಇಲ್ಲ. ತಾಯಿಯೂ ಇಲ್ಲ. ಕಾಲನು ಯಾರಿಗೂ ಅನುಗ್ರಹಮಾಡಲೂ ಹೋಗುವುದಿಲ್ಲ. ಯಾರು ಪ್ರಜೆಗಳು ಮಾಡುವ ಕರ್ಮಗಳಿಗೆ ಸಾಕ್ಷಿಯಾಗಿರುವನೋ–ಆ ಕಾಲನೇ ನಿನ್ನ ಶತ್ರುಗಳನ್ನೂ ಸಂಹಾರಮಾಡಿದ್ದಾನೆ.

**ಹೇತುಮಾತ್ರಮಿದಂ ತಸ್ಯ ವಿಹಿತಂ ಭರತರ್ಷಭ ।**
**ಯದ್ಧನ್ತಿ ಭೂತೈರ್ಭೂತಾನಿ ತದಸ್ಮೈ ರೂಪಮೈಶ್ವರಮ್ ॥೧೮॥**

ಭರತರ್ಷಭನೇ! ಕಾಲನಿಗೆ ಈ ಮಹಾಯುದ್ಧವು ಕೇವಲ ನಿಮಿತ್ತ ಮಾತ್ರವಾಗಿದ್ದಿತು. ಆ ಮಹಾಕಾಲನು ಪ್ರಾಣಿಗಳನ್ನು ಪ್ರಾಣಿಗಳ ಮೂಲಕವಾಗಿಯೇ ಸಂಹಾರಮಾಡಿಸುತ್ತಾನೆ. ಇದು ಕಾಲನ ಈಶ್ವರೀಯ ರೂಪವಾಗಿದೆ.

**ಕರ್ಮಸೂತ್ರಾತ್ಮಕಂ ವಿದ್ಧಿ ಸಾಕ್ಷಿಣಂ ಶುಭಪಾಪಯೋಃ ।**
**ಸುಖದುಃಖಗುಣೋದರ್ಕಂ ಕಾಲಂ ಕಾಲಫಲಪ್ರದಮ್ ॥೧೯॥**

ಯುಧಿಷ್ಠಿರ! ಕಾಲನು ಪ್ರಾಣಿಗಳ ಪುಣ್ಯ-ಪಾಪಗಳಿಗೆ ಸಾಕ್ಷಿಯಾಗಿದ್ದಾನೆ. ಅವನು ಪ್ರಾಣಿಗಳು ಮಾಡುವ ಕರ್ಮಗಳಿಗೆ ಸೂತ್ರಪ್ರಾಯನಾಗಿದ್ದು ಭವಿಷ್ಯದಲ್ಲಿ ಆ ಪ್ರಾಣಿಗಳ ಸುಖ-ದುಃಖಗಳ ಆವಿರ್ಭಾವಕ್ಕೆ ಕಾರಣನೂ ಮತ್ತು ಸಮಯಾನುಸಾರವಾಗಿ ( ತಕ್ಕ ಕಾಲದಲ್ಲಿ ) ಕರ್ಮಗಳಿಗೆ ಫಲ ಕೊಡುವವನೂ ಆಗಿದ್ದಾನೆಂಬುದನ್ನು ತಿಳಿ.

**ತೇಷಾಮಪಿ ಮಹಾಬಾಹೋ ಕರ್ಮಾಣಿ ಪರಿಚಿನ್ತಯ ।**
**ವಿನಾಶಹೇತುಕಾನಿ ತ್ವಂ ಯೈಸ್ತೇ ಕಾಲವಶಂ ಗತಾಃ ॥೨೦॥**

ಮಹಾಬಾಹುವೇ! ಯುದ್ಧದಲ್ಲಿ ಮಡಿದಿರುವ ದುರ್ಯೋಧನಾದಿಗಳು ಮಾಡಿರುವ ಶುಭಾಶುಭಕರ್ಮಗಳ ವಿಷಯವಾಗಿ ನೀನೇ ಪರ್ಯಾಲೋಚಿಸು. ಅವರೆಲ್ಲರೂ ವಿನಾಶಕ್ಕೆ ಕಾರಣವಾಗುವಂತಹ ದುಷ್ಕರ್ಮ ಗಳನ್ನೇ ಮಾಡಿದ್ದರು. ಆದುದರಿಂದಲೇ ಅವರು ಕಾಲವಶರಾದರು.

**ಆತ್ಮನಶ್ಚ ವಿಜಾನೀಹಿ ನಿಯತವ್ರತಶಾಸನಮ್ ।**
**ಯದಾ ತ್ವಮೀದೃಶಂ ಕರ್ಮ ವಿಧಿನಾಕ್ರಮ್ಯ ಕಾರಿತಃ ॥೨೧॥**

ನೀನು ಯಾವ ರೀತಿಯಲ್ಲಿ ಆಚಾರ-ವ್ಯವಹಾರಗಳನ್ನು ಇಟ್ಟುಕೊಂಡಿರುವೆಯೆಂಬುದನ್ನೂ ಗಮನಿಸು. ನಿನ್ನ ಕರ್ಮಗಳೆಲ್ಲವೂ ನಿಯತವಾದ ವ್ರತಾನುಷ್ಠಾನಗಳಿಂದಲೂ, ಸತ್ಸಂಪ್ರದಾಯಗಳಿಂದಲೂ, ಸದ್ಗುಣಗಳಿಂದಲೂ ಕೂಡಿದುವುಗಳಾಗಿದ್ದುವು. ಆದುದರಿಂದಲೇ ಕಾಲನು ಧರ್ಮಮೂರ್ತಿಯಾದ ನಿನ್ನನ್ನು ಬಲಾತ್ಕಾರಪೂರ್ವಕವಾಗಿ ಅಧೀನನನ್ನಾಗಿ ಮಾಡಿಕೊಂಡು ದುಷ್ಟವಾದ ಕರ್ಮಗಳನ್ನೇ ಮಾಡುತ್ತಿದ್ದ ದುರ್ಯೋಧನಾದಿಗಳನ್ನು ವಿನಾಶಗೊಳಿಸಿದನು. ( ನೀನು ನಿನಗೆ ಇಷ್ಟವಿಲ್ಲದಿದ್ದರೂ ಕಾಲನ ಒತ್ತಡಕ್ಕೆ ಸಿಕ್ಕಿ ಯುದ್ಧಮಾಡಿ ದುರ್ಯೋಧನಾದಿಗಳನ್ನು ಕೊಂದಿರುವೆ.)

**ತ್ವಷ್ಟ್ರೇವ ವಿಹಿತಂ ಯನ್ತ್ರಂ ಯಥಾ ಚೇಷ್ಟಯಿತುರ್ವಶೇ ।**
**ಕರ್ಮಣಾ ಕಾಲಯುಕ್ತೇನ ತಥೇದಂ ಚೇಷ್ಟತೇ ಜಗತ್ ॥೨೨॥**

ಯಾವ ರೀತಿಯಲ್ಲಿ ಬಡಗಿಯು ಮಾಡಿದ ಯಂತ್ರವೊಂದು ( ಕೀಲುಗೊಂಬೆಯು ) ಆಡಿಸುವವನ ವಶದಲ್ಲಿದ್ದು ಅವನು ಆಡಿಸಿದಂತೆ ಆಡುತ್ತಿರು

ತ್ತದೆಯೋ–ಅದೇ ರೀತಿಯಲ್ಲಿ ಬ್ರಹ್ಮನಿಂದ ನಿರ್ಮಿತವಾದ ಈ ಜಗತ್ತು ಕಾಲನ ವಶವಾಗಿ ಕಾಲನು ಆಡಿಸಿದಂತೆಯೇ ಆಡುತ್ತಿರುತ್ತದೆ.

(ವ್ಯಾಸರು ಮತ್ತೊಂದು ವಿಧಾನದಲ್ಲಿ ಯುಧಿಷ್ಠಿರನನ್ನು ಸಮಾಧಾನಗೊಳಿಸಲು ಯತ್ನಿಸುತ್ತಾರೆ. ಪ್ರಪಂಚವೆಲ್ಲವೂ ಕಾಲಾಧೀನವಾದುದು. ಕಾಲನು ಮನುಷ್ಯರ ಕರ್ಮಗಳಿಗೆ ಸಾಕ್ಷಿಯಾಗಿರುತ್ತಾನೆ. ಕಾಲನಿಗೆ ಫಲಕೊಡುವ ಸಾಮರ್ಥ್ಯವೂ ಇದೆ. ಪ್ರಸಕ್ತಸಮಯದಲ್ಲಿ ಕಾಲನು ದುರ್ಯೋಧನಾದಿಗಳು ಮಾಡಿದ ದುಷ್ಕರ್ಮಗಳಿಗೆ ಸಾಕ್ಷಿಯಾಗಿದ್ದು ಅದಕ್ಕೆ ತಕ್ಕುದಾದ ಫಲವನ್ನು ಕೊಟ್ಟನು. ಯುಧಿಷ್ಠಿರಾದಿಗಳು ಮಾಡುತ್ತಿದ್ದ ಸತ್ಕಾರ್ಯಗಳಿಗೂ ಸಾಕ್ಷಿಯಾಗಿದ್ದು ಅವರಿಗೆ ವಿಜಯದ ಫಲವನ್ನು ಕೊಟ್ಟನು. ಇದು ಕೇವಲ ಕಾಲಪುರುಷನ ಆಟವಾಗಿದೆ. ನಾವೆಲ್ಲರೂ ಕಾಲಪುರುಷನ ಅಧೀನರು. ಇದು ಹೀಗೆ ಏಕಾಯಿತೆಂದು ಯೋಚಿಸುವ ಸಾಮರ್ಥ್ಯವು ನಮಗಿಲ್ಲ. ಕಾಲನು ನಿಯಂತ್ರಿಸಿದಂತೆ ನಾವು ನಡೆದುಕೊಳ್ಳಬೇಕಾಗಿದೆ. ರಾಜಸೂಯಯಾಗಕ್ಕೆ ಮೊದಲೇ ಈ ವಿಷಯವು ಯುಧಿಷ್ಠಿರನಿಗೆ ತಿಳಿದಿದ್ದಿತು. ಯುಧಿಷ್ಠಿರನು ಈ ಮಹಾವಿನಾಶವನ್ನು ತಪ್ಪಿಸಲು ಸತತವಾಗಿ ಯತ್ನಿಸಿದನು. ಆದರೆ ಕಾಲನು ಅವನನ್ನೇ ನಿಮಿತ್ತವನ್ನಾಗಿ ಮಾಡಿಕೊಂಡು ವಿನಾಶಕಾರ್ಯವನ್ನು ಸಂಪೂರ್ಣವಾಗಿ ಮುಗಿಸಿಯೇ ಬಿಟ್ಟನು. ಯುದ್ಧವು ಕೊನೆಗೊಂಡರೂ ತನ್ನ ಮಕ್ಕಳ ವಿನಾಶವನ್ನು ತಪ್ಪಿಸಲು ಯುಧಿಷ್ಠಿರನಿಗೆ ಸಾಧ್ಯವಾಗಲೇ ಇಲ್ಲ. ಆದುದರಿಂದ ಇವೆಲ್ಲವೂ ಕಾಲನ ಮಹಿಮೆ. ದುರ್ಯೋಧನಾದಿಗಳನ್ನು ಸಂಹರಿಸಿದವನೂ ಕಾಲನೇ. ಅಭಿಮನ್ಯುವೇ ಮೊದಲಾದವರನ್ನು ಸಂಹರಿಸಿದವನೂ ಕಾಲನೇ ಆಗಿದ್ದಾನೆ. ಆದುದರಿಂದ 'ನಾನು ಎಲ್ಲರನ್ನೂ ಸಂಹರಿಸಿದೆನು'–ಎಂದು ಪರಿತಪಿಸುವ ಕಾರಣವಿಲ್ಲ–ಎಂಬುದು ವ್ಯಾಸರ ಅಭಿಪ್ರಾಯವಾಗಿದೆ.)

**ಪುರುಷಸ್ಯ ಹಿ ದೃಷ್ಟ್ವೇಮಾಮುತ್ಪತ್ತಿಮನಿಮಿತ್ತತಃ ।**
**ಯದೃಚ್ಛಯಾ ವಿನಾಶಂ ಚ ಶೋಕಹರ್ಷಾವನರ್ಥಕೌ ॥೨೩॥**

ಮನುಷ್ಯನ ಉತ್ಪತ್ತಿಗೆ ಕಾರಣವೇನೆಂಬುದು ನಮಗೆ ತಿಳಿಯದು. (ನಾವು ಏಕೆ ಮತ್ತು ಹೇಗೆ ಹುಟ್ಟಿದ್ದೇವೆಂಬುದು ನಮಗೆ ಗೊತ್ತಿಲ್ಲ.

ದುರ್ಯೋಧನನು ಏಕೆ ಹುಟ್ಟಿದನು? ಎಂಬುದೂ ನಮಗೆ ತಿಳಿದಿಲ್ಲ. ಅವನ ಹುಟ್ಟಿಗೆ ಕಾರಣವನ್ನು ನಾವು ಕೊಡಲಾರೆವು.) ಹುಟ್ಟಿದವನ ವಿನಾಶವೂ ಅವನ (ಕಾಲನ) ಇಚ್ಛೆಯಂತೆಯೇ ಆಗುತ್ತದೆ. ಯಾರೂ ನಾನು ಸಾಯುವೆನೆಂದು ಇಷ್ಟಪಟ್ಟು ತಮಗೆ ಇಚ್ಛೆಬಂದಾಗ ಸಾಯುವುದಿಲ್ಲ. ಎಲ್ಲಿಯೋ ಇರುತ್ತಾರೆ. ಹೇಗೋ ಇರುತ್ತಾರೆ. ಸತ್ತು ಹೋಗುತ್ತಾರೆ. ಪ್ರಾಣಿಗಳ ಹುಟ್ಟು-ಸಾವುಗಳೆರಡೂ ಕಾಲಪುರುಷನ ಅಧೀನಕ್ಕೆ ಸೇರಿರುವ ಸೂಕ್ಷ್ಮವಿಷಯಗಳು. ಆದುದರಿಂದ ಈ ಹುಟ್ಟು-ಸಾವುಗಳ ವಿಷಯವಾಗಿ ಹರ್ಷಪಡುವುದೇ ಆಗಲೀ ಶೋಕಪಡುವುದೇ ಆಗಲೀ ವ್ಯರ್ಥವೇ ಸರಿ.

**ವ್ಯಲೀಕಮಪಿ ಯತ್ತ್ವತ್ರ ಚಿತ್ತವೈತಂಸಿಕಂ ತವ।**
**ತದರ್ಥಮಿಷ್ಯತೇ ರಾಜನ್ಪ್ರಾಯಶ್ಚಿತ್ತಂ ತದಾಚರ ॥೨೪॥**

ಈ ಕಾರಣಗಳಿಂದ ನೀನು ದುರ್ಯೋಧನಾದಿಗಳನ್ನು ಸಂಹರಿಸಿರುವುದು ಸುಳ್ಳು. ಅವರೆಲ್ಲರೂ ತಮ್ಮ-ತಮ್ಮ ಕರ್ಮಾನುಸಾರವಾಗಿಯೇ ಹತರಾಗಿದ್ದಾರೆ. ಆದರೆ ನಾನೇ ಸಂಹಾರಮಾಡಿಬಿಟ್ಟೆನೆಂಬ ಮನಸ್ಸನ್ನು ಕಲಕುವ ಪೀಡೆಯು ನಿನ್ನನ್ನು ಕಾಡುತ್ತಿದೆ. ಈ ಭಾವನೆಯಿಂದಲೇ ನಿನ್ನ ಮನಸ್ಸು ಉದ್ವಿಗ್ನವಾಗಿದೆ. ಪಾಪದ ನಿವೃತ್ತಿಗಾಗಿ ಅನೇಕ ಪ್ರಾಯಶ್ಚಿತ್ತಗಳು ಉಕ್ತವಾಗಿವೆ. ಅದರಂತೆ ನೀನೂ ಪ್ರಾಯಶ್ಚಿತ್ತಾದಿಗಳನ್ನು ಮಾಡಿ ಮನಸ್ಸನ್ನು ನಿರ್ಮಲಗೊಳಿಸು.

ಯುಧಿಷ್ಠಿರ! ಹಿಂದೆ ನಡೆದ ದೇವಾಸುರರ ಯುದ್ಧಸಂಬಂಧದಲ್ಲಿನ ಇತಿಹಾಸವನ್ನು ಈ ಸಂದರ್ಭದಲ್ಲಿ ನಿನ್ನ ತಿಳಿವಳಿಕೆಗಾಗಿ ಹೇಳುತ್ತೇನೆ. ಅಸುರರು ಜ್ಯೇಷ್ಠಭ್ರಾತೃಗಳು. ದೇವತೆಗಳು ಕನಿಷ್ಠಭ್ರಾತೃಗಳು. ತ್ರೈಲೋಕ್ಯಾಧಿಪತ್ಯವನ್ನು ಯಾರು ಪಡೆದುಕೊಳ್ಳಬೇಕೆಂಬ ವಿಷಯದಲ್ಲಿಯೇ ಉಭಯ ಪಕ್ಷಗಳಿಗೂ ಘೋರವಾದ ಯುದ್ಧವೇ ನಡೆಯಿತು. ಆ ಮಹಾಯುದ್ಧವು ಮೂವತ್ತೆರಡು ಸಾವಿರ ವರ್ಷಗಳ ಪರ್ಯಂತವಾಗಿ ನಡೆಯಿತು. ಈ ಭೂಮಂಡಲವು ದೈತ್ಯರ ರಕ್ತದಿಂದಲೇ ತುಂಬಿಹೋಗಿದ್ದಿತು. ಭೂಮಂಡಲದ ಸುತ್ತಲೂ ಇದ್ದ ಸಮುದ್ರಗಳೂ ಕೂಡಿಕೊಂಡು ಎಲ್ಲೆಡೆಗಳಲ್ಲಿಯೂ

ರಕ್ತಸಮುದ್ರವೇ ಇರುವುದೋ ಎಂಬಂತೆ ಕಾಣುತ್ತಿದ್ದಿತು. ಹೀಗೆ ದೇವತೆಗಳು ತಮ್ಮ ಹಿರಿಯ ಸಹೋದರರಾದ ದೈತ್ಯರನ್ನು ಸಂಹರಿಸಿ ಸ್ವರ್ಗಲೋಕವನ್ನು ಪಡೆದುಕೊಂಡರು.

ವೇದ-ವೇದಾಂಗಪಾರಂಗತರಾಗಿದ್ದ, ಮೂರು ಲೋಕಗಳಲ್ಲಿಯೂ ಶಾಲಾವೃಕರೆಂದು ಪ್ರಸಿದ್ಧರಾಗಿದ್ದ ಎಂಬತ್ತೆಂಟು ಸಾವಿರ ಬ್ರಾಹ್ಮಣರು, ದರ್ಪದಿಂದ ಮೋಹವಶರಾಗಿ ದಾನವರಿಗೆ ಸಹಾಯಮಾಡುವ ಸಲುವಾಗಿ ಅವರ ಪಕ್ಷವನ್ನು ಸೇರಿದ್ದರು. ದೇವತೆಗಳು ಅವರೆಲ್ಲರನ್ನೂ ಸಂಹರಿಸಿ ಈ ಭೂಮಂಡಲವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು.

**ಧರ್ಮವ್ಯುಚ್ಛಿತ್ತಿಮಿಚ್ಛನ್ತೋ ಯೇಽಧರ್ಮಸ್ಯ ಪ್ರವರ್ತಕಾಃ ।**
**ಹನ್ತವ್ಯಾಸ್ತೇ ದುರಾತ್ಮಾನೋ ದೇವೈರ್ದೈತ್ಯಾ ಇವೋಲ್ಬಣಾಃ ॥೩೦॥**

ಧರ್ಮಮಾರ್ಗವೇ ಸಂಪೂರ್ಣವಾಗಿ ಕಡಿದುಹೋಗಬೇಕೆಂಬ ಇಚ್ಛೆಯಿಂದ ಯಾರು ಅಧರ್ಮಪ್ರವರ್ತಕರಾಗಿರುತ್ತಾರೆಯೋ, ಅಂತಹ ದುರಾತ್ಮರನ್ನು–ದೇವತೆಗಳು ಉದ್ಧತರಾದ ದೈತ್ಯರನ್ನು ಸಂಹರಿಸಿದಂತೆ–ಸಂಹಾರ ಮಾಡಲೇಬೇಕು.

**ಏಕಂ ಹತ್ವಾ ಯದಿ ಕುಲೇ ಶಿಷ್ಟಾನಾಂ ಸ್ಯಾದನಾಮಯಮ್ ।**
**ಕುಲಂ ಹತ್ವಾ ಚ ರಾಷ್ಟ್ರಂ ಚ ನ ತದ್ವೃತ್ತೋಪಘಾತಕಮ್ ॥೩೧॥**

ಒಂದು ಕುಲದಲ್ಲಿ ಒಬ್ಬನನ್ನು (ನೀಚನಾದ ಒಬ್ಬನನ್ನು) ಸಂಹರಿಸುವುದರಿಂದ ಉಳಿದ ಸತ್ಪುರುಷರಿಗೆ ಕ್ಷೇಮವುಂಟಾಗುವುದಾದರೆ–ಅಂತಹವನನ್ನು ಸಂಹಾರಮಾಡುವುದೇ ಯುಕ್ತವಾದುದು. ಒಂದು ವೇಳೆ ಒಂದು ಕುಲವನ್ನೇ ಸಂಪೂರ್ಣವಾಗಿ ವಿನಾಶಮಾಡುವುದರಿಂದ ರಾಷ್ಟ್ರವನ್ನೇ ವಿಪತ್ತಿನಿಂದ ಪಾರುಮಾಡುವ ಸಾಧ್ಯತೆಯಿದ್ದರೆ–ಅಂತಹ ಕುಲವನ್ನೇ ವಿನಾಶಗೊಳಿಸಬಹುದು. ಹೀಗೆ ಮಾಡುವುದರಿಂದ ಸದಾಚಾರವನ್ನಾಗಲೀ–ಧರ್ಮವನ್ನಾಗಲೀ ನಾಶಮಾಡಿದಂತಾಗುವುದಿಲ್ಲ.

**ಅಧರ್ಮರೂಪೋ ಧರ್ಮೋ ಹಿ ಕಶ್ಚಿದಸ್ತಿ ನರಾಧಿಪ ।**
**ಧರ್ಮಶ್ಚಾಧರ್ಮರೂಪೋಽಸ್ತಿ ತಚ್ಚ ಜ್ಞೇಯಂ ವಿಪಶ್ಚಿತಾ ॥೩೨॥**

ಕೆಲವು ಸಂದರ್ಭಗಳಲ್ಲಿ ಮಾಡುವ ಕರ್ಮವು ಅಧರ್ಮರೂಪವಾಗಿ ತೋರಬಹುದು. ಆದರೆ ಸರಿಯಾಗಿ ಸಮಾಲೋಚಿಸಿದರೆ ಅದು ಧರ್ಮ ಕಾರ್ಯವೇ ಆಗಿರುತ್ತದೆ. ಹಾಗೆಯೇ ಕೆಲವು ಸಮಯಗಳಲ್ಲಿ ಮಾಡುವ ಪಾಪಕರ್ಮವು ಧರ್ಮರೂಪವಾಗಿಯೇ ತೋರಬಹುದು. ಆದರೆ ಸರಿಯಾಗಿ ಸಮಾಲೋಚಿಸಿದರೆ ಅದು ಅಧರ್ಮಕ್ರಿಯೆಯೇ ಆಗಿರುತ್ತದೆ. ಆದುದರಿಂದ ಕುಶಲನಾದ ವಿದ್ವಾಂಸನು ಧರ್ಮಾಧರ್ಮಗಳ ಸೂಕ್ಷ್ಮರಹಸ್ಯವನ್ನು ಸುವಿಹಿತವಾದ ರೀತಿಯಲ್ಲಿ ತಿಳಿದುಕೊಳ್ಳಬೇಕು. ಯುಧಿಷ್ಠಿರ! ನೀನು ವೇದ-ವೇದಾಂಗಗಳನ್ನೂ ತಿಳಿದುಕೊಂಡಿರುವೆ. ಶ್ರೇಷ್ಠಪುರುಷರು ಮಾಡಿರುವ ಉಪದೇಶಗಳನ್ನೂ ಕೇಳಿರುವೆ. ಆದುದರಿಂದ ಮನಸ್ಸನ್ನು ಸ್ಥಿರಗೊಳಿಸು. ದುಃಖದಿಂದ ವಿಚಲಿತನಾಗಬೇಡ. ಹಿಂದೆ ದೇವತೆಗಳು ಯಾವ ಮಾರ್ಗವನ್ನು ಅನುಸರಿಸಿದ್ದರೋ ಅದೇ ಮಾರ್ಗವನ್ನೇ ಈಗ ನೀನೂ ಅನುಸರಿಸಿರುವೆ. ಪಾಂಡವಶ್ರೇಷ್ಠನೇ! ನಿನ್ನಂತಹವರು ಖಂಡಿತವಾಗಿಯೂ ನರಕಕ್ಕೆ ಹೋಗುವುದಿಲ್ಲ. ಪರಂತಪನೇ! ಇನ್ನಾದರೂ ನೀನು ನಿನ್ನ ಅನುಜರನ್ನೂ ಸುಹೃದರನ್ನೂ ಸಂತಯಿಸು.

**ಯೋ ಹಿ ಪಾಪಸಮಾರಮ್ಭೋ ಕಾರ್ಯೇ ತದ್ಭಾವಭಾವಿತಃ ।**
**ಕುರ್ವನ್ನಪಿ ತಥೈವ ಸ್ಯಾತ್ಕೃತ್ವಾ ಚ ನಿರಪತ್ರಪಃ ॥೩೫॥**

**ತಸ್ಮಿಂಸ್ತತ್ಕಲುಷಂ ಸರ್ವಂ ಸಮಾಪ್ತಮಿತಿ ಶಬ್ದಿತಮ್ ।**
**ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ಹ್ರಾಸೋ ವಾ ಪಾಪಕರ್ಮಣಃ ॥೩೬॥**

ಯಾವ ಮನುಷ್ಯನು ಮನಸ್ಸಿನಲ್ಲಿ ಪಾಪದ ಭಾವನೆಯನ್ನಿಟ್ಟುಕೊಂಡು ಕ್ರಮೇಣ ಆ ಭಾವನೆಯಿಂದಲೇ ಪ್ರಭಾವಿತನಾಗಿ ಪಾಪಕರ್ಮದಲ್ಲಿ ಪ್ರವೃತ್ತನಾಗುತ್ತಾನೆಯೋ–ಆ ಪಾಪಕರ್ಮವನ್ನು ಪೂರ್ಣಗೊಳಿಸಿದ ಮೇಲೆಯೂ ತಾನು ಮಾಡಿದ ಪಾಪಕರ್ಮಕ್ಕಾಗಿ ನಾಚಿಕೆಪಡುವುದಿಲ್ಲವೋ–ಅಂತಹವನಲ್ಲಿ ಆ ಮಹಾಪಾಪವು ಪೂರ್ಣರೂಪದಲ್ಲಿ ಪ್ರತಿಷ್ಠಿತವಾಗಿರುತ್ತದೆಂದು ಶಾಸ್ತ್ರವು ಹೇಳುತ್ತದೆ. ಅಂತಹವನಿಗೆ ಯಾವ ಪ್ರಾಯಶ್ಚಿತ್ತವೂ ಇರುವುದಿಲ್ಲ. ಒಂದು ವೇಳೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಂಡರೂ ಪಾಪಿಷ್ಠನಾದ ಅವನ ಪಾಪವು ಸ್ವಲ್ಪವಾದರೂ ಕಡಿಮೆಯಾಗುವುದಿಲ್ಲ.

**ತ್ವಂ ತು ಶುಕ್ಲಾಭಿಜಾತೀಯಃ ಪರದೋಷೇಣ ಕಾರಿತಃ ।**
**ಅನಿಚ್ಛಮಾನಃ ಕರ್ಮೇದಂ ಕೃತ್ವಾ ಚ ಪರಿತಪ್ಯಸೇ ॥೩೭॥**

ಧರ್ಮಜ! ನೀನಾದರೋ ಜನ್ಮತಃ ಶುದ್ಧಸ್ವಭಾವದವನಾಗಿಯೇ ಇರುವೆ. ನಿನಗೆ ಯುದ್ಧಮಾಡಬೇಕೆಂಬ ಇಚ್ಛೆಯು ಸ್ವಲ್ಪವಾದರೂ ಇರಲಿಲ್ಲ. ಶತ್ರುಗಳ ಅಪರಾಧದ ಕಾರಣದಿಂದ ನೀನು ಅನಿವಾರ್ಯವಾಗಿ ಯುದ್ಧಕ್ಕಿಳಿಯಲೇ ಬೇಕಾಯಿತು. ನಿನಗೆ ಸಂಪೂರ್ಣವಾಗಿ ಮನಸ್ಸಿಲ್ಲದಿದ್ದರೂ ಈ ಯುದ್ಧವನ್ನು ಪೂರ್ಣಗೊಳಿಸಿರುವೆ. ಪೂರ್ಣಗೊಳಿಸಿದನಂತರವೂ ಸಂತೋಷಪಡುವುದಕ್ಕೆ ಬದಲಾಗಿ ಪರಿತಪಿಸುತ್ತಿರುವೆ.

ನಿನಗೆ ಇಚ್ಛೆಯಿಲ್ಲದಿದ್ದರೂ ನಡೆದುಹೋದ ಸರ್ವವಿನಾಶಕ್ಕೆ ನಿಮಿತ್ತ ಭೂತನಾದುದಕ್ಕೆ ಪರಿತಪಿಸಬೇಡ. ಇದಕ್ಕೆ ಅಶ್ವಮೇಧಮಹಾಯಜ್ಞವು ಪ್ರಾಯಶ್ಚಿತ್ತವಾಗಿ ಹೇಳಿದೆ. ನೀನು ಆ ಮಹಾಯಜ್ಞವನ್ನು ಮಾಡು. ಆದರಿಂದ ನೀನು ಪಾಪರಹಿತನಾಗುವೆ. (ನಿನ್ನ ಮನಸ್ಸಿನಲ್ಲಿರುವ ಕಲ್ಮಷವು ದೂರವಾಗುವುದು.)

ಭಗವಾನ್ ಇಂದ್ರನು ಮರುದ್ಗಣಸಹಿತನಾಗಿ ಶತ್ರುಗಳಾದ ದೈತ್ಯರನ್ನು ಜಯಿಸುತ್ತಾ, ಒಮ್ಮೊಮ್ಮೆ ಜಯಿಸಿದಾಗಲೂ ಒಂದೊಂದು ಅಶ್ವಮೇಧವನ್ನು ಮಾಡುತ್ತಿದ್ದನು. ಹೀಗೆ ಪ್ರಾಯಶ್ಚಿತ್ತರೂಪವಾಗಿ ನೂರು ಅಶ್ವಮೇಧಗಳನ್ನು ಮಾಡಿ 'ಶತಕ್ರತು' ಎಂಬ ಅನ್ವರ್ಥನಾಮದಿಂದಲೂ ಪ್ರಸಿದ್ಧನಾದನು. ಆ ನೂರು ಅಶ್ವಮೇಧಯಾಗಗಳನ್ನು ಮಾಡಿದನಂತರ ಇಂದ್ರನು ಪಾಪರಹಿತ ನಾಗಿ ಸ್ವರ್ಗಲೋಕವನ್ನು ಜಯಿಸಿ ಸುಖದಾಯಕವಾದ ಪುಣ್ಯಲೋಕಗಳಿಗೆ ಹೋಗಿ ದೇವತೆಗಳ ಸಮೂಹದಿಂದ ಪರಿವೃತನಾಗಿ ಎಲ್ಲ ದಿಕ್ಕುಗಳನ್ನೂ ತನ್ನ ದಿವ್ಯವಾದ ಕಾಂತಿಯಿಂದ ಬೆಳಗುತ್ತಾ ಪ್ರಕಾಶಿಸಿದನು. ಸ್ವರ್ಗಲೋಕದಲ್ಲಿ ಅಪ್ಸರೆಯರಿಂದ ಸೇವಿಸಲ್ಪಡುವ, ದೇವೇಶ್ವರನಾದ, ಶಚೀಪತಿಯಾದ ಇಂದ್ರನನ್ನು ದೇವತೆಗಳೂ ಮತ್ತು ಋಷಿಗಳೂ ಸರ್ವದಾ ಉಪಾಸನೆ ಮಾಡುತ್ತಿದ್ದಾರೆ.

ನಿಷ್ಪಾಪನೇ! ನಿನ್ನ ಪರಾಕ್ರಮದಿಂದಾಗಿ ಈ ಭೂಮಂಡಲವು ನಿನ್ನ ವಶವಾಗಿದೆ. ನಿನ್ನ ಭುಜಬಲ-ಪರಾಕ್ರಮಗಳಿಂದ ಎಲ್ಲ ರಾಜರನ್ನೂ ಜಯಿ

ಸಿರುವೆ. ಸುಹೃದರಿಂದ ಕೂಡಿಕೊಂಡು ನಿನ್ನಿಂದ ಹತರಾದ ರಾಜರ ಪಟ್ಟಣಗಳಿಗೂ ಮತ್ತು ರಾಷ್ಟ್ರಗಳಿಗೂ ಹೋಗಿ, ಆ ರಾಜರ ಅನುಜರನ್ನಾಗಲೀ, ಮಕ್ಕಳನ್ನಾಗಲೀ, ಮೊಮ್ಮಕ್ಕಳನ್ನಾಗಲೀ ರಾಜ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡು. ಒಂದು ವೇಳೆ ಆ ರಾಜರ ಉತ್ತರಾಧಿಕಾರಿಗಳು ಬಾಲಕರಾಗಿಯೋ ಅಥವಾ ಗರ್ಭಸ್ಥರಾಗಿಯೋ ಇದ್ದರೆ–ಅಲ್ಲಿ ಪ್ರಜೆಗಳಿಗೂ ಮತ್ತು ರಾಜಪರಿವಾರದವರಿಗೂ ಮುಂದೆ ಆ ಶಿಶುವನ್ನೇ ರಾಜಗದ್ದುಗೆಯಲ್ಲಿ ಕುಳ್ಳಿರಿಸಿ ಪಟ್ಟಗಟ್ಟುವುದಾಗಿ ಆಶ್ವಾಸನೆಯನ್ನಿತ್ತು ಸಂತೈಸಿ, ಎಲ್ಲ ಪ್ರಜೆಗಳನ್ನೂ ಸಂತೋಷಗೊಳಿಸುತ್ತಾ ಈ ಭೂಮಂಡಲವನ್ನು ಸಂರಕ್ಷಣೆ ಮಾಡು.

**ಕುಮಾರೋ ನಾಸ್ತಿ ಯೇಷಾಂ ಚ ಕನ್ಯಾಸ್ತತ್ರಾಭಿಷೇಚಯ ।**
**ಕಾಮಾಶಯೋ ಹಿ ಸ್ತ್ರೀವರ್ಗಃ ಶೋಕಮೇವಂ ಪ್ರಹಾಸ್ಯಸಿ ॥೪೫॥**

ಒಂದು ವೇಳೆ ಯಾವುದಾದರೂ ರಾಜವಂಶದಲ್ಲಿ ಗಂಡುಮಗನಿಲ್ಲದಿದ್ದರೆ ಕುಮಾರಿಯರನ್ನೇ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡು. ಹೀಗೆ ಮಾಡುವುದರಿಂದ ಅಂತಃಪುರಸ್ತ್ರೀಯರ ಕಾಮನೆಯು ಪೂರ್ಣವಾದಂತಾಗಿ ಅವರ ಶೋಕವನ್ನು ಪರಿಹರಿಸಿದಂತಾಗುತ್ತದೆ.

ಹೀಗೆ ನಿನ್ನ ಚಕ್ರಾಧಿಪತ್ಯಕ್ಕೊಳಪಟ್ಟಿರುವ ಎಲ್ಲ ರಾಷ್ಟ್ರಗಳಲ್ಲಿಯೂ ಸಂಚರಿಸಿ, ಅಲ್ಲಿರುವ ಪ್ರಜೆಗಳಿಗೂ ರಾಜಮನೆತನದವರಿಗೂ ಯಥಾಸೂಕ್ತವಾದ ಆಶ್ವಾಸನೆಗಳನ್ನಿತ್ತು ಸಂತೈಸಿ–ವಿಜಯಿಯಾದ ಇಂದ್ರನು ಹಿಂದೆ ಅಶ್ವಮೇಧವನ್ನು ಮಾಡಿದಂತೆ–ನೀನೂ ಅಶ್ವಮೇಧಮಹಾಯಜ್ಞವನ್ನು ಮಾಡು. ಕ್ಷತ್ರಿಯಶ್ರೇಷ್ಠನೇ! ಯುದ್ಧದಲ್ಲಿ ಮಡಿದಿರುವ ಮಹಾತ್ಮರಾದ ಕ್ಷತ್ರಿಯರ ವಿಷಯವಾಗಿ ನೀನು ಶೋಕಿಸುವ ಕಾರಣವಿಲ್ಲ. ಕಾಲರೂಪನಾದ ಕೃತಾಂತನ ಬಲದಿಂದ ವಿಮೋಹಿತರಾದ ಅವರೆಲ್ಲರೂ ತಮ್ಮ-ತಮ್ಮ ಕ್ರಿಯೆಗಳಿಂದಲೇ ನಾಶಹೊಂದಿರುತ್ತಾರೆ. ( ಅವರ ವಿನಾಶಕ್ಕೆ ನೀನು ಕಿಂಚಿತ್ತಾದರೂ ಕಾರಣನಲ್ಲ. ) ನೀನು ಕ್ಷತ್ರಧರ್ಮಾನುಸಾರವಾಗಿ ವ್ಯವಹರಿಸಿರುವೆ. ಇದರ ಫಲವಾಗಿಯೇ ನಿನಗಿಂದು ನಿಷ್ಕಂಟಕವಾದ ರಾಜ್ಯವು ಲಭಿಸಿದೆ. ಯಾವ

ಧರ್ಮವು ನಿನಗೆ ಪರಲೋಕದಲ್ಲಿಯೂ ಶ್ರೇಯಸ್ಸನ್ನುಂಟುಮಾಡುತ್ತದೆಯೋ, ಅಂತಹ ಶ್ರೇಷ್ಠವಾದ ಧರ್ಮವನ್ನು ರಕ್ಷಿಸು.”

೩೩ನೆಯ ಅಧ್ಯಾಯವು ಮುಗಿಯಿತು.

೩೪ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯಾವ ಕರ್ಮವನ್ನು ಮಾಡುವುದರಿಂದ ಮನುಷ್ಯನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು ಮತ್ತು ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದರಿಂದ ಕರ್ಮದ ಪಾಪವು ಪರಿಹಾರವಾಗುತ್ತದೆಂಬುದರ ವಿವೇಚನೆ

ಜನಮೇಜಯ! ಯುಧಿಷ್ಠಿರನು ವ್ಯಾಸರನ್ನು ಪ್ರಶ್ನಿಸುತ್ತಾನೆ :

**ಕಾನಿ ಕೃತ್ವೇಹ ಕರ್ಮಾಣಿ ಪ್ರಾಯಶ್ಚಿತ್ತೀಯತೇ ನರಃ ।**
**ಕಿಂ ಕೃತ್ವಾ ಮುಚ್ಯತೇ ತತ್ರ ತನ್ಮೇ ಬ್ರೂಹಿ ಪಿತಾಮಹ ॥೧॥**

“ಪಿತಾಮಹರೇ! ಯಾವ ಕರ್ಮಗಳನ್ನು ಮಾಡುವುದರಿಂದ ಮನುಷ್ಯನು ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳಬೇಕಾಗುತ್ತದೆ? ಯಾವ ವಿಧವಾದ ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುವುದರಿಂದ ಪಾಪಕರ್ಮಮಾಡಿ ದವನು ಪಾಪದಿಂದ ವಿಮುಕ್ತಿಯನ್ನು ಹೊಂದುತ್ತಾನೆ?–ಈ ವಿಷಯವನ್ನು ಹೇಳಿರಿ.”

**ಅಕುರ್ವನ್ವಿಹಿತಂ ಕರ್ಮ ಪ್ರತಿಷಿದ್ಧಾನಿ ಚಾಚರನ್ ।**
**ಪ್ರಾಯಶ್ಚಿತ್ತೀಯತೇ ಹ್ಯೇವಂ ನರೋ ಮಿಥ್ಯಾನುವರ್ತಯನ್ ॥೨॥**

“ಯುಧಿಷ್ಠಿರ! ವೇದ-ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡದೇ ಇರುವವನೂ ಮತ್ತು ವೇದ-ಶಾಸ್ತ್ರಪ್ರತಿಷಿದ್ಧವಾದ ಕರ್ಮಗಳನ್ನು ಮಾಡು ವವನೂ–ವಿಪರೀತವಾದ ಆಚರಣೆಯನ್ನು ಮಾಡಿದಂತಾಗುವುದರಿಂದ ಪ್ರಾಯಶ್ಚಿತ್ತಕ್ಕೆ ಭಾಗಿಯಾಗುತ್ತಾನೆ.

**ಸೂರ್ಯೇಣಾಭ್ಯುದಿತೋ ಯಶ್ಚ ಬ್ರಹ್ಮಚಾರೀ ಭವತ್ಯುತ ।**
**ತಥಾ ಸೂರ್ಯಾಭಿನಿರ್ಮುಕ್ತಃ *ಕುನಖೀ ಶ್ಯಾವದನ್ನಪಿ ॥೩॥**

---

* ಕುನಖಿಗಳೂ ಮತ್ತು ಶ್ಯಾವದಂತಕರೂ ಈ ಜನ್ಮದಲ್ಲಿ ಪಾಪಮಾಡದಿದ್ದರೂ ಪೂರ್ವ

ಸೂರ್ಯೋದಯ–ಸೂರ್ಯಾಸ್ತಸಮಯಗಳಲ್ಲಿ ಮಲಗಿರುವ ಬ್ರಹ್ಮಚಾರಿಯು ಪ್ರಾಯಶ್ಚಿತ್ತಕ್ಕೆ ಭಾಗಿಯಾಗುತ್ತಾನೆ. ಉಗುರುಗಳು ಕಪ್ಪಾಗಿರುವವನೂ, ಹಲ್ಲುಗಳು ಕಪ್ಪಾಗಿರುವವನೂ ಪ್ರಾಯಶ್ಚಿತ್ತಕ್ಕೆ ಭಾಗಿಯಾಗುತ್ತಾನೆ.

ಪರಿವಿತ್ತಿಃ ಪರಿವೇತ್ತಾ ಬ್ರಹ್ಮಘ್ನೋ ಯಶ್ಚ ಕುತ್ಸಕಃ ।
ದಿಧಿಷೂಪಪತಿರ್ಯಃ ಸ್ಯಾದಗ್ರೇ ದಿಧಿಷುರೇವ ಚ ॥೪॥

ಅವಕೀರ್ಣೀ ಭವೇದ್ಯಶ್ಚ ದ್ವಿಜಾತಿವಧಕಸ್ತಥಾ ।
ಅತೀರ್ಥೇ ಬ್ರಾಹ್ಮಣಸ್ತ್ಯಾಗೀ ತೀರ್ಥೇ ಚಾಪ್ರತಿಪಾದಕಃ ॥೫॥

ಗ್ರಾಮಘಾತೀ ಚ ಕೌಂತೇಯ ಮಾಂಸಸ್ಯ ಪರಿವಿಕ್ರಯೀ ।
ಯಶ್ಚಾಗ್ನೀನಪವಿಧ್ಯೇತ ತಥೈವ ಬ್ರಹ್ಮವಿಕ್ರಯೀ ॥೬॥

ಸ್ತ್ರೀಶೂದ್ರವಧಕೋ ಯಶ್ಚ ಪೂರ್ವಃ ಪೂರ್ವಸ್ತು ಗರ್ಹಿತಃ ।
ಯಥಾ ಪಶುಸಮಾಲಮ್ಭೀ ಗೃಹದಾಹಸ್ಯ ಕಾರಕಃ ॥೭॥

ಅನೃತೇನೋಪವರ್ತೀ ಚ ಪ್ರತಿರೋದ್ಧಾ ಗುರೋಸ್ತಥಾ ।
ಏತಾನ್ಯೇನಾಂಸಿ ಸರ್ವಾಣಿ ವ್ಯುತ್ಕ್ರಾನ್ತಸಮಯಶ್ಚ ಯಃ ॥೮॥

ತಮ್ಮನಿಗೆ ವಿವಾಹವಾದರೂ ವಿವಾಹಿತನಾಗದಿರುವ ಅಣ್ಣ ; ಅಣ್ಣನಿಗೆ ಮದುವೆಯಾಗುವ ಮೊದಲೇ ವಿವಾಹವಾದ ತಮ್ಮ ; ಬ್ರಹ್ಮಹತ್ಯೆಮಾಡಿದವನು ; ಇತರರನ್ನು ನಿಂದೆಮಾಡುವವನು ; ಎರಡನೆಯ ಮದುವೆಮಾಡಿಕೊಂಡವಳು ಅಥವಾ ಉಪಪತಿಯನ್ನಿಟ್ಟುಕೊಂಡಿರುವವಳು–(' ದಿಧಿಷೂ '

---

ಜನ್ಮದಲ್ಲಿ ಪಾಪಮಾಡಿ ಕುನಖಿಗಳಾಗಿಯೂ ( ಕಪ್ಪಾದ ಉಗುರುಗಳುಳ್ಳವರಾಗಿಯೂ ) ಶ್ಯಾಮದಂತಕರಾಗಿಯೂ ( ಕಪ್ಪಾದ ಹಲ್ಲುಗಳುಳ್ಳವರಾಗಿಯೂ ) ಹುಟ್ಟಿದವರು. **ಸ್ವರ್ಣಹಾರೀ ತು ಕುನಖೀ ಸುರಾಪಃ ಶ್ಯಾವದನ್ತಕಃ** ( ಕರ್ಮವಿಪಾಕ )–ಹಿಂದಿನ ಜನ್ಮದಲ್ಲಿ ಚಿನ್ನವನ್ನು ಕದ್ದವನು ಕುನಖಿಯಾಗಿಯೂ ಸುರಾಪಾನವನ್ನು ಮಾಡಿದವನು ಶ್ಯಾಮದಂತಕನಾಗಿಯೂ ಹುಟ್ಟುತ್ತಾನೆ. ಸೂರ್ಯಾಸ್ತಮಯಸಮಯದಲ್ಲಿ ಮತ್ತು ಸೂರ್ಯೋದಯಸಮಯದಲ್ಲಿ ಮಲಗುವ ಬ್ರಹ್ಮಚಾರಿಗೆ ಯಾವ ಪ್ರಾಯಶ್ಚಿತ್ತವೋ ಕುನಖಿ ಮತ್ತು ಶ್ಯಾಮದಂತರಿಗೂ ಅದೇ ಪ್ರಾಯಶ್ಚಿತ್ತ.

ಉಪಪತಿಯು 'ದಿಧಿಷು'. ಅವನು ದ್ವಿಜನಾದರೆ 'ಅಗ್ರೇದಿಧಿಷು';* ಸ್ತ್ರೀಸಂಗಾದಿಗಳಿಂದ ವ್ರತವನ್ನು ನಾಶಪಡಿಸಿಕೊಂಡವನು (ಬ್ರಹ್ಮಚಾರೀ) ; ದ್ವಿಜರನ್ನು ಕೊಲೆಮಾಡಿದವನು ; ಅಪಾತ್ರರಲ್ಲಿ ದಾನಮಾಡಿದವನು ; ಸತ್ಪಾತ್ರರಲ್ಲಿ ದಾನಮಾಡದವನು ; ಗ್ರಾಮವನ್ನು ನಾಶಗೊಳಿಸಿದವನು ; ಮಾಂಸವನ್ನು ಮಾರುವವನು ; ಅಗ್ನಿಗಳನ್ನು ತಿರಸ್ಕರಿಸುವವನು ; ವೇದವನ್ನು ವಿಕ್ರಯಮಾಡುವವನು ( ಹಣಕ್ಕಾಗಿ ವೇದವನ್ನು ಹೇಳಿಕೊಡುವವನು ) ; ಸ್ತ್ರೀಯರನ್ನೂ ಶೂದ್ರರನ್ನೂ ವಧೆಮಾಡಿದವನು–ಈ ವರ್ಗದಲ್ಲಿ ಮೊದಲು-ಮೊದಲನೆಯವರು ಕಡೆ-ಕಡೆಯವರಿಂದಲೂ ಹೆಚ್ಚು ಪಾಪಿಷ್ಠರಾಗಿರುತ್ತಾರೆ. ಪಶುಗಳನ್ನು ವಧೆಮಾಡುವವನು ; ಮನೆಗೆ ಬೆಂಕಿಯನ್ನಿಡಿಸುವವನು ; ಸುಳ್ಳುಹೇಳಿಕೊಂಡು ಜೀವನವನ್ನು ನಡೆಸುವವನು ; ಗುರುವನ್ನು ಅವಮಾನಗೊಳಿಸುವವನು ; ಮಾಡಿದ ಪ್ರತಿಜ್ಞೆಯನ್ನು ಉಲ್ಲಂಘಿಸಿದವನು ; ಸದಾಚಾರ ಮರ್ಯಾದೆಯನ್ನು ಉಲ್ಲಂಘಿಸುವವನು–ಇವರೆಲ್ಲರೂ ಪಾಪಿಗಳಾಗುತ್ತಾರೆ. ಆದುದರಿಂದ ಇವರೆಲ್ಲರೂ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲೇಬೇಕು.

ಧರ್ಮಜ! ಲೋಕಕ್ಕೂ–ವೇದಕ್ಕೂ ವಿರುದ್ಧವಾದ ಅಕಾರ್ಯಗಳು ಯಾವುವೆಂಬುದನ್ನು ಹೇಳುತ್ತೇನೆ. ಅವುಗಳೆಲ್ಲವನ್ನೂ ಏಕಾಗ್ರಚಿತ್ತನಾಗಿ ಕೇಳು.

**ಸ್ವಧರ್ಮಸ್ಯ ಪರಿತ್ಯಾಗಃ ಪರಧರ್ಮಸ್ಯ ಚ ಕ್ರಿಯಾ ।**
**ಅಯಾಜ್ಯಯಾಜನಂ ಚೈವ ತಥಾಭಕ್ಷ್ಯಸ್ಯ ಭಕ್ಷಣಮ್ ॥೧೦॥**

**ಶರಣಾಗತಸಂತ್ಯಾಗೋ ಭೃತ್ಯಸ್ಯಾಭರಣಂ ತಥಾ ।**
**ರಸಾನಾಂ ವಿಕ್ರಯಶ್ಚಾಪಿ ತಿರ್ಯಗ್ಯೋನಿವಧಸ್ತಥಾ ॥೧೧॥**

**ಆಧಾನಾದೀನಿ ಕರ್ಮಾಣಿ ಶಕ್ತಿಮಾನ್ನ ಕರೋತಿ ಯಃ ।**
**ಅಪ್ರಯಚ್ಛಂಶ್ಚ ಸರ್ವಾಣಿ ನಿತ್ಯದೇಯಾನಿ ಭಾರತ ॥೧೨॥**

---

* ದಿಧಿಷೂ–ಅಗ್ರೇದಿಧಿಷು ಎಂಬುದಕ್ಕೆ ಅಮರಕಾರರ ವಿವರಣೆಯೂ ಹೀಗಿದೆ : ಪುನರ್ಭೂರ್ದಿಧಿಷೂ ರೂಢಾದ್ವಿಸ್ತಸ್ಯಾ ದಿಧಿಷುಃ ಪತಿಃ। ಸತು ದ್ವಿಜೋಗ್ರೇ ದಿಧಿಷೂ ಸ್ಸೈವ ಯಸ್ಯ ಕುಟುಮ್ಬಿನೀ ॥ ಇದಕ್ಕೆ ಮತ್ತೊಂದು ಲಕ್ಷಣವನ್ನೂ ಸ್ಮೃತಿಕಾರರು

**ದಕ್ಷಿಣಾನಾಮದಾನಂ ಚ ಬ್ರಾಹ್ಮಣಸ್ವಾಭಿಮರ್ಶನಮ್ ।**
**ಸರ್ವಾಣ್ಯೇತಾನ್ಯಕಾರ್ಯಾಣಿ ಪ್ರಾಹುರ್ಧರ್ಮವಿದೋ ಜನಾಃ ॥೧೩॥**

ಸ್ವಧರ್ಮವನ್ನು ಬಿಡುವುದು ; ಪರಧರ್ಮವನ್ನು ಆಚರಿಸುವುದು ; ಯಜ್ಞಮಾಡಲು ಅನಧಿಕಾರಿಯಾದವನಿಂದ ಯಜ್ಞಮಾಡಿಸುವುದು ; ತಿನ್ನಬಾರದ ಪದಾರ್ಥಗಳನ್ನು ತಿನ್ನುವುದು ; ಶರಣಾಗತರಾಗಿ ಬಂದವರನ್ನು ಬಿಟ್ಟುಬಿಡುವುದು ; ಭರಣ-ಪೋಷಣೆಗಳಿಗೆ ಅರ್ಹರಾದವರ ( ಪತ್ನೀ-ಪುತ್ರ-ಭೃತ್ಯಾದಿಗಳ ) ಭರಣ-ಪೋಷಣೆಗಳನ್ನು ಮಾಡದೇ ಇರುವುದು ; ಉಪ್ಪು, ಬೆಲ್ಲ ಮುಂತಾದುವುಗಳನ್ನು ಮಾರುವುದು ; ಪಶು-ಪಕ್ಷಿಗಳನ್ನು ಕೊಲ್ಲುವುದು; ಮಾಡಲು ಶಕ್ತಿಯಿದ್ದರೂ ಆಧಾನಾದಿ ವೇದೋಕ್ತಕರ್ಮಗಳನ್ನು ಮಾಡದೇ ಇರುವುದು ; ನಿತ್ಯವೂ ಮಾಡಬೇಕಾದ ಗೋಗ್ರಾಸಾದಿಗಳನ್ನು ಕೊಡದಿರುವುದು ; ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಡದಿರುವುದು ; ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವುದು–ಇವುಗಳು ಮಾಡಬಾರದ ಕರ್ಮಗಳಾಗಿವೆ. ಈ ಅಕಾರ್ಯಗಳನ್ನು ಮಾಡಬಾರದೆಂದು ಧರ್ಮವನ್ನು ತಿಳಿದ ವಿದ್ವಾಂಸರು ಹೇಳುತ್ತಾರೆ.

**ಪಿತ್ರಾ ವಿವದತೇ ಪುತ್ರೋ ಯಶ್ಚ ಸ್ಯಾದ್ಗುರುತಲ್ಪಗಃ ।**
**ಅಪ್ರಜಾಯನ್ನರವ್ಯಾಘ್ರ ಭವತ್ಯಧಾರ್ಮಿಕೋ ನರಃ ॥೧೪॥**

ತಂದೆಯೊಡನೆ ಜಗಳವಾಡುವ ಮಗ ; ಗುರುಪತ್ನೀಸಮಾಗಮ ಮಾಡುವ ಶಿಷ್ಯ ; ಋತುಕಾಲದಲ್ಲಿಯೂ ಪತ್ನಿಯೊಡನೆ ಸಮಾಗಮಮಾಡದ ಪತಿ–ಇವರೂ ಅಧಾರ್ಮಿಕರೆಂದು ಹೇಳಲ್ಪಟ್ಟಿದ್ದಾರೆ.

ಯುಧಿಷ್ಠಿರ! ಯಾವ ಕರ್ಮವನ್ನು ಮಾಡಿದರೆ ಮನುಷ್ಯನು ಪ್ರಾಯಶ್ಚಿತ್ತಕ್ಕೆ ಭಾಗಿಯಾಗುತ್ತಾನೆ? ಮತ್ತು ಯಾವ ಕರ್ಮವನ್ನು ಮಾಡದಿದ್ದರೆ ಮನುಷ್ಯನು ಪ್ರಾಯಶ್ಚಿತ್ತಕ್ಕೆ ಭಾಗಿಯಾಗುತ್ತಾನೆ?–ಈ ಎಲ್ಲ

---

ಹೇಳಿದ್ದಾರೆ. ಜ್ಯೇಷ್ಠಾಯಾಂ ಯದ್ಯನೂಢಾಯಾಂ ಕನ್ಯಾಯಾ ಮುಹ್ಯತೇಽನುಜಾ । ಸಾಚಾಗ್ರೇದಿಧಿಷೂರ್ಜ್ಞೇಯಾ ಪೂರ್ವಾಚದಿಧಿಷೂಃ ಸ್ಮೃತಾ॥ ಅಕ್ಕನಿಗೆ ಮದುವೆ ಯಾಗುವ ಮೊದಲು ತಂಗಿಗೆ ಮದುವೆಯಾದರೆ ಅವಳು ( ತಂಗಿಯು ) 'ಅಗ್ರೇದಿಧಿಷೂ' ಎಂದು ಕರೆಯಲ್ಪಡುತ್ತಾಳೆ. ಅಕ್ಕನು 'ದಿಧಿಷೂ' ಎಂದು ಕರೆಯಲ್ಪಡುತ್ತಾಳೆ.

ವನ್ನೂ ನಾನು ವಿಸ್ತಾರವಾಗಿ ಹೇಳಿದ್ದೇನೆ. ಮುಂದೆ ಯಾವ ಯಾವ ಕಾರಣಗಳಿಂದ ಮನುಷ್ಯನು ಮಾಡಬಾರದ ಕರ್ಮಗಳನ್ನು ಮಾಡಿದರೂ ಪಾಪಗಳಿಂದ ಲಿಪ್ತನಾಗುವುದಿಲ್ಲವೆಂಬುದನ್ನು ಹೇಳುವೆನು ಕೇಳು :

**ಪ್ರಗೃಹ್ಯ ಶಸ್ತ್ರಮಾಯಾನ್ತಮಪಿ ವೇದಾನ್ತಗಂ ರಣೇ ।**
**ಜಿಘಾಂಸನ್ತಂ ಜಿಘಾಂಸೀಯಾನ್ನ ತೇನ ಬ್ರಹ್ಮಹಾ ಭವೇತ್ ॥೧೭॥**

ವೇದ-ವೇದಾಂಗಗಳನ್ನು ಅಧ್ಯಯನಮಾಡಿದ ಬ್ರಾಹ್ಮಣನು ಶಸ್ತ್ರಾಸ್ತ್ರಗಳನ್ನು ಹಿಡಿದು ರಣಾಂಗಣಕ್ಕೆ ಬಂದು ಯುದ್ಧದಲ್ಲಿ ತನ್ನನ್ನು ಕೊಲ್ಲಲು ಉದ್ದೇಶಿಸಿದರೆ ಈ ಸಮಯದಲ್ಲಿ ಬ್ರಾಹ್ಮಣನನ್ನು ಸಂಹರಿಸಿದರೂ ಸಂಹರಿಸಿದವನು ಬ್ರಹ್ಮಹತ್ಯಾಪಾಪಕ್ಕೆ ಭಾಗಿಯಾಗುವುದಿಲ್ಲ.

ಧರ್ಮಜ! ಇದೇ ವಿಷಯದಲ್ಲಿ ವೇದಗಳಲ್ಲಿಯೂ ಮಂತ್ರವೊಂದು ಹೇಳಲ್ಪಟ್ಟಿದೆ. ವೇದಪ್ರಮಾಣವಿಹಿತವಾದ ಆ ಧರ್ಮವನ್ನೇ ನಿನಗೆ ಹೇಳುತ್ತಿದ್ದೇನೆ.

**ಅಪೇತಂ ಬ್ರಾಹ್ಮಣಂ ವೃತ್ತಾದ್ಯೋ ಹನ್ಯಾದಾತತಾಯಿನಮ್ ।**
**ನ ತೇನ ಬ್ರಹ್ಮಹಾ ಸ ಸ್ಯಾನ್ಮನ್ಯುಸ್ತನ್ಮನ್ಯುಮೃಚ್ಛತಿ ॥೧೯॥**

ಬ್ರಾಹ್ಮಣೋಚಿತವಾದ ಕರ್ಮಗಳಿಂದ ಭ್ರಷ್ಟನಾಗಿ ಕೈಯಲ್ಲಿ ಶಸ್ತ್ರವನ್ನು ಹಿಡಿದುಕೊಂಡು ಕೊಲ್ಲಲು ಬರುವ ಆತತಾಯಿಯನ್ನು ಸಂಹರಿಸುವವನು ಬ್ರಹ್ಮಹಂತಕನಾಗುವುದಿಲ್ಲ. ( ಬ್ರಹ್ಮಹತ್ಯೆಯನ್ನು ಮಾಡಿದ ಪಾಪವು ಅವನಿಗೆ ಬರುವುದಿಲ್ಲ. ) ಕ್ರೋಧವೇ ಎದುರಾಗಿ ಬಂದವನ ಕ್ರೋಧವನ್ನು ಎದುರಿಸುತ್ತದೆ.

**ಪ್ರಾಣಾತ್ಯಯೇ ತಥಾಜ್ಞಾನಾದಾಚರನ್ಮದಿರಾಮಪಿ ।**
**ಆದೇಶಿತೋ ಧರ್ಮಪರೈಃ ಪುನಃ ಸಂಸ್ಕಾರಮರ್ಹತಿ ॥೨೦॥**

ಅಜ್ಞಾನದಿಂದ ಮದ್ಯಪಾನಮಾಡಿದರೂ, ಪ್ರಾಣಹೋಗುವ ಸಮಯದಲ್ಲಿ (ಔಷಧರೂಪವಾಗಿ) ಮದ್ಯವನ್ನು ಸೇವಿಸಿದರೂ ಧರ್ಮಾತ್ಮರಾದ ಪುರುಷರ ಆಜ್ಞಾನುಸಾರವಾಗಿ ಅವರಿಗೆ ಪುನಃ ಸಂಸ್ಕಾರವಾಗಲೇಬೇಕು. ಇದೇ ಅವರಿಗೆ ಪ್ರಾಯಶ್ಚಿತ್ತವಾಗಿರುತ್ತದೆ.

ಯುಧಿಷ್ಠಿರ! ಅಜ್ಞಾನದಿಂದಾದ ಮದ್ಯಪಾನದ ವಿಷಯದಲ್ಲಿ ಹೇಳಿರುವ ಪ್ರಾಯಶ್ಚಿತ್ತವೇ ಇತರ ಅಭಕ್ಷ್ಯಭಕ್ಷಣಗಳಿಗೂ ಅನ್ವಯಿಸುತ್ತದೆ. ನಿನಗೆ ಈ ಎಲ್ಲವನ್ನೂ ಯಥಾರ್ಥವಾಗಿ ಹೇಳಿರುತ್ತೇನೆ. ಪ್ರಾಯಶ್ಚಿತ್ತವಿಧಾನವನ್ನು ತಿಳಿದು ಅದರಂತೆ ಆಚರಿಸಿದರೆ ಎಲ್ಲವೂ ಶುದ್ಧಿಯಾಗುತ್ತದೆ.

**ಗುರುತಲ್ಪಂ ಹಿ ಗುರ್ವರ್ಥಂ ನ ದೂಷಯತಿ ಮಾನವಮ್ ।**
**ಉದ್ದಾಲಕಃ ಶ್ವೇತಕೇತುಂ ಜನಯಾಮಾಸ ಶಿಷ್ಯತಃ ॥೨೨॥**

ಗುರುಪತ್ನೀಸಮಾಗಮವು ಮಹಾಪಾಪವೇ ಸರಿ. ಆದರೆ ಗುರುವಿನ ಆಜ್ಞಾನುಸಾರವಾಗಿ ಗುರುವಿನ ಕಾರ್ಯಸಿದ್ಧಿಗಾಗಿ ಮಾಡಿದರೆ ಮನುಷ್ಯನು ದೂಷಿತನಾಗುವುದಿಲ್ಲ. ಉದ್ದಾಲಕನು ಮಗನಾದ ಶ್ವೇತಕೇತುವನ್ನು ಶಿಷ್ಯನ ಮೂಲಕವಾಗಿಯೇ ಪಡೆದುಕೊಂಡನು.

**ಸ್ತೇಯಂ ಕುರ್ವಂಶ್ಚ ಗುರ್ವರ್ಥಮಾಪತ್ಸು ನ ನಿಷಿಧ್ಯತೇ ।**
**ಬಹುಶಃ ಕಾಮಕಾರೇಣ ನ ಚೇದ್ಯಃ ಸಮ್ಪ್ರವರ್ತತೇ ॥೨೩॥**

**ಅನ್ಯತ್ರ ಬ್ರಾಹ್ಮಣಸ್ವೇಭ್ಯ ಆದದಾನೋ ನ ದುಷ್ಯತಿ ।**
**ಸ್ವಯಮಪ್ರಾಶಿತಾ ಯಶ್ಚ ನ ಸ ಪಾಪೇನ ಲಿಪ್ಯತೇ ॥೨೪॥**

ಕಳ್ಳತನವು ಸರ್ವಥಾ ನಿಷಿದ್ಧವೇ ಸರಿ. ಆದರೆ ಆಪತ್ಕಾಲದಲ್ಲಿ ಆಚಾರ್ಯನ ಸಲುವಾಗಿ ಕಳ್ಳತನವನ್ನು ಮಾಡಬಹುದು. ಗುರುವಿಗೆ ಎಂದರೆ ಗುರುದಕ್ಷಿಣೆಯನ್ನು ಕೊಡಬೇಕಾಗಿ ಬಂದಾಗ ಮತ್ತು ಪ್ರಾಣಾಪತ್ತಿನಲ್ಲಿದ್ದಾಗ ಪ್ರಾಣವನ್ನು ಉಳಿಸಿಕೊಳ್ಳುವ ಸಲುವಾಗಿ ಕಳ್ಳತನಮಾಡುವುದು ನಿಷೇಧವಲ್ಲ. ಮನಸ್ಸಿನಲ್ಲಿ ಯಾವ ವಿಧವಾದ ಕಾಮನೆಗಳನ್ನೂ ಇಟ್ಟುಕೊಳ್ಳದೇ ಪದೇ ಪದೇ ಕಳ್ಳತನಮಾಡಲು ಹೋಗದೇ ಕೇವಲ ಆಪತ್ಕಾಲದಲ್ಲಿ ಮತ್ತು ಗುರುವಿನ ಸಲುವಾಗಿ ಬ್ರಾಹ್ಮಣರಿಗೆ ಸೇರಿದ ವಸ್ತುವನ್ನು ಬಿಟ್ಟು ಬೇರೆಯವರ ವಸ್ತುಗಳನ್ನು ಕಳ್ಳತನಮಾಡಿದರೆ ಅದರಿಂದ ಮನುಷ್ಯನು ದೂಷ್ಯನಾಗುವುದಿಲ್ಲ. ಕಳ್ಳತನಮಾಡಿದ ವಸ್ತುವನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳದೇ ಇರುವವನೂ ಪಾಪಲಿಪ್ತನಾಗುವುದಿಲ್ಲ.

**ಪ್ರಾಣತ್ರಾಣೇಽನೃತಂ ವಾಚ್ಯಮಾತ್ಮನೋ ವಾ ಪರಸ್ಯ ಚ ।**
**ಗುರ್ವರ್ಥೇ ಸ್ತ್ರೀಷು ಚೈವ ಸ್ಯಾದ್ವಿವಾಹಕರಣೇಷು ಚ ॥೨೫॥**

ಸುಳ್ಳುಹೇಳುವುದು ಮಹಾಪಾಪ. ಆದರೆ ಪ್ರಾಣಾಪತ್ತಿನ ಕಾಲದಲ್ಲಿ–ಸುಳ್ಳು ಹೇಳುವುದರಿಂದಲೇ ತನ್ನ ಪ್ರಾಣವುಳಿಯುವುದೆಂಬ ಸಂದರ್ಭವೊದಗಿದಾಗ–ಸುಳ್ಳುಹೇಳಬಹುದು. ಬೇರೆಯವರು ಆಪತ್ತಿನಲ್ಲಿರುವಾಗಲೂ ಸುಳ್ಳುಹೇಳುವುದರಿಂದ ಅವರು ಪ್ರಾಣಾಪತ್ತಿನಿಂದ ಪಾರಾಗುವಂತಿದ್ದರೆ–ಸುಳ್ಳುಹೇಳಿ ಅವರನ್ನು ಆಪತ್ತಿನಿಂದ ಪಾರುಮಾಡಬಹುದು. ಗುರುವಿನ ಸಲುವಾಗಿ ಸುಳ್ಳುಹೇಳಬಹುದು. ಕೆಲವು ಪ್ರಸಂಗಗಳಲ್ಲಿ ನಿಜ ಹೇಳಿದರೆ ಗುರುಗಳ ಮರ್ಯಾದೆಯೇ ಹೋಗಬಹುದು. ಅಂತಹ ಸಂದರ್ಭಗಳಲ್ಲಿ ಸುಳ್ಳುಹೇಳಿಯಾದರೂ ಗುರುಗಳ ಮರ್ಯಾದೆಯನ್ನು ಉಳಿಸಲೇಬೇಕು. ಪತ್ನಿಯೊಡನೆ ವಿನೋದಕ್ಕಾಗಿ ಸುಳ್ಳುಹೇಳಬಹುದು. ವಿವಾಹಪ್ರಸಂಗಗಳಲ್ಲಿ ಗಂಡು-ಹೆಣ್ಣುಗಳ ಹೊಂದಾಣಿಕೆಯನ್ನು ಉಂಟುಮಾಡುವ ಸಲುವಾಗಿ ಸುಳ್ಳುಹೇಳಬಹುದು. (ಸ್ವಲ್ಪ ಸಿಡುಕಿ ಎಂದು ಅನುಭವದಿಂದ ತಿಳಿದುಬಂದಿದ್ದರೂ ವರನ ಕಡೆಯವರು ಬಂದಾಗ 'ತುಂಬಾ ಒಳ್ಳೆಯವಳು'–ಎಂದೇ ಹೇಳಬೇಕಾಗುತ್ತದೆ. ವರನಿಗೆ ವಿದ್ಯೆಯು ಅಷ್ಟಿಲ್ಲದಿದ್ದರೂ 'ಒಳ್ಳೆಯ ಕೆಲಸದಲ್ಲಿದ್ದಾನೆ ; ತುಂಬಾ ಗುಣವಂತ'– ಎಂದು ತೆರೆದಬಾಯಿಂದ ಹೊಗಳಬೇಕಾಗುತ್ತದೆ. ಇದು ಸ್ವಲ್ಪಸುಳ್ಳೇ ಆದರೂ ಆ ಸಂದರ್ಭದಲ್ಲಿ ಹೇಳುವ ಅನೃತವು ಪಾಪಕರವಾಗುವುದಿಲ್ಲ. )

**ನಾವರ್ತತೇ ವ್ರತಂ ಸ್ವಪ್ನೇ ಶುಕ್ರಮೋಕ್ಷೇ ಕಥಂಚನ ।**
**ಆಜ್ಯಹೋಮಃ ಸಮಿದ್ಧೇಽಗ್ನೌ ಪ್ರಾಯಶ್ಚಿತ್ತಂ ವಿಧೀಯತೇ ॥೨೬॥**

ಅವಕೀರ್ಣಿಯ ವಿಷಯವಾಗಿ ಇಲ್ಲಿ ಹೇಳಿದೆ : ವ್ರತನಿಷ್ಠನಾಗಿರತಕ್ಕವನಿಗೆ ಅರ್ಥಾತ್ ಬ್ರಹ್ಮಚಾರಿಗೆ ರೇತಸ್ಖಲನವಾಗಬಾರದು. ಯಾವುದಾದರೂ ಕಾರಣದಿಂದ ರೇತಸ್ಖಲನವಾದರೆ ಅವನು ಆ ವ್ರತದಿಂದ ಭ್ರಷ್ಟನಾಗುತ್ತಾನೆ. ಆದರೆ ಸ್ವಪ್ನದಲ್ಲೇನಾದರೂ ರೇತಸ್ಖಲನವಾದಲ್ಲಿ ಅದರಿಂದ ಅವನು ವ್ರತದಿಂದ ಭ್ರಷ್ಟನಾದಂತಾಗುವುದಿಲ್ಲ. ಅಂತಹ ಬ್ರಹ್ಮಚಾರಿಗೆ ಪುನಃ ಉಪನಯನಸಂಸ್ಕಾರವನ್ನೂ ಮಾಡಬೇಕಾಗಿಲ್ಲ. ಹುತಮಾಡಿದ ಅಗ್ನಿಯಲ್ಲಿ ಆಜ್ಯಹೋಮರೂಪವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.*

---

(ಸ್ವಪ್ನೇ ಸಿಕ್ತ್ವಾ ಬ್ರಹ್ಮಚಾರೀ ದ್ವಿಜಃ ಶುಕ್ರಮಕಾಮತಃ ।
ಸ್ನಾತ್ವಾರ್ಕಮರ್ಚಯಿತ್ವಾ ತ್ರಿಃ ಪುನರ್ಮಾಮಿತ್ಯೃಚಂ ಜಪೇತ್ ॥

**ಪಾರಿವಿತ್ಯಂ ತು ಪತಿತೇ ನಾಸ್ತಿ ಪ್ರವ್ರಾಜಿತೇ ತಥಾ ।**
**ಭಿಕ್ಷಿತೇ ಪಾರದಾರ್ಯಂ ಚ ತದ್ಧರ್ಮಸ್ಯ ನ ದೂಷಕಮ್ ॥೨೭॥**

ಪರಿವಿತ್ತಿ-ಪರಿವೇತ್ತರ ವಿಷಯವಾಗಿ ಹೇಳಿದ್ದಾರೆ : ಅಣ್ಣನಿಗೆ ಮದುವೆಯಾಗುವ ಮೊದಲು ತಮ್ಮನು ಮದುವೆಮಾಡಿಕೊಳ್ಳುವುದು ಪಾಪಕರವಾದುದು. ಆದರೆ ಅಣ್ಣನು ಪತಿತನಾದರೆ ಅಥವಾ ಸಂನ್ಯಾಸಿಯಾದರೆ ತಮ್ಮನು ಮದುವೆಮಾಡಿಕೊಳ್ಳಬಹುದು. ಆಗ ತಮ್ಮನು ದೋಷಕ್ಕೆ ಭಾಗಿಯಾಗುವುದಿಲ್ಲ. ಪರಸ್ತ್ರೀಸಂಗವು ಅತ್ಯಂತದೂಷ್ಯವಾದುದು. ಆದರೆ ಸಂತಾನಾರ್ಥಿನಿಯಾಗಿ ಪರಸ್ತ್ರೀಯು ಪ್ರಾರ್ಥಿಸಿದ್ದೇ ಆದರೆ ಅಷ್ಟು ಮಾತ್ರಕ್ಕಾಗಿ ಧರ್ಮಶಾಸ್ತ್ರೋಕ್ತವಾದ ವಿಧಿ-ವಿಧಾನಗಳನ್ನು ಅನುಸರಿಸಿ ಪರಸ್ತ್ರೀಸಂಗ ಮಾಡುವುದು ಪಾಪಹೇತುವಾಗುವುದಿಲ್ಲ. ಹಾಗೆ ಮಾಡುವುದರಿಂದ ಧರ್ಮವನ್ನು ಅತಿಕ್ರಮಿಸಿದಂತಾಗುವುದಿಲ್ಲ. ( ಈ ವಿಧಾನವೂ ಕಲಿಯುಗದಲ್ಲಿ ನಿಷಿದ್ಧವೆಂದು ಹೇಳಿದ್ದಾರೆ. )

**ವೃಥಾ ಪಶುಸಮಾಲಮ್ಭಂ ನೈವ ಕುರ್ಯಾನ್ನ ಕಾರಯೇತ್ ।**
**ಅನುಗ್ರಹಃ ಪಶೂನಾಂ ಹಿ ಸಂಸ್ಕಾರೋ ವಿಧಿನೋದಿತಃ ॥೨೮॥**

ವ್ಯರ್ಥವಾಗಿ ( ಮಾಂಸಭಕ್ಷಣಕ್ಕಾಗಿ ) ಪಶುವಧೆಯನ್ನು ಮಾಡಬಾರದು ; ಮಾಡಿಸಲೂ ಬಾರದು. ಆದರೆ ವಿಧ್ಯುಕ್ತವಾದ ಸಂಸ್ಕಾರಗಳನ್ನು ಮಾಡಿ ಯಜ್ಞಗಳಲ್ಲಿ ಪಶುಹನನಮಾಡುವುದು ಆ ಪಶುಗಳಿಗೆ ಮಾಡುವ ಅನುಗ್ರಹವೇ ಆಗಿದೆ. ತನ್ಮೂಲಕವಾಗಿ ಪಶುಗಳೂ ಉತ್ತಮಲೋಕಗಳನ್ನು ಪಡೆದುಕೊಳ್ಳುತ್ತವೆ.

**ಅನರ್ಹೇ ಬ್ರಾಹ್ಮಣೇ ದತ್ತಮಜ್ಞಾನಾತ್ತನ್ನ ದೂಷಕಮ್ ।**
**ಸತ್ಕಾರಾಣಾಂ ತಥಾ ತೀರ್ಥೇ ನಿತ್ಯಂ ವಾಪ್ರತಿಪಾದನಮ್ ॥೨೯॥**

ಅಪಾತ್ರನಲ್ಲಿ ದಾನಮಾಡುವುದರಿಂದ ಪಾಪಸಂಘಟನೆಯಾಗುತ್ತದೆ. ಆದರೆ ದಾನಿಗೆ, ಬ್ರಾಹ್ಮಣನು ಅನರ್ಹನೆಂದು ತಿಳಿಯದೇ ಇದ್ದು ದಾನ ಮಾಡಿದರೆ ಆದರಿಂದ ದೋಷವು ಪ್ರಾಪ್ತವಾಗುವುದಿಲ್ಲ. ಇದೇ ರೀತಿಯಲ್ಲಿ

---

ಸ್ವಪ್ನಸ್ಖಲನವಾದರೆ ಬ್ರಹ್ಮಚಾರಿಯು ಸ್ನಾನಮಾಡಿ ಸೂರ್ಯ ಮತ್ತು ಅಗ್ನಿಯನ್ನು ಅರ್ಚಿಸಿ 'ಪುನರ್ಮಾಮೈತ್ವಿಂದ್ರಿಯಂ' ಎಂಬ ಹನಸ್ಸನ್ನೂ ಮೂರುಬಾರಿ ಜಪಿಸಬೇಕು. ಇದು ಯಜುರಾರಣ್ಯಕದ ಪ್ರಥಮ ಪ್ರಶ್ನೆಯ ೧೩೧ನೆಯ ಹನುಸ್ಸು )

ದಾನಿಯಾದವನಿಗೆ, ಸತ್ಪಾತ್ರನೆಂಬುದು ತಿಳಿಯದೇ ಇದ್ದು ಸತ್ಪಾತ್ರನಲ್ಲಿ ದಾನಮಾಡಲಿಲ್ಲವೆಂಬ ಕಾರಣದಿಂದಲೂ ದಾನಿಯು ಪಾಪಕ್ಕೆ ಭಾಗಿಯಾಗುವುದಿಲ್ಲ. ಅಪಾತ್ರನೆಂದು ತಿಳಿದೂ ದಾನಮಾಡಬಾರದು. ಸತ್ಪಾತ್ರನೆಂದು ತಿಳಿದೂ ದಾನಕೊಡದೇ ಇರಬಾರದು. ಅದು ಹೊರತಾಗಿ ತಿಳಿಯದೇ ಮಾಡಿದುದು ಪಾಪಕ್ಕೆ ಕಾರಣವಾಗುವುದಿಲ್ಲ.

**ಸ್ತ್ರಿಯಾಸ್ತಥಾಪಚಾರಿಣ್ಯಾ ನಿಷ್ಕೃತಿಃ ಸ್ಯಾದದೂಷಿಕಾ ।**
**ಅಪಿ ಸಾ ಪೂಯತೇ ತೇನ ನ ತು ಭರ್ತಾ ಪ್ರದುಷ್ಯತಿ ॥೩೦॥**

ಭಾರ್ಯೆಯನ್ನು ತಿರಸ್ಕಾರಮಾಡಬಾರದು. ಆದರೆ ಪತ್ನಿಯು ವ್ಯಭಿಚಾರಿಣಿಯಾಗಿದ್ದರೆ ಅಂತಹವಳನ್ನು ತಿರಸ್ಕರಿಸುವುದು ಪಾಪವಲ್ಲ. ಅಂತಹವಳ ಜೊತೆಯಲ್ಲಿ ಭೋಜನಾದಿಗಳನ್ನೂ ಮಾಡಬಾರದು. ಅವಳೊಡನೆ ಸಂಪರ್ಕವನ್ನೂ ಇಟ್ಟುಕೊಳ್ಳಬಾರದು. ಇದೇ ಅವಳಿಗೆ ಪ್ರಾಯಶ್ಚಿತ್ತದ ರೂಪವಾಗಿರುತ್ತದೆ. ಹೀಗೆ ಪತ್ನಿಯನ್ನು ತ್ಯಾಗಮಾಡುವುದರಿಂದ ಅವಳೂ ಪರಿಶುದ್ಧಳಾಗುತ್ತಾಳೆ. ಪತಿಯೂ ದೂಷ್ಯನಾಗುವುದಿಲ್ಲ. (ಯಾಜ್ಞವಲ್ಕ್ಯಸ್ಮೃತಿಯಲ್ಲಿ ವ್ಯಭಿಚಾರಿಣಿಗೆ ಪ್ರಾಯಶ್ಚಿತ್ತವನ್ನು ಹೀಗೆ ಹೇಳಿದ್ದಾರೆ :

**ಹೃತಾಧಿಕಾರಾಂ ಮಲಿನಾಂ ಪಿಣ್ಡಮಾತ್ರೋಽಪಜೀವಿನೀಮ್ ।**
**ಪರಿಭೂತಾಮಧಃಶಯ್ಯಾಂ ವಾಸಯೇದ್ವ್ಯಭಿಚಾರಿಣೀಮ್ ॥**

ಪ್ರಾಯಶ್ಚಿತ್ತ ಪ್ರಕರಣ ಶ್ಲೋ.-೭೦

ವ್ಯಭಿಚಾರಿಣಿಯ ದಾನ-ಧರ್ಮಗಳೇ ಮೊದಲಾದ ಎಲ್ಲ ಅಧಿಕಾರಗಳನ್ನೂ ನಿರೋಧಿಸಬೇಕು. ಅವಳು ಮಾಲಿನ್ಯದಿಂದ ಕೂಡಿರಬೇಕು. ಪ್ರಾಣ ವುಳಿಯುವಷ್ಟು ಮಾತ್ರವೇ ಆಹಾರವನ್ನು ಕೊಡಬೇಕು. ಕಂಡವರೆಲ್ಲರೂ ಅವಳನ್ನು ಧಿಕ್ಕರಿಸುತ್ತಲೇ ಇರಬೇಕು. ನೆಲದ ಮೇಲೆಯೇ ಮಲಗುವಂತೆ ಮಾಡಬೇಕು. ಹೀಗೆ ಅವಳನ್ನು ಇಟ್ಟಿದ್ದರೆ ಅವಳು ಮಾಡಿದ ಪಾಪವು ಪರಿಹಾರವಾಗುತ್ತದೆ.)

**ತತ್ತ್ವಂ ಜ್ಞಾತ್ವಾ ತು ಸೋಮಸ್ಯ ವಿಕ್ರಯಃ ಸ್ಯಾದದೋಷವಾನ್ ।**
**ಅಸಮರ್ಥಸ್ಯ ಭೃತ್ಯಸ್ಯ ವಿಸರ್ಗಃ ಸ್ಯಾದದೋಷವಾನ್ ।**
**ವನದಾಹೋ ಗವಾಮರ್ಥೇ ಕ್ರಿಯಮಾಣೋ ನ ದೂಷಕಃ ॥೩೧॥**

ಸೋಮಲತೆಯನ್ನು ಯಾವ ಉದ್ದೇಶಕ್ಕೆ ಉಪಯೋಗಿಸುತ್ತಾರೆಂಬುದನ್ನು ತಿಳಿದು ವಿಕ್ರಯಮಾಡಿದರೆ ಅದರಿಂದ ದೋಷವುಂಟಾಗುವುದಿಲ್ಲ. ಸೋಮಲತೆಯನ್ನು ಯಜ್ಞದಲ್ಲಿ ಬಳಸುತ್ತಾರೆ. ಅದರಿಂದ ದೇವತೆಗಳಿಗೆ ತೃಪ್ತಿಯಾಗುತ್ತದೆ. ಆದುದರಿಂದ ಯಜ್ಞಕ್ರಿಯೆಗಳಿಗಾಗಿ ಸೋಮಲತೆಯನ್ನು ವಿಕ್ರಯಿಸಬಹುದು. ಅದನ್ನು ಕುಡಿದು ಮತ್ತನಾಗುವವನಿಗೆ ಸೋಮಲತೆಯನ್ನು ವಿಕ್ರಯಮಾಡಬಾರದು. ಸೇವಕನು ಕಾರ್ಯಮಾಡಲು ಅಸಮರ್ಥನಾಗಿದ್ದರೆ ಅಂತಹ ಸೇವಕನನ್ನು ವಿಸರ್ಜಿಸುವುದರಿಂದ ದೋಷವುಂಟಾಗುವುದಿಲ್ಲ. ಹಸುಗಳ ಸಲುವಾಗಿ ಅರಣ್ಯವನ್ನು ದಹಿಸಿದರೂ ದೋಷವಿಲ್ಲ. ಗಾಢವಾದ ಅರಣ್ಯದಲ್ಲಿ ಹಸುಗಳನ್ನು ತಿನ್ನುವ ಪ್ರಾಣಿಗಳಿರುತ್ತವೆ. ಅವುಗಳನ್ನು ಓಡಿಸಲು ಸಾಧ್ಯವಾಗುವುದೇ ಇಲ್ಲ. ಅಂತಹ ಸಂದರ್ಭಗಳಲ್ಲಿ ಗಾಢವಾದ ಅರಣ್ಯಪ್ರದೇಶವನ್ನು ಸುಟ್ಟರೆ ವನ್ಯಮೃಗಗಳು ಅಲ್ಲಿಂದ ಓಡಿಹೋಗುತ್ತವೆ. ಹಸುಗಳ ಸಂರಕ್ಷಣೆಯಾಗುತ್ತದೆ. ಅಂತಹ ಅನಿವಾರ್ಯ ಸಂದರ್ಭದಲ್ಲಿ ಕಾಡಿಗೆ ಬೆಂಕಿಯಿಡುವುದು ಪಾಪಕರವಲ್ಲ.

ಯುಧಿಷ್ಠಿರ! ಮನುಷ್ಯನಿಗೆ ಎಂತೆಂತಹ ಸಂದರ್ಭಗಳಲ್ಲಿ ದುಷ್ಟವೆನಿಸಿದ ಕರ್ಮಗಳನ್ನು ಮಾಡಿದರೂ ಪಾಪಭಾಜನನಾಗುವುದಿಲ್ಲವೆಂಬುದನ್ನೂ ಸವಿಸ್ತಾರವಾಗಿ ಹೇಳಿದ್ದೇನೆ. ಮುಂದೆ ಪ್ರಾಯಶ್ಚಿತ್ತಗಳನ್ನೂ ವಿಶದವಾಗಿಯೇ ಹೇಳುತ್ತೇನೆ.”

ಽಳನೆಯ ಅಧ್ಯಾಯವು ಮುಗಿಯಿತು.

ಽಞನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಪಾಪಕರ್ಮಗಳಿಗೆ ಪ್ರಾಯಶ್ಚಿತ್ತಗಳ ವಿವರಣೆ

ವ್ಯಾಸರು ಯುಧಿಷ್ಠಿರನಿಗೆ ಹೇಳುತ್ತಾರೆ :

“ಯುಧಿಷ್ಠಿರ! ಪಾಪಮಾಡಿದ ಮನುಷ್ಯನು ಕೃಚ್ಛ್ರ-ಚಾಂದ್ರಾಯಣಾದಿ ವ್ರತಗಳಿಂದಲೂ, ತಪಸ್ಸಿನಿಂದಲೂ, ಯಜ್ಞ-ಯಾಗಾದಿ ಸತ್ಕರ್ಮಗಳಿಂದಲೂ ಮತ್ತು ದಾನಮಾಡುವುದರಿಂದಲೂ ಪಾಪವನ್ನು ಹೋಗಲಾಡಿಸಿಕೊಂಡು ಪುನಃ ಅವೇ ಪಾಪಕಾರ್ಯಗಳನ್ನು ಮಾಡದೇ ಇದ್ದರೆ ಶುದ್ಧನಾಗುತ್ತಾನೆ.

**ಏಕಕಾಲಂ ತು ಭುಞ್ಜೀತ ಚರನ್ಭೈಕ್ಷ್ಯಂ ಸ್ವಕರ್ಮಕೃತ್ ।**
**ಕಪಾಲಪಾಣಿಃ ಖಟ್ವಾಙ್ಗೀ ಬ್ರಹ್ಮಚಾರೀ ಸದೋತ್ಥಿತಃ ॥೨॥**

**ಅನಸೂಯುರಧಃಶಾಯೀ ಕರ್ಮ ಲೋಕೇ ಪ್ರಕಾಶಯನ್ ।**
**ಪೂರ್ಣೈರ್ದ್ವಾದಶಭಿರ್ವರ್ಷೈರ್ಬ್ರಹ್ಮಹಾ ವಿಪ್ರಮುಚ್ಯತೇ ॥೩॥**

ಬ್ರಹ್ಮಹತ್ಯೆಯನ್ನು ಮಾಡಿದವನು, ಭಿಕ್ಷೆಯನ್ನು ಮಾಡಿಕೊಂಡು ಒಂದೇ ಹೊತ್ತು ಊಟಮಾಡಿಕೊಂಡಿರಬೇಕು. ತನಗೆ ಸಂಬಂಧಿಸಿದ ಕಾರ್ಯಗಳೆಲ್ಲವನ್ನೂ ತಾನೇ ಮಾಡಿಕೊಳ್ಳಬೇಕು. (ಬೇರೆಯವರಿಂದ ಮಾಡಿಸಬಾರದು.) ಕಪಾಲವನ್ನೂ ದಂಡವನ್ನೂ ಕೈಯಲ್ಲಿ ಹಿಡಿದಿರಬೇಕು. ಬ್ರಹ್ಮಚರ್ಯವ್ರತಸ್ಥನಾಗಿರಬೇಕು. ಸದಾಕಾಲದಲ್ಲಿಯೂ ಉದ್ಯಮಶೀಲ ನಾಗಿರಬೇಕು. ಯಾರಲ್ಲಿಯೂ ದೋಷವನ್ನೆಣಿಸಬಾರದು. ನೆಲದ ಮೇಲೆಯೇ ಮಲಗಬೇಕು. ತಾನು ಮಾಡಿರುವ ಪಾಪಕರ್ಮವನ್ನು ಲೋಕದಲ್ಲಿ ಪ್ರಸಿದ್ಧಿಗೊಳಿಸಬೇಕು. ಈ ನಿಯಮಗಳಿಂದ ಹನ್ನೆರಡು ವರ್ಷಗಳನ್ನು ಪೂರ್ಣವಾಗಿ ಕಳೆದರೆ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾಗುತ್ತಾನೆ.

**ಲಕ್ಷ್ಯಃ ಶಸ್ತ್ರಭೃತಾಂ ವಾ ಸ್ಯಾದ್ವಿದುಷಾಮಿಚ್ಛಯಾತ್ಮನಃ ।**
**ಪ್ರಾಸ್ಯೇದಾತ್ಮಾನಮಗ್ನೌ ವಾ ಸಮಿದ್ಧೇ *ತ್ರಿರವಾಕ್ಛಿರಾಃ ॥೪॥**

**ಜಪನ್ವಾನ್ಯತಮಂ ವೇದಂ ಯೋಜನಾನಾಂ ಶತಂ ವ್ರಜೇತ್ ।**
**ಸರ್ವಸ್ವಂ ವಾ ವೇದವಿದೇ ಬ್ರಾಹ್ಮಣಾಯೋಪಪಾದಯೇತ್ ॥೫॥**

**ಧನಂ ವಾ ಜೀವನಾಯಾಲಂ ಗೃಹಂ ವಾ ಸಪರಿಚ್ಛದಮ್ ।**
**ಮುಚ್ಯತೇ ಬ್ರಹ್ಮಹತ್ಯಾಯಾ ಗೋಪ್ತಾ ಗೋಬ್ರಾಹ್ಮಣಸ್ಯ ಚ ॥೬॥**

'ಇವನು ಬ್ರಹ್ಮಹತ್ಯೆಯನ್ನು ಮಾಡಿದವನು'–ಎಂದು ತಿಳಿದುಕೊಂಡಿರುವ ಶಸ್ತ್ರಧಾರಿಗಳ ಶಸ್ತ್ರಕ್ಕೆ ಬ್ರಹ್ಮಘ್ನನು ಸ್ವೇಚ್ಛೆಯಿಂದ ಲಕ್ಷ್ಯನಾಗಬೇಕು. (ಶಸ್ತ್ರಾಘಾತದ ಮೂಲಕ ಅಸುನೀಗಬೇಕು.) ಪ್ರಜ್ವಲಿಸುವ ಅಗ್ನಿಯಲ್ಲಿ

* ವ್ಯಾಖ್ಯಾನಕಾರರು ತ್ರಿರವಾಕ್ಶಿರಾಃ ಎಂಬುದನ್ನು ಮುಂದಿನ ಶ್ಲೋಕಕ್ಕೆ ಸೇರಿಸಿಕೊಂಡು ಅನ್ವಯಮಾಡಿ ಅವಾಕ್ಛಿರಾಃ ಯಂ ಕಞ್ಚಿದ್ವೇದಂ ಜಪನ್ ಯೋಜನಾನಾಂ ಶತಂ ತ್ರಿರ್ವ್ರಜೇತ್ = ಶತತ್ರಯಯೋಜನಂ ಪಾದಚಾರೇಣ ತೀರ್ಥಯಾತ್ರಾಯಾಂ ವೇದಂ ಜಪನ್ಮುಚ್ಯತ ಇತ್ಯರ್ಥಃ = ತಲೆತಗ್ಗಿಸಿಕೊಂಡು ವೇದವನ್ನು ಹೇಳಿಕೊಂಡು ಮುನ್ನೂರು ಯೋಜನಗಳಷ್ಟು ದೂರ ಕಾಲ್ನಡಿಗೆಯಲ್ಲಿ ತೀರ್ಥಯಾತ್ರೆ

ತಲೆಕೆಳಗಾಗಿ ಮೂರು ಬಾರಿ ಧುಮುಕಬೇಕು. (ಹಾಗೂ ಪ್ರಾಣವುಳಿದರೆ ಪೂತನಾಗಿ ಹೊರಕ್ಕೆ ಬರಬಹುದು.) ನಾಲ್ಕು ವೇದಗಳಲ್ಲಿ ಯಾವುದಾದರೂ ಒಂದು ವೇದವನ್ನು ಹೇಳಿಕೊಂಡು ನೂರು ಯೋಜನಗಳವರೆಗೆ ನಡೆದು ಹೋಗಬೇಕು. ವೇದ-ವೇದಾಂಗಗಳನ್ನು ಸಂಪೂರ್ಣವಾಗಿ ಅಧ್ಯಯನಮಾಡಿರುವ ಬ್ರಾಹ್ಮಣನಿಗೆ ತನ್ನ ಸರ್ವಸ್ವವನ್ನೂ ದಾನಮಾಡಬೇಕು. ಒಬ್ಬ ಬ್ರಾಹ್ಮಣನ ಜೀವಿಕೆಗೆ ಬೇಕಾದಷ್ಟು ಹಣವನ್ನು ಅಥವಾ ಸಕಲಸಂಭಾರಗಳಿಂದಲೂ ಸುಸಜ್ಜಿತವಾದ ಮನೆಯನ್ನು ಬ್ರಾಹ್ಮಣನಿಗೆ ದಾನಮಾಡಬೇಕು. ಇವುಗಳಲ್ಲಿ ಯಾವುದಾದರೂ ಒಂದನ್ನು ಮಾಡುವುದರಿಂದ ಬ್ರಹ್ಮಹತ್ಯಾದೋಷದ ಪರಿಹಾರವಾಗುತ್ತದೆ. ಗೋ-ಬ್ರಾಹ್ಮಣರನ್ನು ಸತತವಾಗಿ ಸಂರಕ್ಷಣೆ ಮಾಡುವವನೂ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾಗುತ್ತಾನೆ.

**ಷಡ್ಭಿರ್ವರ್ಷೈಃ ಕೃಚ್ಛ್ರಭೋಜೀ ಬ್ರಹ್ಮಹಾ ಪೂಯತೇ ನರಃ ।**
**ಮಾಸೇ ಮಾಸೇ ಸಮಶ್ನಂಸ್ತು ತ್ರಿಭಿರ್ವರ್ಷೈಃ ಪ್ರಮುಚ್ಯತೇ ॥೭॥**

ಬ್ರಹ್ಮಹತ್ಯೆಯನ್ನು ಮಾಡಿದವನು ಕೃಚ್ಛ್ರವ್ರತಾನುಸಾರವಾಗಿ ಭೋಜನಮಾಡುತ್ತಿದ್ದರೆ ಆರು ವರ್ಷಗಳಲ್ಲಿ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾಗುತ್ತಾನೆ. ಮಾಸ-ಮಾಸಗಳಲ್ಲಿಯೂ ಕೃಚ್ಛ್ರವ್ರತಾಚರಣೆಯನ್ನು ಮಾಡುತ್ತಾ ಭೋಜನಮಾಡುತ್ತಿದ್ದರೆ ಮೂರೇ ವರ್ಷಗಳಲ್ಲಿಯೇ ಬ್ರಹ್ಮಹತ್ಯಾದೋಷದಿಂದ ವಿಮುಕ್ತನಾಗುತ್ತಾನೆ.

**ಸಂವತ್ಸರೇಣ ಮಾಸಾಶೀ ಪೂಯತೇ ನಾತ್ರಸಂಶಯಃ ।**
**ತಥೈವೋಪವಸನ್ರಾಜನ್ಸ್ವಲ್ಪೇನಾಪಿ ಪ್ರಪೂಯತೇ ॥೮॥**

ಒಂದೊಂದು ಮಾಸದಲ್ಲಿಯೂ ಭೋಜನಕ್ರಮವನ್ನು ಬದಲಾಯಿ

---

ಯನ್ನು ಮಾಡುವುದರಿಂದ ಬ್ರಹ್ಮಹತ್ಯಾಪಾಪದಿಂದ ಮುಕ್ತನಾಗುತ್ತಾನೆ ಎಂದು ಅರ್ಥಮಾಡಿರುತ್ತಾರೆ. ಆದರೆ ಮನುಸ್ಮೃತಿಯಲ್ಲಿ :- ಲಕ್ಷ್ಯಂ ಶಸ್ತ್ರಭೃತಾಂ ಪ್ರಾಸ್ಯಾತ್ ಎಂಬ ಶ್ಲೋಕದನಂತರ ಯಜೇತವಾಶ್ವಮೇಧೇನ ಎಂಬ ಶ್ಲೋಕವು ಬಂದು ಮುಂದಿನ ಶ್ಲೋಕವು ಜಪನ್ವಾನ್ಯತಮಂ ವೇದಂ ಎಂಬುದು ಬಂದಿದೆ. ಆದುದರಿಂದ ತ್ರಿರವಾಕ್ಛಿರಾಃ = ಆತ್ಮಾನಂ ಸಮಿದ್ಧೇ ಅಗ್ನೌ ಪ್ರಾಸ್ಯೇತ್ ಎಂದು ಅನ್ವಯಮಾಡುವುದೇ ಸಮಂಜಸವಾಗಿ ತೋರುತ್ತದೆ. ಇಲ್ಲಿ ಬರುವ ಎಲ್ಲ ಶ್ಲೋಕಗಳೂ ಮನುಸ್ಮೃತಿಯ ೧೧ನೆಯ ಅಧ್ಯಾಯದಲ್ಲಿ ಯಥಾವತ್ತಾಗಿಯೇ ಬಂದಿದೆ.

ಸುತ್ತಾ ತೀವ್ರವಾದ ಕೃಚ್ಛ್ರ ವ್ರತವನ್ನು ಆಚರಿಸುವವನು ಒಂದು ವರ್ಷ ದಲ್ಲಿಯೇ ಬ್ರಹ್ಮಹತ್ಯಾಪಾಪದಿಂದ ವಿಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಹೀಗೆಯೇ ಹೆಚ್ಚು ದಿವಸಗಳವರೆಗೆ ಉಪವಾಸಮಾಡಿ ದೇಹವನ್ನು ಶೋಷಿಸಿದರೆ ಅತ್ಯಲ್ಪಕಾಲದಲ್ಲಿಯೇ ಬ್ರಹ್ಮಹತ್ಯಾಪಾಪದಿಂದ ವಿಮುಕ್ತಿಯನ್ನು ಹೊಂದುತ್ತಾನೆ.*

**ಕ್ರತುನಾ ಚಾಶ್ವಮೇಧೇನ ಪೂಯತೇ ನಾತ್ರ ಸಂಶಯಃ ।**
**ಯೇ ಚಾಪ್ಯವಭೃಥಸ್ನಾತಾಃ ಕೇಚಿದೇವಂವಿಧಾ ನರಾಃ ।**
**ತೇ ಸರ್ವೇ ಧೂತಪಾಪ್ಮಾನೋ ಭವನ್ತೀತಿ ಪರಾ ಶ್ರುತಿಃ ॥೯॥**

**ಸರ್ವಂ ಪಾಪ್ಮಾನಂ ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವ ಮೇಧೇನ ಯಜತೇ**–ಎಂಬ ಶ್ರುತ್ಯನುಸಾರವಾಗಿ ಅಶ್ವಮೇಧಯಾಗವನ್ನು ಮಾಡಿದವನೂ ಬ್ರಹ್ಮಹತ್ಯಾಪಾಪದಿಂದ ಶುದ್ಧನಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಬ್ರಹ್ಮಹತ್ಯೆಗೆ ಸಮಾನವಾದ ಇತರ ಪಾಪಗಳನ್ನು ಮಾಡಿದರೂ ಅಶ್ವಮೇಧಯಾಗವನ್ನು ಮಾಡಿ ಅವಭೃಥಸ್ನಾನಮಾಡು ವುದರಿಂದ ಪಾಪವನ್ನು ಕಳೆದುಕೊಂಡು ಪರಿಶುದ್ಧರಾಗುತ್ತಾರೆ.

**ಬ್ರಾಹ್ಮಣಾರ್ಥೇ ಹತೋ ಯುದ್ಧೇ ಮುಚ್ಯತೇ ಬ್ರಹ್ಮಹತ್ಯಯಾ ।**
**ಗವಾಂ ಶತಸಹಸ್ರಂ ತು ಪಾತ್ರೇಭ್ಯಃ ಪ್ರತಿಪಾದಯೇತ್ ।**
**ಬ್ರಹ್ಮಹಾ ವಿಪ್ರಮುಚ್ಯೇತ ಸರ್ವಪಾಪೇಭ್ಯ ಏವ ಚ ॥೧೧॥**

ಬ್ರಹ್ಮಹತ್ಯೆಮಾಡಿದವನು ಬ್ರಾಹ್ಮಣರನ್ನು ರಕ್ಷಿಸುವ ಸಲುವಾಗಿಯೇ ಯುದ್ಧಮಾಡಲು ಹೋಗಿ ಆ ಯುದ್ಧದಲ್ಲಿ ಮೃತನಾದರೆ ಆ ಮಹಾಪಾಪ ದಿಂದ ಮುಕ್ತಿಯನ್ನು ಹೊಂದುತ್ತಾನೆ. ಒಂದು ಲಕ್ಷ ಗೋವುಗಳನ್ನು ಸತ್ಪಾತ್ರರಲ್ಲಿ ದಾನಮಾಡಿದವನೂ ಬ್ರಹ್ಮಹತ್ಯಾದೋಷದಿಂದಲ್ಲದೇ ಇತರ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

---

* ಮನುಸ್ಮೃತಿಯಲ್ಲಿ ಪ್ರಾಜಾಪತ್ಯಕೃಚ್ಛ್ರ ವಿಧಾನವನ್ನು ಹೀಗೆ ಹೇಳಿದೆ : ತ್ರ್ಯಹಂ ಪ್ರಾತಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ । ತ್ರ್ಯಹಂ ಪರಂ ಚ ನಾಶ್ನೀಯಾತ್ಪ್ರಾಜಾಪತ್ಯಂ ಚರನ್ದ್ವಿಜಃ॥ ಅಧ್ಯಾಯ ೧೧ ಶ್ಲೋಕ ೨೧೧. ಮೂರು ದಿವಸಗಳು ಹಗಲು ಊಟಮಾಡಬೇಕು. ಮೂರು ದಿವಸಗಳು ರಾತ್ರಿ ಊಟಮಾಡ ಬೇಕು. ಮೂರು ದಿವಸಗಳು ಬೇಡಲು ಹೋಗದೆ ಇರುವಷ್ಟನ್ನೇ ಊಟಮಾಡಬೇಕು.

**ಕಪಿಲಾನಾಂ ಸಹಸ್ರಾಣಿ ಯೋ ದದ್ಯಾತ್ಪಞ್ಚವಿಂಶತಿಮ್ ।**
**ದೋಗ್ಧ್ರೀಣಾಂ ಸ ಚ ಪಾಪೇಭ್ಯಃ ಸರ್ವೇಭ್ಯೋ ವಿಪ್ರಮುಚ್ಯತೇ ॥**

ಹಾಲುಕೊಡುವ ಇಪ್ಪತ್ತೈದು ಸಾವಿರ ಕಪಿಲವರ್ಣದ ಹಸುಗಳನ್ನು ಸತ್ಪಾತ್ರರಲ್ಲಿ ದಾನಮಾಡಿದವನು ಎಲ್ಲ ವಿಧವಾದ ಪಾಪಗಳಿಂದಲೂ ಮುಕ್ತನಾಗುತ್ತಾನೆ.

**ಗೋಸಹಸ್ರಂ ಸವತ್ಸಾನಾಂ ದೋಗ್ಧ್ರೀಣಾಂ ಪ್ರಾಣಸಂಶಯೇ ।**
**ಸಾಧುಭ್ಯೋ ವೈ ದರಿದ್ರೇಭ್ಯೋ ದತ್ತ್ವಾ ಮುಚ್ಯೇತ ಕಿಲ್ಬಿಷಾತ್ ॥**

ಮರಣಕಾಲವು ಸನ್ನಿಹಿತವಾದಾಗ ಯಾವನು ಹಾಲುಕರೆಯುವ ಸಾವಿರ ಹಸುಗಳನ್ನು ಕರುಗಳ ಸಮೇತವಾಗಿ ದರಿದ್ರರಾದ ಸತ್ಪುರುಷರಿಗೆ ದಾನಮಾಡುತ್ತಾನೆಯೋ, ಅವನು ಎಲ್ಲ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಶತಂ ವೈ ಯಸ್ತು ಕಾಮ್ಬೋಜಾನ್ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।**
**ನಿಯತೇಭ್ಯೋ ಮಹೀಪಾಲ ಸ ಚ ಪಾಪಾತ್ಪ್ರಮುಚ್ಯತೇ ॥೧೪॥**

ನಿಯಮಾನುಷ್ಠಾನಪರರಾದ ಬ್ರಾಹ್ಮಣರಿಗೆ ಕಾಂಬೋಜದೇಶದ ನೂರು ಕುದುರೆಗಳನ್ನು ದಾನವಾಗಿ ಕೊಡುವವನೂ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

**ಮನೋರಥಂ ತು ಯೋ ದದ್ಯಾದೇಕಸ್ಮಾ ಅಪಿ ಭಾರತ ।**
**ನ ಕೀರ್ತಯೇತ ದತ್ತ್ವಾ ಯಃ ಸ ಚ ಪಾಪಾತ್ಪ್ರಮುಚ್ಯತೇ ॥೧೫॥**

ಯಾವನು ಒಬ್ಬನೇ ಒಬ್ಬ ಬ್ರಾಹ್ಮಣನ ಮನೋರಥವನ್ನಾದರೂ

---

ಬಳಿಕ ಮೂರು ದಿವಸಗಳು ಉಪವಾಸಮಾಡಬೇಕು. ಹೀಗೆ ಹನ್ನೆರಡು ದಿವಸಗಳ ಪರ್ಯಂತವಾದ ಈ ವ್ರತವನ್ನು ಆರು ವರ್ಷಗಳ ಕಾಲ ಆಚರಿಸಿದರೆ ಬ್ರಹ್ಮಹತ್ಯಾಪಾಪದಿಂದ ಮುಕ್ತನಾಗುತ್ತಾನೆ. ಈ ವಿಧಾನವನ್ನೇ ಸಪ್ತಾಹಕ್ರಮದಲ್ಲಿ ಮೂರು ವರ್ಷಗಳು ಮಾಡಿದರೆ ಪಾಪಪರಿಹಾರವಾಗುತ್ತದೆ. ಮಾಸಿಕವಿಧಾನದಲ್ಲಿ ಒಂದು ತಿಂಗಳು ಹಗಲು ಭೋಜನ. ಒಂದು ತಿಂಗಳು ರಾತ್ರಿಭೋಜನ. ಒಂದು ತಿಂಗಳು ಅಯಾಚಿತವಾಗಿ ಸಿಕ್ಕುವುದನ್ನು ಮಾತ್ರವೇ ತಿನ್ನುವುದು. ಮತ್ತೊಂದು ತಿಂಗಳು ಪೂರ್ತಿಯಾಗಿ ಉಪವಾಸ. ಹೀಗೆ ಮಾಡಿದರೆ ಒಂದೇ ವರ್ಷದಲ್ಲಿ ಬ್ರಹ್ಮಹತ್ಯಾಪಾಪವು ನಿರಸನವಾಗುತ್ತದೆ. ಇದಕ್ಕೆ ಪ್ರಾಜಾಪತ್ಯಕೃಚ್ಛ್ರವ್ರತವೆಂದು ಹೆಸರು.

ಪೂರ್ಣಗೊಳಿಸುವನೋ ಮತ್ತು ತಾನು ಬ್ರಾಹ್ಮಣನಿಗೆ ದಾನಕೊಟ್ಟ ವಿಷಯವನ್ನು ಯಾರೊಡನೆಯೂ ಹೇಳಿಕೊಳ್ಳುವುದಿಲ್ಲವೋ–ಅಂತಹವನೂ ಪಾಪಗಳಿಂದ ವಿಮುಕ್ತನಾಗುತ್ತಾನೆ.

**ಸುರಾಪಾನಂ ಸಕೃತ್ಕೃತ್ವಾ ಯೋಽಗ್ನಿವರ್ಣಾಂ ಸುರಾಂ ಪಿಬೇತ್ ।**
**ಸ ಪಾವಯತ್ಯಥಾತ್ಮಾನಮಿಹ ಲೋಕೇ ಪರತ್ರ ಚ ॥೧೬॥**

ಸುರಾಪಾನವನ್ನು ಒಮ್ಮೆ ಮಾಡಿದರೂ ಮಹಾಪಾಪವು ಸಂಭವಿಸುತ್ತದೆ. ಅದಕ್ಕೆ ಪ್ರಾಯಶ್ಚಿತ್ತವೆಂದರೆ : ಕೆಂಪಗೆ ಕಾಸಿದ, ಕುದಿಯುತ್ತಿರುವ, ಅಗ್ನಿವರ್ಣದ (ಕೆಂಪುಬಣ್ಣದ) ಆ ಸುರೆಯನ್ನೇ ಕುಡಿಯಬೇಕು. ಹೀಗೆ ಮಾಡುವುದರಿಂದ ಅವನು ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ತನ್ನನ್ನು ಶುದ್ಧಿಗೊಳಿಸಿಕೊಳ್ಳುತ್ತಾನೆ.*

**ಮರುಪ್ರಪಾತಂ ಪ್ರಪತನ್ ಜ್ವಲನಂ ವಾ ಸಮಾವಿಶನ್ ।**
**ಮಹಾಪ್ರಸ್ಥಾನಮಾತಿಷ್ಠನ್ಮುಚ್ಯತೇ ಸರ್ವಕಿಲ್ಬಿಷೈಃ ॥೧೭॥**

ಮರುಭೂಮಿಯ ಪರ್ವತದ ತುದಿಯಿಂದ ದರಿಗೆ ಬೀಳುವುದರಿಂದಲೂ, ಪ್ರಜ್ವಲಿಸುತ್ತಿರುವ ಬೆಂಕಿಯಲ್ಲಿ ಪ್ರವೇಶಮಾಡುವುದರಿಂದಲೂ, ಮರಣದೀಕ್ಷೆಯನ್ನು ಕೈಗೊಂಡು ಉತ್ತರಾಭಿಮುಖವಾಗಿ ಪ್ರಯಾಣ ಮಾಡುತ್ತಾ ಹಿಮಾಲಯದಲ್ಲಿ ಪ್ರಾಣತ್ಯಾಗಮಾಡುವುದರಿಂದಲೂ ಮಾನವನು ಎಲ್ಲ ಪಾಪಗಳಿಂದಲೂ ವಿಮುಕ್ತನಾಗುತ್ತಾನೆ.

**ಬೃಹಸ್ಪತಿಸವೇನೇಷ್ಟ್ವಾ ಸುರಾಪೋ ಬ್ರಾಹ್ಮಣಃ ಪುನಃ ।**
**ಸಮಿತಿಂ ಬ್ರಾಹ್ಮಣೋ ಗಚ್ಛೇದಿತಿ ವೈ ಬ್ರಹ್ಮಣಃ ಶ್ರುತಿಃ ॥೧೮॥**

ಮದ್ಯಪಾನಮಾಡಿದ ಬ್ರಾಹ್ಮಣನು ಬೃಹಸ್ಪತಿಸವವೆಂಬ ಯಾಗಮಾಡಿದರೆ ಆ ಬ್ರಾಹ್ಮಣನು ಬ್ರಹ್ಮನ ಸಭೆಗೆ (ಬ್ರಾಹ್ಮಣಸದಸ್ಸಿಗೆ) ಹೋಗಲು ಅರ್ಹನಾಗುವನೆಂದು ಶ್ರುತಿಯು ಸಾರುತ್ತದೆ.

---

* ಯಾಜ್ಞವಲ್ಕ್ಯಸ್ಮೃತಿಯಲ್ಲಿಯೂ ಇದನ್ನೇ ಹೇಳಿದ್ದಾರೆ : **ಸುರಾಮ್ಬುಘೃತಗೋಮೂತ್ರಪಯಸಾಮಗ್ನಿಸಂನಿಭಮ್ । ಸುರಾಪೋನ್ಯತಮಂ ಪೀತ್ವಾ ಮರಣಾಚ್ಛುದ್ಧಿಮೃಚ್ಛತಿ ॥** [ಪ್ರಾಯಶ್ಚಿತ್ತಪ್ರಕರಣ ಶ್ಲೋಕ ೨೫೩] ಮದ್ಯ, ಜಲ, ತುಪ್ಪ, ಗೋಮೂತ್ರ, ಹಾಲು–ಇವುಗಳಲ್ಲಿ ಒಂದನ್ನು ಚೆನ್ನಾಗಿ ಕುದಿಸಿ ಪ್ರಾಶನಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಸುರಾಪನು ಮರಣಾನಂತರ ಶುದ್ಧನಾಗುವನು.

**ಭೂಮಿಪ್ರದಾನಂ ಕುರ್ಯಾದ್ಯಃ ಸುರಾಂ ಪೀತ್ವಾ ವಿಮತ್ಸರಃ ।**
**ಪುನರ್ನ ಚ ಪಿಬೇದ್ರಾಜನ್ಸಂಸ್ಕೃತಃ ಸ ಚ ಶುದ್ಧ್ಯತಿ ॥೧೯॥**

ಮದ್ಯಪಾನಮಾಡಿದವನು ಮಾತ್ಸರ್ಯರಹಿತನಾಗಿ ಸತ್ಪಾತ್ರನಲ್ಲಿ ಭೂದಾನಮಾಡಬೇಕು ಮತ್ತು ಪುನಃ ಅವನು ಸುರಾಪಾನವನ್ನು ಮಾಡಬಾರದು. ಹೀಗೆ ಸಂಸ್ಕೃತನಾಗಿ ಶುದ್ಧಿಯನ್ನು ಹೊಂದುತ್ತಾನೆ.

**ಗುರುತಲ್ಪೀ ಶಿಲಾಂ ತಪ್ತಾಮಾಯಸೀಮಭಿಸಂವಿಶೇತ್ ।**
**ಅವಕೃತ್ಯಾತ್ಮನಃ ಶೇಫಂ ಪ್ರವ್ರಜೇದೂರ್ಧ್ವದರ್ಶನಃ ॥೨೦॥**
**ಶರೀರಸ್ಯ ವಿಮೋಕ್ಷೇಣ ಮುಚ್ಯತೇ ಕರ್ಮಣೋಽಶುಭಾತ್ ।**
**ಕರ್ಮಭ್ಯೋ ವಿಪ್ರಮುಚ್ಯನ್ತೇ ಯತ್ತಾಃ ಸಂವತ್ಸರಂ ಸ್ತ್ರಿಯಃ ॥೨೧॥**

ಗುರುಪತ್ನಿಯೊಡನೆ ಸಮಾಗಮವನ್ನು ಮಾಡಿದವನು ಕೆಂಪಗೆ ಕಾದಿರುವ ಲೋಹಮಯವಾದ ಶಿಲೆಯ ಮೇಲೆ ಮಲಗಬೇಕು ಅಥವಾ ತನ್ನ ಜನನೇಂದ್ರಿಯವನ್ನು ಕತ್ತರಿಸಿಕೊಂಡು ತಲೆಯೆತ್ತಿಕೊಂಡು ಆಕಾಶವನ್ನೇ ನೋಡುತ್ತಾ ಪ್ರಯಾಣಮಾಡುತ್ತಲೇ ಇರಬೇಕು. ಈ ರೀತಿಯಲ್ಲಿ ಶರೀರ ಪರಿತ್ಯಾಗದಿಂದ ಮಾತ್ರವೇ ಗುರುತಲ್ಪಗನು ಆ ಮಹಾಪಾಪದಿಂದ ಮುಕ್ತನಾಗುತ್ತಾನೆ. ಗುರುತಲ್ಪಗಮನಕ್ಕೆ ಭಾಗಿಗಳಾದ ಸ್ತ್ರೀಯರೂ ಸಂವತ್ಸರ ಪರ್ಯಂತವಾಗಿ ಸಂಯಮದಿಂದಿದ್ದರೆ ಆ ಪಾಪದಿಂದ ಮುಕ್ತರಾಗುತ್ತಾರೆ.

**ಮಹಾವ್ರತಂ ಚರೇದ್ಯಸ್ತು ದದ್ಯಾತ್ಸರ್ವಸ್ವಮೇವ ತು ।**
**ಗುರ್ವರ್ಥೇ ವಾ ಹತೋ ಯುದ್ಧೇ ಸ ಮುಚ್ಯೇತ್ಕರ್ಮಣೋಽ**
**ಶುಭಾತ್ ॥೨೨॥**

ಒಂದು ತಿಂಗಳಕಾಲ ನೀರನ್ನೂ ಕುಡಿಯದೇ ಮಹಾವ್ರತವನ್ನು ಆಚರಿಸುವವನೂ, ತನ್ನಲ್ಲಿರುವ ಸರ್ವಸ್ವವನ್ನೂ ಸತ್ಪಾತ್ರನಿಗೆ ದಾನಕೊಡುವವನೂ ಮತ್ತು ಗುರುವಿನ ಸಲುವಾಗಿ ಮಾಡಿದ ಯುದ್ಧದಲ್ಲಿ ಪ್ರಾಣತ್ಯಾಗ ಮಾಡಿದವನೂ ಅಶುಭಕರ್ಮಗಳಿಂದ ಪ್ರಾಪ್ತವಾದ ಮಹಾಪಾಪಗಳಿಂದ ಮುಕ್ತರಾಗುತ್ತಾರೆ.

**ಅನೃತೇನೋಪವರ್ತೀ ಚೇತ್ಪ್ರತಿರೋದ್ಧಾ ಗುರೋಸ್ತಥಾ ।**
**ಉಪಾಹೃತ್ಯ ಪ್ರಿಯಂ ತಸ್ಮೈ ತಸ್ಮಾತ್ಪಾಪಾತ್ಪ್ರಮುಚ್ಯತೇ ॥೨೩॥**

ಸುಳ್ಳುಹೇಳಿಕೊಂಡು ಗುರುವಿನ ಬಳಿಗೆ ಬಂದಿದ್ದರೆ ಮತ್ತು ಗುರುವಿಗೆ ವಿರೋಧವಾಗಿ ನಡೆದುಕೊಂಡರೆ ಮಹಾಪಾಪದ ಸಂಘಟನೆಯಾಗುತ್ತದೆ. ಆ ಸಮಯದಲ್ಲಿ ಗುರುವಿಗೆ ಪ್ರಿಯವಾದ ವಸ್ತುವನ್ನು ತಂದುಕೊಟ್ಟು ಅವನನ್ನು ಪ್ರಸನ್ನಗೊಳಿಸುವುದರಿಂದ ಆ ಪಾಪದಿಂದ ಮುಕ್ತನಾಗುತ್ತಾನೆ.

**ಅವಕೀರ್ಣಿನಿಮಿತ್ತಂ ತು ಬ್ರಹ್ಮಹತ್ಯಾವ್ರತಂ ಚರೇತ್ ।**
**ಗೋಚರ್ಮವಾಸಾಃ ಷಣ್ಮಾಸಾಂಸ್ತಥಾ ಮುಚ್ಯೇತ ಕಿಲ್ಬಿಷಾತ್ ॥೨೪॥**

ಬ್ರಹ್ಮಚರ್ಯವ್ರತದಿಂದ ಭ್ರಷ್ಟನಾದವನು ಮಹಾಪಾಪಿಯಾಗುತ್ತಾನೆ. ಅವನು ಪಾಪಪರಿಹಾರಕ್ಕಾಗಿ ಬ್ರಹ್ಮಹತ್ಯಾಪಾಪನಿರಸನಕ್ಕೆ ಹೇಳಿರುವ ವ್ರತ ವನ್ನೇ ಮಾಡಬೇಕು ಮತ್ತು ಗೋಚರ್ಮವನ್ನೇ ಹೊದೆದುಕೊಂಡಿರಬೇಕು. ಹೀಗೆ ಆರು ತಿಂಗಳುಗಳಕಾಲ ಮಾಡುವುದರಿಂದ ಬ್ರಹ್ಮಚರ್ಯವ್ರತಭಂಗ ದಿಂದುಂಟಾದ ಪಾಪದಿಂದ ಮುಕ್ತನಾಗುತ್ತಾನೆ.

**ಪರದಾರಾಪಹಾರೀ ತು ಪರಸ್ಯಾಪಹರನ್ವಸು ।**
**ಸಂವತ್ಸರಂ ವ್ರತೀ ಭೂತ್ವಾ ತಥಾ ಮುಚ್ಯೇತ ಕಿಲ್ಬಿಷಾತ್ ॥೨೫॥**

ಪರಸ್ತ್ರೀಯನ್ನು ಅಪಹರಿಸಿದವನೂ ಮತ್ತು ಪರರಸ್ವತ್ತನ್ನು ಅಪಹರಿ ಸಿದವನೂ ಪಾಪದಿಂದ ವಿಮುಕ್ತನಾಗಬೇಕಾದರೆ ಒಂದು ವರ್ಷಪರ್ಯಂತ ವಾಗಿ ಕಠೋರವ್ರತನಿಷ್ಠನಾಗಿರಬೇಕು. ಹೀಗೆ ವ್ರತಾನುಷ್ಠಾನಮಾಡಿದರೆ ಆ ಮಹಾಪಾಪಗಳಿಂದ ಮುಕ್ತನಾಗುತ್ತಾನೆ.

**ಧನಂ ತು ಯಸ್ಯಾಪಹರೇತ್ತಸ್ಮೈ ದದ್ಯಾತ್ಸಮಂ ವಸು ।**
**ವಿವಿಧೇನಾಭ್ಯುಪಾಯೇನ ತದಾ ಮುಚ್ಯೇತ ಕಿಲ್ಬಿಷಾತ್ ॥೨೬॥**

ಪರಸ್ವಾಪಹಾರಕನು ಯಾರ ಸ್ವತ್ತನ್ನು ಅಪಹರಿಸಿರುವನೋ ಅವನಿಗೆ ತಾನು ಅವನಿಂದ ಅಪಹರಿಸಿದಷ್ಟೇ ಧನವನ್ನು ವಿಧ-ವಿಧವಾದ ಉಪಾಯ ಗಳಿಂದಾದರೂ ಹಿಂದಿರುಗಿಸಬೇಕು. ಹೀಗೆ ಮಾಡುವುದರಿಂದಲೂ ಅವನು ಪರಸ್ವಾಪಹರಣದೋಷದಿಂದ ವಿಮುಕ್ತನಾಗುತ್ತಾನೆ.

**ಕೃಚ್ಛ್ರಾದ್ದ್ವಾದಶರಾತ್ರೇಣ ಸಂಯತಾತ್ಮಾ ವ್ರತೇ ಸ್ಥಿತಃ ।**
**ಪರಿವೇತ್ತಾ ಭವೇತ್ಪೂತಃ ಪರಿವಿತ್ತಿಸ್ತಥೈವ ಚ ॥೨೭॥**

ಅಣ್ಣನು ಮದುವೆಯಾಗುವುದಕ್ಕಿಂತಲೂ ಮೊದಲು ಮದುವೆಯಾದವನು ( ಪರಿವೇತ್ತನು ) ಹಿಂದೆ ಹೇಳಿರುವಂತೆ ಜಿತೇಂದ್ರಿಯನಾಗಿ ಹನ್ನೆರಡು ರಾತ್ರಿಗಳ ಪರ್ಯಂತವಾಗಿ ಕೃಚ್ಛ್ರ ವ್ರತವನ್ನಾಚರಿಸುವುದರಿಂದ ಪರಿಶುದ್ಧನಾಗುತ್ತಾನೆ. ತಮ್ಮನಿಗೆ ಮದುವೆಯಾದರೂ ಮದುವೆಯಾಗದ ಅಣ್ಣನಿಗೂ (ಪರಿವಿತ್ತಿಗೂ) ಇದೇ ಪ್ರಾಯಶ್ಚಿತ್ತವೇ ಉಕ್ತವಾಗಿದೆ.

**ನಿವೇಶ್ಯಂ ತು ಪುನಸ್ತೇನ ಸದಾ ತಾರಯತಾ ಪಿತೄನ್ ।**
**ನ ತು ಸ್ತ್ರಿಯಾ ಭವೇದ್ದೋಷೋ ನ ತು ಸಾ ತೇನ ಲಿಪ್ಯತೇ ॥೨೮॥**

ಸದಾಕಾಲದಲ್ಲಿಯೂ ಪಿತೃಗಳನ್ನು ಶ್ರಾದ್ಧ-ತರ್ಪಣಾದಿಗಳಿಂದ ಉದ್ಧಾರಮಾಡಲು ಆಸಕ್ತಿಯಿರುವ ಪರಿವಿತ್ತಿಯು (ಅಣ್ಣನು) ತಮ್ಮನ ವಿವಾಹವಾದನಂತರ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ವಿವಾಹವನ್ನು ಮಾಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ಅಣ್ಣನ ಹೆಂಡತಿಗೆ ಯಾವ ದೋಷವೂ ಉಂಟಾಗುವುದಿಲ್ಲ. ಅವಳು ಯಾವ ವಿಧವಾದ ಪಾಪದಿಂದಲೂ ಕೂಡಿದವಳಾಗುವುದಿಲ್ಲ.

**ಭೋಜನಂ ಹ್ಯನ್ತರಾಶುದ್ಧಂ ಚಾತುರ್ಮಾಸ್ಯೇ ವಿಧೀಯತೇ ।**
**ಸ್ತ್ರಿಯಸ್ತೇನ ಪ್ರಶುಧ್ಯನ್ತಿ ಇತಿ ಧರ್ಮವಿದೋ ವಿದುಃ ॥೨೯॥**

ಚಾತುರ್ಮಾಸ್ಯವ್ರತದಲ್ಲಿ ದಿನಬಿಟ್ಟು ದಿನ ಊಟಮಾಡುವ ವಿಧಾನವಿದೆ. ಸ್ತ್ರೀಯರು ಈ ವ್ರತದ ಆಚರಣೆಯಿಂದ ಶುದ್ಧಿಹೊಂದುತ್ತಾರೆಂಬುದನ್ನೂ ಧರ್ಮವಿದರು ಹೇಳಿರುತ್ತಾರೆ.

**ಸ್ತ್ರಿಯಸ್ತ್ವಾಶಙ್ಕಿತಾಃ ಪಾಪಾ ನೋಪಗಮ್ಯಾ ವಿಜಾನತಾ ।**
**ರಜಸಾ ತಾ ವಿಶುಧ್ಯನ್ತೇ ಭಸ್ಮನಾ ಭಾಜನಂ ಯಥಾ ॥೩೦॥**

ಪತ್ನಿಯ ವಿಷಯದಲ್ಲಿ ವ್ಯಭಿಚಾರಿಣಿಯೆಂಬ ಶಂಕೆಯೇನಾದರೂ ಉಂಟಾದರೆ–ಬುದ್ಧಿವಂತನಾದ ಪತಿಯು ಅವಳು ಪುನಃ ರಜಸ್ವಲೆಯಾಗುವವರೆಗೂ ಅವಳೊಡನೆ ಸಮಾಗಮಮಾಡಬಾರದು. ಭಸ್ಮಲೇಪನದಿಂದ ಪಾತ್ರೆಯು ಶುದ್ಧವಾಗುವಂತೆ–ಸ್ತ್ರೀಯರು ರಜೋದರ್ಶನದನಂತರ ಶುದ್ಧರಾಗುತ್ತಾರೆ.

**ಪಾದಜೋಚ್ಛಿಷ್ಟಕಾಂಸ್ಯಂ ಯದ್ಗವಾ ಘ್ರಾತಮಥಾಪಿ ವಾ ।**
**ಗಣ್ಡೂಷೋಚ್ಛಿಷ್ಟಮಪಿ ವಾ ವಿಶುದ್ಧ್ಯೇದ್ದಶಭಿಸ್ತು ತತ್ ॥೩೧॥**

ಕಂಚಿನ ಪಾತ್ರೆಯು ಶೂದ್ರನ ಎಂಜಲಾಗಿದ್ದರೆ, ಹಸುವೇನಾದರೂ ಆ ಪಾತ್ರೆಯನ್ನು ಮೂಸಿದ್ದರೆ ಅಥವಾ ಕಂಚಿನ ಪಾತ್ರೆಯಲ್ಲಿ ಯಾರಾದರೂ ಬಾಯಿಮುಕ್ಕಳಿಸಿದ್ದರೆ ಹತ್ತು ವಿಧಾನಗಳಿಂದ ಆ ಪಾತ್ರೆಯನ್ನು ಶುದ್ಧಿಗೊಳಿಸಬಹುದು. ಹಸುವಿನ ಹಾಲು, ಮೊಸರು, ತುಪ್ಪ, ಗಂಜಲ, ಸಗಣಿ, ಮಣ್ಣು, ನೀರು, ಭಸ್ಮ, ಹುಳಿ ಮತ್ತು ಅಗ್ನಿ–ಇವು ಕಂಚಿನ ಪಾತ್ರೆಯನ್ನು ಶುದ್ಧಿಗೊಳಿಸುವ ಹತ್ತು ವಸ್ತುಗಳು.

**ಚತುಷ್ಪಾತ್ಸಕಲೋ ಧರ್ಮೋ ಬ್ರಾಹ್ಮಣಸ್ಯ ವಿಧೀಯತೇ ।**
**ಪಾದಾವಕೃಷ್ಟೋ ರಾಜನ್ಯೇ ತಥಾ ಧರ್ಮೋ ವಿಧೀಯತೇ ।**
**ತಥಾ ವೈಶ್ಯೇ ಚ ಶೂದ್ರೇ ಚ ಪಾದಃ ಪಾದೋ ವಿಧೀಯತೇ ॥೩೩॥**

ಬ್ರಾಹ್ಮಣನು ನಾಲ್ಕು ಪಾದಗಳಿಂದಲೂ ಪರಿಪೂರ್ಣವಾದ ಧರ್ಮವನ್ನು ಆಚರಿಸಬೇಕು. ಕ್ಷತ್ರಿಯನು ಮೂರು ಪಾದಗಳಿಂದ ಯುಕ್ತವಾದ ಧರ್ಮವನ್ನು ಆಚರಿಸಬೇಕು. ವೈಶ್ಯನು ಎರಡು ಪಾದಗಳಿಂದ ಯುಕ್ತವಾದ ಧರ್ಮವನ್ನು ಆಚರಿಸಬೇಕು. ಶೂದ್ರನು ಒಂದು ಪಾದದಿಂದ ಯುಕ್ತವಾದ ಧರ್ಮವನ್ನು ಆಚರಿಸಬೇಕು. (ಬ್ರಾಹ್ಮಣರು ಷಟ್ಕರ್ಮಿಗಳು, ಕ್ಷತ್ರಿಯ-ವೈಶ್ಯರು ತ್ರಿಕರ್ಮಿಗಳು, ಶೂದ್ರನು ಏಕಕರ್ಮಿಯಾಗಿರುತ್ತಾನೆ.)

**ವಿದ್ಯಾದೇವಂವಿಧೇನೈಷಾಂ ಗುರುಲಾಘವನಿಶ್ಚಯಮ್ ।**
**ತಿರ್ಯಗ್ಯೋನಿವಧಂ ಕೃತ್ವಾ ದ್ರುಮಾಂಶ್ಛಿತ್ತ್ವೇತರಾನ್ಬಹೂನ್ ।**
**ತ್ರಿರಾತ್ರಂ ವಾಯುಭಕ್ಷಃ ಸ್ಯಾತ್ಕರ್ಮ ಚ ಪ್ರಥಯನ್ನರಃ ॥೩೪॥**

ಈ ರೀತಿಯಲ್ಲಿ ಪಾಪಕರ್ಮಗಳ ಮಹತ್ತ್ವಾಲ್ಪತ್ವಗಳನ್ನು ನಿಶ್ಚಯಿಸಿ ಪ್ರಾಯಶ್ಚಿತ್ತವನ್ನು ಎಷ್ಟು ದಿವಸಗಳವರೆಗೆ ಮಾಡಿಕೊಳ್ಳಬೇಕೆಂಬುದನ್ನು ನಿಶ್ಚಯಿಸಬೇಕು. ಪಾಪವು ಗುರುತರವಾಗಿದ್ದರೆ ವರ್ಷಪೂರ್ತಿಯಾಗಿ ದೀಕ್ಷೆಯನ್ನು ಕೈಗೊಳ್ಳಬೇಕಾಗುತ್ತದೆ. ಪಾಪವು ಅಲ್ಪವಾಗಿದ್ದರೆ ಮೂರು ದಿವಸಗಳ ಅನುಷ್ಠಾನದಲ್ಲಿಯೇ ಪರಿಹಾರವಾಗುತ್ತದೆ. ಪಶು-ಪಕ್ಷಿಗಳನ್ನು ಸಂಹರಿ

ಸುವುದು ಮತ್ತು ವೃಕ್ಷಗಳನ್ನು ಕಡಿಯುವುದೂ ಪಾಪಕರ್ಮಗಳೇ ಆಗಿವೆ. ಆ ಪಾಪಗಳ ಪರಿಹಾರಕ್ಕಾಗಿ ಮಾನವನು ಮೂರು ರಾತ್ರಿಗಳ ಪರ್ಯಂತವಾಗಿ ಕೇವಲ ವಾಯುಭಕ್ಷನಾಗಿ (ನೀರನ್ನಾಗಲೀ–ಆಹಾರವನ್ನಾಗಲೀ ತೆಗೆದುಕೊಳ್ಳದೆ ಉಪವಾಸದಿಂದಿದ್ದು) ತಾನು ಮಾಡಿದ ಪಾಪಕರ್ಮಗಳನ್ನು ಸರ್ವತ್ರ ಪ್ರಕಟಪಡಿಸುವುದರಿಂದ ಪಶು-ಪ್ರಾಣಿಗಳನ್ನು ಸಂಹಾರಮಾಡಿದ ಮತ್ತು ವೃಕ್ಷಗಳನ್ನು ಕತ್ತರಿಸಿದ ಪಾಪಗಳಿಂದ ವಿಮುಕ್ತನಾಗುತ್ತಾನೆ.

**ಅಗಮ್ಯಾಗಮನೇ ರಾಜನ್ಪ್ರಾಯಶ್ಚಿತ್ತಂ ವಿಧೀಯತೇ ।**
**ಆರ್ದ್ರವಸ್ತ್ರೇಣ ಷಣ್ಮಾಸಾನ್ವಿಹಾರ್ಯಂ ಭಸ್ಮಶಾಯಿನಾ ॥೩೫॥**

ಸಂಗಮಾಡಬಾರದ ಸ್ತ್ರೀಯೊಡನೆ ಸಂಗಮಾಡಿದರೆ ಈ ಪ್ರಾಯಶ್ಚಿತ್ತವು ಉಕ್ತವಾಗಿದೆ. ಅಗಮ್ಯಾಗಮನಮಾಡಿದವನು ಆರು ತಿಂಗಳ ಕಾಲ ಒದ್ದೆ ಬಟ್ಟೆಯನ್ನು ಉಟ್ಟುಕೊಂಡು ಸಂಚಾರಮಾಡುತ್ತಲೇ ಇರಬೇಕು ಮತ್ತು ಮಲಗುವಾಗ ಬೂದಿಯ ಮೇಲೆ ಮಲಗಬೇಕು. ಹೀಗೆ ಮಾಡುವುದರಿಂದ ಆ ಪಾಪವು ಪರಿಹಾರವಾಗುತ್ತದೆ.

ಬ್ರಾಹ್ಮಣಗಳಲ್ಲಿ (ವೇದಗಳ ಒಂದು ಭಾಗ) ಉಕ್ತವಾಗಿರುವ ವಿಧಿಗಳಿಂದಲೂ, ದೃಷ್ಟಾಂತಗಳಿಂದಲೂ ಮತ್ತು ಶಾಸ್ತ್ರೋಕ್ತವಾದ ವಿಧಾನಗಳಿಂದಲೂ–ಮಾಡಬಾರದ ಕರ್ಮಗಳನ್ನು ಮಾಡಿ ಉಂಟಾದ ಎಲ್ಲ ಪಾಪಗಳಿಗೂ ಇದೇ ಪ್ರಾಯಶ್ಚಿತ್ತವೇ ವಿಧಿಸಲ್ಪಟ್ಟಿದೆ.

**ಸಾವಿತ್ರೀಮಪ್ಯಧೀಯೀತ ಶುಚೌ ದೇಶೇ ಮಿತಾಶನಃ ।**
**ಅಹಿಂಸೋ ಮನ್ದಕೋಽಜಲ್ಪೋ ಮುಚ್ಯತೇ ಸರ್ವಕಿಲ್ಬಿಷೈಃ ॥೩೭॥**

ಯಾವನು ಪವಿತ್ರವಾದ ಸ್ಥಳದಲ್ಲಿ ಕುಳಿತು, ಅಲ್ಪಾಹಾರವನ್ನು ತೆಗೆದುಕೊಳ್ಳುತ್ತಾ, ಅಹಿಂಸಾವ್ರತನಿಷ್ಠನಾಗಿ, ರಾಗ-ದ್ವೇಷ-ಮಾನಾಪಮಾನ ಶೂನ್ಯನಾಗಿ, ಮೌನಿಯಾಗಿ ಗಾಯತ್ರೀಮಂತ್ರಜಪವನ್ನು ಮಾಡುತ್ತಾನೆಯೋ ಅವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

**ಅಹಃಸ್ಸು ಸತತಂ ತಿಷ್ಠೇದಭ್ಯಾಕಾಶಂ ನಿಶಾಂ ಸ್ವಪನ್ ।**
**ತ್ರಿರಹ್ನಿ ತ್ರಿರ್ನಿಶಾಯಾಂ ಚ ಸವಾಸಾ ಜಲಮಾವಿಶೇತ್ ॥೩೮॥**

**ಸ್ತ್ರೀಶೂದ್ರಂ ಪತಿತಂ ಚಾಪಿ ನಾಭಿಭಾಷೇದ್ವ್ರತಾನ್ವಿತಃ ।**
**ಪಾಪಾನ್ಯಜ್ಞಾನತಃ ಕೃತ್ವಾ ಮುಚ್ಯೇದೇವಂ ವ್ರತೋ ದ್ವಿಜಃ ॥೩೯॥**

ತಿಳಿಯದೇ ಪಾಪಗಳನ್ನು ಮಾಡಿದವನು ಆ ಪಾಪಗಳ ಪರಿಹಾರಾರ್ಥ ವಾಗಿ ಈ ವ್ರತವನ್ನು ಆಚರಿಸಬೇಕು–ಹಗಲಿನಲ್ಲಿ ಯಾವಾಗಲೂ ನಿಂತು ಕೊಂಡೇ ಇರಬೇಕು. ರಾತ್ರಿಯಲ್ಲಿ ಆಕಾಶವನ್ನೇ ಹೊದ್ದಿಕೆಯನ್ನಾಗಿ ಮಾಡಿ ಕೊಂಡು ವಿಶಾಲವಾದ ಬಯಲಿನಲ್ಲಿ ಮಲಗಬೇಕು. ಹಗಲು ಮೂರು ಬಾರಿ–ರಾತ್ರಿ ಮೂರು ಬಾರಿ ಉಟ್ಟಬಟ್ಟೆಯಲ್ಲಿಯೇ ನೀರಿನಲ್ಲಿ ಮುಳುಗಿ ಸ್ನಾನಮಾಡಬೇಕು. ಈ ವ್ರತಾನುಷ್ಠಾನದಲ್ಲಿರುವಾಗ ಸ್ತ್ರೀ-ಶೂದ್ರ-ಪತಿತ ರೊಡನೆ ಸಂಭಾಷಣೆಮಾಡಬಾರದು. ಹೀಗೆ ವ್ರತವನ್ನು ಸಂಪೂರ್ಣಗೊಳಿ ಸಿದ ದ್ವಿಜನು ತಿಳಿಯದೇ ಮಾಡಿದ ಪಾಪದಿಂದ ವಿಮುಕ್ತನಾಗುತ್ತಾನೆ.

**ಶುಭಾಶುಭಫಲಂ ಪ್ರೇತ್ಯ ಲಭತೇ ಭೂತಸಾಕ್ಷಿಕಮ್ ।**
**ಅತಿರಿಚ್ಯೇತ ಯೋ ಯತ್ರ ತತ್ಕರ್ತಾ ಲಭತೇ ಫಲಮ್ ॥೪೦॥**

ಮನುಷ್ಯನು ಪಾಪಕರ್ಮಗಳನ್ನೂ ಮಾಡುತ್ತಾನೆ ; ಪುಣ್ಯಕರ್ಮ ಗಳನ್ನೂ ಮಾಡುತ್ತಾನೆ. ಅವನು ಮಾಡುವ ಕರ್ಮಗಳಿಗೆ ಪಂಚಭೂತಗಳೇ ಸಾಕ್ಷಿಗಳಾಗಿರುತ್ತವೆ. ಅವಸಾನಾನಂತರದಲ್ಲಿ ಮನುಷ್ಯನು ತಾನು ಮಾಡಿದ ಶುಭಾಶುಭಕರ್ಮಗಳ ಫಲವನ್ನು ಪಡೆದುಕೊಳ್ಳುತ್ತಾನೆ. ಈ ಜನ್ಮದಲ್ಲವನು ಪಾಪಕರ್ಮಗಳನ್ನೇ ಹೆಚ್ಚಾಗಿ ಮಾಡಿ ಅತ್ಯಲ್ಪವಾದ ಪುಣ್ಯಕರ್ಮಗಳನ್ನು ಮಾಡಿದ್ದರೆ ಹೆಚ್ಚು ಪಾಪಫಲವನ್ನೇ ಪಡೆದುಕೊಳ್ಳುತ್ತಾನೆ. ಪುಣ್ಯಕರ್ಮಗಳನ್ನೇ ಹೆಚ್ಚಾಗಿ ಮಾಡಿ ಅತ್ಯಲ್ಪವಾದ ಪಾಪಕರ್ಮಗಳನ್ನು ಮಾಡಿದ್ದರೆ ಹೆಚ್ಚು ಪುಣ್ಯಫಲವನ್ನೇ ಪಡೆದುಕೊಳ್ಳುತ್ತಾನೆ. ಹೆಚ್ಚು ಪಾಪಗಳನ್ನೇ ಮಾಡಿದ್ದರೆ ಅತ್ಯಲ್ಪವಾದ ಪುಣ್ಯಕರ್ಮವು ಅಷ್ಟೇ ಪ್ರಮಾಣದ ಪಾಪವನ್ನು ಕಳೆಯಲು ಸಮರ್ಥವಾಗುತ್ತದೆ. ಉಳಿದ ಪಾಪಗಳ ಫಲವನ್ನು ಮನುಷ್ಯನು ಅನುಭವಿಸಿಯೇ ತೀರಬೇಕಾಗುತ್ತದೆ. ಅಂತೆಯೇ ಮನುಷ್ಯನು ಹೆಚ್ಚು ಪುಣ್ಯಕಾರ್ಯಗಳನ್ನು ಮಾಡಿ ಅತ್ಯಲ್ಪವಾದ ಪಾಪವನ್ನು ಮಾಡಿದ್ದರೆ–ಆ ಅಲ್ಪಪಾಪವು ಅಷ್ಟೇ ಪ್ರಮಾಣದ ಅಲ್ಪಪುಣ್ಯವನ್ನು ಕಳೆಯಲು ಸಮರ್ಥ

ವಾಗುತ್ತದೆ. ಉಳಿದ ಪುಣ್ಯಫಲವನ್ನು ಮನುಷ್ಯನು ಅನುಭವಿಸಿಯೇ ತೀರುತ್ತಾನೆ.

**ತಸ್ಮಾದ್ದಾನೇನ ತಪಸಾ ಕರ್ಮಣಾ ಚ ಫಲಂ ಶುಭಮ್ ।**
**ವರ್ಧಯೇದಶುಭಂ ಕೃತ್ವಾ ಯಥಾ ಸ್ಯಾದತಿರೇಕವಾನ್ ॥೪೧॥**

ಆದುದರಿಂದ ಪಾಪಕರ್ಮಮಾಡಿದವನು ಸತ್ಪಾತ್ರರಲ್ಲಿ ದಾನಗಳನ್ನು ಕೊಡುವುದರಿಂದಲೂ, ತಪಸ್ಸಿನಿಂದಲೂ, ಸತ್ಕರ್ಮಗಳಿಂದಲೂ ಪುಣ್ಯವನ್ನು ವೃದ್ಧಿಪಡಿಸಿಕೊಳ್ಳಬೇಕು. ತಾನು ಮಾಡುವ ಪಾಪಕರ್ಮಗಳಿಗಿಂತಲೂ ಪುಣ್ಯಕರ್ಮಗಳೇ ಹೆಚ್ಚಾಗುವ ರೀತಿಯಲ್ಲಿ ಪುಣ್ಯಕರ್ಮಗಳನ್ನು ಸತತವಾಗಿ ಮಾಡುತ್ತಲೇ ಇರಬೇಕು. ಹೀಗೆ ಸಂಗ್ರಹಿಸಿದ ಪುಣ್ಯದ ಫಲವಾಗಿ ಪಾಪವು ನಿರಸನಹೊಂದಿ ಅವಸಾನಾನಂತರದಲ್ಲಿ ಮನುಷ್ಯನು ಹೆಚ್ಚು ಪುಣ್ಯಫಲವನ್ನೇ ಅನುಭವಿಸುತ್ತಾನೆ.

**ಕುರ್ಯಾಚ್ಛುಭಾನಿ ಕರ್ಮಾಣಿ ನಿವರ್ತೇತ್ಪಾಪಕರ್ಮಣಃ ।**
**ದದ್ಯಾನ್ನಿತ್ಯಂ ಚ ವಿತ್ತಾನಿ ತಥಾ ಮುಚ್ಯೇತ ಕಿಲ್ಬಿಷಾತ್ ॥೪೨॥**

ಶುಭಾಶುಭಕರ್ಮಗಳನ್ನು ಸತತವಾಗಿ ಮಾಡುತ್ತಲೇ ಇರಬೇಕು. ಪಾಪಕರ್ಮಗಳಿಂದ ಸಂಪೂರ್ಣವಾಗಿ ದೂರವಿರಬೇಕು. ಪ್ರತಿನಿತ್ಯವೂ ನಿಷ್ಕಾಮಭಾವದಿಂದ ತನ್ನಲ್ಲಿರುವ ಐಶ್ವರ್ಯವನ್ನು ಸತ್ಪಾತ್ರರಲ್ಲಿ ದಾನ ಮಾಡುತ್ತಲೇ ಇರಬೇಕು. ಹೀಗೆ ಮಾಡುವುದರಿಂದ ಮಾನವನು ಪಾಪದಿಂದ ವಿಮುಕ್ತನಾಗುತ್ತಾನೆ.

ಧರ್ಮಜ! ಈಗ ನಾನು ನಿನಗೆ ಪಾಪಕ್ಕೆ ಅನುರೂಪವಾದ ವ್ರತರೂಪವಾದ ಪ್ರಾಯಶ್ಚಿತ್ತವನ್ನು ಹೇಳಿರುತ್ತೇನೆ. ಮಹಾಪಾತಕಗಳಿಂದ ಬೇರೆಯದಾದ ಪಾತಕಗಳಿಗೆ ಮಾತ್ರವೇ ಈ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟಿವೆ.

**ಭಕ್ಷ್ಯಾಭಕ್ಷ್ಯೇಷು ಚಾನ್ಯೇಷು ವಾಚ್ಯಾವಾಚ್ಯೇ ತಥೈವ ಚ ।**
**ಅಜ್ಞಾನಜ್ಞಾನಯೋ ರಾಜನ್ವಿಹಿತಾನ್ಯನುಜಾನತಃ ॥೪೪॥**

ತಿನ್ನಲು ಯೋಗ್ಯವಾದ ಪದಾರ್ಥಗಳು ಯಾವುವು? ತಿನ್ನಲು ಅಯೋಗ್ಯವಾದ ಪದಾರ್ಥಗಳು ಯಾವುವು? ಯಾವ ಮಾತನ್ನು ಹೇಳ ಬಹುದು? ಯಾವ ಮಾತನ್ನು ಹೇಳಬಾರದು? ತಿಳಿಯದೇ ಮಾಡಿರಬಹು

ದಾದ ಪಾಪಗಳಿಗೆ ಪ್ರಾಯಶ್ಚಿತ್ತವೇನು? ತಿಳಿದೇ ಮಾಡಿದ ಪಾಪಕರ್ಮಗಳಿಗೆ ಪ್ರಾಯಶ್ಚಿತ್ತವೇನು? ಅಭಕ್ಷ್ಯಭೋಜನಕ್ಕೆ, ಆಡಬಾರದುದನ್ನು ಆಡಿದುದಕ್ಕೆ, ತಿಳಿದೂ ಮಾಡಿದ ಅಪರಾಧಕ್ಕೆ ಮತ್ತು ತಿಳಿಯದೇ ಮಾಡಿದ ಅಪರಾಧಕ್ಕೆ ಪ್ರಾಯಶ್ಚಿತ್ತವೇನು?–ಈ ಎಲ್ಲವನ್ನೂ ಶಾಸ್ತ್ರವನ್ನೇ ಪ್ರಮಾಣವನ್ನಾಗಿಟ್ಟು ಕೊಂಡಿರುವ ವಿದ್ವಾಂಸರು ನಿರ್ಧರಿಸುತ್ತಾರೆ. ಆ ವಿದ್ವಾಂಸರಿಂದ ಪ್ರಾಯಶ್ಚಿತ್ತ ವಿಧಿಯನ್ನು ತಿಳಿದುಕೊಂಡು ಅದರಂತೆ ಆಚರಿಸಬೇಕು.

**ಜಾನತಾ ತು ಕೃತಂ ಪಾಪಂ ಗುರು ಸರ್ವಂ ಭವತ್ಯುತ ।**
**ಅಜ್ಞಾನಾತ್ಸ್ವಲ್ಪಕೋ ದೋಷಃ ಪ್ರಾಯಶ್ಚಿತ್ತಂ ವಿಧೀಯತೇ ॥೪೫॥**

ಪಾಪಕರ್ಮವು ಒಂದೇ ಆಗಿರಬಹುದು. ಅದನ್ನು ತಿಳಿದು ಮಾಡಿದರೆ ಮಹಾಪಾಪದ ಸಂಘಟನೆಯಾಗುತ್ತದೆ. ಅದೇ ಪಾಪಕರ್ಮವನ್ನು ತಿಳಿಯದೇ ಮಾಡಿದರೆ ಅಲ್ಪವಾದ ಪಾಪವು ಸಂಘಟಿಸುತ್ತದೆ. ಒಬ್ಬ ಮನುಷ್ಯನು ಪಾಪ ಕಾರ್ಯವನ್ನು ತಿಳಿದು ಮಾಡಿದನೇ? ತಿಳಿಯದೇ ಮಾಡಿದನೇ?–ಎಂಬು ದನ್ನು ಅರಿತು ಪ್ರಾಯಶ್ಚಿತ್ತವಿಧಾನವನ್ನು ನಿರ್ಧರಿಸಬೇಕು. (ಹಲ್ಲಿಯನ್ನು ಸಾಯಿಸಿದರೆ ಪಾಪವೆನ್ನುತ್ತಾರೆ. ಬಾಗಿಲನ್ನು ಮುಚ್ಚುತ್ತೇವೆ. ಸಂದಿಯಲ್ಲಿರುವ ಹಲ್ಲಿಯನ್ನು ಗಮನಿಸುವುದಿಲ್ಲ. ಬಾಗಿಲಸಂದಿಗೆ ಸಿಕ್ಕಿ ಅದು ಸತ್ತು ಹೋಗುತ್ತದೆ. ಇದು ಅಜ್ಞಾನದಿಂದ ಆದ ದೋಷ. ಇಂತಹ ಸಂದರ್ಭದಲ್ಲಿ ಅಲ್ಪಪಾಪವು ಸಂಘಟಿಸುತ್ತದೆ. ಉದ್ದೇಶಪೂರ್ವಕವಾಗಿ ಸರ್ವದಾ ಲೊಚ ಗುಟ್ಟುವ ಹಲ್ಲಿಯು ಸತ್ತುಹೋಗಲೆಂದು ಬಾಗಿಲನ್ನು ಮುಚ್ಚಿ ಅದನ್ನು ಸಾಯಿಸಿದರೆ ಪಾಪವು ಅಧಿಕವಾಗುತ್ತದೆ. ಪ್ರಾಯಶ್ಚಿತ್ತವೂ ತದನುರೂಪ ವಾಗಿಯೇ ಇರುತ್ತದೆ.)

**ಶಕ್ಯತೇ ವಿಧಿನಾ ಪಾಪಂ ಯಥೋಕ್ತೇನ ವ್ಯಪೋಹಿತುಮ್ ।**
**ಆಸ್ತಿಕೇ ಶ್ರದ್ದಧಾನೇ ಚ ವಿಧಿರೇಷ ವಿಧೀಯತೇ ॥೪೬॥**

ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತಾದಿ ವಿಧಿಗಳಿಂದ ಪಾಪವನ್ನು ಖಂಡಿತ ವಾಗಿಯೂ ಹೋಗಲಾಡಿಸಿಕೊಳ್ಳಬಹುದು. ಆದರೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಳ್ಳುವವರು ಆಸ್ತಿಕರಾಗಿರಬೇಕು. ಅವರಿಗೆ ಕರ್ಮಶ್ರದ್ಧೆಯೂ ಇರಬೇಕು. ಅಂತಹವರಿಗೆ ಮಾತ್ರವೇ ಈ ವಿಧಿ-ನಿಯಮಗಳು ಹೇಳಲ್ಪಟ್ಟಿವೆ.

ಅದರಲ್ಲಿ ನಂಬಿಕೆಯಿಲ್ಲದಿದ್ದರೆ ಪ್ರಾಯಶ್ಚಿತ್ತಾದಿಗಳನ್ನು ಮಾಡಿಯೂ ಪ್ರಯೋಜನವಾಗುವುದಿಲ್ಲ.

**ನಾಸ್ತಿಕಾಶ್ರದ್ದಧಾನೇಷು ಪುರುಷೇಷು ಕದಾಚನ ।**
**ದಮ್ಭದ್ವೇಷಪ್ರಧಾನೇಷು ವಿಧಿರೇಷ ನ ದೃಶ್ಯತೇ ॥೪೭॥**

ನಾಸ್ತಿಕರಲ್ಲಿಯೂ, ಶ್ರದ್ಧಾಹೀನರಲ್ಲಿಯೂ, ದಂಭ ಮತ್ತು ದ್ವೇಷಗಳೇ ಪ್ರಧಾನವಾಗಿ ಉಳ್ಳ ಮಾನವರಲ್ಲಿಯೂ–ಈ ಪ್ರಾಯಶ್ಚಿತ್ತವಿಧಿಯು ಕಂಡು ಬರುವುದಿಲ್ಲ. ಅವರು ಇಂತಹ ಪ್ರಾಯಶ್ಚಿತ್ತಾದಿಗಳನ್ನು ಮಾಡಿಕೊಳ್ಳುವುದೂ ಇಲ್ಲ. ಮಾಡಿಕೊಂಡರೂ ಫಲವಿಲ್ಲ.

**ಶಿಷ್ಟಾಚಾರಶ್ಚ ಶಿಷ್ಟಶ್ಚ ಧರ್ಮೋ ಧರ್ಮಭೃತಾಂ ವರ ।**
**ಸೇವಿತವ್ಯೋ ನರವ್ಯಾಘ್ರ ಪ್ರೇತ್ಯೇಹ ಚ ಸುಖೇಪ್ಸುನಾ ॥೪೮॥**

ಧರ್ಮವಂತರಲ್ಲಿ ಶ್ರೇಷ್ಠನಾದವನೇ! ನರವ್ಯಾಘ್ರನೇ! ಇಹ-ಪರ ಗಳೆರಡರಲ್ಲಿಯೂ ಸುಖವನ್ನು ಇಚ್ಛಿಸುವವನು ಶಿಷ್ಟಾಚಾರವನ್ನು ಅನುಸರಿಸ ಬೇಕು. ವೇದಶಿಷ್ಟವಾದ ಧರ್ಮವನ್ನೂ ಉಪಾಸನೆಮಾಡಬೇಕು.

**ಸ ರಾಜನ್ಮೋಕ್ಷ್ಯಸೇ ಪಾಪಾತ್ತೇನ ಪೂರ್ಣೇನ ಹೇತುನಾ ।**
**ಪ್ರಾಣಾರ್ಥಂ ವಾ ಧನೇನೈಷಾಮಥವಾ ನೃಪಕರ್ಮಣಾ ॥೪೯॥**

ನೀನು ಶಿಷ್ಟಾಚಾರವನ್ನು ಅನುಸರಿಸುತ್ತಿರುವೆ. ಧರ್ಮವನ್ನೂ ಅನು ಸರಿಸುತ್ತಿರುವೆ. ಆದುದರಿಂದ ನೀನು ಪಾಪದಿಂದ ಬಿಡುಗಡೆ ಹೊಂದುವೆ. ಇವರ ( ತಮ್ಮಂದಿರೇ ಮೊದಲಾದವರ ) ಪ್ರಾಣರಕ್ಷೆಗಾಗಿಯಾದರೂ ರಾಜ್ಯ ತ್ಯಾಗಮಾಡಬೇಕೆಂಬ ನಿಶ್ಚಯವನ್ನು ಬಿಟ್ಟು ಪ್ರಾಯಶ್ಚಿತ್ತವನ್ನು ಆಚರಿಸು. ಧನವನ್ನು ದಾನಮಾಡುವುದರಿಂದಲೂ–ಧರ್ಮದಿಂದ ರಾಜ್ಯಪಾಲನೆಯನ್ನು ಮಾಡುವುದರಿಂದಲೂ ಪಾಪಪರಿಹಾರವಾಗುತ್ತದೆ.

**ಅಥವಾ ತೇ ಘೃಣಾ ಕಾಚಿತ್ಪ್ರಾಯಶ್ಚಿತ್ತಂ ಚರಿಷ್ಯಸಿ ।**
**ಮಾ ತ್ವೇವಾನಾರ್ಯಜುಷ್ಟೇನ ಮನ್ಯುನಾ ನಿಧನಂ ಗಮಃ ॥೫೦॥**

ಒಂದು ವೇಳೆ ಈಗ ನಡೆದಿರುವ ಘಟನೆಗಳಿಂದಾಗಿ ನಿನ್ನ ಮನಸ್ಸಿನಲ್ಲಿ ಜುಗುಪ್ಸಾನುಕಂಪಗಳು ಉಂಟಾಗಿದ್ದರೆ–ಅದರಿಂದಲೇ ಮಾಡಬಾರದುದನ್ನು ಮಾಡಿಬಿಟ್ಟೆನೆಂಬ ಭ್ರಾಂತಿಯುಂಟಾಗಿದ್ದರೆ–ವಿಧಿವಿಹಿತವಾದ ಪ್ರಾಯಶ್ಚಿತ್ತಾದಿ

ಗಳನ್ನು ಆಚರಿಸು. ಅದು ಹೊರತಾಗಿ ಅನಾರ್ಯಜುಷ್ಟವಾದ ಮಾರ್ಗವನ್ನು ಹಿಡಿದು ದೈನ್ಯದಿಂದ ಆತ್ಮವಿನಾಶವನ್ನು ಮಾಡಿಕೊಳ್ಳಲು ಯತ್ನಿಸಬೇಡ."

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಭಗವಾನ್ ವ್ಯಾಸರು ಹೀಗೆ ಹೇಳಿದನಂತರ ಯುಧಿಷ್ಠಿರನು ಮುಹೂರ್ತಕಾಲದವರೆಗೆ ಚಿಂತಿಸುತ್ತಿದ್ದು ತಪೋಧನರಾದ ವ್ಯಾಸರನ್ನು ಪ್ರಶ್ನಿಸಿದನು."

ಿ೩೫ನೆಯ ಅಧ್ಯಾಯವು ಮುಗಿಯಿತು.

೩೬ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಸ್ವಾಯಂಭುವಮನುವು ನಿರೂಪಿಸಿದ ಧರ್ಮದ ಸ್ವರೂಪವರ್ಣನೆ : ಪಾಪದಿಂದ ವಿಮುಕ್ತನಾಗಲು ಶಾಸ್ತ್ರಗಳಲ್ಲಿ ಹೇಳಿರುವ ಪ್ರಾಯಶ್ಚಿತ್ತವಿಧಾನಗಳು : ಅಭಕ್ಷ್ಯವಸ್ತುಗಳ ವರ್ಣನೆ : ದಾನಸ್ವೀಕಾರಕ್ಕೆ ಪಾತ್ರಾಪಾತ್ರರ ವಿವೇಚನೆ

ಯುಧಿಷ್ಠಿರನು ವ್ಯಾಸರನ್ನು ಪ್ರಶ್ನಿಸುತ್ತಾನೆ :

**ಕಿಂ ಭಕ್ಷ್ಯಂ ಚಾಪ್ಯಭಕ್ಷ್ಯಂ ಚ ಕಿಂ ಚ ದೇಯಂ ಪ್ರಶಸ್ಯತೇ ।**
**ಕಿಂ ಚ ಪಾತ್ರಮಪಾತ್ರಂ ವಾ ತನ್ಮೇ ಬ್ರೂಹಿ ಪಿತಾಮಹ ॥೧॥**

"ಪಿತಾಮಹರೇ! ತಿನ್ನಲು ಯೋಗ್ಯವಾದ ವಸ್ತುವು ಯಾವುದು? ತಿನ್ನಬಾರದ ವಸ್ತುವು ಯಾವುದು? ಯಾವ ವಸ್ತುವನ್ನು ದಾನವಾಗಿ ಕೊಡಬೇಕು? ಯಾವುದನ್ನು ಕೊಡಬಾರದು? ದಾನಮಾಡಲು ಪಾತ್ರರು ಯಾರು? ಅಪಾತ್ರರು ಯಾರು?–ಈ ಎಲ್ಲ ವಿಷಯಗಳನ್ನೂ ನನಗೆ ಸವಿಸ್ತರವಾಗಿ ಹೇಳಿರಿ"

ಭಗವಾನ್ ವ್ಯಾಸರು ಹೇಳುತ್ತಾರೆ:

"ಯುಧಿಷ್ಠಿರ! ಈ ವಿಷಯದಲ್ಲಿಯೇ ಪ್ರಜಾಪತಿಮನುವಿಗೂ ಮತ್ತು ಸಿದ್ಧರಿಗೂ ನಡೆದ ಸಂವಾದರೂಪವಾದ ಪುರಾತನವಾದ ಇತಿಹಾಸವನ್ನು ವಿದ್ವಾಂಸರು ಉದಾಹರಿಸುತ್ತಾರೆ. ಅದನ್ನೇ ನಿನಗೂ ಹೇಳುತ್ತೇನೆ.

ಪ್ರಾಚೀನಕಾಲದಲ್ಲಿ ವ್ರತನಿಷ್ಠರಾದ ಋಷಿಗಳು ಒಂದೆಡೆಯಲ್ಲಿ ಸೇರಿ

ಸುಖಾಸೀನನಾಗಿದ್ದ, ವಿಭುವಾದ ಪ್ರಜಾಪತಿಮನುವನ್ನು ಧರ್ಮದ ವಿಷಯವಾಗಿ ಪ್ರಶ್ನಿಸಿದರು :

**ಕಥಮನ್ನಂ ಕಥಂ ಪಾತ್ರಂ ದಾನಮಧ್ಯಯನಂ ತಪಃ ।**
**ಕಾರ್ಯಾಕಾರ್ಯಂ ಚ ಯತ್ಸರ್ವಂ ಶಂಸ ವೈ ತ್ವಂ ಪ್ರಜಾಪತೇ ॥**

"ಪ್ರಜಾಪತಿಯೇ! ಯಾವ ಪ್ರಕಾರದಿಂದ ಅನ್ನವಾಗುತ್ತದೆ? (ಭಕ್ಷ್ಯವಾಗುತ್ತದೆ? ) ಯಾವ ಪ್ರಕಾರದಿಂದ ಪಾತ್ರವಾಗುತ್ತದೆ? (ಸತ್ಪಾತ್ರನು ಹೇಗಾಗುತ್ತಾನೆ? ) ದಾನ, ಅಧ್ಯಯನ ಮತ್ತು ತಪಸ್ಸು–ಇವುಗಳ ಸ್ವರೂಪಗಳೇನು? ಕಾರ್ಯ ಎಂದರೆ ಯಾವುದು? ಅಕಾರ್ಯ ಎಂದರೆ ಯಾವುದು? ಈ ಎಲ್ಲ ವಿಷಯಗಳನ್ನೂ ದಯಮಾಡಿ ವಿಶದವಾಗಿ ನಮಗೆ ತಿಳಿಸು." ಋಷಿಗಳೆಲ್ಲರೂ ಹೀಗೆ ಪ್ರಶ್ನಿಸಲಾಗಿ ಸ್ವಾಯಂಭುವಮನುವು ಹೇಳಿದನು :

"ಋಷಿಗಳೇ! ನೀವು ಕೇಳುತ್ತಿರುವ ಧರ್ಮಕ್ಕೆ ಸಂಬಂಧಿಸಿದ ಈ ಎಲ್ಲ ವಿಷಯಗಳನ್ನೂ ಸಂಕ್ಷೇಪವಾಗಿಯೂ ಮತ್ತು ವಿಸ್ತಾರವಾಗಿಯೂ ಹೇಳುತ್ತೇನೆ. ಏಕಾಗ್ರತೆಯಿಂದ ಕೇಳಿರಿ.

**ಅನಾದೇಶೇ ಜಪೋ ಹೋಮ ಉಪವಾಸಸ್ತಥೈವ ಚ ।**
**ಆತ್ಮಜ್ಞಾನಂ ಪುಣ್ಯನದ್ಯೋ ಯತ್ರ ಪ್ರಾಯಶ್ಚ ತತ್ಪರಾಃ ॥೬॥**
**ಅನಾದಿಷ್ಟಂ ತಥೈತಾನಿ ಪುಣ್ಯಾನಿ ಧರಣೀಭೃತಃ ।**
**ಸುವರ್ಣಪ್ರಾಶನಮಪಿ ರತ್ನಾದಿಸ್ನಾನಮೇವ ಚ ॥೭॥**
**ದೇವಸ್ಥಾನಾಭಿಗಮನಮಾಜ್ಯಪ್ರಾಶನಮೇವ ಚ ।**
**ಏತಾನಿ ಮೇಧ್ಯಂ ಪುರುಷಂ ಕುರ್ವನ್ತ್ಯಾಶು ನ ಸಂಶಯಃ ॥೮॥**

ಸ್ಪಷ್ಟವಾಗಿ ವಿಶೇಷರೂಪದಲ್ಲಿ ಪ್ರಾಯಶ್ಚಿತ್ತವನ್ನು ಹೇಳದಿದ್ದರೆ ನಿಯತವಾಗಿ ಮಾಡುವ ಜಪ-ಹೋಮೋಪವಾಸಾದಿಗಳು, ಆತ್ಮಜ್ಞಾನಸಾಧನೆ, ಆತ್ಮಜ್ಞಾನಸಾಧಕರೂ ಮತ್ತು ಜಪ-ತಪ-ಹೋಮಾದಿಗಳನ್ನು ಮಾಡುವವರೂ ಆಶ್ರಯಿಸಿರುವ ಪುಣ್ಯನದಿಗಳಲ್ಲಿ ಸ್ನಾನಮಾಡುವುದು–ಇವೆಲ್ಲವೂ ಶುದ್ಧಿಗೊಳಿಸುವ ಪುಣ್ಯಕಾರ್ಯಗಳೇ ಆಗಿವೆ. ಪ್ರಾಯಶ್ಚಿತ್ತವಿಶೇಷವನ್ನು ಹೇಳದಿರುವಾಗ ಮುಂದೆ ಹೇಳುವ ಕರ್ಮಗಳೂ ಮನುಷ್ಯನನ್ನು ಬಹಳ

ಬೇಗ ಪವಿತ್ರಗೊಳಿಸುತ್ತವೆ. ಬ್ರಹ್ಮಗಿರಿಯೇ ಮೊದಲಾದ ಪರ್ವತಗಳ ಸಂದರ್ಶನ, ಸುವರ್ಣೋದಕ ಪ್ರಾಶನ, ರತ್ನಗಳಿಂದ ಮಿಶ್ರವಾದ ನೀರಿನಲ್ಲಿ ಸ್ನಾನಮಾಡುವುದು, ದೇವಸ್ಥಾನಗಳಿಗೆ ಹೋಗುವುದು, ಆಜ್ಯಪ್ರಾಶನ–ಇವುಗಳೇ ಆ ಪುಣ್ಯಕರವಾದ ಕರ್ಮಗಳಾಗಿವೆ.

**ನ ಗರ್ವೇಣ ಭವೇತ್ಪ್ರಾಜ್ಞಃ ಕದಾಚಿದಪಿ ಮಾನವಃ ।**
**ದೀರ್ಘಮಾಯುರಥೇಚ್ಛನ್ವಿ ತ್ರಿರಾತ್ರಂ ಚೋಷ್ಣಪೋ* ಭವೇತ್ ॥೯॥**

ಪ್ರಾಜ್ಞನಾದವನು ಯಾವಾಗಲೂ ಗರ್ವದಿಂದ ಕೂಡಿರಬಾರದು. ದೀರ್ಘಾಯುಷ್ಯವನ್ನು ಅಪೇಕ್ಷಿಸುವವನು ಮೂರು ರಾತ್ರಿಗಳು ತಪ್ತಕೃಚ್ಛ್ರ ವಿಧಿಗೆ ಅನುಸಾರವಾಗಿ ಬಿಸಿ-ಬಿಸಿಯಾದ ಹಾಲು, ತುಪ್ಪ ಮತ್ತು ನೀರನ್ನು ಕುಡಿಯಬೇಕು.

**ಅದತ್ತಸ್ಯಾನುಪಾದಾನಂ ದಾನಮಧ್ಯಯನಂ ತಪಃ ।**
**ಅಹಿಂಸಾ ಸತ್ಯಮಕ್ರೋಧ ಇಜ್ಯಾ ಧರ್ಮಸ್ಯ ಲಕ್ಷಣಮ್ ॥೧೦॥**

ಕೊಡದೇ ಇರುವ ವಸ್ತುವನ್ನು ತೆಗೆದುಕೊಳ್ಳದಿರುವುದು, ದಾನ ಮಾಡುವುದು, ವೇದಾಧ್ಯಯನ, ತಪಸ್ಸಿನಲ್ಲಿಯೇ ತತ್ಪರನಾಗಿರುವುದು, ಅಹಿಂಸೆ, ಸತ್ಯನಿಷ್ಠೆ, ಕೋಪಮಾಡಿಕೊಳ್ಳದೇ ಇರುವುದು, ಯಜ್ಞಮಾಡುವುದು–ಇವುಗಳು ಧರ್ಮದ ಲಕ್ಷಣಗಳಾಗಿವೆ.

**ಸ ಏವ ಧರ್ಮಃ ಸೋಽಧರ್ಮೋ ದೇಶಕಾಲೇ ಪ್ರತಿಷ್ಠಿತಃ ।**
**ಆದಾನಮನೃತಂ ಹಿಂಸಾ ಧರ್ಮೋ ಹ್ಯಾವಸ್ಥಿಕಃ ಸ್ಮೃತಃ ॥೧೧॥**

---

* ಉಷ್ಣಪೋ ಭವೇತ್–ಎಂಬುದಕ್ಕೆ ವ್ಯಾಖ್ಯಾನಕಾರರು ತಪ್ತಕೃಚ್ಛ್ರವ್ರತವೆಂದು ಅರ್ಥಮಾಡಿರುತ್ತಾರೆ. ಈ ವ್ರತವನ್ನು ಆಚರಿಸುವವನು ಮೂರು ದಿವಸ ಕಾಯಿಸಿದ ನೀರು, ಮೂರು ದಿವಸ ಕಾಯಿಸಿದ ಹಾಲು, ಮೂರು ದಿವಸ ಕಾಯಿಸಿದ ತುಪ್ಪ, ಮೂರು ದಿವಸ ಬಿಸಿಗಾಳಿ ( ಕಾಯಿಸಿದ ಹಾಲಿನ ಹಬೆ )–ಇವುಗಳನ್ನು ಕುಡಿಯಬೇಕು ಮತ್ತು ಪ್ರತಿದಿನವೂ ಒಂದೇ ಸಲ ಸ್ನಾನಮಾಡಬೇಕು.

ತಪ್ತಕೃಚ್ಛ್ರಂ ಚರನ್ವಿಪ್ರಃ ಜಲಕ್ಷೀರಘೃತಾನಿಲಾನ್ ।
ಪ್ರತಿತ್ರ್ಯಹಂ ಪಿಬೇದುಷ್ಣಾನ್ಸಕೃತ್ಸ್ನಾಯೀ ಸಮಾಹಿತಃ ॥

ಮನುಸ್ಮೃತಿಃ ಅಧ್ಯಾಯ-೧೧ ಶ್ಲೋಕ ೨೧೪

ಒಂದೇ ಕಾರ್ಯವು ದೇಶ-ಕಾಲಗಳ ವ್ಯತ್ಯಾಸಗಳನ್ನು ಅನುಸರಿಸಿ ಧರ್ಮವೂ ಆಗುತ್ತದೆ ; ಅಧರ್ಮವೂ ಆಗುತ್ತದೆ, ಕಳ್ಳತನ, ಸುಳ್ಳು ಹೇಳುವುದು, ಹಿಂಸೆ ಮೊದಲಾದ ಅಧರ್ಮಕ್ರಿಯೆಗಳೂ ದೇಶ-ಕಾಲಗಳ ಅವಸ್ಥಾವಿಶೇಷಗಳಲ್ಲಿ ಧರ್ಮಕಾರ್ಯಗಳೆಂದೇ ಪರಿಗಣಿಸಲ್ಪಡುವುದೂ ಉಂಟು.

**ದ್ವಿವಿಧೌ ಚಾಪ್ಯುಭಾವೇತೌ ಧರ್ಮಾಧರ್ಮೌ ವಿಜಾನತಾಮ್ ।**
**ಅಪ್ರವೃತ್ತಿಃ ಪ್ರವೃತ್ತಿಶ್ಚ ದ್ವೈವಿಧ್ಯಂ ಲೋಕವೇದಯೋಃ ॥೧೨॥**

ಹೀಗೆ ವಿದ್ವಾಂಸರ ದೃಷ್ಟಿಯಲ್ಲಿ ಧರ್ಮ ಮತ್ತು ಅಧರ್ಮ—ಈ ಎರಡೂ ದೇಶ-ಕಾಲಗಳ ವ್ಯತ್ಯಾಸದಿಂದ ಎರಡೆರಡು ಪ್ರಕಾರಗಳಾಗುತ್ತವೆ. ಧರ್ಮವು ಅಧರ್ಮವೂ ಆಗುತ್ತದೆ ; ಅಧರ್ಮವು ಧರ್ಮವೂ ಆಗುತ್ತದೆ. ಲೌಕಿಕವ್ಯವಹಾರಗಳಲ್ಲಿ ಮತ್ತು ವೈದಿಕವ್ಯವಹಾರಗಳಲ್ಲಿ ಅಪ್ರವೃತ್ತಿ ಮತ್ತು ಪ್ರವೃತ್ತಿ ಎಂಬ ಎರಡು ಬಗೆಯ ವ್ಯವಹಾರಗಳಿವೆ.

**ಅಪ್ರವೃತ್ತೇರಮರ್ತ್ಯತ್ವಂ ಮರ್ತ್ಯತ್ವಂ ಕರ್ಮಣಃ ಫಲಮ್ ।**
**ಅಶುಭಸ್ಯಾಶುಭಂ ವಿದ್ಯಾಚ್ಛುಭಸ್ಯ ಶುಭಮೇವ ಚ ।**
**ಏತಯೋಶ್ಚೋಭಯೋಃ ಸ್ಯಾತಾಂ ಶುಭಾಶುಭತಯಾ ತಥಾ ॥೧೩॥**

ಅಪ್ರವೃತ್ತಿಯಿಂದ ( ಪ್ರಾಪಂಚಿಕವ್ಯವಹಾರದಲ್ಲಿ ಆಸಕ್ತಿಯು ಇಲ್ಲದೇ ಇರುವುದರಿಂದ ) ಅಮೃತತತ್ವವು ( ದೇವತ್ವವು ) ಪ್ರಾಪ್ತವಾಗುತ್ತದೆ. ಪ್ರವೃತ್ತಿ ಮಾರ್ಗವನ್ನು ಅನುಸರಿಸಿ ( ಪ್ರಾಪಂಚಿಕವ್ಯವಹಾರಗಳಲ್ಲಿ ಸದಾ ಆಸಕ್ತಿ ಯನ್ನಿಟ್ಟುಕೊಂಡು ) ಮಾಡುವ ಕರ್ಮಗಳ ಫಲವೇ ಜನನ-ಮರಣರೂಪ ವಾದ ಸಂಸಾರ. ಪ್ರವೃತ್ತಿರೂಪವಾದ ಕರ್ಮಗಳಲ್ಲಿಯೂ ಶುಭ ಮತ್ತು ಅಶುಭಗಳೆಂಬ ಎರಡು ವಿಧವಾದ ಕರ್ಮಗಳುಂಟು. ಶುಭಕರ್ಮಗಳನ್ನು ಮಾಡಿದರೆ ಪುಣ್ಯಫಲವು ಲಭಿಸುತ್ತದೆ. ಅಶುಭಕರ್ಮಗಳನ್ನು ಮಾಡಿದರೆ ಪಾಪಫಲವು ಲಭಿಸುತ್ತದೆ. ಕರ್ಮಗಳೇ ಶುಭಾಶುಭಗಳೆಂದು ವಿಭಾಗಿ ಸಲ್ಪಟ್ಟಿರುವುದರಿಂದ ಫಲಗಳೂ ಶುಭಾಶುಭಫಲಗಳೆಂದೇ ವಿಭಾಗಿಸಲ್ಪಟ್ಟಿವೆ. (ಆದರೆ ಕೆಲವೊಮ್ಮೆ ದೇಶ-ಕಾಲಗಳನ್ನು ಅನುಸರಿಸಿ ಇದು ವಿಪರ್ಯಾಸ ವಾಗುವುದೂ ಉಂಟು.)

**ದೈವಂ ಚ ದೈವಸಂಯುಕ್ತಂ ಪ್ರಾಣಶ್ಚ ಪ್ರಾಣದಶ್ಚ ಹ ।**
**ಅಪೇಕ್ಷಾಪೂರ್ವಕರಣಾದಶುಭಾನಾಂ ಶುಭಂ ಫಲಮ್ ॥೧೪॥**

ದೇವತಾಸಂಬಂಧವಾದ ವಿಗ್ರಹಾದಿಗಳು, ದೇವತಾಯುಕ್ತವಾದ ದೇವ ಸ್ಥಾನಗಳು, ತನ್ನ ಪ್ರಾಣ, ತನ್ನ ಪ್ರಾಣವನ್ನುಳಿಸಿದವನು–ಈ ನಾಲ್ಕರ ರಕ್ಷಣೆಯ ಅಪೇಕ್ಷೆಯಿಂದ ಅಶುಭವಾದ (ತೋರಿಕೆಗೆ ಪಾಪಕರವಾದ) ಕಾರ್ಯಮಾಡಿದರೂ ಆ ಕರ್ಮವು ಶುಭಫಲವನ್ನೇ ನೀಡುತ್ತದೆ. (ಇದು ಅತ್ಯಂತಜಟಿಲವಾದ ಶ್ಲೋಕ. ಒಬ್ಬೊಬ್ಬರೂ ಒಂದೊಂದು ವಿಧವಾಗಿ ಅರ್ಥ ಮಾಡಿರುತ್ತಾರೆ. ವ್ಯಾಖ್ಯಾನಕಾರರು **ಅಶುಭಾನಾಂ** ಎಂಬುದಕ್ಕೆ ನೀಚ ಮನುಷ್ಯರಿಗೂ ಶುಭಫಲವು ಸಿಕ್ಕುತ್ತದೆ–ಎಂದು ಅರ್ಥಮಾಡಿರುತ್ತಾರೆ. ಕಾಲ-ದೇಶಾನುಸಾರವಾಗಿ ಶುಭಕರ್ಮವೂ ಅಶುಭಕರ್ಮವಾಗುತ್ತದೆ. ಅಶುಭಕರ್ಮವೂ ಶುಭಕರ್ಮವಾಗುತ್ತದೆ–ಎಂಬ ಪರ್ಯಾಯದಲ್ಲಿ ಈ ಶ್ಲೋಕವು ಬಂದಿದೆಯಾದುದರಿಂದ ನೀಚಮನುಷ್ಯರೆಂಬ ಅರ್ಥವು ಸ್ವಲ್ಪವೂ ಹೊಂದಿಕೊಳ್ಳುವುದಿಲ್ಲ. **ದೈವಂ** ಎಂಬುದಕ್ಕೆ ದೇವತಾನಿಮಿತ್ತವೆಂದೂ **ದೈವಸಂಯುಕ್ತಂ** ಎಂಬುದಕ್ಕೆ ಶಾಸ್ತ್ರೀಯಕರ್ಮವೆಂದೂ ಅರ್ಥಮಾಡಿರುತ್ತಾರೆ. **ಪ್ರಾಣಃ** ಎಂಬುದಕ್ಕೆ ಜೀವನಂ ಎಂದು ಅರ್ಥಮಾಡಿರುತ್ತಾರೆ. **ಪ್ರಾಣದಃ** ಎಂಬುದಕ್ಕೆ ಅರ್ಥಮಾಡಿರುವುದಿಲ್ಲ. **ಅಪೇಕ್ಷಾಪೂರ್ವಕರಣಾತ್** = ಪಾಪಕರ್ಮವೆಂದು ತಿಳಿದೂ ಪಾಪಕರ್ಮವನ್ನು ಮಾಡಿದರೂ ಶುಭಫಲವೇ ಉಂಟಾಗುತ್ತದೆ–ಎಂಬ ಅಭಿಪ್ರಾಯವೂ ಈ ಶ್ಲೋಕದಲ್ಲಿದೆ. ಅಂದರೆ ಈ ನಾಲ್ಕರ ರಕ್ಷಣೆಯು ಅಷ್ಟು ಮಹತ್ವದ್ದು. ದೈವ, ದೈವಸಂಯುಕ್ತ, ಪ್ರಾಣ ಮತ್ತು ಪ್ರಾಣದ–ಈ ನಾಲ್ಕು ವಿಷಯಗಳಲ್ಲಿ ತಿಳಿದೂ ಪಾಪಕರ್ಮಮಾಡಿದರೂ ಶುಭವೇ ಪ್ರಾಪ್ತವಾಗುತ್ತದೆ–ಎಂಬುದು ಒಟ್ಟು ಅಭಿಪ್ರಾಯ. **ದೈವಂ ದೈವಸಂಯುಕ್ತಂ** ಎಂಬುದನ್ನು ಹೇಗೆ ಬೇಕಾದರೂ ವ್ಯಾಖ್ಯಾನಿಸಬಹುದು. **ಪ್ರಾಣದಃ** = ಪ್ರಾಣದಾನಮಾಡುವವನು ; ಧನವನ್ನು ಕೊಡುವವನು ಎಂದೂ ಅರ್ಥವಾಗುತ್ತದೆ. ಪ್ರಾಣದಾನಮಾಡಿದವನು ಎಂದು ನಾವು ಅರ್ಥಮಾಡಿದ್ದೇವೆ. ಪ್ರಕರಣಕ್ಕೆ ಈ ಅರ್ಥವು ಸಮುಚಿತವಾಗಿ ಕಾಣುತ್ತದೆ. ವಿದ್ವಾಂಸರು ಅರ್ಥಾಂತರವೇನಾದರೂ ಇದ್ದರೆ ದಯಮಾಡಿ ತಿಳಿಸಬಹುದು.)

**ಊರ್ಧ್ವಂ ಭವತಿ ಸಂದೇಹಾದಿಹ ದೃಷ್ಟಾರ್ಥಮೇವ ಚ ।**
**ಅಪೇಕ್ಷಾಪೂರ್ವಕರಣಾತ್ಪ್ರಾಯಶ್ಚಿತ್ತಂ ವಿಧೀಯತೇ ॥೧೫॥**

ತಾನು ಮಾಡುತ್ತಿರುವುದು ಅಶುಭವೆಂಬುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ತಾನು ಮಾಡುವ ಆ ಪಾಪಕಾರ್ಯದಿಂದಲೇ ತನಗೆ ಪ್ರಯೋಜನವಾಗುವುದೆಂದೂ ತಿಳಿದಿರುತ್ತದೆ. ಅಂತಹ ಅಶುಭ ಕಾರ್ಯವನ್ನು ಮಾನವನು ಅಪೇಕ್ಷಾಪೂರ್ವಕವಾಗಿಯೇ ಮಾಡುತ್ತಾನೆ. ಅಥವಾ ತಾನು ಮಾಡಿರುವುದು ಪಾಪಕಾರ್ಯವಿರಬಹುದೆಂಬ ಸಂಶಯವಿರುತ್ತದೆ. ಅಂತಹ ಸಂದರ್ಭದಲ್ಲಿ ಪಾಪಸಂಘಟನೆಯು ಆಗಿಯೇ ಆಗುತ್ತದೆ. ಆ ಪಾಪನಿವಾರಣೆಗಾಗಿ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ. ವಿಧ್ಯುಕ್ತವಾದ ಆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಇಚ್ಛಾಪೂರ್ವಕವಾಗಿ ಮಾಡಿದ ಅಥವಾ ಸಂದೇಹದ ಪಾಪಕರ್ಮಫಲದಿಂದ ಮುಕ್ತನಾಗಬೇಕಾಗುತ್ತದೆ.

**ಕ್ರೋಧಮೋಹಕೃತೇ ಚೈವ ದೃಷ್ಟಾನ್ತಾಗಮಹೇತುಭಿಃ ।**
**ಶರೀರಾಣಾಮುಪಕ್ಲೇಶೋ ಮನಸಶ್ಚ ಪ್ರಿಯಾಪ್ರಿಯೇ ।**
**ತದೌಷಧೈಶ್ಚ ಮನ್ತ್ರೈಶ್ಚ ಪ್ರಾಯಶ್ಚಿತ್ತೈಶ್ಚ ಶಾಮ್ಯತಿ ॥೧೬॥**

ಕ್ರೋಧ-ಮೋಹಗಳಿಗೆ ವಶನಾಗಿ ಮನಸ್ಸಿಗೆ ಪ್ರಿಯವಾಗುವುದನ್ನು ಸಾಧಿಸಿಕೊಳ್ಳುವ ಕಾರಣದಿಂದ ಅಥವಾ ಮನಸ್ಸಿಗೆ ಅಪ್ರಿಯವೆನಿಸಿದ್ದನ್ನು ವಿನಾಶಗೊಳಿಸುವ ಕಾರಣದಿಂದ ಯಾವುದಾದರೂ ಪಾಪಕರ್ಮಗಳನ್ನು ಮಾಡಿದ್ದೇ ಆದರೆ–ಆ ಪಾಪಕರ್ಮದ ಫಲವನ್ನು ಹಿಂದಿನ ದೃಷ್ಟಾಂತ ಗಳಿಂದಲೂ, ಶಾಸ್ತ್ರಗಳಿಂದಲೂ ಮತ್ತು ಕಾರಣಗಳಿಂದಲೂ ನಿಶ್ಚಿತವಾದ ಪ್ರಾಯಶ್ಚಿತ್ತಾದಿಗಳಿಂದ ನಿವಾರಿಸಿಕೊಳ್ಳಬೇಕು. ಉಪವಾಸಾದಿಗಳ ಮೂಲಕ ಶರೀರವನ್ನು ಕ್ಲೇಶಗೊಳಿಸುವುದರಿಂದಲೂ, ಹವಿಷ್ಯಾನ್ನಭೋಜನದಿಂದಲೂ, ಮಂತ್ರಜಪದಿಂದಲೂ ಮತ್ತು ಪ್ರಾಯಶ್ಚಿತ್ತಗಳಿಂದಲೂ ಈ ಪಾಪವನ್ನು ನಿವಾರಿಸಿಕೊಳ್ಳಬಹುದಾಗಿದೆ. ( ಔಷಧೈಃ ಎಂಬುದಕ್ಕೆ ಹವಿಷ್ಯಾನ್ನಾಶನೈಃ = ಹವಿಷ್ಯಾನ್ನವನ್ನು ಭೋಜನಮಾಡುವುದರಿಂದ–ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. )

**ಉಪವಾಸಮೇಕರಾತ್ರಂ ದಣ್ಡೋತ್ಸರ್ಗೇ ನರಾಧಿಪಃ ।**
**ವಿಶುದ್ಧ್ಯೇದಾತ್ಮಶುದ್ಧ್ಯರ್ಥಂ ತ್ರಿರಾತ್ರಂ ತು ಪುರೋಹಿತಃ ॥೧೭॥**

ರಾಜನು ಶಿಕ್ಷಾರ್ಹನಾದವನಿಗೆ ಶಿಕ್ಷೆಯನ್ನು ಕೊಡದಿದ್ದರೆ ಅವನು ದೋಷಕ್ಕೆ ಭಾಗಿಯಾಗುತ್ತಾನೆ. ಆ ಪಾಪದ ಪರಿಹಾರಾರ್ಥವಾಗಿ ರಾಜನು ಒಂದು ದಿನ ಉಪವಾಸಮಾಡಬೇಕು. ಇಂತಹ ಸಂದರ್ಭದಲ್ಲಿ ಪುರೋಹಿತನೇನಾದರೂ ರಾಜನಿಗೆ ಕರ್ತವ್ಯದ ಉಪದೇಶವನ್ನು ಮಾಡದಿದ್ದರೆ–ಪುರೋಹಿತನೂ ದೋಷಕ್ಕೆ ಭಾಗಿಯಾಗುತ್ತಾನೆ. ಆ ಪಾಪದ ಪರಿಹಾರಾರ್ಥವಾಗಿ ಮತ್ತು ಆತ್ಮಶುದ್ಧಿಗಾಗಿ ಪುರೋಹಿತನೂ ಮೂರು ದಿವಸಗಳು ಉಪವಾಸ ಮಾಡಬೇಕು.

**ಕ್ಷಯಂ ಶೋಕಂ ಪ್ರಕುರ್ವಾಣೋ ನ ಮ್ರಿಯೇತ ಯದಾ ನರಃ ।**
**ಶಸ್ತ್ರಾದಿಭಿರುಪಾವಿಷ್ಟಸ್ತ್ರಿರಾತ್ರಂ ತತ್ರ ನಿರ್ದಿಶೇತ್ ॥೧೮॥**

( ಈ ಶ್ಲೋಕವು ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಹೊರಟು ವಿಫಲನಾದವನಿಗೆ ಹೇಳಿರುವ ಪ್ರಾಯಶ್ಚಿತ್ತವೆಂದು ಊಹಿಸಬಹುದಾಗಿದೆ. )

ಬಂಧುಗಳು ಮೃತರಾದರೆಂಬ ಕಾರಣದಿಂದ ದುಃಖವನ್ನು ಸಹಿಸಲಾಗದೇ ತಾನೂ ಸಾಯುವುದಾಗಿ ನಿರ್ಧರಿಸಿ ಪ್ರಾಯೋಪವೇಶದ ಮೂಲಕ ಅಥವಾ ಶಸ್ತ್ರಾಸ್ತ್ರಗಳ ಮೂಲಕ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಹೋಗಿ ಸಫಲನಾಗದಿದ್ದರೆ ಅಂತಹವನೂ ದೋಷಕ್ಕೆ ಭಾಗಿಯಾಗುತ್ತಾನೆ. ಆ ಪಾಪಪರಿಹಾರಕ್ಕಾಗಿ ಮೂರು ದಿವಸಗಳು ಉಪವಾಸವನ್ನು ಮಾಡಬೇಕು.

**ಜಾತಿಶ್ರೇಣ್ಯಧಿವಾಸಾನಾಂ ಕುಲಧರ್ಮಾಂಶ್ಚ ಸರ್ವತಃ ।**
**ವರ್ಜಯನ್ತಿ ಚ ಯೇ ಧರ್ಮಂ ತೇಷಾಂ ಧರ್ಮೋ ನ ವಿದ್ಯತೇ ॥**

ಯಾವ ಮನುಷ್ಯರು ಬ್ರಾಹ್ಮಣಾದಿ ಜಾತಿಗಳ ಧರ್ಮವನ್ನೂ, ಬ್ರಹ್ಮಚರ್ಯ–ಗೃಹಸ್ಥಾದಿ ಆಶ್ರಮಧರ್ಮಗಳನ್ನೂ, ಮಾತೃಭೂಮಿಯನ್ನೂ, ಕುಲಧರ್ಮಗಳನ್ನೂ ಬಿಟ್ಟುಬಿಡುತ್ತಾರೆಯೋ ಮತ್ತು ಧರ್ಮವೆಂಬುದನ್ನೇ ಸಂಪೂರ್ಣವಾಗಿ ತ್ಯಾಗಮಾಡುತ್ತಾರೆಯೋ–ಅಂತಹವರಿಗೆ ಯಾವ ವಿಧವಾದ ಪ್ರಾಯಶ್ಚಿತ್ತಧರ್ಮವೂ ಇರುವುದಿಲ್ಲ. ಯಾವ ವಿಧವಾದ ಪ್ರಾಯಶ್ಚಿತ್ತದಿಂದಲೂ ಅಂತಹವರು ಪರಿಶುದ್ಧರಾಗುವುದಿಲ್ಲ.

**ದಶ ವಾ ವೇದಶಾಸ್ತ್ರಜ್ಞಾಸ್ತ್ರಯೋ ವಾ ಧರ್ಮಪಾಠಕಾಃ ।**
**ಯದ್ಬ್ರೂಯುಃ ಕಾರ್ಯ ಉತ್ಪನ್ನೇ ಸ ಧರ್ಮೋ**
**ಧರ್ಮಸಂಶಯೇ ॥೨೦॥**

ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದ ಸನ್ನಿವೇಶವು ಒದಗಿದಾಗ ಯಾವ ವಿಧವಾದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂಬ ಧರ್ಮ ನಿರ್ಣಯದಲ್ಲಿ ಸಂದೇಹವುಂಟಾದಲ್ಲಿ, ವೇದ-ಶಾಸ್ತ್ರಗಳನ್ನು ಸಂಪೂರ್ಣವಾಗಿ ಅಧ್ಯಯನಮಾಡಿರುವ ಹತ್ತು ಮಂದಿ ವಿದ್ವಾಂಸರೇ ಆಗಲೀ ಅಥವಾ ನಿರಂತರವಾಗಿ ಧರ್ಮಾಧರ್ಮಗಳ ವಿಚಾರವನ್ನೇ ತರ್ಕಿಸುತ್ತಾ ಜನರಿಗೆ ತಿಳಿಯಹೇಳುವ ಮೂವರು ವಿದ್ವಾಂಸರೇ ಆಗಲಿ—ಮಾಡುವ ನಿರ್ಣಯವೇ ಧರ್ಮಸಮ್ಮತವಾಗಿರುತ್ತದೆ.

**ಅನಡ್ವಾನ್ಮೃತ್ತಿಕಾ ಚೈವ ತಥಾ ಕ್ಷುದ್ರಪಿಪೀಲಿಕಾಃ ।**
**ಶ್ಲೇಷ್ಮಾತಕಸ್ತಥಾ ವಿಪ್ರೈರಭಕ್ಷ್ಯಂ ವಿಷಮೇವ ಚ ॥೨೧॥**

ಬ್ರಾಹ್ಮಣರು ಎತ್ತನ್ನೂ ( ಎತ್ತಿನ ಮಾಂಸವನ್ನೂ ), ಮೃತ್ತಿಕೆಯನ್ನೂ, ಚಿಕ್ಕ ಇರುವೆಗಳನ್ನೂ, ಚಳ್ಳೆಹಣ್ಣನ್ನೂ, ವಿಷಪದಾರ್ಥಗಳನ್ನೂ ತಿನ್ನಬಾರದು.

**ಅಭಕ್ಷ್ಯಾ ಬ್ರಾಹ್ಮಣೈರ್ಮತ್ಸ್ಯಾಃ ಶಲ್ಕೈರ್ಯೇ ವೈ ವಿವರ್ಜಿತಾಃ ।**
**ಚತುಷ್ಪಾತ್ಕಚ್ಛಪಾದನ್ಯೋ ಮಣ್ಡೂಕಾ ಜಲಜಾಶ್ಚ ಯೇ ॥೨೨॥**

ಮುಳ್ಳುಗಳಿಂದ ರಹಿತವಾದ ಮೀನುಗಳನ್ನು ಬ್ರಾಹ್ಮಣರು ಭಕ್ಷಿಸಬಾರದು. ಆಮೆಯನ್ನು ಬಿಟ್ಟು ಬೇರೆಯ ಚತುಷ್ಪಾದಿಗಳಾದ ಪ್ರಾಣಿಗಳನ್ನು ಬ್ರಾಹ್ಮಣರು ಭಕ್ಷಿಸಬಾರದು. ಕಪ್ಪೆಗಳನ್ನೂ ಮತ್ತು ಇತರ ಯಾವುದೇ ಜಲಚರಪ್ರಾಣಿಗಳನ್ನೂ ಬ್ರಾಹ್ಮಣರು ಭಕ್ಷಿಸಬಾರದು.

**ಭಾಸಾ ಹಂಸಾಃ ಸುಪರ್ಣಾಶ್ಚ ಚಕ್ರವಾಕಾಃ ಪ್ಲವಾ ಬಕಾಃ ।**
**ಕಾಕೋ ಮದ್ಗುಶ್ಚ ಗೃಧ್ರಶ್ಚ ಶ್ಯೇನೋಲೂಕಸ್ತಥೈವ ಚ ॥೨೩॥**

**ಕ್ರವ್ಯಾದಾಃ ಪಕ್ಷಿಣಃ ಸರ್ವೇ ಚತುಷ್ಪಾದಾಶ್ಚ ದಂಷ್ಟ್ರಿಣಃ ।**
**ಯೇಷಾಂ ಚೋಭಯತೋ ದನ್ತಾಶ್ಚತುರ್ದಂಷ್ಟ್ರಾಶ್ಚ ಸರ್ವಶಃ ॥೨೪॥**

ಭಾಸ, ಹಂಸ, ಗರುಡ, ಚಕ್ರವಾಕ, ಬಾತುಕೋಳಿ, ಬಕಪಕ್ಷಿ, ಕಾಗೆ,

ಮದ್ಗು ( ಜಲಚರಪಕ್ಷಿ ), ಗೃಧ್ರ, ಗಿಡಗ, ಗೂಬೆ, ಮಾಂಸವನ್ನು ತಿನ್ನುವ ಎಲ್ಲ ಪಕ್ಷಿಗಳು, ನಾಲ್ಕು ಕಾಲುಗಳುಳ್ಳ ಕೋರೆಹಲ್ಲುಗಳಿರುವ ಎಲ್ಲ ಹಿಂಸ್ರ ಮೃಗಗಳು, ಎರಡು ಕಡೆಗಳಲ್ಲಿಯೂ ಹಲ್ಲುಗಳಿರುವ ಪ್ರಾಣಿಗಳು, ನಾಲ್ಕು ಕೋರೆಹಲ್ಲುಗಳಿರುವ ಪ್ರಾಣಿಗಳು–ಈ ಎಲ್ಲವೂ ಬ್ರಾಹ್ಮಣರಿಗೆ ಅಭಕ್ಷ್ಯವಾದುವುಗಳು.

**ಏಡಕಾಶ್ವಖರೋಷ್ಟ್ರೀಣಾಂ ಸೂತಿಕಾನಾಂ ಗವಾಮಪಿ ।**
**ಮಾನುಷೀಣಾಂ ಮೃಗೀಣಾಂ ಚ ನ ಪಿಬೇದ್ಬ್ರಾಹ್ಮಣಃಪಯಃ ॥೨೫॥**

ಕುರಿ, ಕುದುರೆ, ಕತ್ತೆ, ಒಂಟೆ, ಈದು ಹತ್ತು ದಿವಸಗಳು ಕಳೆಯದೇ ಇರುವ ಜಾತಾಶೌಚಯುಕ್ತವಾದ ಹಸು, ಮನುಷ್ಯಸ್ತ್ರೀಯರು ಮತ್ತು ಜಿಂಕೆ–ಇವುಗಳ ಹಾಲನ್ನು ಬ್ರಾಹ್ಮಣನು ಕುಡಿಯಬಾರದು.

**ಪ್ರೇತಾನ್ನಂ ಸೂತಿಕಾನ್ನಂ ಚ ಯಚ್ಚ ಕಿಂಚಿದನಿರ್ದಶಮ್ ।**
**ಅಭೋಜ್ಯಂ ಚಾಪ್ಯಪೇಯಂ ಚ ಧೇನೋರ್ದುಗ್ಧಮನಿರ್ದಶಮ್ ॥೨೬॥**

ಮರಣಾಶೌಚವಾಗಲೀ–ಜಾತಾಶೌಚವಾಗಲೀ ಇರುವ ಮನೆಯಲ್ಲಿ ಆಶೌಚವು ಪ್ರಾರಂಭವಾದ ಹತ್ತು ದಿವಸಗಳವರೆಗೆ ಭೋಜನಮಾಡಬಾರದು. ಅಂತೆಯೇ ಹಸುವು ಕರುಹಾಕಿದ ಹತ್ತು ದಿವಸಗಳವರೆಗೆ ಅದರ ಹಾಲನ್ನು ಕುಡಿಯಬಾರದು.

**ರಾಜಾನ್ನಂ ತೇಜ ಆದತ್ತೇ ಶೂದ್ರಾನ್ನಂ ಬ್ರಹ್ಮವರ್ಚಸಮ್ ।**
**ಆಯುಃ ಸುವರ್ಣಕಾರಾನ್ನಮವೀರಾಯಾಶ್ಚ ಯೋಷಿತಃ ॥೨೭॥**

ಬ್ರಾಹ್ಮಣನು ರಾಜಾನ್ನವನ್ನು ಊಟಮಾಡಿದರೆ ತೇಜಸ್ಸನ್ನು ಕಳೆದುಕೊಳ್ಳುತ್ತಾನೆ. ಶೂದ್ರಾನ್ನವನ್ನು ಊಟಮಾಡಿದರೆ ಬ್ರಹ್ಮವರ್ಚಸ್ಸನ್ನು ಕಳೆದುಕೊಳ್ಳುತ್ತಾನೆ. ಸುವರ್ಣಕಾರನ ( ಅಕ್ಕಸಾಲೆಯ ) ಅನ್ನವನ್ನು ಊಟಮಾಡಿದರೆ ಮತ್ತು ಪತಿಯಿಂದಲೂ ಪುತ್ರನಿಂದಲೂ ಹೀನಳಾದ ಸ್ತ್ರೀಯ ಅನ್ನವನ್ನು ಊಟಮಾಡಿದರೆ ಆಯುಷ್ಯವನ್ನು ಕಳೆದುಕೊಳ್ಳುತ್ತಾನೆ. ( ರಾಜ, ಶೂದ್ರ, ಸುವರ್ಣಕಾರ ಮತ್ತು ಪತಿ-ಸುತವಿಹೀನೆಯಾದ ಸ್ತ್ರೀ–ಇವರ ಅನ್ನವು ಬ್ರಾಹ್ಮಣನಿಗೆ ನಿಷಿದ್ಧ. )

**ವಿಷ್ಠಾ ವಾರ್ಧುಷಿಕಸ್ಯಾನ್ನಂ ಗಣಿಕಾನ್ನಮಥೇನ್ದ್ರಿಯಮ್ ।**
**ಮೃಷ್ಯನ್ತಿ ಯೇ ಚೋಪಪತಿಂ ಸ್ತ್ರೀಜಿತಾನ್ನಂ ಚ ಸರ್ವಶಃ ॥೨೮॥**

ಬಡ್ಡಿಹಣದಿಂದ ಜೀವಿಸುವವನ ಅನ್ನವು ಅಮೇಧ್ಯಕ್ಕೆ ಸಮಾನವಾದುದು. ವೇಶ್ಯೆಯ ಅನ್ನವು ರೇತಸ್ಸಿಗೆ ಸಮಾನವಾದುದು. ತನ್ನ ಪತ್ನಿಯು ಉಪಪತಿಯೊಡನಿರುವುದನ್ನು ಯಾವನು ಸಹಿಸಿಕೊಳ್ಳುವನೋ ಮತ್ತು ಯಾವನು ಸ್ತ್ರೀಗೆ ಅಡಿಯಾಳಾಗಿರುವನೋ–ಅವನ ಅನ್ನವೂ ರೇತಸ್ಸಿಗೆ ಸಮಾನವಾದುದು. ( ಇವರ ಅನ್ನವು ಭಕ್ಷಿಸಲು ಯೋಗ್ಯವಲ್ಲ. )

**ದೀಕ್ಷಿತಸ್ಯ ಕದರ್ಯಸ್ಯ ಕ್ರತುವಿಕ್ರಯಿಕಸ್ಯ ಚ ।**
**ತಕ್ಷ್ಣಶ್ಚರ್ಮಾವಕರ್ತುಶ್ಚ ಪುಂಶ್ಚಲ್ಯಾ ರಜಕಸ್ಯ ಚ ।**
**ಚಿಕಿತ್ಸಕಸ್ಯ ಯಚ್ಚಾನ್ನಮಭೋಜ್ಯಂ ರಕ್ಷಿಣಸ್ತಥಾ ॥೨೯॥**

ಅಗ್ನೀಷೋಮೀಯವೆಂಬ ಯಾಗಕ್ಕೆ ಮೊದಲು ಯಜ್ಞದೀಕ್ಷಿತನಾದ ಯಜಮಾನನಿಗೆ ಸಂಬಂಧಿಸಿದ ಅನ್ನವನ್ನು ತಿನ್ನಬಾರದು. ಜಿಪುಣನ ಅನ್ನವನ್ನು ತಿನ್ನಬಾರದು. ಯಜ್ಞವನ್ನು (ಪೂಜೆ ಮತ್ತು ಉಪಾಸನೆಗಳನ್ನು) ವ್ಯಾಪಾರದೃಷ್ಟಿಯಿಂದ ಮಾಡುವವನ ಅನ್ನವನ್ನು ತಿನ್ನಬಾರದು. ಬಡಗಿ, ಚಮ್ಮಾರ, ವ್ಯಭಿಚಾರಿಣೀ, ಅಗಸ, ವೈದ್ಯ ಮತ್ತು ಗ್ರಾಮರಕ್ಷಕ–ಇವರ ಅನ್ನವನ್ನೂ ಭಕ್ಷಿಸಬಾರದು.

**ಗಣಗ್ರಾಮಾಭಿಶಸ್ತಾನಾಂ ರಙ್ಗಸ್ತ್ರೀಜೀವಿನಾಂ ತಥಾ ।**
**ಪರಿವಿತ್ತೀನಾಂ ಪುಂಸಾಂ ಚ ಬನ್ದಿದ್ಯೂತವಿದಾಂ ತಥಾ ॥೩೦॥**

ಸಮಾಜದಿಂದಲೂ ಮತ್ತು ಗ್ರಾಮದಿಂದಲೂ ಬಹಿಷ್ಕೃತನಾದವನ ಅನ್ನವನ್ನು ತಿನ್ನಬಾರದು. ನರ್ತಕಿಯ ಆಶ್ರಯದಿಂದ ಜೀವನವನ್ನು ನಡೆಸುವವನ ಅಥವಾ ರಂಗಜೀವಿಯಾದವನ ಮತ್ತು ಸ್ತ್ರೀಜೀವಿಯಾದವನ ಅನ್ನವನ್ನೂ ತಿನ್ನಬಾರದು. ತಮ್ಮನ ವಿವಾಹವಾದನಂತರ ವಿವಾಹಿತನಾದವನ ಅನ್ನವನ್ನು ತಿನ್ನಬಾರದು. ವಂದಿ-ಮಾಗಧ-ಸ್ತೋತ್ರಪಾಠಕರ ಅನ್ನವನ್ನೂ ಮತ್ತು ಜೂಜಾಟದಲ್ಲಿ ಆಸಕ್ತನಾದವನ ಅನ್ನವನ್ನೂ ತಿನ್ನಬಾರದು.

**ವಾಮಹಸ್ತಾಹೃತಂ ಚಾನ್ನಂ ಭಕ್ತಂ ಪರ್ಯುಷಿತಂ ಚ ಯತ್ ।**
**ಸುರಾನುಗತಮುಚ್ಛಿಷ್ಟಮಭೋಜ್ಯಂ ಶೇಷಿತಂ ಚ ಯತ್ ॥೩೧॥**

ಎಡಗೈಯಿಂದ ತಂದ ಅನ್ನವನ್ನು ತಿನ್ನಬಾರದು. ಊಟಕ್ಕೆ ಕುಳಿತು

ಕೊಳ್ಳುವ ಮೊದಲೇ ಬಡಿಸಿದ ಅನ್ನವನ್ನು ತಿನ್ನಬಾರದು. ಒಂದು ರಾತ್ರಿಯನ್ನು ಕಳೆದಿರುವ ಅನ್ನವನ್ನು ತಿನ್ನಬಾರದು. ಮದ್ಯದ ಸಮೀಪದಲ್ಲಿರುವ ಅನ್ನವನ್ನು ತಿನ್ನಬಾರದು. ಒಬ್ಬರಿಗೆ ಬಡಿಸಿದನಂತರ ಉಳಿದಿರುವ ಅದೇ ಸೌಟಿನ ಅನ್ನವನ್ನು ತಿನ್ನಬಾರದು. ಎಲ್ಲರೂ ತಿಂದು ಮಿಕ್ಕಿರುವ ಅನ್ನವನ್ನೂ ತಿನ್ನಬಾರದು.

**ಪಿಷ್ಟಸ್ಯ ಚೇಕ್ಷುಶಾಕಾನಾಂ ವಿಕಾರಾಃ ಪಯಸಸ್ತಥಾ ।**
**ಸಕ್ತುಧಾನಾಕರಮ್ಭಾಣಾಂ ನೋಪಭೋಗ್ಯಾಶ್ಚಿರಸ್ಥಿತಾಃ ॥೩೨॥**

ಹಿಟ್ಟು, ಕಬ್ಬಿನರಸ, ತರಕಾರಿ, ಹಾಲು–ಇವುಗಳನ್ನು ವಿಕೃತಗೊಳಿಸಿ ತಯಾರಿಸಿದ ಪದಾರ್ಥಗಳನ್ನೂ, ತಂಬಿಟ್ಟು, ಹುರಿದಹಿಟ್ಟು ಮತ್ತು ಕಲಸಿದ ಅನ್ನವನ್ನೂ ಬಹಳ ಹೊತ್ತು ಕಳೆದನಂತರ ತಿನ್ನಬಾರದು.

**ಪಾಯಸಂ ಕೃಸರಂ ಮಾಂಸಮಪೂಪಾಶ್ಚಾ ವೃಥಾಕೃತಾಃ ।**
**ಅಪೇಯಾಶ್ಚಾಪ್ಯಭಕ್ಷ್ಯಾಶ್ಚ ಬ್ರಾಹ್ಮಣೈರ್ಗೃಹಮೇಧಿಭಿಃ ॥೩೩॥**

ಪಾಯಸ, ತಿಲಾನ್ನ, ಮಾಂಸ, ಹೋಳಿಗೆ–ಇವುಗಳನ್ನು ದೇವತಾ ಪ್ರೀತ್ಯರ್ಥವಾಗಿ ಮಾಡದೇ ತಮಗಾಗಿಯೇ ಮಾಡಿದ್ದರೆ ಗೃಹಸ್ಥರಾದ ಬ್ರಾಹ್ಮಣರು ಅವುಗಳನ್ನು ಕುಡಿಯಲೂಬಾರದು ; ಭಕ್ಷಿಸಲೂಬಾರದು.

**ದೇವಾನೃಷೀನ್ಮನುಷ್ಯಾಂಶ್ಚ ಪಿತೄನ್ಗೃಹ್ಯಾಶ್ಚ ದೇವತಾಃ ।**
**ಪೂಜಯಿತ್ವಾ ತತಃ ಪಶ್ಚಾದ್ಗೃಹಸ್ಥೋ ಭೋಕ್ತುಮರ್ಹತಿ ॥೩೪॥**

ದೇವರ್ಷಿ-ಪಿತೃಗಳನ್ನೂ, ಅತಿಥಿಗಳನ್ನೂ, ಗೃಹದೇವತೆಗಳನ್ನೂ ಪೂಜಿಸಿ, ಸಿದ್ಧಪಡಿಸಿದ ಅನ್ನವನ್ನು ನಿವೇದನಮಾಡಿದನಂತರ ಗೃಹಸ್ಥರು ಭೋಜನಮಾಡಬೇಕು.

**ಯಥಾ ಪ್ರವ್ರಜಿತೋ ಭಿಕ್ಷುಸ್ತಥೈವ ಸ್ವೇ ಗೃಹೇ ವಸೇತ್ ।**
**ಏವಂವೃತ್ತಃ ಪ್ರಿಯೈರ್ದಾರೈಃ ಸಂವಸನ್ಧರ್ಮಮಾಪ್ನುಯಾತ್ ॥೩೫॥**

ಗೃಹತ್ಯಾಗಿಯಾದ ಸಂನ್ಯಾಸಿಯು ಅನಾಸಕ್ತನಾಗಿ ಇರುವಂತೆಯೇ ಗೃಹಸ್ಥನೂ ಮಮತಾಸಕ್ತಿಗಳನ್ನು ಬಿಟ್ಟು ಗೃಹಕೃತ್ಯಗಳನ್ನು ನಿರ್ವಹಿಸಬೇಕು. ಈ ರೀತಿಯಲ್ಲಿ ಪತ್ನೀ-ಪುತ್ರರೊಡನಿರುವ ಗೃಹಸ್ಥನು ಧರ್ಮದ ಸಂಪೂರ್ಣ ಫಲವನ್ನೂ ಪಡೆಯುತ್ತಾನೆ.

**ನ ದದ್ಯಾದ್ಯಶಸೇ ದಾನಂ ನ ಭಯಾನ್ನೋಪಕಾರಿಣೇ ।**
**ನ ನೃತ್ಯಗೀತಶೀಲೇಷು ಹಾಸಕೇಷು ಚ ಧಾರ್ಮಿಕಃ ॥೩೬॥**

**ನ ಮತ್ತೇ ಚೈವ ನೋನ್ಮತ್ತೇ ನ ಸ್ತೇನೇ ನ ಚ ಕುತ್ಸಕೇ ।**
**ನ ವಾಗ್ಘೀನೇ ವಿವರ್ಣೇ ವಾ ನಾಙ್ಗಹೀನೇ ನ ವಾಮನೇ ॥೩೭॥**

**ನ ದುರ್ಜನೇ ದೌಷ್ಕುಲೇ ವಾ ವ್ರತೈರ್ಯೋ ವಾ ನ ಸಂಸ್ಕೃತಃ ।**
**ನ ಶ್ರೋತ್ರೀಯಮೃತೇ ದಾನಂ ಬ್ರಾಹ್ಮಣೇ ಬ್ರಹ್ಮವರ್ಜಿತೇ ॥೩೮॥**

ಧರ್ಮಾತ್ಮನಾದವನು ಯಶಸ್ಸನ್ನು ಗಳಿಸುವ ಇಚ್ಛೆಯಿಂದ ದಾನ ಮಾಡಬಾರದು. ಭಯದಿಂದ ದಾನಮಾಡಬಾರದು. ಉಪಕಾರಮಾಡಿದವನಿಗೆ ಪ್ರತ್ಯುಪಕಾರವನ್ನು ಮಾಡಬೇಕೆನ್ನುವ ಇಚ್ಛೆಯಿಂದಲೂ ದಾನಮಾಡಬಾರದು–ನೃತ್ಯ-ಗೀತಗಳನ್ನೇ ಜೀವಿಕೆಗಾಗಿ ಇಟ್ಟುಕೊಂಡಿರುವವರಿಗೂ, ಹಾಸ್ಯಪ್ರವೃತ್ತಿಯಿರುವವರಿಗೂ ( ವಿದೂಷಕರಿಗೂ ) ದಾನಮಾಡಬಾರದು. ಮತ್ತನಾಗಿರುವವನಿಗೂ, ಹುಚ್ಚನಿಗೂ, ಕಳ್ಳನಿಗೂ, ಪರನಿಂದೆಯನ್ನು ಮಾಡುವವನಿಗೂ, ಮೂಕನಿಗೂ, ಮುಖದಲ್ಲಿ ವರ್ಚಸ್ಸಿಲ್ಲದವನಿಗೂ, ಅಂಗವಿಕಲನಿಗೂ, ಕುಳ್ಳನಿಗೂ, ದುಷ್ಟನಿಗೂ, ದುಷ್ಕುಲದಲ್ಲಿ ಹುಟ್ಟಿದವನಿಗೂ, ವ್ರತಾದಿಗಳಿಂದ ಸಂಸ್ಕಾರಿಯಾಗದೇ ಇರುವವನಿಗೂ, ವೇದದಿಂದ ವಿಹೀನನಾದ ಬ್ರಾಹ್ಮಣನಿಗೂ ದಾನವನ್ನು ಕೊಡಬಾರದು. ಸತ್ಕುಲದಲ್ಲಿ ಹುಟ್ಟಿದ ಸದಾಚಾರಸಂಪನ್ನನಾದ ಶ್ರೋತ್ರಿಯನೊಬ್ಬನನ್ನು ಬಿಟ್ಟು ಬೇರೆ ಯಾರಿಗೂ ದಾನವನ್ನು ಕೊಡಬಾರದು.

**ಅಸಮ್ಯಕ್ಚೈವ ಯದ್ದತ್ತಮಸಮ್ಯಕ್ಚ ಪ್ರತಿಗ್ರಹಃ ।**
**ಉಭಯಂ ಸ್ಯಾದನರ್ಥಾಯ ದಾತುರಾದಾತುರೇವ ಚ ॥೩೯॥**

ಶಾಸ್ತ್ರವಿಹಿತವಾದ ರೀತಿಯಲ್ಲಿ ಶ್ರದ್ಧೆಯಿಂದ ದಾನವನ್ನು ಕೊಡದೇ ತೋರಿದಂತೆ ಕೊಡುವುದು ಮತ್ತು ಅರ್ಹತೆಯಿಲ್ಲದಿದ್ದರೂ ದಾನವನ್ನು ಪ್ರತಿಗ್ರಹಿಸುವುದು–ಈ ಎರಡೂ ದಾನಕೊಡುವವನಿಗೂ ಮತ್ತು ದಾನ ತೆಗೆದುಕೊಳ್ಳುವವನಿಗೂ ಅನರ್ಥಕ್ಕೆ ಕಾರಣಗಳಾಗುತ್ತವೆ.

**ಯಥಾ ಖದಿರಮಾಲಮ್ಬ್ಯ ಶಿಲಾಂ ವಾಪ್ಯರ್ಣವಂ ತರನ್ ।**
**ಮಜ್ಜೇತ ಮಜ್ಜತಸ್ತದ್ವದ್ದಾತಾ ಯಶ್ಚ ಪ್ರತಿಗ್ರಹೀ ॥೪೦॥**

ಕಗ್ಗಲೀಮರದ ತುಂಡನ್ನೋ ಅಥವಾ ಕಲ್ಲುಗುಂಡನ್ನೋ ಆಶ್ರಯಿಸಿ ಕೊಂಡು ಸಮುದ್ರವನ್ನು ದಾಟಲು ಹೋದರೆ ತುಂಡೂ ಮುಳುಗಿ ಹೋಗುತ್ತದೆ. ಕಲ್ಲುಗುಂಡೂ ಮುಳುಗಿಹೋಗುತ್ತದೆ. ಅದರ ಜೊತೆ ಯಲ್ಲಿಯೇ ಸಮುದ್ರವನ್ನು ದಾಟಲು ಹೋದ ಮನುಷ್ಯನೂ ಮುಳುಗಿ ಹೋಗುತ್ತಾನೆ. ಹಾಗೆಯೇ ದಾನಧರ್ಮವನ್ನು ಅವಲಂಬಿಸಿ ಪಾಪಸಮುದ್ರ ವನ್ನು ದಾಟಲಿಚ್ಛಿಸುವ ದಾನಿಯು ಯಥಾವಿಧಿಯಾಗಿ, ಶ್ರದ್ಧಾಪೂರ್ವಕವಾಗಿ ಸತ್ಪಾತ್ರನಲ್ಲಿ ದಾನಮಾಡದೇ ಅಪಾತ್ರನಿಗೆ ದಾನಮಾಡಿದರೆ ದಾನ ತೆಗೆದುಕೊಳ್ಳುವವನೂ ಯೋಗ್ಯನಾಗಿರದಿದ್ದರೆ–ಇಬ್ಬರೂ ಅಧೋಗತಿಗೆ ಹೋಗುತ್ತಾರೆ. ನರಕದಲ್ಲಿ ಮುಳುಗುತ್ತಾರೆ.

**ಕಾಷ್ಠೈರಾರ್ದ್ರೈರ್ಯಥಾ ವಹ್ನಿರುಪಸ್ತೀರ್ಣೋ ನ ದೀಪ್ಯತೇ ।**
**ತಪಃಸ್ವಾಧ್ಯಾಯಚಾರಿತ್ರ್ಯೈರೇವಂ ಹೀನಃ ಪ್ರತಿಗ್ರಹೀ ॥೪೧॥**

ಹಸಿಯಾದ ಕಟ್ಟಿಗೆಗಳನ್ನು ಅಗ್ನಿಯಲ್ಲಿ ಹಾಕಿದರೆ ಆ ಕಟ್ಟಿಗೆಗಳಿಂದ ಅಗ್ನಿಯು ಜಾಜ್ವಲ್ಯಮಾನವಾಗಿ ಉರಿಯದಿರುವಂತೆ–ತಪಃಸ್ವಾಧ್ಯಾಯ ಗಳಿಂದಲೂ ಮತ್ತು ಸದಾಚಾರಗಳಿಂದಲೂ ಹೀನನಾದ ಪ್ರತಿಗ್ರಹಿಯು (ದಾನವನ್ನು ತೆಗೆದುಕೊಳ್ಳುವವನು ) ಶೋಭಿಸುವುದಿಲ್ಲ.

**ಕಪಾಲೇ ಯದ್ವದಾಪಃ ಸ್ಯುಃ ಶ್ವದೃತೌ ಚ ಯಥಾ ಪಯಃ ।**
**ಆಶ್ರಯಸ್ಥಾನದೋಷೇಣ ವೃತ್ತಹೀನೇ ತಥಾ ಶ್ರುತಮ್ ॥೪೨॥**

ಸದಾಚಾರಸಂಪನ್ನನಾಗಿಲ್ಲದಿದ್ದರೆ, ವೇದ-ವೇದಾಂಗಗಳನ್ನು ಅಧ್ಯಯನ ಮಾಡಿರುವುದರಿಂದಾಗಲೀ, ಸಕಲಶಾಸ್ತ್ರಗಳನ್ನೂ ತಿಳಿದುಕೊಂಡಿರು ವುದರಿಂದಾಗಲೀ, ಮಹಾವಾಗ್ಮಿಯಾಗಿರುವುದರಿಂದಾಗಲೀ–ಮಾನ್ಯನಾಗು ವುದಿಲ್ಲ. ಯದ್ಯಪಿ ನೀರು ಶುದ್ಧವೇ ಆಗಿದ್ದರೂ ಆ ನೀರು ಕಪಾಲದಲ್ಲಿದ್ದರೆ (ತಲೆಯ ಎಲುಬಿನ ಚಿಪ್ಪಿನಲ್ಲಿದ್ದರೆ ) ಅದು ಶುದ್ಧವಾದ ನೀರೆಂದು ಪರಿಗಣಿ ಸಲ್ಪಡದಂತೆ–ಹಾಲು ಒಳ್ಳೆಯ ಆಹಾರಪದಾರ್ಥವೇ ಆಗಿದ್ದರೂ ಆ ಹಾಲು ನಾಯಿಯ ಚರ್ಮದ ಚೀಲದಲ್ಲಿದ್ದರೆ ಅಶುದ್ಧವೆಂದು ಪರಿಗಣಿಸಲ್ಪಡು ವಂತೆ–ವೇದಗಳು ದುರಾಚಾರನಲ್ಲಿದ್ದರೆ ಶೋಭಿಸುವುದಿಲ್ಲ. ಆಶ್ರಯಸ್ಥಾನ

ಗಳ ಗುಣ-ದೋಷಗಳಿಂದ ಪದಾರ್ಥಗಳಿಗೆ ಉಚ್ಚ-ನೀಚತ್ವಗಳು ಪ್ರಾಪ್ತ ವಾಗುತ್ತವೆ. ( ಆಚಾರಹೀನಂ ನ ಪುನನ್ತಿ ವೇದಾಃ = ಸದಾಚಾರಗಳಿಂದ ಹೀನನಾದವನನ್ನು ವೇದಗಳು ಪವಿತ್ರಗೊಳಿಸುವುದಿಲ್ಲ. )

**ನಿರ್ಮನ್ತ್ರೋ ನಿರ್ವ್ಯತೋ ಯಃ ಸ್ಯಾದಶಾಸ್ತ್ರಜ್ಞೋಽನಸೂಯಕಃ ।**
**ಅನುಕ್ರೋಶಾತ್ಪ್ರದಾತವ್ಯಂ ದೀನೇಷ್ವವ್ರತಿಕೇಷು ಚ ॥೪೩॥**

ಯಾವ ಬ್ರಾಹ್ಮಣನು ವೇದಾಧ್ಯಯನಮಾಡದಿದ್ದರೂ–ಶಾಸ್ತ್ರಗಳನ್ನು ತಿಳಿದುಕೊಂಡಿರದಿದ್ದರೂ ನಿತ್ಯತುಷ್ಟನಾಗಿ, ಇತರರಲ್ಲಿ ದೋಷವನ್ನೆಣಿಸದೇ ಇರುತ್ತಾನೆಯೋ–ಅಂತಹವನಿಗೆ ದಾನವನ್ನು ಕೊಡಬಹುದು. ವ್ರತಶೂನ್ಯ ರಾಗಿದ್ದರೂ ಅವರು ಅತಿದರಿದ್ರರಾಗಿದ್ದ ಪಕ್ಷದಲ್ಲಿ ಅನುಕಂಪದಿಂದ ಅಂತಹ ವರಿಗೂ ದಾನವನ್ನು ಕೊಡಬಹುದು.

**ನ ವೈ ದೇಯಮನುಕ್ರೋಶಾದ್ದೀನಾಯಾಪ್ಯಪಕಾರಿಣೇ ।**
**ಆಪ್ತಾಚರಿತ ಇತ್ಯೇವ ಧರ್ಮ ಇತ್ಯೇವ ವಾ ಪುನಃ ॥೪೪॥**

ಇಷ್ಟವಾದುದನ್ನು ಮಾಡುವನೆಂದಾಗಲೀ, ಧರ್ಮಬುದ್ಧಿಯಿಂದಾ ಗಲೀ–ಮತ್ತೊಬ್ಬರಿಗೆ ಯಾವಾಗಲೂ ಕೇಡನ್ನೇ ಮಾಡುವ ಸ್ವಭಾವವಿರು ವವನಿಗೆ ಅವನು ದರಿದ್ರನೇ ಆಗಿದ್ದರೂ, ದೀನನೇ ಆಗಿದ್ದರೂ–ಅನುಕಂಪ ದಿಂದ ದಾನವನ್ನು ಕೊಡಬಾರದು.

**ನಿಷ್ಕಾರಣಂ ಸ್ಮೃತಂ ದತ್ತಂ ಬ್ರಾಹ್ಮಣೇ ಬ್ರಹ್ಮವರ್ಜಿತೇ ।**
**ಭವೇದಪಾತ್ರದೋಷೇಣ ನ ಚಾತ್ರಾಸ್ತಿ ವಿಚಾರಣಾ ॥೪೫॥**

ವೇದಾಧ್ಯಯನದಿಂದ ವಿಹೀನನಾದ ಬ್ರಾಹ್ಮಣನಿಗೆ ಕೊಟ್ಟ ದಾನವು ಅಪಾತ್ರನಲ್ಲಿ ದಾನಮಾಡಿದ ದೋಷದಿಂದ ಯುಕ್ತವಾಗಿದ್ದು ಯಾವ ಉದ್ದೇಶವೂ ಇಲ್ಲದೆ ಮಾಡಿದಂತಾಗುತ್ತದೆ. (ನಿಷ್ಫಲವಾಗುತ್ತದೆ.) ಈ ವಿಷಯದಲ್ಲಿ ಪುನಃ ಪರ್ಯಾಲೋಚಿಸಬೇಕಾದ ಅಗತ್ಯವೇ ಇಲ್ಲ.

**ಯಥಾ ದಾರುಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ ।**
**ಬ್ರಾಹ್ಮಣಶ್ಚಾನಧೀಯಾನಸ್ತ್ರಯಸ್ತೇ ನಾಮ ಬಿಭ್ರತಿ ॥೪೬॥**

ಮರದಿಂದ ತಯಾರಿಸಿದ ಆನೆಯು ಹೇಗೆ ಹೆಸರಿಗೆ ಮಾತ್ರವೇ ಆನೆ ಯಾಗಿರುತ್ತದೆಯೋ–ಆಕಾರವೊಂದರ ಹೊರತಾಗಿ ಮರದ ಆನೆಯಲ್ಲಿ

ಆನೆಯ ಬೇರಾವ ಗುಣಗಳೂ ಇರುವುದಿಲ್ಲವೋ ಮತ್ತು ಚರ್ಮದ ಹೊದ್ದಿಕೆಯನ್ನಿಟ್ಟು ಕಲ್ಪಿಸಿದ ಜಿಂಕೆಯು ಹೆಸರಿಗೆ ಮಾತ್ರವೇ ಜಿಂಕೆಯಾಗಿದ್ದು ಅದರಲ್ಲಿ ಜಿಂಕೆಯ ಮತ್ತಾವ ಸ್ವಾಭಾವಿಕಗುಣಗಳೂ ಇರುವುದಿಲ್ಲವೋ– ಹಾಗೆಯೇ ವೇದಾಧ್ಯಯನದಿಂದ ವಿಹೀನನಾದ ಬ್ರಾಹ್ಮಣನು ಹೆಸರಿಗೆ ಮಾತ್ರ ಬ್ರಾಹ್ಮಣನಾಗಿದ್ದು ಅವನಲ್ಲಿ ಬ್ರಾಹ್ಮಣನಲ್ಲಿರಬೇಕಾದ ಬೇರೆ ಯಾವ ಸತ್ತ್ವವೂ ಇರುವುದಿಲ್ಲ. ( ಈ ಮೂವರೂ ಕೇವಲ ನಾಮಧಾರಿಗಳು. )

**ಯಥಾ ಷಣ್ಢೋಽಫಲಃ ಸ್ತ್ರೀಷು ಯಥಾ ಗೌರ್ಗವಿ ಚಾಫಲಾ ।**
**ಶಕುನಿರ್ವಾಪ್ಯಪಕ್ಷಃ ಸ್ಯಾನ್ನಿರ್ಮನ್ತ್ರೋ ಬ್ರಾಹ್ಮಣಸ್ತಥಾ ॥೪೭॥**

ಯಾವ ರೀತಿಯಲ್ಲಿ ಷಂಡನು ಸ್ತ್ರೀಯರ ಮೂಲಕವಾಗಿ ಪಡೆಯಬಹುದಾದ ಸುಖ-ಸಂತಾನಫಲಗಳನ್ನು ಪಡೆದುಕೊಳ್ಳಲಾರನೋ–ಒಂದು ಹಸುವು ಮತ್ತೊಂದು ಹಸುವಿನಲ್ಲಿ ಸಂತಾನವನ್ನು ಪಡೆಯಲಾರದೋ– ರೆಕ್ಕೆಗಳಿಂದ ವಿಹೀನವಾದ ಪಕ್ಷಿಯು ಹೇಗೆ ಹಾರಲಾರದೋ ( ಹೇಗೆ ಈ ಮೂರೂ ನಿಷ್ಫಲಗಳೋ ) ಹಾಗೆಯೇ ವೇದಮಂತ್ರಗಳ ಜ್ಞಾನದಿಂದ ವಿಹೀನನಾದ ಬ್ರಾಹ್ಮಣನೂ ನಿಷ್ಪ್ರಯೋಜನನಾಗುತ್ತಾನೆ.

**ಗ್ರಾಮೋ ಧಾನ್ಯೈರ್ಯಥಾ ಶೂನ್ಯೋ ಯಥಾ ಕೂಪಶ್ಚ ನಿರ್ಜಲಃ ।**
**ಯಥಾ ಹುತಮನಗ್ನೌ ಚ ತಥೈವ ಸ್ಯಾನ್ನಿರಾಕೃತೌ ॥೪೮॥**

ಧಾನ್ಯದಿಂದ ಶೂನ್ಯವಾದ ಗ್ರಾಮದಂತೆ–ನೀರಿನಿಂದ ಶೂನ್ಯವಾದ ಬಾವಿಯಂತೆ–ವೇದಶೂನ್ಯನಾದ ಬ್ರಾಹ್ಮಣನೂ ಯಾರಿಗೂ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಅಂತಹ ವೇದವಿದ್ಯಾವಿಹೀನನಾದ ಬ್ರಾಹ್ಮಣನಿಗೆ ದಾನವನ್ನು ಕೊಟ್ಟರೆ ಅಗ್ನಿಯಿಂದ ರಹಿತವಾದ ಬೂದಿಯಲ್ಲಿ ಹೋಮಮಾಡಿದಷ್ಟೇ ಪ್ರಯೋಜನವಾಗುತ್ತದೆ.

**ದೇವತಾನಾಂ ಪಿತೄಣಾಂ ಚ ಹವ್ಯಕವ್ಯವಿನಾಶಕಃ ।**
**ಶತ್ರುರರ್ಥಹರೋ ಮೂರ್ಖೋ ನ ಲೋಕಾನ್ಪ್ರಾಪ್ತುಮರ್ಹತಿ ॥೪೯॥**

ವೇದಾಧ್ಯಯನಸಂಪನ್ನನಾದ, ಸದಾಚಾರಸಂಪನ್ನನಾದ ಬ್ರಾಹ್ಮಣನು ದೇವ-ಪಿತೃಗಳಿಗೆ ಅರ್ಪಿಸುವ ಹವ್ಯ-ಕವ್ಯಗಳನ್ನು ಸಾರ್ಥಕಗೊಳಿಸುತ್ತಾನೆ.

ಅದಕ್ಕೆ ಪ್ರತಿಯಾಗಿ ವೇದವಿದ್ಯಾವಿಹೀನನಾದ ಬ್ರಾಹ್ಮಣನು ದೇವ-ಪಿತೃ ಗಳನ್ನು ಉದ್ದೇಶಿಸಿ ಅರ್ಪಿಸುವ ಹವ್ಯ-ಕವ್ಯಗಳನ್ನು ವಿನಾಶಗೊಳಿಸುತ್ತಾನೆ. ಅರ್ಥಾತ್ ಯಾವ ಹವ್ಯ-ಕವ್ಯಗಳ ಸಾದ್ಗುಣ್ಯಕ್ಕಾಗಿ ದಾನಕೊಡುತ್ತಾರೆಯೋ ಅಂತಹ ಹವ್ಯ-ಕವ್ಯಗಳೇ ವಿನಾಶಹೊಂದುತ್ತವೆ. (ಬೂದಿಯಲ್ಲಿ ಹೋಮ ಮಾಡಿದಂತಾಗುತ್ತದೆ.) ಅವನೊಬ್ಬ ಧನಾಪಹಾರಿಯಾದ ಶತ್ರುವಾಗಿ ಪರಿಣಮಿಸುತ್ತಾನೆ. ಅಂತಹ ಮೂರ್ಖನು ಉತ್ತಮಲೋಕಗಳನ್ನು ಖಂಡಿತ ವಾಗಿಯೂ ಹೊಂದುವುದಿಲ್ಲ.

ಯುಧಿಷ್ಠಿರ! ಸ್ವಾಯಂಭುವಮನುವು ಋಷಿಗಳಿಗೆ ಹೇಳಿದ ಎಲ್ಲ ವಿಷಯಗಳನ್ನೂ ನಿನ್ನೊಡನೆ ಯಥಾವತ್ತಾಗಿ ಹೇಳಿದ್ದೇನೆ. ಮಹತ್ತ್ವಪೂರ್ಣ ವಾದ ಈ ಪ್ರಸಂಗವನ್ನು ಎಲ್ಲರೂ ಕೇಳಬೇಕು."

೩೬ನೆಯ ಅಧ್ಯಾಯವು ಮುಗಿಯಿತು.

೩೭ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನ ಮತ್ತು ಕೃಷ್ಣದ್ವೈಪಾಯನರ ಸಲಹೆಯಂತೆ ಯುಧಿಷ್ಠಿರನು ನಗರವನ್ನು ಪ್ರವೇಶಿಸಿದುದು

ಯುಧಿಷ್ಠಿರನು ವ್ಯಾಸರನ್ನು ಕುರಿತು ಹೇಳುತ್ತಾನೆ :

"ಪೂಜ್ಯರೇ! ದ್ವಿಜಶ್ರೇಷ್ಠರೇ! ಮಹಾಮುನಿಗಳೇ! ತಮ್ಮಿಂದ ರಾಜಧರ್ಮಗಳನ್ನೂ–ಸಮಸ್ತವಾದ ವರ್ಣಾಶ್ರಮಧರ್ಮಗಳನ್ನೂ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ಆಪತ್ಕಾಲದಲ್ಲಿ ಯಾವ ನೀತಿಯನ್ನು ಅನು ಸರಿಸಿ ನಡೆಯಬೇಕು? ಧರ್ಮಾನುಕೂಲವಾದ ಮಾರ್ಗದಲ್ಲಿಯೇ ದೃಷ್ಟಿ ಯನ್ನಿಟ್ಟಿರುವ ನಾನು ಭೂಮಂಡಲವನ್ನು ಜಯಿಸಲು ಹೇಗೆ ಸಾಧ್ಯವಾಗು ತ್ತದೆ? ಭಕ್ಷ್ಯ ಮತ್ತು ಅಭಕ್ಷ್ಯ–ಈ ಎರಡರಿಂದಲೂ ರಹಿತವಾದ ಉಪವಾಸ ರೂಪವಾದ ಪ್ರಾಯಶ್ಚಿತ್ತಪ್ರಕರಣವು ನನಗೆ ಕುತೂಹಲವನ್ನುಂಟುಮಾಡಿದೆ. ಪ್ರಾಯಶ್ಚಿತ್ತವಿಧಾನಗಳ ಶ್ರವಣವು ನನ್ನ ಮನಸ್ಸಿನಲ್ಲಿ ಹರ್ಷವನ್ನು ಹುಟ್ಟಿ ಸಿದೆ. ನನ್ನ ಅಭಿಪ್ರಾಯದಲ್ಲಿ ಧರ್ಮಾಚರಣೆ ಮತ್ತು ರಾಜ್ಯಪರಿಪಾಲನೆ– ಇವೆರಡೂ ಒಂದಕ್ಕೊಂದು ವಿರುದ್ಧವಾದ ಧರ್ಮಗಳಾಗಿವೆ. ಅನುದಿನವೂ

ಇದನ್ನೇ ತರ್ಕಿಸುತ್ತಿರುವ ನನ್ನ ಮನಸ್ಸು ಕೆಲವೊಮ್ಮೆ ಹೀಗೆ ಮೋಹ ಗೊಳ್ಳುತ್ತದೆ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ಹೀಗೆ ಹೇಳಿದನಂತರ ವೇದವಿದರಲ್ಲಿ ಶ್ರೇಷ್ಠರಾದ ವ್ಯಾಸರು-ಸರ್ವಜ್ಞರಾದ, ಮಹಾತ್ಮರಲ್ಲಿ ಬಹಳ ಪ್ರಾಚೀನರಾದ ನಾರದರನ್ನೊಮ್ಮೆ ವೀಕ್ಷಿಸಿ ಯುಧಿಷ್ಠಿರನೊಡನೆ ಹೇಳಿದರು :

"ನರಾಧಿಪನೇ! ನಿನಗೆ ಧರ್ಮವನ್ನು ಪರಿಪೂರ್ಣವಾಗಿ ಕೇಳಬೇಕೆನ್ನುವ ಅಭಿಲಾಷೆಯಿರುವುದಾದರೆ ಕುರುಕುಲಪಿತಾಮಹನಾದ, ವೃದ್ಧನಾದ ಭೀಷ್ಮನ ಬಳಿಗೆ ಹೋಗು. ಭಾಗೀರಥಿಯ ಮಗನಾದ, ಸರ್ವಜ್ಞನಾದ, ಸಮಸ್ತಧರ್ಮಗಳನ್ನೂ ತಿಳಿದಿರುವ ಭೀಷ್ಮನು ನಿನ್ನ ಮನಸ್ಸಿನಲ್ಲಿರುವ ಧರ್ಮರಹಸ್ಯಗಳ ಸಂಶಯವನ್ನು ಸಂಪೂರ್ಣವಾಗಿ ನಿವಾರಣೆಮಾಡುತ್ತಾನೆ. ಯಾವನಿಗೆ ತ್ರಿಲೋಕಗಾಮಿನಿಯಾದ, ಪರಮಪವಿತ್ರಳಾದ, ದಿವಿಜಳಾದ, ನದೀರೂಪಳಾದ ಗಂಗಾದೇವಿಯೇ ಜನ್ಮವಿತ್ತಳೋ–ಯಾವನು ಇಂದ್ರ ಪುರಃಸರರಾದ ಎಲ್ಲ ದೇವತೆಗಳನ್ನೂ, ಹಲವು ಬಾರಿ ಪ್ರತ್ಯಕ್ಷವಾಗಿಯೇ ಸಂದರ್ಶಿಸಿರುವನೋ ಮತ್ತು ಯಾವನು ಬೃಹಸ್ಪತಿಪ್ರಮುಖರಾದ ದೇವರ್ಷಿಗಳನ್ನೂ ಅನೇಕವಿಧವಾದ ಉಪಚಾರಗಳಿಂದ ಸಂತೋಷಗೊಳಿಸಿ ಅವರಿಂದ ರಾಜನೀತಿಗಳನ್ನು ತಿಳಿದುಕೊಂಡಿರುವನೋ–ಅಂತಹ ಮಹಾತ್ಮ ನಾದ ಭೀಷ್ಮನ ಬಳಿಗೆ ಧರ್ಮದ ರಹಸ್ಯಗಳನ್ನು ತಿಳಿದುಕೊಳ್ಳಲು ಹೋಗು. ದೈತ್ಯಗುರುವಾದ ಶುಕ್ರನಿಗೆ ಯಾವ ಶಾಸ್ತ್ರಗಳು ತಿಳಿದಿವೆಯೋ, ದೇವಗುರು ವಾದ ಮತ್ತು ದ್ವಿಜಶ್ರೇಷ್ಠನಾದ ಬೃಹಸ್ಪತಿಯು ಎಷ್ಟು ಶಾಸ್ತ್ರಗಳನ್ನು ತಿಳಿದು ಕೊಂಡಿರುವನೋ–ಆ ಎಲ್ಲ ಶಾಸ್ತ್ರಗಳನ್ನೂ ಕುರುಶ್ರೇಷ್ಠನಾದ ಭೀಷ್ಮನು ವ್ಯಾಖ್ಯಾನಸಹಿತವಾಗಿ ತಿಳಿದುಕೊಂಡಿರುತ್ತಾನೆ. ಬ್ರಹ್ಮಚರ್ಯವ್ರತನಿಷ್ಠ ನಾದ, ಮಹಾಬಾಹುವಾದ ಭೀಷ್ಮನು, ಭೃಗುವಂಶೀಯನಾದ ಚ್ಯವನ ನಿಂದಲೂ–ಮಹರ್ಷಿಯಾದ ವಸಿಷ್ಠನಿಂದಲೂ ಷಡಂಗಗಳಿಂದ ಯುಕ್ತವಾದ ಸಕಲವೇದಗಳನ್ನೂ ಅಧ್ಯಯನಮಾಡಿರುತ್ತಾನೆ. ಪಿತಾಮಹಬ್ರಹ್ಮನ ಜ್ಯೇಷ್ಠಪುತ್ರನಾದ, ದಿವ್ಯತೇಜಸ್ಸಿನಿಂದ ಬೆಳಗುವ, ಅಧ್ಯಾತ್ಮಮಾರ್ಗದ

ತತ್ತ್ವವನ್ನು ಸಂಪೂರ್ಣವಾಗಿ ತಿಳಿದಿರುವ ಸನತ್ಕುಮಾರನಿಂದ ಬಹಳ ಹಿಂದೆಯೇ ಅಧ್ಯಾತ್ಮವಿದ್ಯೆಯನ್ನೂ ಕಲಿತಿರುವನು. ಸಮಸ್ತವಾದ ಯತಿ ಧರ್ಮವನ್ನು ಮಾರ್ಕಂಡೇಯಮಹರ್ಷಿಯಿಂದ ತಿಳಿದುಕೊಂಡಿರುವನು. ಪುರುಷರ್ಷಭನಾದ ಭೀಷ್ಮನು ಪರಶುರಾಮನಿಂದಲೂ ಮತ್ತು ಇಂದ್ರ ನಿಂದಲೂ ಅನೇಕಾನೇಕ ಮಹಾಸ್ತ್ರಗಳನ್ನು ಪಡೆದುಕೊಂಡಿರುವನು. ಭೀಷ್ಮನು ಮನುಷ್ಯನಾಗಿಯೇ ಹುಟ್ಟಿದ್ದರೂ ಮೃತ್ಯುವನ್ನು ತನ್ನ ಅಧೀನದಲ್ಲಿಟ್ಟು ಕೊಂಡಿರುತ್ತಾನೆ. ಅವನು ಕರೆದಾಗ ಮೃತ್ಯುವು ಆಕ್ರಮಿಸಬೇಕೇ ಹೊರತು ಸ್ವೇಚ್ಛೆಯಿಂದ ಇತರ ಮನುಷ್ಯರನ್ನು ಆಕ್ರಮಿಸುವಂತೆ ಮೃತ್ಯುವು ಭೀಷ್ಮನನ್ನು ಆಕ್ರಮಿಸುವಂತಿಲ್ಲ. ಭೀಷ್ಮನು ಯದ್ಯಪಿ ಸಂತಾನಹೀನನಾಗಿದ್ದರೂ ಅವನಿಗೆ ಪ್ರಾಪ್ತವಾಗುವ ಪುಣ್ಯಲೋಕಗಳು ಯಾವುವೆಂಬುದು ಸ್ವರ್ಗಲೋಕದಲ್ಲಿ ಈಗಾಗಲೇ ಪ್ರಖ್ಯಾತವಾಗಿವೆ. (ಪ್ರಸಿದ್ಧವಾದ ಪುಣ್ಯಲೋಕಗಳು ಸಿದ್ಧವಾಗಿಯೇ ಇವೆ. ಅಪುತ್ರವಂತನಾದರೂ ಭೀಷ್ಮನಿಗೆ ಪುಣ್ಯಲೋಕಗಳು ಲಭಿಸುತ್ತವೆ.) ಪುಣ್ಯವಂತರಾದ ಬ್ರಹ್ಮರ್ಷಿಗಳು ನಿತ್ಯವೂ ಭೀಷ್ಮನ ಸಭೆಯಲ್ಲಿ ಉಪಸ್ಥಿತರಾಗುತ್ತಿದ್ದರು. ಜ್ಞಾನಯಜ್ಞಗಳಲ್ಲಿ ಭೀಷ್ಮನಿಗೆ ತಿಳಿಯದಿರುವ ವಿಷಯವೇ ಇರುವುದಿಲ್ಲ. ಧರ್ಮದಲ್ಲಿರುವ ಸೂಕ್ಷ್ಮಾರ್ಥಗಳನ್ನೂ ತಿಳಿದಿರುವ ಧರ್ಮಜ್ಞನಾದ ಭೀಷ್ಮನು ನಿನಗೆ ಎಲ್ಲ ವಿಷಯಗಳನ್ನೂ ಹೇಳುತ್ತಾನೆ. ಧರ್ಮವಿದನಾದ ಭೀಷ್ಮನು ಮೃತ್ಯುವನ್ನು ತನ್ನ ಬಳಿಗೆ ಕರೆಯುವುದರೊಳಗಾಗಿ ಅವನ ಸಮೀಪಕ್ಕೆ ಹೋಗಿ ಎಲ್ಲವನ್ನೂ ಕೇಳಿ ತಿಳಿದುಕೊ.”

ಜನಮೇಜಯ! ವ್ಯಾಸರಿಂದ ಹೀಗೆ ಅನುಶಾಸಿತನಾದ, ಮಹಾಮತಿಯಾದ, ದೀರ್ಘಪ್ರಜ್ಞನಾದ ಕುಂತೀಪುತ್ರನು ವಾಗ್ಮಿಗಳಲ್ಲಿ ಶ್ರೇಷ್ಠರಾದ ಸತ್ಯವತಿಯ ಪುತ್ರರಾದ ವ್ಯಾಸರನ್ನು ಕುರಿತು ಹೇಳಿದನು :

**ವೈಶಸಂ ಸುಮಹತ್ಕೃತ್ವಾ ಜ್ಞಾತೀನಾಂ ರೋಮಹರ್ಷಣಮ್ ।**
**ಅಗಸ್ಕೃತ್ಸರ್ವಲೋಕಸ್ಯ ಪೃಥಿವೀನಾಶಕಾರಕಃ ॥೧೮॥**

**ಘಾತಯಿತ್ವಾ ತಮೇವಾಜೌ ಛಲೇನಾಜಿಹ್ಮಯೋಧಿನಮ್ ।**
**ಉಪಸಮ್ಪ್ರಷ್ಟುಮರ್ಹಾಮಿ ತಮಹಂ ಕೇನ ಹೇತುನಾ ॥೧೯॥**

"ಮಹರ್ಷಿಗಳೇ! ರೋಮಕೋಟಿಗಳು ನಿಮಿರಿ ನಿಲ್ಲುವ ರೀತಿಯಲ್ಲಿ ಜ್ಞಾತಿಗಳೆಲ್ಲರನ್ನೂ ಸಂಪೂರ್ಣವಾಗಿ ಸಂಹಾರಮಾಡಿ ಲೋಕಕ್ಕೇ ಮಹಾ ಅಪರಾಧವನ್ನೆಸಗಿದ್ದೇನೆ. ಅಖಂಡಭೂಮಂಡಲವನ್ನೂ ನಾಶಮಾಡಿದವನು ನಾನೇ ಆಗಿದ್ದೇನೆ. ಋಜುಮಾರ್ಗದಲ್ಲಿಯೇ ಯುದ್ಧಮಾಡುವ ಸ್ವಭಾವ ದವನಾದ ಆ ಭೀಷ್ಮನನ್ನೇ ನಾನು ವಂಚನೆಯಿಂದ ಘಾಸಿಪಡಿಸಿದೆನು. ನಾನು ಈಗ ಯಾವ ಮುಖವನ್ನಿಟ್ಟುಕೊಂಡು ಧರ್ಮದ ವಿಷಯವಾಗಿ ಪ್ರಶ್ನಿಸಲು ಅವನ ಬಳಿಗೆ ಹೋಗಲಿ? ಅವನನ್ನು ಕೇಳುವ ಯೋಗ್ಯತೆಯು ನನಗೆಲ್ಲಿದೆ?"

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಜನಮೇಜಯ! ವ್ಯಾಸರ ಸಲಹೆಗೆ ಉತ್ತರವಾಗಿ ಯುಧಿಷ್ಠಿರನು ಹೇಳಿದುದನ್ನು ಕೇಳಿದ ಮಹಾಮತಿಯಾದ, ಯದುಶ್ರೇಷ್ಠನಾದ, ಮಹಾ ಬಾಹುವಾದ ಶ್ರೀಕೃಷ್ಣನು ಬ್ರಹ್ಮ-ಕ್ಷತ್ರಾದಿ ನಾಲ್ಕುವರ್ಣದವರಿಗೂ ಹಿತ ವನ್ನುಂಟುಮಾಡಬೇಕೆಂಬ ಅಪೇಕ್ಷೆಯಿಂದ ನೃಪಶ್ರೇಷ್ಠನಾದ ಯುಧಿಷ್ಠಿರನನ್ನು ಕುರಿತು ಹೇಳಿದನು :

"ನೃಪಶ್ರೇಷ್ಠನೇ! ಮನಸ್ಸನ್ನು ನಿರ್ಬಂಧಪೂರ್ವಕವಾಗಿ ಶೋಕದಲ್ಲಿಯೇ ಮುಳುಗಿಸಿರಬೇಕೆಂಬುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ. ಭಗವಾನ್ ವ್ಯಾಸರು ಹೇಳಿದಂತೆಯೇ ಮಾಡುವುದು ಈಗಿನ ನಿನ್ನ ಮುಖ್ಯ ಕರ್ತವ್ಯವಾಗಿದೆ. ಬೇಸಿಗೆಯ ಕೊನೆಯಲ್ಲಿ ಲೋಕದ ಜನರು ವೃಷ್ಟಿಗಾಗಿ ಪರ್ಜನ್ಯನನ್ನು ಉಪಾಸನೆಮಾಡುವಂತೆ–ಈ ಬ್ರಾಹ್ಮಣರೂ ಮತ್ತು ಮಹಾ ಪರಾಕ್ರಮಿಗಳಾದ ಈ ನಿನ್ನ ಸಹೋದರರೂ ನಿನ್ನನ್ನೇ ನಾಥನನ್ನಾಗಿ ಪಡೆದು ಕೊಳ್ಳಬೇಕೆಂಬ ಆಶಯದಿಂದ ಪ್ರಾರ್ಥನೆಮಾಡುತ್ತಾ ಸೇವಿಸುತ್ತಿದ್ದಾರೆ. ಯುದ್ಧದಲ್ಲಿ ಅಳಿದು-ಉಳಿದಿರುವ ರಾಜರೆಲ್ಲರೂ ನಿನ್ನ ಸೇವೆಮಾಡುವ ಸಲು ವಾಗಿ ಇಲ್ಲಿಗೆ ಬಂದಿರುತ್ತಾರೆ. ನಾಲ್ಕು ವರ್ಣಗಳ ಪ್ರಜೆಗಳಿಂದಲೂ ಕೂಡಿ ರುವ ಕುರುಜಾಂಗಲರಾಷ್ಟ್ರವೇ ನಿನ್ನ ಸೇವೆಗಾಗಿ ಇಲ್ಲಿಗೆ ಬಂದಿದೆ. ಪರಂತಪನೇ! ಇಲ್ಲಿ ನೆರೆದಿರುವ ಮಹಾತ್ಮರಾದ ಬ್ರಾಹ್ಮಣರಿಗೆ ಪ್ರಿಯ ವನ್ನುಂಟುಮಾಡುವ ಸಲುವಾಗಿಯೂ ಮತ್ತು ಮಹಾತೇಜಸ್ವಿಗಳಾದ, ಗುರು

ಗಳಾದ ವ್ಯಾಸರ ಆದೇಶಾನುಸಾರವಾಗಿಯೂ ರಾಜ್ಯಭಾರವನ್ನು ವಹಿಸಿಕೊಳ್ಳುವುದರ ಮೂಲಕ ಸುಹೃದರಾದ ನಮ್ಮೆಲ್ಲರಿಗೂ ಮತ್ತು ದ್ರೌಪದಿಗೂ ಪ್ರಿಯವನ್ನುಂಟುಮಾಡು. ಹಾಗೆಯೇ ಅಖಂಡಭೂಮಂಡಲಕ್ಕೂ ಹಿತವನ್ನುಂಟುಮಾಡು."

ಜನಮೇಜಯ! ವಾಸುದೇವನು ಹೀಗೆ ಹೇಳಿದನಂತರ ರಾಜೀವಲೋಚನನಾದ, ಮಹಾತ್ಮನಾದ ಯುಧಿಷ್ಠಿರರಾಜನು ಸಕಲಲೋಕದ ಹಿತಾರ್ಥವಾಗಿ ಕುಳಿತಿದ್ದ ಸ್ಥಳದಿಂದ ಮೇಲೆದ್ದನು. ಸಾಕ್ಷಾತ್ ಭಗವಾನ್ ಶ್ರೀಕೃಷ್ಣನಿಂದಲೂ, ಕೃಷ್ಣದ್ವೈಪಾಯನರಿಂದಲೂ, ದೇವಸ್ಥಾನಮುನಿಗಳಿಂದಲೂ, ಅರ್ಜುನನಿಂದಲೂ, ನಾರದಾದಿ ಇನ್ನೂ ಅನೇಕಮಹಾತ್ಮರಿಂದಲೂ ಸಮಾಧಾನಗೊಳಿಸಲ್ಪಟ್ಟ ಮಹಾತ್ಮನಾದ ಯುಧಿಷ್ಠಿರನು, ಮಾನಸಿಕವಾಗಿದ್ದ ದುಃಖವನ್ನೂ ಮತ್ತು ಸಂತಾಪವನ್ನೂ ಪರಿತ್ಯಜಿಸಿದನು. ಪಾಂಡುಪುತ್ರನಾದ ಯುಧಿಷ್ಠಿರನು ಶ್ರೇಷ್ಠಪುರುಷರ ಉಪದೇಶವನ್ನು ಕೇಳಿದನು. ವೇದಶಾಸ್ತ್ರಗಳಿಗೆ ಅವನೊಬ್ಬ ನಿಧಿಯೇ ಆಗಿದ್ದನು. ಕೇಳಿದ ಮತ್ತು ಕೇಳಲು ಯೋಗ್ಯವಾದ ನೀತಿಶಾಸ್ತ್ರದಲ್ಲಿ ಯುಧಿಷ್ಠಿರನು ವಿಶಾರದನಾಗಿದ್ದನು. ಅವನು ತನ್ನ ಮುಂದಿನ ಕರ್ತವ್ಯವನ್ನು ನಿಶ್ಚಯಿಸಿದನಂತರ ಮನಸ್ಸಿಗೆ ಸಂಪೂರ್ಣವಾದ ಶಾಂತಿಯನ್ನು ತಂದುಕೊಂಡನು. ನಕ್ಷತ್ರಗಳಿಂದ ಪರಿವೃತನಾದ ಚಂದ್ರನೋಪಾದಿಯಲ್ಲಿ ಅಲ್ಲಿದ್ದ ಅಸಂಖ್ಯಾತಪ್ರಜೆಗಳಿಂದ ಪರಿವೃತನಾದ ಯುಧಿಷ್ಠಿರನು ಧೃತರಾಷ್ಟ್ರನನ್ನು ಮುಂದೆಮಾಡಿಕೊಂಡು ರಾಜಧಾನಿಯಾದ ಹಸ್ತಿನಾಪತ್ತನವನ್ನು ಪ್ರವೇಶಿಸಿದನು.

ನಗರಪ್ರವೇಶವನ್ನು ಮಾಡುವ ಸಮಯದಲ್ಲಿ ಧರ್ಮಜ್ಞನಾದ ಯುಧಿಷ್ಠಿರನು ದೇವತೆಗಳನ್ನೂ, ಸಾವಿರಾರು ಬ್ರಾಹ್ಮಣರನ್ನೂ ಸಂಪೂಜಿಸಿದನು. ಬಳಿಕ ಕಂಬಳಿಗಳಿಂದಲೂ ಮತ್ತು ಮೃಗಚರ್ಮಗಳಿಂದಲೂ ಸಂವೃತವಾಗಿದ್ದ, ಬಿಳುಪಾಗಿಯೂ ಶುಭಲಕ್ಷಣಯುಕ್ತವಾಗಿಯೂ ಇದ್ದ ಹದಿನಾರು ಎತ್ತುಗಳಿಂದ* ಯುಕ್ತವಾಗಿದ್ದ, ಪವಿತ್ರಮಂತ್ರಗಳಿಂದ ಅಭಿಮಂತ್ರಿತವಾಗಿದ್ದ, ನೂತನವಾದ ರಥವನ್ನು ವಂದಿ - ಮಾಗಧರು ಸ್ತುತಿಮಾಡುತ್ತಿರಲಾಗಿ–

* ಪುರಪ್ರವೇಶಮಾಡುವಾಗ ಎತ್ತುಗಳಿಂದ ಯುಕ್ತವಾದ ರಥದಲ್ಲಿ ಕುಳಿತುಕೊಳ್ಳ

ಸೋಮದೇವನು (ಚಂದ್ರನು) ಅಮೃತಮಯವಾದ ರಥವನ್ನು ಹತ್ತುವಂತೆ - ಯುಧಿಷ್ಠಿರನು ಹತ್ತಿದನು. ಆ ಸಮಯದಲ್ಲಿ ಕುಂತಿಯ ಮಗನಾದ, ಭಯಂಕರಪರಾಕ್ರಮನಾದ ಭೀಮಸೇನನು ಎತ್ತುಗಳ ಹಗ್ಗಗಳನ್ನು ಹಿಡಿದು



ಕೊಂಡನು. ( ಸಾರಥಿಯ ಸ್ಥಾನದಲ್ಲಿ ಕುಳಿತನು. ) ಅರ್ಜುನನು ಕಾಂತಿಯುಕ್ತ ವಾಗಿದ್ದ ಶ್ವೇತಚ್ಛತ್ರವನ್ನು ಯುಧಿಷ್ಠಿರನ ತಲೆಯ ಮೇಲೆ ಹಿಡಿದನು. ರಥದ

---

ಬೇಕೆಂಬುದನ್ನು ಈ ಪ್ರಕರಣದಿಂದ ಊಹಿಸಬಹುದಾಗಿದೆ. ಈ ವೇದಮಂತ್ರವೂ ಇದನ್ನೇ ಸೂಚಿಸುವುದೆಂಬುದು ವ್ಯಾಖ್ಯಾನಕಾರರ ಅಭಿಪ್ರಾಯವಾಗಿದೆ.

**ಸಂ ಗೋಭಿರಾಙ್ಗಿರಸೋ ನಕ್ಷಮಾಣೋ ಭಗ ಇವೇದರ್ಯಮಣಂ ನಿನಾಯ ।**
**ಜನೇ ಮಿತ್ರೋ ನ ದಮ್ಪತೀ ಆನಕ್ತಿ ಬೃಹಸ್ಪತೇ ವಾಜಯಾಶೂಂರಿವಾಜೌ ॥**

ಮೇಲೆ ಅರ್ಜುನನಿಂದ ಹಿಡಿಯಲ್ಪಟ್ಟಿದ್ದ ಆ ಶ್ವೇತಚ್ಛತ್ರವು–ಆಕಾಶದಲ್ಲಿ ನಕ್ಷತ್ರಗಳಿಂದ ಸಮಾಕುಲವಾದ ಬಿಳಿಯ ಮೋಡದಂತೆ–ಪ್ರಕಾಶಿಸುತ್ತಿದ್ದಿತು. ಮಾದ್ರಿಯ ವೀರಪುತ್ರರಾದ ನಕುಲ-ಸಹದೇವರು, ಚಂದ್ರರಶ್ಮಿಯಂತೆ ಪ್ರಭೆಯಿಂದ ಯುಕ್ತವಾಗಿದ್ದ, ಬಹಳ ಶುಭ್ರವಾಗಿದ್ದ, ರತ್ನಭೂಷಿತವಾಗಿದ್ದ ಚಾಮರವನ್ನೂ ಮತ್ತು ಬೀಸಣಿಗೆಯನ್ನೂ ಯುಧಿಷ್ಠಿರನ ಎರಡು ಪಾರ್ಶ್ವಗಳಲ್ಲಿಯೂ ಹಿಡಿದು ನಿಂತಿದ್ದರು. ದಿವ್ಯವಾದ ವಸ್ತ್ರಾಭರಣಗಳಿಂದ ಸಮಲಂಕೃತರಾಗಿದ್ದ ಆ ಐವರು ಸಹೋದರರೂ ರಥದಲ್ಲಿ ಕುಳಿತು ಮೂರ್ತಿಮತ್ತಾಗಿರುವ ಪಂಚಮಹಾಭೂತಗಳಂತೆ ಕಾಣುತ್ತಿದ್ದರು. ಯುಯುತ್ಸುವು ಮನೋವೇಗದಿಂದ ಕೂಡಿದ್ದ ಕುದುರೆಗಳಿಂದ ಯುಕ್ತವಾಗಿದ್ದ, ಶುಭ್ರವಾಗಿದ್ದ ರಥದಲ್ಲಿ ಕುಳಿತು ಪಾಂಡವಾಗ್ರಜನಾದ ಯುಧಿಷ್ಠಿರನ ರಥದ ಹಿಂದೆಯೇ ಪ್ರಯಾಣಮಾಡಿದನು. ಶುಭ್ರವಾಗಿಯೂ ಸುವರ್ಣಮಯವಾಗಿಯೂ ಇದ್ದ, ಶೈಬ್ಯ-ಸುಗ್ರೀವಗಳೆಂಬ ಕುದುರೆಗಳಿಂದ ಯುಕ್ತವಾಗಿದ್ದ ರಥದಲ್ಲಿ ಶ್ರೀಕೃಷ್ಣನು ಸಾತ್ಯಕಿಯೊಡನೆ ಕುಳಿತು ಕುರುಪುಂಗವರನ್ನು ಅನುಸರಿಸಿ ಹೋದನು. ಧರ್ಮರಾಜನ ದೊಡ್ಡಪ್ಪನಾದ ಧೃತರಾಷ್ಟ್ರನು ಗಾಂಧಾರೀಸಮೇತನಾಗಿ ರತ್ನಖಚಿತವಾಗಿದ್ದ, ಮನುಷ್ಯರು ಹೊತ್ತಿದ್ದ ಪಲ್ಲಕ್ಕಿಯಲ್ಲಿ ಕುಳಿತು ಯುಧಿಷ್ಠಿರನ ರಥದ ಮುಂಭಾಗದಲ್ಲಿ ಹೋಗುತ್ತಿದ್ದನು. ಅಲ್ಲಿದ್ದ ಕುರುಸ್ತ್ರೀಯರೂ, ಕುಂತೀ-ದ್ರೌಪದಿಯರೂ ಯಥಾಯೋಗ್ಯವಾದ ವಿಧವಿಧವಾದ ಯಾನಗಳಲ್ಲಿ ಕುಳಿತು ವಿದುರನನ್ನು ಮುಂದುಮಾಡಿಕೊಂಡು ಯುಧಿಷ್ಠಿರನ ರಥವನ್ನೇ ಅನುಸರಿಸಿ ಹಸ್ತಿನಾಪಟ್ಟಣಕ್ಕೆ ಹೊರಟರು. ಅವರ ಹಿಂದೆ ಅನೇಕರಥಗಳೂ, ಸಮಲಂಕೃತವಾಗಿದ್ದ ಅಶ್ವಸೈನ್ಯ-ಗಜಸೈನ್ಯಗಳೂ, ಪದಾತಿಸೈನಿಕರೂ ಮತ್ತು ಕುದುರೇಸವಾರರೂ ಯುಧಿಷ್ಠಿರನ ರಥವನ್ನು ಅನುಸರಿಸಿ ಹಸ್ತಿನಾಪಟ್ಟಣಕ್ಕೆ ಪ್ರಯಾಣಮಾಡಿದರು.

ಯುಧಿಷ್ಠಿರನು ಸಪರಿವಾರನಾಗಿ ಹಸ್ತಿನಾಪಟ್ಟಣಕ್ಕೆ ಹೋಗುತ್ತಿದ್ದಾಗ ವೈತಾಲಿಕರೂ, ಸೂತರೂ ಮತ್ತು ವಂದಿ-ಮಾಗಧರೂ ಸುಂದರವಾದ ವಾಣಿಯಲ್ಲಿ ಯುಧಿಷ್ಠಿರನನ್ನು ಸುಶ್ರಾವ್ಯವಾಗಿ ಹೊಗಳುತ್ತಿದ್ದರು. ಹೃಷ್ಟ-ಪುಷ್ಟರಾದ ಜನರಿಂದಲೂ ಜಯಘೋಷಮಾಡುತ್ತಿದ್ದ ಗುಂಪುಗಳಿಂದಲೂ ಸಮಾ

ಕುಲವಾದ, ಮಹಾಬಾಹುವಾದ ಯುಧಿಷ್ಠಿರನ ಆ ಪ್ರಯಾಣವು ಭೂಮಂಡಲ ದಲ್ಲಿಯೇ ಅಪ್ರತಿಮವಾಗಿದ್ದಿತು. ಯುಧಿಷ್ಠಿರನ ಪ್ರಯಾಣಕಾಲದಲ್ಲಿ ನಗರನಿವಾಸಿಗಳಾದ ಪ್ರಜೆಗಳು ಹಸ್ತಿನಾಪಟ್ಟಣವನ್ನೂ ಮತ್ತು ಯುಧಿಷ್ಠಿರನು ಬರುತ್ತಿದ್ದ ರಾಜಮಾರ್ಗಗಳನ್ನೂ ತಳಿರು-ತೋರಣಗಳಿಂದ ಅಲಂಕರಿಸಿದ್ದರು. ಬಿಳಿಯ ಹೂಮಾಲೆಗಳಿಂದಲೂ, ಪತಾಕೆಗಳಿಂದಲೂ ಹಸ್ತಿನಾಪಟ್ಟಣದ ಭೂಪ್ರದೇಶವು ಅತ್ಯಂತಶೋಭಾಯಮಾನವಾಗಿ ಕಾಣುತ್ತಿದ್ದಿತು. ಪ್ರಜೆಗಳು ರಾಜಮಾರ್ಗದ ಉದ್ದಕ್ಕೂ ಧೂಪಗಳನ್ನು ಹಚ್ಚಿಟ್ಟು ವಾತಾವರಣವನ್ನೇ ಸುಗಂಧಮಯವನ್ನಾಗಿ ಮಾಡಿದ್ದರು. ಸುತ್ತಲೂ ಎರಚಲ್ಪಟ್ಟ ನಾನಾವಿಧವಾದ ಚೂರ್ಣಗಳಿಂದಲೂ ಗುಚ್ಛ-ಗುಚ್ಛವಾಗಿಡಲ್ಪಟ್ಟ ನಾನಾವಿಧವಾದ ಪುಷ್ಪಗಳಿಂದಲೂ, ಪ್ರೇಂಕಣಪುಷ್ಪಗಳಿಂದಲೂ, ಅಲ್ಲಲ್ಲಿಯೇ ನೇತುಹಾಕಿದ್ದ ಪುಷ್ಪಮಾಲಿಕೆಗಳಿಂದಲೂ, ದೊಡ್ಡ ದೊಡ್ಡ ಹೂವಿನ ಹಾರಗಳಿಂದಲೂ ರಾಜನ ಅರಮನೆಯು ಸಮಲಂಕೃತವಾಗಿದ್ದಿತು. ಹಸ್ತಿನಾಪಟ್ಟಣದ ಮಹಾ ದ್ವಾರದಲ್ಲಿ ಸುದೃಢವಾಗಿದ್ದ, ನೀರಿನಿಂದ ತುಂಬಿದ್ದ, ನೂತನವಾದ ಪೂರ್ಣ ಕುಂಭಗಳನ್ನಿಟ್ಟಿದ್ದರು ಮತ್ತು ಅಲ್ಲಿಲ್ಲಿಯೇ ಶ್ವೇತಪುಷ್ಪಗಳ ಗುಚ್ಛಗಳನ್ನೂ ಇಟ್ಟಿದ್ದರು. ಶುಭವಾಕ್ಯಗಳಿಂದ ವಂದಿ-ಮಾಗಧರು ಸ್ತೋತ್ರಮಾಡುತ್ತಿರಲಾಗಿ ಯುಧಿಷ್ಠಿರನು ಸುಹೃದರಿಂದ ಪರಿವೃತನಾಗಿ ಎಲ್ಲ ರೀತಿಗಳಿಂದಲೂ ಸಮಲಂಕೃತವಾಗಿದ್ದ ಮಹಾದ್ವಾರಯುಕ್ತವಾಗಿದ್ದ ಹಸ್ತಿನಾಪಟ್ಟಣವನ್ನು ಪ್ರವೇಶಿಸಿದನು."

೩೭ನೆಯ ಅಧ್ಯಾಯವು ಮುಗಿಯಿತು.

೩೮ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ನಗರಪ್ರವೇಶದ ಸಮಯದಲ್ಲಿ ಹಸ್ತಿನಾಪಟ್ಟಣದ ನಿವಾಸಿಗಳೂ ಮತ್ತು ಬ್ರಾಹ್ಮಣರೂ ಯುಧಿಷ್ಠಿರನನ್ನು ಸತ್ಕರಿಸಿದುದು : ಧರ್ಮಜನನ್ನು ಆಕ್ಷೇಪಿಸಿದ ಚಾರ್ವಾಕನನ್ನು ಬ್ರಾಹ್ಮಣರು ಸಂಹರಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಕುಂತಿಯ ಮಕ್ಕಳು ಹಸ್ತಿನಾಪಟ್ಟಣವನ್ನು ಪ್ರವೇಶ

ಮಾಡುತ್ತಿದ್ದಾಗ ಅವರನ್ನು ನೋಡುವ ಸಲುವಾಗಿ ಹತ್ತು ಲಕ್ಷ ಪಟ್ಟಣಿಗರು ಒಂದೇ ಕಡೆಯಲ್ಲಿ ಸೇರಿದ್ದರು. ಚಂದ್ರೋದಯದ ಸಮಯದಲ್ಲಿ ಉಕ್ಕಿ ಬರುವ ಸಮುದ್ರದಂತೆ–ಸಿಂಗರಿಸಿದ ನಾಲ್ಕು ರಸ್ತೆಗಳು ಸೇರುವ ಚೌಕಗಳಿಂದ ಕೂಡಿದ್ದ ರಾಜಮಾರ್ಗವು ಅಸಂಖ್ಯಾತವಾದ ಜನಸ್ತೋಮದಿಂದ ಕೂಡಿ ಬಹಳವಾಗಿ ಶೋಭಿಸುತ್ತಿದ್ದಿತು. ರಾಜಮಾರ್ಗದ ಎರಡು ಪಾರ್ಶ್ವಗಳಲ್ಲಿಯೂ ಇದ್ದ ರತ್ನಖಚಿತವಾದ ಮತ್ತು ವಿಶಾಲವಾದ ಭವನಗಳು ಪ್ರೇಕ್ಷಕಸ್ತ್ರೀಯರಿಂದ ತುಂಬಿಹೋಗಿದ್ದು ಅವರ ಭಾರದಿಂದ ಕಂಪಿಸುತ್ತಿರುವುದೋ ಎಂಬಂತೆ ಕಾಣುತ್ತಿದ್ದಿತು. ಆ ಸ್ತ್ರೀಯರು ಲಜ್ಜಾನ್ವಿತೆಯರಾಗಿ ಯುಧಿಷ್ಠಿರನನ್ನೂ, ಭೀಮಾರ್ಜುನ-ನಕುಲ-ಸಹದೇವರನ್ನೂ ಮೆಲ್ಲ-ಮೆಲ್ಲನೆ ಪ್ರಶಂಸಿಸುತ್ತಿದ್ದರು.

**ಧನ್ಯಾ ತ್ವಮಸಿ ಪಾಞ್ಚಾಲಿ ಯಾ ತ್ವಂ ಪುರುಷಸತ್ತಮಾನ್ ।**
**ಉಪತಿಷ್ಠಸಿ ಕಲ್ಯಾಣಿ ಮಹರ್ಷೀನಿವ ಗೌತಮೀ ।**
**ತವ ಕರ್ಮಾಣ್ಯಮೋಘಾನಿ ವ್ರತಚರ್ಯಾ ಚ ಭಾಮಿನಿ ॥೫॥**

"ಕಲ್ಯಾಣಿ! ಪಾಂಚಾಲಕುಮಾರಿ! ಗೌತಮವಂಶೋತ್ಪನ್ನಳಾದ ಜಟಿಲೆಯು ಸಪ್ತರ್ಷಿಗಳನ್ನು ಸೇವಿಸುತ್ತಿದ್ದಂತೆ–ಪುರುಷೋತ್ತಮರಾದ ಈ ಐವರು ಪಾಂಡವರನ್ನೂ ಅನವರತವಾಗಿ ಉಪಚರಿಸುತ್ತಿರುವ ನೀನೇ ಧನ್ಯಳು. ಭಾಮಿನಿಯೇ! ನೀನು ಮಾಡಿರುವ ಪುಣ್ಯಕಾರ್ಯಗಳೆಲ್ಲವೂ ಅಮೋಘ ವಾದುವುಗಳು. ನಿನ್ನ ವ್ರತಾನುಷ್ಠಾನವೂ ಅಮೋಘವಾದುದು."

ಜನಮೇಜಯಮಹಾರಾಜ! ಹೀಗೆ ಮಹಾಸೌಧಗಳಲ್ಲಿ ಪ್ರೇಕ್ಷಕರಾಗಿ ನಿಂತಿದ್ದ ಸ್ತ್ರೀಯರು ದ್ರೌಪದಿಯನ್ನೂ ಪ್ರಶಂಸೆಮಾಡುತ್ತಿದ್ದರು. ಆ ಸ್ತ್ರೀಯರು ರಹಸ್ಯದಲ್ಲಿ ಪರಸ್ಪರವಾಗಿ ಆಡಿಕೊಳ್ಳುತ್ತಿದ್ದ ಪ್ರಶಂಸಾವಚನಗಳಿಂದಲೂ ಪ್ರೀತಿಜನಕವಾದ ಶಬ್ದಗಳಿಂದಲೂ ಹಸ್ತಿನಾಪಟ್ಟಣವೇ ತುಂಬಿಹೋಯಿತು. ಯುಧಿಷ್ಠಿರನು ಅಂತಹ ಜನನಿಬಿಡವಾಗಿದ್ದ ರಾಜಮಾರ್ಗವನ್ನು ಸಾವಕಾಶ ವಾಗಿ ದಾಟಿ, ತಳಿರು-ತೋರಣಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ ಸಮಲಂಕೃತವಾಗಿದ್ದ, ಶೋಭಾಯಮಾನವಾಗಿದ್ದ ರಾಜಭವನದ ಸಮೀಪಕ್ಕೆ ಆಗಮಿಸಿದನು. ಅರಮನೆಯ ಹೆಬ್ಬಾಗಿಲಿಗೆ ಬರುತ್ತಲೇ ಮಂತ್ರಿ-ಸೇನಾಪತಿ ಗಳೇ ಮುಂತಾದ ಪ್ರಕೃತಿವರ್ಗಕ್ಕೆ ಸೇರಿದವರೂ, ಎಲ್ಲ ರಾಜರೂ,

ಹಸ್ತಿನಾಪುರವಾಸಿಗಳಾದ ಪೌರರೂ, ದೇಶ-ವಿದೇಶಗಳಿಂದ ಬಂದಿದ್ದ ಪ್ರಜೆಗಳೂ ಸಾಲು-ಸಾಲಾಗಿ ಯುಧಿಷ್ಠಿರನ ಬಳಿಗೆ ಬಂದು ಕರ್ಣಾನಂದಕರವಾದ ಮಾತುಗಳನ್ನಾಡಿದರು :

**ದಿಷ್ಟ್ಯಾ ಜಯಸಿ ರಾಜೇನ್ದ್ರ ಶತ್ರೂಞ್ಛತ್ರುನಿಷೂದನ ।**
**ದಿಷ್ಟ್ಯಾ ರಾಜ್ಯಂ ಪುನಃ ಪ್ರಾಪ್ತಂ ಧರ್ಮೇಣ ಚ ಬಲೇನ ಚ ॥೧೦॥**

"ಶತ್ರುಸಂಹಾರಕನೇ! ರಾಜೇಂದ್ರ! ಸೌಭಾಗ್ಯದ ಕಾರಣದಿಂದಾಗಿ ನೀನು ಶತ್ರುಗಳನ್ನು ಜಯಿಸಿರುವೆ. ಧರ್ಮದ ಪ್ರಭಾವದಿಂದಲೂ ಮತ್ತು ಭುಜಗಳ ಬಲದಿಂದಲೂ ರಾಜ್ಯವು ಅದೃಷ್ಟವಿಶೇಷದಿಂದಲೇ ಪುನಃ ನಿನಗೆ ಲಭಿಸಿದೆ.

**ಭವ ನಸ್ತ್ವಂ ಮಹಾರಾಜ ರಾಜೇಹ ಶರದಾಂ ಶತಮ್ ।**
**ಪ್ರಜಾಃ ಪಾಲಯ ಧರ್ಮೇಣ ಯಥೇನ್ದ್ರಸ್ತ್ರಿದಿವಂ ತಥಾ ॥೧೧॥**

ಮಹಾರಾಜ! ನೀನು ನೂರು ವರ್ಷಗಳ ಪರ್ಯಂತವಾಗಿ ನಮಗೆ ರಾಜನಾಗಿರು. ಇಂದ್ರನು ಸ್ವರ್ಗವನ್ನು ಧರ್ಮದಿಂದ ಪಾಲನೆಮಾಡುತ್ತಿರುವಂತೆ–ನೀನೂ ಪ್ರಜೆಗಳನ್ನು ಧರ್ಮದಿಂದ ಸಂರಕ್ಷಿಸು."

ಪ್ರಜೆಗಳು ಹೀಗೆ ಹೇಳುತ್ತಿರಲಾಗಿ, ಪುರೋಹಿತಪುರಃಸರರಾದ ಪೌರರು ರಾಜಭವನದ ಮಹಾದ್ವಾರದಲ್ಲಿ ಯುಧಿಷ್ಠಿರನನ್ನು ಮಂಗಳದ್ರವ್ಯ ಗಳಿಂದ ಸ್ವಾಗತಿಸಿ ಯಥೋಚಿತವಾಗಿ ಸತ್ಕರಿಸಿದರು. ಬಳಿಕ ಬ್ರಾಹ್ಮಣರು ಮಾಡಿದ ಆಶೀರ್ವಾದಗಳನ್ನು ಯುಧಿಷ್ಠಿರನು ತಲೆಬಾಗಿ ಪ್ರತಿಗ್ರಹಿಸಿದನು. ಅನಂತರ ಯುಧಿಷ್ಠಿರನು ಶ್ರದ್ಧೆ ಮತ್ತು ವಿಜಯಗಳಿಂದ ಸಂಪನ್ನವಾಗಿದ್ದ, ದೇವರಾಜನಾದ ಇಂದ್ರನ ಭವನಕ್ಕೆ ಸಮಾನವಾಗಿದ್ದ ರಾಜಭವನದ ಬಳಿ ಬಂದು ರಥದಿಂದ ಕೆಳಗಿಳಿದನು. ಅನಂತರ ಶ್ರೀಮಂತನಾದ ಯುಧಿಷ್ಠಿರನು ರಾಜಭವನದ ಒಳಭಾಗವನ್ನು ಪ್ರವೇಶಿಸಿ, ಅಲ್ಲಿ ಪ್ರತಿಷ್ಠಿತರಾಗಿದ್ದ ಕುಲದೇವತೆಗಳ ಸನ್ನಿಧಿಗೆ ಹೋಗಿ, ರತ್ನಗಳಿಂದಲೂ ಗಂಧ-ಮಾಲ್ಯಾದಿಗಳಿಂದಲೂ ಆ ದೇವತೆಗಳನ್ನು ಪೂಜಿಸಿದನು. ಶ್ರೀಮಂತನಾದ ಮತ್ತು ಯಶೋವಂತನಾದ ಯುಧಿಷ್ಠಿರನು ರಾಜಭವನದ ಹೊರಭಾಗಕ್ಕೆ ಪುನಃ ಬಂದು ಮಂಗಲದ್ರವ್ಯಗಳನ್ನು ಹಿಡಿದು ನಿಂತಿದ್ದ ಅನೇಕಬ್ರಾಹ್ಮಣರನ್ನು

ಸಂದರ್ಶಿಸಿದನು. ಆಶೀರ್ವಾದಮಾಡುವ ಇಚ್ಛೆಯಿಂದ ಅಲ್ಲಿಗೆ ಆಗಮಿಸಿದ್ದ ಬ್ರಾಹ್ಮಣರಿಂದ ಪರಿವೃತನಾದ ಯುಧಿಷ್ಠಿರನು ನಕ್ಷತ್ರಗಳ ಸಮೂಹಗಳಿಂದ ಪರಿವೃತನಾದ ನಿರ್ಮಲನಾದ ಚಂದ್ರನಂತೆಯೇ ಪ್ರಕಾಶಿಸಿದನು. ಗುರುಗಳಾದ ಧೌಮ್ಯರನ್ನೂ ಮತ್ತು ದೊಡ್ಡಪ್ಪನಾದ ಧೃತರಾಷ್ಟ್ರನನ್ನೂ ಮುಂದೆ ಮಾಡಿಕೊಂಡು ಆಶೀರ್ವಾದಮಾಡಲು ಆಗಮಿಸಿದ್ದ ಎಲ್ಲ ಬ್ರಾಹ್ಮಣರನ್ನೂ ವಿಧಿವತ್ತಾಗಿ ಸತ್ಕರಿಸಿದನು. ಯಾರು-ಯಾರಿಗೆ ಯಾವ ಅಪೇಕ್ಷೆಯಿರುವುದೆಂಬುದನ್ನು ಕೇಳಿ ಯುಧಿಷ್ಠಿರನು ಆ ಎಲ್ಲ ಬ್ರಾಹ್ಮಣರನ್ನೂ ಪುಷ್ಪಗಳಿಂದಲೂ, ಮೋದಕಗಳಿಂದಲೂ, ವಸ್ತ್ರಗಳಿಂದಲೂ ಮತ್ತು ಅವರಿಗೆ ಅಭೀಷ್ಟವಾದ ವಸ್ತುಗಳಿಂದಲೂ ಸತ್ಕರಿಸಿದನು. ಬಳಿಕ ಬ್ರಾಹ್ಮಣರು ಸುಹೃದರಿಗೆ ಪ್ರೀತಿಕರವಾದ, ಕರ್ಣಾನಂದಕರವಾದ, ಪವಿತ್ರವಾದ ಪುಣ್ಯಾಹ ಘೋಷವನ್ನೂ ಮಾಡಿದರು. ಆ ಮಹಾವೇದಘೋಷವು ಆಕಾಶವನ್ನೇ ಸ್ತಬ್ಧಗೊಳಿಸುವುದೋ ಎಂಬಂತೆ ಕೇಳಿಬರುತ್ತಿದ್ದಿತು.

**ಹಂಸವದ್ವಿದುಷಾಂ ರಾಜನ್ದ್ವಿಜಾನಾಂ ತತ್ರ ಭಾರತೀ ।**
**ಶುಶ್ರುವೇ ವೇದವಿದುಷಾಂ ಪುಷ್ಕಲಾರ್ಥಪದಾಕ್ಷರಾ ॥೨೦॥**

ಆ ಸಮಯದಲ್ಲಿ ಹಂಸಗಳಂತೆ ಘೋಷಿಸುತ್ತಿದ್ದ ವೇದವಿದ್ವಾಂಸರಾದ ಬ್ರಾಹ್ಮಣರ ಶ್ರೇಷ್ಠವಾದ ಅರ್ಥಪದಾಕ್ಷರಗಳಿಂದ ಸಂಪನ್ನವಾಗಿದ್ದ ವಾಣಿಯು ಎಲ್ಲರಿಗೂ ಸ್ಪಷ್ಟವಾಗಿ ಕೇಳಿಸುತ್ತಿದ್ದಿತು.

ಬಳಿಕ ಮನಸ್ಸಿಗೆ ಇಂಪನ್ನುಂಟುಮಾಡುವ ಶಂಖ-ದುಂದುಭಿಗಳ ಧ್ವನಿಗಳು ಎಲ್ಲ ಕಡೆಗಳಲ್ಲಿ ಕೇಳಿಬರುತ್ತಿದ್ದುವು.

ಸ್ವಸ್ತಿವಾಚನಮಾಡಿದನಂತರ ಬ್ರಾಹ್ಮಣರೆಲ್ಲರೂ ನಿಃಶಬ್ದವಾಗಿರಲಾಗಿ, ಬ್ರಾಹ್ಮಣವೇಷವನ್ನು ಧರಿಸಿದ್ದ ಚಾರ್ವಾಕನೆಂಬ ರಾಕ್ಷಸನು ಯುಧಿಷ್ಠಿರನೊಡನೆ ಮಾತನಾಡಲು ಉದ್ಯುಕ್ತನಾದನು. ಆ ಚಾರ್ವಾಕನು ದುರ್ಯೋಧನನ ಮಿತ್ರನಾಗಿದ್ದನು. ಅವನು ಬ್ರಾಹ್ಮಣಸಂನ್ಯಾಸಿಯ ವೇಷವನ್ನು ಧರಿಸಿದ್ದು ತನ್ನ ನಿಜರೂಪವನ್ನು ಮರೆಸಿಕೊಂಡಿದ್ದನು. ಅಕ್ಷಮಾಲೆಯನ್ನು ಹಿಡಿದುಕೊಂಡಿದ್ದನು. ಶಿಖೆಯನ್ನು ಬಿಟ್ಟುಕೊಂಡಿದ್ದನು. ತ್ರಿದಂಡವನ್ನು ಹಿಡಿದಿದ್ದನು. ಧೈರ್ಯಶಾಲಿಯಾಗಿಯೂ ಭಯಶೂನ್ಯನಾಗಿಯೂ ಇದ್ದನು.

ದುಷ್ಟನಾದ, ಮಹಾತ್ಮರಾದ ಪಾಂಡವರಿಗೆ ಕೇಡನ್ನೇ ಬಯಸುತ್ತಿದ್ದ, ತ್ರಿದಂಡೀಸಂನ್ಯಾಸಿಯ ರೂಪದಲ್ಲಿದ್ದ ರಾಕ್ಷಸನು, ಯುಧಿಷ್ಠಿರನಿಗೆ ಆಶೀರ್ವಾದವನ್ನು ಮಾಡುವ ಇಚ್ಛೆಯಿಂದ ಬಂದಿದ್ದ, ತಪಸ್ಸುಗಳಿಂದಲೂ–ನಿಯಮಾನುಷ್ಠಾನಗಳಿಂದಲೂ ಯುಕ್ತರಾಗಿದ್ದ, ಸಹಸ್ರಸಂಖ್ಯಾತೀತರಾದ ಬ್ರಾಹ್ಮಣಸಮೂಹದಿಂದ ಮುಂದೆ ಬಂದು, ಬ್ರಾಹ್ಮಣರ ಅನುಮತಿಯನ್ನು ಕೇಳದೆಯೇ ಧರ್ಮರಾಜನನ್ನು ಕುರಿತು ಹೇಳತೊಡಗಿದನು :

"ಈ ಎಲ್ಲ ಬ್ರಾಹ್ಮಣರೂ ನಿನ್ನೊಡನೆ ಅವರೆಲ್ಲರ ಪರವಾಗಿ ಮಾತನಾಡುವ ಭಾರವನ್ನು ನನ್ನ ಮೇಲೆಯೇ ಹಾಕಿದ್ದಾರೆ. ಈ ಬ್ರಾಹ್ಮಣರೆಲ್ಲರ ಪರವಾಗಿ ಈ ಮಾತುಗಳನ್ನು ನಿನ್ನೊಡನೆ ಹೇಳುತ್ತಿದ್ದೇನೆ :

**ಧಿಗ್ಭವನ್ತಂ ಕುನೃಪತಿಂ ಜ್ಞಾತಿಘಾತಿನಮಸ್ತು ವೈ ।**
**ಕಿಂ ತೇನ ಸ್ಯಾದ್ಧಿ ಕೌನ್ತೇಯ ಕೃತ್ವೇಮಂ ಜ್ಞಾತಿಸಂಕ್ಷಯಮ್ ।**
**ಘಾತಯಿತ್ವಾ ಗುರೂಂಶ್ಚೈವ ಮೃತಂ ಶ್ರೇಯೋ ನ ಜೀವಿತಮ್ ॥**

"ಕೌಂತೇಯ! ಜ್ಞಾತಿ-ಬಾಂಧವರೆಲ್ಲರನ್ನೂ ಸಂಪೂರ್ಣವಾಗಿ ವಿನಾಶ ಮಾಡಿರುವ ದುಷ್ಟರಾಜನಾದ ನಿನಗೆ ಧಿಕ್ಕಾರವಿರಲಿ! ಹೀಗೆ ಸರ್ವನಾಶವನ್ನು ಮಾಡಿರುವುದರಿಂದ ನಿನಗೆ ಯಾವ ಪ್ರಯೋಜನವಾಯಿತು? ಜ್ಞಾತಿ-ಬಾಂಧವರ ವಿನಾಶವನ್ನು ಮಾಡಿ ಗುರುಜನರನ್ನು ಸಂಹರಿಸಿ ಬದುಕಿರುವುದಕ್ಕಿಂತಲೂ ನಿನಗೆ ಮರಣವೇ ಶ್ರೇಯಸ್ಕರವಾದುದು."

ಸಂನ್ಯಾಸಿಯ ವೇಷದಲ್ಲಿದ್ದ ಆ ದುಷ್ಟರಾಕ್ಷಸನ ಮಾತನ್ನು ಕೇಳಿ ಅಲ್ಲಿ ನೆರೆದಿದ್ದ ಸಾವಿರಾರು ಬ್ರಾಹ್ಮಣರು ಅವನ ಮಾತಿನಿಂದ ಅವಮಾನಿಸಲ್ಪಟ್ಟವರಾಗಿ ದುಃಖಿತರಾದರು, ಹಾಗೂ ಅವನ ಮಾತನ್ನು ಖಂಡಿಸುತ್ತಾ ಗಟ್ಟಿಯಾಗಿ ಕೂಗಿದರು. ಬಳಿಕ ಆ ಎಲ್ಲ ಬ್ರಾಹ್ಮಣರೂ ಮತ್ತು ಯುಧಿಷ್ಠಿರ ರಾಜನೂ ಆ ರಾಕ್ಷಸನ ಮಾತಿನಿಂದ ಉದ್ವಿಗ್ನರೂ ಮತ್ತು ಲಜ್ಜಿತರೂ ಆದರು. ಸ್ವಲ್ಪಕಾಲ ಯಾರೂ ಯಾವ ಮಾತನ್ನೂ ಆಡದೇ ಮೌನಧರಿಸಿ ಕುಳಿತಿದ್ದರು.

ಅನಂತರ ಯುಧಿಷ್ಠಿರನೇ ಮಾತನಾಡಲು ಉಪಕ್ರಮಿಸಿದನು :

**ಪ್ರಸೀದನ್ತು ಭವನ್ತೋ ಮೇ ಪ್ರಣತಸ್ಯಾಭಿಯಾಚತಃ ।**
**ಪ್ರತ್ಯಾಸನ್ನವ್ಯಸನಿನಂ ನ ಮಾಂ ಧಿಕ್ಕರ್ತುಮರ್ಹಥ ॥೩೦॥**

"ಬ್ರಾಹ್ಮಣೋತ್ತಮರೇ! ನಾನು ನಿಮಗೆ ಸಾಷ್ಟಾಂಗನಮಸ್ಕಾರಮಾಡಿ ಬೇಡಿಕೊಳ್ಳುತ್ತಿದ್ದೇನೆ. ನನ್ನ ವಿಷಯದಲ್ಲಿ ನೀವೆಲ್ಲರೂ ಪ್ರಸನ್ನರಾಗಿರಿ. ಈ ಸಮಯದಲ್ಲಿ ಎಲ್ಲ ಕಡೆಗಳಿಂದಲೂ ನನಗೆ ದೊಡ್ಡ ವ್ಯಸನವೇ ಸನ್ನಿಹಿತ ವಾಗಿದೆ. ಇಂತಹ ಸಮಯದಲ್ಲಿ ನೀವು ನನ್ನನ್ನು ಧಿಕ್ಕರಿಸುವುದು ಉಚಿತವಾಗಿ ಕಾಣುವುದಿಲ್ಲ."

ಜನಮೇಜಯ! ಯುಧಿಷ್ಠಿರನ ಮಾತನ್ನು ಕೇಳಿದ ಎಲ್ಲ ಬ್ರಾಹ್ಮಣರೂ ಏಕಕಂಠದಿಂದ ಯುಧಿಷ್ಠಿರನಿಗೆ ಹೇಳಿದರು :

"ಮಹಾರಾಜ! ಅವನು ಹೇಳಿದುದು ನಮ್ಮ ಅಭಿಪ್ರಾಯವಲ್ಲ. ಅವನು ನಮ್ಮ ಪ್ರತಿನಿಧಿಯೂ ಅಲ್ಲ. ನಾವು ನಿನಗೆ ಈಗಲೂ ಆಶೀರ್ವಾದಗಳನ್ನು ಮಾಡುತ್ತೇವೆ. ಶ್ರೀರಸ್ತು ತವ ಪಾರ್ಥಿವ–ರಾಜ್ಯಶ್ರೀಯು ನಿನ್ನದೇ ಆಗಲಿ."

ಬಳಿಕ ತಪಸ್ಸಿನಿಂದ ಪರಿಶುದ್ಧರಾಗಿದ್ದ, ವೇದವಿದ್ವಾಂಸರಾದ ಬ್ರಾಹ್ಮಣ ರೆಲ್ಲರೂ ಜ್ಞಾನದೃಷ್ಟಿಗಳಿಂದ ತಮ್ಮ ಅನುಮತಿಯೇ ಇಲ್ಲದೇ ತಮ್ಮ ಅಭಿಪ್ರಾಯಕ್ಕೆ ಅತ್ಯಂತವಿರೋಧವಾಗಿ ಮಾತನಾಡಿದವನು ಯಾರೆಂಬುದನ್ನು ತಿಳಿದುಕೊಂಡರು. ತಾವು ಅಂತರ್ದೃಷ್ಟಿಯಿಂದ ಕಂಡುಕೊಂಡುದನ್ನೇ ಯುಧಿಷ್ಠಿರನಿಗೂ ಹೇಳಿದರು :

**ಏಷ ದುರ್ಯೋಧನಸಖಾ ಚಾರ್ವಾಕೋ ನಾಮ ರಾಕ್ಷಸಃ ।**
**ಪರಿವ್ರಾಜಕರೂಪೇಣ ಹಿತಂ ತಸ್ಯ ಚಿಕೀರ್ಷತಿ ॥೩೩॥**

**ವಯಂ ಬ್ರೂಮೋ ನ ಧರ್ಮಾತ್ಮನ್ವ್ಯೇತು ತೇ ಭಯಮೀದೃಶಮ್ ।**
**ಉಪತಿಷ್ಠತು ಕಲ್ಯಾಣಂ ಭವನ್ತಂ ಭ್ರಾತೃಭಿಃ ಸಹ ॥೩೪॥**

"ಮಹಾರಾಜ! ಚಾರ್ವಾಕನೆಂಬ ಹೆಸರಿನ ಈ ರಾಕ್ಷಸನು ದುರ್ಯೋಧನನ ಸ್ನೇಹಿತನು. ಪರಿವ್ರಾಜಕವೇಷವನ್ನು ಧರಿಸಿ ಸತ್ತುಹೋದ ತನ್ನ ಮಿತ್ರನಿಗೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದಿರುತ್ತಾನೆ.

ಆದುದರಿಂದಲೇ ಅವನು ಹೀಗೆ ಮಾತನಾಡಿದ್ದಾನೆ. ಧರ್ಮಾತ್ಮನೇ! ನಾವು ಯಾರೂ ಇಂತಹ ಮಾತುಗಳನ್ನು ಹೇಳಲಾರೆವು. ಬ್ರಾಹ್ಮಣರೇ ಹೀಗೆ ಹೇಳುತ್ತಿದ್ದಾರೆಂಬ ನಿನ್ನ ಈ ಭಯವು ದೂರವಾಗಲಿ. ಸಹೋದರರಿಂದ ಯುಕ್ತನಾದ ನಿನಗೆ ಸದಾಕಾಲದಲ್ಲಿಯೂ ಮಂಗಳವುಂಟಾಗಲಿ."

ಜನಮೇಜಯ! ಶುದ್ಧಾತ್ಮರಾದ ಆ ಎಲ್ಲ ಬ್ರಾಹ್ಮಣರೂ ಯುಧಿಷ್ಠಿರ ನೊಡನೆ ಹೀಗೆ ಹೇಳಿ ಅವನನ್ನು ಸಮಾಧಾನಗೊಳಿಸಿ, ಕ್ರೋಧಾಭಿಭೂತರಾಗಿ ಪಾಪಿಷ್ಠನಾದ ಆ ರಾಕ್ಷಸನನ್ನು ಹುಂಕಾರಗಳಿಂದ ಭಯಪಡಿಸುತ್ತಾ ಕ್ಷಣಮಾತ್ರದಲ್ಲಿ ಸಂಹರಿಸಿದರು. ಇಂದ್ರನ ವಜ್ರಾಯುಧದಿಂದ (ಸಿಡಿಲಿನಿಂದ) ಭಸ್ಮೀಭೂತವಾದ ಚಿಗುರುಗಳಿಂದ ಕೂಡಿರುವ ವೃಕ್ಷದೋಪಾದಿಯಲ್ಲಿ– ರಾಕ್ಷಸನು ಬ್ರಹ್ಮವಾದಿಗಳ ತೇಜಸ್ಸಿನಿಂದ ಭಸ್ಮೀಭೂತನಾಗಿ ಕೆಳಗೆಬಿದ್ದನು.

ಬಳಿಕ ಯುಧಿಷ್ಠಿರನಿಂದ ಸತ್ಕೃತರಾದ ಬ್ರಾಹ್ಮಣರು ರಾಜನನ್ನು ವಂದಿಸಿ ತಮ್ಮ-ತಮ್ಮ ನಿವಾಸಗಳಿಗೆ ತೆರಳಿದರು. ಪಾಂಡುಪುತ್ರನಾದ ಯುಧಿಷ್ಠಿರನೂ ಸುಹೃದರೊಡನೆ ಸಂತೋಷಭರಿತನಾದನು."

ಃ೮ನೆಯ ಅಧ್ಯಾಯವು ಮುಗಿಯಿತು.

೩೯ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಚಾರ್ವಾಕನು ಹೊಂದಿದ್ದ ವರಗಳ ವಿಷಯವನ್ನು ಶ್ರೀಕೃಷ್ಣನು ಯುಧಿಷ್ಠಿರನಿಗೆ ವಿವರಿಸಿ ಹೇಳಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಸರ್ವಜ್ಞನಾದ, ದೇವಕಿಯ ಮಗನಾದ ಜನಾರ್ದನನು ಅನುಜರೊಡನೆ ನಿಂತಿದ್ದ ಯುಧಿಷ್ಠಿರರಾಜನನ್ನು ಕುರಿತು ಹೇಳಿದನು :

**ಬ್ರಾಹ್ಮಣಾಸ್ತಾತ ಲೋಕೇಽಸ್ಮಿನ್ನರ್ಚನೀಯಾಃ ಸದಾ ಮಮ ।**
**ಏತೇ ಭೂಮಿಚರಾ ದೇವಾ ವಾಗ್ವಿಷಾಃ ಸುಪ್ರಸಾದಕಾಃ ॥೨॥**

"ಯುಧಿಷ್ಠಿರ! ಈ ಪ್ರಪಂಚದಲ್ಲಿ ಬ್ರಾಹ್ಮಣರು ನನಗೆ ಯಾವಾಗಲೂ

ಪೂಜ್ಯರಾಗಿರುತ್ತಾರೆ. ಅವರು ಭೂಮಿಯಲ್ಲಿ ಸಂಚರಿಸುವ ದೇವತೆಗಳೇ ಆಗಿದ್ದಾರೆ. ಕೋಪಗೊಂಡಾಗ ಅವರ ಮಾತಿನಲ್ಲಿ ವಿಷದ ಪ್ರಭಾವವಿರುತ್ತದೆ. (ಮಾತು ಬಹಳ ಕಠೋರವಾಗಿರುತ್ತದೆ.) ಆದರೆ ಅವರು ಸ್ವಭಾವತಃ ಪ್ರಸನ್ನರಾಗಿಯೇ ಇರುತ್ತಾರೆ. ಇತರರನ್ನೂ ಪ್ರಸನ್ನಗೊಳಿಸುತ್ತಾರೆ.

ಹಿಂದೆ ಕೃತಯುಗದಲ್ಲಿ ಚಾರ್ವಾಕನೆಂಬ ಹೆಸರಿನ ರಾಕ್ಷಸನು ಬದರಿ ಕಾಶ್ರಮದಲ್ಲಿ ಅನೇಕ ವರ್ಷಗಳ ಕಾಲ ತಪಸ್ಸುಮಾಡುತ್ತಿದ್ದನು. ಅವನ ತಪಸ್ಸಿಗೆ ಮೆಚ್ಚಿದ ಬ್ರಹ್ಮನು ವರವನ್ನು ಕೇಳಿಕೊಳ್ಳುವಂತೆ ಪುನಃ-ಪುನಃ ರಾಕ್ಷಸನನ್ನು ಒತ್ತಾಯಪಡಿಸಿದನು. ಆ ಸಮಯದಲ್ಲಿ ಚಾರ್ವಾಕನು ಪ್ರಪಂಚದಲ್ಲಿರುವ ಯಾವ ಪ್ರಾಣಿಗಳಿಂದಲೂ ತನಗೆ ಭಯವುಂಟಾಗದಂತೆ ವರವನ್ನು ದಯಪಾಲಿಸಬೇಕೆಂದು ಬ್ರಹ್ಮನನ್ನು ಕೇಳಿಕೊಂಡನು. ಬ್ರಹ್ಮನು ಒಂದು ನಿಬಂಧನೆಯೊಡನೆ ಚಾರ್ವಾಕನು ಕೇಳಿದ ವರವನ್ನು ದಯಪಾಲಿಸಿ ದನು :

**ದ್ವಿಜಾವಮಾನಾದನ್ಯತ್ರ ಪ್ರಾದಾದ್ವರಮನುತ್ತಮಮ್ ।**
**ಅಭಯಂ ಸರ್ವಭೂತೇಭ್ಯೋ ದದೌ ತಸ್ಮೈ ಜಗತ್ಪತಿಃ ॥೫॥**

ಜಗತ್ಪತಿಯಾದ ಬ್ರಹ್ಮನು ಚಾರ್ವಾಕನಿಗೆ ಎಲ್ಲ ಪ್ರಾಣಿಗಳಿಂದಲೂ ಅಭಯವನ್ನು ನೀಡಿದನು. ಆದರೆ–'ಬ್ರಾಹ್ಮಣರಿಗೇನಾದರೂ ಅವಮಾನ ವಾಗುವಂತೆ ವರ್ತಿಸಿದರೆ ಮಾತ್ರ ಚಾರ್ವಾಕನಿಗೆ ಪ್ರಾಣಭಯವಿದೆ.' ಈ ಒಂದು ನಿಬಂಧನೆಯೊಡನೆ ಉತ್ತಮೋತ್ತಮವಾದ ವರವನ್ನು ಬ್ರಹ್ಮನು ಆ ರಾಕ್ಷಸನಿಗೆ ದಯಪಾಲಿಸಿದನು.

ಅಂತಹ ಅಮೋಘವಾದ ವರವನ್ನು ಪಡೆದುಕೊಂಡನಂತರ ಪಾಪಿಷ್ಠ ನಾದ, ಅಮಿತಪರಾಕ್ರಮಿಯಾದ, ತೀಕ್ಷ್ಣವಾದ ಕಾರ್ಯಗಳನ್ನು ಮಾಡು ತ್ತಿದ್ದ, ಮಹಾಬಲಿಷ್ಠನಾದ ಚಾರ್ವಾಕನು ದೇವತೆಗಳಿಗೂ ಪರಿತಾಪ ವನ್ನುಂಟುಮಾಡಲು ಉಪಕ್ರಮಿಸಿದನು. ಆ ರಾಕ್ಷಸನ ಬಲದಿಂದ ತಿರಸ್ಕೃತ ರಾದ ದೇವತೆಗಳು ಬ್ರಹ್ಮನ ಬಳಿಗೆ ಹೋಗಿ ರಾಕ್ಷಸನ ವಧಾರ್ಥವಾಗಿ ಪ್ರಾರ್ಥಿಸಿದರು. ಹೀಗೆ ಪ್ರಾರ್ಥಿಸಿದ ದೇವತೆಗಳನ್ನು ಉದ್ದೇಶಿಸಿ ಬ್ರಹ್ಮನು ಹೇಳಿದನು :

"ದೇವತೆಗಳೇ! ಚಾರ್ವಾಕನ ವಧೆಯು ಯಾವ ರೀತಿಯಲ್ಲಾಗ ಬೇಕೆಂಬುದನ್ನು ನಾನಾಗಲೇ ನಿಶ್ಚಯಿಸಿದ್ದೇನೆ. ಬಹಳ ಬೇಗ ಅವನಿಗೆ ಮೃತ್ಯುವು ಸನ್ನಿಹಿತವಾಗುವುದು. ಮನುಷ್ಯರಲ್ಲಿ ದುರ್ಯೋಧನನೆಂಬ ರಾಜ ನಿದ್ದಾನೆ. ಆ ದುರ್ಯೋಧನರಾಜನಿಗೆ ಚಾರ್ವಾಕನು ಮಿತ್ರನಾಗುವನು. ದುರ್ಯೋಧನನ ಸ್ನೇಹಪಾಶದಿಂದ ಬಂಧಿತನಾದ ಚಾರ್ವಾಕನು ಒಂದು ಸಮಯದಲ್ಲಿ ಬ್ರಾಹ್ಮಣರನ್ನು ಅಪಮಾನಗೊಳಿಸುವನು. ಅವನ ವಿರುದ್ಧಾ ಚರಣೆಯಿಂದ ಅವಮಾನಹೊಂದುವ ವಾಕ್ಯಲ್ಯರಾದ ಬ್ರಾಹ್ಮಣರು ಕೋಪ ಗೊಂಡು ಹುಂಕಾರದಿಂದಲೇ ಅವನನ್ನು ಸುಟ್ಟುಬಿಡುವರು. ಹೀಗೆ ಅವನು ವಿನಾಶಹೊಂದುವನು."

ಯುಧಿಷ್ಠಿರ! ಆ ರಾಕ್ಷಸನೇ ಈಗ ಬ್ರಾಹ್ಮಣರ ಬ್ರಹ್ಮದಂಡದಿಂದ ಹತನಾಗಿ ಬಿದ್ದಿದ್ದಾನೆ. ಇದಕ್ಕಾಗಿ ನೀನು ಶೋಕಪಡುವ ಕಾರಣವಿಲ್ಲ. ನಿನ್ನ ಜ್ಞಾತಿಗಳೂ ಕ್ಷತ್ರಧರ್ಮಾನುಸಾರವಾಗಿ ಯುದ್ಧದಲ್ಲಿ ಮಡಿದಿರುತ್ತಾರೆ. ವೀರರಾದ ಮತ್ತು ಮಹಾತ್ಮರಾದ ಕ್ಷತ್ರಿಯಪುಂಗವರು ಯುದ್ಧದಲ್ಲಿ ಅಸುನೀಗಿರುವುದರಿಂದ ಸ್ವರ್ಗಕ್ಕೇ ಹೋಗಿರುತ್ತಾರೆ. ಆದುದರಿಂದ ಈಗ ನೀನು ನಿನ್ನ ಕರ್ತವ್ಯವನ್ನು ಮಾಡು. ನಿನ್ನ ಮನಸ್ಸು ಪುನಃ ದೌರ್ಬಲ್ಯವನ್ನು ಹೊಂದದಿರಲಿ.

**ಶತ್ರೂಞ್ಜಹಿ ಪ್ರಜಾ ರಕ್ಷ ದ್ವಿಜಾಂಶ್ಚ ಪರಿಪೂಜಯ ॥೧೩॥**

ಶತ್ರುಗಳನ್ನು ಸಂಹರಿಸು. (ಜಯಿಸು) ಪ್ರಜೆಗಳನ್ನು ಸಂರಕ್ಷಿಸು. ಬ್ರಾಹ್ಮಣರನ್ನು ಸತ್ಕರಿಸು. ಇವು ನಿನ್ನ ಮುಖ್ಯಕರ್ತವ್ಯಗಳಾಗಿವೆ."

ಒಳನೆಯ ಅಧ್ಯಾಯವು ಮುಗಿಯಿತು.

೪೦ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನ ರಾಜ್ಯಾಭಿಷೇಕ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಕುಂತಿಯ ಮಗನಾದ ಯುಧಿಷ್ಠಿರರಾಜನು ದೈನ್ಯವನ್ನೂ–ಚಿಂತೆಯನ್ನೂ ದೂರಮಾಡಿ,

ಪರಮಹೃಷ್ಟನಾಗಿ ಸುವರ್ಣಮಯವಾದ ಮತ್ತು ಶ್ರೇಷ್ಠವಾದ ಸಿಂಹಾಸನದಲ್ಲಿ ಪೂರ್ವಾಭಿಮುಖವಾಗಿ ಕುಳಿತನು. ಯುಧಿಷ್ಠಿರನ ಸಿಂಹಾಸನಕ್ಕೆ ಅಭಿಮುಖವಾಗಿ ಜಾಜ್ವಲ್ಯಮಾನವಾಗಿದ್ದ ಸುವರ್ಣಸಿಂಹಾಸನಗಳಲ್ಲಿ ಅರಿಂದಮರಾದ ಸಾತ್ಯಕಿ-ವಾಸುದೇವರು ಕುಳಿತುಕೊಂಡರು. ಯುಧಿಷ್ಠಿರನನ್ನು ಮಧ್ಯದಲ್ಲಿ ಬಿಟ್ಟುಕೊಂಡು (ಯುಧಿಷ್ಠಿರನ ಉಭಯಪಾರ್ಶ್ವಗಳಲ್ಲಿ) ಮಹಾತ್ಮರಾದ ಭೀಮಾರ್ಜುನರು ಮನೋಹರವಾದ ಮಣಿಮಯಪೀಠಗಳಲ್ಲಿ ಕುಳಿತುಕೊಂಡರು. ಕುಂತಿಯು ಶುಭ್ರವಾಗಿದ್ದ, ಸುವರ್ಣದಿಂದ ಸಮಲಂಕೃತವಾದ ದಂತಸಿಂಹಾಸನದಲ್ಲಿ ನಕುಲ-ಸಹದೇವರೊಡನೆ ಕುಳಿತುಕೊಂಡಳು. ಸುಧರ್ಮಾ, ವಿದುರ, ಧೌಮ್ಯರು, ಕುರುರಾಜನಾದ ಧೃತರಾಷ್ಟ್ರ– ಇವರೆಲ್ಲರೂ ಯಜ್ಞೇಶ್ವರನಂತೆ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದ ಸಿಂಹಾಸನಗಳಲ್ಲಿ ಪ್ರತ್ಯೇಕ-ಪ್ರತ್ಯೇಕವಾಗಿ ಕುಳಿತುಕೊಂಡರು. ಧೃತರಾಷ್ಟ್ರನು ಕುಳಿತಿದ್ದ ಸಿಂಹಾಸನದ ಪಕ್ಕದಲ್ಲಿಯೇ ಯಶಸ್ವಿನಿಯಾದ ಗಾಂಧಾರಿಯೂ, ಯುಯುತ್ಸು-ಸಂಜಯರೂ ಕುಳಿತುಕೊಂಡರು.

ರತ್ನಖಚಿತವಾದ ಸುವರ್ಣಮಯಸಿಂಹಾಸನದಲ್ಲಿ ಕುಳಿತಿದ್ದ ಯುಧಿಷ್ಠಿರನು ಶ್ವೇತಪುಷ್ಪಗಳನ್ನೂ, ಸ್ವಸ್ತಿಕಗಳನ್ನೂ, ಅಕ್ಷತೆಗಳನ್ನೂ, ಭೂಮಿಯನ್ನೂ, ಸುವರ್ಣವನ್ನೂ, ಬೆಳ್ಳಿಯನ್ನೂ ಮತ್ತು ಮುತ್ತು-ಮಾಣಿಕ್ಯಾದಿ ಮಣಿಗಳನ್ನೂ ಸ್ಪರ್ಶಮಾಡಿದನು. ಬಳಿಕ ಅಮಾತ್ಯ-ಸೇನಾಪತಿಗಳೇ ಮೊದಲಾದ ಪ್ರಕೃತಿವರ್ಗದವರು ಪುರೋಹಿತರಾದ ಧೌಮ್ಯರನ್ನು ಮುಂದೆಮಾಡಿಕೊಂಡು ಅನೇಕವಿಧವಾದ ಮಂಗಳಸಾಮಗ್ರಿಗಳೊಡನೆ ಧರ್ಮರಾಜನನ್ನು ಸಂದರ್ಶಿಸಿದರು.

ಪೃಥಿವೀಂ ಚ ಸುವರ್ಣಂ ಚ ರತ್ನಾನಿ ವಿವಿಧಾನಿ ಚ ।
ಅಭಿಷೇಚನಿಕಂ ಭಾಣ್ಡಂ ಸರ್ವಸಮ್ಭಾರಸಮ್ಭೃತಮ್ ॥೯॥

ಕಾಞ್ಚನೋದುಮ್ಬರಾಸ್ತತ್ರ ರಾಜತಾಃ ಪೃಥಿವೀಮಯಾಃ ।
ಪೂರ್ಣಕುಮ್ಭಾಃ ಸುಮನಸೋ ಲಾಜಾ ಬರ್ಹೀಂಷಿ ಗೋರಸಮ್ ॥

ಶಮೀಪಿಪ್ಪಲಪಾಲಾಶಸಮಿಧೋ ಮಧುಸರ್ಪಿಷೀ ।
ಸ್ರುವ ಔದುಮ್ಬರಃ ಶಙ್ಖಸ್ತಥಾ ಹೇಮವಿಭೂಷಿತಃ ॥೧೧॥

ಮೃತ್ತಿಕೆ, ಚಿನ್ನ, ಅನೇಕವಿಧವಾದ ರತ್ನಗಳು, ಸಕಲಸಾಮಗ್ರಿ ಗಳಿಂದಲೂ ಸಂಪನ್ನವಾದ ಅಭಿಷೇಕಮಾಡುವ ಚಿನ್ನ, ತಾಮ್ರ ಮತ್ತು ಬೆಳ್ಳಿಯ ಕಲಶಗಳು ಮತ್ತು ನೀರುತುಂಬಿದ ಬೆಳ್ಳಿಯ ಮತ್ತು ಮಣ್ಣಿನ ಪೂರ್ಣಕುಂಭಗಳು, ಪುಷ್ಪಗಳು, ಬತ್ತದರಳು, ದರ್ಭೆ, ಗೋರಸ (ಗೋರೋಚನ ಅಥವಾ ಹಾಲು), ಬನ್ನಿ, ಅರಳಿ ಮತ್ತು ಮುತ್ತುಗದ ಸಮಿತ್ತುಗಳು, ಜೇನುತುಪ್ಪ, ತುಪ್ಪ, ಅತ್ತಿಯ ಮರದಿಂದ ಮಾಡಿದ ಸ್ರುವ, ಸುವರ್ಣಭೂಷಿತವಾದ ಶಂಖ–ಈ ಎಲ್ಲ ಮಂಗಳದ್ರವ್ಯಗಳನ್ನೂ ಪ್ರಕೃತಿ ವರ್ಗದವರು ಯುಧಿಷ್ಠಿರನ ಅಭಿಷೇಕಾರ್ಥವಾಗಿ ಸಂಗ್ರಹಿಸಿ ತಂದಿದ್ದರು.

ದಶಾರ್ಹಕುಲತಿಲಕನಾದ ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದು ಪುರೋಹಿತರಾದ ಧೌಮ್ಯರು ಪೂರ್ವೋತ್ತರದಿಕ್ಕುಗಳ ( ಈಶಾನ್ಯ ) ಕಡೆಗೆ ಸ್ವಲ್ಪ ಇಳಿಜಾರಾಗಿದ್ದ ಒಂದು ವೇದಿಯನ್ನು ಸಿದ್ಧಗೊಳಿಸಿದರು.

ಆ ವೇದಿಯನ್ನು ಗೋಮಯದಿಂದ ಸಾರಿಸಿ, ಲಕ್ಷಣಯುಕ್ತವಾಗುವಂತೆ ಆ ವೇದಿಗೆ ಸಂಸ್ಕಾರಮಾಡಿ, ದೃಢವಾದ ಪಾದಗಳಿಂದ ಕೂಡಿದ್ದ, ಯಜ್ಞೇಶ್ವರನ ಜ್ವಾಲೆಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಸರ್ವತೋಭದ್ರವೆಂಬ ಆಸನದ ಮೇಲೆ ವ್ಯಾಘ್ರಚರ್ಮವನ್ನೂ, ಅದರ ಮೇಲೆ ಬಿಳಿಯ ವಸ್ತ್ರವನ್ನೂ ಹೊದ್ದಿಸಿ, ಮಹಾತ್ಮನಾದ ಯುಧಿಷ್ಠಿರನನ್ನೂ ಮತ್ತು ದ್ರುಪದನ ಮಗಳಾದ ದ್ರೌಪದಿಯನ್ನೂ ಆ ಸರ್ವತೋಭದ್ರಾಸನದ ಮೇಲೆ ಕುಳ್ಳಿರಿಸಿದರು. ಧೀಮಂತರಾದ ಧೌಮ್ಯರು ಅಗ್ನಿಯನ್ನು ಪ್ರತಿಷ್ಠಾಪಿಸಿ ವಿಧಿಮಂತ್ರಪೂರ್ವಕವಾಗಿ ಪಟ್ಟಾಭಿಷೇಕಕ್ಕೆ ಸಂಬಂಧಿಸಿದಂತೆ ಯಜ್ಞೇಶ್ವರನಲ್ಲಿ ಆಜ್ಯಾಹುತಿಗಳನ್ನು ಸಮರ್ಪಿಸಿದರು. ಬಳಿಕ ದಶಾರ್ಹಕುಲತಿಲಕನಾದ ಶ್ರೀಕೃಷ್ಣನು ಸಿಂಹಾಸನದಿಂದ ಮೇಲೆದ್ದು ಸಂಪೂಜಿತವಾಗಿದ್ದ ಪಾಂಚಜನ್ಯ ದಿವ್ಯಶಂಖವನ್ನು ಕೈಯಲ್ಲೆತ್ತಿಕೊಂಡು ಪೃಥಿವೀಪತಿಯಾದ ಯುಧಿಷ್ಠಿರನಿಗೆ ಶಂಖೋದಕದಿಂದ ಅಭಿಷೇಕಮಾಡಿದನು. ಅವನನ್ನು ಅನುಸರಿಸಿ ರಾಜರ್ಷಿಯಾದ ಧೃತರಾಷ್ಟ್ರನೂ, ಮಂತ್ರಿಗಳೂ, ಅಮಾತ್ಯರೂ, ಸೇನಾಪತಿಗಳೂ ಮತ್ತು ಇತರ ಪ್ರಮುಖರೂ ಯುಧಿಷ್ಠಿರನಿಗೆ ದಿವ್ಯೋದಕಗಳಿಂದ ಅಭಿಷೇಕ ಮಾಡಿದರು. ಪಾಂಚಜನ್ಯಶಂಖದಿಂದ ಅಭಿಷಿಕ್ತನಾದ ಯುಧಿಷ್ಠಿರನು

ಶ್ರೀಕೃಷ್ಣನ ಅನುಜ್ಞೆಯನ್ನು ಪಡೆದು ತನ್ನ ಅನುಜರೊಡನೆ ಅಮೃತಮುಖನಾದನು. ( ಚಂದ್ರಮುಖನಾದನು. ಚಂದ್ರನಂತೆ ಕಾಂತಿಯುಕ್ತವಾದ ಮುಖವನ್ನು ಹೊಂದಿದನು. )

ಪಟ್ಟಾಭಿಷೇಕವು ಮುಗಿದೊಡನೆಯೇ ವಾದ್ಯಗಾರರು ಪಣವ-ಆನಕ ಮತ್ತು ದುಂದುಭಿಗಳನ್ನು ಸುಶ್ರಾವ್ಯವಾಗಿ ಬಾರಿಸಿದರು. ವಾದ್ಯಗಾರರೂ, ಪ್ರಕೃತಿವರ್ಗದವರೂ ಮತ್ತು ಪ್ರಜೆಗಳೂ ಮಾಡಿದ ಸತ್ಕಾರವನ್ನು ಯುಧಿಷ್ಠಿರನು ಪ್ರೀತಿಪೂರ್ವಕವಾಗಿಯೂ–ರಾಜಧರ್ಮಾನುಸಾರವಾಗಿಯೂ ಸ್ವೀಕರಿಸಿದನು. ಅವರನ್ನೂ ವಿಧಿಪೂರ್ವಕವಾಗಿ ಗೌರವಿಸಿದನು. ಹೇರಳವಾದ ದಕ್ಷಿಣೆಗಳನ್ನು ಕೊಡುವ ಸ್ವಭಾವವುಳ್ಳ ಯುಧಿಷ್ಠಿರನು ವೇದಾಧ್ಯಯನದಿಂದಲೂ, ಧೃತಿ-ಶೀಲಗಳಿಂದಲೂ ಸಂಪನ್ನರಾದ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿಕೊಂಡು, ಅವರನ್ನು ವಿಧಿವತ್ತಾಗಿ ಪೂಜಿಸಿ, ಒಬ್ಬೊಬ್ಬರಿಗೂ ಒಂದೊಂದು ಸಾವಿರ ನಿಷ್ಕಗಳನ್ನು ಕೊಟ್ಟು ಸತ್ಕರಿಸಿದನು. ಸುಪ್ರೀತರಾದ ಆ ಬ್ರಾಹ್ಮಣರು ಮಂಗಳವಾಗಲೆಂದೂ, ದೀರ್ಘಾಯುಷ್ಮಂತನಾಗೆಂದೂ, ಕೀರ್ತಿಮಂತನಾಗೆಂದೂ ಯುಧಿಷ್ಠಿರನಿಗೆ ಆಶೀರ್ವಾದಮಾಡಿದರು. 'ಯುಧಿಷ್ಠಿರನಿಗೆ ಜಯವಾಗಲಿ! ಧರ್ಮಕ್ಕೆ ಜಯವಾಗಲಿ!' –ಎಂದು ಜಯಕಾರಗಳನ್ನು ಮಾಡಿದರು. ಹಂಸಪಕ್ಷಿಯಂತೆ ಗಂಭೀರಸ್ವರದಿಂದ ಮಾತನಾಡುತ್ತಿದ್ದ ಬ್ರಾಹ್ಮಣರು ಯುಧಿಷ್ಠಿರನನ್ನು ಪರಿ-ಪರಿಯಾಗಿ ಪ್ರಶಂಸಿಸಿದರು :

**ಯುಧಿಷ್ಠಿರ ಮಹಾಬಾಹೋ ದಿಷ್ಟ್ಯಾ ಜಯಸಿ ಪಾಣ್ಡವ ।**
**ದಿಷ್ಟ್ಯಾ ಸ್ವಧರ್ಮಂ ಪ್ರಾಪ್ತೋऽಸಿ ವಿಕ್ರಮೇಣ ಮಹಾದ್ಯುತೇ ॥೨೧॥**

"ಮಹಾಬಾಹುವೇ! ಯುಧಿಷ್ಠಿರ! ಸೌಭಾಗ್ಯದ ದೆಸೆಯಿಂದಾಗಿ ನೀನು ಜಯಗಳಿಸಿರುವೆ. ನಿನ್ನ ಪರಾಕ್ರಮದಿಂದ ಸ್ವಧರ್ಮಾನುಕೂಲವಾದ ಸಾಮ್ರಾಜ್ಯವನ್ನೂ ಅದೃಷ್ಟದ ಕಾರಣದಿಂದಲೇ ಪಡೆದುಕೊಂಡಿರುವೆ.

**ದಿಷ್ಟ್ಯಾ ಗಾಣ್ಡೀವಧನ್ವಾ ಚ ಭೀಮಸೇನಶ್ಚ ಪಾಣ್ಡವಃ ।**
**ತ್ವಂ ಚಾಪಿ ಕುಶಲೀ ರಾಜನ್ಮಾದ್ರೀಪುತ್ರೌ ಚ ಪಾಣ್ಡವೌ ॥೨೨॥**
**ಮುಕ್ತಾ ವೀರಕ್ಷಯಾತ್ತಸ್ಮಾತ್ಸಂಗ್ರಾಮಾದ್ವಿಜಿತದ್ವಿಷಃ ।**
**ಕ್ಷಿಪ್ರಮುತ್ತರಕಾರ್ಯಾಣಿ ಕುರು ಸರ್ವಾಣಿ ಭಾರತ ॥೨೩॥**

ಅದೃಷ್ಟವಶದಿಂದಲೇ ಅರ್ಜುನ, ಭೀಮ, ನೀನು ಮತ್ತು ನಕುಲ-ಸಹದೇವರು–ಎಲ್ಲರೂ ಅಂತಹ ವೀರಕ್ಷಯಕರವಾದ ಘೋರಸಂಗ್ರಾಮದಿಂದ ಮುಕ್ತರಾಗಿ ಕುಶಲಿಗಳಾಗಿರುತ್ತೀರಿ. ಶತ್ರುಗಳೆಲ್ಲರನ್ನೂ ಸಂಪೂರ್ಣವಾಗಿ ಜಯಿಸಿರುವಿರಿ. ಭಾರತ! ಮುಂದೆ ನೀನು ಮಾಡಬೇಕಾಗಿರುವ ಎಲ್ಲ ಕಾರ್ಯಗಳನ್ನೂ ಶೀಘ್ರವಾಗಿ ಮಾಡು."

ಬ್ರಾಹ್ಮಣರು ಹೀಗೆ ಹೇಳಿದನಂತರ ಅಲ್ಲಿಗೆ ಆಗಮಿಸಿದ್ದ ಸತ್ಪುರುಷರು ಪುನಃ ಯುಧಿಷ್ಠಿರನನ್ನು ಯಥೋಚಿತವಾಗಿ ಗೌರವಿಸಿದರು. ಹೀಗೆ ಯುಧಿಷ್ಠಿರನು ತನ್ನ ಮಿತ್ರರೊಡನೆ ವಿಶಾಲವಾದ ರಾಜ್ಯವನ್ನು ಪಡೆದುಕೊಂಡನು."

ಳ೦ನೆಯ ಅಧ್ಯಾಯವು ಮುಗಿಯಿತು.

ಳ೧ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಧೃತರಾಷ್ಟ್ರನಿಗೆ ಅಧೀನನಾಗಿದ್ದುಕೊಂಡು ರಾಜ್ಯದ ಆಡಳಿತದ ಸುವ್ಯವಸ್ಥೆಗಾಗಿ ಸಹೋದರರಿಗೂ ಮತ್ತು ಇತರರಿಗೂ ಖಾತೆಗಳನ್ನು ವಹಿಸಿಕೊಟ್ಟುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರರಾಜನು ಮಂತ್ರಿ-ಸೇನಾಪತಿ-ಪ್ರಜೆಗಳೇ ಮೊದಲಾದ ಪ್ರಕೃತಿವರ್ಗದವರ ದೇಶ-ಕಾಲೋಚಿತವಾದ ಮಾತುಗಳನ್ನು ಕೇಳಿ ಯಥಾನುಗುಣವಾಗಿ ಉತ್ತರಿಸಿದನು :

"ಪಾಂಡುವಿನ ಮಕ್ಕಳು ನಿಶ್ಚಯವಾಗಿಯೂ ಧನ್ಯರೇ ಸರಿ. ಏಕೆಂದರೆ : ಅವರಲ್ಲಿ ಇರಬಹುದಾದ ಮತ್ತು ಇಲ್ಲದೇ ಇರಬಹುದಾದ ಗುಣಗಳನ್ನೂ ಎಣಿಸದೇ ಇಲ್ಲಿಗೆ ಆಗಮಿಸಿರುವ ಬ್ರಾಹ್ಮಣಶ್ರೇಷ್ಠರು ಕೇವಲ ಪ್ರೀತಿಯ ಕಾರಣದಿಂದಾಗಿ ನಮ್ಮನ್ನು ಗುಣವಂತರೆಂದೇ ಹೊಗಳಿರುತ್ತಾರೆ.

ಪೂಜ್ಯರೇ! ನಾವು ತಮ್ಮೆಲ್ಲರ ಅನುಗ್ರಹಕ್ಕೆ ಪಾತ್ರರಾಗಿದ್ದೇವೆಂಬುದೇ ನನ್ನ ಅಭಿಪ್ರಾಯವಾಗಿದೆ. ಅಸೂಯಾರಹಿತರಾದ ತಾವು ನಮ್ಮನ್ನು

ಗುಣಸಂಪನ್ನರೆಂದು ಹೇಳಿರುವುದೇ ನಮ್ಮನ್ನು ಅನುಗ್ರಹಬುದ್ಧಿಯಿಂದ ಕಾಣುತ್ತಿರುವಿರೆಂಬುದಕ್ಕೆ ನಿದರ್ಶನವಾಗಿದೆ.

**ಧೃತರಾಷ್ಟ್ರೋ ಮಹಾರಾಜಃ ಪಿತಾ ಮೇ ದೈವತಂ ಪರಮ್ ।**
**ಶಾಸನೇಽಸ್ಯ ಪ್ರಿಯೇ ಚೈವ ಸ್ಥೇಯಂ ಮತ್ಪ್ರಿಯಕಾಂಕ್ಷಿಭಿಃ ॥೪॥**

ಧೃತರಾಷ್ಟ್ರಮಹಾರಾಜನು ನನಗೆ ತಂದೆಯೂ ಆಗಿದ್ದಾನೆ. ಶ್ರೇಷ್ಠ ದೇವತೆಯೂ ಆಗಿದ್ದಾನೆ. ನನಗೆ ಪ್ರಿಯವನ್ನುಂಟುಮಾಡಲು ಅಪೇಕ್ಷಿಸುವವರು ಅವನ ಶಾಸನದಂತೆಯೇ ನಡೆಯಬೇಕು ಮತ್ತು ಅವನಿಗೆ ಪ್ರಿಯವಾಗುವುದನ್ನೇ ಮಾಡಬೇಕು. ಜ್ಞಾತಿ-ಬಾಂಧವರ ಈ ಮಹಾಸಂಹಾರ ಕಾರ್ಯವನ್ನು ಮಾಡಿರುವ ನಾನು ಧೃತರಾಷ್ಟ್ರನಿಗಾಗಿಯೇ ಜೀವಿಸಿದ್ದೇನೆ. ಅಲಸನಾಗಿರದೇ ನಿತ್ಯವೂ ಇವನನ್ನು ಶುಶ್ರೂಷೆಮಾಡಿಕೊಂಡಿರುವುದೇ ನನ್ನ ಮುಖ್ಯಕರ್ತವ್ಯವಾಗಿರುತ್ತದೆ. ನಾನು ಸುಹೃದರಾದ ತಮ್ಮೆಲ್ಲರ ಅನುಗ್ರಹಕ್ಕೆ ಪಾತ್ರನಾಗಿರುವುದೇ ಆದರೆ ಧೃತರಾಷ್ಟ್ರನ ವಿಷಯದಲ್ಲಿ ಹಿಂದೆ ನೀವು ಎಷ್ಟು ಆದರ-ಗೌರವಗಳಿಂದ ನಡೆದುಕೊಳ್ಳುತ್ತಿದ್ದಿರೋ ಈಗಲೂ ಅಷ್ಟೇ ಗೌರವ ಮತ್ತು ಆದರಗಳಿಂದ ನಡೆದುಕೊಳ್ಳಬೇಕಾಗಿದೆ.

**ಏಷ ನಾಥೋ ಹಿ ಜಗತೋ ಭವತಾಂ ಚ ಮಯಾ ಸಹ ।**
**ಅಸ್ಯೈವ ಪೃಥಿವೀ ಕೃತ್ಸ್ನಾ ಪಾಣ್ಡವಾಃ ಸರ್ವ ಏವ ಚ ।**
**ಏತನ್ಮನಸಿ ಕರ್ತವ್ಯಂ ಭವದ್ಭಿರ್ವಚನಂ ಮಮ ॥೭॥**

ನನಗೂ, ನಿಮಗೂ ಮತ್ತು ಈ ಜಗತ್ತಿಗೂ ಧೃತರಾಷ್ಟ್ರನೇ ಒಡೆಯನು. ಈ ಅಖಂಡವಾದ ಭೂಮಂಡಲವೂ ಇವನದೇ ಆಗಿದೆ. ಎಲ್ಲ ಪಾಂಡವರೂ ಇವನ ಆಜ್ಞಾಧಾರಕರೇ ಆಗಿದ್ದಾರೆ. ಈ ನನ್ನ ಮಾತನ್ನು ನೀವೆಲ್ಲರೂ ಮನಸ್ಸಿನಲ್ಲಿಟ್ಟುಕೊಳ್ಳುವುದು ನಿಮ್ಮ ಮುಖ್ಯವಾದ ಕರ್ತವ್ಯವಾಗಿದೆ."

ಜನಮೇಜಯ! ಯುಧಿಷ್ಠಿರನು ಪ್ರಕೃತಿವರ್ಗದವರೆಲ್ಲರಿಗೂ ಹೀಗೆ ಹೇಳಿ ಇಷ್ಟಬಂದಂತೆ ಹೋಗಬಹುದೆಂದು ಅವರೆಲ್ಲರಿಗೂ ಅನುಮತಿಯನ್ನಿತ್ತು, ಪೌರರನ್ನೂ ದೇಶ-ದೇಶಗಳಿಂದ ಬಂದಿದ್ದ ಜನರನ್ನೂ ಆದರದಿಂದ ಬೀಳ್ಕೊಟ್ಟು, ಭೀಮಸೇನನನ್ನು ಯುವರಾಜನನ್ನಾಗಿ ನಿಯಮಿಸಿಕೊಂಡನು.

ವಿದುರನ ವಿಷಯದಲ್ಲಿ ಅತ್ಯಂತಪ್ರೀತಿಯುಕ್ತನಾಗಿದ್ದ ಯುಧಿಷ್ಠಿರನು ರಾಜಕಾರ್ಯಗಳಲ್ಲಿ ಗುಪ್ತವಾಗಿ ಸಲಹೆಗಳನ್ನು ನೀಡಲು, ಉಚಿತವಾದ ನಿರ್ಧಾರವನ್ನು ತೆಗೆದುಕೊಳ್ಳಲು, ಸಂಧಿ-ವಿಗ್ರಹ-ಯಾನ-ಆಸನ-ದ್ವೈಧೀಭಾವ ಮತ್ತು ಸಮಾಶ್ರಯಗಳೆಂಬ ದೇಶಕ್ಕೆ ಸಂಬಂಧಿಸಿದ ಆರು ಗುಣಗಳ ವಿಷಯವಾಗಿ ಸಮಾಲೋಚಿಸಲು–ಬುದ್ಧಿಸಂಪನ್ನನಾದ ವಿದುರನನ್ನು ನಿಯಮಿಸಿಕೊಂಡನು.

ದೇಶದ ಅಭಿವೃದ್ಧಿಕಾರ್ಯಗಳಲ್ಲಿ ಯಾವ-ಯಾವ ಕಾರ್ಯಗಳು ನಡೆದಿವೆ? ಯಾವ ಕಾರ್ಯಗಳು ನಡೆದಿಲ್ಲ? ಏಕೆ ನಡೆದಿಲ್ಲ?–ಎಂಬುದನ್ನು ತಿಳಿದುಕೊಳ್ಳಲು ಮತ್ತು ದೇಶದ ಆಯ-ವ್ಯಯಗಳನ್ನು ಸಮಗ್ರವಾಗಿ ಚಿಂತಿಸಿ ಸಲಹೆನೀಡಲು, ವೃದ್ಧನಾದ, ಸರ್ವಗುಣಸಂಪನ್ನನಾದ ಸಂಜಯನನ್ನು ನಿಯಮಿಸಿಕೊಂಡನು.

ಚತುರಂಗಬಲದ ಸಂಖ್ಯೆಯು ಎಷ್ಟಿರುವುದೆಂಬುದನ್ನು ತಿಳಿಯುವುದಕ್ಕೂ, ಎಷ್ಟಿರಬೇಕೆಂದು ಸಲಹೆನೀಡುವುದಕ್ಕೂ, ಭತ್ಯ-ವೇತನಗಳ ವಿತರಣೆಗೂ ಮತ್ತು ಕಾರ್ಮಿಕರು ಮಾಡುವ ಕೆಲಸಗಳನ್ನು ಅಧಿಕಾರಿಗಳ ಮೂಲಕವಾಗಿ ಅನುದಿನವೂ ಪರಿಶೀಲಿಸುವುದಕ್ಕೂ ಯುಧಿಷ್ಠಿರನು ನಕುಲನನ್ನು ನಿಯಮಿಸಿಕೊಂಡನು.

ಸಮಯಬಂದಾಗ ಶತ್ರುಗಳ ದೇಶಗಳನ್ನು ಆಕ್ರಮಿಸುವುದಕ್ಕೂ, ಪ್ರಜೆಗಳಿಗೆ ಉಪಟಳವನ್ನು ಕೊಡುವ ದುಷ್ಟರನ್ನು ನಿಗ್ರಹಿಸುವುದಕ್ಕೂ ಅರ್ಜುನನನ್ನು ನಿಯಮಿಸಿಕೊಂಡನು.

ಬ್ರಾಹ್ಮಣರಿಗೂ ಮತ್ತು ದೇವತೆಗಳಿಗೂ ಸಂಬಂಧಿಸಿದ ಕಾರ್ಯಗಳನ್ನೂ ಇತರ ಧಾರ್ಮಿಕಕಾರ್ಯಗಳನ್ನೂ ಅನುದಿನವೂ ವ್ಯವಸ್ಥೆಗೊಳಿಸಲು ಯುಧಿಷ್ಠಿರನು ಪುರೋಹಿತರಲ್ಲಿ ಶ್ರೇಷ್ಠರಾದ ಧೌಮ್ಯರನ್ನು ಪ್ರಾರ್ಥಿಸಿಕೊಂಡನು.

ಯಾವಾಗಲೂ ತನ್ನ ಸಮೀಪದಲ್ಲಿಯೇ ಇರುವ ಮತ್ತು ಯಾವುದೇ ಸ್ಥಿತಿಯಲ್ಲಿಯೂ ರಾಜನನ್ನು (ತನ್ನನ್ನು) ಸಂರಕ್ಷಿಸುವ ಕಾರ್ಯವನ್ನು ಸಹದೇವನಿಗೆ ಒಪ್ಪಿಸಿದನು. ಮುಖ್ಯವಾದ ಖಾತೆಗಳನ್ನು ಹೀಗೆ ಹಂಚಿಕೊಟ್ಟನಂತರ ಪ್ರಸನ್ನಚಿತ್ತನಾದ ಯುಧಿಷ್ಠಿರನು ಯಾರು-ಯಾರು ಯಾವ-

ಯಾವ ಕಾರ್ಯಮಾಡಲು ಸಮರ್ಥರೆಂದೂ ಯೋಗ್ಯರೆಂದೂ ಭಾವಿಸಿದನೋ–ಅವರವರಿಗೆ ಆಯಾ ಕಾರ್ಯಗಳನ್ನು ವಹಿಸಿಕೊಟ್ಟನು. ಶತ್ರುವೀರ ಹಂತಕನಾದ, ಧರ್ಮಾತ್ಮನಾದ, ಧರ್ಮವತ್ಸಲನಾದ ಯುಧಿಷ್ಠಿರನು ವಿದುರ-ಸಂಜಯರನ್ನೂ, ಮಹಾಮತಿಯಾದ ಯುಯುತ್ಸುವನ್ನೂ ಕುರಿತು ಹೇಳಿದನು :

**ಉತ್ಥಾಯೋತ್ಥಾಯ ತತ್ಕಾರ್ಯಮಸ್ಯ ರಾಜ್ಞಃ ಪಿತುರ್ಮಮ ।**
**ಸರ್ವಂ ಭವದ್ಭಿಃ ಕರ್ತವ್ಯಮಪ್ರಮತ್ತೈರ್ಯಥಾತಥಮ್ ॥೧೮॥**

"ನೀವೆಲ್ಲರೂ ಬೆಳಗಾದೊಡನೆಯೇ ಜಾಗರೂಕರಾಗಿದ್ದುಕೊಂಡು ಈ ನಮ್ಮ ತಂದೆಯಾದ ಧೃತರಾಷ್ಟ್ರನಿಗೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ಯಥೋಚಿತವಾಗಿ ಮಾಡಿಕೊಡಬೇಕಾದುದು ನಿಮ್ಮೆಲ್ಲರ ಮುಖ್ಯಕರ್ತವ್ಯವಾಗಿರುತ್ತದೆ.

ಪಟ್ಟಣಿಗರಿಗೆ ಮತ್ತು ಗ್ರಾಮಾಂತರನಿವಾಸಿಗಳಿಗೆ ಯಾವ ಕಾರ್ಯಗಳನ್ನು ಮಾಡಿಕೊಡಬೇಕಾಗಿರುವುದೋ–ಆ ಎಲ್ಲ ಕಾರ್ಯಗಳನ್ನೂ ರಾಜನ ಅಪ್ಪಣೆಯನ್ನು ಪಡೆದುಕೊಂಡು ಪ್ರತ್ಯೇಕ-ಪ್ರತ್ಯೇಕವಾಗಿ ಪೂರ್ಣಮಾಡಿಕೊಡುವುದೂ ನಿಮಗೇ ಸೇರಿದ್ದಾಗಿರುತ್ತದೆ."

ಳ೧ನೆಯ ಅಧ್ಯಾಯವು ಮುಗಿಯಿತು.

ಳ೨ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರ-ಯುಧಿಷ್ಠಿರರು ಯುದ್ಧದಲ್ಲಿ ಅವಸಾನಹೊಂದಿದವರಿಗೆ ಶ್ರಾದ್ಧಕ್ರಿಯೆಗಳನ್ನು ಮಾಡಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ರಾಜ್ಯಾಡಳಿತದ ವ್ಯವಸ್ಥೆಯನ್ನು ಮಾಡಿದನಂತರ ಉದಾರಮತಿಯಾದ ಯುಧಿಷ್ಠಿರನು ಯುದ್ಧದಲ್ಲಿ ಹತರಾದ ಜ್ಞಾತಿಗಳೆಲ್ಲರಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಶ್ರಾದ್ಧಗಳನ್ನು ಮಾಡಿಸಿದನು. ಮಕ್ಕಳಿಗೆ ದೇಹಾವಸಾನಾನಂತರದಲ್ಲಿ ಮಾಡಬೇಕಾದ ಆ ಶ್ರಾದ್ಧಕರ್ಮಗಳಲ್ಲಿ ಮಹಾಯಶೋವಂತನಾದ ಧೃತರಾಷ್ಟ್ರನು ಷಡ್ರಸೋಪೇತವಾದ ಅನ್ನವನ್ನೂ,

ಗೋವುಗಳನ್ನೂ, ಧನಗಳನ್ನೂ, ಚಿತ್ರ-ವಿಚಿತ್ರವಾದ ಮತ್ತು ಬಹುಮೂಲ್ಯವಾದ ರತ್ನಗಳನ್ನೂ ದಾನವಾಗಿ ಕೊಟ್ಟನು. ಯುಧಿಷ್ಠಿರನು ದ್ರೌಪದಿಯ ಸಮೇತನಾಗಿ ದ್ರೋಣರಿಗೂ, ಮಹಾತ್ಮನಾದ ಕರ್ಣನಿಗೂ, ಧೃಷ್ಟದ್ಯುಮ್ನನಿಗೂ, ಅಭಿಮನ್ಯುವಿಗೂ, ಹಿಡಿಂಬೆಯ ಮಗನಾದ ಘಟೋತ್ಕಚನಿಗೂ, ವಿರಾಟನೇ ಮೊದಲಾದ ಸುಹೃದರಿಗೂ, ಉಪಕಾರಿಗಳಿಗೂ, ದ್ರುಪದನಿಗೂ, ದ್ರೌಪದಿಯ ಐವರು ಮಕ್ಕಳಿಗೂ ಶ್ರಾದ್ಧಸಂಬಂಧವಾದ ಜಲ-ತಿಲ ತರ್ಪಣಾದಿಗಳನ್ನೂ ದಾನಗಳನ್ನೂ ಕೊಟ್ಟನು. ಮೃತರಾದವರಲ್ಲಿ ಒಬ್ಬೊಬ್ಬರನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಉದ್ದೇಶಿಸಿ ಸಾವಿರಾರು ಬ್ರಾಹ್ಮಣರನ್ನು ಧನಗಳಿಂದಲೂ, ರತ್ನಗಳಿಂದಲೂ, ಗೋವುಗಳಿಂದಲೂ, ವಸ್ತ್ರಗಳಿಂದಲೂ ಯುಧಿಷ್ಠಿರನು ಸಂತೃಪ್ತಿಗೊಳಿಸಿದನು. ಇವರಿಗೆ ಮಾತ್ರವಲ್ಲದೇ ಯುದ್ಧದಲ್ಲಿ ಮೃತರಾಗಿದ್ದ ಪುತ್ರ-ಮಿತ್ರರಾರೂ ಇಲ್ಲದಿದ್ದ ಇತರ ಅನೇಕರಾಜರನ್ನೂ ಪ್ರತ್ಯೇಕ-ಪ್ರತ್ಯೇಕವಾಗಿ ಉದ್ದೇಶಿಸಿ ಅವರೆಲ್ಲರಿಗೂ ಶ್ರಾದ್ಧವನ್ನು ಮಾಡಿದನು. ಇಷ್ಟು ಮಾತ್ರವಲ್ಲದೇ ಮೃತರಾದವರೆಲ್ಲರಿಗೂ ಸದ್ಗತಿಯನ್ನು ಹೊಂದಿಸುವ ಸಲುವಾಗಿ ಅನೇಕ ಧರ್ಮಶಾಲೆಗಳನ್ನೂ, ಅರವಟ್ಟಿಗೆಗಳನ್ನೂ, ವಿಧ-ವಿಧವಾದ ತಟಾಕಗಳನ್ನೂ ನಿರ್ಮಿಸಿದನು. ಹೀಗೆ ಯುಧಿಷ್ಠಿರನು ತನ್ನ ಸುಹೃದರೆಲ್ಲರಿಗೂ ಶ್ರಾದ್ಧಕರ್ಮವನ್ನು ಮಾಡಿಸಿದನು. ಈ ರೀತಿಯಲ್ಲಿ ಯುಧಿಷ್ಠಿರನು ಜ್ಞಾತಿಗಳ ಋಣದಿಂದ ಮುಕ್ತನಾದನು. ಯಾರ ನಿಂದೆಗಾಗಲೀ ಆಕ್ಷೇಪಕ್ಕಾಗಲೀ ಅವಕಾಶವೇ ಇಲ್ಲದಂತಾಯಿತು. ಯುಧಿಷ್ಠಿರನು ಪ್ರಜೆಗಳನ್ನೂ ಧರ್ಮದಿಂದ ಪಾಲನೆಮಾಡುತ್ತಾ ಮಾಡಬೇಕಾದುದನ್ನು ಮಾಡಿ ಕೃತಾರ್ಥನಾದನು. ಧರ್ಮಜನು ಧೃತರಾಷ್ಟ್ರನನ್ನೂ, ಗಾಂಧಾರಿಯನ್ನೂ, ವಿದುರನನ್ನೂ ಮತ್ತು ಮಾನ್ಯರಾದ ಇತರ ಅನೇಕಕೌರವರನ್ನೂ ಹಿಂದಿನಂತೆಯೇ ಪ್ರೀತ್ಯಾದರಗಳಿಂದ ಕಾಣುತ್ತಿದ್ದನು. ಸೇವಕವರ್ಗದವರನ್ನೂ ಆದರಿಸಿ ಸಮಯೋಚಿತವಾಗಿ ಸತ್ಕರಿಸುತ್ತಿದ್ದನು. ಯುದ್ಧದಲ್ಲಿ ವೀರರಾದ ಪತಿಗಳನ್ನು ಕಳೆದುಕೊಂಡ ಯಾವ ಸ್ತ್ರೀಯರಿದ್ದರೋ, ಮಕ್ಕಳನ್ನು ಕಳೆದುಕೊಂಡು ಯಾವ ಸ್ತ್ರೀಯರಿದ್ದರೋ– ಅವರೆಲ್ಲರನ್ನೂ ದಯಾಮಯನಾದ ಯುಧಿಷ್ಠಿರನು ಆದರದಿಂದ ಸತ್ಕರಿಸುತ್ತಾ ಅವರ ರಕ್ಷಣೆ-ಪೋಷಣೆಗಳನ್ನು ಮಾಡುತ್ತಿದ್ದನು.

**ದೀನಾನ್ಧಕೃಪಣಾನಾಂ ಚ ಗೃಹಾಚ್ಛಾದನಭೋಜನೈಃ ।**
**ಆನೃಶಂಸ್ಯಪರೋ ರಾಜಾ ಚಕಾರಾನುಗ್ರಹಂ ಪ್ರಭುಃ ॥೧೧॥**

ದಯಾಪರನಾದ, ಪ್ರಭುವಾದ ಯುಧಿಷ್ಠಿರನು ದೀನರಿಗೂ, ಕುರುಡರಿಗೂ, ದರಿದ್ರರಿಗೂ ವಾಸಕ್ಕೆ ಮನೆಗಳನ್ನು ಕಟ್ಟಿಸಿ, ಅಶನ-ವಸ್ತ್ರಗಳನ್ನು ಕೊಟ್ಟು ಕೃಪೆದೋರಿದನು. ಅಖಂಡಭೂಮಂಡಲವನ್ನೂ ಜಯಿಸಿ ವೈರಿಗಳಿಗೂ ಶ್ರಾದ್ಧಕರ್ಮವನ್ನು ಮಾಡಿಸಿದುದರ ಮೂಲಕ ಜ್ಞಾತಿಋಣದಿಂದಲೂ ವಿಮುಕ್ತನಾದ, ಶತ್ರುರಹಿತನಾದ, ಯುಧಿಷ್ಠಿರನು ಸುಖಿಯಾಗಿ ಆನಂದದಿಂದ ವಿಹರಿಸತೊಡಗಿದನು."

ಳ೨ನೆಯ ಅಧ್ಯಾಯವು ಮುಗಿಯಿತು.

ಳ೩ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಶ್ರೀಕೃಷ್ಣನನ್ನು ಸ್ತುತಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

"ಜನಮೇಜಯ! ಮಹಾಪ್ರಾಜ್ಞನಾದ ಯುಧಿಷ್ಠಿರನು ರಾಜ್ಯವನ್ನು ಯುದ್ಧದ ಮೂಲಕವಾಗಿ ಪಡೆದುಕೊಂಡು ರಾಜ್ಯಾಭಿಷಿಕ್ತನಾಗಿ, ಪವಿತ್ರವಾದ ಭಾವನೆಯಿಂದ ಕೂಡಿದವನಾಗಿ, ದಶಾರ್ಹಕುಲತಿಲಕನಾದ ಶ್ರೀಕೃಷ್ಣನ ಬಳಿಗೆ ಬಂದು ಬದ್ಧಾಂಜಲಿಯಾಗಿ ಈ ಮಾತನ್ನು ಹೇಳಿದನು :

"ಯದುಶಾರ್ದೂಲನೇ! ಕೃಷ್ಣ! ನಿನ್ನ ಅನುಗ್ರಹದಿಂದಲೂ, ನೀತಿಯಿಂದಲೂ, ಬಲದಿಂದಲೂ, ಬುದ್ಧಿಯಿಂದಲೂ, ಪರಾಕ್ರಮದಿಂದಲೂ ತಾತ-ಮುತ್ತಾತಂದಿರಿಗೆ ಸಂಬಂಧಿಸಿದ ಈ ರಾಜ್ಯವು ಪುನಃ ನನಗೆ ಲಭಿಸಿತು.

**ನಮಸ್ತೇ ಪುಣ್ಡರೀಕಾಕ್ಷ ಪುನಃ ಪುನರರಿಂದಮ ।**
**ತ್ವಾಮೇಕಮಾಹುಃ ಪುರುಷಂ ತ್ವಾಮಾಹುಃ ಸಾತ್ವತಾಂ ಪತಿಮ್ ।**
**ನಾಮಭಿಸ್ತ್ವಾಂ ಬಹುವಿಧೈಃ ಸ್ತುವನ್ತಿ ಪ್ರಯತಾ ದ್ವಿಜಾಃ ॥೪॥**

ಪುಂಡರೀಕಾಕ್ಷನೇ! ಅರಿಂದಮನೇ! ನಿನಗೆ ಪುನಃ ಪುನಃ ನಮಸ್ಕಾರವಿರಲಿ. ಬಾರಿ-ಬಾರಿಗೂ ನಾನು ನಿನಗೆ ನಮಸ್ಕಾರಮಾಡುತ್ತಲೇ ಇರುತ್ತೇನೆ.

ನಿನ್ನನ್ನು ಅದ್ವಿತೀಯನೆಂದೂ–ಪರಮಪುರುಷನೆಂದೂ (ಎಲ್ಲರ ಶರೀರಗಳಲ್ಲಿಯೂ ಇರತಕ್ಕವನೆಂದೂ) ಹೇಳುತ್ತಾರೆ. ಕೆಲವರು ನಿನ್ನನ್ನು ಸಾತ್ವತರಿಗೆ ನಾಯಕನೆಂದೂ (ಉಪಾಸಕರ ಪಾಲಕನೆಂದೂ) ಹೇಳುತ್ತಾರೆ. ಪ್ರಯತ್ನಶೀಲರಾದ (ಪರಿಶುದ್ಧರಾದ) ಬ್ರಾಹ್ಮಣರು ನಿನ್ನನ್ನು ಬಹುವಿಧವಾದ ಹೆಸರುಗಳಿಂದ ಸ್ತೋತ್ರಮಾಡುತ್ತಾರೆ.

**ವಿಶ್ವಕರ್ಮನ್ನಮಸ್ತೇಽಸ್ತು ವಿಶ್ವಾತ್ಮನ್ವಿಶ್ವಸಮ್ಭವ ।**
**ವಿಷ್ಣೋ ಜಿಷ್ಣೋ ಹರೇ ಕೃಷ್ಣ ವೈಕುಣ್ಠ ಪುರುಷೋತ್ತಮ ॥೫॥**

ಈ ಅಖಂಡಬ್ರಹ್ಮಾಂಡವೂ ಲೀಲಾರೂಪವಾದ ನಿನ್ನ ಸೃಷ್ಟಿಯೇ ಆಗಿದೆ. ಅಖಂಡಬ್ರಹ್ಮಾಂಡವನ್ನೂ ನೀನೇ ಸೃಷ್ಟಿಸಿರುವೆ. ಆದುದರಿಂದಲೇ ನೀನು ವಿಶ್ವಕರ್ಮನಾಗಿರುವೆ. ಅಖಂಡವಿಶ್ವವೇ ನಿನ್ನ ಶರೀರದಲ್ಲಿ ಅಡಗಿದೆ. ಅಥವಾ ಅಖಂಡವಿಶ್ವಕ್ಕೆ ನೀನೇ ಆತ್ಮಸ್ವರೂಪನಾಗಿರುವೆ. ಅದರಿಂದ ನೀನು ವಿಶ್ವಾತ್ಮನಾಗಿರುವೆ. ನಿನ್ನಿಂದಲೇ ಈ ಜಗತ್ತು ಹುಟ್ಟಿದೆ. ಆದುದರಿಂದ ನೀನೇ ವಿಶ್ವಸಂಭವನೂ ಆಗಿರುವೆ. ನೀನು ಸರ್ವವ್ಯಾಪಕನಾಗಿರುವುದರಿಂದ ವಿಷ್ಣುವಾಗಿರುವೆ. ಸರ್ವತ್ರ ನಿನಗೆ ವಿಜಯವೇ ಲಭಿಸುವುದರಿಂದ ಜಿಷ್ಣುವೂ ಆಗಿರುವೆ. ಭಕ್ತರ ದುಃಖ ಮತ್ತು ಪಾಪಗಳನ್ನು ಹರಣಮಾಡುವುದರಿಂದ ಅಥವಾ ಭಕ್ತರ ಮನಸ್ಸನ್ನು ಅಪಹರಿಸುವುದರಿಂದ ಹರಿಯಾಗಿರುವೆ. ಎಲ್ಲರನ್ನೂ ನೀನು ನಿನ್ನ ಕಡೆಗೇ ಸೆಳೆದುಕೊಳ್ಳುವುದರಿಂದ ಕೃಷ್ಣನಾಗಿರುವೆ. ವಿಕುಂಠವೆಂಬ ಧಾಮಕ್ಕೆ ಅಧಿಪತಿಯಾಗಿರುವುದರಿಂದ ವೈಕುಂಠನಾಗಿರುವೆ. ಕ್ಷರ ಮತ್ತು ಅಕ್ಷರಗಳಿಗೂ ಶ್ರೇಷ್ಠನಾದುದರಿಂದ ನಿನ್ನನ್ನು ಪುರುಷೋತ್ತಮನೆಂದೂ ಕರೆಯುತ್ತಾರೆ. ಇಂತಹ ನಿನಗೆ ಪದೇ ಪದೇ ನಮಸ್ಕಾರವಿರಲಿ.

*** ಅದಿತ್ಯಾಃ ಸಪ್ತಧಾ ತ್ವಂ ತು ಪುರಾಣೋ ಗರ್ಭತಾಂ ಗತಃ ।**
**ಪೃಶ್ನಿಗರ್ಭಸ್ತ್ವಮೇವೈಕಸ್ತ್ರಿಯುಗಂ ತ್ವಾಂ ವದನ್ತ್ಯಪಿ ॥೬॥**

---

* ಅದಿತ್ಯಾಃ ಸಪ್ತಧಾ ತ್ವಂ ತು–ಎಂಬುದಕ್ಕೆ ವ್ಯಾಖ್ಯಾನಕಾರರು ಅದಿತಿಯಲ್ಲಿ ಆದಿತ್ಯ ಮತ್ತು ವಾಮನ ಎಂಬ ಹೆಸರುಗಳಿಂದ ಎರಡೇ ಬಾರಿ ಗರ್ಭಸ್ಥನಾಗಿದ್ದನೆಂದೂ ಅದಿತಿಯ ರೂಪಾಂತರಗಳನ್ನು ಹೊಂದಿದ್ದ ಪೃಶ್ನಿಯೇ ಮೊದಲಾದವರಲ್ಲಿ ಭಿನ್ನ ರೂಪಗಳಲ್ಲಿ ಪರಶುರಾಮ, ರಾಮ, ಬಲರಾಮ ಮತ್ತು ಕೃಷ್ಣ ಎಂಬುವರು ಹುಟ್ಟಿದ್ದರೂ

ಪುರಾಣಪುರುಷನಾದ ನೀನು ಏಳು ಬಾರಿ ಅದಿತಿಯ ಗರ್ಭದಲ್ಲಿ ಅವತಾರಮಾಡಿರುವೆ. ( ಏಳು ಬಾರಿ ಅದಿತಿಯಿಂದ ಜನ್ಮವನ್ನು ತಾಳಿರುವೆ.) ಪೃಶ್ನಿಗರ್ಭನೆಂದೂ ದೇವಕೀಗರ್ಭಸಂಭೂತನೆಂದೂ ಹೇಳಿಸಿಕೊಳ್ಳುವವನು ನೀನೊಬ್ಬನೇ ಆಗಿರುವೆ. ಮೂರು ಯುಗಗಳಲ್ಲಿಯೂ ನೀನು ಅವತಾರ ಮಾಡಿರುವೆಯಾದುದರಿಂದ ನಿನ್ನನ್ನು ತ್ರಿಯುಗನೆಂದೂ ಕರೆಯುತ್ತಾರೆ.

**ಶುಚಿಶ್ರವಾ ಹೃಷೀಕೇಶೋ ಘೃತಾರ್ಚಿರ್ಹಂಸ ಉಚ್ಯತೇ ।**
**ತ್ರಿಚಕ್ಷುಃ ಶಮ್ಭುರೇಕಸ್ತ್ವಂ ವಿಭುರ್ದಾಮೋದರೋऽಪಿ ಚ ॥೭॥**

ನಿನ್ನ ಕೀರ್ತಿಯು ಪರಮಪವಿತ್ರವಾಗಿದೆ. ನೀನು ಎಲ್ಲ ಇಂದ್ರಿಯ ಗಳಿಗೂ ಪ್ರೇರಕನಾಗಿರುವೆ. ಘೃತವೇ ಜ್ವಾಲೆಯಾಗುಳ್ಳ ಯಜ್ಞೇಶ್ವರನೂ ನೀನೇ ಆಗಿರುವೆ. ನಿನ್ನನ್ನು ಹಂಸನೆಂದೂ ಕರೆಯುತ್ತಾರೆ. ಮುಕ್ಕಣ್ಣನಾದ ಈಶ್ವರನೂ ಮತ್ತು ನೀನೂ ಅಭಿನ್ನರೇ ಆಗಿರುವಿರಿ. ( ಮುಕ್ಕಣ್ಣನಾದ ಶಂಭುವೂ ನೀನೇ ಆಗಿರುವೆ. ) ವಿಭುವೂ ( ಸರ್ವತ್ರವ್ಯಾಪಕನೂ ) ಆಗಿರುವೆ. ನಿನ್ನ ತುಂಟತನವನ್ನು ತಡೆಯಲಾರದೆ ಯಶೋದೆಯು ನಿನ್ನನ್ನು ಹಗ್ಗದಿಂದ ಹೊಟ್ಟೆಯಲ್ಲಿ ಕಟ್ಟಿ ಆ ಹಗ್ಗವನ್ನು ಒರಳುಕಲ್ಲಿಗೆ ಕಟ್ಟಿದುದರಿಂದ ನೀನು ದಾಮೋದರನಾದೆ.

**ವರಾಹೋऽಗ್ನಿರ್ಬೃಹದ್ಭಾನುರ್ವೃಷಭಸ್ತಾರ್ಕ್ಷ್ಯಲಕ್ಷಣಃ ।**
**ಅನೀಕಸಾಹಃ ಪುರುಷಃ ಶಿಪಿವಿಷ್ಟ ಉರುಕ್ರಮಃ ॥೮॥**

---

ನೀನು ಒಬ್ಬನೇ ಆಗಿರುವೆ. **ಸಪ್ತಧಾ ವಿಷ್ಣ್ವಾಖ್ಯ ಆದಿತ್ಯೋ ವಾಮನಶ್ಚೇತಿ ದ್ವೇಧಾ ಅದಿತ್ಯಾಮೇವ ಜನ್ಮ । ತತಃ ಅದಿತೇಃ ರೂಪಾನ್ತರೇಷು ಪೃಶ್ನಿಪ್ರಭೃತಿಷು ಕ್ರಮಾತ್ಪೃಶ್ನಿಗರ್ಭ ಪರಶುರಾಮಃ ದಾಶರಥೀರಾಮಃ ಯಾದವೌ ರಾಮಕೃಷ್ಣೌ ಚೇತಿ ಸರ್ವೇಷು ಗರ್ಭೇಷು ಏಕ ಏವ ತ್ವಂ ನ ತು ಪ್ರತಿಗರ್ಭಂ ಭಿನ್ನಃ**–ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದರೆ ಅವರು ಕೊಟ್ಟಿರುವ ಹೆಸರುಗಳ ಸಂಖ್ಯೆ ಆರು ಮಾತ್ರವಾಗುತ್ತದೆ. ಏಳಾಗುವುದಿಲ್ಲ. ಆದಿತ್ಯ, ವಾಮನ, ಪರಶುರಾಮ, ರಾಮ, ಬಲರಾಮ ಮತ್ತು ಶ್ರೀಕೃಷ್ಣ. ಆದರೆ ಶ್ಲೋಕದಲ್ಲಿ **ಸಪ್ತಧಾ ಗರ್ಭತಾಂ ಗತಃ** –ಏಳು ಬಾರಿ ಅದಿತಿಯ ಗರ್ಭಸ್ಥನಾಗಿದ್ದೆ ಎಂದು ಸ್ಪಷ್ಟವಾಗಿಯೇ ಹೇಳಿದೆ. ಪೃಶ್ನಿಗರ್ಭಃ ಎಂದರೆ ಶ್ರೀಕೃಷ್ಣ. ಪೃಶ್ನಿ ಎಂಬುವಳು ಶ್ರೀಕೃಷ್ಣನ ತಂದೆಯಾದ ವಸುದೇವನ ಪೂರ್ವಜನ್ಮದ ಪತ್ನೀ. ವಸುದೇವನು ತನ್ನ ಹಿಂದಿನ ಜನ್ಮದಲ್ಲಿ 'ಸುತಪ' ಎಂಬ

ವರಾಹ, ಅಗ್ನಿ, ಬೃಹದ್ಭಾನು ( ಸೂರ್ಯ ), ವೃಷಭ ( ಧರ್ಮ ), ಗರುಡಧ್ವಜ, ಅನೀಕಸಾಹ ( ಶತ್ರುಸೈನ್ಯದ ವೇಗವನ್ನು ಸಹಿಸಿಕೊಳ್ಳತಕ್ಕವನು), ಪುರುಷ ( ಅಂತರ್ಯಾಮಿಯಾದ ಪರಮಾತ್ಮ ), ಶಿಪಿವಿಷ್ಟ (ಎಲ್ಲರ ಶರೀರದಲ್ಲಿಯೂ ಆತ್ಮರೂಪದಿಂದ ಪ್ರವೇಶಿಸಿರತಕ್ಕವನು ) ಮತ್ತು ಉರುಕ್ರಮ ( ವಾಮನ )–ಈ ಎಲ್ಲವೂ ನಿನ್ನ ನಾಮಧೇಯಗಳೂ ಮತ್ತು ವಿಧ-ವಿಧವಾದ ರೂಪಗಳೂ ಆಗಿವೆ.

**ವರಿಷ್ಠ ಉಗ್ರಸೇನಾನೀಃ ಸತ್ಯೋ ವಾಜಸನಿರ್ಗುಹಃ ।**
**ಅಚ್ಯುತಶ್ಚ್ಯಾವನೋಽರೀಣಾಂ ಸಂಸ್ಕೃತೋ ವಿಕೃತಿರ್ವೃಷಃ ॥೯॥**

ನೀನು ಎಲ್ಲರಿಗಿಂತಲೂ ಶ್ರೇಷ್ಠನಾಗಿರುವೆ. ಭಯಂಕರನಾದ ಸೇನಾಪತಿಯಾಗಿರುವೆ. ಸತ್ಯಸ್ವರೂಪನಾಗಿರುವೆ. ಅನ್ನದಾತನಾಗಿರುವೆ. ಕಾರ್ತಿಕೇಯಸ್ವಾಮಿಯೂ ನೀನೇ ಆಗಿರುವೆ. ನೀನು ಯಾವಾಗಲೂ ಯುದ್ಧದಲ್ಲಿ ವಿಚಲಿತನಾಗತಕ್ಕವನಲ್ಲ. ಆದರೆ ಶತ್ರುಗಳನ್ನು ವಿಚಲಿತರನ್ನಾಗಿ ಮಾಡುವೆ. ಸಂಸ್ಕಾರಸಂಪನ್ನನಾದ ಬ್ರಾಹ್ಮಣನೂ ನೀನೇ ಆಗಿರುವೆ. ಸಂಸ್ಕಾರಶೂನ್ಯವಾದ ವರ್ಣಸಂಕರವೂ ನಿನ್ನ ಒಂದು ಸ್ವರೂಪವೇ ಆಗಿದೆ. ಸಕಲಕಾಮನೆಗಳನ್ನೂ ಸುರಿಸುವ ವೃಷನೂ (ಧರ್ಮನೂ) ನೀನೇ ಆಗಿರುವೆ.

**ಕೃಷ್ಣಧರ್ಮಸ್ತ್ವಮೇವಾದಿರ್ವೃಷದರ್ಭೋ ವೃಷಾಕಪಿಃ ।**
**ಸಿನ್ಧುರ್ವಿಧರ್ಮಸ್ತ್ರಿಕಕುಸ್ತ್ರಿಧಾಮಾ ತ್ರಿದಿವಾಚ್ಚ್ಯುತಃ ॥೧೦॥**

---

ಹೆಸರಿನ ಪ್ರಜಾಪತಿಯಾಗಿದ್ದನು. ಅವನ ಪತ್ನಿಯೇ ಪೃಶ್ನಿಯಾಗಿದ್ದಳು. ಇಬ್ಬರೂ ಪ್ರಜಾಸೃಷ್ಟಿಗಾಗಿ ಬ್ರಹ್ಮನಿಂದ ನಿಯುಕ್ತರಾಗಿ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದರು. ಪರಮಾತ್ಮನು ಪ್ರತ್ಯಕ್ಷನಾಗಲಾಗಿ ನಿನ್ನಂತಹ ಪುತ್ರನೊಬ್ಬನು ಬೇಕೆಂದು ಬೇಡಿಕೊಂಡರು. ಪರಮಾತ್ಮನು ಹಾಗೆಯೇ ಆಗಲೆಂದನು. ಪುನರ್ಜನ್ಮದಲ್ಲಿ ಪೃಶ್ನಿ-ಸುತಪರೇ ದೇವಕೀ-ವಸುದೇವರಾಗಿ ಹುಟ್ಟಿದರು. ಪರಮಾತ್ಮನು ಇತ್ತಿದ್ದ ವರದಂತೆ ಶ್ರೀಕೃಷ್ಣನಾಗಿ ಹುಟ್ಟಿದನು. **ತ್ರಿಯುಗಂ** ಎಂಬುದಕ್ಕೆ ವ್ಯಾಖ್ಯಾನಕಾರರು ಮೂರು ಯುಗ್ಮಗಳು ಇರತಕ್ಕವನೆಂದೂ ಅರ್ಥಮಾಡಿರುತ್ತಾರೆ. ಧರ್ಮ-ಜ್ಞಾನ, ವೈರಾಗ್ಯ-ಐಶ್ವರ್ಯ, ಶ್ರೀ-ಯಶಸ್ಸು–ಇವೇ ಆ ಮೂರು ಯುಗ್ಮಗಳು. ಇವುಗಳು ಇರತಕ್ಕವನು ಶ್ರೀಕೃಷ್ಣ.

ನೀನು ಕೃಷ್ಣಧರ್ಮನು ( ಯಜ್ಞಸ್ವರೂಪನು ). ಎಲ್ಲಕ್ಕೂ ಆದಿಕಾರಣನು ( ಮೊದಲಿನವನು ) ನೀನೇ ಆಗಿರುವೆ. ಇಂದ್ರನ ದರ್ಪವನ್ನು ಮುರಿದ ವೃಷದರ್ಭನೂ ನೀನೇ. ಹರಿ-ಹರರೂಪಿಯಾದ ವೃಷಾಕಪಿಯೂ ನೀನೇ ಆಗಿರುವೆ. ಸಮುದ್ರವೂ ನಿನ್ನ ರೂಪವೇ ಆಗಿದೆ. ನಿರ್ಗುಣನಾದ ಪರಮಾತ್ಮನು ನೀನು. ಕರ್ಮಮಾಡಲು ಯೋಗ್ಯವಾದ ಪೂರ್ವೋತ್ತರ ಮತ್ತು ಈಶಾನ್ಯ ದಿಕ್ಸ್ವರೂಪನಾದ ತ್ರಿಕಕುಭನೂ ನೀನೇ ಆಗಿರುವೆ. ಸೂರ್ಯ-ಚಂದ್ರಾಗ್ನಿಗಳ ತೇಜಸ್ಸನ್ನು ಹೊಂದಿರುವ ತ್ರಿಧಾಮನಾಗಿರುವೆ. ಅಂತಹ ನೀನು ಸ್ವರ್ಗದಿಂದ ( ವೈಕುಂಠದಿಂದ ) ಚ್ಯುತನಾಗಿ ಶ್ರೀಕೃಷ್ಣನ ರೂಪದಲ್ಲಿ ಇಲ್ಲಿ ಅವತರಿಸಿರುವೆ.

**ಸಮ್ರಾಡ್ವಿರಾಟ್ ಸ್ವರಾಟ್ಚೈವ ಸುರರಾಜೋ ಭವೋದ್ಭವಃ ।**
**ವಿಭುರ್ಭೂರತಿಭೂಃ ಕೃಷ್ಣಃ ಕೃಷ್ಣವರ್ತ್ಮಾ ತ್ವಮೇವ ಹಿ ॥೧೧॥**

ನೀನು ಸಮ್ರಾಜನೂ, ವಿರಾಜನೂ, ಸ್ವರಾಜನೂ ಮತ್ತು ದೇವ ರಾಜನೂ ಆಗಿರುವೆ. ಈ ಸಂಸಾರದ ಉತ್ಪತ್ತಿಗೆ ನೀನೇ ಕಾರಣನಾಗಿರುವೆ. ಸರ್ವವ್ಯಾಪಕನಾಗಿರುವೆ. ಸಾಕಾರನೂ ನಿರಾಕಾರಪರಮಾತ್ಮನೂ ನೀನೇ ಆಗಿರುವೆ. ನಿನ್ನ ಕಡೆಗೇ ಎಲ್ಲರನ್ನೂ ಸೆಳೆದುಕೊಳ್ಳುವ ಕೃಷ್ಣನೂ ನೀನೇ. ಕೃಷ್ಣವರ್ತ್ಮನಾದ ಅಗ್ನಿಯೂ ನೀನೇ ಆಗಿರುವೆ.

**ಸ್ವಿಷ್ಟಕೃದ್ಭಿಷಗಾವರ್ತಃ ಕಪಿಲಸ್ತ್ವಂ ಚ ವಾಮನಃ ।**
**ಯಜ್ಞೋ ಧ್ರುವಃ ಪತಙ್ಗಶ್ಚ ಯಜ್ಞಸೇನಸ್ತ್ವಮುಚ್ಯಸೇ ॥೧೨॥**

ನಿನ್ನನ್ನೇ ಮುನಿಗಳು ಸಕಲಾಭೀಷ್ಟಗಳನ್ನೂ ನೆರವೇರಿಸಿಕೊಡುವ ಸ್ವಿಷ್ಟಕೃತ್ ಎಂದೂ, ಅಶ್ವಿನೀದೇವತೆಗಳ ತಂದೆಯಾದ ಸೂರ್ಯನೆಂದೂ, ಕಪಿಲಮುನಿಯೆಂದೂ, ವಾಮನನೆಂದೂ, ಯಜ್ಞನೆಂದೂ, ಧ್ರುವನೆಂದೂ (ಶಾಶ್ವತನೆಂದೂ ), ಗರುಡ ( ಸೂರ್ಯ ) ನೆಂದೂ, ಯಜ್ಞಸೇನನೆಂದೂ ಕರೆಯುತ್ತಾರೆ.

**ಶಿಖಂಡೀ ನಹುಷೋ ಬಭ್ರುರ್ದಿವಃಸ್ಪೃಕ್ತ್ವಂ ಪುನರ್ವಸುಃ ।**
**ಸುಬಭ್ರೂ ರುಕ್ಮಯಜ್ಞಶ್ಚ ಸುಷೇಣೋ ದುನ್ದುಭಿಸ್ತಥಾ ॥೧೩॥**

ನವಿಲಿನ ಗರಿಯನ್ನು ತಲೆಯಲ್ಲಿ ಧರಿಸಿರುವುದರಿಂದ ನೀನು ಶಿಖಂಡಿ

ಯಾಗಿರುವೆ. ನೀನೇ ನಹುಷನು. ಅನಂತರೂಪನಾದ ನೀನು ಪೃಥ್ವಿಯನ್ನು ಧರಿಸಿರುವೆಯಾದುದರಿಂದ ಬಭ್ರುವಾಗಿರುವೆ. ಒಂದೇ ಕಾಲಿನಿಂದ ಆಕಾಶವನ್ನೇ ಅಳೆದ ದಿವ್ಯಸ್ಪೃಶನೂ ಆಗಿರುವೆ. ಬ್ರಹ್ಮಾದಿದೇವತೆಗಳಲ್ಲಿ ಅಂತರಾತ್ಮರೂಪದಿಂದ ಪುನಃ ವಾಸಮಾಡುವುದರಿಂದ ನೀನು ಪುನರ್ವಸುವಾಗಿರುವೆ. ಕಂದುಬಣ್ಣದವನಾದುದರಿಂದ ನಿನ್ನನ್ನು ಸುಬಭ್ರು ಎಂದೂ ಕರೆಯುತ್ತಾರೆ. ಯಜ್ಞದಲ್ಲಿ ಹೇರಳವಾದ ಸುವರ್ಣವನ್ನು ದಕ್ಷಿಣೆಯ ರೂಪದಲ್ಲಿ ಕೊಡುವುದರಿಂದ ನೀನು ರುಕ್ಮಯಜ್ಞನು. ಸುಂದರವಾದ ಸೇನೆಯೊಡನೆ ಕೂಡಿರುವುದರಿಂದ ನೀನು ಸುಷೇಣನು. ದುಂದುಭಿ ಎಂಬ ರಾಕ್ಷಸನನ್ನು ಸಂಹರಿಸಿದುದರಿಂದ ನಿನ್ನನ್ನು ದುಂದುಭಿ–ಎಂದೂ ಕರೆಯುತ್ತಾರೆ.

**ಗಭಸ್ತಿನೇಮಿಃ ಶ್ರೀಪದ್ಮಃ ಪುಷ್ಕರಃ ಪುಷ್ಪಧಾರಣಃ ।**
**ಋಭುರ್ವಿಭುಃ ಸರ್ವಸೂಕ್ಷ್ಮಶ್ಚಾರಿತ್ರಂ ಚೈವ ಪಠ್ಯಸೇ ॥೧೪॥**

ನೀನು ಕಿರಣಗಳೇ ಚಕ್ರದ ಅಂಚುಗಳಲ್ಲಿರುವ ಕಾಲಚಕ್ರನಾಗಿರುವೆ. ನಿನ್ನನ್ನು ಶ್ರೀಪದ್ಮ, ಪುಷ್ಕರ, ಪುಷ್ಪಧಾರೀ, ಋಭು, ವಿಭು, ಸರ್ವಸೂಕ್ಷ್ಮ, ಸದಾಚಾರಸ್ವರೂಪ–ಎಂದೂ ಕರೆಯುತ್ತಾರೆ.

**ಅಮ್ಭೋನಿಧಿಸ್ತ್ವಂ ಬ್ರಹ್ಮಾ ತ್ವಂ ಪವಿತ್ರಂ ಧಾಮ ಧಾಮವಿತ್ ।**
**ಹಿರಣ್ಯಗರ್ಭಂ ತ್ವಾಮಾಹುಃ ಸ್ವಧಾ ಸ್ವಾಹಾ ಚ ಕೇಶವ ॥೧೫॥**

ಕೇಶವನೇ! ನೀನು ಜಲನಿಧಿಯಾದ ಸಮುದ್ರನಾಗಿರುವೆ. ಬ್ರಹ್ಮನೂ ನೀನೇ ಆಗಿರುವೆ. ಸಕಲಚರಾಚರಗಳಿಗೂ ಆಶ್ರಯನಾಗಿರುವುದರಿಂದ ನೀನು ಪವಿತ್ರಧಾಮನಾಗಿರುವೆ. ಪರಮಾಶ್ರಯವನ್ನೂ ತಿಳಿದವನಾಗಿರುವೆ. ವಿದ್ವಾಂಸರೂ ನಿನ್ನನ್ನು ಹಿರಣ್ಯಗರ್ಭ, ಸ್ವಾಹಾ ಮತ್ತು ಸ್ವಧಾ–ಎಂಬ ಅಭಿಧಾನಗಳಿಂದಲೂ ಕರೆಯುತ್ತಾರೆ.

**ಯೋನಿಸ್ತ್ವಮಸ್ಯ ಪ್ರಲಯಶ್ಚ ಕೃಷ್ಣ**
**ತ್ವಮೇವೇದಂ ಸೃಜಸೇ ವಿಶ್ವಮಗ್ರೇ ।**
**ವಿಶ್ವಂ ಚೇದಂ ತ್ವದ್ವಶೇ ವಿಶ್ವಯೋನೇ**
**ನಮೋಽಸ್ತು ತೇ ಶಾರ್ಙ್ಗಚಕ್ರಾಸಿಪಾಣೇ ॥೧೬॥**

ಈ ಪ್ರಪಂಚಕ್ಕೆ ನೀನೇ ಆದಿಕಾರಣನಾಗಿರುವೆ. ನೀನೇ ಪ್ರಲಯ ಸ್ಥಾನನೂ ಆಗಿರುವೆ. ಕಲ್ಪದ ಆರಂಭದಲ್ಲಿ ನೀನೇ ಈ ವಿಶ್ವವನ್ನು ಸೃಷ್ಟಿಸಿರುವೆ. ಪ್ರಳಯಾನಂತರದಲ್ಲಿ ವಿಶ್ವವನ್ನು ನೀನೇ ಪುನಃ ಸೃಷ್ಟಿಸುವೆ. ವಿಶ್ವಕ್ಕೆ ಕಾರಣನಾದವನೇ! ಈ ವಿಶ್ವವು ನಿನ್ನ ಅಧೀನದಲ್ಲಿಯೇ ಇರುತ್ತದೆ. ಶಾರ್ಙ್ಗಧನುಶ್ಚಕ್ರ-ಖಡ್ಗಪಾಣಿಯಾದ ಪರಮಾತ್ಮನೇ! ನಿನಗೆ ಅನಂತಾನಂತ ನಮಸ್ಕಾರಗಳು!"

ಜನಮೇಜಯ! ಹೀಗೆ ಆ ಸಭಾಮಧ್ಯದಲ್ಲಿ ಧರ್ಮರಾಜನಿಂದ ಸ್ತುತಿಸಲ್ಪಟ್ಟ ವಿಶಾಲನೇತ್ರನಾದ ಶ್ರೀಕೃಷ್ಣನು ಅತ್ಯಂತಪ್ರಸನ್ನನಾದನು. ಬಳಿಕ ಯದುಶ್ರೇಷ್ಠನಾದ ಶ್ರೀಕೃಷ್ಣನು ಭರತಕುಲಭೂಷಣನಾದ, ಪಾಂಡವರಲ್ಲಿ ಜ್ಯೇಷ್ಠನಾದ ಯುಧಿಷ್ಠಿರನನ್ನು ಉತ್ತಮವಾದ ಮಾತುಗಳಿಂದ ಅಭಿನಂದಿಸಿದನು."*

೪೩ನೆಯ ಅಧ್ಯಾಯವು ಮುಗಿಯಿತು.

೪೪ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ವಹಿಸಿಕೊಟ್ಟ ಭವನಗಳಲ್ಲಿ ಭೀಮಾದಿಗಳು ವಿಶ್ರಾಂತಿಯನ್ನು ಪಡೆದುಕೊಂಡುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಬಳಿಕ ಯುಧಿಷ್ಠಿರನು ಮಂತ್ರಿ-ಸೇನಾಪತಿಗಳೇ ಮೊದಲಾದ ಪ್ರಕೃತಿವರ್ಗದವರನ್ನು ಅವರವರ ಮನೆಗಳಿಗೆ ಬೀಳ್ಕೊಟ್ಟನು. ರಾಜನ ಅನುಜ್ಞೆಯನ್ನು ಪಡೆದು ಅವರೆಲ್ಲರೂ ತಮ್ಮ ತಮ್ಮ ಮನೆಗಳನ್ನು ಪ್ರವೇಶಿಸಿದರು. ಅಮಾತ್ಯ-ಸೇನಾಪತಿಗಳೆಲ್ಲರೂ ಹೊರಟುಹೋದನಂತರ ಶ್ರೀಮಂತನಾದ ಯುಧಿಷ್ಠಿರರಾಜನು ಭಯಂಕರಪರಾಕ್ರಮನಾದ, ಯುವರಾಜನಾದ ಭೀಮಸೇನನನ್ನೂ ಮತ್ತು ಅರ್ಜುನ-ನಕುಲ-ಸಹದೇವರನ್ನೂ ಸಂತೈಸುತ್ತಾ ಅವರೊಡನೆ ಈ ಮಾತುಗಳನ್ನು ಹೇಳಿದನು :

* ಭಗವಂತನ ನೂರು ನಾಮಗಳನ್ನೊಳಗೊಂಡಿರುವ ಈ ಅಧ್ಯಾಯವನ್ನು ಪ್ರತಿದಿನವೂ ಪಾರಾಯಣಮಾಡುವುದೂ ಮತ್ತು ಕೇಳುವುದೂ ಪುಣ್ಯತಮವಾದುದೆಂದೂ–ಪಾಪಪರಿಹಾರಕವೆಂದೂ ಹಿರಿಯರು ಹೇಳುತ್ತಾರೆ.

"ಸಹೋದರರೇ! ನೀವೆಲ್ಲರೂ ಮಹಾಯುದ್ಧದಲ್ಲಿ ಶತ್ರುಗಳ ಅನೇಕ ವಿಧವಾದ ಶಸ್ತ್ರಗಳಿಂದ ಗಾಯಗೊಂಡು ಬಹಳವಾಗಿ ಬಳಲಿರುವಿರಿ. ಶೋಕದಿಂದಲೂ ಮತ್ತು ಕ್ರೋಧದಿಂದಲೂ ಬಹಳವಾಗಿ ಸಂತಾಪಗೊಂಡಿರುವಿರಿ. ನನ್ನ ಸಲುವಾಗಿಯೇ ನೀವು ಅರಣ್ಯದಲ್ಲಿದ್ದುಕೊಂಡು–ಭಾಗ್ಯಹೀನರಾದವರು ದುಃಖವನ್ನು ಅನುಭವಿಸುವಂತೆ–ಅನೇಕವಿಧವಾದ ದುಃಖಗಳನ್ನು ಅನುಭವಿಸಿದಿರಿ. ಈಗ ನೀವು ನಮ್ಮ ವಿಜಯದಿಂದುಂಟಾಗಿರುವ ಆನಂದವನ್ನು ಅನುಭವಿಸಿರಿ. ನಿಮಗೆ ಹೇಗೆ ಇಷ್ಟವಾಗುವುದೋ ಹೇಗೆ ಸುಖವಾಗುವುದೋ ಹಾಗೆ ವಿಶ್ರಾಂತಿಸುಖವನ್ನು ಪಡೆಯಿರಿ. ನೀವೆಲ್ಲರೂ ಸಂಪೂರ್ಣವಾದ ವಿಶ್ರಾಂತಿಯನ್ನು ಪಡೆದುಕೊಂಡು ಸ್ವಸ್ಥಚಿತ್ತರಾದನಂತರ ನಾಳೆ ನಿಮ್ಮೊಡನೆ ಪುನಃ ಸೇರುತ್ತೇನೆ."

ಯುಧಿಷ್ಠಿರನು ಭೀಮಾರ್ಜುನಾದಿಗಳನ್ನು ಕುರಿತು ಹೀಗೆ ಹೇಳಿದನಂತರ, ಧೃತರಾಷ್ಟ್ರನ ಅನುಮತಿಯಂತೆ ಅಣ್ಣನು ತನ್ನ ವಾಸಕ್ಕೆಂದು ಬಿಟ್ಟುಕೊಟ್ಟಿದ್ದ, ಪ್ರಾಸಾದಗಳಿಂದ ಸಮಲಂಕೃತವಾಗಿದ್ದ, ಅನೇಕವಿಧವಾದ ರತ್ನಗಳಿಂದ ಕೂಡಿದ್ದ, ದಾಸೀ-ದಾಸರಿಂದ ಸಂಪನ್ನವಾಗಿದ್ದ ದುರ್ಯೋಧನನ ಅರಮನೆಯನ್ನು–ಇಂದ್ರನು ವೈಜಯಂತಪ್ರಾಸಾದವನ್ನು ಪ್ರವೇಶಿಸುವಂತೆ ಮಹಾಬಾಹುವಾದ ಭೀಮಸೇನನು ಪ್ರವೇಶಿಸಿದನು.

ರಾಜನ ಆಜ್ಞಾನುಸಾರವಾಗಿ ದುರ್ಯೋಧನನ ಅರಮನೆಯಂತೆಯೇ ಇದ್ದ ದುಃಶಾಸನನ ಸುಂದರವಾದ ಅರಮನೆಯನ್ನು ಅರ್ಜುನನು ಪಡೆದುಕೊಂಡನು. ಅರ್ಜುನನಿಗೆ ಲಭಿಸಿದ ಆ ಅರಮನೆಯೂ ಪ್ರಾಸಾದಗಳ ಸಾಲುಗಳಿಂದ ಯುಕ್ತವಾಗಿದ್ದಿತು. ಚಿನ್ನದ ತೋರಣಗಳಿಂದ ಸಮಲಂಕೃತವಾಗಿದ್ದಿತು. ಅನೇಕ ಸೇವಕ-ಸೇವಕಿಯರಿಂದ ತುಂಬಿದ್ದಿತು. ಧನ-ಧಾನ್ಯಗಳೂ ಆ ಅರಮನೆಯಲ್ಲಿ ಸಮೃದ್ಧವಾಗಿದ್ದುವು.

ದುಃಶಾಸನನ ಅರಮನೆಗಿಂತಲೂ ಸುಂದರವಾಗಿದ್ದ, ಕುಬೇರಭವನಸದೃಶವಾಗಿದ್ದ, ಮಣಿ-ರತ್ನಗಳಿಂದಲೂ ಸುವರ್ಣದಿಂದಲೂ ಸಮಲಂಕೃತವಾಗಿದ್ದ, ದುರ್ಮರ್ಷಣನ ಅರಮನೆಯನ್ನು–ಮಹಾರಣ್ಯದಲ್ಲಿ ಬಹಳವಾಗಿ ಕ್ಲೇಶಗಳನ್ನು ಅನುಭವಿಸಿ ಬಹುಮಾನಕ್ಕೆ ಯೋಗ್ಯನಾಗಿದ್ದ ನಕುಲನಿಗೆ, ಅವನ

ವಿಷಯದಲ್ಲಿ ಅತ್ಯಂತಪ್ರಸನ್ನತೆಯಿಂದಿದ್ದ ಧರ್ಮಪುತ್ರನಾದ ಯುಧಿಷ್ಠಿರನು ಬಿಟ್ಟುಕೊಟ್ಟನು.

ಕಾಂತಿಯುಕ್ತವಾಗಿದ್ದ, ಸುವರ್ಣಭೂಷಿತವಾದ, ವಿಕಸಿತವಾದ ಪದ್ಮದ ದಳಗಳಂತೆ ಕಣ್ಣುಗಳನ್ನು ಹೊಂದಿದ್ದ ಸ್ತ್ರೀಯರ ಶಯನಮಂದಿರಗಳಿಂದ ಸಂಪನ್ನವಾಗಿದ್ದ ದುರ್ಮುಖನ ಅರಮನೆಯನ್ನು–ಸತತವಾಗಿ ತನಗೆ ಪ್ರಿಯವಾದ ಕಾರ್ಯವನ್ನೇ ಮಾಡುತ್ತಿದ್ದ ಸಹದೇವನಿಗೆ ಯುಧಿಷ್ಠಿರನು ಬಿಟ್ಟುಕೊಟ್ಟನು. ಕೈಲಾಸವನ್ನು ಪಡೆದುಕೊಂಡು ಕುಬೇರನು ಸಂತಸಗೊಂಡಂತೆ–ದುರ್ಮುಖನ ಅಂತಹ ಸುಂದರವಾದ ಅರಮನೆಯನ್ನು ಪಡೆದುಕೊಂಡು ಸಹದೇವನು ಆನಂದಭರಿತನಾದನು.

ಯುಯುತ್ಸು, ವಿದುರ, ಸಂಜಯ, ಸುಧರ್ಮಾ ಮತ್ತು ಪುರೋಹಿತರಾದ ಧೌಮ್ಯರು-ತಾವು ಹಿಂದೆ ವಾಸಮಾಡುತ್ತಿದ್ದ ಮನೆಗಳಿಗೇ ತೆರಳಿದರು.

ಪುರುಷವ್ಯಾಘ್ರನಾದ ಶ್ರೀಕೃಷ್ಣನು-ವ್ಯಾಘ್ರವು ಗಿರಿಗುಹೆಯನ್ನು ಪ್ರವೇಶಿಸುವಂತೆ–ಸಾತ್ಯಕಿಯೊಡನೆ ಅರ್ಜುನನ ಅರಮನೆಯನ್ನು ಪ್ರವೇಶಿಸಿದನು. ಭೀಮಾದಿಗಳೆಲ್ಲರೂ ತಮ್ಮ ತಮ್ಮ ಅರಮನೆಗಳಲ್ಲಿ ನಾನಾವಿಧವಾದ ಭಕ್ಷ್ಯಗಳಿಂದಲೂ ಅನ್ನ-ಪಾನಾದಿಗಳಿಂದಲೂ ತೃಪ್ತರಾಗಿ, ರಾತ್ರಿಯಲ್ಲಿ ಸುಖವಾಗಿ ಮಲಗಿದ್ದು, ಬೆಳಗಾದೊಡನೆಯೇ ಯಾವ ವಿಧವಾದ ಆಲಸ್ಯವೂ ಇಲ್ಲದೇ ಸುಖದಿಂದಲೇ ಹಾಸಿಗೆಯನ್ನು ಬಿಟ್ಟು ಮೇಲೆದ್ದು, ಶೌಚ-ಮುಖಮಾರ್ಜನ-ಸ್ನಾನ-ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು ಯುಧಿಷ್ಠಿರನ ಬಳಿಗೆ ಹೋದರು.”

ಳಳನೆಯ ಅಧ್ಯಾಯವು ಮುಗಿಯಿತು.

ಳಜನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಬ್ರಾಹ್ಮಣರನ್ನೂ ಮತ್ತು ಆಶ್ರಿತರಾಜರನ್ನೂ ಸತ್ಕರಿಸಿದುದು : ಶ್ರೀಕೃಷ್ಣನ ಸಮೀಪಕ್ಕೆ ಹೋಗಿ ಅವನನ್ನು ಸ್ತುತಿಸಿ ಕೃತಜ್ಞತೆಯನ್ನು ಪ್ರಕಟಿಸಿದುದು

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ವಿಪ್ರೋತ್ತಮರೇ! ನಮ್ಮ ತಾತನಾದ, ಮಹಾಬಾಹುವಾದ, ಧರ್ಮ ಪುತ್ರನಾದ ಯುಧಿಷ್ಠಿರನು ರಾಜ್ಯವನ್ನು ಪಡೆದುಕೊಂಡನಂತರ ಬೇರೆ ಯಾವ ಕಾರ್ಯಗಳನ್ನು ಮಾಡಿದನೆಂಬ ವಿಷಯವನ್ನು ಹೇಳುವ ಕೃಪೆಮಾಡಿರಿ. ಮೂರು ಲೋಕಗಳಿಗೂ ಪರಮಗುರುವಾದ, ವೀರನಾದ ಭಗವಾನ್ ಶ್ರೀಕೃಷ್ಣನು ಮುಂದೇನು ಮಾಡಿದನೆಂಬುದನ್ನೂ ದಯೆಮಾಡಿ ತಿಳಿಸಿರಿ."

"ರಾಜೇಂದ್ರ! ವಾಸುದೇವನನ್ನು ಮುಂದೆಮಾಡಿಕೊಂಡು ಪಾಂಡವರು ಮುಂದೆ ಏನುಮಾಡಿದರೆಂಬುದನ್ನು ನಾನು ನಿನಗೆ ಯಥಾವತ್ತಾಗಿ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು.

ಕುಂತಿಯ ಮಗನಾದ ಯುಧಿಷ್ಠಿರನು ರಾಜ್ಯಭಾರವನ್ನು ವಹಿಸಿ ಕೊಂಡೊಡನೆಯೇ ತನ್ನ ಮೊದಲನೆಯ ಕಾರ್ಯವಾಗಿ ನಾಲ್ಕು ವರ್ಣಗಳ ಜನರೂ ತಮ್ಮ ತಮ್ಮ ವರ್ಣಧರ್ಮಾನುಸಾರವಾಗಿಯೇ ನಡೆದುಕೊಳ್ಳುವಂತೆ ವ್ಯವಸ್ಥೆಮಾಡಿದನು. ಬಳಿಕ ಮಹಾತ್ಮರಾದ ಸ್ನಾತಕವ್ರತನಿಷ್ಠರಾದ ಸಾವಿರ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಒಂದೊಂದು ಸಾವಿರ ಸುವರ್ಣನಾಣ್ಯಗಳನ್ನು ದಾನಮಾಡಿದನು. ತನ್ನನ್ನೇ ಜೀವನಕ್ಕಾಗಿ ಆಶ್ರಯಿಸಿಕೊಂಡಿದ್ದ ಸೇವಕರನ್ನೂ, ಆಶ್ರಿತರಾಜರನ್ನೂ, ಅತಿಥಿಗಳನ್ನೂ, ದಯನೀಯರಾದ ಯಾಚಕ ರನ್ನೂ–ಸಕಲವಿಧವಾದ ಕಾಮನಾವಸ್ತುಗಳ ಪ್ರದಾನಗಳಿಂದ ಸಂತೃಪ್ತಿಗೊಳಿಸಿದನು. ಪುರೋಹಿತರಾದ ಧೌಮ್ಯರಿಗೆ ಹತ್ತುಸಾವಿರ ಗೋವು ಗಳನ್ನೂ, ಧನವನ್ನೂ, ಸುವರ್ಣವನ್ನೂ, ಬೆಳ್ಳಿಯ ಪದಾರ್ಥಗಳನ್ನೂ ಮತ್ತು ವಿಧ-ವಿಧವಾದ ವಸ್ತ್ರಗಳನ್ನೂ ಕೊಟ್ಟನು. ಶಿಷ್ಯನು ತನ್ನ ಗುರುಗಳ ವಿಷಯ ದಲ್ಲಿ ಅತ್ಯಂತಗೌರವದಿಂದ ನಡೆದುಕೊಳ್ಳುವಂತೆಯೇ ಯುಧಿಷ್ಠಿರನು ಕೃಪಾ ಚಾರ್ಯರ ವಿಷಯದಲ್ಲಿ ನಡೆದುಕೊಳ್ಳುತ್ತಿದ್ದನು. ನಿಯಮಪೂರ್ವಕವಾದ ವ್ರತಾನುಷ್ಠಾನಗಳನ್ನಿಟ್ಟುಕೊಂಡಿದ್ದ ರಾಜನು ವಿದುರನಿಗೂ ಯಥಾಯೋಗ್ಯ ವಾದ ಪೂಜೆಯನ್ನು ಅರ್ಪಿಸಿದನು. ದಾನಿಗಳಲ್ಲಿ ಶ್ರೇಷ್ಠನಾದ ಯುಧಿಷ್ಠಿರನು ಆಶ್ರಿತಜನರೆಲ್ಲರನ್ನೂ ಭಕ್ಷ್ಯಗಳಿಂದಲೂ, ಅನ್ನ-ಪಾನಾದಿಗಳಿಂದಲೂ, ವಿಧ-ವಿಧವಾದ ವಸ್ತ್ರಗಳಿಂದಲೂ, ಶಯನಗಳಿಂದಲೂ ಮತ್ತು ಆಸನಗಳಿಂದಲೂ ಸಂತೋಷಗೊಳಿಸಿದನು.

ರಾಜಪುತ್ರನಾದ, ಮಹಾಯಶೋವಂತನಾದ ಯುಧಿಷ್ಠಿರನು ಲಭಿ

ಸಿರುವ ಧನವನ್ನು ಈ ಪ್ರಕಾರವಾಗಿ ಎಲ್ಲರಿಗೂ ಯಥೋಚಿತವಾಗಿ ವಿಭಾಗಿಸಿಕೊಟ್ಟು ಧೃತರಾಷ್ಟ್ರಪುತ್ರನಾದ ಯುಯುತ್ಸುವನ್ನೂ ವಿಶೇಷವಾಗಿ ಸತ್ಕರಿಸಿದನು. ಧೃತರಾಷ್ಟ್ರನಿಗೂ, ಗಾಂಧಾರಿಗೂ ಮತ್ತು ವಿದುರನಿಗೂ ಆ ರಾಜ್ಯವನ್ನು ಒಪ್ಪಿಸಿ ಸ್ವಸ್ಥಚಿತ್ತನಂತೆ ಸುಖಿಯಾಗಿದ್ದನು. ಹೀಗೆ ಯುಧಿಷ್ಠಿರನು ಎಲ್ಲ ನಾಗರಿಕರನ್ನೂ ಪ್ರಸನ್ನಗೊಳಿಸಿದನಂತರ ಬದ್ಧಾಂಜಲಿಯಾಗಿ ಮಹಾತ್ಮನಾದ ವಾಸುದೇವನ ಬಳಿಗೆ ಹೋದನು.



ನಾನಾವಿಧವಾದ ಮಣಿಗಳಿಂದಲೂ ಸುವರ್ಣಾಭರಣಗಳಿಂದಲೂ ಸಮಲಂಕೃತವಾಗಿದ್ದ ದೊಡ್ಡದಾದ ಮಂಚದ ಮೇಲೆ ಕುಳಿತಿದ್ದ, ನೀಲ ಮೇಘದ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ, ಜಾಜ್ವಲ್ಯಮಾನ

ವಾದ ಶರೀರದಿಂದ ಕೂಡಿದ್ದ, ದಿವ್ಯಾಭರಣಭೂಷಿತನಾಗಿದ್ದ, ಹೊಂಬಣ್ಣದ ರೇಷ್ಮೆಯ ವಸ್ತ್ರವನ್ನುಟ್ಟು ಸುವರ್ಣದಿಂದ ಸಮಲಂಕೃತವಾದ ನೀಲಮಣಿಯಂತೆಯೇ ಕಾಣುತ್ತಿದ್ದ ಶ್ರೀಕೃಷ್ಣನನ್ನು ಯುಧಿಷ್ಠಿರನು ಕಂಡನು. ಉದಯಿಸುವ ಸೂರ್ಯನು ಉದಯಾಚಲವನ್ನು ಪ್ರಕಾಶಗೊಳಿಸುವಂತೆ–ವಕ್ಷಸ್ಥಳದಲ್ಲಿದ್ದ ಕೌಸ್ತುಭಮಣಿಯು ಶ್ರೀಕೃಷ್ಣನನ್ನು ಪ್ರಕಾಶಗೊಳಿಸುತ್ತಿದ್ದಿತು. ಭಗವಂತನ ಆ ದಿವ್ಯರೂಪಕ್ಕೆ ಸಮಾನವಾದ ರೂಪವು ಮೂರು ಲೋಕಗಳಲ್ಲಿ ಎಲ್ಲಿಯೂ ಇರುವುದಿಲ್ಲ. ಯುಧಿಷ್ಠಿರರಾಜನು ಮಾನವಶರೀರಧರನಾಗಿದ್ದ ಮಹಾತ್ಮನಾದ ಮಹಾವಿಷ್ಣುವನ್ನು ಸಮೀಪಿಸಿ ಮಂದಹಾಸಪೂರ್ವಕವಾಗಿ ಹೇಳಿದನು :

"ಬುದ್ಧಿವಂತರಲ್ಲಿ ಶ್ರೇಷ್ಠನಾದವನೇ! ಅಚ್ಯುತನೇ! ನಿನಗೆ ರಾತ್ರಿಯು ಸುಖದಿಂದ ಕಳೆಯಿತೇ? ನಿನ್ನ ಎಲ್ಲ ಜ್ಞಾನೇಂದ್ರಿಯಗಳೂ ಪ್ರಸನ್ನವಾಗಿರುವುವೇ? ಬುದ್ಧಿದೇವಿಯು ನಿನ್ನನ್ನು ಆಶ್ರಯಿಸಿರುವಳಲ್ಲವೇ? ಭಗವನ್! ನಿನ್ನ ಪರಾಕ್ರಮವೇ ಮೂರು ಲೋಕಗಳಿಗೂ ಆಶ್ರಯಭೂತವಾಗಿದೆ. ಮೂರು ಲೋಕಗಳಲ್ಲಿಯೂ ಏಕೈಕಪರಾಕ್ರಮಿಯೂ ನೀನೇ ಆಗಿರುವೆ. ನಿನ್ನ ಅನುಗ್ರಹದಿಂದಲೇ ನಾವು ರಾಜ್ಯವನ್ನು ಪಡೆದುಕೊಂಡೆವು. ಅಖಂಡ ಭೂಮಂಡಲವೂ ನಮ್ಮ ಅಧೀನವಾಯಿತು. ನಾವು ಶತ್ರುಗಳೊಡನೆ ಮಾಡಿದ ಯುದ್ಧದಲ್ಲಿ ಜಯಗಳಿಸಿದೆವು ಮತ್ತು ಶ್ರೇಷ್ಠವಾದ ಯಶಸ್ಸನ್ನೂ ಪಡೆದುಕೊಂಡೆವು. ನಿನ್ನ ಪರಮಾನುಗ್ರಹದಿಂದಾಗಿ ನಾವು ಧರ್ಮದಿಂದಲೂ ಚ್ಯುತರಾಗಲಿಲ್ಲ."

ಜನಮೇಜಯ! ಅರಿಂದಮನಾದ ಯುಧಿಷ್ಠಿರನು ಹೀಗೆ ಮಾತಾಡುತ್ತಿದ್ದರೂ ಭಗವಾನ್ ಶ್ರೀಕೃಷ್ಣನು ಯಾವ ಮಾತನ್ನೂ ಆಡದೇ ಧ್ಯಾನಯೋಗದಲ್ಲಿಯೇ ಇದ್ದುಬಿಟ್ಟನು."

ಳ೫ನೆಯ ಅಧ್ಯಾಯವು ಮುಗಿಯಿತು.

೪೬ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣ-ಯುಧಿಷ್ಠಿರರ ಸಂವಾದ : ಶ್ರೀಕೃಷ್ಣನು ಭೀಷ್ಮನನ್ನು ಪ್ರಶಂಸಿಸಿದುದು : ಭೀಷ್ಮನ ಬಳಿಗೆ ಹೋಗುವಂತೆ ಯುಧಿಷ್ಠಿರನಿಗೆ ಶ್ರೀಕೃಷ್ಣನು ಆದೇಶ ನೀಡಿದುದು

"ಜನಮೇಜಯ! ಶ್ರೀಕೃಷ್ಣನು ಧ್ಯಾನಮಗ್ನನಾಗಿರುವುದನ್ನು ನೋಡಿ ಅಚ್ಚರಿಗೊಂಡ ಯುಧಿಷ್ಠಿರನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ :

**ಕಿಮಿದಂ ಪರಮಾಶ್ಚರ್ಯಂ ಧ್ಯಾಯಸ್ಯಮಿತವಿಕ್ರಮ ।**
**ಕಚ್ಚಿಲ್ಲೋಕತ್ರಯಸ್ಯಾಸ್ಯ ಸ್ವಸ್ತಿ ಲೋಕಪರಾಯಣ ॥೧॥**
**ಚತುರ್ಥಂ ಧ್ಯಾನಮಾರ್ಗಂ ತ್ವಮಾಲಮ್ಬ್ಯ ಪುರುಷರ್ಷಭ ।**
**ಅಪಕ್ರಾನ್ತೋ ಯತೋ ದೇವಸ್ತೇನ ಮೇ ವಿಸ್ಮಿತಂ ಮನಃ ॥೨॥**

"ಅಮಿತಪರಾಕ್ರಮನೇ! ಜಗದಾಶ್ರಯನೇ! ಪುರುಷರ್ಷಭನೇ! ನೀನು ಯಾರನ್ನು ಕುರಿತು ಧ್ಯಾನಮಾಡುತ್ತಿರುವೆ? ನೀನು ಧ್ಯಾನಯೋಗದಲ್ಲಿ ಕುಳಿತಿರುವುದನ್ನು ನೋಡಿ ನನಗೆ ಬಹಳ ಆಶ್ಚರ್ಯವೆನಿಸುತ್ತದೆ. ಮೂರು ಲೋಕಗಳೂ ಕುಶಲದಿಂದಿರುವುವಲ್ಲವೇ? ನೀನು ಜಾಗ್ರತ್ಸ್ವಪ್ನ-ಸುಷುಪ್ತಿಗಳಿಗೂ ಅತೀತವೂ, ನಾಲ್ಕನೆಯದೂ ಆದ ಧ್ಯಾನಮಾರ್ಗದ ಆಶ್ರಯವನ್ನು ಪಡೆದು ಸ್ಥೂಲ-ಸೂಕ್ಷ್ಮ-ಕಾರಣಶರೀರಗಳನ್ನೂ ಅತಿಕ್ರಮಿಸಿ ಮೇಲೆ ಹೋಗಿರುವೆ. (ಬ್ರಹ್ಮಸ್ವರೂಪನಾಗಿರುವೆ.) ಈ ನಿನ್ನ ಪರಮಾದ್ಭುತವಾದ ಸ್ಥಿತಿಯನ್ನು ಕಂಡು ನನ್ನ ಮನಸ್ಸು ವಿಸ್ಮಯಗೊಂಡಿದೆ.

**ನಿಗೃಹೀತೋ ಹಿ ವಾಯುಸ್ತೇ ಪಞ್ಚಕರ್ಮಾ ಶರೀರಗಃ ।**
**ಇನ್ದ್ರಿಯಾಣಿ ಪ್ರಸನ್ನಾನಿ ಮನಸಿ ಸ್ಥಾಪಿತಾನಿ ತೇ ॥೩॥**

ನಿನ್ನ ಶರೀರದಲ್ಲಿದ್ದು ಶ್ವಾಸ-ಪ್ರಶ್ವಾಸಾದಿ ಐದು ಕಾರ್ಯಗಳನ್ನೂ ಅನವರತವಾಗಿ ಮಾಡುವ ಪ್ರಾಣವಾಯುವು ನಿರುದ್ಧವಾಗಿದೆ. ಪ್ರಸನ್ನವಾದ ನಿನ್ನ ಜ್ಞಾನೇಂದ್ರಿಯಗಳೆಲ್ಲವೂ ಮನಸ್ಸಿನಲ್ಲಿ ಲೀನವಾಗಿವೆ.

**ವಾಕ್ಚ ಸತ್ತ್ವಂ ಚ ಗೋವಿನ್ದ ಬುದ್ಧೌ ಸಂವೇಶಿತಾನಿ ತೇ ।**
**ಸರ್ವೇ ಚೈವ ಗುಣಾ ದೇವಾಃ ಕ್ಷೇತ್ರಜ್ಞೇ ತೇ ನಿವೇಶಿತಾಃ ॥೪॥**

ಗೋವಿಂದ! ವಾಕ್ಕು , ಮನಸ್ಸು, ಸತ್ತ್ವ–ಇವುಗಳೆಲ್ಲವೂ ನಿನ್ನ ಬುದ್ಧಿಯಲ್ಲಿ ಲೀನವಾಗಿವೆ. ಸತ್ತ್ವ-ರಜಸ್ತಮೋಗುಣಗಳೂ ಮತ್ತು ಕಣ್ಣು-ಕಿವಿಗಳೇ ಮೊದಲಾದ ಇಂದ್ರಿಯಗಳೂ ಬುದ್ಧಿಯ ಮೂಲಕವಾಗಿ ಕ್ಷೇತ್ರಜ್ಞನಾದ ಅಂತರಾತ್ಮನಲ್ಲಿ ಲೀನವಾಗಿವೆ.

**ನೇಙ್ಗನ್ತಿ ತವ ರೋಮಾಣಿ ಸ್ಥಿರಾ ಬುದ್ಧಿಸ್ತಥಾ ಮನಃ ।**
**ಕಾಷ್ಠಕುಡ್ಯಶಿಲಾಭೂತೋ ನಿರೀಹಶ್ಚಾಸಿ ಮಾಧವ ॥೫॥**

ನಿನ್ನ ಶರೀರದಲ್ಲಿರುವ ರೋಮಕೋಟಿಗಳು ಸೆಟೆದು ನಿಂತಿವೆ. ನಿನ್ನ ಬುದ್ಧಿ ಮತ್ತು ಮನಸ್ಸುಗಳು ಸ್ಥಿರವಾಗಿವೆ. ಮಾಧವ! ನೀನು ಕಟ್ಟಿಗೆ, ಗೋಡೆ ಮತ್ತು ಶಿಲೆಗಳಂತೆ ನಿಶ್ಚೇಷ್ಟನಾಗಿರುವೆ.

**ಯಥಾ ದೀಪೋ ನಿವಾತಸ್ಥೋ ನಿರಿಙ್ಗೋ ಜ್ವಲತೇ ಪುನಃ ।**
**ತಥಾಸಿ ಭಗವನ್ದೇವ ಪಾಷಾಣ ಇವ ನಿಶ್ಚಲಃ ॥೬॥**

**ಯದಿ ಶ್ರೋತುಮಿಹಾರ್ಹಾಮಿ ನ ರಹಸ್ಯಂ ಚ ತೇ ಯದಿ ।**
**ಛಿನ್ಧಿ ಮೇ ಸಂಶಯಂ ದೇವ ಪ್ರಪನ್ನಾಯಾಭಿಯಾಚತೇ ॥೭॥**

ಭಗವನ್! ದೇವದೇವ! ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪವು ಸ್ವಲ್ಪವಾದರೂ ಅಲುಗಾಡದೇ ಹೇಗೆ ಉರಿಯುತ್ತಲೇ ಇರುತ್ತದೆಯೋ– ಹಾಗೆಯೇ ನೀನೂ ಶಿಲಾಮೂರ್ತಿಯಂತೆ ನಿಶ್ಚಲನಾಗಿರುವೆ.

ಈ ಮಹಾಯೋಗವು ಯಾವುದೆಂಬುದನ್ನು ನಿನ್ನಿಂದ ಕೇಳಿ ತಿಳಿದುಕೊಳ್ಳುವ ಅರ್ಹತೆಯು ನನಗಿದ್ದರೆ–ಇದು ಯಾರಿಗೂ ಹೇಳಬಾರದ ರಹಸ್ಯವಲ್ಲದಿದ್ದರೆ–ನಿನಗೆ ಶರಣಾಗತನಾಗಿ ಅಂಗಲಾಚಿ ಬೇಡಿಕೊಳ್ಳುತ್ತಿರುವ ನನಗೆ ಉಂಟಾಗಿರುವ ಸಂಶಯವನ್ನು ಕತ್ತರಿಸಿ ಹಾಕು ( ನಿವಾರಿಸು ).

**ತ್ವಂ ಹಿ ಕರ್ತಾ ವಿಕರ್ತಾ ಚ ಕ್ಷರಂ ಚೈವಾಕ್ಷರಂ ಚ ಹಿ ।**
**ಅನಾದಿನಿಧನಶ್ಚಾದ್ಯಸ್ತ್ವಮೇವ ಪುರುಷೋತ್ತಮ ॥೮॥**

ಪುರುಷೋತ್ತಮನೇ! ಜಗತ್ತನ್ನು ಸೃಷ್ಟಿಸುವವನೂ ನೀನೇ ಆಗಿರುವೆ. ವಿಲೀನಗೊಳಿಸುವವನೂ ನೀನೇ ಆಗಿರುವೆ. ವಿಕಾರಸ್ವಭಾವದ ಪ್ರಕೃತಿಯೊಡನೆ ಸೇರಿಕೊಂಡಿರುವ ಕ್ಷರಪುರುಷನೂ ನೀನೇ ಆಗಿರುವೆ. ಪ್ರಕೃತಿ

ಸಂಬಂಧವಿಲ್ಲದ ನಿರ್ವಿಕಾರನಾದ ಅಕ್ಷರಪುರುಷನೂ ನೀನೇ ಆಗಿರುವೆ. ನಿನಗೆ ಆದಿಯೂ ಇಲ್ಲ ; ಅಂತ್ಯವೂ ಇಲ್ಲ. ನೀನೇ ಸಕಲಚರಾಚರವಸ್ತುಗಳಿಗೂ ಆದಿಕಾರಣನಾಗಿರುವೆ. ( ಮೊದಲನೆಯವನಾಗಿರುವೆ. )

**ತ್ವತ್ಪ್ರಪನ್ನಾಯ ಭಕ್ತಾಯ ಶಿರಸಾ ಪ್ರಣತಾಯ ಚ ।**
**ಧ್ಯಾನಸ್ಯಾಸ್ಯ ಯಥಾ ತತ್ತ್ವಂ ಬ್ರೂಹಿ ಧರ್ಮಭೃತಾಂ ವರ ॥೯॥**

ಧರ್ಮಾತ್ಮರಲ್ಲಿ ಶ್ರೇಷ್ಠನಾದವನೇ! ನಿನಗೆ ಶರಣಾಗಿರುವ, ಭಕ್ತನಾಗಿರುವ, ತಲೆಬಾಗಿ ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸುತ್ತಿರುವ ನನಗೆ ಈ ನಿನ್ನ ಧ್ಯಾನದ ಯಥಾರ್ಥವಾದ ತತ್ತ್ವವೇನೆಂಬುದನ್ನು ಹೇಳು."

ಯುಧಿಷ್ಠಿರನ ಪ್ರಾರ್ಥನೆಯನ್ನು ಕೇಳಿ ಇಂದ್ರಾವರಜನಾದ ಶ್ರೀಕೃಷ್ಣನು ಮನೋಬುದ್ಧೀಂದ್ರಿಯಗಳನ್ನು ತಮ್ಮ-ತಮ್ಮ ಸ್ಥಾನಗಳಲ್ಲಿ ನಿಲ್ಲಿಸಿ ಮಂದಹಾಸಪೂರ್ವಕವಾಗಿ ಯುಧಿಷ್ಠಿರನಿಗೆ ಹೇಳಿದನು :

**ಶರತಲ್ಪಗತೋ ಭೀಷ್ಮಃ ಶಾಮ್ಯನ್ನಿವ ಹುತಾಶನಃ ।**
**ಮಾಂ ಧ್ಯಾತಿ ಪುರುಷವ್ಯಾಘ್ರಸ್ತತೋ ಮೇ ತದ್ಗತಂ ಮನಃ ॥೧೧॥**

"ಯುಧಿಷ್ಠಿರ! ಶರತಲ್ಪದಲ್ಲಿ ಮಲಗಿರುವ, ಆರಿಹೋಗುತ್ತಿರುವ ಯಜ್ಞೇಶ್ವರನಂತಿರುವ, ಪುರುಷವ್ಯಾಘ್ರನಾದ ಭೀಷ್ಮನು ನನ್ನನ್ನು ಧ್ಯಾನಿಸುತ್ತಿದ್ದಾನೆ. ಆದುದರಿಂದ ನನ್ನ ಮನಸ್ಸು ಅವನಲ್ಲಿಯೇ ಲೀನವಾಗಿದೆ.

ಮಿಂಚಿನಿಂದ ಹೊರಟ ಸಿಡಿಲಿನ ಶಬ್ದದಂತಿದ್ದ ಯಾವನ ಧನುಷ್ಟೇಂಕಾರವನ್ನು ದೇವರಾಜನೂ ಸಹಿಸಿಕೊಳ್ಳುತ್ತಿರಲಿಲ್ಲವೋ–ಅಂತಹ ಭೀಷ್ಮನಲ್ಲಿ ನನ್ನ ಮನಸ್ಸು ಲೀನವಾಗಿದೆ. ಕಾಶೀಪಟ್ಟಣದಲ್ಲಿ ಕಾಶೀರಾಜನ ಹೆಣ್ಣುಮಕ್ಕಳ ಸ್ವಯಂವರಕ್ಕಾಗಿ ಆಗಮಿಸಿದ್ದ ಸಮಸ್ತರಾಜರನ್ನೂ ಪರಾಜಯಗೊಳಿಸಿ ಯಾವನು ಮೂವರು ಕನ್ಯೆಯರನ್ನೂ ಕರೆದುಕೊಂಡು ಬಂದನೋ–ಅಂತಹ ವೀರಭೀಷ್ಮನನ್ನು ನಾನು ಮನಸ್ಸಿನಿಂದ ಧ್ಯಾನಿಸುತ್ತಿದ್ದೇನೆ. ಯಾವನು ಇಪ್ಪತ್ತು ಮೂರು ದಿನಗಳ ಕಾಲ ಭಗವಾನ್ ಪರಶುರಾಮನೊಡನೆ ಯುದ್ಧಮಾಡಿದನೋ ಮತ್ತು ಭಾರ್ಗವರಾಮನಿಂದ ಪರಾಜಯಹೊಂದಲಿಲ್ಲವೋ–ಅಂತಹ ವೀರನಾದ ಭೀಷ್ಮನನ್ನು ನಾನು ಮನಸ್ಸಿನ ಮೂಲಕವಾಗಿ ಹೊಂದಿದ್ದೇನೆ.

**ಏಕೀಕೃತ್ಯೇನ್ದ್ರಿಯಗ್ರಾಮಂ ಮನಃ ಸಂಯಮ್ಯ ಮೇಧಯಾ ।**
**ಶರಣಂ ಮಾಮುಪಾಗಚ್ಛತ್ತತೋ ಮೇ ತದ್ಗತಂ ಮನಃ ॥೧೫॥**

ಇಂದ್ರಿಯಸಮೂಹಗಳೆಲ್ಲವನ್ನೂ ಏಕೀಕರಿಸಿ ಮನಸ್ಸಿನಲ್ಲಿ ಲೀನಗೊಳಿಸಿ, ಬುದ್ಧಿಯ ಮೂಲಕವಾಗಿ ಮನಸ್ಸನ್ನು ನಿರೋಧಿಸಿ, ಭೀಷ್ಮನು ಧ್ಯಾನಯೋಗದ ಮೂಲಕವಾಗಿ ನನಗೆ ಶರಣಾಗತನಾಗಿದ್ದಾನೆ. ಈ ಕಾರಣದಿಂದಲೇ ನನ್ನ ಮನಸ್ಸೂ ಅವನಲ್ಲಿಯೇ ಲೀನವಾಗಿದೆ.

ಪರಮಪವಿತ್ರಳಾದ ಗಂಗಾದೇವಿಯು ಯಾವನನ್ನು ವಿಧಿಪೂರ್ವಕವಾಗಿ ತನ್ನ ಗರ್ಭದಲ್ಲಿ ಧರಿಸಿಕೊಂಡಿದ್ದಳೋ ಮತ್ತು ಯಾರು ಪರಮರ್ಷಿಗಳಾದ ವಸಿಷ್ಠರಿಂದಲೇ ಶಿಕ್ಷಣವನ್ನು ಪಡೆದುಕೊಂಡನೋ–ಅಂತಹ ಪರಮ ಪವಿತ್ರನಾದ ಭೀಷ್ಮನ ಬಳಿಗೆ ನಾನು ಮನಸ್ಸಿನ ಮೂಲಕವಾಗಿ ಹೋಗಿದ್ದೇನೆ.

ಬುದ್ಧಿವಂತನಾದ ಮತ್ತು ಮಹಾತೇಜಸ್ವಿಯಾದ ಯಾವ ಭೀಷ್ಮನು ಸಕಲವಿಧವಾದ ದಿವ್ಯಾಸ್ತ್ರಗಳನ್ನೂ ಮತ್ತು ಅಂಗಸಹಿತವಾದ ನಾಲ್ಕು ವೇದಗಳನ್ನೂ ಧಾರಣೆಮಾಡಿರುವನೋ–ಅಂತಹ ಭೀಷ್ಮನನ್ನು ನಾನು ಮನಸ್ಸಿನಿಂದ ಚಿಂತಿಸುತ್ತಿದ್ದೇನೆ. ಜಮದಗ್ನಿಯ ಮಗನಾದ ಭಗವಾನ್ ಪರಶುರಾಮನಿಗೆ ಅತ್ಯಂತಪ್ರಿಯಶಿಷ್ಯನಾದ, ಸಕಲವಿದ್ಯೆಗಳಿಗೂ ಆಧಾರಭೂತನಾದ ಭೀಷ್ಮನನ್ನು ನಾನು ಮನಸ್ಸಿನ ಮೂಲಕವಾಗಿ ಹೊಂದಿದ್ದೇನೆ. ಭೀಷ್ಮನು ಭೂತ-ಭವಿಷ್ಯದ್ವರ್ತಮಾನಗಳನ್ನೂ ತಿಳಿದವನಾಗಿರುತ್ತಾನೆ. ಧರ್ಮವಿದರಲ್ಲಿ ಶ್ರೇಷ್ಠನಾದ ಅಂತಹ ಭೀಷ್ಮನನ್ನು ನಾನು ಮನಸ್ಸಿನಿಂದ ಧ್ಯಾನಮಾಡುತ್ತಿದ್ದೇನೆ.

**ತಸ್ಮಿನ್ಹಿ ಪುರುಷವ್ಯಾಘ್ರೇ ಕರ್ಮಭಿಃ ಸ್ವೈರ್ದಿವಂ ಗತೇ ।**
**ಭವಿಷ್ಯತಿ ಮಹೀ ಪಾರ್ಥ ನಷ್ಟಚನ್ದ್ರೇವ ಶರ್ವರೀ ॥೨೦॥**

ಪುರುಷವ್ಯಾಘ್ರನಾದ ಭೀಷ್ಮನು ತಾನು ಮಾಡಿರುವ ಸತ್ಕರ್ಮಗಳ ಫಲವಾಗಿ ಸ್ವರ್ಗಲೋಕಕ್ಕೆ ಹೋಗಿಬಿಟ್ಟರೆ–ಈ ಭೂಮಿಯು ಚಂದ್ರನಿಂದ ರಹಿತವಾದ ರಾತ್ರಿಯಂತಾಗುತ್ತದೆ.

ಯುಧಿಷ್ಠಿರ! ನೀನು ಗಂಗಾಪುತ್ರನಾದ, ಭಯಂಕರಪರಾಕ್ರಮನಾದ

ಭೀಷ್ಮನ ಬಳಿಗೆ ಹೋಗಿ ಅವನ ಪಾದಗಳಿಗೆರಗಿ ನಿನ್ನ ಮನೋಗತವಾಗಿರುವ ಸಂದೇಹಗಳನ್ನು ಕೇಳು.

**ಚಾತುರ್ವಿದ್ಯಂ ಚಾತುರ್ಹೋತ್ರಂ ಚಾತುರಾಶ್ರಮ್ಯಮೇವ ಚ ।**
**ರಾಜಧರ್ಮಾಂಶ್ಚ ನಿಖಿಲಾನ್ಪೃಚ್ಛೈನಂ ಪೃಥಿವೀಪತೇ ॥೨೨॥**

ಭೂಪಾಲನೇ! ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ವಿದ್ಯೆಗಳನ್ನೂ, ಹೋತಾ-ಉದ್ಗಾತಾ-ಬ್ರಹ್ಮಾ ಮತ್ತು ಅಧ್ವರ್ಯು–ಈ ನಾಲ್ವರಿಗೆ ಸಂಬಂಧಿಸಿದ ಯಜ್ಞಾದಿಕರ್ಮಗಳನ್ನೂ, ಬ್ರಹ್ಮಚರ್ಯ-ಗೃಹಸ್ಥ-ವಾನಪ್ರಸ್ಥ ಮತ್ತು ಸಂನ್ಯಾಸಗಳೆಂಬ ನಾಲ್ಕು ಆಶ್ರಮಧರ್ಮಗಳನ್ನೂ, ಅಖಿಲವಾದ ರಾಜಧರ್ಮಗಳನ್ನೂ ಅವನಿಂದ ಕೇಳಿ ತಿಳಿದುಕೋ.

**ತಸ್ಮಿನ್ನಸ್ತಮಿತೇ ಭೀಷ್ಮೇ ಕೌರವಾಣಾಂ ಧುರಂಧರೇ ।**
**ಜ್ಞಾನಾನ್ಯಸ್ತಂ ಗಮಿಷ್ಯನ್ತಿ ತಸ್ಮಾತ್ತ್ವಾಂ ಚೋದಯಾಮ್ಯಹಮ್ ॥೨೩॥**

ಕೌರವಶ್ರೇಷ್ಠನಾದ ಭೀಷ್ಮನು ಅಸ್ತಂಗತನಾಗಲಾಗಿ–ಸಕಲಜ್ಞಾನಗಳೂ ಅವನೊಡನೆಯೇ ಅಸ್ತಮಿಸಿಬಿಡುತ್ತವೆ. (ಹೋಗಿಬಿಡುತ್ತವೆ.) ಈ ಕಾರಣದಿಂದಲೇ ಅವನ ಬಳಿಗೆ ಹೋಗಿ ಧರ್ಮಾರ್ಥಗಳ ವಿಷಯವಾಗಿ ಪ್ರಶ್ನಿಸುವಂತೆ ನಾನು ನಿನ್ನನ್ನು ಪ್ರಚೋದಿಸುತ್ತಿದ್ದೇನೆ."

ಜನಮೇಜಯ! ಭಗವಾನ್ ವಾಸುದೇವನು ಹೇಳಿದ ಯಥಾರ್ಥವಾದ ಮತ್ತು ಶ್ರೇಷ್ಠವಾದ ಮಾತುಗಳನ್ನು ಕೇಳಿ ಧರ್ಮಜ್ಞನಾದ ಯುಧಿಷ್ಠಿರನು ಕಣ್ಣೀರಿಡುತ್ತಾ ಗದ್ಗದಧ್ವನಿಯಿಂದ ಶ್ರೀಕೃಷ್ಣನೊಡನೆ ಹೇಳಿದನು : "ಮಾಧವ! ಭೀಷ್ಮನ ಪ್ರಭಾವದ ವಿಷಯವಾಗಿ ನೀನು ಯಾವ ಮಾತುಗಳನ್ನಾಡಿದೆಯೋ ಅದು ಹಾಗೆಯೇ ಸರಿ. ಈ ವಿಷಯದಲ್ಲಿ ನನಗೆ ಕಿಂಚಿತ್ತಾದರೂ ಸಂದೇಹವಿಲ್ಲ. ಮಹಾದ್ಯುತಿಮಂತನೇ! ನಾನು ಮಹಾತ್ಮರಾದ ಬ್ರಾಹ್ಮಣರ ಮುಖದಿಂದಲೇ ಭೀಷ್ಮನ ಮಹಾಸೌಭಾಗ್ಯವನ್ನೂ ಮತ್ತು ಪ್ರಭಾವವನ್ನೂ ಕೇಳಿ ತಿಳಿದುಕೊಂಡಿರುತ್ತೇನೆ. ಯಾದವನಂದನನೇ! ಶತ್ರುಸೂದನನೇ! ನೀನು ಎಲ್ಲ ಲೋಕಗಳನ್ನೂ ಸೃಷ್ಟಿಮಾಡಿದವನೇ ಆಗಿರುವೆ. ಆದುದರಿಂದ ನೀನು ಯಾವ ವಿಷಯವನ್ನು ಹೇಳುವೆಯೋ ಆ ವಿಷಯವಾಗಿ ಪುನಃ ಪರ್ಯಾಲೋಚಿಸಬೇಕಾದ ಅವಶ್ಯಕತೆಯೇ ಇರುವು

ದಿಲ್ಲ. ನೀನು ನನ್ನಲ್ಲಿ ಅನುಗ್ರಹಬುದ್ಧಿಯನ್ನೇನಾದರೂ ಇಟ್ಟಿರುವುದಾದರೆ ನಿನ್ನನ್ನೇ ಮುಂದೆಮಾಡಿಕೊಂಡು ಭೀಷ್ಮನ ಬಳಿಗೆ ನಾವೆಲ್ಲರೂ ಹೋಗ ಬೇಕೆಂಬುದು ನನ್ನ ಅಭಿಪ್ರಾಯವಾಗಿದೆ. ಸೂರ್ಯನು ಉತ್ತರದಿಕ್ಕಿನ ಕಡೆಗೆ ತಿರುಗಿದೊಡನೆಯೇ ಭೀಷ್ಮನು ಪುಣ್ಯಲೋಕಗಳಿಗೆ ಹೊರಟುಹೋಗುತ್ತಾನೆ. ಆದುದರಿಂದ ಈ ಸಮಯದಲ್ಲವನು ನಿನ್ನನ್ನು ಸಂದರ್ಶಿಸುವುದು ಯೋಗ್ಯ ವಾಗಿಯೇ ಇದೆ. ಆದಿದೇವನಾದ, ಕ್ಷರಾಕ್ಷರಾತ್ಮನಾದ ನಿನ್ನ ದಿವ್ಯದರ್ಶನದ ಲಾಭವು ಭೀಷ್ಮನಿಗೆ ಲಭಿಸುವಂತಾಗಲಿ. ಏಕೆಂದರೆ : ನೀನು ಬ್ರಹ್ಮಮಯನೂ ಜ್ಞಾನನಿಧಿಯೂ ಆಗಿರುವೆ."

ಜನಮೇಜಯ! ಧರ್ಮರಾಜನು ಹೇಳಿದ ಮಾತುಗಳನ್ನು ಕೇಳಿ ಮಧುಸೂದನನು ಪಕ್ಕದಲ್ಲಿಯೇ ಕುಳಿತಿದ್ದ ಸಾತ್ಯಕಿಗೆ ರಥವನ್ನು ಸಜ್ಜು ಗೊಳಿಸುವಂತೆ ಹೇಳಿದನು. ಕೇಶವನು ಹೀಗೆ ಹೇಳಿದೊಡನೆಯೇ ಸಾತ್ಯಕಿಯು ಶ್ರೀಕೃಷ್ಣನ ಸಮೀಪದಿಂದ ಹೊರಟು ಹೊರಕ್ಕೆ ಹೋಗಿ ದಾರುಕನನ್ನು ಸಂಧಿಸಿ ಅವನೊಡನೆ ಶ್ರೀಕೃಷ್ಣನ ರಥವನ್ನು ಸಜ್ಜುಗೊಳಿಸುವಂತೆ ಹೇಳಿದನು.

ರಾಜಸಿಂಹನೇ! ಜನಮೇಜಯ! ಸಾತ್ಯಕಿಯು ಹೇಳಿದ ಮಾತನ್ನು ಕೇಳಿ ದಾರುಕನು ಮರಕತ, ಚಂದ್ರಕಾಂತ ಮತ್ತು ಸೂರ್ಯಕಾಂತಮಣಿಗಳ ಜ್ಯೋತಿರ್ಮಯವಾದ ತರಂಗಗಳಿಂದ ವಿಭೂಷಿತವಾಗಿದ್ದ, ಸುವರ್ಣ ಭೂಷಿತವಾದ ಅಂಗಗಳನ್ನು ಹೊಂದಿದ್ದ, ಸುವರ್ಣದ ಪಟ್ಟಿಗಳಿಂದ ನಿಬದ್ಧ ವಾದ ಚಕ್ರಗಳಿಂದ ಕೂಡಿದ್ದ, ಸೂರ್ಯನ ಕಿರಣಗಳಿಗೆ ಸಮಾನವಾದ ಪ್ರಭೆ ಯಿಂದ ಕೂಡಿದ್ದ, ಶೀಘ್ರಗಾಮಿಯಾದ, ಒಳಭಾಗದಲ್ಲಿಯೂ ವಿಚಿತ್ರವಾದ ಮತ್ತು ನಾನಾವಿಧವಾದ ಮಣಿಗಳಿಂದ ಸಮಲಂಕೃತವಾಗಿದ್ದ, ಆಗತಾನೇ ಹುಟ್ಟಿದ ಸೂರ್ಯನಂತೆ ತೇಜೋಯುಕ್ತವಾಗಿದ್ದ, ವಿಚಿತ್ರವಾದ ಗರುಡಧ್ವಜ ವನ್ನೂ ಮತ್ತು ಚಿತ್ರ-ವಿಚಿತ್ರವಾದ ಪತಾಕೆಗಳನ್ನೂ ಹೊಂದಿದ್ದ, ಸುವರ್ಣಾ ಭರಣಗಳಿಂದ ಭೂಷಿತವಾದ, ಮನೋವೇಗಗತಿಯುಳ್ಳ ಸುಗ್ರೀವ-ಶೈಬ್ಯಾದಿ ಶ್ರೇಷ್ಠಾಶ್ವಗಳಿಂದ ಸಜ್ಜಾಗಿದ್ದ ರಥವನ್ನು ಸಿದ್ಧಗೊಳಿಸಿ, ಶ್ರೀಕೃಷ್ಣನ ಬಳಿಗೆ ಹೋಗಿ ಬದ್ಧಾಂಜಲಿಯಾಗಿ ನಿಂತು ರಥವು ಸಿದ್ಧವಾಗಿದೆಯೆಂದು ನಿವೇದಿಸಿ ಕೊಂಡನು."

ಳ೬ನೆಯ ಅಧ್ಯಾಯವು ಮುಗಿಯಿತು.

## ಭೀಷ್ಮನು ಶ್ರೀಕೃಷ್ಣನನ್ನು ಸ್ತುತಿಸಿದುದು
## (ಭೀಷ್ಮಸ್ತವರಾಜಃ)

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

**ಶರತಲ್ಪೇ ಶಯಾನಸ್ತು ಭರತಾನಾಂ ಪಿತಾಮಹಃ ।**
**ಕಥಮುತ್ಸೃಷ್ಟವಾನ್ದೇಹಂ ಕಂ ಚ ಯೋಗಮಧಾರಯತ್ ॥೧॥**

"ವೈಶಂಪಾಯನರೇ! ಶರತಲ್ಪದಲ್ಲಿ ಮಲಗಿದ್ದ, ಭರತಕುಲಪಿತಾಮಹನಾದ ಭೀಷ್ಮನು ತನ್ನ ದೇಹವನ್ನು ಹೇಗೆ ತ್ಯಾಗಮಾಡಿದನು? ಮತ್ತು ಆ ಸಮಯದಲ್ಲವನು ಯಾವ ಯೋಗವನ್ನು ಧಾರಣೆಮಾಡಿದ್ದನು?"

"ಮಹಾರಾಜ! ಕುರುಕುಲಪುಂಗವನೇ! ಮಹಾತ್ಮನಾದ ಭೀಷ್ಮನು ಹೇಗೆ ದೇಹವನ್ನು ಪರಿತ್ಯಾಗಮಾಡಿದನೆಂಬ ವೃತ್ತಾಂತವನ್ನು ನೀನು ಶುಚೀಭೂತನಾಗಿ, ಏಕಾಗ್ರಚಿತ್ತನಾಗಿ ಸಾವಧಾನದಿಂದ ಕೇಳು.

**ನಿವೃತ್ತಮಾತ್ರೇ ತ್ವಯನ ಉತ್ತರೇ ವೈ ದಿವಾಕರೇ ।**
**ಸಮಾವೇಶಯದಾತ್ಮಾನಮಾತ್ಮನ್ಯೇವ ಸಮಾಹಿತಃ ॥೩॥**

ಸೂರ್ಯನು ದಕ್ಷಿಣದ ಕಡೆಯಿಂದ (ದಕ್ಷಿಣಾಯನವನ್ನು ಬಿಟ್ಟು) ಉತ್ತರದ ಕಡೆಗೆ (ಉತ್ತರಾಯಣಕ್ಕೆ) ತಿರುಗಿದೊಡನೆಯೇ ಭೀಷ್ಮನು ಏಕಾಗ್ರಚಿತ್ತನಾಗಿ ತನ್ನ ಮನಸ್ಸನ್ನು ಬುದ್ಧಿಯೊಡನೆ ಆತ್ಮನಲ್ಲಿ ಲೀನಗೊಳಿಸಿದನು.*

**ವಿಕೀರ್ಣಾಂಶುರಿವಾದಿತ್ಯೋ ಭೀಷ್ಮಃ ಶರಶತೈಶ್ಚಿತಃ ।**
**ಶುಶುಭೇ ಪರಯಾ ಲಕ್ಷ್ಮ್ಯಾ ವೃತೋ ಬ್ರಾಹ್ಮಣಸತ್ತಮೈಃ ॥೪॥**

ನೂರಾರು ಬಾಣಗಳಿಂದ ಚುಚ್ಚಲ್ಪಟ್ಟಿದ್ದ ಭೀಷ್ಮನು ಕಿರಣಗಳನ್ನು

---

* ಶುಕ್ಲಪಕ್ಷಸ್ಯ ಚಾಷ್ಟಮ್ಯಾಂ ಮಾಘಮಾಸಸ್ಯ ಪಾರ್ಥಿವ ।
ಪ್ರಾಜಾಪತ್ಯೇ ಚ ನಕ್ಷತ್ರೇ ಮಧ್ಯಂ ಪ್ರಾಪ್ತೇ ದಿವಾಕರೇ ॥

ಮಾಘಶುಕ್ಲ ಅಷ್ಟಮಿಯಂದು ರೋಹಿಣೀನಕ್ಷತ್ರದಲ್ಲಿ ಮಧ್ಯಾಹ್ನಸಮಯದಲ್ಲಿ ಭೀಷ್ಮನು ದೇಹತ್ಯಾಗಮಾಡಲು ಧ್ಯಾನಯೋಗದಲ್ಲಿ ಕುಳಿತನೆಂದು ಕೆಲವು ಪ್ರತಿಗಳಲ್ಲಿ ಪಾಠವಿದೆ.

ಪ್ರಸರಿಸಿರುವ ಸೂರ್ಯನಂತೆಯೇ ಕಾಣುತ್ತಿದ್ದನು. ಬ್ರಾಹ್ಮಣಶ್ರೇಷ್ಠರಿಂದ ಸುತ್ತುವರಿಯಲ್ಪಟ್ಟಿದ್ದ ಭೀಷ್ಮನು ಅಪಾರವಾದ ಕಾಂತಿಯಿಂದ ಪ್ರಕಾಶಿಸಿದನು.

ವೇದಗಳೆಲ್ಲವನ್ನೂ ಸಂಪೂರ್ಣವಾಗಿ ತಿಳಿದಿದ್ದ ವ್ಯಾಸರು, ದೇವರ್ಷಿಗಳಾದ ನಾರದರು, ದೇವಸ್ಥಾನರು, ವಾತ್ಸ್ಯರು, ಅಶ್ಮಕರು, ಸುಮಂತುಗಳು, ಜೈಮಿನಿಗಳು, ಮಹಾತ್ಮರಾದ ಪೈಲರು, ಶಾಂಡಿಲ್ಯರು, ದೇವಲರು, ಬುದ್ಧಿವಂತರಾದ ಮೈತ್ರೇಯರು, ಅಸಿತರು, ವಸಿಷ್ಠರು, ಮಹಾತ್ಮರಾದ ಕೌಶಿಕರು (ವಿಶ್ವಾಮಿತ್ರರು ), ಹಾರಿತರು, ಲೋಮಶರು, ಬುದ್ಧಿವಂತರಾದ ದತ್ತಾತ್ರೇಯರು, ಬೃಹಸ್ಪತಿಗಳು, ಶುಕ್ರರು, ಮಹಾಮುನಿಗಳಾದ ಚ್ಯವನರು, ಸನತ್ಕುಮಾರರು, ಕಪಿಲರು, ವಾಲ್ಮೀಕಿಗಳು, ತುಂಬುರರು, ಕುರುಗಳು, ಮೌದ್ಗಲ್ಯರು, ಭೃಗುವಂಶೀಯರಾದ ಪರಶುರಾಮರು, ಮಹಾಮುನಿಗಳಾದ ತೃಣಬಿಂದುಗಳು, ಪಿಪ್ಪಲಾದರು, ವಾಯುಗಳು, ಸಂವರ್ತರು, ಪುಲಹರು, ಕಚರು, ಕಶ್ಯಪರು, ಪುಲಸ್ತ್ಯರು, ಕ್ರತುಗಳು, ದಕ್ಷರು, ಪರಾಶರರು, ಮರೀಚಿಗಳು, ಅಂಗಿರಸರು, ಕಾಶ್ಯರು, ಗೌತಮರು, ಗಾಲವಮುನಿಗಳು, ಧೌಮ್ಯರು, ವಿಭಾಂಡರು, ಮಾಂಡವ್ಯರು, ಧೌಮ್ರರು, ಕೃಷ್ಣಾನುಭೌತಿಕರು, ಶ್ರೇಷ್ಠ ಬ್ರಾಹ್ಮಣರಾದ ಉಲೂಕರು, ಮಹಾಮುನಿಗಳಾದ ಮಾರ್ಕಂಡೇಯರು, ಭಾಸ್ಕರಿಗಳು, ಪೂರಣರು, ಕೃಷ್ಣ ಮತ್ತು ಪರಮಧಾರ್ಮಿಕನಾದ ಸೂತ–ಇವರೆಲ್ಲರೂ ಭೀಷ್ಮನನ್ನು ಸುತ್ತುವರಿದು ಕುಳಿತಿದ್ದರು. ಇವರೇ ಅಲ್ಲದೇ ಶ್ರದ್ಧಾ-ದಮ-ಶಮೋಪೇತರಾದ ಮಹಾಭಾಗ್ಯಶಾಲಿಗಳಾದ ಮಹಾತ್ಮರಾದ ಇನ್ನೂ ಅನೇಕ ಮುನಿಗಳ ಸಮೂಹಗಳಿಂದ ಸುತ್ತುವರಿಯಲ್ಪಟ್ಟಿದ್ದ ಭೀಷ್ಮನು–ಗ್ರಹಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆಯೇ–ಕಾಣುತ್ತಿದ್ದನು. ಬಾಣಗಳ ಹಾಸಿಗೆಯಲ್ಲಿದ್ದ ಪುರುಷವ್ಯಾಘ್ರನಾದ ಭೀಷ್ಮನು ಶುಚಿಯಾಗಿ ಮತ್ತು ಬದ್ಧಾಂಜಲಿಯಾಗಿ ಕರ್ಮದಿಂದಲೂ, ಮನಸ್ಸಿನಿಂದಲೂ ಮತ್ತು ಮಾತಿನಿಂದಲೂ ಶ್ರೀಕೃಷ್ಣನನ್ನು ಧ್ಯಾನಿಸತೊಡಗಿದನು.

**ಸ್ವರೇಣ ಹೃಷ್ಟಪುಷ್ಟೇನ ತುಷ್ಟಾವ ಮಧುಸೂದನಮ್ ।**
**ಯೋಗೇಶ್ವರಂ ಪದ್ಮನಾಭಂ ವಿಷ್ಣುಂ ಜಿಷ್ಣುಂ ಜಗತ್ಪತಿಮ್ ॥೧೪॥**

**ಕೃತಾಞ್ಜಲಿಪುಟೋ ಭೂತ್ವಾ ವಾಗ್ವಿದಾಂ ಪ್ರವರಃ ಪ್ರಭುಃ ।**
**ಭೀಷ್ಮಃ ಪರಮಧರ್ಮಾತ್ಮಾ ವಾಸುದೇವಮಥಾಸ್ತುವತ್ ॥೧೫॥**

ವಾಗ್ಮಿಗಳಲ್ಲಿ ಶ್ರೇಷ್ಠನಾದ, ಪ್ರಭುವಾದ, ಪರಮಧರ್ಮಾತ್ಮನಾದ, ಭೀಷ್ಮನು ಕೈಗಳೆರಡನ್ನೂ ಜೋಡಿಸಿ ಸಂಪುಟವನ್ನಾಗಿ ಮಾಡಿಕೊಂಡು ಹೃಷ್ಟ-ಪುಷ್ಟವಾದ ಸ್ವರದಿಂದ ( ಸ್ಪಷ್ಟವಾದ ಉಚ್ಚಸ್ವರದಿಂದ ) ಮಧುಹಂತಕನಾದ, ಯೋಗಿಗಳಿಗೆ ಈಶ್ವರನಾದ, ಕಮಲವನ್ನು ನಾಭಿಯಲ್ಲಿ ಹೊಂದಿರುವ, ಸರ್ವವ್ಯಾಪಕನಾದ, ಜಯಶೀಲನಾದ, ಸಕಲಜಗತ್ತಿಗೂ ಒಡೆಯನಾದ, ವಸುದೇವನ ಮಗನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡಿ, ಆ ದಿವ್ಯಸ್ತೋತ್ರದಿಂದಲೇ ಪರಮಪುರುಷನಾದ ಶ್ರೀಕೃಷ್ಣನನ್ನು ಸಂತೃಪ್ತಿಗೊಳಿಸಿದನು.

## ಭೀಷ್ಮಸ್ತವರಾಜವು

ಭೀಷ್ಮ ಉವಾಚ :

**ಆರಿರಾಧಯಿಷುಃ ಕೃಷ್ಣಂ ವಾಚಂ ಜಿಗದಿಷಾಮಿ ಯಾಮ್ ।**
**ತಯಾ ವ್ಯಾಸಸಮಾಸಿನ್ಯಾ ಪ್ರೀಯತಾಂ ಪುರುಷೋತ್ತಮಃ ॥೧೬॥**

ಭೀಷ್ಮನು ಹೇಳುತ್ತಾನೆ :

"ಪರಮಪುರುಷನಾದ ಶ್ರೀಕೃಷ್ಣನನ್ನು ಆರಾಧಿಸುವ ಇಚ್ಛೆಯುಳ್ಳ ನಾನು, ವಿವರವಾದ ಮತ್ತು ಸಂಕ್ಷೇಪವಾದ ಯಾವ ವಾಣಿಯಿಂದ ಅವನನ್ನು ಸ್ತೋತ್ರಮಾಡುವೆನೋ–ಆ ವಾಣಿಯಿಂದಲೇ ಮಹಾನುಭಾವನಾದ ಶ್ರೀಕೃಷ್ಣನು ಸುಪ್ರೀತನಾಗಲಿ!

**ಶುಚಿಂ ಶುಚಿಪದಂ ಹಂಸಂ ತತ್ಪದಂ ಪರಮೇಷ್ಠಿನಮ್ ।**
**ಯುಕ್ತ್ವಾ ಸರ್ವಾತ್ಮನಾತ್ಮಾನಂ ತಂ ಪ್ರಪದ್ಯೇ ಪ್ರಜಾಪತಿಮ್ ॥೧೭॥**

ಮನಸ್ಸನ್ನು ಸರ್ವಪ್ರಯತ್ನದಿಂದಲೂ ಹೃದಿಸ್ಥನಾಗಿರುವ ಶ್ರೀಕೃಷ್ಣನಲ್ಲಿಯೇ ಯೋಜಿಸಿ–ಪರಿಶುದ್ಧನಾದ, ಪರಿಶುದ್ಧಮಾರ್ಗನಾದ, ಹಂಸರೂಪನಾದ, ' ತತ್ ' ಪದಲಕ್ಷ್ಯನಾದ, ಪರಮೇಷ್ಠಿಯಾದ, ಪ್ರಜಾಪತಿಯಾದ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

**ಅನಾದ್ಯನ್ತಂ ಪರಂ ಬ್ರಹ್ಮ ನ ದೇವಾ ನರ್ಷಯೋ ವಿದುಃ ।**
**ಏಕೋ ಯಂ ವೇದ ಭಗವಾನ್ಧಾತಾ ನಾರಾಯಣೋ ಹರಿಃ ॥೧೮॥**

ಆದಿ ಮತ್ತು ಅಂತ್ಯಗಳೇ ಇಲ್ಲದಿರುವ, ಪರಬ್ರಹ್ಮಸ್ವರೂಪನಾದ ಶ್ರೀಕೃಷ್ಣಪರಮಾತ್ಮನನ್ನು ದೇವತೆಗಳಾಗಲೀ ಋಷಿಗಳಾಗಲೀ ತಿಳಿದು ಕೊಂಡಿರುವುದಿಲ್ಲ. ಎಲ್ಲರ ಧಾರಣ-ಪೋಷಣಗಳನ್ನೂ ಮಾಡುವ ಏಕ ಮಾತ್ರನಾದ ನಾರಾಯಣನು ಅಥವಾ ಶ್ರೀಹರಿಯು ಶ್ರೀಕೃಷ್ಣನಾರೆಂಬುದನ್ನು ತಿಳಿದುಕೊಂಡಿರುತ್ತಾನೆ.

**ನಾರಾಯಣಾದೃಷಿಗಣಾಸ್ತಥಾ ಸಿದ್ಧಮಹೋರಗಾಃ ।**
**ದೇವಾ ದೇವರ್ಷಯಶ್ಚೈವ ಯಂ ವಿದುಃ ಪರಮವ್ಯಯಮ್ ॥೧೯॥**

ಆ ನಾರಾಯಣನಿಂದಲೇ ಋಷಿಗಣಗಳೂ, ಸಿದ್ಧರೂ, ಮಹಾಸರ್ಪ ಗಳೂ, ದೇವತೆಗಳೂ ಮತ್ತು ದೇವರ್ಷಿಗಳೂ–ಶ್ರೀಕೃಷ್ಣನನ್ನು ಅವಿನಾಶಿ ಯೆಂದೂ, ಶ್ರೇಷ್ಠನೆಂದೂ, ತಿಳಿದುಕೊಂಡಿರುತ್ತಾರೆ.

**ದೇವದಾನವಗನ್ಧರ್ವಾ ಯಕ್ಷರಾಕ್ಷಸಪನ್ನಗಾಃ ।**
**ಯಂ ನ ಜಾನನ್ತಿ ಕೋ ಹ್ಯೇಷ ಕುತೋ ವಾ ಭಗವಾನಿತಿ ॥೨೦॥**

ದೇವ-ದಾನವ-ಗಂಧರ್ವರಾಗಲೀ, ಯಕ್ಷ-ರಾಕ್ಷಸ-ಪನ್ನಗರಾಗಲೀ ಈ ಶ್ರೀಕೃಷ್ಣಭಗವಂತನು "ಯಾರು! ಎಲ್ಲಿಂದ ಬಂದನು?"–ಎಂಬುದನ್ನು ಅರಿತಿಲ್ಲ.

**ಯಸ್ಮಿನ್ವಿಶ್ವಾನಿ ಭೂತಾನಿ ತಿಷ್ಠನ್ತಿ ಚ ವಿಶನ್ತಿ ಚ ।**
**ಗುಣಭೂತಾನಿ ಭೂತೇಶೇ ಸೂತ್ರೇ ಮಣಿಗಣಾ ಇವ ॥೨೧॥**

ಪರಾತ್ಪರನಾದ ಶ್ರೀಕೃಷ್ಣನಲ್ಲಿಯೇ ಸಮಸ್ತಪ್ರಾಣಿಗಳೂ ಪ್ರಾದುರ್ಭ ವಿಸುತ್ತವೆ ಮತ್ತು ಲಯಹೊಂದುತ್ತವೆ. ದಾರದಲ್ಲಿ ಪೋಣಿಸಲ್ಪಟ್ಟ ಮಣಿ ಗಳಂತೆ–ಭೂತೇಶನಾದ ಈ ಶ್ರೀಕೃಷ್ಣಪರಮಾತ್ಮನಲ್ಲಿ ಅವನ ಗುಣಗಳಾಗಿ ಎಲ್ಲ ಪ್ರಾಣಿಗಳೂ ಸೇರಿಕೊಂಡಿವೆ.

**ಯಸ್ಮಿನ್ನಿತ್ಯೇ ತತೇ ತನ್ತೌ ದೃಢೇ ಸ್ರಗಿವ ತಿಷ್ಠತಿ ।**
**ಸದಸದ್ಗ್ರಥಿತಂ ವಿಶ್ವಂ ವಿಶ್ವಾಙ್ಗೇ ವಿಶ್ವಕರ್ಮಣಿ ॥೨೨॥**

ವಿಶ್ವವನ್ನೇ ಅವಯವಗಳ ರೂಪದಲ್ಲಿ ಹೊಂದಿರುವ (ವಿಶ್ವಾಂಗನಾದ), ವಿಶ್ವವನ್ನು ಸೃಷ್ಟಿಸಿರುವ ( ವಿಶ್ವಕರ್ಮನಾದ ), ಶಾಶ್ವತನಾದ ಈ ಶ್ರೀಕೃಷ್ಣನಲ್ಲಿ ಕಾರ್ಯ-ಕಾರಣರೂಪವಾದ ಈ ವಿಶ್ವವು–ಗಟ್ಟಿಯಾದ ದಾರದಲ್ಲಿ ಕಟ್ಟಿರುವ ಹೂವಿನ ಮಾಲೆಯಂತೆ–ಒಟ್ಟಿಗೆ ಸೇರಿಸಿ ಕಟ್ಟಲ್ಪಟ್ಟಿದೆ.

**ಹರಿಂ ಸಹಸ್ರಶಿರಸಂ ಸಹಸ್ರಚರಣೇಕ್ಷಣಮ್ ।**
**ಸಹಸ್ರಬಾಹುಮುಕುಟಂ ಸಹಸ್ರವದನೋಜ್ಜ್ವಲಮ್ ॥೨೩॥**

ಸಾವಿರ ( ಅಪಾರ ) ತಲೆಗಳುಳ್ಳ, ಸಾವಿರ ಕಾಲುಗಳುಳ್ಳ, ಸಾವಿರ ಕಣ್ಣುಗಳುಳ್ಳ, ಸಾವಿರ ತೋಳುಗಳನ್ನು ಹೊಂದಿರುವ, ಸಾವಿರ ಕಿರೀಟಗಳನ್ನು ಧರಿಸಿರುವ, ಉಜ್ವಲವಾದ ಸಾವಿರಮುಖಗಳನ್ನು ಹೊಂದಿರುವ ವಿಶ್ವರೂಪನಾದ ಶ್ರೀಹರಿಯನ್ನು ಶರಣುಹೊಂದುತ್ತೇನೆ.

**ಪ್ರಾಹುರ್ನಾರಾಯಣಂ ದೇವಂ ಯಂ ವಿಶ್ವಸ್ಯ ಪರಾಯಣಮ್ ।**
**ಅಣೀಯಸಾಮಣೀಯಾಂಸಂ ಸ್ಥವಿಷ್ಠಂ ಚ ಸ್ಥವೀಯಸಾಮ್ ।**
**ಗರೀಯಸಾಂ ಗರಿಷ್ಠಂ ಚ ಶ್ರೇಷ್ಠಂ ಚ ಶ್ರೇಯಸಾಮಪಿ ॥೨೪॥**

ವಿಶ್ವಕ್ಕೇ ಆಶ್ರಯಭೂತನಾದ ಈ ದೇವನನ್ನು ನಾರಾಯಣನೆಂದೂ ಕರೆಯುತ್ತಾರೆ. ಇವನು ವಿಶ್ವದಲ್ಲಿರುವ ಸೂಕ್ಷ್ಮವಸ್ತುಗಳ ಮಧ್ಯದಲ್ಲಿ ಸೂಕ್ಷ್ಮತಮನಾಗಿರತಕ್ಕವನು ; ಸ್ಥೂಲವಸ್ತುಗಳ ಮಧ್ಯದಲ್ಲಿ ಸ್ಥೂಲತಮನಾಗಿರತಕ್ಕವನು ; ಭಾರವಸ್ತುಗಳ ಮಧ್ಯದಲ್ಲಿ ಭಾರತಮವಾಗಿರತಕ್ಕವನು ; ಶ್ರೇಷ್ಠವಸ್ತುಗಳ ಮಧ್ಯದಲ್ಲಿ ಶ್ರೇಷ್ಠತಮನಾಗಿರತಕ್ಕವನು. ಇಂತಹ ಶ್ರೀಕೃಷ್ಣ ಪರಮಾತ್ಮನಿಗೆ ಶರಣಾಗತನಾಗುತ್ತೇನೆ.

**ಯಂ ವಾಕೇಷ್ವನುವಾಕೇಷು ನಿಷತ್ಸೂಪನಿಷತ್ಸು ಚ ।**
**ಗೃಣನ್ತಿ ಸತ್ಯಕರ್ಮಾಣಂ ಸತ್ಯಂ ಸತ್ಯೇಷು ಸಾಮಸು* ॥೨೫॥**

---

* ಈ ಶ್ಲೋಕದ ಅರ್ಥವು ಕ್ಲಿಷ್ಟವೇ ಸರಿ. ವಾಕಂ ಎಂಬ ಪದವಿದೆ. ಇದಕ್ಕೆ ಬಕ ಪಕ್ಷಿಗಳ ಹಾರಾಟ–ಎಂದು ಅರ್ಥವಾಗುತ್ತದೆ. ನಿಷತ್ ಎಂಬ ಪದವು ನಿಘಂಟುವಿನಲ್ಲಿಲ್ಲ.

ವಾಕಗಳಲ್ಲಿಯೂ (ಕರ್ಮಪ್ರಕಾಶಕವಾದ ಮಂತ್ರಗಳಲ್ಲಿಯೂ), ಅನುವಾಕಗಳಲ್ಲಿಯೂ (ಮಂತ್ರಾರ್ಥವಿವರಣಭೂತವಾದ ಬ್ರಾಹ್ಮಣವಾಕ್ಯ ಗಳಲ್ಲಿಯೂ), ನಿಷತ್ತುಗಳಲ್ಲಿಯೂ (ಕರ್ಮಾಂಗಗಳಿಗೆ ಸಂಬಂಧಿಸಿದ ದೇವತಾದಿಗಳನ್ನು ತಿಳಿಸುವ ವಾಕ್ಯಗಳಲ್ಲಿಯೂ), ಉಪನಿಷತ್ತುಗಳಲ್ಲಿಯೂ (ಶುದ್ಧಾತ್ಮ - ಪರಮಾತ್ಮಜ್ಞಾನಬೋಧಕವಚನಗಳಲ್ಲಿಯೂ) – ಯಾವನನ್ನು ಸತ್ಯಕರ್ಮನೆಂಬುದಾಗಿ ಸ್ತೋತ್ರಮಾಡುತ್ತಾರೆಯೋ – ಸತ್ಯಸಾಮಗಳಲ್ಲಿ (ಜ್ಯೇಷ್ಠಸಾಮಾದಿಗಳಲ್ಲಿ ) ಸತ್ಯನೆಂದು ಗಾನಮಾಡುತ್ತಾರೆಯೋ–ಅಂತಹ ಶ್ರೀಕೃಷ್ಣಪರಮಾತ್ಮನನ್ನು ಶರಣುಹೊಂದುತ್ತೇನೆ.

**ಚತುರ್ಭಿಶ್ಚತುರಾತ್ಮಾನಂ ಸತ್ತ್ವಸ್ಥಂ ಸಾತ್ವತಾಂ ಪತಿಮ್ ।**
**ಯಂ ದಿವ್ಯೈರ್ದೇವಮರ್ಚನ್ತಿ ಗುಹ್ಯೈಃ ಪರಮನಾಮಭಿಃ ॥೨೭॥**

ಚತುರಾತ್ಮನಾದ (ಪರಮಾತ್ಮ-ಜೀವ-ಮನೋಹಂಕಾರಗಳೆಂಬ ನಾಲ್ಕ ರಿಂದ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧರೆಂಬ ನಾಲ್ಕು ರೂಪ ಗಳುಳ್ಳವನಾಗಿ) ಬುದ್ಧಿಯಲ್ಲಿ ಪ್ರತಿಷ್ಠಿತನಾಗಿರುವ, ಸಾತ್ವತರ (ಪಾಂಚರಾತ್ರರ) ಒಡೆಯನಾದ, ದೇವದೇವನಾದ ಯಾವ ಶ್ರೀಕೃಷ್ಣನನ್ನು ದಿವ್ಯವಾದ, ಅತಿರಹಸ್ಯವಾದ, ಶ್ರೇಷ್ಠನಾಮಧೇಯಗಳಿಂದ ಪೂಜಿಸುತ್ತಾರೆಯೋ– ಅಂತಹ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

**ಯಸ್ಮಿನ್ನಿತ್ಯಂ ತಪಸ್ತಪ್ತಂ ಯದಙ್ಗೇಷ್ವನುತಿಷ್ಠತಿ ।**
**ಸರ್ವಾತ್ಮಾ ಸರ್ವವಿತ್ಸರ್ವಃ ಸರ್ವಜ್ಞಃ ಸರ್ವಭಾವನಃ ॥೨೮॥**

ಯಾವನ ಅನುಗ್ರಹಕ್ಕಾಗಿ ನಿರಂತರವಾಗಿ ತಪಸ್ಸನ್ನು ಆಚರಿಸು ವರೋ–ಯಾವನು ಎಲ್ಲರ ಹೃದಯಗಳಲ್ಲಿಯೂ ವಿರಾಜಮಾನನಾಗಿರು

---

ಅನುವಾಕಗಳೆಂದರೆ ಗಾನರಹಿತವಾದ ಋಗ್ಯಜುರ್ವೇದಗಳು ಎಂಬ ಅರ್ಥವಿದೆ. ಉಪನಿಷತ್ ಎಂಬುದಕ್ಕೆ ಬ್ರಹ್ಮಪ್ರತಿಪಾದಕವಾದ ಗ್ರಂಥಗಳು–ಎಂಬ ಅರ್ಥವೂ ಇದೆ. ಇಲ್ಲಿ ಪಾಠಾಂತರವೂ ಇರುವುದಿಲ್ಲ. ವ್ಯಾಖ್ಯಾನಕಾರರ ವ್ಯಾಖ್ಯೆಯನ್ನು ಅನುಸರಿಸಿ ಅರ್ಥಮಾಡಲಾಗಿದೆ. ವಾಕೇಷು–ಮನ್ತ್ರೇಷು (ಸಾಮಾನ್ಯತಃ ಕರ್ಮಪ್ರಕಾಶಕೇಷು) ಅನುವಾಕೇಷು–ಮನ್ತ್ರಾರ್ಥವಿವರಣಭೂತೇಷು ಬ್ರಾಹ್ಮಣವಾಕ್ಯೇಷು. ನಿಷತ್ಸು–ಕರ್ಮಾಙ್ಗಾದ್ಯವಬದ್ಧದೇವತಾದಿ ಜ್ಞಾನವಾಕ್ಯೇಷು, ಉಪನಿಷತ್ಸು–ಕೇವಲಾತ್ಮ ಜ್ಞಾಪಕವಾಕ್ಯೇಷು, ಗೃಣನ್ತಿ–ಧ್ಯಾಯನ್ತಿ, ಸತ್ಯಂ ಅಬಾಧಿತಂ, ಸತ್ಯೇಷು–ಅಬಾಧಿತಾ ರ್ಥೇಷು ಸಾಮಸು–ಜ್ಯೇಷ್ಠಸಾಮಾದಿಷು.

ವನೋ ಯಾವನು ಸಮಸ್ತರ ಆತ್ಮಸ್ವರೂಪನಾಗಿರುವನೋ–ಅಂತಹ ಸರ್ವಜ್ಞನೂ, ಸರ್ವಭಾವನನೂ, ಸರ್ವನೂ ಆಗಿರುವ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

**ಯಂ ದೇವಂ ದೇವಕೀ ದೇವೀ ವಸುದೇವಾದಜೀಜನಾತ್ ।**
**ಭೌಮಸ್ಯ ಬ್ರಹ್ಮಣೋ ಗುಪ್ತ್ಯೈ ದೀಪ್ತಮಗ್ನಿಮಿವಾರಣಿಃ ॥೨೯॥**

ಭೂಮಿಯಲ್ಲಿರುವ ಬ್ರಾಹ್ಮಣರನ್ನೂ, ವೇದಗಳನ್ನೂ ರಕ್ಷಿಸುವ ಸಲುವಾಗಿ–ಅರಣಿಯು ಮಂಥನದಾರುವಿನಿಂದ ಪ್ರದೀಪ್ತವಾದ ಅಗ್ನಿಯನ್ನು ಹುಟ್ಟಿಸುವಂತೆ–ದೇವಕೀದೇವಿಯು ವಸುದೇವನಿಂದ ಯಾವ ಪರದೈವವನ್ನು ಹಡೆದಳೋ–ಅಂತಹ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

**ಯಮನನ್ಯೋ ವ್ಯಪೇತಾಶೀರಾತ್ಮಾನಂ ವೀತಕಲ್ಮಷಮ್ ।**
**ದೃಷ್ಟ್ವಾನನ್ತ್ಯಾಯ ಗೋವಿನ್ದಂ ಪಶ್ಯತ್ಯಾತ್ಮಾನಮಾತ್ಮನಿ ॥೩೦॥**
**ಅತಿವಾಯ್ವಿನ್ದ್ರಕರ್ಮಾಣಮತಿಸೂರ್ಯಾತಿತೇಜಸಮ್ ।**
**ಅತಿಬುದ್ಧೀನ್ದ್ರಿಯಾತ್ಮಾನಂ ತಂ ಪ್ರಪದ್ಯೇ ಪ್ರಜಾಪತಿಮ್ ॥೩೧॥**

ಸಕಲವಿಧವಾದ ಕಾಮನೆಗಳನ್ನೂ ತ್ಯಾಗಮಾಡಿ, ಅವಿನಾಶಿಯಾದ ಮೋಕ್ಷಫಲದ ಉದ್ದೇಶವನ್ನಿಟ್ಟುಕೊಂಡು, ಪರಮಾತ್ಮಸ್ವರೂಪನಾದ ಕಲ್ಮಷರಹಿತನಾದ ಯಾವ ಗೋವಿಂದನನ್ನು ಅನನ್ಯಭಾವದಿಂದ ಬುದ್ಧಿಯ ಮೂಲಕವಾಗಿ ಸಾಧಕನು ನೋಡುತ್ತಾನೆಯೋ, ಯಾವನು ಇಂದ್ರ-ವಾಯುಗಳ ಕಾರ್ಯವನ್ನೂ ಮೀರಿಸಿ ಕಾರ್ಯಮಾಡುವನೋ, ಯಾವನು ತೇಜಸ್ಸಿನಿಂದ ಸೂರ್ಯನನ್ನೂ ಅತಿಕ್ರಮಿಸಿರುವನೋ, ಯಾವನು ಇಂದ್ರಿಯ-ಮನಸ್ಸು ಮತ್ತು ಬುದ್ಧಿಗಳಿಗೂ ಅತೀತನಾಗಿರುವನೋ–ಅಂತಹ ಪ್ರಜಾಪತಿ ಸ್ವರೂಪನಾದ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

**ಪುರಾಣೇ ಪುರುಷಂ ಪ್ರೋಕ್ತಂ ಬ್ರಹ್ಮ ಪ್ರೋಕ್ತಂ ಯುಗಾದಿಷು ।**
**ಕ್ಷಯೇ ಸಂಕರ್ಷಣಂ ಪ್ರೋಕ್ತಂ ತಮುಪಾಸ್ಯಮುಪಾಸ್ಮಹೇ ॥೩೨॥**

ಪುರಾಣಗಳಲ್ಲಿ ಪುರುಷನೆಂದು ಕರೆಯಲ್ಪಡುವ, ಯುಗಾದಿಗಳಲ್ಲಿ ಬ್ರಹ್ಮನೆಂದು ಕರೆಯಲ್ಪಡುವ, ಪ್ರಳಯಕಾಲದಲ್ಲಿ ಸಂಕರ್ಷಣನೆಂದು ಕರೆಯಲ್ಪಡುವ ಉಪಾಸ್ಯನಾದ ಶ್ರೀಕೃಷ್ಣನನ್ನು ಉಪಾಸನೆಮಾಡುತ್ತೇನೆ.

ಯಮೇಕಂ ಬಹುಧಾತ್ಮಾನಂ ಪ್ರಾದುರ್ಭೂತಮಧೋಕ್ಷಜಮ್ ।
ನಾನ್ಯಭಕ್ತಾಃ ಕ್ರಿಯಾವನ್ತೋ ಯಜನ್ತೇ ಸರ್ವಕಾಮದಮ್ ॥೩೩॥

ಯಮಾಹುರ್ಜಗತಃ ಕೋಶಂ ಯಸ್ಮಿನ್ಸನ್ನಿಹಿತಾಃ ಪ್ರಜಾಃ ।
ಯಸ್ಮಿಲ್ಲೋಕಾಃ ಸ್ಫುರನ್ತೀಮೇ ಜಲೇ ಶಕುನಯೋ ಯಥಾ ॥೩೪॥

ಋತಮೇಕಾಕ್ಷರಂ ಬ್ರಹ್ಮ ಯತ್ತತ್ಸದಸತೋಃ ಪರಮ್ ।
ಅನಾದಿಮಧ್ಯಪರ್ಯನ್ತಂ ನ ದೇವಾ ನರ್ಷಯೋ ವಿದುಃ ॥೩೫॥

ಯಂ ಸುರಾಸುರಗನ್ಧರ್ವಾಃ ಸಿದ್ಧಾ ಋಷಿಮಹೋರಗಾಃ ।
ಪ್ರಯತಾ ನಿತ್ಯಮರ್ಚನ್ತಿ ಪರಮಂ ದುಃಖಭೇಷಜಮ್ ॥೩೬॥

ಅನಾದಿನಿಧನಂ ದೇವಮಾತ್ಮಯೋನಿಂ ಸನಾತನಮ್ ।
ಅಪ್ರೇಕ್ಷ್ಯಮನಭಿಜ್ಞೇಯಂ ಹರಿಂ ನಾರಾಯಣಂ ಪ್ರಭುಮ್ ॥೩೭॥

ಯಾವನು ಒಬ್ಬನೇ ಆಗಿದ್ದರೂ ಅನೇಕರೂಪಗಳಲ್ಲಿ ಪ್ರಾದುರ್ಭವಿಸುತ್ತಿರುವನೋ, ಇಂದ್ರಿಯಗಳಿಗೂ ಮತ್ತು ಅವುಗಳ ವಿಷಯಗಳಿಗೂ ಅತೀತನಾಗಿರುವುದರಿಂದ ಯಾವನನ್ನು ಅಧೋಕ್ಷಜನೆಂದು ಕರೆಯುವರೋ, ಯಾವನು ಉಪಾಸಕರ ಸಮಸ್ತಕಾಮನೆಗಳನ್ನೂ ಪೂರ್ಣಮಾಡಿಕೊಡುವನೋ, ಯಜ್ಞಾದಿಕರ್ಮಗಳಲ್ಲಿಯೂ ಪೂಜಾದಿಗಳಲ್ಲಿಯೂ ನಿರತರಾದ ಅನನ್ಯಭಕ್ತರು ಯಾವನನ್ನು ಕುರಿತು ಯಜ್ಞಾದಿಗಳನ್ನು ಮಾಡುವರೋ, ಅಂತಹ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

ಯಾವನನ್ನು ಜಗತ್ತಿಗೆ ಕೋಶರೂಪನಾಗಿರುವನೆಂದು ಹೇಳುವರೋ, ಯಾವನಲ್ಲಿ ಸಮಸ್ತಪ್ರಜೆಗಳೂ ಅಡಗಿಕೊಂಡಿರುವರೋ, ನೀರಿನ ಮೇಲೆ ಜಲಚರಪಕ್ಷಿಗಳು ಚಲಿಸುವಂತೆ ಯಾವನನ್ನು ಅವಲಂಬಿಸಿ ಈ ಲೋಕಗಳು ಚಲಿಸುತ್ತವೆಯೋ–ಅಂತಹ ಪರಮಪುರುಷನನ್ನು ಶರಣುಹೊಂದುತ್ತೇನೆ.

ಯಾವನು ಪರಮಾರ್ಥಸತ್ಯಸ್ವರೂಪನೋ, ಯಾವನು ಏಕಾಕ್ಷರನಾದ ಬ್ರಹ್ಮನೋ ( ಪ್ರಣವಸ್ವರೂಪನೋ ), ಸದಸತ್ತುಗಳಿಗಿಂತಲೂ ವಿಲಕ್ಷಣನಾದವನೋ, ಯಾವನಿಗೆ ಆದಿ-ಮಧ್ಯ ಮತ್ತು ಅಂತ್ಯಗಳೆಂಬುದೇ ಇಲ್ಲವೋ–

ಯಾವನನ್ನು ದೇವತೆಗಳಾಗಲೀ, ಋಷಿಗಳಾಗಲೀ, ತಿಳಿಯಲಾರರೋ–ಅಂತಹ ಪರಬ್ರಹ್ಮಸ್ವರೂಪನಾದ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

ಯಾವನನ್ನು ದೇವಾಸುರ-ಗಂಧರ್ವರೂ, ಸಿದ್ಧರೂ, ಋಷಿಗಳೂ, ಮಹೋರಗರೂ ಪ್ರಯತ್ನಪೂರ್ವಕವಾಗಿ (ಇಂದ್ರಿಯಗಳನ್ನೂ ಮತ್ತು ಮನಸ್ಸನ್ನೂ ಸಂಯಮದಲ್ಲಿಟ್ಟುಕೊಂಡು) ನಿತ್ಯವೂ ಪೂಜಿಸುವರೋ–ಯಾವನು ದುಃಖರೂಪವಾದ ರೋಗಕ್ಕೆ ಮಹೌಷಧಪ್ರಾಯನಾಗಿರುವನೋ–ಅಂತಹ ಜಗದ್ವೈದ್ಯನಾದ ಶ್ರೀಕೃಷ್ಣನನ್ನು ಶರಣುಹೊಂದುತ್ತೇನೆ.

ಯಾವನು ಜನ್ಮ-ಮರಣಗಳಿಂದ ರಹಿತನಾಗಿರುವನೋ, ಯಾವನು ಸ್ವಯಂಜಾತನೋ, ಸನಾತನನೋ, ಚರ್ಮದ ಕಣ್ಣುಗಳಿಂದ ನೋಡಲು ಅಸಾಧ್ಯನೋ, ಯಾವನು ಬುದ್ಧಿಗೂ ನಿಲುಕದವನೋ–ಅಂತಹ ಪ್ರಭುವಾದ ಹರಿನಾರಾಯಣನನ್ನು ಶರಣುಹೊಂದುತ್ತೇನೆ.

**ಯಂ ವೈ ವಿಶ್ವಸ್ಯ ಕರ್ತಾರಂ ಜಗತಸ್ತಸ್ಥುಷಾಂ ಪತಿಮ್ ।**
**ವದನ್ತಿ ಜಗತೋಽಧ್ಯಕ್ಷಮಕ್ಷರಂ ಪರಮಂ ಪದಮ್ ॥೩೮॥**

ಯಾವನನ್ನು ವಿಶ್ವಕರ್ತೃವೆಂದೂ, ಜಗತ್ತಿನಲ್ಲಿರುವ ಸ್ಥಾವರ-ಜಂಗಮಗಳಿಗೆ ಸ್ವಾಮಿಯೆಂದೂ ಹೇಳುತ್ತಾರೆಯೋ, ಯಾವನು ಜಗತ್ತಿಗೆ ಸಾಕ್ಷಿಸ್ವರೂಪನಾಗಿರುವನೋ, ಯಾವನನ್ನು ಅವ್ಯಯನೆಂದೂ, ಶ್ರೇಷ್ಠವಾದ ಆಶ್ರಯಸ್ಥಾನವೆಂದೂ ಹೇಳುವರೋ–ಅಂತಹ ಪರಮಪುರುಷನನ್ನು ಶರಣುಹೊಂದುತ್ತೇನೆ.

**ಹಿರಣ್ಯವರ್ಣಂ ಯಂ ಗರ್ಭಮದಿತಿರ್ದೈತ್ಯನಾಶನಮ್ ।**
**ಏಕಂ ದ್ವಾದಶಧಾ ಜಜ್ಞೇ ತಸ್ಮೈ ಸೂರ್ಯಾತ್ಮನೇ ನಮಃ ॥೩೯॥**

ಚಿನ್ನದ ಕಾಂತಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತಿರುವ ಯಾವನನ್ನು ಅದಿತಿಯು ಗರ್ಭದಲ್ಲಿ ಧರಿಸಿದ್ದಳೋ, ಯಾವನು ಮಂದೇಹಾದಿ ದೈತ್ಯರ ನಾಶಕನಾಗಿದ್ದನೋ, ಯಾವನು ಒಬ್ಬನೇ ಆಗಿದ್ದರೂ ಒಂದೇ ಶರೀರವನ್ನು ಹನ್ನೆರಡು ಪ್ರಕಾರವಾಗಿ ವಿಭಾಗಿಸಿಕೊಂಡು ಜಗತ್ತನ್ನು ಬೆಳಗುತ್ತಿರುವನೋ–ಅಂತಹ ಸೂರ್ಯರೂಪನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಶುಕ್ಲೇ ದೇವಾನ್ಪಿತೄನ್ಕೃಷ್ಣೇ ತರ್ಪಯತ್ಯಮೃತೇನ ಯಃ ।**
**ಯಶ್ಚ ರಾಜಾ ದ್ವಿಜಾತೀನಾಂ ತಸ್ಮೈ ಸೋಮಾತ್ಮನೇ ನಮಃ ॥೪೦॥**

ಯಾವನು ತನ್ನ ಅಮೃತಮಯವಾದ ಕಲೆಗಳಿಂದ ಶುಕ್ಲಪಕ್ಷದಲ್ಲಿ ದೇವತೆಗಳನ್ನೂ, ಕೃಷ್ಣಪಕ್ಷದಲ್ಲಿ ಪಿತೃಗಳನ್ನೂ ತೃಪ್ತಿಗೊಳಿಸುವನೋ ಮತ್ತು ಯಾವನು ಎಲ್ಲ ದ್ವಿಜಾತಿಗಳಿಗೂ ರಾಜನಾಗಿರುವನೋ–ಅಂತಹ ಸೋಮಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಮಹತಸ್ತಮಸಃ ಪಾರೇ ಪುರುಷಂ ಹ್ಯತಿತೇಜಸಮ್ ।**
**ಯಂ ಜ್ಞಾತ್ವಾ ಮೃತ್ಯುಮತ್ಯೇತಿ ತಸ್ಮೈ ಜ್ಞೇಯಾತ್ಮನೇ ನಮಃ ॥೪೧॥**

ಅಜ್ಞಾನಮಯವಾದ ಗಾಢಾಂಧಕಾರದಿಂದ ಆಚೆಗಿರುವ, ಮಹಾ ತೇಜಸ್ಸಿನಿಂದ ಯುಕ್ತನಾದ ಯಾವ ಪುರುಷನನ್ನು ತಿಳಿದುಕೊಳ್ಳುವುದರಿಂದ ಮಾನವನು ಮೃತ್ಯುವನ್ನು ಅತಿಕ್ರಮಿಸುವನೋ–ಅಂತಹ ಜ್ಞೇಯಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕರಿಸುತ್ತೇನೆ.

**ಯಂ ಬೃಹನ್ತಂ ಬೃಹತ್ಯುಕ್ಥೇ ಯಮಗ್ನೌ ಯಂ ಮಹಾಧ್ವರೇ ।**
**ಯಂ ವಿಪ್ರಸಂಘಾ ಗಾಯನ್ತಿ ತಸ್ಮೈ ವೇದಾತ್ಮನೇ ನಮಃ ॥೪೨॥**

ಉಕ್ಥ ಎಂಬ ಹೆಸರಿನ ಬೃಹತ್ಸ್ತೋಮಯಾಗದ ಸಮಯದಲ್ಲಿ ಋಗ್ವೇದಿಗಳೂ, ಅಗ್ನಿಚಯನಕಾಲದಲ್ಲಿ ಮತ್ತು ಮಹಾಯಾಗದ ಸಮಯದಲ್ಲಿ ಯಜುರ್ವೇದಿಗಳೂ ಮಹತೋಮಹೀಯನಾದ ಯಾವನನ್ನು ಸಾಮವೇದೀ ಬ್ರಾಹ್ಮಣಸಮೂಹವು ಸಾಮಗಳಿಂದ ಗಾನಮಾಡುವುದೋ–ಅಂತಹ ವೇದಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಋಗ್ಯಜುಃಸಾಮಧಾಮಾನಂ ದಶಾರ್ಧಹವಿರಾತ್ಮಕಮ್ ।**
**ಯಂ ಸಪ್ತತನ್ತುಂ ತನ್ವನ್ತಿ ತಸ್ಮೈ ಯಜ್ಞಾತ್ಮನೇ ನಮಃ ॥೪೩॥**

ಋಗ್ಯಜುಸ್ಸಾಮವೇದಗಳೇ ಆಶ್ರಯಸ್ಥಾನವಾಗಿ ಉಳ್ಳ, ಧಾನಾ-ಕರಂಭ-ಪರಿವಾಪ-ಪುರೋಡಾಶ ಮತ್ತು ಪಯಸ್ಯೆಗಳೆಂಬ ಐದು ವಿಧವಾದ ಹವಿಸ್ಸುಗಳನ್ನು ಹೊಂದಿರುವ, ಗಾಯತ್ರಿಯೇ ಮೊದಲಾದ ಏಳು ಛಂದಸ್ಸುಗಳೇ ತಂತುಗಳಾಗಿರುವ ಯಜ್ಞವನ್ನು ಯಾವನನ್ನು ಕುರಿತು ಮಾಡುತ್ತಾರೆಯೋ–ಅಂತಹ ಯಜ್ಞಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಞ್ಚಭಿರೇವ ಚ ।**
**ಹೂಯತೇ ಚ ಪುನರ್ದ್ವಾಭ್ಯಾಂ ತಸ್ಮೈ ಹೋಮಾತ್ಮನೇ ನಮಃ ॥೪೬॥**

'ಆಶ್ರಾವಯ' (ಇತಿ ಚತುರಕ್ಷರಂ) ಎಂಬ ನಾಲ್ಕು ಅಕ್ಷರಗಳು, 'ಅಸ್ತು ಶ್ರೌಷಟ್' (ಇತಿ ಚತುರಕ್ಷರಂ) ಎಂಬ ನಾಲ್ಕು ಅಕ್ಷರಗಳು, 'ಯಜ' (ಇತಿ ದ್ವ್ಯಕ್ಷರಂ) ಎಂಬ ಎರಡಕ್ಷರಗಳು, ಯೇ ಯಜಾಮಹೇ– (ಇತಿ ಪಞ್ಚಾಕ್ಷರಂ)–ಎಂಬ ಐದು ಅಕ್ಷರಗಳು, (ದ್ವ್ಯಕ್ಷರೋ ವಷಟ್ಕಾರಃ) ವಷಟ್–ಎಂಬ ಎರಡಕ್ಷರಗಳು–ಹೀಗೆ ಒಟ್ಟು ಹದಿನೇಳು ಅಕ್ಷರಗಳ ಮಂತ್ರದಿಂದ ಹೋಮಮಾಡಲ್ಪಡುವ ಹೋಮಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯಃ ಸುಪರ್ಣೋ ಯಜುರ್ನಾಮ ಛನ್ದೋಗಾತ್ರಸ್ತ್ರಿವೃಚ್ಛಿರಾಃ ।**
**ರಥನ್ತರಂ ಬೃಹತ್ಸಾಮ ತಸ್ಮೈ ಸ್ತೋತ್ರಾತ್ಮನೇ ನಮಃ ॥೪೫॥**

ಯಾವ ವೇದಪುರುಷನು ಯಜುಸ್ ಎಂಬ ನಾಮಧೇಯವನ್ನು ಹೊಂದಿರುವನೋ–ಯಾವನಿಗೆ ಗಾಯತ್ರ್ಯಾದಿ ಛಂದಸ್ಸುಗಳೇ ಶರೀರದ ಅಂಗಗಳಾಗಿವೆಯೋ, ಋಗ್ಯಜುಸ್ಸಾಮಾತ್ಮಕವಾದ ಯಜ್ಞವೇ ಶಿರಸ್ಸಾಗಿದೆಯೋ (ತ್ರಿವೃತ್ಸ್ತೋಮವೇ ಶಿರಸ್ಸಾಗಿದೆಯೋ), 'ರಥಂತರ ಮತ್ತು ಬೃಹತ್' ಎಂಬ ಸಾಮಗಳೇ ಪ್ರೀತಿವಾಕ್ಯಗಳಾಗಿವೆಯೋ–ಅಂತಹ ಸ್ತೋತ್ರಾತ್ಮನಾದ ಗರುಡಸ್ವರೂಪನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯಃ ಸಹಸ್ರಸಮೇ ಸತ್ರೇ ಜಜ್ಞೇ ವಿಶ್ವಸೃಜಾಮೃಷಿಃ ।**
**ಹಿರಣ್ಯಪಕ್ಷಃ ಶಕುನಿಸ್ತಸ್ಮೈ ಹಂಸಾತ್ಮನೇ ನಮಃ ॥೪೬॥**

ಯಾವ ನಾರಾಯಣಮುನಿಯು ಪ್ರಜಾಪತಿಗಳ ಸಹಸ್ರವರ್ಷ ಪರ್ಯಂತವಾದ ಯಜ್ಞದಲ್ಲಿ ಸುವರ್ಣಮಯವಾದ ರೆಕ್ಕೆಗಳುಳ್ಳ ಪಕ್ಷಿಯ ರೂಪವನ್ನು ಧರಿಸಿ ಪ್ರಕಟವಾದನೋ–ಅಂತಹ ಹಂಸಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ. ('ಹಿರಣ್ಮಯಃ ಶಕುನಿರ್ಬ್ರಹ್ಮನಾಮಃ'–ಎಂಬ ವೇದಮಂತ್ರವೂ ಇದನ್ನೇ ಹೇಳುತ್ತದೆ.)

**ಪಾದಾಙ್ಗಂ ಸಂಧಿಪರ್ವಾಣಂ ಸ್ವರವ್ಯಞ್ಜನಭೂಷಣಮ್ ।**
**ಯಮಾಹುರಕ್ಷರಂ ದಿವ್ಯಂ ತಸ್ಮೈ ವಾಗಾತ್ಮನೇ ನಮಃ ॥೪೭॥**

ಶ್ಲೋಕಪಾದಗಳ ಸಮೂಹಗಳೇ ಯಾವನಿಗೆ ಅವಯವಗಳಾಗಿವೆಯೋ, ಪದಗಳ ಸಂಧಿಗಳೇ ಯಾವನಿಗೆ ಗಿಣ್ಣುಗಳಾಗಿವೆಯೋ, ಸ್ವರಾಕ್ಷರ ವ್ಯಂಜನಾಕ್ಷರಗಳೇ ಯಾವನಿಗೆ ಅಲಂಕಾರಪ್ರಾಯವಾಗಿರುವುವೋ ಮತ್ತು ಯಾವನನ್ನು 'ದಿವ್ಯಾಕ್ಷರ' ಎಂಬ ಹೆಸರಿನಿಂದಲೇ ಕರೆಯುವರೋ–ಅಂತಹ ವಾಗಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯಜ್ಞಾಙ್ಗೋ ಯೋ ವರಾಹೋ ವೈ ಭೂತ್ವಾ ಗಾಮುಜ್ಜಹಾರ ಹ।**
**ಲೋಕತ್ರಯಹಿತಾರ್ಥಾಯ ತಸ್ಮೈ ವೀರ್ಯಾತ್ಮನೇ ನಮಃ ॥೪೮॥**

ಯಾವನು ಮೂರು ಲೋಕಗಳ ಹಿತಾರ್ಥವಾಗಿ ಯಜ್ಞಮಯವಾದ ವರಾಹರೂಪವನ್ನು ಧರಿಸಿ ಪೃಥ್ವಿಯನ್ನು ರಸಾತಲದಿಂದ ಮೇಲಕ್ಕೆತ್ತಿದನೋ–ಅಂತಹ ವೀರ್ಯಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯಃ ಶೇತೇ ಯೋಗಮಾಸ್ಥಾಯ ಪರ್ಯಙ್ಕೇ ನಾಗಭೂಷಿತೇ ।**
**ಫಣಾಸಹಸ್ರರಚಿತೇ ತಸ್ಮೈ ನಿದ್ರಾತ್ಮನೇ ನಮಃ ॥೪೯॥**

ಯಾವನು ತನ್ನ ಯೋಗಮಾಯೆಯನ್ನು ಆಶ್ರಯಿಸಿ ಆದಿಶೇಷಸರ್ಪದ ಸಾವಿರ ಹೆಡೆಗಳಿಂದ ರಚಿತವಾದ ದಿವ್ಯಮಂಚದ ಮೇಲೆ ಪವಡಿಸಿರುವನೋ–ಅಂತಹ ಯೋಗನಿದ್ರಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯಸ್ತನೋತಿ ಸತಾಂ ಸೇತುಮೃತೇನಾಮೃತಯೋನಿನಾ ।**
**ಧರ್ಮಾರ್ಥವ್ಯವಹಾರಾಙ್ಗೈಸ್ತಸ್ಮೈ ಸತ್ಯಾತ್ಮನೇ ನಮಃ ॥೫೦॥**

ಧರ್ಮಾರ್ಥವ್ಯವಹಾರಗಳೆಂಬ ಅಂಗಗಳಿಂದಲೂ, ಅಮೃತತತ್ವಕ್ಕೆ ಮೂಲಕಾರಣವಾದ ಋತ (ಸತ್ಯ) ದಿಂದಲೂ ಯಾವನು ಸತ್ಪುರುಷರು ಅಮರತ್ವವನ್ನು ಹೊಂದುವುದಕ್ಕೆ ಸೇತುವೆಯನ್ನು ಕಲ್ಪಿಸಿಕೊಡುತ್ತಾನೆಯೋ–ಅಂತಹ ಸತ್ಯಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯಂ ಪೃಥಗ್ಧರ್ಮಚರಣಾಃ ಪೃಥಗ್ಧರ್ಮಫಲೈಷಿಣಃ ।**
**ಪೃಥಗ್ಧರ್ಮೈಃ ಸಮರ್ಚನ್ತಿ ತಸ್ಮೈ ಧರ್ಮಾತ್ಮನೇ ನಮಃ ॥೫೧॥**

ಭಿನ್ನ-ಭಿನ್ನವಾದ ಧರ್ಮಾಚರಣೆಯುಳ್ಳವರೂ, ಭಿನ್ನ-ಭಿನ್ನವಾದ

ಧರ್ಮಾಚರಣೆಗಳಿಗೆ ಫಲವನ್ನು ಅಪೇಕ್ಷಿಸುವವರೂ, ಯಾವನನ್ನು ಭಿನ್ನ-ಭಿನ್ನವಾದ ಧರ್ಮಗಳಿಂದ ( ಪೂಜಾದಿಗಳಿಂದ ) ಸಂಪೂಜಿಸುತ್ತಾರೆಯೋ–ಅಂತಹ ಧರ್ಮಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯತಃ ಸರ್ವೇ ಪ್ರಸೂಯನ್ತೇ ಹ್ಯನಙ್ಗಾತ್ಮಾಙ್ಗದೇಹಿನಃ ।**
**ಉನ್ಮಾದಃ ಸರ್ವಭೂತಾನಾಂ ತಸ್ಮೈ ಕಾಮಾತ್ಮನೇ ನಮಃ ॥೫೨॥**

ಕಾಮಮಯವಾದ ಅಂಗಗಳಿಂದ ಕೂಡಿರುವ ದೇಹವುಳ್ಳ ಯಾವನಿಂದ ಎಲ್ಲರೂ ಮಕ್ಕಳನ್ನು ಪಡೆದುಕೊಳ್ಳುತ್ತಾರೆಯೋ, ಯಾವ ಕಾಮವೇ ಸರ್ವಪ್ರಾಣಿಗಳಿಗೂ ಉನ್ಮತ್ತತೆಯನ್ನು ಉಂಟುಮಾಡುವುದೋ–ಅಂತಹ ಕಾಮಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯಂ ಚ ವ್ಯಕ್ತಸ್ಥಮವ್ಯಕ್ತಂ ವಿಚಿನ್ವನ್ತಿ ಮಹರ್ಷಯಃ ।**
**ಕ್ಷೇತ್ರೇ ಕ್ಷೇತ್ರಜ್ಞಮಾಸೀನಂ ತಸ್ಮೈ ಕ್ಷೇತ್ರಾತ್ಮನೇ ನಮಃ ॥೫೩॥**

ವ್ಯಕ್ತವಾದ ದೇಹದಲ್ಲಿರುವ ಯಾವ ಅವ್ಯಕ್ತನನ್ನು ಅಥವಾ ಬುದ್ಧಿಯಲ್ಲಿ ಕುಳಿತಿರುವ ಯಾವ ಕ್ಷೇತ್ರಜ್ಞನನ್ನು ಮಹರ್ಷಿಗಳು ಹುಡುಕುತ್ತಾರೆಯೋ–ಅಂತಹ ಕ್ಷೇತ್ರಾತ್ಮಸ್ವರೂಪನಾದ ಶ್ರೀಕೃಷ್ಣನನ್ನು ನಮಸ್ಕರಿಸು ತ್ತೇನೆ.

**ಯಂ ತ್ರಿಧಾತ್ಮಾನಮಾತ್ಮಸ್ಥಂ ವೃತಂ ಷೋಡಶಭಿರ್ಗುಣೈಃ ।**
**ಪ್ರಾಹುಃ ಸಪ್ತದಶಂ ಸಾಂಖ್ಯಾಸ್ತಸ್ಮೈ ಸಾಂಖ್ಯಾತ್ಮನೇ ನಮಃ ॥೫೪॥**

ಯಾವನನ್ನು ಆತ್ಮದಲ್ಲಿರುವ ಸತ್ತ್ವರಜಸ್ತಮೋಗುಣಗಳ ಭೇದಗಳಿಂದ ಮೂರು ಬಗೆ ಎಂದು ಹೇಳುತ್ತಾರೆಯೋ–ಹದಿನಾರು ಗುಣಗಳಿಂದ (ಶ್ರೋತ್ರ, ತ್ವಕ್ಕು, ಚಕ್ಷುಸ್ಸು, ಜಿಹ್ವಾ ಮತ್ತು ನಾಸಿಕ–ಇವು ಐದು ಜ್ಞಾನೇಂದ್ರಿಯಗಳು. ವಾಕ್ಕು, ಪಾಣಿ, ಪಾದ, ಪಾಯು ಮತ್ತು ಉಪಸ್ಥ–ಇವು ಐದು ಕರ್ಮೇಂದ್ರಿಯಗಳು ; ಮನಸ್ಸನ್ನೂ ಸೇರಿಸಿ ಒಟ್ಟು ಇಂದ್ರಿಯಗಳು ಹನ್ನೊಂದು. ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ–ಈ ಐದು ಪಂಚಭೂತಗಳು. ಒಟ್ಟು ಹದಿನಾರು. ) ಆವೃತನಾಗಿರುವ ಹದಿನೇಳನೆಯವನಾದ ಆತ್ಮಾ ಎಂದು ಯಾವನನ್ನು ಸಾಂಖ್ಯರು ಹೇಳುತ್ತಾರೆಯೋ–ಅಂತಹ ಸಾಂಖ್ಯಾತ್ಮನಾದ ಶ್ರೀಕೃಷ್ಣಸ್ವಾಮಿಗೆ ನಮಸ್ಕಾರಮಾಡುತ್ತೇನೆ.

**ಯಂ ವಿನಿದ್ರಾಜಿತಶ್ವಾಸಾಃ ಸತ್ತ್ವಸ್ಥಾಃ ಸಂಯತೇನ್ದ್ರಿಯಾಃ ।**
**ಜ್ಯೋತಿಃ ಪಶ್ಯನ್ತಿ ಯುಞ್ಜಾನಾಸ್ತಸ್ಮೈ ಯೋಗಾತ್ಮನೇ ನಮಃ ॥೫೫॥**

ಇಂದ್ರಿಯಗಳನ್ನು ತಮ್ಮ ವಶದಲ್ಲಿಟ್ಟುಕೊಂಡಿರುವ, ನಿದ್ರೆಯನ್ನು ಜಯಿಸಿರುವ, ಯೋಗದ ಮೂಲಕವಾಗಿ ಶ್ವಾಸವನ್ನು ಬಂಧಿಸಿರುವ ಯೋಗಿಗಳು ಶುದ್ಧಸತ್ತ್ವಸ್ಥಿತಿಯಲ್ಲಿದ್ದುಕೊಂಡು, ಇಂದ್ರಿಯಗಳಿಂದ ಕೂಡಿದ ಮನಸ್ಸನ್ನು ಬುದ್ಧಿಯಲ್ಲಿ ಲೀನಗೊಳಿಸಿ, ಯಾವ ಪರಮಾತ್ಮನನ್ನು ಜ್ಯೋತಿಯ ರೂಪದಲ್ಲಿ ಕಾಣುತ್ತಾರೆಯೋ–ಅಂತಹ ಯೋಗಾತ್ಮನಾದ ಶ್ರೀಕೃಷ್ಣಯೋಗಿಯನ್ನು ನಮಸ್ಕರಿಸುತ್ತೇನೆ.

**ಅಪುಣ್ಯಪುಣ್ಯೋಪರಮೇ ಯಂ ಪುನರ್ಭವನಿರ್ಭಯಾಃ ।**
**ಶಾನ್ತಾಃ ಸಂನ್ಯಾಸಿನೋ ಯಾನ್ತಿ ತಸ್ಮೈ ಮೋಕ್ಷಾತ್ಮನೇ ನಮಃ ॥೫೬॥**

ಪುಣ್ಯ-ಪಾಪಗಳೆರಡೂ ಕ್ಷಯಹೊಂದಿದನಂತರ ಪುನಃ ಹುಟ್ಟು-ಸಾವುಗಳ ಭಯವಿಲ್ಲದ ಶಾಂತರಾದ ಸಂನ್ಯಾಸಿಗಳು ಯಾವ ಪರಮಾತ್ಮನನ್ನು ಹೊಂದುತ್ತಾರೆಯೋ–ಅಂತಹ ಮೋಕ್ಷಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯೋಽಸೌ ಯುಗಸಹಸ್ರಾನ್ತೇ ಪ್ರದೀಪ್ತಾರ್ಚಿರ್ವಿಭಾವಸುಃ ।**
**ಸಮ್ಭಕ್ಷಯತಿ ಭೂತಾನಿ ತಸ್ಮೈ ಘೋರಾತ್ಮನೇ ನಮಃ ॥೫೭॥**

ಸೃಷ್ಟ್ಯಾರಂಭದಿಂದ ಒಂದು ಸಾವಿರ ಯುಗಗಳು ಕಳೆದನಂತರ ಯಾವನು ಧಗ-ಧಗಿಸುವ ಜ್ವಾಲೆಗಳಿಂದ ಕೂಡಿರುವ ಪ್ರಳಯಾಗ್ನಿಯ ರೂಪವನ್ನು ಹೊಂದಿ ಎಲ್ಲ ಪ್ರಾಣಿಗಳನ್ನೂ ಭಕ್ಷಿಸುವನೋ (ಭಸ್ಮಮಾಡುವನೋ)–ಅಂತಹ ಘೋರಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಸಂಭಕ್ಷ್ಯ ಸರ್ವಭೂತಾನಿ ಕೃತ್ವಾ ಚೈಕಾರ್ಣವಂ ಜಗತ್ ।**
**ಬಾಲಃ ಸ್ವಪಿತಿ ಯಶ್ಚೈಕಸ್ತಸ್ಮೈ ಮಾಯಾತ್ಮನೇ ನಮಃ ॥೫೮॥**

ಯಾವನು ವಿಶ್ವದ ಎಲ್ಲ ಪ್ರಾಣಿಗಳನ್ನೂ ಭಕ್ಷಿಸಿದನಂತರ ಜಗತ್ತನ್ನು ಜಲಮಯವನ್ನಾಗಿಮಾಡಿ ಅದರ ಮೇಲೆ ಮಾಯಮಯನಾದ ಬಾಲಕನಾಗಿ

( ವಟಪತ್ರದ ಮೇಲೆ ) ಮಲಗುವನೋ–ಅಂತಹ ಮಾಯಾಮಯನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ತದ್ಯಸ್ಯ ನಾಭ್ಯಾಂ ಸಮ್ಭೂತಂ ಯಸ್ಮಿನ್ವಿಶ್ವಂ ಪ್ರತಿಷ್ಠಿತಮ್ ।**
**ಪುಷ್ಕರೇ ಪುಷ್ಕರಾಕ್ಷಸ್ಯ ತಸ್ಮೈ ಪದ್ಮಾತ್ಮನೇ ನಮಃ ॥೫೯॥**

ಯಾವ ಬಾಲಕನ ನಾಭಿಯಿಂದ ಕಮಲವು ಹುಟ್ಟಿತೋ ಮತ್ತು ಆ ಕಮಲದಲ್ಲಿಯೇ ಈ ವಿಶ್ವವು ಪ್ರತಿಷ್ಠಿತವಾಗಿರುವುದೋ–ಅಂತಹ ಪದ್ಮಾತ್ಮನಾದ ಶ್ರೀಕೃಷ್ಣಸ್ವಾಮಿಗೆ ನಮಸ್ಕಾರಮಾಡುತ್ತೇನೆ.

**ಸಹಸ್ರಶಿರಸೇ ಚೈವ ಪುರುಷಾಯಾಮಿತಾತ್ಮನೇ ।**
**ಚತುಃಸಮುದ್ರಪರ್ಯಾಯಯೋಗನಿದ್ರಾತ್ಮನೇ ನಮಃ ॥೬೦॥**

ಸಾವಿರ ತಲೆಗಳನ್ನು ಹೊಂದಿರುವ ( ಸಹಸ್ರಶೀರ್ಷನಾದ ) ಪುರುಷನನ್ನು ನಮಸ್ಕರಿಸುತ್ತೇನೆ. ಅಂತರ್ಯಾಮಿಯಾಗಿ ಎಲ್ಲರ ಹೃದಯಗುಹೆಗಳಲ್ಲಿಯೂ ವಿರಾಜಮಾನನಾಗಿರುವ ಪುರುಷನನ್ನು ನಮಸ್ಕರಿಸುತ್ತೇನೆ. ಅಳತೆಗೋಲಿಗೆ ಸಿಕ್ಕದ ಅಮಿತಾತ್ಮನಾದ ಪರಮಾತ್ಮನನ್ನು ನಮಸ್ಕರಿಸುತ್ತೇನೆ. ನಾಲ್ಕು ಸಮುದ್ರಗಳೂ ಸೇರಿ ಏಕಾರ್ಣವವಾಗಲಾಗಿ ಯೋಗನಿದ್ರೆಯನ್ನು ಆಶ್ರಯಿಸಿ ಅದರ ಮೇಲೆ ಮಲಗಿರುವ ಯೋಗನಿದ್ರಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಙ್ಗಸಂಧಿಷು ।**
**ಕುಕ್ಷೌ ಸಮುದ್ರಾಶ್ಚತ್ವಾರಸ್ತಸ್ಮೈ ತೋಯಾತ್ಮನೇ ನಮಃ ॥೬೧॥**

ಯಾವನ ಕೇಶರಾಶಿಗಳಲ್ಲಿ ಮೇಘಗಳಿವೆಯೋ, ಯಾವನ ಎಲ್ಲ ಅಂಗಗಳಲ್ಲಿಯೂ ಇರುವ ಸಂಧಿಪ್ರದೇಶಗಳಲ್ಲಿ ನದಿಗಳಿವೆಯೋ ಮತ್ತು ಯಾವನ ಹೊಟ್ಟೆಯಲ್ಲಿ ನಾಲ್ಕು ಸಮುದ್ರಗಳೂ ಇವೆಯೋ–ಅಂತಹ ತೋಯಾತ್ಮನಾದ ( ಜಲರೂಪಿಯಾದ ) ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯಸ್ಮಾತ್ಸರ್ವಾಃ ಪ್ರಸೂಯನ್ತೇ ಸರ್ಗಪ್ರಲಯವಿಕ್ರಿಯಾಃ ।**
**ಯಸ್ಮಿಂಶ್ಚೈವ ಪ್ರಲೀಯನ್ತೇ ತಸ್ಮೈ ಹೇತ್ವಾತ್ಮನೇ ನಮಃ ॥೬೨॥**

ಸೃಷ್ಟಿ ಮತ್ತು ಪ್ರಳಯರೂಪಗಳಾದ ಸಮಸ್ತವಿಕಾರಗಳೂ ಯಾವನಿಂದ ಹುಟ್ಟುತ್ತವೆಯೋ ಮತ್ತು ಕಟ್ಟಕಡೆಗೆ ಎಲ್ಲವೂ ಯಾವನಲ್ಲಿಯೇ ಲಯಹೊಂದುತ್ತವೆಯೋ–ಅಂತಹ ಹೇತ್ವಾತ್ಮನಾದ ( ಎಲ್ಲಕ್ಕೂ ಕಾರಣ ಭೂತನಾದ ) ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯೋ ನಿಷಣ್ಣೋ ಭವೇದ್ರಾತ್ರೌ ದಿವಾ ಭವತಿ ವಿಷ್ಠಿತಃ ।**
**ಇಷ್ಟಾನಿಷ್ಟಸ್ಯ ಚ ದ್ರಷ್ಟಾ ತಸ್ಮೈ ದ್ರಷ್ಟಾತ್ಮನೇ ನಮಃ ॥೬೩॥**

ಯಾವನು ರಾತ್ರಿಯಲ್ಲಿ ಪ್ರಾಣಿಗಳೆಲ್ಲವೂ ಮಲಗಿ ನಿದ್ರಿಸಿದಾಗ ಎಲ್ಲರ ಹೃದಯಗಳಲ್ಲಿಯೂ ಇರುವ ತಾನು ಮಾತ್ರ ಜಾಗ್ರತನಾಗಿಯೇ ಇರುವನೋ, ಹಗಲಿನಲ್ಲಿ ಪ್ರಾಣಿಗಳು ಮಾಡುವ ಕಾರ್ಯಗಳಿಗೂ ಸಾಕ್ಷಿಯಾಗಿರುವನೋ ಮತ್ತು ಪ್ರಾಣಿಗಳ ಇಷ್ಟಾನಿಷ್ಟಗಳನ್ನೂ ಸದಾಕಾಲದಲ್ಲಿಯೂ ನೋಡುತ್ತಿರುವನೋ–ಅಂತಹ ದ್ರಷ್ಟಾತ್ಮನಾದ ಪರಮಾತ್ಮನನ್ನು ನಮಸ್ಕರಿ ಸುತ್ತೇನೆ.

**ಅಕುಣ್ಠಂ ಸರ್ವಕಾರ್ಯೇಷು ಧರ್ಮಕಾರ್ಯಾರ್ಥಮುದ್ಯತಮ್ ।**
**ವೈಕುಣ್ಠಸ್ಯ ಚ ತದ್ರೂಪಂ ತಸ್ಮೈ ಕಾರ್ಯಾತ್ಮನೇ ನಮಃ ॥೬೪॥**

ಯಾವ ವಿಧವಾದ ಅಡೆ-ತಡೆಗಳೂ ಇಲ್ಲದೇ ಯಾವನು ಎಲ್ಲ ಕಾರ್ಯ ಗಳನ್ನೂ ಮಾಡುವನೋ, ಧರ್ಮಕಾರ್ಯಗಳನ್ನು ಮಾಡುವ ಸಲು ವಾಗಿಯೇ ಯಾವನು ಯಾವಾಗಲೂ ಜಾಗ್ರತನಾಗಿರುವನೋ, ಯಾವನು ವೈಕುಂಠರೂಪನೇ ಆಗಿರುವನೋ–ಅಂತಹ ಕಾರ್ಯಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ತ್ರಿಃಸಪ್ತಕೃತ್ವೋ ಯಃ ಕ್ಷತ್ರಂ ಧರ್ಮವ್ಯುತ್ಕ್ರಾನ್ತಗೌರವಮ್ ।**
**ಕ್ರುದ್ಧೋ ನಿಜಘ್ನೇ ಸಮರೇ ತಸ್ಮೈ ಶೌರ್ಯಾತ್ಮನೇ ನಮಃ ॥೬೫॥**

ಯಾವನು ಕ್ರುದ್ಧನಾಗಿ ಧರ್ಮದ ಗೌರವವನ್ನು ಉಲ್ಲಂಘಿಸಿದ ಕ್ಷತ್ರಿಯಸಮೂಹವನ್ನು ಇಪ್ಪತ್ತೊಂದುಬಾರಿ ಸಂಹರಿಸಿದನೋ–ಅಂತಹ (ಪರಶುರಾಮರೂಪಿಯಾದ ) ಶೌರ್ಯಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ವಿಭಜ್ಯ ಪಞ್ಚಧಾತ್ಮಾನಂ ವಾಯುರ್ಭೂತ್ವಾ ಶರೀರಗಃ ।**
**ಯಶ್ಚೇಷ್ಟಯತಿ ಭೂತಾನಿ ತಸ್ಮೈ ವಾಯ್ವಾತ್ಮನೇ ನಮಃ ॥೬೬॥**

ಯಾವನು ವಾಯುವಿನ ಸ್ವರೂಪವನ್ನು ಹೊಂದಿ ಪ್ರತಿಯೊಂದು ಪ್ರಾಣಿಯ ಶರೀರವನ್ನೂ ಪ್ರವೇಶಿಸಿ, ತನ್ನನ್ನು ಪ್ರಾಣಾಪಾನವ್ಯಾನೋದಾನ ಸಮಾನಗಳೆಂಬ ಐದು ಪ್ರಕಾರಗಳಾಗಿ ವಿಭಾಗಿಸಿಕೊಂಡು ಎಲ್ಲ ಪ್ರಾಣಿಗಳನ್ನೂ ಕ್ರಿಯಾಶೀಲರನ್ನಾಗಿ ಮಾಡುವನೋ–ಅಂತಹ ವಾಯುಸ್ವರೂಪನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯುಗೇಷ್ವಾವರ್ತತೇ ಯೋಗೈರ್ಮಾಸರ್ತ್ವಯನಹಾಯನೈಃ ।**
**ಸರ್ಗಪ್ರಲಯಯೋಃ ಕರ್ತಾ ತಸ್ಮೈ ಕಾಲಾತ್ಮನೇ ನಮಃ ॥೬೭॥**

ಯಾವನು ಯುಗ-ಯುಗಗಳಲ್ಲಿಯೂ ಯೋಗಮಾಯೆಯಿಂದ ಅವತಾರಮಾಡುವನೋ, ಮಾಸ-ಋತು-ಅಯನ ಮತ್ತು ಸಂವತ್ಸರಗಳಿಂದ ಆವೃತ್ತಿಹೊಂದುತ್ತಾ ಯಾವನು ಸೃಷ್ಟಿ ಮತ್ತು ಪ್ರಲಯಗಳನ್ನುಂಟುಮಾಡುವನೋ–ಅಂತಹ ಕಾಲಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಬ್ರಹ್ಮ ವಕ್ತ್ರಂ ಭುಜೌ ಕ್ಷತ್ರಂ ಕೃತ್ಸ್ನಮೂರೂದರಂ ವಿಶಃ ।**
**ಪಾದೌ ಯಸ್ಯಾಶ್ರಿತಾಃ ಶೂದ್ರಾಸ್ತಸ್ಮೈ ವರ್ಣಾತ್ಮನೇ ನಮಃ ॥೬೮॥**

ಯಾವನಿಗೆ ಬ್ರಾಹ್ಮಣನೇ ಮುಖವಾಗಿರುವನೋ, ಸಮಸ್ತವಾದ ಕ್ಷತ್ರಿಯಜಾತಿಯು ಎರಡು ಭುಜಗಳಾಗಿವೆಯೋ, ವೈಶ್ಯನು ಹೊಟ್ಟೆ ಮತ್ತು ತೊಡೆಗಳಾಗಿರುವುವೋ ಮತ್ತು ಯಾವನ ಎರಡು ಪಾದಗಳನ್ನೂ ಶೂದ್ರರು ಆಶ್ರಯಿಸಿರುವರೋ–ಅಂತಹ ವರ್ಣಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರ ಮಾಡುತ್ತೇನೆ.

**ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ ।**
**ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರೇ ತಸ್ಮೈ ಲೋಕಾತ್ಮನೇ ನಮಃ ॥೬೯॥**

ಯಾವನಿಗೆ ಅಗ್ನಿಯು ಮುಖವಾಗಿರುವುದೋ, ಸ್ವರ್ಗವು ತಲೆಯಾಗಿರುವುದೋ, ಆಕಾಶವು ನಾಭಿಯಾಗಿರುವುದೋ, ಭೂಮಿಯು ಪಾದಗಳಾಗಿರುವುದೋ, ಸೂರ್ಯನೇ ಕಣ್ಣಾಗಿರುವನೋ, ದಿಕ್ಕುಗಳೇ ಕಿವಿಗಳಾಗಿವೆಯೋ–ಅಂತಹ ಲೋಕಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಪರಃ ಕಾಲಾತ್ಪರೋ ಯಜ್ಞಾತ್ಪರಾತ್ಪರತರಶ್ಚ ಯಃ ।**
**ಅನಾದಿರಾದಿರ್ವಿಶ್ವಸ್ಯ ತಸ್ಮೈ ವಿಶ್ವಾತ್ಮನೇ ನಮಃ ॥೭೦॥**

ಯಾವನು ಕಾಲಾತೀತನಾಗಿ, ಯಜ್ಞಾತೀತನಾಗಿ, ಪರಕ್ಕಿಂತಲೂ ಅತ್ಯಂತಶ್ರೇಷ್ಠನಾಗಿ, ಆದ್ಯಂತರಹಿತನಾಗಿ, ವಿಶ್ವಕ್ಕೇ ಅಧಿಭೂತನಾಗಿದ್ದಾನೆಯೋ–ಅಂತಹ ವಿಶ್ವಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ವಿಷಯೇ ವರ್ತಮಾನಾನಾಂ ಯಂ ತೇ ವೈಶೇಷಿಕೈರ್ಗುಣೈಃ ।**
**ಪ್ರಾಹುರ್ವಿಷಯಗೋಪ್ತಾರಂ ತಸ್ಮೈ ಗೋಪ್ತ್ರಾತ್ಮನೇ ನಮಃ ॥೭೧॥**

ವೈಶೀಷಿಕಗುಣಗಳಿಂದ ( ವಿಷಯಗಳ ಸಂಬಂಧವಾದ ಗುಣಗಳಿಂದ ) ಆಕರ್ಷಿತರಾಗಿ ವಿಷಯಸುಖದಲ್ಲಿರುವವರನ್ನು ವಿಷಯಗಳಿಂದ ( ರೂಪ-ರಸ-ಗಂಧಾದಿಗಳಿಂದ ) ರಕ್ಷಿಸುವನೆಂದು ಯಾವನನ್ನು ಹೇಳುತ್ತಾರೆಯೋ–ಅಂತಹ ಗೋಪ್ತ್ರಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಅನ್ನಪಾನೇನ್ಧನಮಯೋ ರಸಪ್ರಾಣವಿವರ್ಧನಃ ।**
**ಯೋ ಧಾರಯತಿ ಭೂತಾನಿ ತಸ್ಮೈ ಪ್ರಾಣಾತ್ಮನೇ ನಮಃ ॥೭೨॥**

ಅನ್ನ-ಪಾನಗಳೆಂಬ ಇಂಧನಮಯನಾದ ( ಅಗ್ನಿಸ್ವರೂಪನಾದ ) ಯಾವನು ಪ್ರಾಣಿಗಳ ಶರೀರವನ್ನು ಹೊಕ್ಕು ರಸ ಮತ್ತು ಪ್ರಾಣಗಳನ್ನು ವೃದ್ಧಿಪಡಿಸುತ್ತಾನೆಯೋ ಮತ್ತು ಹಾಗೆ ಮಾಡುವುದರಿಂದಲೇ ಎಲ್ಲ ಪ್ರಾಣಿಗಳನ್ನೂ ಯಾವನು ಧರಿಸಿರುವನೋ–ಅಂತಹ ಪ್ರಾಣಾತ್ಮನಾದ, ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಪ್ರಾಣಾನಾಂ ಧಾರಣಾರ್ಥಾಯ ಯೋಽನ್ನಂ ಭುಙ್ಕ್ತೇ ಚತುರ್ವಿಧಮ್ ।**
**ಅನ್ತರ್ಭೂತಃ ಪಚತ್ಯಗ್ನಿಸ್ತಸ್ಮೈ ಪಾಕಾತ್ಮನೇ ನಮಃ ॥೭೩॥**

ಪ್ರಾಣಗಳ ರಕ್ಷಣಾರ್ಥವಾಗಿ ಯಾವನು ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯಗಳೆಂಬ ನಾಲ್ಕು ಪ್ರಕಾರವಾದ ಅನ್ನವನ್ನು ಭಕ್ಷಿಸುತ್ತಾನೆಯೋ ಮತ್ತು ತಾನೇ ಪ್ರಾಣಿಗಳ ಉದರದಲ್ಲಿ ಸೇರಿಕೊಂಡು ಜಠರಾಗ್ನಿಯ ರೂಪವನ್ನು ಧರಿಸಿ ನಾಲ್ಕು ವಿಧವಾದ ಅನ್ನಗಳನ್ನೂ ಪಚನಮಾಡುತ್ತಾನೆಯೋ–ಅಂತಹ ಪಾಕಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಪಿಙ್ಗೇಕ್ಷಣಸಟಂ ಯಸ್ಯ ರೂಪಂ ದಂಷ್ಟ್ರಾನಖಾಯುಧಮ್ ।**
**ದಾನವೇನ್ದ್ರಾನ್ತಕರಣಂ ತಸ್ಮೈ ದೃಪ್ತಾತ್ಮನೇ ನಮಃ ॥೭೪॥**

ದಾನವೇಂದ್ರನಾದ ಹಿರಣ್ಯಕಶಿಪುವಿನ ಮರಣಕ್ಕೆ ಕಾರಣನಾದ ಯಾವನ ಕಣ್ಣುಗಳೂ ಮತ್ತು ಕೇಸರಗಳೂ ಪಿಂಗಳ (ಕಂದುಹಳದಿ) ಬಣ್ಣದ್ದಾಗಿದ್ದುವೋ ಮತ್ತು ಯಾವನಿಗೆ ಕೋರೆದಾಡೆಗಳೂ ಮತ್ತು ಉಗುರುಗಳೇ ಆಯುಧಗಳಾಗಿದ್ದುವೋ–ಯಾವನ ರೂಪವು ಭಯಂಕರವಾಗಿದ್ದಿತೋ–ಅಂತಹ ದೃಪ್ತಾತ್ಮನಾದ (ನೃಸಿಂಹರೂಪನಾದ) ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯಂ ನ ದೇವಾ ನ ಗನ್ಧರ್ವಾ ನ ದೈತ್ಯಾ ನ ಚ ದಾನವಾಃ ।**
**ತತ್ತ್ವತೋ ಹಿ ವಿಜಾನನ್ತಿ ತಸ್ಮೈ ಸೂಕ್ಷ್ಮಾತ್ಮನೇ ನಮಃ ॥೭೫॥**

ದೇವತೆಗಳಾಗಲೀ, ಗಂಧರ್ವರಾಗಲೀ, ದೈತ್ಯರಾಗಲೀ, ದಾನವರಾಗಲೀ–ಯಾವನನ್ನು ತತ್ತ್ವತಃ (ಯಥಾರ್ಥವಾದ ರೀತಿಯಲ್ಲಿ) ತಿಳಿಯಲಾರರೋ–ಅಂತಹ ಸೂಕ್ಷ್ಮಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ರಸಾತಲಗತಃ ಶ್ರೀಮಾನನನ್ತೋ ಭಗವಾನ್ವಿಭುಃ ।**
**ಜಗದ್ಧಾರಯತೇ ಕೃತ್ಸ್ನಂ ತಸ್ಮೈ ವೀರ್ಯಾತ್ಮನೇ ನಮಃ ॥೭೬॥**

ಸರ್ವವ್ಯಾಪಕನಾದ ಯಾವನು ಕಾಂತಿಯುಕ್ತನಾದ ಅನಂತನೆಂಬ ರೂಪವನ್ನು ಧರಿಸಿ, ರಸಾತಳಕ್ಕೆ ಹೋಗಿ ಅಖಂಡವಾದ ಜಗತ್ತನ್ನೂ ಧರಿಸಿರುವನೋ–ಅಂತಹ ವೀರ್ಯಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಯೋ ಮೋಹಯತಿ ಭೂತಾನಿ ಸ್ನೇಹಪಾಶಾನುಬನ್ಧನೈಃ ।**
**ಸರ್ಗಸ್ಯ ರಕ್ಷಣಾರ್ಥಾಯ ತಸ್ಮೈ ಮೋಹಾತ್ಮನೇ ನಮಃ ॥೭೭॥**

ಯಾವನು ಸೃಷ್ಟಿಪರಂಪರೆಯ ರಕ್ಷಣಾರ್ಥವಾಗಿ ಎಲ್ಲ ಪ್ರಾಣಿಗಳನ್ನೂ ಸ್ನೇಹಪಾಶಗಳ ಬಂಧನಗಳಿಂದ ವಿಮೋಹಗೊಳಿಸುತ್ತಿದ್ದಾನೆಯೋ–ಅಂತಹ ಮೋಹಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಆತ್ಮಜ್ಞಾನಮಿದಂ ಜ್ಞಾನಂ ಜ್ಞಾತ್ವಾ ಪಞ್ಚಸ್ವವಸ್ಥಿತಮ್ ।**
**ಯಂ ಜ್ಞಾನೇನಾಭಿಗಚ್ಛನ್ತಿ ತಸ್ಮೈ ಜ್ಞಾನಾತ್ಮನೇ ನಮಃ ॥೭೮॥**

ಆತ್ಮಜ್ಞಾನವೆಂಬ ಈ ಜ್ಞಾನವು ಅನ್ನಮಯ-ಪ್ರಾಣಮಯ-ಮನೋಮಯ - ವಿಜ್ಞಾನಮಯ-ಆನಂದಮಯಗಳೆಂಬ ಕೋಶಗಳಲ್ಲಿರುವುದೆಂಬು

ದನ್ನು ತಿಳಿದು ಜ್ಞಾನಯೋಗದ ಮೂಲಕವಾಗಿ ಯಾವನನ್ನು ಯೋಗಿಗಳು ಸಾಕ್ಷಾತ್ಕರಿಸಿಕೊಳ್ಳುವರೋ–ಅಂತಹ ಜ್ಞಾನಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರ ಮಾಡುತ್ತೇನೆ.

**ಅಪ್ರಮೇಯಶರೀರಾಯ ಸರ್ವತೋ ಬುದ್ಧಿಚಕ್ಷುಷೇ ।**
**ಅನನ್ತಪರಿಮೇಯಾಯ ತಸ್ಮೈ ದಿವ್ಯಾತ್ಮನೇ ನಮಃ ॥೭೯॥**

ಯಾವನು ಅಳತೆಗೆ ವಿಷಯವಾಗದೇ ಇರುವ ಶರೀರವನ್ನು ಹೊಂದಿರುವನೋ, ಯಾವನ ಬುದ್ಧಿರೂಪವಾದ ಕಣ್ಣುಗಳು ಸರ್ವತ್ರ ವ್ಯಾಪಿಸಿರುವುವೋ, ಯಾವನಲ್ಲಿ ಅನಂತವಾದ ವಿಷಯಗಳ ಸಮಾವೇಶ ವಿರುವುದೋ–ಯಾವನ ಕೊನೆ (ತುದಿ) ಯನ್ನು ಕಾಣಲು ಸಾಧ್ಯ ವಿಲ್ಲವೋ–ಅಂತಹ ದಿವ್ಯಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಜಟಿನೇ ದಣ್ಡಿನೇ ನಿತ್ಯಂ ಲಮ್ಬೋದರಶರೀರಿಣೇ ।**
**ಕಮಣ್ಡಲುನಿಷಙ್ಗಾಯ ತಸ್ಮೈ ಬ್ರಹ್ಮಾತ್ಮನೇ ನಮಃ ॥೮೦॥**

ಯಾವನು ಜಡೆಯನ್ನೂ ಮತ್ತು ದಂಡವನ್ನೂ ಧಾರಣೆಮಾಡಿರು ವನೋ, ಯಾವನು ಲಂಬಿಸಿರುವ ಹೊಟ್ಟೆಯಿಂದ ಕೂಡಿರುವ ಶರೀರವನ್ನು ಹೊಂದಿರುವನೋ, ಯಾವನು ಕಮಂಡಲುವನ್ನು ನಿರಂತರವಾಗಿ ಹೊಂದಿರುವನೋ–ಅಂತಹ ಬ್ರಹ್ಮಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರ ಮಾಡುತ್ತೇನೆ.

**ಶೂಲಿನೇ ತ್ರಿದಶೇಶಾಯ ತ್ರ್ಯಮ್ಬಕಾಯ ಮಹಾತ್ಮನೇ ।**
**ಭಸ್ಮದಿಗ್ಧಾಙ್ಗಲಿಙ್ಗಾಯ ತಸ್ಮೈ ರುದ್ರಾತ್ಮನೇ ನಮಃ ॥೮೧॥**

ಯಾವನು ಶೂಲಪಾಣಿಯೋ, ಸಕಲದೇವತೆಗಳಿಗೂ ಈಶನೋ, ಮುಕ್ಕಣ್ಣನೋ, ಭಸ್ಮಲಿಪ್ತವಾದ ಶರೀರವುಳ್ಳವನೋ, ಲಿಂಗರೂಪನೋ ಮತ್ತು ಯಾವನು ಮಹಾತ್ಮನೋ ಅಂತಹ ರುದ್ರಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಚನ್ದ್ರಾರ್ಧಕೃತಶೀರ್ಷಾಯ ವ್ಯಾಲಯಜ್ಞೋಪವೀತಿನೇ ।**
**ಪಿನಾಕಶೂಲಹಸ್ತಾಯ ತಸ್ಮೈ ಉಗ್ರಾತ್ಮನೇ ನಮಃ ॥೮೨॥**

ಯಾವನ ತಲೆಯಲ್ಲಿ ಅರ್ಧಚಂದ್ರನಿಂದ ಕೂಡಿದ ಮುಕುಟವಿರು

ವುದೋ, ಯಾವನು ಸರ್ಪವನ್ನೇ ಯಜ್ಞೋಪವೀತವನ್ನಾಗಿ ಧರಿಸಿರು ವನೋ, ಯಾವನು ಕೈಯಲ್ಲಿ ಪಿನಾಕಧನುಸ್ಸನ್ನೂ ಮತ್ತು ತ್ರಿಶೂಲವನ್ನೂ ಹಿಡಿದಿರುವನೋ–ಅಂತಹ ಉಗ್ರಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ಸರ್ವಭೂತಾತ್ಮಭೂತಾಯ ಭೂತಾದಿನಿಧನಾಯ ಚ ।**
**ಅಕ್ರೋಧದ್ರೋಹಮೋಹಾಯ ತಸ್ಮೈ ಶಾನ್ತಾತ್ಮನೇ ನಮಃ ॥೮೩॥**

ಯಾವನು ಸರ್ವಪ್ರಾಣಿಗಳಿಗೂ ಆತ್ಮಭೂತನಾಗಿರುವನೋ– ಯಾವನು ಪ್ರಾಣಿಗಳ ಹುಟ್ಟಿಗೂ ಮತ್ತು ಸಾವಿಗೂ ಕಾರಣನಾಗಿರುವನೋ– ಯಾವನಲ್ಲಿ ಕ್ರೋಧವಾಗಲೀ, ದ್ರೋಹವಾಗಲೀ, ಮೋಹವಾಗಲೀ, ಇಲ್ಲವೋ–ಅಂತಹ ಶಾಂತಾತ್ಮನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ.

**ಯಸ್ಮಿನ್ಸರ್ವಂ ಯತಃ ಸರ್ವಂ ಯಃ ಸರ್ವೇ ಸರ್ವತಶ್ಚ ಯಃ ।**
**ಯಶ್ಚ ಸರ್ವಮಯೋ ನಿತ್ಯಂ ತಸ್ಮೈ ಸರ್ವಾತ್ಮನೇ ನಮಃ ॥೮೪॥**

ಯಾವನಲ್ಲಿ ಅಖಂಡಬ್ರಹ್ಮಾಂಡವೇ ಇರುವುದೋ, ಯಾವನಿಂದ ಈ ಎಲ್ಲವೂ ಸೃಷ್ಟಿಸಲ್ಪಟ್ಟಿರುವುದೋ, ಯಾವನು ಎಲ್ಲದರಲ್ಲಿಯೂ ಇರುವನೋ (ತಾನೇ ಸರ್ವವೂ ಆಗಿರುವನೋ), ಯಾವನು ಎಲ್ಲ ಕಡೆಗಳಲ್ಲಿಯೂ ಇರುವನೋ ಮತ್ತು ಯಾವನು ಸರ್ವಮಯನಾಗಿರುವನೋ–ಅಂತಹ ಸರ್ವಾತ್ಮನಾದ ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ.

**ವಿಶ್ವಕರ್ಮನ್ನಮಸ್ತೇಽಸ್ತು ವಿಶ್ವಾತ್ಮನ್ವಿಶ್ವಸಮ್ಭವ ।**
**ಅಪವರ್ಗೋಽಸಿ ಭೂತಾನಾಂ ಪಞ್ಚಾನಾಂ ಪರತಃ ಸ್ಥಿತಃ ॥೮೫॥**

ವಿಶ್ವವನ್ನೇ ರಚಿಸಿರುವ ಪರಮೇಶ್ವರನೇ! ನಿನಗೆ ನಮಸ್ಕಾರವಿರಲಿ. ವಿಶ್ವಕ್ಕೇ ಆತ್ಮನಾದವನೇ! ವಿಶ್ವದ ಉತ್ಪತ್ತಿಗೆ ಸ್ಥಾನಭೂತನಾಗಿರುವ ಜಗದೀಶ್ವರನೇ! ನಿನಗೆ ನಮಸ್ಕಾರವಿರಲಿ. ನೀನು ಪಂಚಭೂತಗಳಿಗಿಂತಲೂ ಹೊರಗಿದ್ದು ಪ್ರಾಣಿಗಳಿಗೆ ಮೋಕ್ಷದಾಯಕನಾಗಿರುವೆ.

**ನಮಸ್ತೇ ತ್ರಿಷು ಲೋಕೇಷು ನಮಸ್ತೇ ಪರತಸ್ತ್ರಿಷು ।**
**ನಮಸ್ತೇ ದಿಕ್ಷು ಸರ್ವಾಸು ತ್ವಂ ಹಿ ಸರ್ವಮಯೋ ನಿಧಿಃ ॥೮೬॥**

ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವ ನಿನಗೆ ನಮಸ್ಕಾರಮಾಡುತ್ತೇನೆ. ಈ ಮೂರು ಲೋಕಗಳಿಗಿಂತಲೂ ಆಚೆ ಇರುವ ನಿನಗೆ ನಮಸ್ಕಾರ ಮಾಡುತ್ತೇನೆ. ಎಲ್ಲ ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿರುವ ನಿನಗೆ ನಮಸ್ಕಾರಮಾಡುತ್ತೇನೆ. ಏಕೆಂದರೆ : ನೀನು ಸರ್ವಮಯನಾಗಿರುವೆ. ( ಸಕಲ ಚರಾಚರಗಳಲ್ಲಿಯೂ ವ್ಯಾಪಿಸಿಕೊಂಡಿರುವೆ ) ಮತ್ತು ಸರ್ವಪ್ರಾಣಿಗಳಿಗೂ ನಿಧಿಪ್ರಾಯನಾಗಿರುವೆ.

**ನಮಸ್ತೇ ಭಗವನ್ವಿಷ್ಣೋ ಲೋಕಾನಾಂ ಪ್ರಭವಾಪ್ಯಯ ।**
**ತ್ವಂ ಹಿ ಕರ್ತಾ ಹೃಷೀಕೇಶ ಸಂಹರ್ತಾ ಚಾಪರಾಜಿತಃ ॥೮೭॥**

ಭಗವನ್! ವಿಷ್ಣುವೇ! ಲೋಕಗಳ ಉತ್ಪತ್ತಿಗೂ ಮತ್ತು ವಿನಾಶಕ್ಕೂ ಕಾರಣನಾದವನೇ! ನಿನ್ನನ್ನು ನಮಸ್ಕರಿಸುತ್ತೇನೆ. ಹೃಷೀಕೇಶನೇ! ನೀನು ಸೃಷ್ಟಿಕರ್ತನೂ ಆಗಿರುವೆ. ಸಂಹಾರಕರ್ತನೂ ಆಗಿರುವೆ. ನೀನು ಯಾರಿಂದಲೂ ಪರಾಜಿತನಾಗತಕ್ಕವನಲ್ಲ.

**ನ ಹಿ ಪಶ್ಯಾಮಿ ತೇ ಭಾವಂ ದಿವ್ಯಂ ಹಿ ತ್ರಿಷು ವರ್ತ್ಮಸು ।**
**ತ್ವಾಂ ತು ಪಶ್ಯಾಮಿ ತತ್ತ್ವೇನ ಯತ್ತೇ ರೂಪಂ ಸನಾತನಮ್ ॥೮೮॥**

ಮೂರು ಲೋಕಗಳಲ್ಲಿಯೂ ಇರುವ ನಿನ್ನ ದಿವ್ಯವಾದ ಜನ್ಮ-ಕರ್ಮಗಳ ರಹಸ್ಯವನ್ನು ನಾನು ತಿಳಿಯಲಾರೆನು. ಆದರೆ ತತ್ತ್ವದೃಷ್ಟಿಯಿಂದ ನಿನ್ನ ಸನಾತನವಾದ ರೂಪವು ( ಜ್ಯೋತಿರ್ಮಯರೂಪವು ) ಯಾವುದಿರುವುದೋ ಅದನ್ನು ಮಾತ್ರ ಕಾಣುತ್ತಿದ್ದೇನೆ.

**ದಿವಂ ತೇ ಶಿರಸಾ ವ್ಯಾಪ್ತಂ ಪದ್ಭ್ಯಾಂ ದೇವೀ ವಸುನ್ಧರಾ ।**
**ವಿಕ್ರಮೇಣ ತ್ರಯೋ ಲೋಕಾಃ ಪುರುಷೋಽಸಿ ಸನಾತನಃ ॥೮೯॥**

ಸ್ವರ್ಗವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ನಿನ್ನೆರಡು ಕಾಲುಗಳಿಂದ ಭೂಮಿಯು ವ್ಯಾಪ್ತವಾಗಿದೆ. ಮೂರು ಲೋಕಗಳೂ ನಿನ್ನ ವಿಕ್ರಮಗಳಿಂದ (ವಿಸ್ತಾರವಾದ ಮೂರು ಹೆಜ್ಜೆಗಳಿಂದ ) ವ್ಯಾಪ್ತವಾಗಿವೆ. ನೀನು ಸನಾತನನಾದ ಪುರುಷನಾಗಿರುವೆ.

**ದಿಶೋ ಭುಜಾ ರವಿಶ್ಚಕ್ಷುರ್ವೀರ್ಯೇ ಶುಕ್ರಃ ಪ್ರತಿಷ್ಠಿತಃ ।**
**ಸಪ್ತ ಮಾರ್ಗಾ ನಿರುದ್ಧಾಸ್ತೇ ವಾಯೋರಮಿತತೇಜಸಃ ॥೯೦॥**

ದಶದಿಕ್ಕುಗಳೇ ನಿನ್ನ ದಶಭುಜಗಳಾಗಿವೆ. ಸೂರ್ಯನೇ ನಿನ್ನ ನೇತ್ರ ಸ್ಥಾನದಲ್ಲಿದ್ದಾನೆ. ಶುಕ್ರಾಚಾರ್ಯನೇ ನಿನ್ನ ವೀರ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ. (ವೀರ್ಯವೇ ಶುಕ್ರನ ರೂಪದಲ್ಲಿದೆ.) ಅಮಿತತೇಜಸ್ವಿಯಾದ ವಾಯುವಿನ ಏಳು ಮಾರ್ಗಗಳನ್ನೂ (ಸಪ್ತಪ್ರಾಣಗಳ ಮಾರ್ಗಗಳನ್ನೂ) ನೀನು ತಡೆದಿರುವೆ.

**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಮ್ ।**
**ಯೇ ನಮಸ್ಯನ್ತಿ ಗೋವಿನ್ದಂ ನ ತೇಷಾಂ ವಿದ್ಯತೇ ಭಯಮ್ ॥೯೧॥**

ಅಗಸೇಹೂವಿನ ಕಾಂತಿಯಂತೆ ಕಾಂತಿಯನ್ನು ಹೊಂದಿರುವ, ಪೀತಾಂಬರಧರನಾದ, ಸ್ವಸ್ಥಾನ-ಧರ್ಮಗಳಿಂದ ಯಾವಾಗಲೂ ಚ್ಯುತನಾಗದ ಗೋವಿಂದನನ್ನು ಯಾರು ನಮಸ್ಕರಿಸುತ್ತಾರೋ–ಅವರಿಗೆ ಭಯವೆಂಬುದೇ ಇರುವುದಿಲ್ಲ.

**ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮೋ**
**ದಶಾಶ್ವಮೇಧಾವಭೃಥೇನ ತುಲ್ಯಃ ।**
**ದಶಾಶ್ವಮೇಧೀ ಪುನರೇತಿ ಜನ್ಮ**
**ಕೃಷ್ಣಪ್ರಣಾಮೀ ನ ಪುನರ್ಭವಾಯ ॥೯೨॥**

ಶ್ರೀಕೃಷ್ಣನಿಗೆ ಒಂದು ಸಲ ಅನನ್ಯಭಕ್ತಿಯಿಂದ ಮಾಡಿದ ನಮಸ್ಕಾರವೇ ಹತ್ತು ಅಶ್ವಮೇಧಯಾಗಗಳನ್ನು ಮಾಡಿ ಅವಭೃಥಸ್ನಾನಮಾಡಿದ ಫಲಕ್ಕೆ ಸಮಾನವಾಗಿರುತ್ತದೆ. ಆದರೆ ಒಂದೇ ವ್ಯತ್ಯಾಸ : ಹತ್ತು ಅಶ್ವಮೇಧ ಯಾಗಗಳನ್ನು ಮಾಡಿದವನಿಗೆ ಪುನರ್ಜನ್ಮವು ತಪ್ಪಿದ್ದಲ್ಲ. ಅವನು ಪುನರ್ಜನ್ಮವನ್ನು ಪಡೆದೇ ಪಡೆಯುತ್ತಾನೆ. ಶ್ರೀಕೃಷ್ಣನಿಗೆ ಶ್ರದ್ಧಾ-ಭಕ್ತಿಪೂರ್ವಕ ವಾಗಿ ನಮಸ್ಕಾರಮಾಡಿದವನಿಗೆ ಪುನರ್ಜನ್ಮವೇ ಇಲ್ಲ.

**ಕೃಷ್ಣವ್ರತಾಃ ಕೃಷ್ಣಮನುಸ್ಮರನ್ತೋ**
**ರಾತ್ರೌ ಚ ಕೃಷ್ಣಂ ಪುನರುತ್ಥಿತಾ ಯೇ ।**
**ತೇ ಕೃಷ್ಣದೇಹಾಃ ಪ್ರವಿಶನ್ತಿ ಕೃಷ್ಣ-**
**ಮಾಜ್ಯಂ ಯಥಾ ಮನ್ತ್ರಹುತಂ ಹುತಾಶೇ ॥೯೩॥**

ಯಾರು ಶ್ರೀಕೃಷ್ಣನ ಭಜನೆಯನ್ನು ನಿತ್ಯವ್ರತವನ್ನಾಗಿ ಇಟ್ಟು

ಕೊಂಡಿರುವರೋ, ಶ್ರೀಕೃಷ್ಣನನ್ನೇ ಸರ್ವಕಾಲದಲ್ಲಿಯೂ ಸ್ಮರಿಸುತ್ತಾ ರಾತ್ರಿಯಲ್ಲಿ ಶ್ರೀಕೃಷ್ಣನನ್ನೇ ಸ್ಮರಿಸಿಕೊಂಡು ಮಲಗುತ್ತಾರೆಯೋ ಮತ್ತು ಶ್ರೀಕೃಷ್ಣನ ಸ್ಮರಣೆಯನ್ನೇ ಮಾಡುತ್ತಾ ಬೆಳಗಾಗುತ್ತಲೇ ಏಳುತ್ತಾರೆಯೋ, ಅವರು ಶ್ರೀಕೃಷ್ಣಸ್ವರೂಪರೇ ಆಗಿ–ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಹೋಮಮಾಡಲ್ಪಟ್ಟ ಆಜ್ಯವು ಯಜ್ಞೇಶ್ವರನಲ್ಲಿಯೇ ಲೀನವಾಗುವಂತೆ– ಶ್ರೀಕೃಷ್ಣನಲ್ಲಿಯೇ ಲೀನರಾಗುತ್ತಾರೆ.

**ನಮೋ ನರಕಸಂತ್ರಾಸರಕ್ಷಾಮಣ್ಡಲಕಾರಿಣೇ ।**
**ಸಂಸಾರನಿಮ್ನಗಾವರ್ತತರಿಕಾಷ್ಠಾಯ ವಿಷ್ಣವೇ ॥೯೪॥**

ನರಕಭಯದಿಂದ ಪೀಡಿತರಾದವರಿಗೆ ರಕ್ಷಾಮಂಡಲವನ್ನು ರಚಿಸುವವನೇ! ಸಂಸಾರವೆಂಬ ಹೊಳೆಯಲ್ಲಿರುವ ಸುಳಿಯನ್ನು ದಾಟಲಿಚ್ಛಿಸುವವರಿಗೆ ಮರದ ತೆಪ್ಪದ ರೂಪದಲ್ಲಿರುವವನೇ! ಮಹಾವಿಷ್ಣುವೇ! ನಿನಗೆ ನಮಸ್ಕರಿಸುತ್ತೇನೆ.

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿನ್ದಾಯ ನಮೋ ನಮಃ ॥೯೫॥**

* ಬ್ರಹ್ಮಕ್ಕೆ (ತಪಸ್ಸು, ವೇದ, ಬ್ರಾಹ್ಮಣ ಮತ್ತು ಜ್ಞಾನ ಇವುಗಳಿಗೆ) ಹಿತನಾಗಿರುವ, ಜಗತ್ತಿಗೆ ಹಿತವನ್ನುಂಟುಮಾಡುವ, ಗೋ-ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವ ಕೃಷ್ಣನನ್ನು ನಮಸ್ಕರಿಸುತ್ತೇನೆ. ಗೋವಿಂದನಿಗೆ ನಮಸ್ಕರಿಸುತ್ತೇನೆ.

**ಪ್ರಾಣಕಾನ್ತಾರಪಾಥೇಯಂ ಸಂಸಾರೋಚ್ಛೇದಭೇಷಜಮ್ ।**
**ದುಃಖಶೋಕಪರಿತ್ರಾಣಂ ಹರಿರಿತ್ಯಕ್ಷರದ್ವಯಮ್ ॥೯೬॥**

'ಹರಿ' ಎಂಬ ಎರಡಕ್ಷರವು ಪ್ರಾಣಪ್ರಯಾಣಸಮಯದಲ್ಲಿ ನಡುಗಾಡಿನ ಬುತ್ತಿಯ ರೂಪದಲ್ಲಿರುತ್ತದೆ. ಸಂಸಾರವೆಂಬ ರೋಗದ ನಿವಾರಣೆಗೆ ಔಷಧಪ್ರಾಯವಾಗಿದೆ. ಸಕಲವಿಧವಾದ ದುಃಖ-ಶೋಕಗಳನ್ನೂ ಪರಿಹರಿಸಿ ರಕ್ಷಣೆ ನೀಡುತ್ತದೆ.

---

* ತಪೋವೇದಾಶ್ಚ ವಿಪ್ರಾಶ್ಚ ಜ್ಞಾನಂ ಚ ಬ್ರಹ್ಮಸಂಜ್ಞಿತಮ್ ।

**ಯಥಾ ವಿಷ್ಣುಮಯಂ ಸತ್ಯಂ ಯಥಾ ವಿಷ್ಣುಮಯಂ ಜಗತ್ ।**
**ಯಥಾ ವಿಷ್ಣುಮಯಂ ಸರ್ವಂ ಪಾಪ್ಮಾ ಮೇ ನಶ್ಯತಾಂ ತಥಾ ॥೯೭॥**

ಸತ್ಯವು ಹೇಗೆ ವಿಷ್ಣುಮಯವಾಗಿರುವುದೋ, ಜಗತ್ತು ಹೇಗೆ ವಿಷ್ಣುಮಯವಾಗಿರುವುದೋ, ಸರ್ವವೂ ಹೇಗೆ ವಿಷ್ಣುಮಯವೇ ಆಗಿರುವುದೋ–ಹಾಗೆಯೇ ಈ ಸತ್ಯದ ಪ್ರಭಾವದಿಂದ ನನ್ನ ಸಕಲಪಾಪಗಳೂ ನಾಶಹೊಂದಲಿ.

**ತ್ವಾಂ ಪ್ರಪನ್ನಾಯ ಭಕ್ತಾಯ ಗತಿಮಿಷ್ಟಾಂ ಜಿಗೀಷವೇ ।**
**ಯಚ್ಛ್ರೇಯಃ ಪುಣ್ಡರೀಕಾಕ್ಷ ತದ್ಧ್ಯಾಯಸ್ವ ಸುರೋತ್ತಮ ॥೯೮॥**

ಸುರೋತ್ತಮನೇ! ಕಮಲಾಕ್ಷನೇ! ನಿನ್ನನ್ನೇ ಅನನ್ಯಶರಣನಾಗಿ ಶರಣುಹೊಂದಿರುವ, ಭಕ್ತನಾದ, ಅಭೀಷ್ಟವಾದ ಗತಿಯನ್ನು ಇಚ್ಛಿಸುತ್ತಿರುವ ನನಗೆ ಯಾವುದು ಶ್ರೇಯಸ್ಕರವೆಂಬುದನ್ನು ನೀನೇ ಯೋಚಿಸಿ ನಿರ್ಧರಿಸು.

**ಇತಿ ವಿದ್ಯಾತಪೋಯೋನಿರಯೋನಿರ್ವಿಷ್ಣುರೀಡಿತಃ ।**
**ವಾಗ್ಯಜ್ಞೇನಾರ್ಚಿತೋ ದೇವಃ ಪ್ರೀಯತಾಂ ಮೇ ಜನಾರ್ದನಃ ॥೯೯॥**

ವಿದ್ಯೆ ಮತ್ತು ತಪಸ್ಸುಗಳಿಗೆ ಜನ್ಮಸ್ಥಾನನಾದ, ಅಯೋನಿಯಾದ (ಯಾರನ್ನೂ ಜನ್ಮಕ್ಕೆ ಕಾರಣರನ್ನಾಗಿ ಪಡೆದುಕೊಳ್ಳದೇ ಇರುವ ) ಭಗವಂತನಾದ ವಿಷ್ಣುವು ನನ್ನಿಂದ ಹೀಗೆ ಸ್ತೋತ್ರಮಾಡಲ್ಪಟ್ಟಿದ್ದಾನೆ. ವಾಗ್ರೂಪವಾದ ಈ ಯಜ್ಞದಿಂದ ಸಂಪೂಜಿತನಾದ, ದೇವದೇವನಾದ ಜನಾರ್ದನನು ನನ್ನ ವಿಷಯದಲ್ಲಿ ಪ್ರಸನ್ನನಾಗಲಿ.

**ನಾರಾಯಣಃ ಪರಂ ಬ್ರಹ್ಮ ನಾರಾಯಣಪರಂ ತಪಃ ।**
**ನಾರಾಯಣಃ ಪರೋ ದೇವಃ ಸರ್ವಂ ನಾರಾಯಣಃ ಸದಾ ॥೧೦೦॥**

ನಾರಾಯಣನೇ ಪರಬ್ರಹ್ಮನು. ನಾರಾಯಣನೇ ಶ್ರೇಷ್ಠವಾದ ತಪಃಸ್ವರೂಪನು. ನಾರಾಯಣನೇ ಎಲ್ಲ ದೇವತೆಗಳಿಗಿಂತಲೂ ಶ್ರೇಷ್ಠನಾದ ದೇವತೆಯು. ಸರ್ವಕಾಲದಲ್ಲಿಯೂ ಸರ್ವವೂ ನಾರಾಯಣನೇ ಆಗಿದ್ದಾನೆ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಆ ಸಮಯದಲ್ಲಿ ಭೀಷ್ಮನು ಶ್ರೀಕೃಷ್ಣನಲ್ಲಿಯೇ

ಲೀನವಾದ ಮನಸ್ಸುಳ್ಳವನಾಗಿದ್ದನು. ಹೃದಯಗುಹೆಯಲ್ಲಿ ಶ್ರೀಕೃಷ್ಣನನ್ನೇ ಪ್ರತ್ಯಕ್ಷವಾಗಿ ಕಾಣುತ್ತಿದ್ದನು. ವಾಗ್ಯಜ್ಞವನ್ನು ಮುಗಿಸಿದೊಡನೆಯೇ ಭೀಷ್ಮನು 'ನಮಃ ಕೃಷ್ಣಾಯ'–ಎಂದು ಹೇಳಿ ಪ್ರಣಾಮಮಾಡಿದನು.

ಭಗವಾನ್ ಶ್ರೀಕೃಷ್ಣನು ತನ್ನ ಯೋಗಬಲದಿಂದ ಭೀಷ್ಮನ ಭಕ್ತಿಯನ್ನು ತಿಳಿದುಕೊಂಡು, ಯೋಗಬಲದಿಂದಲೇ ಭೀಷ್ಮನ ಹೃದಯಗುಹೆಯಲ್ಲಿ ದಿವ್ಯದರ್ಶನವನ್ನಿತ್ತು, ಮೂರು ಲೋಕಗಳನ್ನೂ ಕರತಲಾಮಲಕದಂತೆ ನೋಡುವ ದಿವ್ಯಜ್ಞಾನವನ್ನಿತ್ತು ಅದೃಶ್ಯನಾದನು.

ಭೀಷ್ಮನು ಮಾಡುತ್ತಿದ್ದ ಶ್ರೀಕೃಷ್ಣಸ್ತೋತ್ರವು ನಿಂತುಹೋಗಲಾಗಿ, ಸುತ್ತಲೂ ನೆರೆದಿದ್ದ ಬ್ರಹ್ಮವಾದಿಗಳು ಆನಂದಬಾಷ್ಪಗಳಿಂದ ಕೂಡಿದವರಾಗಿ ಮಹಾಮತಿಯಾದ ಭೀಷ್ಮನನ್ನು ಗದ್ಗದಧ್ವನಿಯಿಂದ ಪ್ರಶಂಸಿಸಿದರು.

ಬ್ರಾಹ್ಮಣಶಿರೋಮಣಿಗಳಾದ ಮಹರ್ಷಿಗಳೆಲ್ಲರೂ ಪುರುಷೋತ್ತಮನಾದ ಶ್ರೀಕೃಷ್ಣನನ್ನು ಸ್ತೋತ್ರಮಾಡುತ್ತಾ ಭೀಷ್ಮನನ್ನೂ ಮಂದ-ಮಂದವಾಗಿ ಪುನಃ ಪುನಃ ಪ್ರಶಂಸಿಸುತ್ತಿದ್ದರು. ಪುರುಷೋತ್ತಮನು ಭೀಷ್ಮನ ಆ ಭಕ್ತಿಯೋಗವನ್ನು ತಿಳಿದವನಾಗಿ ಅತ್ಯಂತಸಂಹೃಷ್ಟನಾಗಿ ಒಡನೆಯೇ ಮೇಲೆದ್ದು ರಥವನ್ನು ಹತ್ತಿ ಕುಳಿತುಕೊಂಡನು. ಕೇಶವ-ಸಾತ್ಯಕಿಯರು ಒಂದೇ ರಥದಲ್ಲಿಯೇ ಕುಳಿತು ಭೀಷ್ಮನ ಬಳಿಗೆ ತೆರಳಿದರು. ಮತ್ತೊಂದು ರಥದಲ್ಲಿ ಯುಧಿಷ್ಠಿರ-ಧನಂಜಯರು ಪ್ರಯಾಣಮಾಡಿದರು. ಭೀಮಸೇನ-ನಕುಲ-ಸಹದೇವರು ಬೇರೊಂದು ರಥದಲ್ಲಿ ಪ್ರಯಾಣಮಾಡಿದರು. ಕೃಪ, ಯುಯುತ್ಸು, ಸೂತನಾದ-ಶತ್ರುತಾಪಕನಾದ ಸಂಜಯ–ಈ ಮೂವರೂ ಮತ್ತೊಂದು ರಥದಲ್ಲಿ ಕುಳಿತು ಯುಧಿಷ್ಠಿರಾದಿಗಳನ್ನು ಅನುಸರಿಸಿದರು. ಪುರುಷಶ್ರೇಷ್ಠರಾದ ಪಾಂಡವರೂ ಮತ್ತು ಶ್ರೀಕೃಷ್ಣನೂ, ಕೃಪಾದಿಗಳೂ ನಗರಾಕಾರವಾದ ( ಅತ್ಯಂತವಿಶಾಲವಾದ ) ರಥಗಳಲ್ಲಿ ಕುಳಿತು, ರಥಚಕ್ರಗಳ ಘೋಷಗಳಿಂದ ಭೂಮಿಯನ್ನೇ ನಡುಗಿಸುತ್ತಾ ಅತ್ಯಂತ ವೇಗದಿಂದ ಭೀಷ್ಮನಿದ್ದೆಡೆಗೆ ಹೋಗುತ್ತಿದ್ದರು.

ತತೋ ಗಿರಃ ಪುರುಷವರಸ್ತವಾನ್ವಿತಾ
ದ್ವಿಜೇರಿತಾಃ ಪಥಿ ಸುಮನಾಃ ಸ ಶುಶ್ರುವೇ ।
ಕೃತಾಞ್ಜಲಿಂ ಪ್ರಣತಮಥಾಪರಂ ಜನಂ
ಸ ಕೇಶಿಹಾ ಮುದಿತಮನಾಭ್ಯನನ್ದತ ॥೧೯॥

ಆ ಸಮಯದಲ್ಲಿ ಪುರುಷೋತ್ತಮನಾದ ಶ್ರೀಕೃಷ್ಣನು ಮಾರ್ಗದಲ್ಲಿ ಅನೇಕ ಬ್ರಾಹ್ಮಣರು ಸುಶ್ರಾವ್ಯವಾಗಿ ಸ್ತೋತ್ರಮಾಡುತ್ತಿದ್ದುದನ್ನು ಕೇಳಿದನು. ಆನಂದತುಂದಿಲನಾಗಿದ್ದ ಕೇಶಿಹಂತಕನಾದ ಶ್ರೀಕೃಷ್ಣನು ಬದ್ಧಾಂಜಲಿಗಳಾಗಿ ತಲೆಬಾಗಿ ನಮಸ್ಕರಿಸುತ್ತಿದ್ದ ಇತರ ಜನರನ್ನು ಅಭಿನಂದಿಸಿದನು.”

೪೭ನೆಯ ಅಧ್ಯಾಯವು ಮುಗಿಯಿತು.

೪೮ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಪರಶುರಾಮನು ಮಾಡಿದ ಕ್ಷತ್ರಿಯರ ಹನನದ ವಿಷಯವಾಗಿ ಯುಧಿಷ್ಠಿರರಾಜನು ಪ್ರಶ್ನಿಸಿದುದು

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಬಳಿಕ ಶ್ರೀಕೃಷ್ಣ, ಯುಧಿಷ್ಠಿರರಾಜ, ಕೃಪಾದಿಗಳು, ಭೀಮಸೇನನೇ ಮೊದಲಾದ ನಾಲ್ವರು ಪಾಂಡವರು–ಈ ಎಲ್ಲರೂ ಪತಾಕಾ-ಧ್ವಜಗಳಿಂದ ಸುಶೋಭಿತವಾಗಿದ್ದ, ನಗರಗಳಂತೆ ವಿಶಾಲವಾಗಿದ್ದ ಶೀಘ್ರವಾಗಿ ಹೋಗುವ ಕುದುರೆಗಳಿಂದ ಯುಕ್ತವಾಗಿದ್ದ ರಥಗಳ ಮೂಲಕ ಬಹಳ ಬೇಗ ಕುರುಕ್ಷೇತ್ರವನ್ನು ತಲುಪಿದರು. ಅವರೆಲ್ಲರೂ ತಲೆ ಗೂದಲುಗಳಿಂದಲೂ, ಮಜ್ಜೆಯಿಂದಲೂ, ಮೂಳೆಗಳಿಂದಲೂ ಸಮಾಕುಲ ವಾಗಿದ್ದ ಮಹಾತ್ಮರಾದ ಕ್ಷತ್ರಿಯರು ಶರೀರಗಳನ್ನು ಬಿಟ್ಟುಹೋಗಿದ್ದ ಕುರುಕ್ಷೇತ್ರದಲ್ಲಿ ರಥಗಳಿಂದ ಇಳಿದರು. ಕುರುಕ್ಷೇತ್ರದಲ್ಲಿ ಆನೆ-ಕುದುರೆಗಳ ದೇಹಗಳೂ ಮತ್ತು ಮೂಳೆಗಳೂ ಪರ್ವತೋಪಮವಾಗಿ ಬಿದ್ದಿದ್ದುವು. ಕುರುಕ್ಷೇತ್ರದ ಸುತ್ತಲೂ ಮನುಷ್ಯರ ತಲೆಗಳ ಕಪಾಲಗಳು ವಿಸ್ತೃತವಾಗಿ ಬಿದ್ದಿದ್ದು ಶಂಖಗಳಂತೆ ಕಾಣುತ್ತಿದ್ದುವು.

ಕುರುಕ್ಷೇತ್ರದ ಸುತ್ತಲೂ ಸಾವಿರಾರು ಚಿತೆಗಳು ಉರಿಯುತ್ತಿದ್ದುವು. ರಣರಂಗವು ಯೋಧರ ಕವಚಗಳಿಂದಲೂ ಶಸ್ತ್ರಗಳಿಂದಲೂ ಸಮಾಕುಲವಾಗಿದ್ದಿತು. ಆ ಸಮಯದಲ್ಲಿ ಕುರುಕ್ಷೇತ್ರವು ಕಾಲನ ಪಾನಭೂಮಿಯಂತೆಯೇ ಕಾಣುತ್ತಿದ್ದಿತು ಮತ್ತು ಅಲ್ಲಲ್ಲಿ ಬಿದ್ದಿದ್ದ ಮಜ್ಜಾಸ್ಥಿಯೇ ಮೊದಲಾದುವುಗಳು ಕಾಲನು ತಿಂದು ಉಳಿಸಿದ ಉಚ್ಛಿಷ್ಟದಂತೆಯೇ ಕಾಣುತ್ತಿದ್ದುವು. ಶ್ರೀಕೃಷ್ಣನೇ ಮೊದಲಾದ ಆ ಮಹಾರಥರು ಭೂತಗಳ ಸಮೂಹಗಳಿಂದ ಸಂಚರಿಸಲ್ಪಡುತ್ತಿದ್ದ, ರಾಕ್ಷಸರ ಸಮೂಹಗಳಿಂದ ಸಂಸೇವಿಸಲ್ಪಡುತ್ತಿದ್ದ ಕುರುಕ್ಷೇತ್ರವನ್ನೇ ನೋಡುತ್ತಾ, ಬೇಗ-ಬೇಗ ಮುಂದೆ ಹೋಗುತ್ತಿದ್ದರು. ಹಾಗೆ ಪ್ರಯಾಣಮಾಡುತ್ತಿರುವಾಗಲೇ ಮಹಾಬಾಹುವಾದ ಯದುಕುಲತಿಲಕನಾದ ಶ್ರೀಕೃಷ್ಣನು ಜಮದಗ್ನಿಯ ಮಗನಾದ ಪರಶುರಾಮನ ವಿಷಯವನ್ನು ಹೇಳತೊಡಗಿದನು :

"ಪಾರ್ಥ! ಅದೋ ಅಲ್ಲಿ ದೂರದಲ್ಲಿ ಕಾಣುತ್ತಿರುವ ಆ ಐದು ಸರೋವರಗಳೇ ರಾಮಹ್ರದಗಳು. ಆ ಸರೋವರಗಳಲ್ಲಿಯೇ ಪರಶುರಾಮನು ಕ್ಷತ್ರಿಯರ ರಕ್ತದಿಂದ ಪಿತೃಗಳಿಗೆ ತರ್ಪಣವನ್ನಿತ್ತನು. ಶಕ್ತಿಶಾಲಿಯಾದ ಪರಶುರಾಮನು ಇಪ್ಪತ್ತೊಂದು ಬಾರಿ ದಂಡಯಾತ್ರೆಮಾಡಿ ಕ್ಷತ್ರಿಯರನ್ನು ಸಂಹರಿಸಿ, ಭೂಮಂಡಲವನ್ನು ಕ್ಷತ್ರಿಯರಿಂದ ರಹಿತವನ್ನಾಗಿಯೇ ಮಾಡಿ ಇಲ್ಲಿಗೆ ಬಂದನಂತರ ಅತಿಘೋರವಾದ ಆ ಸಂಹಾರಕರ್ಮದಿಂದ ವಿರತನಾದನು."

"ಕೃಷ್ಣ! ಪರಶುರಾಮನು ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆಮಾಡಿ, ಪೃಥ್ವಿಯಲ್ಲಿದ್ದ ಎಲ್ಲ ಕ್ಷತ್ರಿಯರನ್ನೂ ಸಂಹರಿಸಿ, ಭೂಮಂಡಲವನ್ನು ಕ್ಷತ್ರಿಯರಹಿತವನ್ನಾಗಿ ಮಾಡಿದನೆಂದು ನೀನು ಹೇಳಿದೆಯಲ್ಲವೇ? ಈ ವಿಷಯದಲ್ಲಿ ನನಗೆ ದೊಡ್ಡ ಸಂದೇಹವಿದೆ. ಅಮಿತವಿಕ್ರಮನೇ! ಯದುಶ್ರೇಷ್ಠನೇ! ಪರಶುರಾಮನು ಕ್ಷತ್ರಿಯಬೀಜವನ್ನೇ ಸುಟ್ಟುಹಾಕಿದನೆಂದ ಮೇಲೆ ಭೂಮಂಡಲದಲ್ಲಿ ಪುನಃ ಕ್ಷತ್ರಿಯರ ಉತ್ಪತ್ತಿಯು ಹೇಗಾಯಿತು? ಮಹಾತ್ಮನಾದ, ಭಗವಾನ್ ಪರಶುರಾಮನು ಕ್ಷತ್ರಿಯರ ಕುಲವನ್ನೇ ಯಾವ ಕಾರಣಕ್ಕಾಗಿ ವಿನಾಶಗೊಳಿಸಿದನು? ಪುನಃ ಕ್ಷತ್ರಿಯರ ವಂಶವು ಹೇಗೆ

ಹುಟ್ಟಿತು? ಮತ್ತು ವೃದ್ಧಿಯನ್ನು ಹೊಂದಿತು? ವಾಗ್ಮಿಗಳಲ್ಲಿ ಶ್ರೇಷ್ಠನಾದವನೇ! ನೀನು ಹೇಳುವುದನ್ನು ನೋಡಿದರೆ ದೊಡ್ಡದಾದ ರಥಯುದ್ಧವೇ ನಡೆದುದರ ಪರಿಣಾಮದಿಂದಾಗಿ ಕೋಟಿ-ಕೋಟಿ ಕ್ಷತ್ರಿಯರು ಮಡಿದಿರಬೇಕು. ಹಾಗೆಯೇ ಈ ಭೂಮಂಡಲವೂ ಮೃತರಾದ ಕ್ಷತ್ರಿಯರ ದೇಹಗಳಿಂದ ವ್ಯಾಪ್ತವಾಗಿದ್ದಿರಬೇಕು. ಯದುಶಾರ್ದೂಲನೇ! ಭೃಗುವಂಶೀಯನಾದ ಮಹಾತ್ಮನಾದ ಪರಶುರಾಮನು ಹಿಂದೆ ಈ ಕುರುಕ್ಷೇತ್ರದಲ್ಲಿ ಎಲ್ಲ ಕ್ಷತ್ರಿಯರನ್ನೂ ಏಕೆ ಸಂಹರಿಸಿದನು? ಗರುಡಧ್ವಜನೇ! ವಾರ್ಷ್ಣೇಯನೇ! ಉಪೇಂದ್ರನೇ! ಈ ನನ್ನ ಸಂದೇಹವನ್ನು ನಿವಾರಣೆಮಾಡು. ಏಕೆಂದರೆ ನೀನೇ ಶಾಸ್ತ್ರಮಯನು. ನಿನಗಿಂತಲೂ ಅತಿಶಯವಾದ ಶಾಸ್ತ್ರವು ಮತ್ತೊಂದಿರುವುದಿಲ್ಲ."

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಗದಾಗ್ರಜನಾದ ಪ್ರಭುವಾದ ಶ್ರೀಕೃಷ್ಣನು ಯುಧಿಷ್ಠಿರನ ಪ್ರಾರ್ಥನೆಯನ್ನು ಅಂಗೀಕರಿಸಿ, ಅಪ್ರತಿಮವಾದ ತೇಜಸ್ಸಿನಿಂದ ಕೂಡಿದ್ದ ಯುಧಿಷ್ಠಿರನಿಗೆ ಪರಶುರಾಮನ ದೆಸೆಯಿಂದಾಗಿ ಈ ಭೂಮಿಯು ಕ್ಷತ್ರಿಯರ ದೇಹಗಳಿಂದ ವ್ಯಾಪ್ತವಾದ ವಿಷಯವನ್ನು ಯಥಾವತ್ತಾಗಿ ವಿಸ್ತಾರವಾಗಿ ಹೇಳತೊಡಗಿದನು."

೪೮ನೆಯ ಅಧ್ಯಾಯವು ಮುಗಿಯಿತು.

೪೯ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಶ್ರೀಕೃಷ್ಣನು ಪರಶುರಾಮೋಪಾಖ್ಯಾನವನ್ನು ಹೇಳುತ್ತಾ ಕ್ಷತ್ರಿಯರ ವಿನಾಶವನ್ನೂ ಮತ್ತು ಪುನರುತ್ಪತ್ತಿಯ ಕಥೆಯನ್ನೂ ಹೇಳಿದುದು

ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳುತ್ತಾನೆ :

"ಕುಂತೀಕುಮಾರ! ಮಹರ್ಷಿಗಳು ಹೇಳುತ್ತಿದ್ದ ಪರಶುರಾಮನ ಜನ್ಮ ಮತ್ತು ಪ್ರಭಾವಗಳನ್ನು ನಾನು ಹೇಗೆ ಕೇಳಿರುವೆನೋ ಹಾಗೆಯೇ ನಿನಗೂ ಹೇಳುತ್ತೇನೆ. ಯಾವ ಕಾರಣಕ್ಕಾಗಿ ಕೋಟ್ಯನುಕೋಟಿ ಕ್ಷತ್ರಿಯರು ಪರಶು

ರಾಮನಿಂದ ಹತರಾದರು? ಯಾರು ಭಾರತಯುದ್ಧದಲ್ಲಿ ಹತರಾದರೋ ಆ ಕ್ಷತ್ರಿಯರು ರಾಜವಂಶಗಳಲ್ಲಿ ಪುನಃ ಹೇಗೆ ಹುಟ್ಟಿದರು? ಎಂಬುದೆಲ್ಲವನ್ನೂ ಹೇಳುತ್ತೇನೆ :

ಹಿಂದೆ ಜಹ್ನುವೆಂಬ ಹೆಸರಿನ ರಾಜನೊಬ್ಬನಿದ್ದನು. ಅಜನೆಂಬುವನು ಜಹ್ನುವಿನ ಮಗ. ಅಜನಿಗೆ ಬಲಾಕಾಶ್ವ ಎಂಬ ಮಗನಿದ್ದನು. ಬಲಾಕಾಶ್ವನ ಮಗನೇ ಕುಶಿಕನು. ಕುಶಿಕನು ಬಹಳ ಧರ್ಮಜ್ಞನಾಗಿದ್ದನು. ಭೂಮಿಯಲ್ಲಿ ಇಂದ್ರನಿಗೆ ಸಮಾನನಾಗಿದ್ದ ಕುಶಿಕನು, ಯಾರಿಂದಲೂ ಪರಾಜಿತನಾಗದೇ ಮೂರು ಲೋಕಗಳಿಗೂ ಈಶ್ವರನಾಗುವ ಮಗನನ್ನೇ ಪಡೆದುಕೊಳ್ಳಬೇಕೆಂಬ ಆಶಯದಿಂದ ಘೋರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದನು. ಸಹಸ್ರಾಕ್ಷನಾದ, ಲೋಕೇಶ್ವರೇಶ್ವರನಾದ ಪುರಂದರನು ಘೋರವಾದ ತಪಸ್ಸನ್ನು ಮಾಡುತ್ತಿದ್ದ ಕುಶಿಕನನ್ನು ನೋಡಿ ಮತ್ತು ತಪಸ್ಸಿನಿಂದಲೇ ಕುಶಿಕನು ಸರ್ವಸಮರ್ಥನಾದ ಪುತ್ರನನ್ನು ಪಡೆದುಕೊಳ್ಳಬಲ್ಲನೆಂಬುದನ್ನೂ ಮನಗಂಡು ತಾನೇ ಅವನ ಮಗನಾಗಿ ಹುಟ್ಟಿದನು. ಅದರಿಂದಾಗಿ ಇಂದ್ರನು ಕುಶಿಕನ ಮಗನಾಗಿ ಕೌಶಿಕನೆಂದೂ ಮತ್ತು ಗಾಧಿಯೆಂದೂ ಪ್ರಖ್ಯಾತನಾದನು. ಗಾಧಿಗೆ ಸತ್ಯವತೀ ಎಂಬ ಹೆಸರಿನ ಮಗಳು ಹುಟ್ಟಿದಳು. ಅವಳನ್ನು ಗಾಧಿಯು ಭೃಗುಋಷಿಯ ಮಗನಾದ ಋಚೀಕನಿಗೆ ಮದುವೆಮಾಡಿಕೊಟ್ಟನು. ಸತ್ಯವತಿಯು ಶುದ್ಧವಾದ ಆಚಾರ-ವಿಚಾರವುಳ್ಳವಳಾಗಿದ್ದಳು. ಅದರಿಂದ ಅವಳ ಪತಿಯಾದ ಋಚೀಕನು ಪ್ರಸನ್ನನಾಗಿ ತನಗೂ ಮತ್ತು ತನ್ನ ಮಾವನಾದ ಗಾಧಿಗೂ ಪುತ್ರರಾಗಬೇಕೆಂಬ ಇಚ್ಛೆಯಿಂದ ಮಂತ್ರೋಕ್ತವಾಗಿ ಚರುವನ್ನು ಸಿದ್ಧಗೊಳಿಸಿದನು. ಬಳಿಕ ಭೃಗುಪುತ್ರನಾದ ಋಚೀಕನು ಭಾರ್ಯೆಯನ್ನು ಕರೆದು ವಿಭಾಗಿಸಿದ ಎರಡು ಚರುಗಳನ್ನೂ ಅವಳ ಮುಂದಿಟ್ಟು ಒಂದನ್ನು ಸತ್ಯವತಿಯು ಭಕ್ಷಿಸಬೇಕೆಂತಲೂ–ಮತ್ತೊಂದನ್ನು ಸತ್ಯವತಿಯ ತಾಯಿಯು ಭಕ್ಷಿಸಬೇಕೆಂದೂ ನಿರ್ದೇಶ ಮಾಡಿ ಹೇಳಿದನು :

**ತಸ್ಯಾ ಜನಿಷ್ಯತೇ ಪುತ್ರೋ ದೀಪ್ತಿಮಾನ್ಕ್ಷತ್ರಿಯರ್ಷಭಃ ।**
**ಅಜಯ್ಯಃ ಕ್ಷತ್ರಿಯೈರ್ಲೋಕೇ ಕ್ಷತ್ರಿಯರ್ಷಭಸೂದನಃ ॥೧೦॥**

"ಈ ಚರುವನ್ನು ನಿನ್ನ ತಾಯಿಯು ಭಕ್ಷಿಸುವುದರಿಂದ ಅವಳಲ್ಲಿ ದೀಪ್ತಿಮಂತನಾದ ಕ್ಷತ್ರಿಯಶ್ರೇಷ್ಠನು ಹುಟ್ಟುತ್ತಾನೆ. ಕ್ಷತ್ರಿಯರ್ಷಭರನ್ನೇ ಸಂಹಾರ ಮಾಡುವ ಅವನು ಲೋಕದಲ್ಲಿ ಎಲ್ಲ ಕ್ಷತ್ರಿಯರಿಂದಲೂ ಜಯಿಸಲು ಅಸಾಧ್ಯನಾಗುತ್ತಾನೆ.

**ತವಾಪಿ ಪುತ್ರಂ ಕಲ್ಯಾಣಿ ಧೃತಿಮನ್ತಂ ಶಮಾತ್ಮಕಮ್ ।**
**ತಪೋನ್ವಿತಂ ದ್ವಿಜಶ್ರೇಷ್ಠಂ ಚರುರೇಷ ವಿಧಾಸ್ಯತಿ ॥೧೧॥**

ಕಲ್ಯಾಣಿ! ನಿನಗಾಗಿ ಸಿದ್ಧಪಡಿಸಿರುವ ಈ ಚರುವಿನ ಭಕ್ಷಣೆಯಿಂದ ನಿನ್ನಲ್ಲಿ ಧೈರ್ಯಶಾಲಿಯಾದ, ಶಾಂತಸ್ವಭಾವನಾದ, ಯಾವಾಗಲೂ ತಪಸ್ಸಿನಲ್ಲಿಯೇ ನಿರತನಾಗಿರುವ ಬ್ರಾಹ್ಮಣಶ್ರೇಷ್ಠನು ಹುಟ್ಟುತ್ತಾನೆ."

ಯುಧಿಷ್ಠಿರ! ಭೃಗುಪುತ್ರನಾದ ಶ್ರೀಮಂತನಾದ ಋಚೀಕನು ಪತ್ನಿಗೆ ಹೀಗೆ ಹೇಳಿ ತಪಸ್ಸುಮಾಡಲು ಅರಣ್ಯಕ್ಕೆ ಹೊರಟುಹೋದನು.

ಆ ಸಮಯದಲ್ಲಿಯೇ ತೀರ್ಥಯಾತ್ರೆಮಾಡಲು ಹೊರಟಿದ್ದ ಗಾಧಿರಾಜನು ತನ್ನ ಪತ್ನಿಯೊಡನೆ ಅಳಿಯನಾದ ಋಚೀಕನ ಆಶ್ರಮಕ್ಕೆ ಆಗಮಿಸಿದನು. ತಂದೆ-ತಾಯಿಗಳಿಬ್ಬರೂ ಆಶ್ರಮಕ್ಕೆ ಬಂದುದನ್ನು ಕಂಡು ಪರಮಹೃಷ್ಟಳಾದ ಸತ್ಯವತಿಯು, ಪತಿಯು ಅನುಗ್ರಹಿಸಿ ಕೊಟ್ಟಿದ್ದ ಎರಡು ಚರುಗಳನ್ನೂ ತೆಗೆದುಕೊಂಡು ಏಕಾಗ್ರಚಿತ್ತಳಾಗಿ ತಾಯಿಯ ಬಳಿಗೆ ಹೋಗಿ, ತನ್ನ ಪತಿಯು ಹೇಳಿದುದನ್ನು ತಾಯಿಯೊಡನೆ ಹೇಳಿದಳು. ಮಗಳು ಕೊಟ್ಟ ಎರಡು ಚರುಗಳನ್ನೂ ಕೈಗೆತ್ತಿಕೊಂಡ ಗಾಧಿರಾಜನ ಪತ್ನಿಯು ಅಜ್ಞಾನವಶದಿಂದ ತನಗೆಂದು ಅಭಿಮಂತ್ರಿಸಿ ಇಟ್ಟಿದ್ದ ಚರುವನ್ನು ಮಗಳಿಗೆ ಕೊಟ್ಟುಬಿಟ್ಟಳು. ಋಚೀಕನು ತನ್ನ ಪತ್ನಿಗೆಂದು ಅಭಿಮಂತ್ರಿಸಿ ಇಟ್ಟಿದ್ದ ಚರುವನ್ನು ತಾನು ಭುಂಜಿಸಿದಳು. (ಋಚೀಕನು ಪತ್ನಿಗೆಂದು ಅಭಿಮಂತ್ರಿಸಿ ಇಟ್ಟಿದ್ದ ಬ್ರಹ್ಮಚರುವು ಅತ್ತೆಗೂ, ಅತ್ತೆಗೆಂದು ಅಭಿಮಂತ್ರಿಸಿ ಇಟ್ಟಿದ್ದ ಕ್ಷತ್ರಚರುವು ಪತ್ನಿಗೂ ಅದಲು-ಬದಲಾಯಿತು.) ಆ ವಿಪರ್ಯಾಸದ ಕಾರಣದಿಂದಲೇ ಸತ್ಯವತಿಯು ಶಮ-ದಮಪ್ರಧಾನನಾದ ಬ್ರಾಹ್ಮಣಶ್ರೇಷ್ಠನನ್ನು ಪಡೆಯುವುದಕ್ಕೆ ಬದಲಾಗಿ ಪ್ರದೀಪ್ತವಾದ ತೇಜಸ್ಸಿನಿಂದ ಕೂಡಿದ್ದ ಕ್ಷತ್ರಿಯಾಂತಕರವಾದ, ಭಯಂಕರವಾದ ಗರ್ಭವನ್ನು ಧಾರಣೆಮಾಡಿದಳು.

ಭೃಗುಶಾರ್ದೂಲನಾದ ಋಚೀಕನು ತನ್ನ ಭಾರ್ಯೆಯ ಗರ್ಭದಲ್ಲಿದ್ದ ಬ್ರಾಹ್ಮಣಭ್ರೂಣವನ್ನು ದಿವ್ಯದೃಷ್ಟಿಯಿಂದ ನೋಡಿ ದೇವರೂಪಿಣಿಯಾದ ಭಾರ್ಯೆಯನ್ನು ಕುರಿತು ಹೇಳಿದನು : "ಭದ್ರೇ! ಚರುವು ಅದಲು-ಬದಲಾದ ಕಾರಣ ನೀನು ನಿನ್ನ ತಾಯಿಯಿಂದ ವಂಚಿತಳಾಗಿರುವೆ. ಇದರ ಪರಿಣಾಮವಾಗಿ ಕ್ರೂರಕರ್ಮಿಯೂ ಮತ್ತು ಅತ್ಯಂತಕೋಪಿಷ್ಠನೂ ಆದ ಮಗನು ನಿನ್ನಲ್ಲಿ ಹುಟ್ಟುತ್ತಾನೆ. ಇದಕ್ಕೆ ಪ್ರತಿಯಾಗಿ ನಿನ್ನ ತಮ್ಮನು ಬ್ರಹ್ಮಭೂತನೂ, ತಪಸ್ಸಿನಲ್ಲಿಯೇ ಸದಾ ನಿರತನೂ ಆಗುತ್ತಾನೆ. ನಾನು ನಿನಗಾಗಿ ಸಿದ್ಧಪಡಿಸಿದ್ದ ಚರುವಿನಲ್ಲಿ ಸಕಲವಾದ ಬ್ರಹ್ಮತೇಜಸ್ಸನ್ನೂ ಆಕರ್ಷಿಸಿ ಸ್ಥಾಪಿಸಿದ್ದೆನು. ನಿನ್ನ ತಾಯಿಗಾಗಿ ಸಿದ್ಧಪಡಿಸಿದ್ದ ಚರುವಿನಲ್ಲಿ ಸಕಲವಾದ ಕ್ಷತ್ರಿಯತೇಜಸ್ಸನ್ನೂ ಆಕರ್ಷಿಸಿ ಸ್ಥಾಪಿಸಿದ್ದೆನು. ಚರುಗಳೆರಡೂ ಅದಲು-ಬದಲಾದುದರಿಂದ ನಾನು ಇಚ್ಛೆಸಿದ್ದಂತೆ ನಿನ್ನ ಗರ್ಭದಲ್ಲಿ ತಪಸ್ಸಿನಲ್ಲಿಯೇ ನಿರತನಾಗಿರುವ ಶಮ-ದಮಾದಿ ಗುಣಗಳಿಂದ ಸಂಪನ್ನನಾದ ಬ್ರಾಹ್ಮಣನು ಹುಟ್ಟುವುದಿಲ್ಲ. ಅಂತಹ ಬ್ರಾಹ್ಮಣಪುತ್ರನು ನಿನ್ನ ತಾಯಿಯ ಉದರದಲ್ಲಿ ಹುಟ್ಟುತ್ತಾನೆ. ನಿನ್ನಲ್ಲಿ ಕ್ಷತ್ರಿಯಪುತ್ರನು ಹುಟ್ಟುತ್ತಾನೆ."

ಯುಧಿಷ್ಠಿರ! ಋಚೀಕನು ಮಹಾಭಾಗ್ಯಶಾಲಿನಿಯಾದ ಪತ್ನಿಯೊಡನೆ ಹೀಗೆ ಹೇಳಿದೊಡನೆಯೇ ಸತ್ಯವತಿಯು ಋಚೀಕನ ಕಾಲುಗಳಿಗೆ ಬಿದ್ದು ಗಡ-ಗಡನೆ ನಡುಗುತ್ತಾ ಹೇಳಿದಳು :

"ಪ್ರಭುವೇ! ಭಗವನ್! ಬ್ರಾಹ್ಮಣಾಪಸದನಾದ ಮಗನನ್ನು ಪಡೆಯುವೆಯೆಂದು ಈಗ ನನ್ನೊಡನೆ ಹೇಳುವುದು ಖಂಡಿತವಾಗಿಯೂ ನಿನಗೆ ಯುಕ್ತವಲ್ಲ. ಹಾಗೆಂದಿಗೂ ಆಗಬಾರದು."

"ಕಲ್ಯಾಣಿ! ನಿನ್ನಲ್ಲಿ ಅಂತಹ ಕ್ರೂರಕರ್ಮನು ಹುಟ್ಟಬೇಕೆಂದು ಇಚ್ಛೆಸಿ ನಾನೂ ಸಂಕಲ್ಪಮಾಡಲಿಲ್ಲ. ನಿನ್ನಲ್ಲಿ ಬ್ರಹ್ಮಭೂತನಾದ ಬ್ರಾಹ್ಮಣಶ್ರೇಷ್ಠನೇ ಹುಟ್ಟಬೇಕೆಂದು ನನ್ನ ಅಭಿಲಾಷೆಯೂ ಆಗಿದ್ದಿತು. ಆದರೆ ಸಿದ್ಧಪಡಿಸಿದ್ದ ಚರುಗಳ ವ್ಯತ್ಯಾಸದಿಂದ ನಿನ್ನಲ್ಲಿ ಉಗ್ರಕರ್ಮನಾದ ಕ್ಷತ್ರಿಯನೇ ಹುಟ್ಟುತ್ತಾನೆ."

"ಮುನಿಯೇ! ಪ್ರಭುವೇ! ನೀನು ಇಚ್ಛೆಸಿದ್ದೇ ಆದರೆ ಈ ಮೂರು

ಲೋಕಗಳನ್ನೂ ಪುನಃ ಸೃಷ್ಟಿಮಾಡುವ ಸಾಮರ್ಥ್ಯವು ನಿನಗಿದೆ. ಹೀಗಿರುವಾಗ ನೀನು ಬ್ರಾಹ್ಮಣಪುತ್ರನನ್ನೇ ನನಗೆ ದಯಪಾಲಿಸಬೇಕೆಂದು ಇಚ್ಛಿಸಿದರೆ ಸಾಧ್ಯವಾಗಲಾರದೇ? ಸಾಧ್ಯವಾಗಿಯೇ ತೀರುತ್ತದೆ. ಆದುದರಿಂದ ಶಮ-ದಮಾದಿಗುಣಗಳಿಂದ ಸಂಪನ್ನನಾದ, ಸರಳಸ್ವಭಾವವುಳ್ಳ ಮಗನನ್ನೇ ನನಗೆ ಅನುಗ್ರಹಿಸು."

"ಭದ್ರೇ! ನಾನು ಹಿಂದೆ ಯಾವಾಗಲೂ ಪರಿಹಾಸಕ್ಕಾದರೂ ಸುಳ್ಳನ್ನು ಹೇಳಿದವನೇ ಅಲ್ಲ. ಹೀಗಿರುವಾಗ ಅಗ್ನಿಯನ್ನು ಪ್ರತಿಷ್ಠಾಪಿಸಿ ಮಂತ್ರವತ್ತಾಗಿ ಚರುವನ್ನು ಸಂಕಲ್ಪಪೂರ್ವಕವಾಗಿ ಸಿದ್ಧಪಡಿಸಿರುವಾಗ ಅದು ಸುಳ್ಳಾಗಲು ಹೇಗೆ ಸಾಧ್ಯವಾಗುತ್ತದೆ? ಚರುವಿನ ಭಕ್ಷಣಾನುಸಾರವಾಗಿ ನಿನ್ನಲ್ಲಿ ಕ್ಷತ್ರಿಯನೇ ಹುಟ್ಟುತ್ತಾನೆ. ನಿಮ್ಮ ತಾಯಿಯಲ್ಲಿ ಬ್ರಹ್ಮಭೂತನಾದ ಬ್ರಾಹ್ಮಣನೇ ಹುಟ್ಟುತ್ತಾನೆ. ಆದರೆ ನಾನು ಇದನ್ನು ನನ್ನ ತಪಃಪ್ರಭಾವದಿಂದ ಹಿಂದೆಯೇ ಕಂಡುಕೊಂಡಿದ್ದೆನು. ಈ ಪ್ರಕರಣದಿಂದಾಗಿ ನಿನ್ನ ತಂದೆಯ ವಂಶವೇ ಬ್ರಹ್ಮಭೂತವಾಗುತ್ತದೆ."

"ಮಂತ್ರಜಪಗಳನ್ನು ಮಾಡುವವರಲ್ಲಿ ಶ್ರೇಷ್ಠನಾದವನೇ! ಪ್ರಭುವೇ! ನಮ್ಮ ಪೌತ್ರನು ಬೇಕಾದರೆ ನೀನು ಹೇಳಿದಂತೆ ಕ್ಷತ್ರಿಯನಾಗಿ ( ಕ್ಷತ್ರಿಯ ಸ್ವಭಾವದವನಾಗಿ ) ಹುಟ್ಟಲಿ. ಆದರೆ ನನ್ನಲ್ಲಿ ಮಾತ್ರ ಈಗ ಶಾಂತಸ್ವಭಾವದ ಮಗನೇ ಹುಟ್ಟುವಂತೆ ಅನುಗ್ರಹಿಸು."

"ವರವರ್ಣಿನಿ! ಪುತ್ರ-ಪೌತ್ರರಲ್ಲಿ ನನಗಾವ ವ್ಯತ್ಯಾಸವೂ ಇರುವುದಿಲ್ಲ. ನಿನ್ನ ಅಪೇಕ್ಷೆಯಂತೆ ಮೊಮ್ಮಗನೇ ಕ್ಷತ್ರಿಯನಾಗಿ ಹುಟ್ಟುತ್ತಾನೆ."

ಯುಧಿಷ್ಠಿರ! ಋಚೀಕನ ಅನುಗ್ರಹದಂತೆ ಸತ್ಯವತಿಯೂ ಶಾಂತ ಸ್ವಭಾವದವನಾದ, ಪ್ರಯತ್ನಪೂರ್ವಕವಾಗಿ ವ್ರತಾನುಷ್ಠಾನಗಳನ್ನು ಮಾಡುವ ಸ್ವಭಾವದಿಂದ ಕೂಡಿದ್ದ ಭೃಗುವಂಶೀಯನಾದ ಜಮದಗ್ನಿಯನ್ನು ಪ್ರಸವಿಸಿದಳು. ಇತ್ತಲಾಗಿ ಕುಶಿಕನ ಮಗನಾದ ಗಾಧಿರಾಜನು ವಿಶ್ವಾಮಿತ್ರನೆಂಬ ಮಗನನ್ನು ಋಚೀಕನ ಚರುವಿನ ದೆಸೆಯಿಂದಾಗಿ ಪಡೆದುಕೊಂಡನು. ಋಚೀಕನು ಹೇಳಿದ್ದಂತೆ ವಿಶ್ವಾಮಿತ್ರನು ಸಮಸ್ತವಾದ ಬ್ರಾಹ್ಮಣಗುಣಗಳಿಂದ ಕೂಡಿದ್ದನಲ್ಲದೇ ಕಡೆಯಲ್ಲಿ ಬ್ರಹ್ಮರ್ಷಿಪದವಿಯನ್ನೂ ಪಡೆದನು.

ಹಿಂದೆಯೇ ಹೇಳಿದಂತೆ ಋಚೀಕನು ಪತ್ನಿಯಾದ ಸತ್ಯವತಿಯಲ್ಲಿ ಅವಳ ಆಶಯದಂತೆ ತಪೋನಿಧಿಯಾದ ಜಮದಗ್ನಿಯನ್ನು ಪಡೆದುಕೊಂಡನು. ಮುಂದೆ ಜಮದಗ್ನಿಯು ಋಚೀಕನು ಹೇಳಿದಂತೆ ಅತ್ಯಂತ ಭಯಂಕರವಾದ ಮಗನನ್ನು ಪಡೆದುಕೊಂಡನು.

ಜಮದಗ್ನಿಯ ಮಗನಾದ ರಾಮನು ಸಕಲವಿದ್ಯೆಗಳಲ್ಲಿಯೂ ಪಾರಂಗತನಾಗಿದ್ದನು. ಅಂತೆಯೇ ಧನುರ್ವೇದದಲ್ಲಿಯೂ ಪಾರಂಗತ ನಾದನು. ಕ್ಷತ್ರಿಯಹಂತಕನಾದ ಅವನು ಪ್ರದೀಪ್ತನಾದ ಯಜ್ಞೇಶ್ವರನಂತೆಯೇ ಇದ್ದನು. ಭಾರ್ಗವರಾಮನು ಗಂಧಮಾದನಪರ್ವತದಲ್ಲಿ ಈಶ್ವರನನ್ನು ಕುರಿತು ಘೋರವಾದ ತಪಸ್ಸುಮಾಡಿ, ಅವನನ್ನು ತನ್ನ ತಪಸ್ಸಿನಿಂದ ಮೆಚ್ಚಿಸಿ ಅನೇಕ ಮಹಾಸ್ತ್ರಗಳನ್ನೂ–ಮಹಾತೇಜಸ್ಸಿನಿಂದ ಕೂಡಿದ್ದ ಗಂಡುಗೊಡಲಿಯನ್ನೂ ಪಡೆದುಕೊಂಡನು. ಬಹಳ ಹರಿತವಾದ ಅಲುಗಿನಿಂದ ಕೂಡಿದ್ದ, ಪ್ರಜ್ವಲಿಸುವ ಅಗ್ನಿದೇವನಂತೆಯೇ ಉಜ್ವಲವಾದ ಕಾಂತಿಯಿಂದ ಕೂಡಿದ್ದ, ಅಪ್ರಮೇಯವಾದ, ಈಶ್ವರದತ್ತವಾದ ಆ ಗಂಡುಗೊಡಲಿಯ ಪ್ರಭಾವ ದಿಂದಾಗಿ ಭಾರ್ಗವರಾಮನು ಲೋಕದಲ್ಲಿಯೇ ಅಪ್ರತಿಮಪರಾಕ್ರಮಿ ಯಾದನು.

ಅದೇ ಕಾಲದಲ್ಲಿ ಕೃತವೀರ್ಯನ ಮಗನಾದ, ಮಹಾಬಲಿಷ್ಠನಾದ, ಮಹಾತೇಜಸ್ವಿಯಾದ ಅರ್ಜುನನೆಂಬ ಕ್ಷತ್ರಿಯರಾಜನು ಹೈಹಯರಿಗೆ ಅಧಿ ಪತಿಯಾಗಿದ್ದನು. ಭಗವಾನ್ ದತ್ತಾತ್ರೇಯನ ಅನುಗ್ರಹದಿಂದ ಕಾರ್ತ ವೀರ್ಯಾರ್ಜುನನು ಸಾವಿರ ತೋಳುಗಳನ್ನೂ ಪಡೆದುಕೊಂಡಿದ್ದನು. ಪರಮಧಾರ್ಮಿಕನಾದ ಮಹಾತೇಜಸ್ವಿಯಾದ ಕಾರ್ತವೀರ್ಯನು ತನ್ನ ಬಾಹುಬಲದಿಂದಲೂ, ಅಸ್ತ್ರಬಲದಿಂದಲೂ ಯುದ್ಧದಲ್ಲಿ ಸಪ್ತದ್ವೀಪ ಗಳಿಂದಲೂ, ಪರ್ವತಗಳಿಂದಲೂ ಯುಕ್ತವಾದ ಭೂಮಂಡಲವನ್ನು ಜಯಿಸಿ, ಚಕ್ರವರ್ತಿಯಾಗಿ, ತಾನು ಮಾಡಿದ ಅಶ್ವಮೇಧಯಾಗದಲ್ಲಿ ಜಯಿಸಿದ್ದ ಅಖಂಡಭೂಮಂಡಲವನ್ನೂ ಬ್ರಾಹ್ಮಣರಿಗೆ ದಾನಮಾಡಿದನು. ಒಮ್ಮೆ ಹಸಿವು-ಬಾಯಾರಿಕೆಗಳಿಂದ ಬಳಲಿದ್ದ ಅಗ್ನಿದೇವನು ಕಾರ್ತವೀರ್ಯನ ಬಳಿಗೆ ಹೋಗಿ ಭಿಕ್ಷೆಯನ್ನು ಬೇಡಿದನು. ಮಹಾಪರಾಕ್ರಮಿಯಾದ ಸಹಸ್ರ ಬಾಹುವಾದ ಅರ್ಜುನನು ಅಗ್ನಿಗೆ ಭಿಕ್ಷೆಯನ್ನಿತ್ತನು. ಅಗ್ನಿಗೆ ಭಿಕ್ಷೆಯೆಂದರೆ

ದಹಿಸಲು ಸಾಧ್ಯವಾಗುವ ಸಕಲಪದಾರ್ಥಗಳೇ ಅಲ್ಲವೇ? ಕಾರ್ತವೀರ್ಯನು ಭಿಕ್ಷೆಯನ್ನು ನೀಡಿದೊಡನೆಯೇ ವೀರ್ಯವಂತನಾದ ಅಗ್ನಿಯು ಕಾರ್ತವೀರ್ಯನ ಬಾಣದ ಅಗ್ರಭಾಗದಿಂದ ಅವನ ರಾಜ್ಯದಲ್ಲಿದ್ದ ಗ್ರಾಮ ಗಳನ್ನೂ, ಪಟ್ಟಣಗಳನ್ನೂ, ರಾಷ್ಟ್ರಗಳನ್ನೂ, ಗೋಶಾಲೆಗಳನ್ನೂ ದಹಿಸುವ ಇಚ್ಛೆಯಿಂದ ಪ್ರಜ್ವಲಿಸತೊಡಗಿದನು. ಮಹಾತೇಜಸ್ವಿಯಾದ ಪುರುಷೇಂದ್ರ ನಾದ ಕಾರ್ತವೀರ್ಯನ ಪ್ರಭಾವದಿಂದ ಅಗ್ನಿಯು ನಗರ-ರಾಜ್ಯಗಳನ್ನೇ ಅಲ್ಲದೇ ಪರ್ವತಗಳನ್ನೂ ವನಸ್ಪತಿಗಳನ್ನೂ ದಹಿಸಿಬಿಟ್ಟನು. ವಾಯುವಿನ ಸಹಾಯವನ್ನೂ ತೆಗೆದುಕೊಂಡ ಯಜ್ಞೇಶ್ವರನು ಕಾರ್ತವೀರ್ಯನೊಡನೆ ಹೋಗಿ ರಮ್ಯವಾಗಿದ್ದ ಮತ್ತು ಜನಶೂನ್ಯವಾಗಿದ್ದ ಮಹಾತ್ಮನಾದ ಆಪವನ ಆಶ್ರಮವನ್ನೂ ಸುಟ್ಟುಬಿಟ್ಟನು.

ಮಹಾಬಾಹುವೇ! ಯುಧಿಷ್ಠಿರ! ಕಾರ್ತವೀರ್ಯನು ಅಗ್ನಿಯ ಮೂಲಕವಾಗಿ ತನ್ನ ದಿವ್ಯಾಶ್ರಮವನ್ನು ದಹಿಸಿದುದನ್ನು ಕಂಡು ಶಕ್ತಿಮಂತ ನಾದ ಆಪವಮುನಿಯು ಕ್ರುದ್ಧನಾಗಿ ಕಾರ್ತವೀರ್ಯನನ್ನು ಶಪಿಸಿದನು :

**ತ್ವಯಾ ನ ವರ್ಜಿತಂ ಯಸ್ಮಾನ್ಮಮೇದಂ ಹಿ ಮಹದ್ವನಮ್ ।**
**ದಗ್ಧಂ ತಸ್ಮಾದ್ರಣೇ ರಾಮೋ ಬಾಹೂಂಸ್ತೇ ಛೇತ್ಸ್ಯತೇಽರ್ಜುನ ॥**

"ಅರ್ಜುನ! ನೀನು ನನ್ನ ಈ ಮಹಾವನವನ್ನೂ ಬಿಡದೇ ದಹಿಸಿದೆ ಯಾದ ಕಾರಣ ಯುದ್ಧದಲ್ಲಿ ಭಾರ್ಗವರಾಮನು ನಿನ್ನ ಭುಜಗಳನ್ನು ಕತ್ತರಿ ಸುತ್ತಾನೆ."

ಮಹಾತೇಜಸ್ವಿಯಾದ ಅರ್ಜುನನು ಮಹಾಬಲಿಷ್ಠನಾಗಿದ್ದನು. ಸರ್ವದಾ ಶಾಂತನಾಗಿದ್ದನು. ಬ್ರಾಹ್ಮಣಪ್ರಿಯನಾಗಿದ್ದನು. ಶರಣಾಗತ ರಕ್ಷಕನಾಗಿದ್ದನು. ಮಹಾದಾನಿಯಾಗಿದ್ದನು. ಮಹಾಶೂರನೂ ಆಗಿದ್ದನು. ಈ ಕಾರಣಗಳಿಂದಾಗಿ ಮಹಾತ್ಮನಾದ ಆಪವನು ಕೊಟ್ಟ ಶಾಪದ ವಿಷಯವಾಗಿ ಸ್ವಲ್ಪವಾದರೂ ಚಿಂತಿಸಲೇ ಇಲ್ಲ. ಆದರೆ ಆಪವನು ಕೊಟ್ಟ ಶಾಪದ ಪ್ರಭಾವದಿಂದಾಗಿ ಅರ್ಜುನನ ಬಲಿಷ್ಠರಾದ ಮಕ್ಕಳೇ ತಂದೆಯ ವಧೆಗೆ ಕಾರಣರಾದರು.

ಆ ಶಾಪದ ಕಾರಣದಿಂದಲೇ ಅತ್ಯಂತಕ್ರೂರಿಗಳಾಗಿದ್ದ ದುರಭಿಮಾನಿ

ಗಳಾಗಿದ್ದ ಕಾರ್ತವೀರ್ಯನ ಮಕ್ಕಳು ಜಮದಗ್ನಿಯ ಹೋಮಧೇನುವಿನ ಕರುವನ್ನು ಅಪಹರಿಸಿಕೊಂಡು ಹೊರಟುಹೋದರು. ಧೀಮಂತನಾದ, ಹೈಹಯರ ಒಡೆಯನಾದ ಕಾರ್ತವೀರ್ಯನಿಗೆ ಆ ವಿಷಯವು ತಿಳಿದೇ ಇರಲಿಲ್ಲ. ಅರ್ಜುನನ ಮಕ್ಕಳು ಹೋಮಧೇನುವಿನ ಕರುವನ್ನು ಅಪಹರಿಸಿದ್ದುದರಿಂದಲೇ ಮಹಾತ್ಮನಾದ ಪರಶುರಾಮನಿಗೂ–ಕಾರ್ತವೀರ್ಯನಿಗೂ ಘೋರವಾದ ಯುದ್ಧವಾಯಿತು. ಆ ಯುದ್ಧದಲ್ಲಿ ಪ್ರಭುವಾದ ಪರಶುರಾಮನು ಕೋಪಗೊಂಡು ಅರ್ಜುನನ ಸಾವಿರ ತೋಳುಗಳನ್ನೂ ಕತ್ತರಿಸಿದನು. ಬಳಿಕ ಅಲ್ಲಲ್ಲಿಯೇ ಸಂಭ್ರಾಂತವಾಗಿ ಸುತ್ತಾಡುತ್ತಿದ್ದ ಹೋಮಧೇನುವಿನ ಕರುವನ್ನು ಆಶ್ರಮಕ್ಕೆ ಕರೆತಂದನು. ಅದಕ್ಕೆ ಪ್ರತಿಯಾಗಿ ಕಾರ್ತವೀರ್ಯನ ಮೂರ್ಖರಾದ ಮಕ್ಕಳು ಸಂಘಟಿತರಾಗಿ, ಯಾರಿಗೂ ತಿಳಿಯದಂತೆ ಜಮದಗ್ನಿಯ ಆಶ್ರಮಕ್ಕೆ ಹೋಗಿ, ತಪಸ್ಸಿನಲ್ಲಿ ಕುಳಿತಿದ್ದ ಜಮದಗ್ನಿಯ ತಲೆಯನ್ನು ಭಲ್ಲಾಯುಧಗಳ ಅಗ್ರಭಾಗಗಳಿಂದ ಕತ್ತರಿಸಿ ಶರೀರದಿಂದ ಪ್ರತ್ಯೇಕಿಸಿ ಕೆಳಕ್ಕೆ ಕೆಡವಿದರು. ಆ ಸಮಯದಲ್ಲಿ ಯಶೋವಂತನಾದ ಪರಶುರಾಮನು ಕುಶ-ಸಮಿತ್ತುಗಳನ್ನು ತರಲು ಆಶ್ರಮದಿಂದ ಬಹಳ ದೂರದ ಅರಣ್ಯಕ್ಕೆ ಹೋಗಿದ್ದನು.

ಆಶ್ರಮಕ್ಕೆ ಹಿಂದಿರುಗಿಬಂದೊಡನೆಯೇ ತಂದೆಯು ಹತನಾಗಿ ಬಿದ್ದಿರುವುದನ್ನು ನೋಡಿ ಪರಶುರಾಮನಿಗೆ ಸಹಿಸಿಕೊಳ್ಳಲು ಸಾಧ್ಯವೇ ಆಗಲಿಲ್ಲ. ಅತ್ಯಂತಕೋಪಾವಿಷ್ಟನಾಗಿ ಪೃಥ್ವಿಯನ್ನೇ ಕ್ಷತ್ರಿಯರಿಂದ ವಿಹೀನವನ್ನಾಗಿ ಮಾಡುವೆನೆಂದು ಪ್ರತಿಜ್ಞೆಮಾಡಿ, ತನ್ನ ಗಂಡುಗೊಡಲಿಯನ್ನು ಕೈಗೆತ್ತಿಕೊಂಡನು. ಬಳಿಕ ವೀರ್ಯವಂತನಾದ, ಭೃಗುಶಾರ್ದೂಲನಾದ ಪರಶುರಾಮನು ಭುಜಬಲ-ಪರಾಕ್ರಮಗಳನ್ನು ಪ್ರದರ್ಶಿಸುತ್ತಾ ಕಾರ್ತವೀರ್ಯನ ಮಕ್ಕಳನ್ನೂ–ಮೊಮ್ಮಕ್ಕಳನ್ನೂ ಸಂಪೂರ್ಣವಾಗಿ ವಿನಾಶಮಾಡಿದನು. ಹೀಗೆ ಮಹಾಕೋಪಿಷ್ಠನಾಗಿದ್ದ ಪರಶುರಾಮನು ಸಾವಿರಾರು ಹೈಹಯರನ್ನು ಸಂಹರಿಸಿ ಪೃಥ್ವಿಯನ್ನು ರಕ್ತದ ಕೆಸರಿನಿಂದ ವ್ಯಾಪ್ತವನ್ನಾಗಿ ಮಾಡಿಬಿಟ್ಟನು. ಹಾಗೆ ಮಹಾತೇಜಸ್ವಿಯಾದ ಪರಶುರಾಮನು ಬಹಳ ಬೇಗ ಭೂಮಂಡಲವನ್ನು ಕ್ಷತ್ರಿಯರಹಿತವನ್ನಾಗಿ ಮಾಡಿ ಪರಮದಯಾಪರನಾಗಿ

ಪುನಃ ಅರಣ್ಯಕ್ಕೆ ಹೊರಟುಹೋದನು. ಅನೇಕಸಹಸ್ರ ವರ್ಷಗಳು ಕಳೆದು ಹೋದನಂತರ ಸ್ವಭಾವತಃ ಕೋಪಿಷ್ಠನಾಗಿದ್ದ ಪರಶುರಾಮನು ಋಷಿಗಳ ಸಭೆಯಲ್ಲಿ ಆಕ್ಷೇಪವೊಂದನ್ನು ಕೇಳಿದನು. (ಕೆಲವರು ಋಷಿಗಳು ಪರಶು ರಾಮನನ್ನು ಆಕ್ಷೇಪಿಸಿದರು.)

ವಿಶ್ವಾಮಿತ್ರನ ಮೊಮ್ಮಗನಾದ, ರೈಭ್ಯನ ಮಗನಾದ, ಮಹಾತೇಜಸ್ವಿ ಯಾದ ಪರಾವಸುವು ತುಂಬಿದ ಸಭೆಯಲ್ಲಿ ಪರಶುರಾಮನನ್ನು ಆಕ್ಷೇಪಿಸುತ್ತಾ ಹೇಳಿದನು :

"ಭಾರ್ಗವ! ಯಯಾತಿಯು ಸ್ವರ್ಗಲೋಕದಿಂದ ಭೂಮಿಗೆ ಬಿದ್ದ ಸ್ಥಳದಲ್ಲಿ ನಡೆಯುತ್ತಿದ್ದ ಯಜ್ಞದಲ್ಲಿ ಭಾಗವಹಿಸಲು ಆಗಮಿಸಿದ್ದ ಪ್ರತರ್ದನನೇ ಮೊದಲಾದ ಸತ್ಪುರುಷರು ನಿನ್ನ ಭಾಗಕ್ಕೆ ಕ್ಷತ್ರಿಯರಲ್ಲವೇನು?

ನೀನು ಮಿಥ್ಯಾಪ್ರತಿಜ್ಞನು. ಸಜ್ಜನರ ಸಭೆಯಲ್ಲಿ ವೃಥಾ ಪ್ರಶಂಸೆ ಮಾಡಿಕೊಳ್ಳುವೆ. ಕ್ಷತ್ರಿಯವೀರರಿಗೆ ಭಯಗೊಂಡು ಪರ್ವತವನ್ನು ಆಶ್ರಯಿ ಸಿರುವೆ. ಪುನಃ ಈ ಪೃಥ್ವಿಯು ನೂರಾರು ಕ್ಷತ್ರಿಯವೀರರಿಂದ ವ್ಯಾಪ್ತವಾಗಿ ಬಿಟ್ಟಿದೆ. ಭೂಮಂಡಲವನ್ನು ಕ್ಷತ್ರಿಯರಹಿತವನ್ನಾಗಿ ಮಾಡುವೆನೆಂದು ಮಾಡಿದ್ದ ನಿನ್ನ ಪ್ರತಿಜ್ಞೆಯು ಸುಳ್ಳಾಗಿಹೋಯಿತು."

ಯುಧಿಷ್ಠಿರ! ಪರಾವಸುವಿನ ಆ ಮಾತನ್ನು ಕೇಳಿದೊಡನೆಯೇ ಕ್ರುದ್ಧನಾದ ಭಾರ್ಗವನು ಪುನಃ ಶಸ್ತ್ರಗ್ರಹಣವನ್ನು ಮಾಡಿದನು. ಹಿಂದೆ ರಾಮನು ದಯಾಪರನಾಗಿ ಸಂಹಾರಮಾಡದೇ ಉಳಿಸಿದ್ದ ನೂರಾರು ಕ್ಷತ್ರಿಯರು ಸಾವಿರಾರು ಸಂಖ್ಯೆಯಲ್ಲಿ ವೃದ್ಧಿಹೊಂದಿದ್ದರು ಮತ್ತು ಅವರೆಲ್ಲರೂ ಮಹಾವೀರ್ಯರೂ ಭೂಮಂಡಲದ ಅಧಿಪತಿಗಳೂ ಆಗಿದ್ದರು. ಪರಶುರಾಮನು ಪುನಃ ಅವರೆಲ್ಲರನ್ನೂ ಸಂಹರಿಸಿದನು. ಬಾಲಕರನ್ನೂ ಬಿಡದೇ ಸಂಹರಿಸಿದನು. ಆದರೆ ಗರ್ಭಿಣಿಯರಾಗಿದ್ದ ರಾಜಮಹಿಳೆಯರಿಂದ ಭೂಮಂಡಲವು ವ್ಯಾಪ್ತವಾಗಿದ್ದಿತು. (ಆ ಸಮಯದಲ್ಲಿ ಸಾವಿರಾರು ಕ್ಷತ್ರಿಯ ಮಹಿಳೆಯರು ಗರ್ಭವತಿಯರಾಗಿದ್ದರು.) ಅದನ್ನರಿತ ಪರಶುರಾಮನು ಶಿಶುವು ಗರ್ಭದಿಂದ ಹೊರಬಂದೊಡನೆಯೇ ಸಂಹರಿಸಿಬಿಡುತ್ತಿದ್ದನು.

ಅಂತಹ ಸಂದರ್ಭದಲ್ಲಿ ನೂರಾರು ಕ್ಷತ್ರಿಯಮಹಿಳೆಯರು ಬಹಳ ಕಷ್ಟದಿಂದ ಕೆಲವು ಮಕ್ಕಳನ್ನು ರಕ್ಷಿಸಿದರು. ಹೀಗೆ ಪ್ರಭುವಾದ ಪರಶುರಾಮನು ಇಪ್ಪತ್ತೊಂದು ಬಾರಿ ಭೂಮಿಯನ್ನು ಪ್ರದಕ್ಷಿಣೆಮಾಡಿ ಕೈಗೆ ಸಿಕ್ಕಿದ ಕ್ಷತ್ರಿಯರೆಲ್ಲರನ್ನೂ ಸಂಹರಿಸಿ ಪೃಥ್ವಿಯನ್ನು ಕ್ಷತ್ರಿಯರಿಂದ ವಿಹೀನವನ್ನಾಗಿ ಮಾಡಿ ಬಳಿಕ ತಾನು ಮಾಡಿದ ಅಶ್ವಮೇಧಯಾಗದ ಅವಭೃಥದಲ್ಲಿ ಕಶ್ಯಪ ನಿಗೆ ಈ ಭೂಮಂಡಲವನ್ನೇ ದಕ್ಷಿಣಾರೂಪದಲ್ಲಿ ದಾನಮಾಡಿಬಿಟ್ಟನು.

ಬಳಿಕ ಕ್ಷತ್ರಿಯಸ್ತ್ರೀಯರು ಬಹಳ ಕಷ್ಟದಿಂದ ರಕ್ಷಿಸಿಕೊಂಡಿದ್ದ, ಅಲ್ಪ ಸಂಖ್ಯೆಯಲ್ಲಿದ್ದ ಕ್ಷತ್ರಿಯಬಾಲಕರನ್ನಾದರೂ ಉಳಿಸಬೇಕೆಂಬ ಇಚ್ಛೆಯಿಂದ ಪೃಥ್ವಿಯನ್ನು ದಾನಪಡೆದಿದ್ದ ಕಶ್ಯಪನು ಕೈಯಿಂದ ಸ್ರುಕ್ಕನ್ನು ಹಿಡಿದು ನಿರ್ದೇಶನಮಾಡುತ್ತಾ ಪರಶುರಾಮನಿಗೆ ಹೇಳಿದನು :

**ಗಚ್ಛ ತೀರಂ ಸಮುದ್ರಸ್ಯ ದಕ್ಷಿಣಸ್ಯ ಮಹಾಮುನೇ ।**
**ನ ತೇ ಮದ್ವಿಷಯೇ ರಾಮ ವಸ್ತವ್ಯಮಿಹ ಕರ್ಹಿಚಿತ್ ॥೬೫॥**

"ಮಹಾಮುನಿಯಾದ ರಾಮನೇ! ಈ ಭೂಮಂಡಲವನ್ನು ನನಗೆ ದಾನಮಾಡಿದನಂತರ ಇದು ನನ್ನದಾಗಿದೆ. (ದಾನಮಾಡಿದ ವಸ್ತುವನ್ನು ದಾನಿಯು ಉಪಭೋಗಿಸುವಂತಿಲ್ಲ.) ಈ ನನ್ನ ರಾಜ್ಯದಲ್ಲಿ ನೀನು ಯಾವುದೇ ಕಾರಣದಿಂದಲೂ ಯಾವಾಗಲೂ ಇರಲೇಬಾರದು. ಆದುದರಿಂದ ನೀನೀಗಲೇ ದಕ್ಷಿಣಸಮುದ್ರದ ತೀರಕ್ಕೆ ಹೊರಟುಹೋಗು."

ಕಶ್ಯಪನ ಮಾತನ್ನು ಕೇಳಿದೊಡನೆಯೇ ಪರಶುರಾಮನು ಅಲ್ಲಿ ಕ್ಷಣಕಾಲವೂ ನಿಲ್ಲದೇ ದಕ್ಷಿಣಸಮುದ್ರದ ತೀರಕ್ಕೆ ಹೊರಟುಹೋದನು. ತನ್ನ ಬಳಿಗೆ ಪರಶುರಾಮನು ಬಂದುದನ್ನು ನೋಡಿದೊಡನೆಯೇ ಸಾಗರನು ತನ್ನಲ್ಲಿಯೇ ಶೂರ್ಪಾರಕವೆಂಬ ದೇಶವನ್ನು ನಿರ್ಮಿಸಿ ಪರಶುರಾಮನು ತಂಗಲು ಅವಕಾಶಮಾಡಿಕೊಟ್ಟನು. ಆ ಸ್ಥಳವನ್ನು 'ಅಪರಾಂತಭೂಮಿ' ಎಂದೂ ಕರೆಯುತ್ತಾರೆ.

ಇತ್ತಲಾಗಿ ಕಶ್ಯಪನು ದಾನವಾಗಿ ಪಡೆದ ಭೂಮಂಡಲವನ್ನು ಬ್ರಾಹ್ಮಣರಿಗೊಪ್ಪಿಸಿ ತಪಸ್ಸುಮಾಡಲು ಮಹಾವನವನ್ನು ಪ್ರವೇಶಿಸಿದನು.

ದಂಡಪ್ರಧಾನನಾದ ಕ್ಷತ್ರಿಯನೇ ಇಲ್ಲದುದರಿಂದ ದೇಶದಲ್ಲಿ ಅರಾಜ

ಕತೆಯುಂಟಾಯಿತು. ವೈಶ್ಯ-ಶೂದ್ರರೂ ಸ್ವೇಚ್ಛಾಚಾರಿಗಳಾಗಿ ಬ್ರಾಹ್ಮಣ ಶ್ರೇಷ್ಠರ ಪತ್ನಿಯರೊಡನೆ ದುರ್ವ್ಯವಹಾರಗಳಲ್ಲಿ ತೊಡಗಿದರು. ಅರಾಜಕತೆಯೇ ತುಂಬಿಹೋಗಿದ್ದ ಆ ಸಮಯದಲ್ಲಿ ಬಲಿಷ್ಠರಾದವರು ದುರ್ಬಲ ರನ್ನು ಪೀಡಿಸುತ್ತಿದ್ದರು. ಕಶ್ಯಪದತ್ತವಾದ ರಾಜ್ಯವು ಯಾವ ಬ್ರಾಹ್ಮಣನ ಅಧೀನದಲ್ಲಿಯೂ ಉಳಿಯಲೇ ಇಲ್ಲ. ಹೀಗೆ ಅನೇಕ ವರ್ಷಗಳವರೆಗೆ ದುರಾತ್ಮರಿಂದ ಪೀಡಿಸಲ್ಪಡುತ್ತಿದ್ದ ಭೂದೇವಿಯು, ಧರ್ಮರಕ್ಷಕರಾದ ಕ್ಷತ್ರಿಯರಿಂದ ನೀತಿಶಾಸ್ತ್ರಾನುಸಾರವಾಗಿ ರಕ್ಷಿಸಲ್ಪಡದಿದ್ದ ಕಾರಣ ತಲೆಯನ್ನು ಕೆಳಕ್ಕೆ ಮಾಡಿಕೊಂಡು ರಸಾತಳಕ್ಕೆ ಹೊರಟುಹೋದಳು. ಭಯದಿಂದ ಭೂದೇವಿಯು ದುಷ್ಟರ ಪೀಡೆಯನ್ನು ತಾಳಲಾರದೇ ರಸಾತಳಕ್ಕೆ ಓಡಿ ಹೋಗುತ್ತಿರುವುದನ್ನು ಕಂಡು ಮಹಾತ್ಮನಾದ ಕಶ್ಯಪನು ಭೂದೇವಿಯನ್ನು ತನ್ನ ತೊಡೆಯಲ್ಲಿ ಧರಿಸಿದನು. ಕಶ್ಯಪನು ಭೂದೇವಿಯನ್ನು ತೊಡೆಯಲ್ಲಿ ಧರಿಸಿದುದರಿಂದಲೇ ಭೂದೇವಿಗೆ 'ಉರ್ವೀ' ಎಂಬ ಹೆಸರು ಪ್ರಾಪ್ತವಾಯಿತು.

**ಧೃತಾ ತೇನೋರುಣಾ ಯೇನ ತೇನೋರ್ವೀತಿ ಮಹೀ ಸ್ಮೃತಾ ।**

ಆ ಸಮಯದಲ್ಲಿ ಭೂದೇವಿಯು ಕಶ್ಯಪನನ್ನು ಪ್ರಾರ್ಥನೆಯಿಂದ ಪ್ರಸನ್ನಗೊಳಿಸಿ ತನ್ನ ರಕ್ಷಣಾರ್ಥವಾಗಿ ರಾಜರನ್ನು ದಯಪಾಲಿಸಬೇಕೆಂದು ಬೇಡಿಕೊಂಡಳು :

**ಸನ್ತಿ ಬ್ರಹ್ಮನ್ಮಯಾ ಗುಪ್ತಾಃ ಸ್ತ್ರೀಷು ಕ್ಷತ್ರಿಯಪುಙ್ಗವಾಃ ।**
**ಹೈಹಯಾನಾಂ ಕುಲೇ ಜಾತಾಸ್ತೇ ಸಂರಕ್ಷನ್ತು ಮಾಂ ಮುನೇ ॥೭೩॥**

"ಬ್ರಾಹ್ಮಣೋತ್ತಮನೇ! ಕ್ಷತ್ರಿಯಸ್ತ್ರೀಯರಲ್ಲಿ ಹುಟ್ಟಿ ನನ್ನಿಂದ ಸಂರಕ್ಷಿಸಲ್ಪಟ್ಟಿರುವ ಕ್ಷತ್ರಿಯಪುಂಗವರಿದ್ದಾರೆ. ಅವರೆಲ್ಲರೂ ಹೈಹಯರ ಕುಲದಲ್ಲಿಯೇ ಹುಟ್ಟಿದವರಾಗಿದ್ದಾರೆ. ಅವರು ನನ್ನನ್ನು ಸಂರಕ್ಷಿಸಲಿ. (ಅವರು ಭೂಪಾಲರಾಗಲಿ. )

**ಅಸ್ತಿ ಪೌರವದಾಯಾದೋ ವಿದೂರಥಸುತಃ ಪ್ರಭೋ ।**
**ಋಕ್ಷೈಃ ಸಂವರ್ಧಿತೋ ವಿಪ್ರ ಋಕ್ಷ್ಯವತ್ಯಥ ಪರ್ವತೇ ॥೭೪॥**

ಪುರುವಂಶೀಯನಾದ ವಿದೂರಥನ ಮಗನೊಬ್ಬನಿದ್ದಾನೆ. ಅವನನ್ನು

ಕರಡಿಗಳೇ ಸಾಕಿದುವು. ಅವನು ಋಕ್ಷವತ್ಪರ್ವತದಲ್ಲಿಯೇ ವಾಸಮಾಡುತ್ತಿದ್ದಾನೆ.

ಹೀಗೆಯೇ ಅಪಾರವಾದ ತೇಜಸ್ಸಿನಿಂದ ಕೂಡಿರುವ, ಯಜ್ಞಪರಾಯಣನಾದ ಪರಾಶರನು ಸೌದಾಸನ ಮಗನನ್ನು ಅನುಕಂಪದಿಂದ ರಕ್ಷಣೆ ಮಾಡುತ್ತಿದ್ದಾನೆ. ಆ ರಾಜಕುಮಾರನು ದ್ವಿಜನಾದರೂ ಶೂದ್ರನಂತೆ ಎಲ್ಲ ಸೇವಾಕಾರ್ಯಗಳನ್ನೂ ಮಾಡುತ್ತಿದ್ದಾನೆ. ಈ ಕಾರಣದಿಂದಲೇ ಅವನು ಸರ್ವಕರ್ಮಾ ಎಂದೇ ವಿಖ್ಯಾತನಾಗಿದ್ದಾನೆ. ಆ ರಾಜನು ನನ್ನನ್ನು ರಕ್ಷಿಸಲಿ.

**ಶಿಬಿಪುತ್ರೋ ಮಹಾತೇಜಾ ಗೋಪತಿರ್ನಾಮ ನಾಮತಃ ।**
**ವನೇ ಸಂವರ್ಧಿತೋ ಗೋಭಿಃ ಸೋಽಭಿರಕ್ಷತು ಮಾಂ ಮುನೇ ॥**

ಶಿಬಿಯ ಮಗನಾದ ಮಹಾತೇಜಸ್ವಿಯಾದ 'ಗೋಪತಿ' ಎಂಬ ಹೆಸರಿನ ರಾಜಕುಮಾರನಿದ್ದಾನೆ. ಅರಣ್ಯದಲ್ಲಿ ಗೋವುಗಳೇ ಗೋಪತಿಯ ಪಾಲನೆ-ಪೋಷಣೆಗಳನ್ನು ಮಾಡಿದುವು. ಅವನೂ ನನ್ನನ್ನು ಪರಿಪಾಲಿಸಲಿ. ಪ್ರತರ್ದನನ ಮಗನಾದ ಮಹಾಬಲನಾದ ವತ್ಸನೆಂಬುವನಿದ್ದಾನೆ. ಗೋಶಾಲೆ ಯಲ್ಲಿರುವ ಕರುಗಳೇ ಅವನ ಪಾಲನೆ-ಪೋಷಣೆಗಳನ್ನು ಮಾಡಿದುವು. (ಆದುದರಿಂದಲೇ ಅವನಿಗೆ ವತ್ಸನೆಂಬ ಹೆಸರು ಬಂದಿತು.) ಆ ವತ್ಸರಾಜನು ನನ್ನನ್ನು ರಕ್ಷಿಸಲಿ. ದಧಿವಾಹನನೆಂಬ ರಾಜನ ಮೊಮ್ಮಗನಾದ, ದಿವಿರಥನ ಪುತ್ರನಾದ ರಾಜಕುಮಾರನನ್ನು ಗಂಗಾನದಿಯ ತೀರದಲ್ಲಿ ಗೌತಮ ಮುನಿಯು ಸಂರಕ್ಷಿಸಿದನು. ಅವನೂ ನನ್ನನ್ನು ಸಂರಕ್ಷಿಸಲಿ. ಮಹಾತೇಜಸ್ವಿಯಾದ ಮಹೈಶ್ವರ್ಯಸಂಪನ್ನನಾದ, ಮಹಾಭಾಗ್ಯಶಾಲಿಯಾದ ಬೃಹದ್ರಥನು ಗೃಧ್ರಕೂಟವೆಂಬ ಸ್ಥಳದಲ್ಲಿ ಗೋಲಾಂಗೂಲಗಳಿಂದ ( ಹಸುವಿನ ಬಾಲದಂತೆ ಬಾಲವಿರುವ ಒಂದುಜಾತಿಯ ಕೋತಿಗಳಿಂದ ) ರಕ್ಷಿತನಾದನು. ಅವನೂ ನನ್ನನ್ನು ರಕ್ಷಿಸಲಿ. ಮರುತ್ತನ ವಂಶದಲ್ಲಿಯೂ ವೀರ್ಯದಲ್ಲಿ ದೇವರಾಜ ಸಮಾನರಾದ ಕ್ಷತ್ರಿಯಕುಮಾರರನ್ನು ಸಮುದ್ರನು ರಕ್ಷಿಸಿರುತ್ತಾನೆ. ಅವರೂ ನನ್ನನ್ನು ರಕ್ಷಿಸಲಿ. ಶಿಲ್ಪಿಗಳ ಮತ್ತು ಅಕ್ಕಸಾಲಿಗರ ಜಾತಿಗಳನ್ನು ಆಶ್ರಯಿಸಿರುವ ಆ ಕ್ಷತ್ರಿಯರಾಜಕುಮಾರರು ಅಲ್ಲಲ್ಲಿಯೇ ಖ್ಯಾತಿಯನ್ನು ಗಳಿಸುತ್ತಿದ್ದಾರೆ. ಆ ರಾಜಕುಮಾರರೇನಾದರೂ ನನ್ನನ್ನು ರಕ್ಷಿಸಿದ್ದೇ ಆದರೆ ನಾನು ನಿಶ್ಚಿಂತಳಾಗಿ ಅಚಲಳಾಗಿ ನನ್ನ ಹಿಂದಿನ ಸ್ಥಾನಕ್ಕೆ ಹೋಗಿ ಪ್ರತಿಷ್ಠಿತ

ಳಾಗುತ್ತೇನೆ. ಕಷ್ಟವಾದ ಕೆಲಸಗಳನ್ನೂ ಅತಿಸುಲಭವಾಗಿ ಮಾಡಲು ಸಮರ್ಥನಾದ ಪರಶುರಾಮನು ಆ ರಾಜಕುಮಾರರ ಪಿತೃಗಳನ್ನೂ ಮತ್ತು ಪಿತಾಮಹರನ್ನೂ ನನ್ನ ಸಲುವಾಗಿಯೇ ಯುದ್ಧದಲ್ಲಿ ಸಂಹರಿಸಿದನು. ನನ್ನನ್ನು ಧರ್ಮದಿಂದ ಸಂರಕ್ಷಣೆಮಾಡುತ್ತಿದ್ದ, ಪರಶುರಾಮನಿಂದ ಹತರಾದ ರಾಜರ ಮಕ್ಕಳು-ಮೊಮ್ಮಕ್ಕಳಿಗೆ ನನ್ನನ್ನು ಅರ್ಪಿಸಿಕೊಳ್ಳುವುದರ ಮೂಲಕ ಗೌರವವನ್ನು ತೋರಿಸುವುದು ನನ್ನ ಕರ್ತವ್ಯವೂ ಆಗಿದೆ. ಇದೂ ಅಲ್ಲದೇ ಧರ್ಮವನ್ನು ಉಲ್ಲಂಘಿಸಿದವನಿಂದ ರಕ್ಷಣೆಯನ್ನು ನಾನು ಯಾವಾಗಲೂ ಅಪೇಕ್ಷಿಸುವವಳಲ್ಲ. ಯಾರು ಧರ್ಮದಿಂದ ರಾಜ್ಯಪಾಲನೆಯನ್ನು ಮಾಡುವರೋ ಅಂತಹ ರಾಜರ ಅಧೀನದಲ್ಲಿಯೇ ನಾನು ಸಂತೋಷದಿಂದ ಇರುತ್ತೇನೆ. ಧರ್ಮಪರರಾದ ರಾಜರು ನನ್ನನ್ನು ಪರಿಪಾಲಿಸುವಂತೆ ಶೀಘ್ರವಾಗಿ ವ್ಯವಸ್ಥೆಯನ್ನು ಮಾಡು.”

ಯುಧಿಷ್ಠಿರ! ಭೂದೇವಿಯು ಹೀಗೆ ಹೇಳಿದನಂತರ ಕಶ್ಯಪನು ಭೂದೇವಿಯು ನಿರ್ದೇಶಿಸಿದ ಎಲ್ಲ ರಾಜರನ್ನೂ ಕರೆಯಿಸಿ ವೀರ್ಯಸಮ್ಮತರಾದ ಆ ಎಲ್ಲ ಕ್ಷತ್ರಿಯರನ್ನೂ ಒಂದೊಂದು ರಾಜ್ಯದ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿದನು. ಕಶ್ಯಪನಿಂದ ರಾಜಪದವಿಯನ್ನು ಪಡೆದ ಆ ಪೃಥ್ವೀವಲ್ಲಭರೆಲ್ಲರಿಗೂ ಪುತ್ರರೂ-ಪೌತ್ರರೂ ಹುಟ್ಟಿ ವಂಶಾನುಕ್ರಮವಾಗಿ ರಾಜ್ಯಗಳನ್ನಾಳುತ್ತಿದ್ದಾರೆ. ಹೀಗೆ ಕ್ಷತ್ರಿಯವಂಶಗಳು ಪುನಃ ಪ್ರತಿಷ್ಠಿತವಾದುವು. ನೀನು ಕೇಳಿದ ಪ್ರಶ್ನೆಗೆ ಉತ್ತರವಾಗಿ ವಿಸ್ತಾರವಾಗಿಯೇ ಎಲ್ಲ ವಿಷಯಗಳನ್ನೂ ಹೇಳಿರುತ್ತೇನೆ. ನಾನು ಹೇಳಿದಂತೆಯೇ ಹಿಂದೆ ಈ ಪ್ರಸಂಗವು ನಡೆಯಿತು.”

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಯದುಪ್ರವೀರನಾದ, ಮಹಾತ್ಮನಾದ ಶ್ರೀಕೃಷ್ಣನು ಧರ್ಮಾತ್ಮರಲ್ಲಿ ಶ್ರೇಷ್ಠನಾದ ಯುಧಿಷ್ಠಿರನಿಗೆ ಹೀಗೆ ಹೇಳುತ್ತಾ, ಸೂರ್ಯದೇವನಂತೆ ಎಲ್ಲ ದಿಕ್ಕುಗಳನ್ನೂ ತನ್ನ ದಿವ್ಯವಾದ ತೇಜಸ್ಸಿನಿಂದ ಪ್ರಕಾಶಗೊಳಿಸುತ್ತಾ, ರಥದ ಮೂಲಕವಾಗಿ ಬಹಳ ಬೇಗ ಮುಂದೆ-ಮುಂದೆ ಹೋಗುತ್ತಿದ್ದನು.”

೪೯ನೆಯ ಅಧ್ಯಾಯವು ಮುಗಿಯಿತು.

## ಶ್ರೀಕೃಷ್ಣನು ಭೀಷ್ಮನ ಗುಣಪ್ರಭಾವಗಳನ್ನು ವರ್ಣಿಸಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ಭಗವಾನ್ ಪರಶುರಾಮನ ಪರಮಾದ್ಭುತವಾದ ಕಾರ್ಯವನ್ನು ಕೇಳಿ ಅತ್ಯಂತವಿಸ್ಮಿತನಾಗಿ ಪುನಃ ಶ್ರೀಕೃಷ್ಣನೊಡನೆ ಹೇಳಿದನು :

"ವಾರ್ಷ್ಣೇಯ! ನಿಶ್ಚಯವಾಗಿಯೂ ಮಹಾತ್ಮನಾದ ಪರಶುರಾಮನ ಪರಾಕ್ರಮವು ಇಂದ್ರನ ಪರಾಕ್ರಮಕ್ಕೆ ಸಮಾನವಾದುದು. ಕ್ರೋಧವಶನಾದ ರಾಮನು ಭೂಮಂಡಲವನ್ನೇ ಕ್ಷತ್ರಿಯರಿಂದ ವಿಹೀನವನ್ನಾಗಿ ಮಾಡಿಬಿಟ್ಟ ನಲ್ಲವೇ? ಕ್ಷತ್ರಿಯಕುಲವನ್ನು ಉದ್ಧರಿಸುವ ಹೊಣೆಹೊತ್ತಿದ್ದ ಕೆಲವರಾದರೂ ಕ್ಷತ್ರಿಯಕುಮಾರರು ಪರಶುರಾಮನ ಭಯದಿಂದ ಉದ್ವಿಗ್ನರಾಗಿ ಅಲ್ಲಲ್ಲಿಯೇ ಅಡಗಿಕೊಂಡಿದ್ದರು. ಆ ಸಮಯದಲ್ಲಿ ಗೋವುಗಳು, ಸಮುದ್ರ, ಗೋಲಾಂಗೂಲಗಳು, ಕರಡಿಗಳು, ಕಪಿಗಳು–ಇವೇ ಮೊದಲಾದುವುಗಳು ಆ ರಾಜಕುಮಾರರನ್ನು ರಕ್ಷಿಸಿದುವು.

**ಅಹೋ ಧನ್ಯೋ ನೃಲೋಕೋಽಯಂ ಸಭಾಗ್ಯಾಶ್ಚ ನರಾ ಭುವಿ ।**
**ಯತ್ರ ಕರ್ಮೇದೃಶಂ ಧರ್ಮ್ಯಂ ದ್ವಿಜೇನ ಕೃತಮಿತ್ಯುತ ॥೪॥**

ಅಚ್ಯುತನೇ! ನಿಶ್ಚಯವಾಗಿಯೂ ಈ ಮನುಷ್ಯಲೋಕವು ಧನ್ಯ ವಾದುದು. ಇಲ್ಲಿರುವ ಮಾನವರೂ ನಿಶ್ಚಯವಾಗಿಯೂ ಭಾಗ್ಯವಂತರೇ ಸರಿ. ಯಾವ ಈ ಭೂಲೋಕದಲ್ಲಿ ಬ್ರಾಹ್ಮಣನೊಬ್ಬನು ಇಂತಹ ಪರಮಾದ್ಭುತವಾದ ಧರ್ಮಮೂಲವಾದ ಕಾರ್ಯವನ್ನು ಮಾಡಿದನಲ್ಲವೇ! (ಸ್ವಧರ್ಮದಿಂದ ಚ್ಯುತರಾದ ಕ್ಷತ್ರಿಯರನ್ನು ಶಿಕ್ಷಿಸಿ ಒಳ್ಳೆಯ ಕ್ಷತ್ರಿಯರೇ ಭೂಮಿಯನ್ನು ಆಳುವಂತೆ ಮಾಡಿ ಬ್ರಾಹ್ಮಣನೊಬ್ಬನು ಧರ್ಮವನ್ನು ಸ್ಥಾಪಿಸಿದನಲ್ಲವೇ? )"

ಜನಮೇಜಯ! ವೇಗವಾಗಿ ಹೋಗುತ್ತಿದ್ದ ರಥದಲ್ಲಿ ಕುಳಿತಿದ್ದ ಶ್ರೀಕೃಷ್ಣ - ಯುಧಿಷ್ಠಿರರು ಹೀಗೆ ಪರಸ್ಪರವಾಗಿ ಮಾತನಾಡಿಕೊಳ್ಳುತ್ತಾ

ಬಾಣದ ಹಾಸಿಗೆಯಲ್ಲಿ ಪವಡಿಸಿದ್ದ, ಪ್ರಭಾವಶಾಲಿಯಾದ, ಗಂಗಾಪುತ್ರನಾದ ಭೀಷ್ಮನಿದ್ದ ಸ್ಥಳಕ್ಕೆ ಹೋದರು. ಅಲ್ಲವರು ಶರಶಯನದಲ್ಲಿ ಮಲಗಿದ್ದ–ಕಿರಣಗಳ ಸಮೂಹದಿಂದ ಕೂಡಿರುವ, ಸಾಯಂಕಾಲದ ಸೂರ್ಯನ ಪ್ರಭೆಗೆ ಸಮಾನವಾದ ಪ್ರಭೆಯಿಂದ ಪರಿಶೋಭಿಸುತ್ತಿದ್ದ–ಭೀಷ್ಮನನ್ನು ನೋಡಿದರು. ಓಘವತೀನದಿಯ ತೀರದಲ್ಲಿದ್ದ ಪರಮಪವಿತ್ರವಾದ ಸ್ಥಳದಲ್ಲಿ–ದೇವತೆಗಳಿಂದ ಇಂದ್ರನು ಸೇವಿಸಲ್ಪಡುವಂತೆ–ಅನೇಕರಾದ ಮುನಿಗಳಿಂದ ಸೇವಿಸಲ್ಪಡುತ್ತಿದ್ದ ಭೀಷ್ಮನನ್ನು ಯುಧಿಷ್ಠಿರಾದಿಗಳು ನೋಡಿದರು. ಬಹಳ ದೂರದಿಂದಲೇ ಭೀಷ್ಮನನ್ನು ನೋಡಿದ ಶ್ರೀಕೃಷ್ಣ-ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರೂ, ಶಾರದ್ವತಾದಿಗಳೂ ರಥಗಳಿಂದಿಳಿದು ಚಂಚಲವಾಗಿದ್ದ ಮನಸ್ಸನ್ನು ಹತೋಟಿಗೆ ತೆಗೆದುಕೊಂಡು (ಸಮಾಹಿತಮಾನಸರಾಗಿ) ಇಂದ್ರಿಯಸಮೂಹಗಳೆಲ್ಲವನ್ನೂ ಒಟ್ಟುಮಾಡಿ ಮನಸ್ಸಿನಲ್ಲಿ ವಿಲೀನಗೊಳಿಸಿ, ಅಲ್ಲಿದ್ದ ಮಹಾಮುನಿಗಳ ಬಳಿಗೆ ಬಂದರು. ಬಳಿಕ ಶ್ರೀಕೃಷ್ಣ-ಸಾತ್ಯಕಿ-ಯುಧಿಷ್ಠಿರಾದಿಗಳು ವ್ಯಾಸರೇ ಮೊದಲಾದ ಋಷಿಗಳಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಭೀಷ್ಮನ ಸಮೀಪಕ್ಕೆ ಹೋಗಿ ನಿಂತುಕೊಂಡರು. ನಂತರ ಪುರುಷರ್ಷಭರಾದ ಯದು-ಕೌರವಪುಂಗವರೆಲ್ಲರೂ ವೃದ್ಧನಾದ ಭೀಷ್ಮನನ್ನು ಸಂದರ್ಶಿಸಿ ಅವನನ್ನು ಸುತ್ತುವರಿದು ಕುಳಿತುಕೊಂಡರು.

ಬಳಿಕ ಶ್ರೀಕೇಶವನು ಆರಿಹೋಗುವುದರಲ್ಲಿರುವ ಯಜ್ಞೇಶ್ವರನಂತೆ ಕಾಣುತ್ತಿದ್ದ ಭೀಷ್ಮನನ್ನು ನೋಡಿ ಸ್ವಲ್ಪ ದುಃಖಿತನಾಗಿ ಭೀಷ್ಮನಿಗೆ ಈ ಮಾತುಗಳನ್ನು ಹೇಳಿದನು :

**ಕಚ್ಚಿಜ್ಞಾನಾನಿ ಸರ್ವಾಣಿ ಪ್ರಸನ್ನಾನಿ ಯಥಾ ಪುರಾ ।**
**ಕಚ್ಚಿನ್ನ ವ್ಯಾಕುಲಾ ಚೈವ ಬುದ್ಧಿಸ್ತೇ ವದತಾಂ ವರ ॥೧೩॥**

"ವಾಗ್ಮಿಗಳಲ್ಲಿ ಶ್ರೇಷ್ಠನಾದವನೇ! ನಿನ್ನ ಎಲ್ಲ ಜ್ಞಾನಗಳೂ ಹಿಂದಿನಂತೆಯೇ ಪ್ರಕಾಶಮಾನವಾಗಿದೆಯಲ್ಲವೇ? ನಿನ್ನ ಬುದ್ಧಿಯೂ ವ್ಯಾಕುಲಗೊಂಡಿಲ್ಲವಲ್ಲವೇ?

ಬಾಣಗಳ ನಾಟುವಿಕೆಯಿಂದಾಗಿ ನಿನ್ನ ಅಂಗಾಂಗಗಳಲ್ಲಿ ಯಾತನೆಯಾಗುತ್ತಿಲ್ಲವೇ? ಏಕೆಂದರೆ–**ಮಾನಸಾದಪಿ ದುಃಖಾದ್ಧಿ ಶಾರೀರಂ ಬಲ**

**ವತ್ತರಮ್**–ಮಾನಸಿಕವಾದ ದುಃಖಕ್ಕಿಂತಲೂ ದೈಹಿಕವಾದ ದುಃಖವೇ ಅಧಿಕವಾಗಿರುತ್ತದೆ.

**ವರದಾನಾತ್ಪಿತುಃ ಕಾಮಂ ಛನ್ದಮೃತ್ಯುರಸಿ ಪ್ರಭೋ ।**
**ಶಾನ್ತನೋರ್ಧರ್ಮನಿತ್ಯಸ್ಯ ನ ತ್ವೇತತ್ಕಾರಣಮ್ ॥೧೫॥**

ಧರ್ಮನಿತ್ಯನಾದ, ನಿನ್ನ ತಂದೆಯಾದ ಶಾಂತನುವಿನ ವರದಾನದ ಪ್ರಭಾವದಿಂದಾಗಿ ನೀನು ಇಚ್ಛಾಮರಣಿಯಾಗಿರುವೆ. ಆದರೆ ಇಚ್ಛಾಮರಣ ಶಕ್ತಿಯು ಮನಸ್ಸಿನ ಶಾಂತಿಗೆ ಕಾರಣವಾಗುವುದಿಲ್ಲ.

**ಸುಸೂಕ್ಷ್ಮೋಽಪಿ ತು ದೇಹೇ ವೈ ಶಲ್ಯೋ ಜನಯತೇ ರುಜಮ್ ।**
**ಕಿಂ ಪುನಃ ಶರಸಂಘಾತೈಶ್ಚಿತಸ್ಯ ತವ ಪಾರ್ಥಿವ ॥೧೬॥**

( ವರದಾನದ ಬಲದಿಂದ ಸಾಯದೇ ಇರಬಹುದು. ಆದರೆ ನೋವನ್ನು ಅನುಭವಿಸಲೇಬೇಕಲ್ಲವೇ? ) ಮುಳ್ಳು ಅತ್ಯಂತ ಚಿಕ್ಕದೇ ಆಗಿದ್ದರೂ ದೇಹ ದಲ್ಲಿ ಸೇರಿಕೊಂಡು ಹೆಚ್ಚು ನೋವನ್ನುಂಟುಮಾಡುತ್ತದೆ. ಹೀಗಿರುವಾಗ ಬಾಣಗಳ ಸಮೂಹಗಳಿಂದಲೇ ಚುಚ್ಚಲ್ಪಟ್ಟಿರುವ ನಿನ್ನ ವಿಷಯದಲ್ಲಿ ಹೇಳತಕ್ಕದ್ದೇನಿದೆ? ( ಇಂತಹ ಸ್ಥಿತಿಯಲ್ಲಿ ಮನಸ್ಸು ಶಾಂತವಾಗಿರಲು ಹೇಗೆ ಸಾಧ್ಯವಾಗುತ್ತದೆ? )

ಭರತನಂದನ! 'ಪ್ರಾಣಿಗಳಿಗೆ ಹುಟ್ಟು-ಸಾವುಗಳು ನಿಯತವಾಗಿರುತ್ತವೆ ಮತ್ತು ದೈವಾಧೀನವಾಗಿರುತ್ತವೆ. ಆದುದರಿಂದ ಈಗ ಸನ್ನಿಹಿತವಾಗಿರುವ ಮೃತ್ಯುವಿಗಾಗಿ ನೀನು ದುಃಖಿಸಬೇಡ'–ಎಂದು ನಿನಗೆ ಉಪದೇಶಿಸುವುದು ಸ್ವಲ್ಪವೂ ಸಮುಚಿತವಾಗಿ ಕಾಣುವುದಿಲ್ಲ. ಏಕೆಂದರೆ : ದೇವತೆಗಳಿಗಾದರೂ ಎಲ್ಲ ವಿಷಯಗಳಲ್ಲಿಯೂ ಉಪದೇಶವನ್ನು ನೀಡಲು ನೀನು ಸಮರ್ಥನಾಗಿರುವೆ. ಭೀಷ್ಮ! ಜ್ಞಾನವೃದ್ಧನಾದ ನಿನಗೆ ಭೂತ-ಭವಿಷ್ಯದ್ವರ್ತ ಮಾನಗಳೆಲ್ಲವೂ ತಿಳಿದಿವೆ. ಎಲ್ಲ ಶಾಸ್ತ್ರಗಳೂ, ಎಲ್ಲ ವೇದ-ಪುರಾಣೇತಿಹಾಸ ಗಳೂ ನಿನ್ನಲ್ಲಿಯೇ ಪ್ರತಿಷ್ಠಿತವಾಗಿವೆ. ಮಹಾಪ್ರಾಜ್ಞನೇ! ಪ್ರಾಣಿಗಳ ಸಂಹಾರಕಾರ್ಯವು ಯಾವಾಗ ನಡೆಯುತ್ತದೆ? ಧರ್ಮಾಚರಣೆಯ ಫಲ ವೇನು? ಯಾವಾಗ ಧರ್ಮೋದಯವಾಗುತ್ತದೆ?–ಎಂಬ ಈ ಎಲ್ಲ ವಿಷಯ ಗಳೂ ನಿನಗೆ ತಿಳಿದಿವೆ. ನೀನು ಧರ್ಮಮಯನೂ ಮತ್ತು ಧರ್ಮಕ್ಕೆ ನಿಧಿ

ಪ್ರಾಯನೂ ಆಗಿರುವೆ. ನೀನು ಹಿಂದೆ ಸಂಪತ್ಸಮೃದ್ಧವಾದ ರಾಜ್ಯದಲ್ಲಿದ್ದುದನ್ನು ನಾನು ಕಂಡಿದ್ದೆನು. ನಿನ್ನ ಎಲ್ಲ ಅವಯವಗಳೂ ಸುದೃಢವಾಗಿದ್ದುವು. ನೀನು ನೀರೋಗದೃಢಕಾಯನಾಗಿದ್ದೆ. ಸಾವಿರಾರು ಸ್ತ್ರೀಯರಿಂದ ಪರಿವೃತನಾಗಿದ್ದರೂ ಊರ್ಧ್ವರೇತಸ್ಕನಾಗಿ ನೈಷ್ಠಿಕಬ್ರಹ್ಮಚರ್ಯದಿಂದ ಸಂಪನ್ನನಾಗಿರುವುದನ್ನೂ ನಾನು ನೋಡಿದ್ದೇನೆ.

**ಋತೇ ಶಾನ್ತನವಾದ್ಭೀಷ್ಮಾತ್ತ್ರಿಷು ಲೋಕೇಷು ಪಾರ್ಥಿವ ।**
**ಸತ್ಯಧರ್ಮಾನ್ಮಹಾವೀರ್ಯಾಚ್ಛೂರಾದ್ಧರ್ಮೈಕತತ್ಪರಾತ್ ॥೨೧॥**
**ಮೃತ್ಯುಮಾವಾರ್ಯ ತಪಸಾ ಶರಸಂಸ್ತರಶಾಯಿನಃ ।**
**ನಿಸರ್ಗಪ್ರಭವಂ ಕಿಂಚಿನ್ನ ಚ ತಾತಾನುಶುಶ್ರುಮ ॥೨೨॥**

ಸತ್ಯವೇ ಮುಖ್ಯಧರ್ಮವಾಗಿ ಉಳ್ಳ ಮಹಾವೀರ್ಯನಾದ, ಶೂರನಾದ, ಧರ್ಮೈಕತತ್ಪರನಾದ, ಬಾಣದ ಹಾಸಿಗೆಯಲ್ಲಿ ಮಲಗಿರುವ, ಶಂತನುವಿನ ಮಗನಾದ ಭೀಷ್ಮನೊಬ್ಬನನ್ನು ಬಿಟ್ಟು ತಪಸ್ಸಿನಿಂದ ಮೃತ್ಯುವನ್ನೂ ತಡೆದು ನಿಲ್ಲಿಸಿದ ಮತ್ತೊಬ್ಬನು ಈ ಮೂರು ಲೋಕಗಳಲ್ಲಿ ಎಲ್ಲಿಯಾದರೂ ಹುಟ್ಟಿರುವನೆಂಬುದನ್ನು ನಾವು ಇದುವರೆವಿಗೂ ಕೇಳಿರುವುದಿಲ್ಲ.

**ಸತ್ಯೇ ತಪಸಿ ದಾನೇ ಚ ಯಜ್ಞಾಧಿಕರಣೇ ತಥಾ ।**
**ಧನುರ್ವೇದೇ ಚ ವೇದೇ ಚ ನೀತ್ಯಾಂ ಚೈವಾನುರಕ್ಷಣೇ ॥೨೩॥**
**ಆನೃಶಂಸಂ ಶುಚಿಂ ದಾನ್ತಂ ಸರ್ವಭೂತಹಿತೇ ರತಮ್ ।**
**ಮಹಾರಥಂ ತ್ವತ್ಸದೃಶಂ ನ ಕಂಚಿದನುಶುಶ್ರುಮ ॥೨೪॥**

ಸತ್ಯನಿಷ್ಠೆಯಲ್ಲಿ, ತಪಸ್ಸಿನಲ್ಲಿ, ದಾನದಲ್ಲಿ, ಯಜ್ಞಾನುಷ್ಠಾನದಲ್ಲಿ, ಧನುರ್ವೇದದ ಪಾಂಡಿತ್ಯದಲ್ಲಿ, ವೇದ-ವೇದಾಂಗಗಳ ಅಧ್ಯಯನದಲ್ಲಿ, ನೀತಿಶಾಸ್ತ್ರದಲ್ಲಿ, ಪ್ರಜೆಗಳ ಪರಿಪಾಲನೆಯಲ್ಲಿ ನಿನಗೆ (ಭೀಷ್ಮನಿಗೆ) ಸಮಾನನಾದವನನ್ನು ನಾವು ಇದುವರೆಗೂ ಕಂಡೂ-ಕೇಳಿಯೂ ಇರುವುದಿಲ್ಲ. ಪಿತಾಮಹ! ನಿನಗೆ ಸದೃಶನಾದ ದಯಾಪರನನ್ನು, ಅಂತಃಶುದ್ಧಿ, ಬಹಿಃಶುದ್ಧಿಯಿರುವವನನ್ನು, ಜಿತೇಂದ್ರಿಯನನ್ನು, ಸರ್ವಪ್ರಾಣಿಗಳ ಹಿತದಲ್ಲಿಯೇ ನಿರತನಾಗಿರುವವನನ್ನು, ಮಹಾರಥನನ್ನು ಬೇರೆ ಯಾವನೊಬ್ಬನನ್ನೂ ನಾವು ಇದುವರೆಗೂ ಕೇಳಿರುವುದಿಲ್ಲ.

ಮಹಾಬಾಹುವೇ! ಭೀಷ್ಮ! ದೇವತೆಗಳಿಂದ ಸಹಿತರಾದ ಗಂಧರ್ವರನ್ನೂ, ಅಸುರರನ್ನೂ, ಯಕ್ಷ-ರಾಕ್ಷಸರನ್ನೂ, ರಥೈಕಸಹಾಯನಾಗಿ ಜಯಿಸಲು ನೀನು ಶಕ್ತನಾಗಿರುವೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ನೀನು ವಸುಗಳಲ್ಲಿ ಇಂದ್ರೋಪಮನಾಗಿರುವೆ. ಬ್ರಾಹ್ಮಣರು ಅಷ್ಟವಸುಗಳ ಅಂಶಗಳಿಂದ ಹುಟ್ಟಿದ ಒಂಬತ್ತನೆಯ ವಸುವೆಂದೇ ನಿನ್ನನ್ನು ಹೇಳುತ್ತಾರೆ. ನಿನಗೆ ಸಮಾನರಾದ ಗುಣವಂತರು ಯಾರೂ ಇರುವುದಿಲ್ಲ. ಪುರುಷ ಶ್ರೇಷ್ಠನೇ! ನೀನು ಯಾರೆಂಬುದನ್ನು ನಾನು ತಿಳಿದುಕೊಂಡಿರುತ್ತೇನೆ. ನೀನು ಶಕ್ತಿಯಿಂದ ಪುರುಷರಲ್ಲಿಯೇ ಶ್ರೇಷ್ಠನಾದವನೆಂದೂ, ಭೂಲೋಕದಲ್ಲಿರುವ ಶಕ್ತಿವಂತರಲ್ಲಿ ನಿನಗಿಂತಲೂ ಅಧಿಕರಾದವರು ಯಾರೂ ಇಲ್ಲವೆಂದೂ ದೇವತೆಗಳಲ್ಲಿಯೂ ನೀನು ಪ್ರಸಿದ್ಧಿಯನ್ನು ಪಡೆದಿರುವೆ. ಮನುಷ್ಯೇಂದ್ರನೇ! ಭೂಮಿಯಲ್ಲಿರುವ ಮನುಷ್ಯಸಮೂಹದಲ್ಲಿ ನಿನ್ನಂತೆ ಸಕಲಗುಣಗಳಿಂದಲೂ ಸಂಪನ್ನರಾಗಿರತಕ್ಕ ಒಬ್ಬನನ್ನಾದರೂ ನಾನು ಎಲ್ಲಿಯೂ ಇದುವರೆಗೆ ಕಂಡೂ ಇಲ್ಲ ; ಕೇಳಿಯೂ ಇಲ್ಲ. ನೀನು ನಿನ್ನ ಸಕಲಗುಣಗಳಿಂದಲೂ ದೇವತೆಗಳನ್ನೂ ಅತಿಶಯಿಸಿರುವೆ. ನಿನ್ನ ತಪಃಪ್ರಭಾವದಿಂದ ಚರಾಚರಗಳಿಂದ ಯುಕ್ತವಾಗಿರುವ ಎಲ್ಲ ಲೋಕಗಳನ್ನೂ ಪುನಃ ಸೃಷ್ಟಿಮಾಡಲೂ ನೀನು ಸಮರ್ಥನಾಗಿರುವೆ. ಹೀಗಿರುವಾಗ ಉತ್ತಮೋತ್ತಮವಾದ ಗುಣಗಳಿಂದ ನಿನ್ನ ಸಲುವಾಗಿ ಉತ್ತಮವಾದ ಪುಣ್ಯಲೋಕಗಳನ್ನು ಸೃಷ್ಟಿಸಿಕೊಳ್ಳುವೆಯೆಂಬುದರಲ್ಲಿ ಅತಿಶಯವೇನಿದೆ? ( ಶ್ರೇಷ್ಠವಾದ ನಿನ್ನ ಗುಣಗಳಿಂದಲೇ ನೀನು ಈಗಾಗಲೇ ಅನೇಕಪುಣ್ಯಲೋಕಗಳನ್ನು ಜಯಿಸಿರುವೆ. )

ಗಾಂಗೇಯ! ಧರ್ಮಪುತ್ರನಾದ ಯುಧಿಷ್ಠಿರನು ಜ್ಞಾತಿಗಳ ಸಂಹಾರದಿಂದಾಗಿ ಬಹಳವಾಗಿ ಪರಿತಪಿಸುತ್ತಿದ್ದಾನೆ. ಪಾಂಡವಜ್ಯೇಷ್ಠನಾದ ಯುಧಿಷ್ಠಿರನ ಶೋಕವನ್ನು ನೀನು ಹೋಗಲಾಡಿಸು. ನಾಲ್ಕು ಆಶ್ರಮಧರ್ಮಗಳಿಂದ ಕೂಡಿರುವ ಚಾತುರ್ವರ್ಣ್ಯಗಳ ಧರ್ಮಗಳೆಲ್ಲವೂ ನಿನಗೆ ತಿಳಿದಿವೆ. ಋಗ್ಯಜುಃಸಾಮಾಥರ್ವಗಳೆಂಬ ನಾಲ್ಕು ವಿದ್ಯೆಗಳಲ್ಲಿ ಹೇಳಿರುವುದೆಲ್ಲವೂ ನಿನಗೆ ತಿಳಿದಿದೆ. ಚತುರ್ಹೋತೃಗಳ ( ಅಧ್ವರ್ಯು, ಹೋತೃ, ಉದ್ಗಾತೃ ಮತ್ತು ಬ್ರಹ್ಮ–ಇವರ ) ಕರ್ತವ್ಯಗಳೇನೆಂಬುದೂ ನಿನಗೆ ತಿಳಿದಿದೆ. ಗಾಂಗೇಯ! ಯೋಗಶಾಸ್ತ್ರ ಮತ್ತು ಸಾಂಖ್ಯಶಾಸ್ತ್ರಗಳಲ್ಲಿ ಯಾವ ಸನಾತನ

ಧರ್ಮವು ನಿಯತವಾಗಿರುವುದೋ–ಚಾತುರ್ವರ್ಣ್ಯದ ಪದ್ಧತಿಗೆ ವಿರೋಧ ವಲ್ಲದ ಯಾವ ಧರ್ಮವಿರುವುದೋ ಮತ್ತು ಯಾವ ಧರ್ಮವನ್ನು ಲೋಕ ದಲ್ಲಿ ಎಲ್ಲರೂ ಸಂಸೇವಿಸುತ್ತಾರೆಯೋ ( ಆಚರಿಸುತ್ತಾರೆಯೋ )–ಅಂತಹ ಎಲ್ಲ ಧರ್ಮಗಳನ್ನೂ ವ್ಯಾಖ್ಯಾನಸಹಿತವಾಗಿ ನೀನು ತಿಳಿದುಕೊಂಡಿರುವೆ. ಪ್ರತಿಲೋಮದಲ್ಲಿ ಹುಟ್ಟಿರುವ ಸಂಕರವರ್ಣದವರಿಗೆ ಯಾವ ಧರ್ಮವು ಉಕ್ತವಾಗಿರುವುದೋ–ಅಂತಹ ಧರ್ಮವನ್ನೂ ನೀನು ತಿಳಿದವನಾಗಿರುವೆ. ದೇಶಧರ್ಮ, ಜಾತಿಧರ್ಮ, ಕುಲಧರ್ಮ–ಇವುಗಳ ಲಕ್ಷಣಗಳೆಲ್ಲವನ್ನೂ ತಿಳಿದಿರುವೆ. ವೇದಪ್ರತಿಪಾದಿತವಾದ ಧರ್ಮಗಳನ್ನೂ, ಶಿಷ್ಟರು ಹೇಳಿರುವ ಧರ್ಮಗಳನ್ನೂ ಮತ್ತು ಶಿಷ್ಟಾಚಾರಗಳನ್ನೂ ತಿಳಿದಿರುವೆ. ಇತಿಹಾಸ-ಪುರಾಣಗಳ ಅರ್ಥಗಳೂ ಮತ್ತು ರಹಸ್ಯಾರ್ಥಗಳೂ ನಿನಗೆ ಆಮೂಲಾಗ್ರ ವಾಗಿ ತಿಳಿದಿದೆ. ಎಲ್ಲ ಧರ್ಮಶಾಸ್ತ್ರಗಳೂ ನಿನ್ನ ಮನಸ್ಸಿನಲ್ಲಿಯೇ ನೆಲೆಸಿ ಬಿಟ್ಟಿವೆ.

**ಯೇ ಚ ಕೇಚನ ಲೋಕೇಽಸ್ಮಿನ್ನರ್ಥಾಃ ಸಂಶಯಕಾರಕಾಃ ।**
**ತೇಷಾಂ ಛೇತ್ತಾ ನಾಸ್ತಿ ಲೋಕೇ ತ್ವದನ್ಯಃ ಪುರುಷರ್ಷಭ ॥೩೭॥**

ಪುರುಷಪ್ರವರನೇ! ಸಂಶಯವನ್ನುಂಟುಮಾಡುವ ಯಾವುದಾದರೂ ಕೆಲವು ವಿಷಯಗಳು ಲೋಕದಲ್ಲಿದ್ದರೆ–ಅವುಗಳ ಸಂಶಯನಿವಾರಕನು ನಿನ್ನನ್ನು ಬಿಟ್ಟು ಈ ಲೋಕದಲ್ಲಿ ಬೇರೆ ಯಾರೂ ಇರುವುದಿಲ್ಲ.

ನರೇಂದ್ರನೇ! ಪಾಂಡುತನಯನಾದ ಯುಧಿಷ್ಠಿರನ ಮನಸ್ಸಿನಲ್ಲಿ ಯಾವ ಶೋಕವು ಹುಟ್ಟಿಕೊಂಡಿರುವುದೋ–ಆ ಶೋಕವನ್ನು ನಿನ್ನ ಬುದ್ಧಿಶಕ್ತಿಯಿಂದ ನಿವಾರಣೆಮಾಡು. ನಿನ್ನಂತಹ ಶ್ರೇಷ್ಠವಾದ ಮತ್ತು ವಿಶಾಲವಾದ ಬುದ್ಧಿಯುಳ್ಳವರೇ ವಿಮೋಹಗೊಂಡಿರುವ ಮನುಷ್ಯರ ಸಂತಾಪವನ್ನು ದೂರಗೊಳಿಸಿ ಅವರ ಮನಸ್ಸಿಗೆ ಶಾಂತಿಯನ್ನುಂಟುಮಾಡಲು ಸಮರ್ಥರಾಗಿ ರುತ್ತಾರೆ.”

೫೦ನೆಯ ಅಧ್ಯಾಯವು ಮುಗಿಯಿತು.

೫೧ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಭೀಷ್ಮನು ಶ್ರೀಕೃಷ್ಣನನ್ನು ಸ್ತುತಿಸಿದುದು : ಶ್ರೀಕೃಷ್ಣನು ಭೀಷ್ಮನನ್ನು ಪ್ರಶಂಸೆಮಾಡುತ್ತಾ ಯುಧಿಷ್ಠಿರನಿಗೆ ಧರ್ಮೋಪದೇಶಮಾಡುವಂತೆ ಭೀಷ್ಮನಿಗೆ ಸಲಹೆನೀಡಿದುದು

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಭೀಷ್ಮನು ಧೀಮಂತನಾದ ವಾಸುದೇವನ ಮಾತುಗಳನ್ನು ಕೇಳಿ ತನ್ನ ಮುಖವನ್ನು ಸ್ವಲ್ಪವೇ ಮೇಲಕ್ಕೆತ್ತಿ ಕೈಜೋಡಿಸಿಕೊಂಡು ಹೇಳಿದನು :

**ನಮಸ್ತೇ ಭಗವನ್ಕೃಷ್ಣ ಲೋಕಾನಾಂ ಪ್ರಭವಾಪ್ಯಯ ।**
**ತ್ವಂ ಹಿ ಕರ್ತಾ ಹೃಷೀಕೇಶ ಸಂಹರ್ತಾ ಚಾಪರಾಜಿತಃ ॥೨॥**

“ಸಮಸ್ತಲೋಕಗಳ ಸೃಷ್ಟಿ ಮತ್ತು ಲಯಗಳಿಗೆ ಕಾರಣನಾದ ಕೃಷ್ಣನೇ! ಭಗವನ್! ನಿನಗೆ ನಮಸ್ಕಾರಮಾಡುತ್ತೇನೆ. ಹೃಷೀಕೇಶನೇ! ನೀನು ಲೋಕಕರ್ತೃವೂ ಆಗಿರುವೆ. ಲೋಕಗಳ ಸಂಹಾರಕನೂ ಆಗಿರುವೆ. ನಿನಗೆ ಪರಾಜಯವೆಂಬುದೇ ಇಲ್ಲ.

**ವಿಶ್ವಕರ್ಮನ್ನಮಸ್ತೇಽಸ್ತು ವಿಶ್ವಾತ್ಮನ್ವಿಶ್ವಸಮ್ಭವ ।**
**ಅಪವರ್ಗೋಽಸಿ ಭೂತಾನಾಂ ಪಞ್ಚಾನಾಂ ಪರತಃ ಸ್ಥಿತಃ ॥೩॥**

ಈ ವಿಶ್ವವನ್ನು ರಚಿಸಿರುವ ಪರಮೇಶ್ವರನೇ! ವಿಶ್ವಕ್ಕೇ ಆತ್ಮರೂಪನಾಗಿರತಕ್ಕವನೇ! ವಿಶ್ವದ ಉತ್ಪತ್ತಿಗೆ ಸ್ಥಾನಭೂತನಾಗಿರತಕ್ಕವನೇ! ನಿನಗೆ ನಮಸ್ಕಾರಮಾಡುತ್ತೇನೆ. ನೀನು ಪಂಚಭೂತಗಳಿಗೂ ಅತೀತನಾಗಿದ್ದು ಎಲ್ಲ ಪ್ರಾಣಿಗಳಿಗೂ ಮೋಕ್ಷಸ್ವರೂಪನಾಗಿರುವೆ.

**ನಮಸ್ತೇ ತ್ರಿಷು ಲೋಕೇಷು ನಮಸ್ತೇ ಪರತಸ್ತ್ರಿಷು ।**
**ಯೋಗೇಶ್ವರ ನಮಸ್ತೇಽಸ್ತು ತ್ವಂ ಹಿ ಸರ್ವಪರಾಯಣಃ ॥೪॥**

ಮೂರು ಲೋಕಗಳಲ್ಲಿಯೂ ವ್ಯಾಪಕನಾಗಿರುವ ನಿನಗೆ ನಮಸ್ಕಾರವಿರಲಿ. ಸತ್ವ-ರಜಸ್ತಮಗಳೆಂಬ ಮೂರು ಗುಣಗಳಿಗೂ ಅತೀತನಾಗಿರುವ

ನಿನಗೆ ನಮಸ್ಕಾರಮಾಡುತ್ತೇನೆ. ಯೋಗೇಶ್ವರನಾದ ನಿನಗೆ ನಮಸ್ಕಾರವಿರಲಿ. ನೀನೇ ಎಲ್ಲರಿಗೂ ಆಶ್ರಯಸ್ಥಾನನಾಗಿರುವೆ.

ಪುರುಷಶ್ರೇಷ್ಠನೇ! ನೀನು ನನಗೆ ಸಂಬಂಧಿಸಿದಂತೆ ಕೆಲವು ಮಾತುಗಳನ್ನಾಡಿರುವೆ. ಇದರಿಂದಲೇ ನಾನು ನಿನ್ನ ದಿವ್ಯಭಾವನೆಗಳನ್ನು ಕಾಣುತ್ತಿದ್ದೇನೆ. ನೀನು ಮೂರು ಲೋಕಗಳಲ್ಲಿಯೂ ವ್ಯಾಪ್ತನಾಗಿರುವೆ. ಗೋವಿಂದ! ನಿನ್ನ ಸನಾತನವಾದ ರೂಪವನ್ನು ನಾನು ಕಾಣುತ್ತಿದ್ದೇನೆ. ಮಹಾತೇಜಸ್ವಿಯಾದ ವಾಯುವಿನ ಏಳು ಮಾರ್ಗಗಳೂ ನಿನ್ನಿಂದ ತಡೆಯಲ್ಪಟ್ಟಿವೆ.* ಸ್ವರ್ಗಲೋಕವು ನಿನ್ನ ಶಿರಸ್ಸಿನಿಂದ ವ್ಯಾಪ್ತವಾಗಿದೆ. ವಸುಂಧರೆಯು ನಿನ್ನ ಕಾಲುಗಳಿಂದ ವ್ಯಾಪ್ತಳಾಗಿದ್ದಾಳೆ. ದಿಕ್ಕುಗಳೇ ನಿನ್ನ ಭುಜಗಳಾಗಿವೆ. ಸೂರ್ಯನು ನಿನಗೆ ನೇತ್ರನಾಗಿದ್ದಾನೆ. ಶುಕ್ರನು ನಿನ್ನ ವೀರ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಅಗಸೇಹೂವಿನಂತೆ ಶ್ಯಾಮಲವರ್ಣವಾಗಿರುವ ಪೀತಾಂಬರವನ್ನು ಧರಿಸಿರುವ, ಯಾವುದೇ ಸಮಯದಲ್ಲಿಯೂ ಧರ್ಮದಿಂದ ಚ್ಯುತನಾಗದಿರುವ ನಿನ್ನ ಶರೀರವು ಮಿಂಚುಗಳಿಂದ ಕೂಡಿರುವ ಕಾಲಮೇಘಸದೃಶವಾಗಿರುವುದೆಂದು ಅನುಮಾನಿಸುತ್ತೇನೆ. ಪುಂಡರೀಕಾಕ್ಷನೇ! ಸುರೋತ್ತಮನೇ! ನಿನ್ನನ್ನೇ ಶರಣುಹೊಂದಿರುವ, ಭಕ್ತನಾದ, ಅಭೀಷ್ಟವಾದ ಸದ್ಗತಿಯನ್ನು ಪಡೆಯಲು ಇಚ್ಛಿಸಿರುವ ನನಗೆ ಯಾವುದು ಶ್ರೇಯಸ್ಕರವೆಂಬುದನ್ನು ನೀನೇ ಚಿಂತಿಸು.”

---

* ಸಪ್ತ ಮಾರ್ಗಾ ನಿರುದ್ಧಾಸ್ತೇ ವಾಯೋರಮಿತತೇಜಸಃ = ಇದು ಭೀಷ್ಮಸ್ತವರಾಜದಲ್ಲಿ ೪೭ನೆಯ ಸರ್ಗದಲ್ಲಿ ೬೦ನೆಯ ಶ್ಲೋಕವಾಗಿ ಬಂದಿದೆ. ಇದಕ್ಕೆ ಎರಡು ಪ್ರಕಾರವಾಗಿ ಅನ್ವಯಮಾಡಬಹುದು. ೧) ಅಮಿತತೇಜಸಃ ವಾಯೋಃ ಸಪ್ತ ಮಾರ್ಗಾಃ ತೇ = ತ್ವಯಾ ನಿರುದ್ಧಾಃ –ನಿನ್ನಿಂದ ವಾಯುವಿನ ಏಳು ಮಾರ್ಗಗಳು ನಿರೋಧಿಸಲ್ಪಟ್ಟಿವೆ. ೨) ಅಮಿತತೇಜಸಃ ತೇ ವಾಯೋಃ ಸಪ್ತ ಮಾರ್ಗಾಃ ನಿರುದ್ಧಾಃ –ಅಮಿತತೇಜಸ್ವಿಯಾದ ವಾಯುರೂಪನಾದ ನಿನ್ನ ಏಳು ಮಾರ್ಗಗಳು ನಿರೋಧಿಸಲ್ಪಟ್ಟಿವೆ. ವ್ಯಾಖ್ಯಾನಕಾರರು ಸಪ್ತ ಉಪರಿತನಾನಿ ಛಿದ್ರಾಣಿ–ಮೇಲಿನ ಏಳು ರಂಧ್ರಗಳು ಅಥವಾ ಪ್ರವಹಾದಯಃ-ಪ್ರವಹಾದಿಗಳು, ಸರ್ವಂ ತ್ವಯ್ಯೆವ ವ್ಯಾಪ್ತಂ–ಎಲ್ಲವೂ ನಿನ್ನಿಂದಲೇ ವ್ಯಾಪ್ತವಾಗಿವೆ. ಇಲ್ಲಿ ನಿರುದ್ಧಾಃ ಎಂಬ ಪದವಿದೆ. ವ್ಯಾಪ್ತಂ ಎಂಬ ಪದವಿರುವುದಿಲ್ಲ. ಉಪರಿತನ ಛಿದ್ರಾಣಿ–ಎಂಬುದಕ್ಕೆ ತೇ ನಿರುದ್ಧಾಃ = ನಿನ್ನಿಂದ ಎಲ್ಲವೂ ತಡೆಯಲ್ಪಟ್ಟಿವೆ ; ಎಲ್ಲವೂ

ಶ್ರೀಕೃಷ್ಣನು ಹೇಳುತ್ತಾನೆ :

**ಯತಃ ಖಲು ಪರಾ ಭಕ್ತಿರ್ಮಯಿ ತೇ ಪುರುಷರ್ಷಭ ।**
**ತತೋ ಮಯಾ ವಪುರ್ದಿವ್ಯಂ ತ್ವಯಿ ರಾಜನ್ಪ್ರದರ್ಶಿತಮ್ ॥೧೦॥**

"ಪುರುಷಶ್ರೇಷ್ಠನೇ! ನಿನಗೆ ನನ್ನಲ್ಲಿ ಪರಾಭಕ್ತಿಯಿರುವುದರಿಂದಲೇ ನಾನು ನಿನ್ನ ಹೃದಯಮಂದಿರದಲ್ಲಿ ನನ್ನ ದಿವ್ಯರೂಪವನ್ನು ತೋರಿಸಿದೆನು.

**ನ ಹ್ಯಭಕ್ತಾಯ ರಾಜೇನ್ದ್ರ ಭಕ್ತಾಯಾನೃಜವೇ ನ ಚ ।**
**ದರ್ಶಯಾಮ್ಯಹಮಾತ್ಮಾನಂ ನ ಚಾಶಾನ್ತಾಯ ಭಾರತ ॥೧೧॥**

ರಾಜೇಂದ್ರ! ನಾನು ಭಕ್ತನಲ್ಲದವನಿಗಾಗಲೀ–ಭಕ್ತನಾಗಿದ್ದರೂ ಕುಟಿಲ ಸ್ವಭಾವವಿರುವವನಿಗಾಗಲೀ ಮತ್ತು ಮನಶ್ಶಾಂತಿಯಿಲ್ಲದವನಿಗಾಗಲೀ ನನ್ನ ದಿವ್ಯರೂಪವನ್ನು ತೋರಿಸುವುದಿಲ್ಲ.

**ಭವಾಂಸ್ತು ಮಮ ಭಕ್ತಶ್ಚ ನಿತ್ಯಂ ಚಾರ್ಜವಮಾಸ್ಥಿತಃ ।**
**ದಮೇ ತಪಸಿ ಸತ್ಯೇ ಚ ದಾನೇ ಚ ನಿರತಃ ಶುಚಿಃ ॥೧೨॥**

ನೀನಾದರೋ ನನ್ನ ಪರಮಭಕ್ತನಾಗಿರುವೆ. ಸರಳಸ್ವಭಾವದವನು. (ನಿನ್ನಲ್ಲಿ ಕೌಟಿಲ್ಯವೆಂಬುದೇ ಇಲ್ಲ.) ಜಿತೇಂದ್ರಿಯನು. ತಪಸ್ಸಿನಲ್ಲಿಯೇ

---

ನಿನ್ನಿಂದ ವ್ಯಾಪಿಸಲ್ಪಟ್ಟಿವೆ–ಎಂದು ತಾತ್ಪರ್ಯವೆಂಬುದು ವ್ಯಾಖ್ಯಾನಕಾರರ ಅಭಿಪ್ರಾಯ ವಾಗಿರಬಹುದು. 'ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್' ಎಂಬ ಮಂತ್ರಾರ್ಥದಂತೆ ಸಪ್ತ ಉಪರಿತನಾನಿ ಛಿದ್ರಾಣಿ ಪ್ರಾಣಾಃ ೨ ಕಣ್ಣುಗಳು ೨ ಕಿವಿಗಳು ೨ ಮೂಗಿನ ಹೊಳ್ಳೆಗಳು ಮತ್ತು ೧ ಬಾಯಿ. ಈ ಏಳು ಛಿದ್ರಗಳು ಸಪ್ತಪ್ರಾಣಗಳು. ಇವುಗಳಲ್ಲಿ ಪರಮಾತ್ಮನು ವ್ಯಾಪ್ತನಾಗಿದ್ದಾನೆ. ಪರಮಾತ್ಮನ ವ್ಯಾಪನೆಯಿಂದಲೇ ಇವು ಕಾರ್ಯಮಾಡುತ್ತವೆ. ತೇ ಎಂಬುದಕ್ಕೆ ತ್ವಯಾ ಎಂಬ ಅರ್ಥವನ್ನೂ, ನಿರುದ್ಧಾಃ ಎಂಬುದಕ್ಕೆ ವ್ಯಾಪ್ತಾಃ ಎಂಬ ಅರ್ಥವನ್ನೂ ಇಟ್ಟುಕೊಂಡು ಹೀಗೆ ಅರ್ಥಮಾಡಬಹುದಾಗಿದೆ.

'ಸ್ವಸ್ಥಾನೇಷು ಮರುದ್ಗಣಾನ್ನಿಯಮಯನ್' ಎಂಬ ಪ್ರಮಾಣವಾಕ್ಯದಂತೆ ಯೋಗದಿಂದ ಪ್ರಾಣಮಾರ್ಗಗಳನ್ನು ನಿರೋಧಿಸಿರುವವನು ನೀನು ಅಥವಾ ವಾಯುವಿನ ಸಪ್ತಮಾರ್ಗಗಳು ನಿನ್ನಿಂದ ನಿರೋಧಿಸಲ್ಪಟ್ಟಿವೆ–ಎಂಬ ಅರ್ಥವೇ ಸಾಧುವಾಗಿದೆ. ಸಪ್ತಪ್ರಾಣಗಳಿಗೆ ಪ್ರಭವನಾಗಿರುವ ಮಹಾವೀರ್ಯನಾದ ಶ್ರೀಕೃಷ್ಣನು ಅವುಗಳನ್ನು ನಿರೋಧಿಸುವ ಮಹಾಯೋಗಿಯೂ ಆಗಿದ್ದಾನೆ.

ನಿರತನಾಗಿರತಕ್ಕವನು. ಸತ್ಯನಿಷ್ಠನು. ದಾನಮಾಡುವುದರಲ್ಲಿಯೇ ತತ್ಪರನಾಗಿರತಕ್ಕವನು ಮತ್ತು ಅಂತಃಶುದ್ಧಿ-ಬಹಿಃಶುದ್ಧಿಗಳಿರತಕ್ಕವನು.

**ಅರ್ಹಸ್ತ್ವಂ ಭೀಷ್ಮ ಮಾಂ ದ್ರಷ್ಟುಂ ತಪಸಾ ಸ್ವೇನ ಪಾರ್ಥಿವ ।**
**ತವ ಹ್ಯುಪಸ್ಥಿತಾ ಲೋಕಾ ಯೇಭ್ಯೋ ನಾವರ್ತತೇ ಪುನಃ ॥೧೩॥**

ಪಾರ್ಥಿವ! ನೀನು ನಿನ್ನ ತಪಸ್ಸಿನ ಬಲದಿಂದಲೇ ನನ್ನನ್ನು ಸಂದರ್ಶಿಸಲು ಅರ್ಹನಾಗಿರುವೆ. ನಿನಗೆ ದಿವ್ಯಲೋಕಗಳು ಸನ್ನಿಹಿತವಾಗಿವೆ. ಆ ಲೋಕಗಳಿಗೆ ನೀನು ಹೋದನಂತರ ಪುನಃ ನೀನು ಹಿಂದಿರುಗುವುದಿಲ್ಲ. ( ಶಾಶ್ವತವಾದ ಬ್ರಹ್ಮಲೋಕಗಳಿಗೇ ಹೋಗುವೆ. )

*** ಪಞ್ಚಾಶತಂ ಷಟ್ಚ ಕುರುಪ್ರವೀರ**
**ಶೇಷಂ ದಿನಾನಾಂ ತವ ಜೀವಿತಸ್ಯ ।**
**ತತಃ ಶುಭೈಃ ಕರ್ಮಫಲೋದಯೈಸ್ತ್ವಂ**
**ಸಮೇಷ್ಯಸೇ ಭೀಷ್ಮ ವಿಮುಚ್ಯ ದೇಹಮ್ ॥೧೪॥**

ಕುರುಶ್ರೇಷ್ಠನೇ! ನಿನ್ನ ಜೀವಿತದಲ್ಲಿ ಇನ್ನು ಐವತ್ತಾರು ದಿವಸಗಳು ಮಾತ್ರವೇ ಉಳಿದಿವೆ. ಬಳಿಕ ನೀನು ಈ ದೇಹವನ್ನು ವಿಸರ್ಜಿಸಿ ನೀನು ಮಾಡಿರುವ ಶುಭಕರ್ಮಗಳ ಫಲವಾಗಿ ಅಕ್ಷಯವಾದ ಲೋಕಗಳನ್ನು ಹೊಂದುವೆ.

---

* ಪಞ್ಚಾಶತಂ ಷಟ್ಚ–ಎಂದರೆ ಐವತ್ತು ಮತ್ತು ಆರು-ಐವತ್ತಾರು ( ೫೬ ) ಎಂದಾಗುತ್ತದೆ. ಮುಂದೆ ಐವತ್ತಾರು ದಿವಸಗಳವರೆಗೆ ಭೀಷ್ಮನು ಬದುಕಿದ್ದನು ಎಂದಾಗುತ್ತದೆ. ಭೀಷ್ಮನು ಸ್ವರ್ಗಾರೋಹಣವನ್ನು ಮಾಡುವ ಮುಂಚೆ ಯುಧಿಷ್ಠಿರನೊಡನೆ ಹೀಗೆ ಹೇಳುತ್ತಾನೆ : ‘ಅಷ್ಟಪಞ್ಚಾಶತಂ ರಾತ್ರ್ಯಃ ಶಯಾನಸ್ಯ ತು ಮೇ ಗತಾಃ । ನಾನು ಈ ಶರತಲ್ಪದಲ್ಲಿ ಮಲಗಿದ್ದಂತೆಯೇ ಐವತ್ತೆಂಟು ರಾತ್ರಿಗಳು ಕಳೆದುಹೋದುವು.’ ( ಅನು. ಅ.೧೬೭-ಶ್ಲೋ.೨೭ ) ಆದುದರಿಂದ ಪಂಚಾಶತಂ ಷಟ್ ಎಂಬುದಕ್ಕೆ ಐವತ್ತಾರು ಎಂದು ಅರ್ಥಮಾಡಿದರೆ ವಿರುದ್ಧವಾಗುತ್ತದೆ. ಆದುದರಿಂದ ವ್ಯಾಖ್ಯಾನಕಾರರು ಪಞ್ಚ-ಆಶತಂ ಷಟ್–ಎಂದು ಪದವಿಭಾಗಮಾಡಿ ಷಟ್ ಪಂಚವಾರಂ ಎಂದರೆ ಮೂವತ್ತು ಎಂದು ಅರ್ಥಮಾಡಿರುತ್ತಾರೆ. ಆಶತಂ –ನೂರು ದಿವಸಗಳು ಮಾಡುವುದನ್ನು ೩೦ ದಿವಸಗಳಲ್ಲಿ ಮಾಡಬಹುದು. ಶತಾವಧಿ ಯದ್ದಿನಾನಾಂ ಶತೇನ ಕರ್ತುಂ ಶಕ್ಯಂ–

**ಏತೇ ಹಿ ದೇವಾ ವಸವೋ ವಿಮಾನಾ-**
**ನ್ಯಾಸ್ಥಾಯ ಸರ್ವೇ ಜ್ವಲಿತಾಗ್ನಿಕಲ್ಪಾಃ ।**
**ಅನ್ತರ್ಹಿತಾಸ್ತ್ವಾಂ ಪ್ರತಿಪಾಲಯನ್ತಿ**
**ಕಾಷ್ಠಾಂ ಪ್ರಪದ್ಯನ್ತಮುದಕ್ಪತಙ್ಗಮ್ ॥೧೫॥**

ಪ್ರಜ್ವಲಿಸುವ ಅಗ್ನಿಗೆ ಸಮಾನವಾದ ಕಾಂತಿಯನ್ನು ಹೊಂದಿರುವ ಈ ದೇವತೆಗಳೂ ಮತ್ತು ವಸುಗಳೂ ವಿಮಾನದಲ್ಲಿ ಕುಳಿತು, ಯಾರೊಬ್ಬರ ಕಣ್ಣಿಗೂ ಕಾಣಿಸದೇ ಸೂರ್ಯನು ಉತ್ತರದಿಕ್ಕಿಗೆ ಹೋಗುವುದನ್ನೇ ಎದುರು ನೋಡುತ್ತಿದ್ದಾರೆ ಮತ್ತು ನಿನ್ನ ಪ್ರತ್ಯಾಗಮನವನ್ನೂ ಎದುರು ನೋಡುತ್ತಿದ್ದಾರೆ.

**ವ್ಯಾವರ್ತಮಾನೇ ಭಗವತ್ಯುದೀಚೀಂ**
**ಸೂರ್ಯೇ ದಿಶಂ ಕಾಲವಶಾತ್ಪ್ರಪನ್ನೇ ।**
**ಗನ್ತಾಸಿ ಲೋಕಾನ್ಪುರುಷಪ್ರವೀರ**
**ನಾವರ್ತತೇ ಯಾನುಪಲಭ್ಯ ವಿದ್ವಾನ್ ॥೧೬॥**

ಪುರುಷಪ್ರವೀರನೇ! ಭಗವಾನ್ ಸೂರ್ಯದೇವನು ಕಾಲವಶದಿಂದ ದಕ್ಷಿಣಾಯನದಿಂದ ಹಿಂದಿರುಗಿ ಉತ್ತರಾಯಣದಕಡೆಗೆ ತಿರುಗಿದ ಕೂಡಲೇ ನೀನು ಈ ಶರೀರವನ್ನು ತೊರೆದು ಜ್ಞಾನಿಗಳು ಯಾವ ಪುಣ್ಯಲೋಕಗಳಿಗೆ ಹೋದನಂತರ ಪುನಃ ಹಿಂದಿರುಗುವುದಿಲ್ಲವೋ–ಅಂತಹ ಪುಣ್ಯಲೋಕ ಗಳನ್ನು ಹೊಂದುವೆ.

---

ತದ್ವಿಂಶತಾಪಿ ಕರ್ತುಂ ಶಕ್ಯಂ–ಎಂದು ಅವರು ಅರ್ಥಮಾಡಿರುತ್ತಾರೆ. ಈ ಸಂಖ್ಯೆಯನ್ನು ಸಮರ್ಥಿಸಲು ಅವರು ಹೀಗೆ ವಿವರಣೆ ಕೊಟ್ಟಿರುತ್ತಾರೆ. ಭೀಷ್ಮನು ಶರತಲ್ಪದಲ್ಲಿ ಮಲಗಿದ ಮೇಲೆ ಮುಂದೆ ಎಂಟು ದಿವಸಗಳು ಯುದ್ಧವು ನಡೆಯಿತು. ದುರ್ಯೋಧನಾದಿಗಳು ಮರಣಹೊಂದಿದುದರಿಂದ ಪ್ರಾಪ್ತವಾದ ಆಶೌಚ ಹದಿನಾರು ದಿವಸಗಳು. ಒಟ್ಟು ೨೪ ದಿವಸಗಳು. ೨೫ನೆಯ ದಿವಸ ಶ್ರಾದ್ಧತರ್ಪಣಗಳು. ೨೬ನೆಯ ದಿವಸ ಪುರಪ್ರವೇಶ. ೨೭ನೆಯ ದಿವಸ ರಾಜ್ಯಾಭಿಷೇಕ ಮತ್ತು ಪ್ರಜೆಗಳನ್ನು ಸಾಂತ್ವನಗೊಳಿಸಿದುದು. ದಾನ ಮುಂತಾದುವು. ೨೮ನೆಯ ದಿವಸ ಭೀಷ್ಮನಲ್ಲಿಗೆ ಪ್ರಯಾಣ. ಉಳಿದಿರುವ ದಿವಸಗಳು ೩೦.

**ಅಮುಂ ಚ ಲೋಕಂ ತ್ವಯಿ ಭೀಷ್ಮ ಯಾತೇ**
**ಜ್ಞಾನಾನಿ ನಂಕ್ಷ್ಯನ್ತ್ಯಖಿಲೇನ ವೀರ ।**
**ಅತಸ್ತು ಸರ್ವೇ ತ್ವಯಿ ಸಂನಿಕರ್ಷಂ**
**ಸಮಾಗತಾ ಧರ್ಮವಿವೇಚನಾಯ ॥೧೭॥**

ವೀರಭೀಷ್ಮನೇ! ಈ ಲೋಕವನ್ನು ಬಿಟ್ಟು ನೀನು ಹೊರಟುಹೋದೆ ಯಾದರೆ–ಎಲ್ಲ ಜ್ಞಾನಗಳೂ ಸಂಪೂರ್ಣವಾಗಿ ನಶಿಸಿಹೋಗುತ್ತವೆ. ಆದುದ ರಿಂದಲೇ ಇವರೆಲ್ಲರೂ ಧರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುವ ಸಲುವಾಗಿ ನಿನ್ನ ಸಮೀಪಕ್ಕೆ ಬಂದಿರುತ್ತಾರೆ.

**ತಜ್ಞಾತಿಶೋಕೋಪಹತಶ್ರುತಾಯ**
**ಸತ್ಯಾಭಿಸಂಧಾಯ ಯುಧಿಷ್ಠಿರಾಯ ।**
**ಪ್ರಬ್ರೂಹಿ ಧರ್ಮಾರ್ಥಸಮಾಧಿಯುಕ್ತಂ**
**ಸತ್ಯಂ ವಚೋಽಸ್ಯಾಪನುದಾಶು ಶೋಕಮ್ ॥೧೮॥**

ಜ್ಞಾತಿಗಳ ವಿನಾಶದ ಶೋಕದಿಂದಾಗಿ ಶಾಸ್ತ್ರಜ್ಞಾನವನ್ನೇ ಸಂಪೂರ್ಣ ವಾಗಿ ಕಳೆದುಕೊಂಡಿರುವ, ಸತ್ಯಪರಾಯಣನಾದ ಯುಧಿಷ್ಠಿರನಿಗೆ ಧರ್ಮ, ಅರ್ಥ ಮತ್ತು ಯೋಗಗಳಿಂದ ಯುಕ್ತವಾದ ಯಥಾರ್ಥವಾದ ಮಾತನ್ನು ಹೇಳಿ ಇವನಿಗುಂಟಾಗಿರುವ ಶೋಕವನ್ನು ಶೀಘ್ರವಾಗಿ ದೂರೀಕರಿಸು.”

ಶ೧ನೆಯ ಅಧ್ಯಾಯವು ಮುಗಿಯಿತು.

ಶ೨ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಭೀಷ್ಮನು ಧರ್ಮೋಪದೇಶಮಾಡಲು ತನ್ನ ಅಸಮರ್ಥತೆಯನ್ನು ವ್ಯಕ್ತಪಡಿಸಿದುದು : ಉಪದೇಶಮಾಡಲು ಸಾಮರ್ಥ್ಯವು ಬರುವಂತೆ ಶ್ರೀಕೃಷ್ಣನು ಭೀಷ್ಮನಿಗೆ ವರನೀಡಿದುದು : ಋಷಿಗಳೆಲ್ಲರೂ ಉಪದೇಶಶ್ರವಣಕ್ಕೆ ಮರುದಿನವನ್ನು ನಿಶ್ಚಯಿಸಿ ಸ್ವಸ್ಥಾನಗಳಿಗೆ ತೆರಳಿದುದು : ಕೃಷ್ಣಾದಿಗಳೂ ಭೀಷ್ಮನ ಅನುಮತಿಯನ್ನು ಪಡೆದು ಹಸ್ತಿನೆಗೆ ಪ್ರಯಾಣಮಾಡಿದುದು

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಶ್ರೀಕೃಷ್ಣನ ಧರ್ಮಾರ್ಥಯುಕ್ತವೂ, ಹಿತಕರವೂ

ಆದ ಮಾತನ್ನು ಕೇಳಿದ ಬಳಿಕ ಶಂತನುವಿನ ಮಗನಾದ ಭೀಷ್ಮನು ಕೈಮುಗಿದುಕೊಂಡು ಶ್ರೀಕೃಷ್ಣನೊಡನೆ ಹೇಳಿದನು :

"ಲೋಕನಾಥನೇ! ಮಹಾಬಾಹುವೇ! ಮಂಗಳಸ್ವರೂಪನೇ! ನಾರಾಯಣನೇ! ಅಚ್ಯುತನೇ! ನಿನ್ನ ಮಾತುಗಳನ್ನು ಕೇಳಿ ನಾನು ಆನಂದ ಸಮುದ್ರದಲ್ಲಿ ಮುಳುಗಿಹೋಗಿದ್ದೇನೆ. ನಾನು ನಿನ್ನ ಸನ್ನಿಧಾನದಲ್ಲಿ ಯಾವ ಮಾತನ್ನು ತಾನೇ ಹೇಳಲಿ? ಮಾತಿನಿಂದ ತಿಳಿಸಬಹುದಾದ ಎಲ್ಲ ಅಭಿಪ್ರಾಯಗಳೂ ನಿನ್ನ ದಿವ್ಯವಾಣಿಯಲ್ಲಿಯೇ ಅಡಕವಾಗಿಬಿಟ್ಟಿವೆ. ಲೋಕ ದಲ್ಲಿ ಎಲ್ಲಿಯೋ ಯಾವುದೋ ಕಿಂಚಿತ್ಕರ್ತವ್ಯಗಳು ಮಾಡಲ್ಪಡುತ್ತಿದ್ದರೆ–ಆ ಕರ್ತವ್ಯಗಳು ಅಥವಾ ಧರ್ಮಗಳು ಸರ್ವಜ್ಞನಾದ ನಿನ್ನ ಮುಖಾರವಿಂದ ದಿಂದಲೇ ಹೊರಟುವುಗಳಾಗಿವೆ. ಲೋಕದಲ್ಲಿ ನೀನೊಬ್ಬನೇ ಏಕೈಕ ಮಹಾ ಬುದ್ಧಿವಂತನಲ್ಲವೇ? ಸಕಲಧರ್ಮಗಳನ್ನೂ ಯುಕ್ತಿಯುಕ್ತವಾಗಿ ಬೋಧಿಸಲು ನೀನೊಬ್ಬನಲ್ಲದೇ, ಜ್ಞಾನವಂತರಾಗಲೀ ಬುದ್ಧಿವಂತರಾಗಲೀ ಬೇರೆ ಯಾರು ತಾನೇ ಇದ್ದಾರೆ? ದೇವರಾಜನ ಬಳಿಗೆ ಹೋಗಿ ದೇವಲೋಕದ ವಿಷಯವನ್ನು ವರ್ಣಿಸಿ ಹೇಳಲು ಯಾವನು ಸಾಹಸಮಾಡುತ್ತಾನೆಯೋ–ಅಂತಹವನು ಮಾತ್ರವೇ ಧರ್ಮದ ಸಾಕಾರಮೂರ್ತಿಯಾಗಿರುವ ನಿನ್ನ ಮುಂದೆ ಧರ್ಮಾರ್ಥ-ಕಾಮ-ಮೋಕ್ಷಗಳ ವ್ಯಾಖ್ಯಾನವನ್ನು ಮಾಡಬಲ್ಲನು. ಮಧುಸೂದನ! ಬಾಣಗಳ ಸತತಪ್ರಹಾರದಿಂದಾಗಿ ಮತ್ತು ಹಲವಾರು ಬಾಣಗಳು ಈಗಲೂ ನನ್ನ ಶರೀರದಲ್ಲಿ ನಾಟಿಕೊಂಡಿರುವ ಕಾರಣದಿಂದಾಗಿ ನನ್ನ ಮನಸ್ಸು ಬಹಳ ವ್ಯಥಿತವಾಗಿದೆ. ಬಾಣಗಳ ಈ ಪೀಡೆಯಿಂದಾಗಿ ಶರೀರವೂ ಶಿಥಿಲಗೊಳ್ಳುತ್ತಿದೆ. ಬುದ್ಧಿಯೂ ಪ್ರಸನ್ನವಾಗಿರುವುದಿಲ್ಲ. ಗೋವಿಂದ! ವಿಷ ಮತ್ತು ಬೆಂಕಿಗಳಿಗೆ ಸಮಾನವಾದ ಬಾಣಗಳಿಂದ ಪೀಡಿಸ ಲ್ಪಡುತ್ತಿರುವ ನನಗೆ ಮಾತನಾಡಲು ಕಿಂಚಿತ್ತಾದರೂ ಪ್ರತಿಭೆಯೇ ಉಳಿದಿಲ್ಲ. ಬಲವು ನನ್ನನ್ನು ಬಿಟ್ಟುಹೋಗುತ್ತಿರುವುದೋ ಎಂಬಂತೆ ಭಾಸವಾಗುತ್ತಿದೆ. ಪ್ರಾಣಗಳು ಈ ಶರೀರದಿಂದ ಹೊರಹೋಗಲು ಅವಸರಪಡುತ್ತಿವೆ. ಮರ್ಮಸ್ಥಳಗಳು ಬಹಳವಾಗಿ ಪರಿತಪಿಸುತ್ತಿವೆ. (ಮರ್ಮಸ್ಥಾನಗಳಲ್ಲಿ ಬಹಳವಾದ ವೇದನೆಯುಂಟಾಗಿದೆ.) ಈ ಎಲ್ಲ ಕಾರಣಗಳಿಂದ ನಾನು ಭ್ರಾಂತ ಚಿತ್ತನಾಗಿದ್ದೇನೆ. ದೌರ್ಬಲ್ಯದಿಂದಾಗಿ ನನ್ನ ಮಾತು ಸ್ಖಾಲಿತ್ಯವನ್ನು ಹೊಂದು

ತ್ತಿದೆ. ನನ್ನ ಸ್ಥಿತಿಯು ಹೀಗಿರುವಾಗ ನಾನು ಹೇಗೆ ಧರ್ಮೋಪದೇಶವನ್ನು ಮಾಡಲಿ? ದಾಶಾರ್ಹಕುಲವರ್ಧನನೇ! ಪ್ರಭುವೇ! ನನ್ನನ್ನು ಪೂರ್ಣವಾಗಿ ಅನುಗ್ರಹಿಸು. ಮಹಾಬಾಹುವೇ! ನನ್ನನ್ನು ಕ್ಷಮಿಸು. ನಾನು ಧರ್ಮದ ವಿಷಯವಾಗಿ ಯಾವ ಮಾತನ್ನೂ ಹೇಳಲಾರೆನು. ಬೃಹಸ್ಪತಿಯೇ ಆದರೂ ನಿನ್ನ ಸನ್ನಿಧಿಯಲ್ಲಿ ಧರ್ಮೋಪದೇಶಮಾಡಲು ಹೊರಟರೆ ಮಾತಿನಲ್ಲಿ ಸ್ಖಾಲಿತ್ಯವನ್ನು ಹೊಂದುತ್ತಾನೆ. ಅವನಿಗೆ ಮುಂದೆ ಮಾತನಾಡಲೇ ತೋರುವುದಿಲ್ಲ. ನನಗೀಗ ದಿಕ್ಕುಗಳು ಯಾವುವೆಂಬುದೂ ತಿಳಿಯುತ್ತಿಲ್ಲ. ಆಕಾಶವು ಯಾವುದು? ಭೂಮಿಯು ಯಾವುದು? ಎಂಬುದೂ ತಿಳಿಯುತ್ತಿಲ್ಲ. ಕೇವಲ ನಿನ್ನ ಪ್ರಭಾವದಿಂದಾಗಿ ನಾನಿನ್ನೂ ಜೀವಿಸುತ್ತಿದ್ದೇನೆ. ಮಹಾನುಭಾವನೇ! ನೀನು ಆಗಮಗಳಿಗೂ ಆಗಮವಾಗಿರುವೆ. ಸಕಲಾಗಮ ಗಳಿಗೂ ಉಗಮಸ್ಥಾನವಾಗಿರುವೆ. ಆದುದರಿಂದ ಧರ್ಮರಾಜನಿಗೆ ಯಾವುದು ಹಿತವೋ ಅದನ್ನು ಶೀಘ್ರವಾಗಿ ನೀನೇ ಹೇಳು.

**ಕಥಂ ತ್ವಯಿ ಸ್ಥಿತೇ ಕೃಷ್ಣೇ ಶಾಶ್ವತೇ ಲೋಕಕರ್ತರಿ ।**
**ಪ್ರಬ್ರೂಯಾನ್ಮದ್ವಿಧಃ ಕಚ್ಚಿದ್ಗುರೌ ಶಿಷ್ಯ ಇವ ಸ್ಥಿತೇ ॥೧೩॥**

ಸನಾತನನಾದ, ಲೋಕಕರ್ತೃವಾದ, ಶ್ರೀಕೃಷ್ಣರೂಪನಾಗಿರುವ ನೀನು ಸನ್ನಿಹಿತನಾಗಿರಲಾಗಿ ನನ್ನಂತಹವನು ಯಾವ ಧರ್ಮೋಪದೇಶವನ್ನು ತಾನೇ ನೀಡಬಲ್ಲನು? ಗುರುವಾದ ನಿನ್ನ ಸಾನ್ನಿಧ್ಯದಲ್ಲಿ ಶಿಷ್ಯನಂತಿರುವ ನಾನು ಉಪದೇಶಮಾಡಲು ಸಾಧ್ಯವಾಗುವುದೇ?"

ಅದಕ್ಕುತ್ತರವಾಗಿ ಶ್ರೀಕೃಷ್ಣನು ಹೇಳುತ್ತಾನೆ :

"ಭೀಷ್ಮ! ಕೌರವಶ್ರೇಷ್ಠನಾದ, ಮಹಾವೀರ್ಯನಾದ, ಸ್ಥಿರಚಿತ್ತನಾದ, ಸರ್ವಾರ್ಥಗಳನ್ನೂ ತಿಳಿದಿರುವ ನೀನು ಹೇಳಿರುವ ಮಾತುಗಳು ಯೋಗ್ಯ ವಾಗಿಯೇ ಇವೆ. (ನಿನ್ನ ಘನತೆಗೆ ತಕ್ಕುದಾದ ಮಾತುಗಳನ್ನೇ ಆಡಿರುವೆ.) ಬಾಣಾಘಾತದಿಂದ ಅಂಗಾಂಗಗಳಲ್ಲಿಯೂ ಯಾತನೆಯಾಗುತ್ತಿರುವುದೆಂದು ನನ್ನೊಡನೆ ಹೇಳಿದೆಯಲ್ಲವೇ? ಅದರ ಉಪಶಮನಕ್ಕಾಗಿ ಪ್ರಸನ್ನಚಿತ್ತನಾಗಿ ನಾನೀಗ ಕೊಡಲಿರುವ ಈ ವರವನ್ನು ಪರಿಗ್ರಹಿಸು.

**ನ ತೇ ಗ್ಲಾನಿರ್ನ ತೇ ಮೂರ್ಛಾ ನ ದಾಹೋ ನ ಚ ತೇ ರುಜಾ ।**
**ಪ್ರಭವಿಷ್ಯನ್ತಿ ಗಾಙ್ಗೇಯ ಕ್ಷುತ್ಪಿಪಾಸೇ ನ ಚಾಪ್ಯುತ ॥೧೬॥**

ಗಂಗಾತನಯನೇ! ಈ ನನ್ನ ವರಪ್ರಸಾದದಿಂದ ನಿನಗೆ ದಣಿವಾಗಲೀ, ಮೂರ್ಛೆಯಾಗಲೀ, ಉರಿಯಾಗಲೀ, ರೋಗ-ರುಜಿನಗಳಾಗಲೀ, ಹಸಿವು-ಬಾಯಾರಿಕೆಗಳಾಗಲೀ ಉಂಟಾಗುವುದಿಲ್ಲ.

**ಜ್ಞಾನಾನಿ ಚ ಸಮಗ್ರಾಣಿ ಪ್ರತಿಭಾಸ್ಯನ್ತಿ ತೇಽನಘ ।**
**ನ ಚ ತೇ ಕ್ವಚಿದಾಸಕ್ತಿರ್ಬುದ್ಧೇಃ ಪ್ರಾದುರ್ಭವಿಷ್ಯತಿ ॥೧೭॥**

ನಿನ್ನ ಅಂತಃಕರಣದಲ್ಲಿ ಸಮಗ್ರವಾದ ಜ್ಞಾನಗಳೂ ಪ್ರಕಾಶಗೊಳ್ಳುತ್ತವೆ. ನಿನ್ನ ಬುದ್ಧಿಯೂ ಯಾವಾಗಲೂ ಯಾವ ಅನಿಷ್ಟವಿಷಯದಲ್ಲಿಯೂ ಆಸಕ್ತವಾಗುವುದಿಲ್ಲ. ಬುದ್ಧಿಯು ಒಂದೇ ಕಡೆಯಲ್ಲಿ ಆಸಕ್ತವಾಗಿ ಮುಂದೆ ತೋರದಂತಾಗುವುದಿಲ್ಲ.

**ಸತ್ತ್ವಸ್ಥಂ ಚ ಮನೋ ನಿತ್ಯಂ ತವ ಭೀಷ್ಮ ಭವಿಷ್ಯತಿ ।**
**ರಜಸ್ತಮೋಭ್ಯಾಂ ರಹಿತಂ ಘನೈರ್ಮುಕ್ತ ಇವೋಡುರಾಟ್ ॥೧೮॥**

ನಿನ್ನ ಮನಸ್ಸು ಯಾವಾಗಲೂ–ಮೋಡಗಳಿಂದ ವಿಮುಕ್ತನಾದ ಚಂದ್ರನಂತೆ–ರಜಸ್ತಮೋಗುಣಗಳಿಂದ ರಹಿತವಾಗಿ ಯಾವಾಗಲೂ ಸತ್ತ್ವಗುಣದಲ್ಲಿಯೇ ಪ್ರತಿಷ್ಠಿತವಾಗಿರುತ್ತದೆ.

ಧರ್ಮಯುಕ್ತವಾದ ವಿಷಯವನ್ನೋ ಅಥವಾ ಅರ್ಥಯುಕ್ತವಾದ ವಿಷಯವನ್ನೋ–ಯಾವುದನ್ನೇ ನೀನು ಚಿಂತಿಸುತ್ತಿದ್ದರೂ–ಆ ವಿಷಯದಲ್ಲಿ ನಿನ್ನ ಬುದ್ಧಿಯು ಮುಂದೆ-ಮುಂದೆ ಸ್ಫುರಿಸುತ್ತಿರುತ್ತದೆ. ನೀನು ಯೋಚಿಸುವ ಧರ್ಮಾರ್ಥಸಂಬಂಧವಾದ ಸಮಸ್ಯೆಗಳಿಗೆ ಪರಿಹಾರಗಳು ನಿನಗೆ ಸಿಕ್ಕುತ್ತಲೇ ಇರುತ್ತವೆ. ನಿನ್ನ ಬುದ್ಧಿಗೆ ಆ ವಿಷಯಗಳು ನನ್ನ ವರದಾನದ ಫಲವಾಗಿ ಸ್ಫುರಿಸುತ್ತಿರುತ್ತವೆ. ರಾಜಶಾರ್ದೂಲನೇ! ನೀನು ದಿವ್ಯದೃಷ್ಟಿಯನ್ನು ಪಡೆದವನಾಗಿ ಸ್ವೇದಜ, ಅಂಡಜ, ಉದ್ಭಿಜ್ಜ ಮತ್ತು ಜರಾಯುಜಗಳೆಂಬ ನಾಲ್ಕು ವಿಧವಾದ ಪ್ರಾಣಿಗಳ ನೈಜಸ್ವರೂಪಗಳನ್ನೂ ಕಾಣುವೆ. ಜ್ಞಾನದೃಷ್ಟಿಯಿಂದ ಸಂಪನ್ನನಾದ ನಿನಗೆ ಸಂಸಾರಬಂಧನದಲ್ಲಿ ಸಿಕ್ಕಿಹಾಕಿಕೊಂಡಿರುವ

ಸಂಪೂರ್ಣ ಜೀವಸಮುದಾಯವೂ ಸ್ವಚ್ಛವಾದ ನೀರಿನಲ್ಲಿರುವ ಮೀನಿಗೆ ಕಾಣುವಂತೆ ಕಾಣಿಸುತ್ತದೆ.”

ಜನಮೇಜಯ! ಶ್ರೀಕೃಷ್ಣನು ಭೀಷ್ಮನಿಗೆ ಅದ್ಭುತವಾದ ವರವನ್ನು ಅನುಗ್ರಹಿಸಿದನಂತರ ವ್ಯಾಸಪುರಃಸರರಾದ ಅಲ್ಲಿದ್ದ ಮಹರ್ಷಿಗಳೆಲ್ಲರೂ ಋಗ್ಯಜುಃಸಾಮಸಹಿತವಾದ ಮಂತ್ರಗಳಿಂದ ಶ್ರೀಕೃಷ್ಣನನ್ನು ಸಂಪೂಜಿಸಿದರು. ಬಳಿಕ ಗಂಗಾಪುತ್ರನಾದ ಭೀಷ್ಮನಿಂದಲೂ ಪಾಂಡವರಿಂದಲೂ ಸಹಿತನಾಗಿ ಶ್ರೀಕೃಷ್ಣನಿದ್ದ ಸ್ಥಳದಲ್ಲಿ ಆಕಾಶದಿಂದ ಸರ್ವರ್ತುಗಳಲ್ಲಿಯೂ ವಿಕಸಿತವಾಗುವ ದಿವ್ಯಪುಷ್ಪಗಳ ವೃಷ್ಟಿಯಾಯಿತು. ಎಲ್ಲ ಪ್ರಕಾರವಾದ ವಾದ್ಯಗಳ ವಾದನವಾಗತೊಡಗಿತು. ಅಪ್ಸರೆಯರು ಗಾಯನಮಾಡುತ್ತಿದ್ದರು. ಅಹಿತಕರ ವಾದ ಅಥವಾ ಅನಿಷ್ಟಕರವಾದ ಯಾವ ದೃಶ್ಯವೂ ಅಲ್ಲಿ ಕಾಣುತ್ತಿರಲಿಲ್ಲ. ಶೀತಲವಾದ, ಮಂಗಳಕರವಾದ, ಸುಖಕರವಾದ, ಪವಿತ್ರವಾದ ಮತ್ತು ಸುಗಂಧಯುಕ್ತವಾದ ವಾಯುವು ಬೀಸತೊಡಗಿತು. ನಾಲ್ಕು ದಿಕ್ಕುಗಳೂ ಪ್ರಶಾಂತವಾದುವು. ಶಾಂತಭಾವದಿಂದ ಕೂಡಿದ್ದ ಮೃಗ-ಪಕ್ಷಿಗಳೂ ಮನೋಹರವಾಗಿ ಶಾಂತದಿಕ್ಕಿನಲ್ಲಿ (ಉತ್ತರದಿಕ್ಕಿನಲ್ಲಿ) ಧ್ವನಿಮಾಡು ತ್ತಿದ್ದುವು. ಸ್ವಲ್ಪಹೊತ್ತಿನಲ್ಲಿಯೇ ಸಹಸ್ರಾಂಶುವಾದ ಸೂರ್ಯನು ಏಕಾಂತ ದಲ್ಲಿ ಅರಣ್ಯದಲ್ಲಿನ ವಸ್ತುಗಳನ್ನು ದಹಿಸುತ್ತಿರುವನೋ–ಎಂಬಂತೆ ಪಶ್ಚಿಮ ದಿಕ್ಕಿನಲ್ಲಿ ಕಾಣುತ್ತಿದ್ದನು. (ಸೂರ್ಯಾಸ್ತಮಯಸಮಯವಾಗಿ ಪಶ್ಚಿಮದಿಕ್ಕು ಕೆಂಪಾದ ಬಣ್ಣದಿಂದ ವ್ಯಾಪ್ತವಾಯಿತು.) ಬಳಿಕ ಭೀಷ್ಮನ ಸುತ್ತಲೂ ಕುಳಿತಿದ್ದ ಮಹರ್ಷಿಗಳೆಲ್ಲರೂ ಮೇಲೆದ್ದು ತಮ್ಮ ಆಶ್ರಮಗಳಿಗೆ ಹೋಗಲು ಶ್ರೀಕೃಷ್ಣ-ಭೀಷ್ಮ-ಯುಧಿಷ್ಠಿರರ ಅನುಮತಿಯನ್ನು ಕೇಳಿದರು. ಪಾಂಡವರಿಂದ ಯುಕ್ತನಾದ ಕೇಶವನೂ, ಸಾತ್ಯಕಿ-ಸಂಜಯ-ಶಾರದ್ವತರೂ ಮಹರ್ಷಿಗಳಿಗೆ ನಮಸ್ಕಾರಮಾಡಿದರು. ಶ್ರೀಕೃಷ್ಣಪುರಃಸರರಾದ ಯುಧಿಷ್ಠಿರಾದಿಗಳಿಂದ ವಿಧ್ಯುಕ್ತವಾದ ರೀತಿಯಲ್ಲಿ ಸಂಪೂಜಿತರಾದ, ಧರ್ಮನಿರತರಾದ ಮಹರ್ಷಿ ಗಳೆಲ್ಲರೂ ‘ಶ್ವಃ ಸಮೇಷ್ಯಾಮಃ’–ನಾಳೆ ಎಲ್ಲರೂ ಇಲ್ಲಿಯೇ ಪುನಃ ಸೇರೋಣ’–ಎಂಬುದಾಗಿ ಹೇಳಿ ತಮ್ಮ ನಿವಾಸಸ್ಥಳಗಳಿಗೆ ಬೇಗನೆ ಹೊರಟು ಹೋದರು. ಅದೇ ರೀತಿಯಲ್ಲಿ ಶ್ರೀಕೇಶವನೂ ಮತ್ತು ಪಾಂಡವರೂ ಭೀಷ್ಮನ ಅನುಮತಿಯನ್ನು ಪಡೆದು, ಪ್ರದಕ್ಷಿಣಪೂರ್ವಕವಾಗಿ ನಮಸ್ಕಾರ

ಮಾಡಿ, ಶುಭಾವಹವಾದ ರಥಗಳನ್ನು ಹತ್ತಿದರು. ಸುವರ್ಣಮಯವಾಗಿಯೂ ಚಿತ್ರ-ವಿಚಿತ್ರವಾಗಿಯೂ ಇದ್ದ ಮೂಕಿಗಳಿಂದ ಕೂಡಿದ್ದ ರಥಗಳಿಂದಲೂ, ಪರ್ವತೋಪಮವಾಗಿದ್ದ ಮತ್ತು ಮದಿಸಿದ್ದ ಆನೆಗಳಿಂದಲೂ, ಗರುಡಪಕ್ಷಿಗಳೋಪಾದಿಯಲ್ಲಿ ಶೀಘ್ರಗಾಮಿಗಳಾಗಿದ್ದ ಕುದುರೆಗಳಿಂದಲೂ, ಕೈಯಲ್ಲಿ ಧನುಸ್ಸೇ ಮೊದಲಾದ ಆಯುಧಗಳನ್ನು ಹಿಡಿದಿದ್ದ ಪದಾತಿಸೈನಿಕರಿಂದಲೂ ಯುಕ್ತವಾಗಿದ್ದ ಆ ವಿಶಾಲಸೈನ್ಯವು ಶ್ರೀಕೃಷ್ಣನೇ ಮೊದಲಾದವರ ರಥಗಳ ಮುಂಭಾಗದಲ್ಲಿಯೂ ಮತ್ತು ಹಿಂಭಾಗದಲ್ಲಿಯೂ ಬಹಳ ದೂರದವರೆಗೆ–ಮಹಾನದಿಯಾದ ನರ್ಮದೆಯು ಋಕ್ಷವತ್ಪರ್ವತದ ಸಮೀಪಕ್ಕೆ ಹೋಗಿ ಅನಂತರ ಪರ್ವತದ ಪೂರ್ವ-ಪಶ್ಚಿಮ ಎರಡು ದಿಕ್ಕುಗಳಲ್ಲಿ ಹರಿದು ಹೋಗುವಂತೆ–ಸಾಗುತ್ತಿದ್ದಿತು. ಆ ಸಮಯಕ್ಕೆ ಸರಿಯಾಗಿ ಪೂರ್ವದಿಕ್ಕಿನಲ್ಲಿ ಭಗವಾನ್ ಚಂದ್ರನು ಉದಯಿಸಿ ಸೈನಿಕರ ಆನಂದವನ್ನು ಅಧಿಕಗೊಳಿಸಿದನು. ಸೂರ್ಯನು ಹಗಲಿನಲ್ಲಿ ಓಷಧೀಲತೆಗಳ ರಸವನ್ನು ಹೀರಿಕೊಂಡು ಬಿಟ್ಟಿದ್ದನು. ರಾತ್ರಿಯಲ್ಲಿ ಹುಟ್ಟಿದ ಚಂದ್ರನು ಪುನಃ ಅದ್ಭುತಮಯವಾದ ತನ್ನ ಕಿರಣಗಳಿಂದ ರಸವನ್ನು ಕಳೆದುಕೊಂಡು ಬಾಡಿಹೋಗಿದ್ದ ಓಷಧೀಲತೆಗಳನ್ನು ಅವುಗಳ ಸ್ವಾಭಾವಿಕಗುಣಗಳಿಂದ ಸಂಪನ್ನಗೊಳಿಸಿದನು. (ಹಗಲಿನಲ್ಲಿ ಸೂರ್ಯನ ಪ್ರಖರವಾದ ಕಿರಣಗಳಿಂದ ಬಾಡಿಹೋಗಿದ್ದ ಗಿಡ-ಮರ-ಬಳ್ಳಿಗಳು ರಾತ್ರಿಯಲ್ಲಿ ಚಂದ್ರನ ಅಮೃತಕಿರಣಗಳ ಸ್ಪರ್ಶದಿಂದಾಗಿ ನವ ಚೈತನ್ಯವನ್ನು ಹೊಂದಿದುವು.)

ಹೀಗೆ ಸೈನ್ಯಸಮೇತರಾಗಿ ಯದುಕುಲಶ್ರೇಷ್ಠರೂ ಮತ್ತು ಪಾಂಡವರೂ ದೇವಪುರವಾದ ಅಮರಾವತಿಯಂತೆ ಶೋಭಾಯಮಾನವಾಗಿ ಕಾಣುತ್ತಿದ್ದ ಹಸ್ತಿನಾಪಟ್ಟಣವನ್ನು ಪ್ರವೇಶಿಸಿ–ಬಳಲಿದ ಸಿಂಹಗಳು ಗುಹೆಯನ್ನು ಪ್ರವೇಶಿಸುವಂತೆ–ಯಥೋಚಿತವಾದ ಮತ್ತು ಶ್ರೇಷ್ಠವಾದ ಅರಮನೆಗಳನ್ನು ಪ್ರವೇಶಿಸಿದರು."

ಫ೨ನೆಯ ಅಧ್ಯಾಯವು ಮುಗಿಯಿತು.

## ಶ್ರೀಕೃಷ್ಣನ ಪ್ರಾತಶ್ಚರ್ಯೆಯ ವರ್ಣನೆ: ಸಾತ್ಯಕಿಯ ಮೂಲಕವಾಗಿ ಶ್ರೀಕೃಷ್ಣನ ಸಂದೇಶವನ್ನು ಪಡೆದು ಯುಧಿಷ್ಠಿರನು ಸಹೋದರರೊಡನೆ ಕುರುಕ್ಷೇತ್ರಕ್ಕೆ ಪ್ರಯಾಣಮಾಡಿದುದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಬಳಿಕ ಮಧುಸೂದನನು ಸುಂದರವಾದ ಸುಪ್ಪತ್ತಿಗೆಯ ಮೇಲೆ ಮಲಗಿದನು. ರಾತ್ರಿಯು ಕಳೆಯಲು ಇನ್ನೂ ಅರ್ಧಯಾಮ (ಒಂದೂವರೆ ಘಂಟೆ ) ವಿದ್ದಾಗಲೇ ಶ್ರೀಕೃಷ್ಣನು ಎಚ್ಚರಗೊಂಡು ಎದ್ದು ಕುಳಿತನು. ಅನಂತರ ಶ್ರೀಕೃಷ್ಣನು ಧ್ಯಾನಮಾರ್ಗವನ್ನು ಆಶ್ರಯಿಸಿ, ಸರ್ವಜ್ಞಾನಗಳನ್ನೂ ಪ್ರತ್ಯಕ್ಷವಾಗಿಯೇ ಕಂಡು, ಸನಾತನಪರಬ್ರಹ್ಮವನ್ನು ಧ್ಯಾನಮಾಡತೊಡಗಿದನು.

ಆ ಸಮಯದಲ್ಲಿ ಸ್ತುತಿ-ಪುರಾಣಜ್ಞರಾದ, ಸ್ತುತಿಸುವುದರಲ್ಲಿಯೂ ಮತ್ತು ಪುರಾಣಗಳನ್ನು ಹೇಳುವುದರಲ್ಲಿಯೂ ಸುಶಿಕ್ಷಿತರಾದ, ಸುಮಧುರವಾದ ಕಂಠಧ್ವನಿಯಿಂದ ಕೂಡಿದ್ದ ಸೂತರೂ ಮತ್ತು ವಂದಿ-ಮಾಗಧರೂ ವಿಶ್ವಕರ್ಮನಾದ, ಪ್ರಜಾಪತಿಯಾದ, ವಸುದೇವನ ಮಗನಾದ ಶ್ರೀಕೃಷ್ಣನನ್ನು ಸುಶ್ರಾವ್ಯವಾದ ಸ್ತೋತ್ರಗಳಿಂದ ಸ್ತುತಿಸಿದರು. ತಂಬೂರಿಯನ್ನು ಮೀಟುತ್ತಾ ಕೈಗಳಿಂದ ತಾಳಹಾಕುತ್ತಾ ಕೆಲವರು ಸ್ತೋತ್ರಗಳನ್ನು ಹೇಳುತ್ತಿದ್ದರು. ಗಾಯಕರೆಲ್ಲರೂ ಗಾನಮಾಡುತ್ತಿದ್ದರು. ಸಾವಿರಾರು ಮಂದಿ ಶಂಖಧ್ವನಿಗಳನ್ನೂ ಮಾಡುತ್ತಿದ್ದರು. ಭೇರೀ-ಮೃದಂಗಾದಿಗಳನ್ನು ಬಾರಿಸುತ್ತಿದ್ದರು. ಆ ಮುಂಜಾನೆಯಲ್ಲಿ ಕೇಳುತ್ತಿದ್ದ ವೀಣೆ, ಪಣವ ಮತ್ತು ಕೊಳಲುಗಳ ಮಧುರವಾದ ನಿನಾದವು ಕರ್ಣಾನಂದಕರವಾಗಿದ್ದಿತು. ಶ್ರೀಕೃಷ್ಣನಿದ್ದ ಆ ಸೌಧವೇ–ತನಗಿಂತಲೂ ಮಿಗಿಲಾದ ಸೌಧವೇ ಬೇರೊಂದಿಲ್ಲವೆಂದು ಅಟ್ಟಹಾಸದಿಂದ ನಗುತ್ತಿರುವುದೋ–ಎಂಬಂತೆ ಅಲ್ಲಿ ನಡೆಯುತ್ತಿದ್ದ ವೀಣಾ-ವೇಣು-ಭೇರೀ-ಮೃದಂಗ-ಗಾಯನಗಳ ನಿನಾದವು ಸರ್ವತ್ರ ಕೇಳಿ ಬರುತ್ತಿದ್ದಿತು.

ಬಳಿಕ ಯುಧಿಷ್ಠಿರನ ಅರಮನೆಯಲ್ಲಿಯೂ ಸುಮಧುರವಾದ ಮಂಗಳಮಯವಾದ ಮಾತುಗಳೂ ಗಾಯನಗಳ ಮತ್ತು ವಾದ್ಯಗಳ ಧ್ವನಿಗಳೂ ಕೇಳಿಬಂದುವು. ಬಳಿಕ ಮಹಾಬಾಹುವಾದ ಶ್ರೀಕೃಷ್ಣನು ಧ್ಯಾನ ಮಗ್ನವಾಗಿದ್ದ ಮನಸ್ಸನ್ನು ಹೊರಸೆಳೆದು (ಧ್ಯಾನಯೋಗದಿಂದ ವಿಮುಖನಾಗಿ) ಮೇಲೆದ್ದು ಸ್ನಾನಮಾಡಿ, ಬದ್ಧಾಂಜಲಿಯಾಗಿ ರಹಸ್ಯವಾದ ಗಾಯತ್ರೀ ಮಂತ್ರವನ್ನು ಜಪಿಸಿ, ಅಗ್ನ್ಯಗಾರಕ್ಕೆ ಹೋಗಿ ಆಜ್ಯಾಹುತಿಗಳ ಮೂಲಕವಾಗಿ ಅಗ್ನಿಯನ್ನು ಪೂಜಿಸಿದನು. ಬಳಿಕ ಶ್ರೀಕೃಷ್ಣನು ಅಗ್ನ್ಯಗಾರದಿಂದ ಹೊರಬಂದು ನಾಲ್ಕು ವೇದಗಳನ್ನೂ ಅಧ್ಯಯನಮಾಡಿದ್ದ ಒಂದು ಸಾವಿರ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ಒಂದೊಂದುಸಾವಿರ ಗೋವುಗಳನ್ನು ದಾನಮಾಡಿ ಅನಂತರ ಸ್ವಸ್ತಿವಾಚನವನ್ನು ಮಾಡಿಸಿಕೊಂಡನು. ಬಳಿಕ ಶ್ರೀಕೃಷ್ಣನು ಪೂರ್ಣಕುಂಭಾದಿ ಮಂಗಳವಸ್ತುಗಳನ್ನು ಸ್ಪರ್ಶಿಸಿ ಶುದ್ಧವಾಗಿದ್ದ ಕನ್ನಡಿಯಲ್ಲಿ ತನ್ನನ್ನು ನೋಡಿಕೊಂಡನು. ಬಳಿಕ ಹತ್ತಿರದಲ್ಲಿಯೇ ಇದ್ದ ಸಾತ್ಯಕಿಯೊಡನೆ ಹೇಳಿದನು:

"ಶೈನೇಯ! ರಾಜಭವನಕ್ಕೆ ಈಗಲೇ ಹೋಗಿ, ಮಹಾತೇಜಸ್ವಿಯಾದ ಯುಧಿಷ್ಠಿರನು ಭೀಷ್ಮನ ಬಳಿಗೆ ಹೋಗಲು ಸಿದ್ಧನಾಗಿರುವನೋ ಎಂಬುದನ್ನು ತಿಳಿದು ಬಾ."

ಜನಮೇಜಯ! ಶ್ರೀಕೃಷ್ಣನು ಹೀಗೆ ಹೇಳಿದೊಡನೆಯೇ ಸಾತ್ಯಕಿಯು ಅತ್ಯವಸರದಿಂದಲೇ ರಾಜಭವನಕ್ಕೆ ಧಾವಿಸಿ, ಅಲ್ಲಿ ಯುಧಿಷ್ಠಿರರಾಜನನ್ನು ಸಂಧಿಸಿ ಹೇಳಿದನು :

"ಮಹಾರಾಜ! ಧೀಮಂತನಾದ ವಾಸುದೇವನ ರಥವು ಈಗಾಗಲೇ ಸಜ್ಜಾಗಿಬಿಟ್ಟಿದೆ. ಶ್ರೀಕೃಷ್ಣನು ಇಷ್ಟರಲ್ಲಿಯೇ ರಥದಲ್ಲಿ ಕುಳಿತು ಭೀಷ್ಮನ ಸಮೀಪಕ್ಕೆ ಹೋಗಲಿದ್ದಾನೆ. ಮಹಾದ್ಯುತಿಮಂತನೇ! ಧರ್ಮರಾಜ! ಶ್ರೀಕೃಷ್ಣನೀಗ ನಿನ್ನನ್ನೇ ಎದುರು ನೋಡುತ್ತಿದ್ದಾನೆ. ಈ ಸಮಯದಲ್ಲಿ ಮುಂದೆ ಯಾವ ಕಾರ್ಯವನ್ನು ಮಾಡಬೇಕೋ ಯಾವುದು ಉಚಿತವಾಗಿ ಕಾಣುತ್ತದೆಯೋ–ಆ ಕಾರ್ಯವನ್ನೇ ಮಾಡುವುದು ಯೋಗ್ಯವಾಗಿದೆ."

ಸಾತ್ಯಕಿಯು ಹೀಗೆ ಹೇಳಿದೊಡನೆಯೇ ಯುಧಿಷ್ಠಿರನು ಅರ್ಜುನ ನೊಡನೆ ಹೇಳಿದನು :

“ಅಪ್ರತಿಮವಾದ ಕಾಂತಿಯಿಂದ ಕೂಡಿರುವವನೇ! ಫಾಲ್ಗುನ! ಶ್ರೇಷ್ಠವಾದ ನನ್ನ ರಥವು ಪ್ರಯಾಣಕ್ಕೆ ಸಿದ್ಧವಾಗಲಿ. ಈಗ ನಮ್ಮ ಜೊತೆಯಲ್ಲಿ ಸೈನಿಕರು ಬರುವ ಅಗತ್ಯವಿಲ್ಲ. ನಾವು ಮಾತ್ರ ಅಲ್ಲಿಗೆ ಹೋಗೋಣ. ಧರ್ಮಾತ್ಮರಲ್ಲಿ ಶ್ರೇಷ್ಠನಾದ ಭೀಷ್ಮನಿಗೆ ಯಾವುದೇ ಕಾರಣದಿಂದಲೂ ನಮ್ಮಿಂದ ತೊಂದರೆಯಾಗಬಾರದು. ಆದುದರಿಂದ ಮುಂಭಾಗದಲ್ಲಿ ಹೋಗುವ ಸೈನಿಕರೂ ಅಲ್ಲಿಗೆ ಬರುವ ಕಾರಣವಿಲ್ಲ. ಅವರೆಲ್ಲರೂ ತಮ್ಮ-ತಮ್ಮ ನಿವಾಸಗಳಿಗೆ ಹಿಂದಿರುಗಲಿ.

**ಅದ್ಯಪ್ರಭೃತಿ ಗಾಙ್ಗೇಯಃ ಪರಂ ಗುಹ್ಯಂ ಪ್ರವಕ್ಷ್ಯತಿ ।**
**ಅತೋ ನೇಚ್ಛಾಮಿ ಕೌನ್ತೇಯ ಪೃಥಗ್ಜನಸಮಾಗಮಮ್ ॥೧೬॥**

ಇಂದು ಮೊದಲು ಭೀಷ್ಮನು ಪರಮಗುಹ್ಯವಾದ ಧಾರ್ಮಿಕವಿಷಯಗಳನ್ನು ಹೇಳುತ್ತಾನೆ. ಆದುದರಿಂದ ಅವನು ಹೇಳುವುದನ್ನು ಗ್ರಹಿಸಲು ಅಸಮರ್ಥರಾದ ಸಾಮಾನ್ಯಜನರು ಅಲ್ಲಿಗೆ ಬರುವುದನ್ನು ನಾನು ಇಷ್ಟಪಡುವುದಿಲ್ಲ.”

ಕುಂತೀಪುತ್ರನಾದ, ನರಶ್ರೇಷ್ಠನಾದ ಧನಂಜಯನು ಯುಧಿಷ್ಠಿರನು ಹೇಳಿದ ಮಾತನ್ನು ಕೇಳಿ ರಥವನ್ನು ಸಿದ್ಧಗೊಳಿಸಿ ಪ್ರಯಾಣಹೊರಡಲು ರಥವು ಸಿದ್ಧವಾಗಿರುವುದೆಂಬ ವಾರ್ತೆಯನ್ನು ಅಣ್ಣನಿಗೆ ಅರುಹಿದನು. ಬಳಿಕ ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರು ಮೂರ್ತಿಮತ್ತಾದ ಪಂಚಭೂತಗಳಂತೆ ಒಂದೇ ರಥದಲ್ಲಿ ಕುಳಿತು ಶ್ರೀಕೃಷ್ಣನ ಅರಮನೆಗೆ ತೆರಳಿದರು. ಮಹಾತ್ಮರಾದ ಪಾಂಡವರು ಆಗಮಿಸಿದ ನಂತರ ಧೀಮಂತ ನಾದ ಶ್ರೀಕೃಷ್ಣನು ಸಾತ್ಯಕಿಯೊಡನೆ ರಥಾರೋಹಣಮಾಡಿದನು. ರಥಗಳಲ್ಲಿ ಕುಳಿತಿದ್ದಂತೆಯೇ–‘ರಾತ್ರಿಯು ಸುಖಾವಹವಾಗಿದ್ದಿತೇ? ಸುಪ್ರಭಾತ ವಾಯಿತೇ? ಮನಸ್ಸು ನಿರ್ಮಲವಾಗಿರುವುದೇ?’–ಇವೇ ಮುಂತಾದ ಕುಶಲಪ್ರಶ್ನೆಗಳನ್ನು ಪರಸ್ಪರವಾಗಿ ಮಾಡಿದನಂತರ ಮನುಜಶ್ರೇಷ್ಠರಾದ ಶ್ರೀಕೃಷ್ಣಾದಿಗಳು ಗುಡುಗಿನ ಶಬ್ದಕ್ಕೆ ಸಮಾನವಾದ ಶಬ್ದದಿಂದ ಕೂಡಿದ್ದ ಶ್ರೇಷ್ಠವಾದ ರಥಗಳ ಮೂಲಕ ಕುರುಕ್ಷೇತ್ರಕ್ಕೆ ಪ್ರಯಾಣಮಾಡಿದರು. ಬಲಾಹಕ, ಮೇಘಪುಷ್ಪ, ಶೈಬ್ಯ, ಸುಗ್ರೀವಗಳೆಂಬ ವಾಸುದೇವನ ರಥಕ್ಕೆ

ಕಟ್ಟಿದ್ದ ಕುದುರೆಗಳನ್ನು ದಾರುಕನು ಶೀಘ್ರಗತಿಯಲ್ಲಿ ಹೋಗುವಂತೆ ಪ್ರಚೋದಿಸಿದನು. ದಾರುಕನಿಂದ ಪ್ರಚೋದಿತವಾದ ವಾಸುದೇವನ ರಥದ ಆ ಕುದುರೆಗಳು ಗೊರಸುಗಳ ಅಗ್ರಭಾಗಗಳಿಂದ ಭೂಮಿಯನ್ನು ಗುರುತಿಸುತ್ತಾ (ಗೀರುತ್ತಾ) ಬಹಳ ಬೇಗ ಧಾವಿಸಿದುವು. ಅತ್ಯಂತವೇಗಶಾಲಿಗಳಾಗಿದ್ದ ಮತ್ತು ಅತ್ಯಂತಬಲಿಷ್ಠವಾಗಿದ್ದ ಬಲಾಹಕವೇ ಮುಂತಾದ ಕುದುರೆಗಳು ಆಕಾಶವನ್ನೇ ನುಂಗುತ್ತಿವೆಯೋ–ಎಂಬಂತೆ ನಾಗಾಲೋಟದಿಂದ ಹೋಗುತ್ತಾ ಸಮಸ್ತಧರ್ಮಕ್ಕೂ ಕ್ಷೇತ್ರಭೂತವಾದ ಕುರುಕ್ಷೇತ್ರವನ್ನು ತಲುಪಿದುವು. ಬಳಿಕ ಅವರೆಲ್ಲರೂ–ದೇವಗಣಗಳಿಂದ ಪರಿವೃತನಾದ ಬ್ರಹ್ಮದೇವನಂತೆ–ಋಷಿ ಗಣಗಳಿಂದ ಪರಿವೃತನಾಗಿದ್ದ, ಬಾಣದ ಹಾಸಿಗೆ ಯಲ್ಲಿ ಮಲಗಿದ್ದ, ಭೀಷ್ಮನಿದ್ದ ಸ್ಥಳಕ್ಕೆ ಹೋದರು.

ಅನಂತರ ಶ್ರೀಕೃಷ್ಣ-ಸಾತ್ಯಕಿಯರೂ, ಯುಧಿಷ್ಠಿರ-ಭೀಮಾರ್ಜುನ-ನಕುಲ-ಸಹದೇವರೂ ರಥದಿಂದಿಳಿದು, ಬಲಗೈಗಳನ್ನೆತ್ತಿಕೊಂಡು ಅಲ್ಲಿ ನೆರೆದಿದ್ದ ಋಷಿಗಳೆಲ್ಲರನ್ನೂ ಗೌರವಿಸಿದರು. ಸಹೋದರರಿಂದಲೂ ಶ್ರೀಕೃಷ್ಣ-ಸಾತ್ಯಕಿಯರಿಂದಲೂ ಮತ್ತು ಋಷಿಗಣಗಳಿಂದಲೂ ಪರಿವೃತನಾಗಿದ್ದ ಯುಧಿಷ್ಠಿರನು–ನಕ್ಷತ್ರಗಳಿಂದ ಪರಿವೃತನಾದ ಚಂದ್ರನೋಪಾದಿಯಲ್ಲಿ ಬೆಳಗುತ್ತಾ, ಇಂದ್ರನು ಬ್ರಹ್ಮನ ಸಮೀಪಕ್ಕೆ ಹೋಗುವಂತೆ–ಭೀಷ್ಮನ ಸಮೀಪಕ್ಕೆ ಹೋದನು. ಆಕಾಶದಿಂದ ಬಿದ್ದ ಸೂರ್ಯನೋಪಾದಿಯಲ್ಲಿ ಕಾಣುತ್ತಿದ್ದ, ಶರತಲ್ಪದಲ್ಲಿ ಮಲಗಿದ್ದ ಮಹಾಬಾಹುವಾದ ಭೀಷ್ಮನನ್ನು, ಭಯದಿಂದ ಕಂಪಿಸುತ್ತಿದ್ದ ಯುಧಿಷ್ಠಿರನು ಸಂದರ್ಶಿಸಿದನು."

೫೩ನೆಯ ಅಧ್ಯಾಯವು ಮುಗಿಯಿತು.

೫೪ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಭಗವಾನ್ ಶ್ರೀಕೃಷ್ಣನಿಗೂ ಮತ್ತು ಭೀಷ್ಮನಿಗೂ ನಡೆದ ಸಂಭಾಷಣೆ

ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ :

"ಮಹಾಮುನಿಗಳೇ! ವೈಶಂಪಾಯನರೇ! ಧರ್ಮಾತ್ಮನಾದ, ಮಹಾ

ವೀರ್ಯನಾದ, ಸತ್ಯಸಂಧನಾದ, ಜಿತೇಂದ್ರಿಯನಾದ, ಮಹಾಭಾಗ್ಯಶಾಲಿಯಾದ, ಶಂತನುವಿನ ಮಗನಾದ, ಪುರುಷವ್ಯಾಘ್ರನಾದ, ಗಂಗಾಪುತ್ರನಾದ, ದೇವವ್ರತನೆಂಬ ಹೆಸರಿನಿಂದಲೂ ಪ್ರಸಿದ್ಧನಾಗಿದ್ದ ಭೀಷ್ಮನು ವೀರೋಚಿತ ಶಯನವಾದ ಬಾಣದ ಹಾಸಿಗೆಯಲ್ಲಿ ಮಲಗಿರಲಾಗಿ ಮತ್ತು ಪಾಂಡವರಿಂದ ಸೇವಿಸಲ್ಪಡುತ್ತಿರಲಾಗಿ, ಎರಡೂ ಪಕ್ಷಗಳ ಎಲ್ಲ ಸೈನ್ಯಗಳೂ ವಿನಾಶ ಹೊಂದಿರಲಾಗಿ, ಆ ಮಹಾವೀರರ ಪರಸ್ಪರಸಮಾಗಮದ ಕಾಲದಲ್ಲಿ ಯಾವ ಮಾತುಕತೆಗಳು ನಡೆದುವು? ಎಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳಿರಿ."

ಜನಮೇಜಯ! ಕೌರವಶ್ರೇಷ್ಠನಾದ ಭೀಷ್ಮನು ಶರತಲ್ಪದಲ್ಲಿ ಮಲಗಿರಲಾಗಿ, ನಾರದಪ್ರಮುಖರಾದ ಋಷಿಗಳೂ ಮತ್ತು ಸಿದ್ಧರೂ ಅಲ್ಲಿಗೆ ಆಗಮಿಸಿದರು. ಭಾರತಯುದ್ಧದಲ್ಲಿ ಅಳಿದುಳಿದಿದ್ದ ರಾಜರೆಲ್ಲರೂ ಯುಧಿಷ್ಠಿರನನ್ನು ಮುಂದೆಮಾಡಿಕೊಂಡು ಭೀಷ್ಮನ ಬಳಿಗೆ ಬಂದಿದ್ದರು. ಧೃತರಾಷ್ಟ್ರ-ಕೃಷ್ಣ-ಭೀಮಾರ್ಜುನ-ನಕುಲ-ಸಹದೇವ–ಇವರೇ ಮುಂತಾದ ಮಹಾತ್ಮರೆಲ್ಲರೂ ಆಕಾಶದಿಂದ ಕೆಳಗೆ ಬಿದ್ದಿರುವ ಸೂರ್ಯನಂತೆ ಕಾಣುತ್ತಿದ್ದ, ಭಾರತವಂಶೀಯರಿಗೆ ಪಿತಾಮಹನಾದ, ಗಂಗಾಪುತ್ರನಾದ ಭೀಷ್ಮನ ಬಳಿಗೆ ಬಂದು ಅವನ ಸ್ಥಿತಿಯನ್ನು ನೋಡಿ ದುಃಖವನ್ನು ವ್ಯಕ್ತಪಡಿಸಿದರು. ದಿವ್ಯದೃಷ್ಟಿಯನ್ನು ಹೊಂದಿದ್ದ ದೇವರ್ಷಿಗಳಾದ ನಾರದರು ಸ್ವಲ್ಪ ಹೊತ್ತು ಚಿಂತಿಸುತ್ತಿದ್ದು ಬಳಿಕ ಪಾಂಡವರನ್ನೂ ಮತ್ತು ಅಳಿದುಳಿದಿದ್ದ ರಾಜರನ್ನೂ ಕುರಿತು ಹೇಳಿದರು :

"ಭಾರತರೇ! ಭೂಪಾಲರೇ! ನಾನು ನಿಮಗೆ ಸಮಯೋಚಿತವಾದ ಕರ್ತವ್ಯದ ವಿಷಯವಾಗಿ ಹೇಳುತ್ತಿದ್ದೇನೆ. ನೀವು ಭೀಷ್ಮನನ್ನು ಧರ್ಮಕ್ಕೆ ಮತ್ತು ಬ್ರಹ್ಮನಿಗೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೇಳಿರಿ. ಏಕೆಂದರೆ ಭೀಷ್ಮನು ಇನ್ನು ಸ್ವಲ್ಪ ದಿನಗಳಲ್ಲಿಯೇ ಸೂರ್ಯನು ಅಸ್ತಂಗತನಾಗುವಂತೆ ಅಸ್ತಮಿಸುತ್ತಾನೆ. ಭೀಷ್ಮನು ಪ್ರಾಣಪರಿತ್ಯಾಗಮಾಡಲು ಇಚ್ಛಿಸುತ್ತಿದ್ದಾನೆ. ಆದುದರಿಂದ ನೀವೆಲ್ಲರೂ ನಿಮ್ಮ ಮನಸ್ಸಿನಲ್ಲಿರುವ ಪ್ರಶ್ನೆಗಳನ್ನು ಕೇಳಿ ಧರ್ಮದ ಸಂಬಂಧವಾಗಿರುವ ನಿಮ್ಮ ಸಂದೇಹಗಳೆಲ್ಲವನ್ನೂ ನಿವಾರಿಸಿಕೊಳ್ಳಿರಿ. ಚಾತುರ್ವರ್ಣ್ಯದ ಬಹುವಿಧವಾದ ಮತ್ತು ಸಮಸ್ತವಾದ ಎಲ್ಲ

ಧರ್ಮಗಳನ್ನೂ ಇವನು ತಿಳಿದವನಾಗಿದ್ದಾನೆ. ವೃದ್ಧನಾಗಿರುವ ಭೀಷ್ಮನು ಈ ದೇಹವನ್ನು ತ್ಯಜಿಸಿದೊಡನೆಯೇ ಶ್ರೇಷ್ಠವಾದ ಪುಣ್ಯಲೋಕಗಳನ್ನು ಪಡೆದುಕೊಳ್ಳುತ್ತಾನೆ. ಆದುದರಿಂದ ನೀವೆಲ್ಲರೂ ಶೀಘ್ರವಾಗಿ ನಿಮ್ಮ ಮನಸ್ಸಿನಲ್ಲಿರುವ ಸಂಶಯಗಳನ್ನು ಕೇಳಿರಿ."

ಜನಮೇಜಯ! ನಾರದರು ಹೀಗೆ ಹೇಳಿದನಂತರ ರಾಜರೆಲ್ಲರೂ ತಮ್ಮ ಸಂಶಯಗಳನ್ನು ಪರಿಹರಿಸಿಕೊಳ್ಳಬೇಕೆಂದೇ ಭೀಷ್ಮನ ಹತ್ತಿರಕ್ಕೆ ಹೋದರು. ಆದರೆ ಪ್ರಶ್ನೆಗಳನ್ನು ಕೇಳಲು ಯಾರೂ ಸಮರ್ಥರಾಗಲಿಲ್ಲ. ಪರಸ್ಪರವಾಗಿ ಒಬ್ಬರು ಮತ್ತೊಬ್ಬರ ಮುಖವನ್ನು ಮಾತ್ರ ನೋಡುತ್ತಿದ್ದರು. ಅವರೆಲ್ಲರೂ ಹೀಗೆ ಪೇಚಿನಲ್ಲಿ ಸಿಕ್ಕಿಕೊಂಡಿರುವುದನ್ನು ಕಂಡು ಪಾಂಡುಪುತ್ರನಾದ ಯುಧಿಷ್ಠಿರನು ಹೃಷೀಕೇಶನನ್ನು ಕುರಿತು ಹೇಳಿದನು :

**ನಾನ್ಯಸ್ತು ದೇವಕೀಪುತ್ರಾಚ್ಛಕ್ತಃ ಪ್ರಷ್ಟುಂ ಪಿತಾಮಹಮ್ ॥**

"ದೇವಕೀಪುತ್ರನಾದ ಶ್ರೀಕೃಷ್ಣನೊಬ್ಬನನ್ನು ಬಿಟ್ಟರೆ ಬೇರೆ ಯಾರೂ ಪಿತಾಮಹನನ್ನು ಧರ್ಮಗಳ ವಿಷಯವಾಗಿ ಪ್ರಶ್ನೆಗಳನ್ನು ಕೇಳಲು ಸಮರ್ಥರಾಗಿಲ್ಲ.

ಮಧುಸೂದನ! ಯದುಶ್ರೇಷ್ಠನೇ! ನೀನೇ ಮೊದಲು ಪಿತಾಮಹನೊಡನೆ ಸಂಭಾಷಣೆಯನ್ನು ಆರಂಭಿಸು. ಏಕೆಂದರೆ : ನಮ್ಮೆಲ್ಲರಿಗಿಂತಲೂ ನೀನು ಶ್ರೇಷ್ಠನಾಗಿರುವೆ ಮತ್ತು ಎಲ್ಲ ಧರ್ಮಗಳನ್ನೂ ತಿಳಿದಿರುವೆ."

ಪಾಂಡುಪುತ್ರನಾದ ಯುಧಿಷ್ಠಿರನು ಹೀಗೆ ಹೇಳಿದನಂತರ ಭಗವಾನ್ ಕೇಶವನು ದುರಾಧರ್ಷನಾದ ಭೀಷ್ಮನ ಬಳಿಗೆ ಹೋಗಿ ಮಾತನಾಡಲು ಪ್ರಾರಂಭಿಸಿದನು :

**ಕಚ್ಚಿತ್ಸುಖೇನ ರಜನೀ ವ್ಯುಷ್ಟಾ ತೇ ರಾಜಸತ್ತಮ ।**
**ವಿಸ್ಪಷ್ಟಲಕ್ಷಣಾ ಬುದ್ಧಿಃ ಕಚ್ಚಿಚ್ಚೋಪಸ್ಥಿತಾ ತವ ॥೧೫॥**

"ರಾಜಶ್ರೇಷ್ಠನೇ! ನೀನು ರಾತ್ರಿಯನ್ನು ಸುಖದಿಂದ ಕಳೆದೆಯಾ? ತಿಳಿಸಬೇಕಾದ ವಿಷಯಗಳೆಲ್ಲವನ್ನೂ ತಿಳಿಸಲು ಸುಸ್ಪಷ್ಟವಾದ ಲಕ್ಷಣಗಳಿಂದ ಕೂಡಿರುವ ನಿರ್ಮಲವಾದ ಬುದ್ಧಿಯು ನಿನ್ನಲ್ಲಿ ಉಪಸ್ಥಿತವಾಗಿರುವುದೇ? (ರಜಸ್ತಮಸ್ಸುಗಳಿಂದ ವಿಹೀನವಾದ ಸಾತ್ತ್ವಿಕವಾದ ಅಥವಾ ನಿರ್ಮಲವಾದ ಬುದ್ಧಿಯು ನಿನ್ನಲ್ಲಿ ಪ್ರತಿಷ್ಠಿತವಾಗಿರುವುದೇ? )

**ಕಚ್ಚಿಜ್ಜ್ಞಾನಾನಿ ಸರ್ವಾಣಿ ಪ್ರತಿಭಾನ್ತಿ ಚ ತೇಽನಘ ।**
**ನ ಗ್ಲಾಯತೇ ಚ ಹೃದಯಂ ನ ಚ ತೇ ವ್ಯಾಕುಲಂ ಮನಃ ॥೧೬॥**

ನಿಷ್ಪಾಪನೇ! ಎಲ್ಲ ಜ್ಞಾನಗಳೂ ನಿನ್ನ ಅಂತಃಕರಣದಲ್ಲಿ ಪ್ರಕಾಶಿಸುತ್ತಿರುವುವೇ? ನಿನ್ನ ಮನಸ್ಸಿಗೆ ಆಯಾಸವಾಗಿಲ್ಲ ತಾನೇ? ನಿನ್ನ ಮನಸ್ಸು ವ್ಯಾಕುಲಿತವಾಗಿಲ್ಲವಲ್ಲವೇ?"

ಭೀಷ್ಮನು ಹೇಳುತ್ತಾನೆ :

"ವೃಷ್ಣಿನಂದನನೇ! ನಿನ್ನ ವರಪ್ರಸಾದದಿಂದಾಗಿ ನನ್ನ ಶರೀರದ ಉರಿ, ಮನಸ್ಸಿನ ಮೋಹ, ಆಯಾಸ, ದಣಿವು, ಬಳಲಿಕೆ, ರೋಗ–ಇವೆಲ್ಲವೂ ದೂರಸರಿದಿವೆ. ಪುರುಷೋತ್ತಮನೇ! ಈಗ ನಾನು ಅಂಗೈಯಲ್ಲಿರುವ ಎಲಚೀಹಣ್ಣಿನಂತೆ ಹಿಂದೆ ನಡೆದಿರುವುದು, ಮುಂದೆ ನಡೆಯುವುದು ಮತ್ತು ಈಗ ನಡೆಯುತ್ತಿರುವುದು–ಈ ಎಲ್ಲವನ್ನೂ ಸ್ಪಷ್ಟವಾಗಿ ಕಾಣುತ್ತಿದ್ದೇನೆ. ನಿನ್ನ ವರದಾನದ ಫಲದಿಂದಾಗಿ ವೇದೋಕ್ತವಾದ ಧರ್ಮಗಳು, ವೇದಾಂತದಲ್ಲಿ (ಉಪನಿಷತ್ತುಗಳಲ್ಲಿ) ತಿಳಿಯಬೇಕಾಗಿರುವ ಧರ್ಮಗಳು–ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ. ಶಿಷ್ಟರು ಯಾವ ಧರ್ಮವನ್ನು ಹೇಳುತ್ತಾರೆಯೋ ಆ ಧರ್ಮವೂ ನನ್ನ ಹೃದ್ಗತವಾಗಿದೆ. ಜನಾರ್ದನನೇ! ದೇಶಧರ್ಮ, ಜಾತಿಧರ್ಮ ಮತ್ತು ಕುಲಧರ್ಮಗಳನ್ನೂ ನಾನು ತಿಳಿದವನಾಗಿದ್ದೇನೆ. ಚಾತುರ್ವರ್ಣ್ಯ ಮತ್ತು ನಾಲ್ಕು ಆಶ್ರಮಧರ್ಮಗಳಲ್ಲಿ ಸಾರಭೂತವಾದ ಯಾವ ತತ್ತ್ವಗಳಿರುವುವೋ–ಅವೂ ನನ್ನ ಹೃದಯದಲ್ಲಿ ಪ್ರತಿಷ್ಠಿತವಾಗಿವೆ. ಎಲ್ಲ ರಾಜಧರ್ಮಗಳನ್ನೂ ನಾನು ಚೆನ್ನಾಗಿ ತಿಳಿದುಕೊಂಡಿರುತ್ತೇನೆ. ಕೇಶವ! ಯಾವ ವಿಷಯದಲ್ಲಿ ನಿಷ್ಕೃಷ್ಟವಾಗಿ ಏನನ್ನು ಹೇಳಬೇಕೋ ಅದನ್ನು ಹೇಳುತ್ತೇನೆ. ನಿನ್ನ ವರಪ್ರಸಾದದಿಂದಾಗಿ ನನ್ನ ಅಂತಃಕರಣವನ್ನು ನಿರ್ಮಲವಾದ ಮನಸ್ಸೂ ಮತ್ತು ಕಲ್ಯಾಣಮಯವಾದ ಬುದ್ಧಿಯೂ ಪ್ರವೇಶಿಸಿವೆ. (ನನ್ನ ಬುದ್ಧಿ ಮತ್ತು ಮನಸ್ಸುಗಳ ನಿರ್ಮಲವಾಗಿವೆ ಮತ್ತು ನಿರಾತಂಕವಾಗಿವೆ.) ಎಲ್ಲ ಸಮಯಗಳಲ್ಲಿಯೂ ನಿನ್ನನ್ನೇ ಚಿಂತಿಸುತ್ತಿರುವುದರ ಫಲವಾಗಿ ನಾನೀಗ ವೃದ್ಧನಾಗಿದ್ದರೂ ಯುವಕನಂತಾಗಿಬಿಟ್ಟಿದ್ದೇನೆ. ನಿನ್ನ ವರಪ್ರಸಾದದ ಪ್ರಭಾವದಿಂದಾಗಿ ಶ್ರೇಯಸ್ಕರವಾದ

ಉಪದೇಶವನ್ನು ನೀಡಲು ಸಮರ್ಥನಾಗಿದ್ದೇನೆ. ಮಾಧವನೇ! ಆದರೆ ಸರ್ವ ಧರ್ಮಗಳನ್ನೂ ತಿಳಿದಿರುವ ನೀನೇ ಏಕೆ ಪಾಂಡವನಿಗೆ ಶ್ರೇಯಃಪ್ರಾಪಕವಾದ ಉಪದೇಶವನ್ನು ನೀಡುವುದಿಲ್ಲ? ನನ್ನಿಂದಲೇ ಈ ಧರ್ಮೋಪದೇಶ ಮಾಡಿಸಬೇಕೆಂಬುದರಲ್ಲಿ ನಿನ್ನ ಉದ್ದೇಶವಾದರೂ ಏನು? ಶೀಘ್ರವಾಗಿ ಹೇಳು."

ಶ್ರೀಕೃಷ್ಣನು ಹೇಳುತ್ತಾನೆ :

**ಯಶಸಃ ಶ್ರೇಯಸಶ್ಚೈವ ಮೂಲಂ ಮಾಂ ವಿದ್ಧಿ ಕೌರವ ।**
**ಮತ್ತಃ ಸರ್ವೇಽಭಿನಿರ್ವೃತ್ತಾ ಭಾವಾಃ ಸದಸದಾತ್ಮಕಾಃ ॥೨೫॥**

"ಕುರುನಂದನ! ಎಲ್ಲರ ಶ್ರೇಯಸ್ಸಿಗೂ ಮತ್ತು ಯಶಸ್ಸಿಗೂ ನಾನೇ ಮೂಲಕಾರಣನೆಂಬುದನ್ನು ನೀನು ತಿಳಿ. ಪ್ರಪಂಚದಲ್ಲಿ ಸತ್ ಮತ್ತು ಅಸತ್ ವಸ್ತುಗಳು ಯಾವುವು ಇವೆಯೋ–ಅವೆಲ್ಲವೂ ನನ್ನಿಂದಲೇ ಪ್ರಾದುರ್ಭೂತ ವಾಗಿವೆ.

**ಶೀತಾಂಶುಶ್ಚನ್ದ್ರ ಇತ್ಯುಕ್ತೇ ಲೋಕೇ ಕೋ ವಿಸ್ಮಯಿಷ್ಯತಿ ।**
**ತಥೈವ ಯಶಸಾ ಪೂರ್ಣೇ ಮಯಿ ಕೋ ವಿಸ್ಮಯಿಷ್ಯತಿ ॥೨೬॥**

'ಚಂದ್ರನು ಶೀತಲಕಿರಣನಾಗಿದ್ದಾನೆ'–ಎಂದು ಹೇಳಿದರೆ ಈ ಲೋಕ ದಲ್ಲಿ ಯಾರು ತಾನೇ ಆಶ್ಚರ್ಯಪಡುತ್ತಾರೆ? ಅದೇ ರೀತಿಯಲ್ಲಿ ಯಶಸ್ಸಿನಿಂದ ಪರಿಪೂರ್ಣನಾಗಿರುವ ನಾನೇ ಉಪದೇಶಮಾಡಲು ಹೊರಟರೆ ಯಾರು ವಿಸ್ಮಯಗೊಳ್ಳುತ್ತಾರೆ? (ನಾನು ಹೇಳುವುದರಲ್ಲಿ ಆಶ್ಚರ್ಯವೇನಿಲ್ಲ. ಹಿಂದೆಯೂ ಹೇಳಿದ್ದೇನೆ. ಮುಂದೆಯೂ ಹೇಳುತ್ತೇನೆ. ನಾನು ಹೇಳಿದುದಕ್ಕೆ ಜನರು ಆಶ್ಚರ್ಯಪಡುವುದೂ ಇಲ್ಲ.)

**ಆಧೇಯಂ ತು ಮಯಾ ಭೂಯೋ ಯಶಸ್ತವ ಮಹಾದ್ಯುತೇ ।**
**ತತೋ ಮೇ ವಿಪುಲಾ ಬುದ್ಧಿಸ್ತ್ವಯಿ ಭೀಷ್ಮ ಸಮರ್ಪಿತಾ ॥೨೭॥**

ಮಹಾದ್ಯುತಿಮಂತನೇ! ಈ ಜಗತ್ತಿನಲ್ಲಿ ನಿನಗೆ ಇನ್ನೂ ಹೆಚ್ಚಿನ ಯಶಸ್ಸನ್ನು ಗಳಿಸಿಕೊಡಬೇಕೆಂಬುದೇ ನನ್ನ ಆಶಯವಾಗಿದೆ. ಆದುದರಿಂದ ನನ್ನ ವಿಶಾಲವಾದ ಬುದ್ಧಿಯನ್ನು ನಿನ್ನಲ್ಲಿಯೇ ಸಮರ್ಪಿಸಿರುತ್ತೇನೆ.

**ಯಾವದ್ಧಿ ಪೃಥಿವೀಪಾಲ ಪೃಥ್ವೀಯಂ ಸ್ಥಾಸ್ಯತಿ ಧ್ರುವಾ ।**
**ತಾವತ್ತವಾಕ್ಷಯಾ ಕೀರ್ತಿರ್ಲೋಕಾನನುಚರಿಷ್ಯತಿ ॥೨೮॥**

ಪೃಥಿವೀಪಾಲನೇ! ಯಾವತ್ತಿನವರೆಗೆ ಈ ಭೂಮಂಡಲವು ಸ್ಥಿರವಾಗಿ ನಿಂತಿರುವುದೋ–ಆವತ್ತಿನವರೆಗೂ ನಿನ್ನ ಅಕ್ಷಯವಾದ ಕೀರ್ತಿಯು ಎಲ್ಲ ಲೋಕಗಳಲ್ಲಿಯೂ ವ್ಯಾಪಿಸುತ್ತಲೇ ಇರುತ್ತದೆ.

**ಯಚ್ಚ ತ್ವಂ ವಕ್ಷ್ಯಸೇ ಭೀಷ್ಮ ಪಾಣ್ಡವಾಯಾನುಪೃಚ್ಛತೇ ।**
**ವೇದಪ್ರವಾದ ಇವ ತೇ ಸ್ಥಾಸ್ಯತೇ ವಸುಧಾತಲೇ ॥೨೯॥**

ಭೀಷ್ಮ! ಪಾಂಡುಪುತ್ರನಾದ ಯುಧಿಷ್ಠಿರನು ಕೇಳುವ ಪ್ರಶ್ನೆಗಳಿಗೆ ನೀನು ಯಾವ ಉತ್ತರಗಳನ್ನು ಕೊಡುವೆಯೋ–ಆ ನಿನ್ನ ಉತ್ತರವು ಈ ಪ್ರಪಂಚದಲ್ಲಿ ವೇದವಚನಕ್ಕೆ ಸಮಾನವಾಗಿ ಅನಂತಕಾಲದವರೆಗೂ ಮಾನ್ಯವಾಗಿರುತ್ತದೆ.

ಯಾವ ಮನುಷ್ಯನು ಈ ನಿನ್ನ ಉಪದೇಶವನ್ನು ಪ್ರಮಾಣಭೂತ ವನ್ನಾಗಿಟ್ಟುಕೊಂಡು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುತ್ತಾನೆಯೋ–ಅಂತಹವನು ನಿನ್ನ ಉಪದೇಶಾನುಸಾರವಾಗಿ ತಾನು ಮಾಡಿದ ಎಲ್ಲ ಪುಣ್ಯ ಕರ್ಮಗಳಿಗೂ ಶುಭಫಲಗಳನ್ನು ಪಡೆದುಕೊಂಡು ಮರಣಾನಂತರದಲ್ಲಿ ಪುಣ್ಯಲೋಕಗಳನ್ನೂ ಹೊಂದಿ ಸುಖವನ್ನು ಅನುಭವಿಸುತ್ತಾನೆ. ಈ ಕಾರಣದಿಂದಲೇ ನಿನ್ನ ಯಶಸ್ಸನ್ನು ಮತ್ತಷ್ಟು ಹೆಚ್ಚಿಸುವುದು ಹೇಗೆಂದು ಚಿಂತಿಸಿದ ನಾನು ನಿನಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದೆನು.

**ಯಾವದ್ಧಿ ಪ್ರಥತೇ ಲೋಕೇ ಪುರುಷಸ್ಯ ಯಶೋ ಭುವಿ ।**
**ತಾವತ್ತಸ್ಯಾಕ್ಷಯಂ ಸ್ಥಾನಂ ಭವತೀತಿ ವಿನಿಶ್ಚಿತಾ ॥೩೨॥**

ಒಬ್ಬ ಮನುಷ್ಯನ ಯಶಸ್ಸು ಯಾವತ್ತಿನವರೆಗೆ ಈ ಲೋಕದಲ್ಲಿ ಹರಡಿರುತ್ತದೆಯೋ–ಆವತ್ತಿನವರೆಗೂ ಪರಲೋಕದಲ್ಲಿ ಅವನಿಗೆ ಅಕ್ಷಯ ವಾದ ಪುಣ್ಯಲೋಕಗಳಲ್ಲಿ ಸ್ಥಾನವಿರುತ್ತದೆಂಬುದು ನಿಶ್ಚಿತವಾಗಿದೆ. ಹತಶೇಷ ರಾಗಿ ಉಳಿದಿರುವ ರಾಜರೆಲ್ಲರೂ ನಿನ್ನಿಂದ ಧರ್ಮವನ್ನು ತಿಳಿದುಕೊಳ್ಳ ಬೇಕೆಂಬ ಇಚ್ಛೆಯಿಂದ ನಿನ್ನ ಸುತ್ತಲೂ ಕುಳಿತಿದ್ದಾರೆ. ಅವರೆಲ್ಲರಿಗೂ ನೀನು ಧರ್ಮೋಪದೇಶವನ್ನು ಮಾಡು.

**ಭವಾನ್ಹಿ ವಯಸಾ ವೃದ್ಧಃ ಶ್ರುತಾಚಾರಸಮನ್ವಿತಃ ।**
**ಕುಶಲೋ ರಾಜಧರ್ಮಾಣಾಂ ಸರ್ವೇಷಾಮಪರಾಶ್ಚ ಯೇ ॥೩೪॥**

ಭೀಷ್ಮ! ನೀನು ವಯಸ್ಸಿನಿಂದ ವೃದ್ಧನಾಗಿರುವೆ. ಶಾಸ್ತ್ರಜ್ಞಾನದಿಂದಲೂ ಮತ್ತು ಸದಾಚಾರಗಳಿಂದಲೂ ಸಂಪನ್ನನಾಗಿರುವೆ. ಸಮಸ್ತವಾದ ರಾಜ ಧರ್ಮಗಳಲ್ಲಿಯೂ ಮತ್ತು ಇತರ ಧರ್ಮಗಳಲ್ಲಿಯೂ ಕುಶಲನಾಗಿರುವೆ.

**ಜನ್ಮಪ್ರಭೃತಿ ತೇ ಕಶ್ಚಿದ್ವೃಜಿನಂ ನ ದದರ್ಶ ಹ ।**
**ಜ್ಞಾತಾರಂ ಸರ್ವಧರ್ಮಾಣಾಂ ತ್ವಾಂ ವಿದುಃ ಸರ್ವಪಾರ್ಥಿವಾಃ ॥೩೬॥**

ಹುಟ್ಟಿದ ಮೊದಲುಗೊಂಡು ನಿನ್ನಲ್ಲಿ ಯಾವ ವಿಧವಾದ ದೋಷವನ್ನೂ ಯಾರೂ ಕಂಡಿರುವುದಿಲ್ಲ. ನೀನು ಎಲ್ಲ ಧರ್ಮಗಳನ್ನೂ ತಿಳಿದು ಕೊಂಡಿರುವೆಯೆಂಬುದನ್ನು ಇಲ್ಲಿರುವ ಎಲ್ಲ ರಾಜರೂ ತಿಳಿದಿರುತ್ತಾರೆ.

ತಂದೆಯಾದವನು ಮಕ್ಕಳಿಗೆ ಉಪದೇಶಮಾಡುವಂತೆ ನೀನು ಈ ರಾಜರಿಗೆ ಶ್ರೇಷ್ಠವಾದ ನೀತಿಶಾಸ್ತ್ರವನ್ನು ಉಪದೇಶಿಸು. ನೀನು ದೇವತೆ ಗಳನ್ನೂ ಮತ್ತು ಋಷಿಗಳನ್ನೂ ಉಪಾಸನೆಮಾಡಿರುವೆ. ಆದುದರಿಂದ ನೀನು ಇಲ್ಲಿರುವ ರಾಜರಿಗೂ ಮತ್ತು ಯುಧಿಷ್ಠಿರಾದಿಗಳಿಗೂ ಸಂಪೂರ್ಣಧರ್ಮ ಗಳನ್ನೂ ಉಪದೇಶಮಾಡು. ಇದು ನಿನ್ನ ಮುಖ್ಯಕರ್ತವ್ಯವಾಗಿರುತ್ತದೆ.

**ಧರ್ಮಂ ಶುಶ್ರೂಷಮಾಣೇಭ್ಯಃ ಪೃಷ್ಟೇನ ಚ ಸತಾ ಪುನಃ ।**
**ವಕ್ತವ್ಯಂ ವಿದುಷಾ ಚೇತಿ ಧರ್ಮಮಾಹುರ್ಮನೀಷಿಣಃ ।**
**ಅಪ್ರತಿಬ್ರುವತಃ ಕಷ್ಟೋ ದೋಷೋ ಹಿ ಭವಿತಾ ಪ್ರಭೋ ॥೩೮॥**

ಧರ್ಮವನ್ನು ಕೇಳುವ ಇಚ್ಛೆಯುಳ್ಳವರು, ಧರ್ಮವನ್ನು ತಿಳಿದಿರುವ ವಿದ್ವಾಂಸನನ್ನು ಧರ್ಮದ ವಿಷಯದಲ್ಲಿ ಉಪದೇಶಮಾಡಲು ಕೇಳಿದರೆ– ಸತ್ಪುರುಷನಾದ ವಿದ್ವಾಂಸನು ಧರ್ಮೋಪದೇಶಮಾಡುವುದು ಧರ್ಮವೆಂದು ವಿದ್ವಾಂಸರು ಹೇಳುತ್ತಾರೆ. ಧರ್ಮವನ್ನು ತಿಳಿದಿದ್ದರೂ ಶ್ರದ್ಧಾಪೂರ್ವಕವಾಗಿ ಕೇಳುವವರಿಗೆ ಧರ್ಮದ ರಹಸ್ಯಗಳನ್ನು ಹೇಳದಿದ್ದರೆ, ದುಃಖದಾಯಕವಾದ ದೋಷವುಂಟಾಗುತ್ತದೆ. ಆದುದರಿಂದ ಧರ್ಮವನ್ನು ತಿಳಿದುಕೊಳ್ಳುವ ಇಚ್ಛೆಯಿಂದ ನಿನ್ನ ಬಳಿಗೆ ಆಗಮಿಸಿರುವ ನಿನ್ನ ಮಕ್ಕಳಿಗೂ ಮತ್ತು ಮೊಮ್ಮಕ್ಕಳಿಗೂ (ಸನಾತನಧರ್ಮವನ್ನು ಸಂಪೂರ್ಣವಾಗಿ ತಿಳಿದಿರುವ ನೀನು) ಸನಾತನಧರ್ಮವನ್ನು ಉಪದೇಶಿಸು."

ಐವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು.

## ಭೀಷ್ಮನು ಯುಧಿಷ್ಠಿರನ ಗುಣಕಥನಮಾಡಿ ಧರ್ಮಸಂಬಂಧವಾದ ಪ್ರಶ್ನೆಗಳನ್ನು ಕೇಳಲು ಆದೇಶವಿತ್ತುದು : ಶ್ರೀಕೃಷ್ಣನು ಯುಧಿಷ್ಠಿರನು ಭಯಗೊಂಡಿರುವುದಕ್ಕೂ ಮತ್ತು ಲಜ್ಜಿತನಾಗಿರುವುದಕ್ಕೂ ಕಾರಣವನ್ನು ತಿಳಿಸಿದುದು : ಭೀಷ್ಮನು ಆಶ್ವಾಸನೆಯನ್ನಿತ್ತನಂತರ ಯುಧಿಷ್ಠಿರನು ಭೀಷ್ಮನ ಸಮೀಪಕ್ಕೆ ಹೋದುದು

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಶ್ರೀಕೃಷ್ಣನು ಹೀಗೆ ಹೇಳಿದನಂತರ ಮಹಾತೇಜಸ್ವಿಯಾದ ಕೌರವನಂದನನಾದ ಭೀಷ್ಮನು ಹೇಳಿದನು :

"ಕೃಷ್ಣ! ನೀನು ಸಕಲಪ್ರಾಣಿಗಳಿಗೂ ಸನಾತನನಾದ ಆತ್ಮಸ್ವರೂಪನಾಗಿರುವೆ ಮತ್ತು ನಿನ್ನ ವರಪ್ರಸಾದದಿಂದ ನನ್ನ ಮನಸ್ಸೂ ಮತ್ತು ಮಾತುಗಳೂ ಸುದೃಢವಾಗಿವೆ. ಈಗ ನಾನು ಧರ್ಮಗಳ ಪ್ರವಚನವನ್ನು ಮಾಡುತ್ತೇನೆ. ಧರ್ಮಾತ್ಮನಾದ ಯುಧಿಷ್ಠಿರನು ನನ್ನನ್ನು ಧರ್ಮದ ವಿಷಯವಾಗಿ ಪ್ರಶ್ನೆಮಾಡಲಿ. ಧರ್ಮಾತ್ಮನಾದ ಧರ್ಮಜನೇ ಧರ್ಮದ ವಿಷಯವಾಗಿ ನನ್ನನ್ನು ಕೇಳುವುದರಿಂದ ನನ್ನ ಮನಸ್ಸಿಗೆ ಹರ್ಷವುಂಟಾಗುತ್ತದೆ. ಸುಪ್ರೀತನಾದ ನಾನು ಸಕಲಧರ್ಮಗಳನ್ನೂ ಹೇಳುತ್ತೇನೆ. ಧರ್ಮಾತ್ಮನಾದ, ಮಹಾತ್ಮನಾದ, ರಾಜಶ್ರೇಷ್ಠನಾದ ಯಾವ ಯುಧಿಷ್ಠಿರನು ಹುಟ್ಟಿದೊಡನೆಯೇ ಎಲ್ಲ ಋಷಿಗಳೂ ಆನಂದತುಂದಿಲರಾದರೋ–ಅಂತಹ ಯುಧಿಷ್ಠಿರನು ನನ್ನನ್ನು ಧರ್ಮದ ವಿಷಯವಾಗಿ ಪ್ರಶ್ನಿಸಲಿ. ಧರ್ಮಚಾರಿಗಳಾದ, ಪ್ರದೀಪ್ತವಾದ ಯಶಸ್ಸನ್ನು ಹೊಂದಿರುವ ಎಲ್ಲ ಕುರುಗಳ ಮಧ್ಯದಲ್ಲಿ ಯಾವನಿಗೆ ಸಮಾನರಾದವರು ಯಾರೂ ಇಲ್ಲವೋ–ಅಂತಹ ಮಹಾಯಶೋವಂತನಾದ, ಮಹಾಧರ್ಮಚಾರಿಯಾದ ಯುಧಿಷ್ಠಿರನು ನನ್ನನ್ನು ಪ್ರಶ್ನಿಸಲಿ.

ಯಾವನಲ್ಲಿ ಧೈರ್ಯ, ಜಿತೇಂದ್ರಿಯತೆ, ಬ್ರಹ್ಮಚರ್ಯೆ, ಕ್ಷಮೆ, ಧರ್ಮ, ಓಜಸ್ಸು ಮತ್ತು ತೇಜಸ್ಸು–ಇವುಗಳು ನಿತ್ಯವಾಗಿರುವುವೋ ಅಂತಹ ಪಾಂಡವನು ನನ್ನನ್ನು ಪ್ರಶ್ನಿಸಲಿ.

ಬಂಧುಜನರನ್ನೂ, ಅತಿಥಿಗಳನ್ನೂ, ಸೇವಕರನ್ನೂ, ಆಶ್ರಿತರನ್ನೂ ಯಾವನು ಅತಿಶೀಘ್ರವಾಗಿ ಸತ್ಕರಿಸಿ ಸಮ್ಮಾನಿಸುತ್ತಾನೆಯೋ–ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನಿಸಲಿ.

ಸತ್ಯನಿಷ್ಠೆ, ದಾನಶೀಲತೆ, ತಪಶ್ಚರ್ಯೆ, ಶೌರ್ಯ, ಶಾಂತಿ, ದಕ್ಷತೆ, ಅನುದ್ವೇಗ–ಈ ಎಲ್ಲ ಗುಣಗಳೂ ಯಾವನಲ್ಲಿರುವುವೋ–ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನಿಸಲಿ.

ಯಾವ ಧರ್ಮಾತ್ಮನು ಕಾಮದಿಂದಲೇ ಆಗಲೀ, ಕ್ರೋಧದಿಂದಲೇ ಆಗಲೀ, ಭಯದಿಂದಲೇ ಆಗಲೀ, ಅರ್ಥದ ಲೋಭದಿಂದಲೇ ಆಗಲೀ–ಅಧರ್ಮವನ್ನು ಆಚರಿಸುವುದಿಲ್ಲವೋ–ಅಂತಹ ಯುಧಿಷ್ಠಿರನು ನನ್ನನ್ನು ಪ್ರಶ್ನಿಸಲಿ.

ಸತ್ಯನಿತ್ಯನಾದ, ಕ್ಷಮಾನಿತ್ಯನಾದ, ಜ್ಞಾನನಿತ್ಯನಾದ, ಅತಿಥಿಪ್ರಿಯನಾದ, ಸತ್ಪುರುಷರಿಗೆ ನಿರಂತರವಾಗಿ ದಾನಕೊಡುವ ಸ್ವಭಾವದಿಂದ ಕೂಡಿರುವ ಯುಧಿಷ್ಠಿರನು ನನ್ನನ್ನು ಪ್ರಶ್ನಿಸಲಿ.

ಯಾವನು ಅನುದಿನವೂ ಯಾಗಶೀಲನಾಗಿರುವನೋ, ಅಧ್ಯಯನಶೀಲನಾಗಿರುವನೋ, ಧರ್ಮದಲ್ಲಿಯೇ ಯಾವಾಗಲೂ ನಿರತನಾಗಿರುವನೋ, ಕ್ಷಮಾಶೀಲನಾಗಿರುವನೋ, ಧರ್ಮರಹಸ್ಯವನ್ನು ಕೇಳಿತಿಳಿದಿರುವನೋ–ಅಂತಹ ಯುಧಿಷ್ಠಿರನು ಧರ್ಮದ ವಿಷಯವಾಗಿ ನನ್ನನ್ನು ಪ್ರಶ್ನಿಸಲಿ."

ಭೀಷ್ಮನು ತನ್ನ ಅಭಿಪ್ರಾಯವನ್ನು ಹೇಳಿದನಂತರ ಶ್ರೀಕೃಷ್ಣನು ಭೀಷ್ಮನಿಗೆ ಹೇಳುತ್ತಾನೆ :

"ಸತ್ಯವ್ರತನೇ! ಧರ್ಮಾತ್ಮನಾದ ಯುಧಿಷ್ಠಿರನು ಅತಿಲಜ್ಜಿತನಾಗಿದ್ದಾನೆ. ಈಗ ನಿನ್ನ ದೃಷ್ಟಿಗೋಚರನಾದರೆ ನೀನು ಶಪಿಸಬಹುದೆಂದು ಹೆದರಿದ್ದಾನೆ. ಆದುದರಿಂದ ಅವನು ನಿನ್ನ ಸಮೀಪಕ್ಕೆ ಬಂದಿರುವುದಿಲ್ಲ. ಲೋಕನಾಥನಾದ ಯುಧಿಷ್ಠಿರನು ಯುದ್ಧದ ಮೂಲಕವಾಗಿ ಜನಸಂಹಾರವನ್ನು ಮಾಡಿ ತಾನೇ ಎಲ್ಲ ಅನರ್ಥಗಳಿಗೂ ಕಾರಣನಾದೆನೆಂಬ ಭಾವನೆಯಿಂದಲೂ, ಅದಕ್ಕಾಗಿ ನೀನು ಶಪಿಸಬಹುದೆಂಬ ಭಯದಿಂದಲೂ ನಿನ್ನ ಸಮೀಪಕ್ಕೆ ಬರುತ್ತಿಲ್ಲ. ಅರ್ಘ್ಯಾದಿಗಳನ್ನಿತ್ತು ಸತ್ಕಾರಮಾಡಲು ಅರ್ಹರಾದ ಪೂಜ್ಯರನ್ನೂ, ಮಾನ್ಯರನ್ನೂ, ಭಕ್ತರನ್ನೂ, ಗುರುಗಳನ್ನೂ, ಸಂಬಂಧಿ

ಗಳನ್ನೂ, ಬಾಂಧವರನ್ನೂ ಬಾಣಗಳಿಂದ ಸಂಹರಿಸಿದ ಕಾರಣದಿಂದ (ಪೂಜಾರ್ಹರನ್ನು ಬಾಣಗಳಿಂದ ಭೇದಿಸಿದುದರಿಂದ ) ಅತಿಲಜ್ಜಿತನಾಗಿ ಯುಧಿಷ್ಠಿರನು ನಿನ್ನ ಸಮೀಪಕ್ಕೆ ಬಂದಿರುವುದಿಲ್ಲ."

ಭೀಷ್ಮನು ಹೇಳುತ್ತಾನೆ :

**ಬ್ರಾಹ್ಮಣಾನಾಂ ಯಥಾ ಧರ್ಮೋ ದಾನಮಧ್ಯಯನಂ ತಪಃ ।**
**ಕ್ಷತ್ರಿಯಾಣಾಂ ತಥಾ ಕೃಷ್ಣ ಸಮರೇ ದೇಹಪಾತನಮ್ ॥೧೪॥**

"ಕೃಷ್ಣ! ಸಮರದಲ್ಲಿ ಕ್ಷತ್ರಿಯರನ್ನು ಸಂಹರಿಸಿದುದರಿಂದ ಯಾವ ದೋಷವೂ ಇಲ್ಲ. ಬ್ರಾಹ್ಮಣರಿಗೆ ದಾನ, ಅಧ್ಯಯನ ಮತ್ತು ತಪಸ್ಸುಗಳು ಹೇಗೆ ಧರ್ಮಕಾರ್ಯಗಳಾಗಿವೆಯೋ–ಹಾಗೆಯೇ ಯುದ್ಧದಲ್ಲಿ ಶತ್ರುಗಳನ್ನು ಶಸ್ತ್ರಗಳ ಮೂಲಕವಾಗಿ ಸಂಹರಿಸುವುದು ಕ್ಷತ್ರಿಯರ ಧರ್ಮವಾಗಿದೆ.

**ಪಿತೄನ್ಪಿತಾಮಹಾನ್ಭ್ರಾತೄನ್ಗುರೂನ್ಸಮ್ಬನ್ಧಿಬಾನ್ಧವಾನ್ ।**
**ಮಿಥ್ಯಾಪ್ರವೃತ್ತಾನ್ಯಃ ಸಂಖ್ಯೇ ನಿಹನ್ಯಾದ್ಧರ್ಮ ಏವ ಸಃ ॥೧೫॥**

ಅಸತ್ಯದ ( ಅಧರ್ಮದ ) ಮಾರ್ಗವನ್ನು ಹಿಡಿದು ಪಿತೃಗಳನ್ನೂ, ಪಿತಾಮಹರನ್ನೂ, ಸಹೋದರರರನ್ನೂ, ಗುರುಗಳನ್ನೂ, ಸಂಬಂಧಿಗಳನ್ನೂ, ಬಾಂಧವರನ್ನೂ ಯಾವನು ಸಂಹಾರಮಾಡುತ್ತಾನೆಯೋ–ಅವನಿಗೆ ಅದು ಧರ್ಮವೇ ಆಗಿದೆ.

**ಸಮಯತ್ಯಾಗಿನೋ ಲುಬ್ಧಾನ್ಗುರೂನಪಿ ಚ ಕೇಶವ ।**
**ನಿಹನ್ತಿ ಸಮರೇ ಪಾಪಾನ್ ಕ್ಷತ್ರಿಯೋ ಯಃ ಸ ಧರ್ಮವಿತ್ ॥೧೬॥**

ಕೇಶವ! ಯಾರು ಲೋಭವಶರಾಗಿ ಧರ್ಮದ ಮರ್ಯಾದೆಯನ್ನೇ ಉಲ್ಲಂಘಿಸುತ್ತಾರೆಯೋ–ಅಂತಹವರು ಗುರುಗಳೇ ಆಗಿದ್ದರೂ–ಪಾಪಿಷ್ಠರಾದ ಅವರನ್ನು ಯುದ್ಧದಲ್ಲಿ ಸಂಹಾರಮಾಡುವ ಕ್ಷತ್ರಿಯನು ಧರ್ಮವನ್ನು ತಿಳಿದವನೇ ಆಗಿರುತ್ತಾನೆ. (ಧರ್ಮವನ್ನು ತಿಳಿದ ಕ್ಷತ್ರಿಯನು ಹಾಗೆಯೇ ಮಾಡಬೇಕು.)

**ಯೋ ಲೋಭಾನ್ನ ಸಮೀಕ್ಷೇತ ಧರ್ಮಸೇತುಂ ಸನಾತನಮ್ ।**
**ನಿಹನ್ತಿ ಯಸ್ತಂ ಸಮರೇ ಕ್ಷತ್ರಿಯೋ ವೈ ಸ ಧರ್ಮವಿತ್ ॥೧೭॥**

ಯಾವನು ಲೋಭವಶನಾಗಿ ಸೇತುರೂಪವಾದ ಸನಾತನಧರ್ಮದ ಕಡೆಗೆ ದೃಷ್ಟಿಯನ್ನೇ ಹಾಯಿಸುವುದಿಲ್ಲವೋ–ಅಂತಹವನನ್ನು ಯಾವ

ಕ್ಷತ್ರಿಯನು ಯುದ್ಧದಲ್ಲಿ ಸಂಹಾರಮಾಡುತ್ತಾನೆಯೋ ಆ ಕ್ಷತ್ರಿಯನೇ ಧರ್ಮವನ್ನು ತಿಳಿದವನಾಗಿರುತ್ತಾನೆ.

**ಲೋಹಿತೋದಾಂ ಕೇಶತೃಣಾಂ ಗಜಶೈಲಾಂ ಧ್ವಜದ್ರುಮಾಮ್ ।**
**ಮಹೀಂ ಕರೋತಿ ಯುದ್ಧೇಷು ಕ್ಷತ್ರಿಯೋ ಯಃ ಸ ಧರ್ಮವಿತ್ ॥**

ಯುದ್ಧಗಳಲ್ಲಿ ಯಾವ ಕ್ಷತ್ರಿಯನು ಭೂಮಿಯನ್ನು ರಕ್ತವೆಂಬ ನೀರಿನಿಂದಲೂ, ಕೂದಲುಗಳೆಂಬ ಹುಲ್ಲಿನಿಂದಲೂ, ಆನೆಗಳೆಂಬ ಪರ್ವತಗಳಿಂದಲೂ, ಧ್ವಜಗಳೆಂಬ ವೃಕ್ಷಗಳಿಂದಲೂ ವ್ಯಾಪ್ತವನ್ನಾಗಿ ಮಾಡುವನೋ–ಅಂತಹ ಕ್ಷತ್ರಿಯನೇ ಧರ್ಮವನ್ನು ತಿಳಿದವನಾಗಿರುತ್ತಾನೆ.

**ಆಹೂತೇನ ರಣೇ ನಿತ್ಯಂ ಯೋದ್ಧವ್ಯಂ ಕ್ಷತ್ರಬಸ್ಧುನಾ ।**
**ಧರ್ಮ್ಯಂ ಸ್ವರ್ಗ್ಯಂ ಚ ಲೋಕ್ಯಂ ಚ ಯುದ್ಧಂ ಹಿ**
**ಮನುರಬ್ರವೀತ್ ॥೧೯॥**

ಕ್ಷತ್ರಬಂಧುವು ( ಕ್ಷತ್ರಿಯವೀರನು ) ಯುದ್ಧಕ್ಕೆ ಆಹ್ವಾನಿಸಿದವರೊಡನೆ ಯಾವಾಗಲೂ ಯುದ್ಧಮಾಡಲೇಬೇಕು. ಕ್ಷತ್ರಿಯನಿಗೆ ಯುದ್ಧವೆಂಬುದು ಧರ್ಮಕ್ಕೆ ಪೋಷಕವಾಗಿದೆ ; ಸ್ವರ್ಗಪ್ರಾಪ್ತಿಗೆ ಸೇತುವೆಯ ರೂಪದಲ್ಲಿದೆ ಮತ್ತು ಲೋಕದಲ್ಲಿ ಯಶಸ್ಸನ್ನು ಉಂಟುಮಾಡುವುದಾಗಿದೆ–ಎಂದು ಮನುವೇ ಹೇಳಿದ್ದಾನೆ."

ಜನಮೇಜಯ! ಭೀಷ್ಮನು ಹೀಗೆ ಹೇಳಿದೊಡನೆಯೇ ಧರ್ಮಪುತ್ರನಾದ ಯುಧಿಷ್ಠಿರನು ವಿನೀತನಂತೆ ಭೀಷ್ಮನ ಸಮೀಪಕ್ಕೆ ಹೋಗಿ ಅವನ ದೃಷ್ಟಿಗೆ ಅಭಿಮುಖವಾಗಿ ನಿಂತುಕೊಂಡನು. ಬಳಿಕ ಯುಧಿಷ್ಠಿರನು ಭೀಷ್ಮನ ಎರಡು ಪಾದಗಳನ್ನೂ ಹಿಡಿದುಕೊಂಡನು. ಭೀಷ್ಮನು ಯುಧಿಷ್ಠಿರನ ನೆತ್ತಿಯನ್ನು ಆಘ್ರಾಣಿಸಿ, ಆಶ್ವಾಸನೆಯನ್ನಿತ್ತು ಅವನನ್ನು ಆನಂದಗೊಳಿಸಿ, ಹತ್ತಿರದಲ್ಲಿಯೇ ಕುಳಿತುಕೊಳ್ಳುವಂತೆ ಹೇಳಿದನು. ಬಳಿಕ ಸರ್ವಧನುಷ್ಮಂತರಿಗೂ ಶ್ರೇಷ್ಠನಾದ ಭೀಷ್ಮನು ಯುಧಿಷ್ಠಿರನನ್ನು ಕುರಿತು ಹೇಳಿದನು :

**ಮಾಂ ಪೃಚ್ಛ ತಾತ ವಿಶ್ರಬ್ಧಂ ಮಾ ಭೈಸ್ಷ್ವಂ ಕುರುಸತ್ತಮ ॥೨೨॥**

"ಮಗು! ನಿರ್ಭಯನಾಗಿ ಶ್ರದ್ಧೆಯಿಂದ ನನ್ನನ್ನು ಪ್ರಶ್ನಿಸು. ನೀನು ಭಯಪಡುವ ಕಾರಣವಿಲ್ಲ."

ಐದನೆಯ ಅಧ್ಯಾಯವು ಮುಗಿಯಿತು.

೫೬ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಯುಧಿಷ್ಠಿರನು ಪ್ರಶ್ನಿಸಿದನಂತರ ಭೀಷ್ಮನು ರಾಜಧರ್ಮವನ್ನು ವರ್ಣಿಸಿದುದು : ರಾಜನಿಗೆ ಪುರುಷಾರ್ಥದ ಮತ್ತು ಸತ್ಯನಿಷ್ಠೆಯ ಆವಶ್ಯಕತೆ : ರಾಜನು ಪರಿಹಾಸಶೀಲನಾಗಬಾರದು ಮತ್ತು ಮೃದುವಾಗಿಯೂ ಇರಬಾರದು

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು ಶ್ರೀಕೃಷ್ಣನಿಗೆ ನಮಸ್ಕರಿಸಿ ಮತ್ತು ಭೀಷ್ಮನಿಗೂ ಅಭಿವಾದನಮಾಡಿ ಅಲ್ಲಿದ್ದ ಎಲ್ಲ ಗುರುಜನರ ಅನುಮತಿಯನ್ನೂ ಕೇಳಿ ಭೀಷ್ಮನನ್ನು ಪ್ರಶ್ನಿಸಿದನು :

"ಪಿತಾಮಹ! ಧರ್ಮವನ್ನು ತಿಳಿದಿರತಕ್ಕವರು, ರಾಜರಿಗೆ ಧರ್ಮವೇ ಅತ್ಯಂತಶ್ರೇಷ್ಠವೆಂದು ತಿಳಿದಿರುತ್ತಾರೆ. ನಾನಾದರೋ ಈ ರಾಜಧರ್ಮವು ಅತಿಭಾರವಾದುದೆಂದು ( ದೊಡ್ಡ ಹೊಣೆಯೆಂದು ) ಭಾವಿಸಿದ್ದೇನೆ. ಅಂತಹ ರಾಜಧರ್ಮದ ಉಪದೇಶವನ್ನು ಮಾಡು.

**ರಾಜ್ಞಾಂ ವೈ ಪರಮೋ ಧರ್ಮ ಇತಿ ಧರ್ಮವಿದೋ ವಿದುಃ ।**
**ಮಹಾನ್ತಮೇತಂ ಭಾರಂ ಚ ಮನ್ಯೇ ತದ್ಬ್ರೂಹಿ ಪಾರ್ಥಿವ ॥೨॥**

ಪಿತಾಮಹ! ವಿಶೇಷರೂಪದಿಂದ ರಾಜಧರ್ಮವನ್ನೇ ಹೇಳು. ಏಕೆಂದರೆ : ಪ್ರಪಂಚದಲ್ಲಿರುವ ಜೀವಕೋಟಿಗೆ ರಾಜಧರ್ಮವೇ ಆಶ್ರಯ ಸ್ಥಾನವಾಗಿದೆ. ರಾಜಧರ್ಮಗಳಲ್ಲಿ ತ್ರಿವರ್ಗಗಳೂ ( ಧರ್ಮಾರ್ಥ-ಕಾಮಗಳೂ ) ಸಮಾವೇಶಗೊಂಡಿವೆ. ಸಕಲವಾದ ಮೋಕ್ಷಧರ್ಮವೂ ರಾಜ ಧರ್ಮದಲ್ಲಿಯೇ ಸೇರಿರುವುದು.

**ಯಥಾ ಹಿ ರಶ್ಮಯೋಽಶ್ವಸ್ಯ ದ್ವಿರದಸ್ಯಾಙ್ಕುಶೋ ಯಥಾ ।**
**ನರೇನ್ದ್ರಧರ್ಮೋ ಲೋಕಸ್ಯ ತಥಾ ಪ್ರಗ್ರಹಣಂ ಸ್ಮೃತಮ್ ॥೫॥**

ಯಾವ ರೀತಿಯಲ್ಲಿ ಕುದುರೆಯನ್ನು ಹತೋಟಿಯಲ್ಲಿಡಲು ಕಡಿವಾಣ ಗಳು ಬೇಕಾಗುವುವೋ–ಆನೆಯನ್ನು ಹತೋಟಿಯಲ್ಲಿಡಲು ಅಂಕುಶವು

ಬೇಕಾಗುವುದೋ–ಹಾಗೆಯೇ ಧರ್ಮದ ಮರ್ಯಾದೆಯನ್ನು ಮೀರಿಹೋಗ ದಂತೆ ಲೋಕವನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಗ್ರಹರೂಪವಾದ ರಾಜಧರ್ಮವು ಆವಶ್ಯಕವಾದುದೆಂದು ಹೇಳಲ್ಪಟ್ಟಿದೆ.

ಹಿಂದಿನ ರಾಜರ್ಷಿಗಳಿಂದ ಸೇವಿಸಲ್ಪಟ್ಟಿರುವ ಈ ರಾಜಧರ್ಮವನ್ನು ಆಚರಣೆಗೆ ತರುವ ವಿಷಯದಲ್ಲಿ ರಾಜನೇನಾದರೂ ವಿಮೋಹಗೊಂಡರೆ ಪ್ರಪಂಚದ ವ್ಯವಸ್ಥೆಯೇ ಅಸ್ತವ್ಯಸ್ತವಾಗುತ್ತದೆ. ಅರಾಜಕತೆಯ ಕಾರಣ ದಿಂದಾಗಿ ಪ್ರಪಂಚವೇ ದುಃಖದಲ್ಲಿ ಮುಳುಗಿಹೋಗುತ್ತದೆ. ( ಪ್ರಪಂಚದಲ್ಲಿ ಶಾಂತಿಯೇ ಇಲ್ಲದಂತಾಗುತ್ತದೆ. )

**ಉದಯನ್ಹಿ ಯಥಾ ಸೂರ್ಯೋ ನಾಶಯತ್ಯಶುಭಂ ತಮಃ ।**
**ರಾಜಧರ್ಮಾಸ್ತಥಾಲೋಕ್ಯಾಂ ನಿಕ್ಷಿಪನ್ತ್ಯಶುಭಾಂ ಗತಿಮ್ ॥**

ಯಾವ ರೀತಿಯಲ್ಲಿ ಸೂರ್ಯನು ಉದಯಿಸುತ್ತಿದ್ದಂತೆಯೇ ಅಮಂಗಳಕರವಾದ ಕತ್ತಲೆಯನ್ನು ಹೋಗಲಾಡಿಸುವನೋ–ಅದೇ ರೀತಿ ಯಲ್ಲಿ ರಾಜಧರ್ಮವು ಅಪ್ರಕಾಶವಾದ (ತಮೋಭೂತವಾದ) ಅಶುಭ ಮಾರ್ಗವನ್ನು ದೂರೀಕರಿಸುತ್ತದೆ. (ರಾಜಧರ್ಮವು ಪ್ರಜೆಗಳನ್ನು ಸದ್ಧರ್ಮ ದಲ್ಲಿ ಪ್ರವೃತ್ತರಾಗುವಂತೆ ಮಾಡಿ ಅವರು ಪುಣ್ಯಲೋಕಗಳನ್ನು ಹೊಂದಲು ಅನುವುಮಾಡಿಕೊಡುತ್ತದೆ.)

ಭರತಶ್ರೇಷ್ಠನೇ! ನೀನು ಧರ್ಮವನ್ನು ತಿಳಿದಿರುವವರೆಲ್ಲರಿಗೂ ಶ್ರೇಷ್ಠನಾಗಿರುವೆ. ನೀನು ಮೊದಲು ನನಗೆ ರಾಜಧರ್ಮವನ್ನು ಉಪದೇಶಿಸು. ಪರಂತಪನೇ! ಶ್ರೇಷ್ಠವಾದ ವೇದವು ನಮಗೆ ಅತ್ಯಂತರಹಸ್ಯವಾಗಿಯೇ ಉಳಿದಿದೆ. ಆ ರಹಸ್ಯವು ನಿನ್ನಿಂದಲೇ ನಮ್ಮೆಲ್ಲರಿಗೂ ತಿಳಿಯಬೇಕಾಗಿದೆ. ವೇದ-ವೇದಾಂಗಗಳೆಲ್ಲವನ್ನೂ ತಿಳಿದಿರುವ ನೀನೇ ಬುದ್ಧಿವಂತರೆಲ್ಲರಿಗೂ ಶ್ರೇಷ್ಠನೆಂಬುದು ವಾಸುದೇವನ ಅಭಿಪ್ರಾಯವೂ ಆಗಿದೆ.”

ಯುಧಿಷ್ಠಿರನು ಹೀಗೆ ಪ್ರಾರ್ಥಿಸಿದನಂತರ ಭೀಷ್ಮನು ರಾಜಧರ್ಮ ಗಳನ್ನು ಹೇಳತೊಡಗಿದನು :

**ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ ।**
**ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ವಕ್ಷ್ಯಾಮಿ ಶಾಶ್ವತಾನ್ ॥**

“ಎಲ್ಲಕ್ಕಿಂತಲೂ ಮಹತ್ತಾದ ಧರ್ಮಕ್ಕೆ ನಮಸ್ಕಾರಮಾಡುತ್ತೇನೆ. ವಿಶ್ವದ ಸೃಷ್ಟಿಗೆ ಕಾರಣನಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ. ಇಲ್ಲಿ ನೆರೆದಿರುವ ಬ್ರಾಹ್ಮಣರೆಲ್ಲರಿಗೂ ನಮಸ್ಕರಿಸಿ ಸನಾತನವಾದ ಧರ್ಮಗಳ ಪ್ರವಚನವನ್ನು ಪ್ರಾರಂಭಿಸುತ್ತೇನೆ.

ಯುಧಿಷ್ಠಿರ! ನನ್ನಿಂದ ನೀನು ನಿಖಿಲವಾದ ರಾಜಧರ್ಮಗಳನ್ನೂ ನಿಯಮಪೂರ್ವಕವಾಗಿ ಕೇಳು. ನಾನು ಹೇಳುವುದನ್ನು ಕೇಳುವುದೇ ಅಲ್ಲದೇ ಮಧ್ಯ-ಮಧ್ಯದಲ್ಲಿ ಸಂದೇಹವುಂಟಾದಾಗ ನೀನು ಯಾವುದನ್ನು ಕೇಳಿ ತಿಳಿಯಲು ಇಚ್ಛೆಪಡುವೆಯೋ–ಆ ಎಲ್ಲ ವಿಷಯಗಳನ್ನೂ ನೀನು ಏಕಾಗ್ರತೆ ಯಿಂದ ಕೇಳು.

ರಾಜನಾದವನು ಮೊದಲು ಪ್ರಜೆಗಳನ್ನು ಪ್ರಸನ್ನಗೊಳಿಸುವ ಇಚ್ಛೆ ಯಿಂದ ಕೂಡಿದ್ದು ದೇವತೆಗಳ ವಿಷಯದಲ್ಲಿಯೂ ಮತ್ತು ಬ್ರಾಹ್ಮಣರ ವಿಷಯದಲ್ಲಿಯೂ ಯಥಾಯೋಗ್ಯವಾಗಿ ನಡೆದುಕೊಳ್ಳಬೇಕು. (ದೇವತೆ ಗಳನ್ನು ಯಥಾವಿಧಿಯಾಗಿ ಅರ್ಚನ-ಸ್ತೋತ್ರಾದಿಗಳಿಂದ ಸಂಪೂಜಿಸಬೇಕು. ಬ್ರಾಹ್ಮಣರನ್ನು ಸತ್ಕಾರಾದಿಗಳಿಂದ ತೃಪ್ತಿಗೊಳಿಸಬೇಕು.) ದೇವತೆಗಳನ್ನೂ ಅರ್ಚಿಸಿ ಬ್ರಾಹ್ಮಣರನ್ನೂ ಯಥಾವಿಧಿಯಾಗಿ ಸತ್ಕರಿಸುವ ರಾಜನು ಧರ್ಮದ ಋಣದಿಂದ ವಿಮುಕ್ತನಾಗುತ್ತಾನೆ. ಅಲ್ಲದೇ ಅಂತಹ ರಾಜನನ್ನು ಲೋಕವೇ ಸಮ್ಮಾನಿಸುತ್ತದೆ.

**ಉತ್ಥಾನೇವ ಸದಾ ಪುತ್ರ ಪ್ರಯತೇಥಾ ಯುಧಿಷ್ಠಿರ ।**
**ನ ಹ್ಯುತ್ಥಾನಮೃತೇ ದೈವಂ ರಾಜ್ಞಾಮರ್ಥಂ ಪ್ರಸಾದಯೇತ್ ॥**

ಮಗು! ಯುಧಿಷ್ಠಿರ! ಸರ್ವದಾ ಪುರುಷಾರ್ಥಗಳ ಸಿದ್ಧಿಗಾಗಿ ಪ್ರಯತ್ನಶೀಲನಾಗಬೇಕು. ಪುರುಷಪ್ರಯತ್ನವಿಲ್ಲದಿದ್ದರೆ ರಾಜರಿಗೆ ದೈವವೇ ಪುರುಷಾರ್ಥಗಳನ್ನು ಅನುಗ್ರಹಿಸುವುದಿಲ್ಲ. ಪುರುಷಪ್ರಯತ್ನವನ್ನು ಸಂಪೂರ್ಣವಾಗಿ ಮಾಡಿ ದೈವದ ಒಲುಮೆಯನ್ನು ಪ್ರಾರ್ಥಿಸಬೇಕೇ ಹೊರತು ದೈವಬಲವೊಂದರಿಂದಲೇ ಸಕಲಚರಿತಾರ್ಥಗಳೂ ಆಗುವುವೆಂದು ಸುಮ್ಮನಿರುವವನಿಗೆ ಯಾವ ಸಿದ್ಧಿಯೂ ಆಗುವುದಿಲ್ಲ. ಆದುದರಿಂದ ರಾಜನಿಗೆ ಉದ್ಯಮವೆಂಬುದೇ ಮುಖ್ಯವಾದ ಧರ್ಮ.

**ಸಾಧಾರಣಂ ದ್ವಯಂ ಹ್ಯೇತದ್ದೈವಮುತ್ಥಾನಮೇವ ಚ ।**
**ಪೌರುಷಂ ಹಿ ಪರಂ ಮನ್ಯೇ ದೈವಂ ನಿಶ್ಚಿತಮುಚ್ಯತೇ ॥೧೫॥**

ಕಾರ್ಯದ ಸಿದ್ಧಿಗೆ ಅದೃಷ್ಟ ಮತ್ತು ಪುರುಷಪ್ರಯತ್ನ–ಈ ಎರಡೂ ಸಾಧಾರಣಕಾರಣಗಳೇ ಆಗಿವೆ. (ಕಾರ್ಯದ ಸಿದ್ಧಿಗೆ ಎರಡರ ಅವಶ್ಯ ಕತೆಯೂ ಇದೆ.) ಆದರೆ ಈ ಎರಡರಲ್ಲಿ ಪೌರುಷವೇ ಶ್ರೇಷ್ಠವೆಂಬುದು ನನ್ನ ಅಭಿಪ್ರಾಯವಾಗಿದೆ. ಏಕೆಂದರೆ : ಅದೃಷ್ಟವೆಂಬುದು ಮೊದಲೇ ನಿಶ್ಚಿತ ವಾಗಿಬಿಟ್ಟಿರುತ್ತದೆ. (ಅದೃಷ್ಟವಿಲ್ಲದೇ ಮಾಡಿದ ಕಾರ್ಯವು ಸಿದ್ಧಿಯಾಗದಿರ ಬಹುದು ; ಆದರೆ ಅದೃಷ್ಟವು ಇದೆ ಅಥವಾ ಇಲ್ಲ–ಎಂಬುದು ಮನುಷ್ಯ ಪ್ರಯತ್ನವನ್ನು ಮುಗಿಸಿದನಂತರ ತಿಳಿದುಬರುವುದೇ ಹೊರತು ಮನುಷ್ಯ ಪ್ರಯತ್ನವನ್ನು ಮಾಡದೇ ಅದೃಷ್ಟದ ವಿಷಯವು ತಿಳಿದುಬರುವುದಿಲ್ಲ. ಆದುದರಿಂದ ಪೌರುಷವೇ ಮೊದಲನೆಯದು ಮತ್ತು ಶ್ರೇಷ್ಠವಾದುದು.)

**ವಿಪನ್ನೇ ಚ ಸಮಾರಮ್ಭೇ ಸಂತಾಪಂ ಮಾ ಸ್ಮ ವೈ ಕೃಥಾಃ ।**
**ಘಟಸ್ವೈವ ಸದಾತ್ಮಾನಂ ರಾಜ್ಞಾಮೇಷ ಪರೋ ನಯಃ ॥೧೬॥**

ಪ್ರಾರಂಭಿಸಿದ ಕಾರ್ಯವು ಪೂರ್ಣಗೊಳ್ಳದಿದ್ದರೂ, ಫಲದಾಯಕ ವಾಗದೆಯೇ ಇದ್ದರೂ ಅದಕ್ಕಾಗಿ ನೀನು ಸಂತಾಪಪಡಬಾರದು. ಒಂದು ಬಾರಿ ಒಂದು ಕಾರ್ಯವು ಫಲಿಸದಿದ್ದರೆ, ಆ ಕಾರ್ಯವನ್ನು ಸಾಧಿಸಲು ಪುನಃ ಪುನಃ ಪ್ರಯತ್ನಿಸುತ್ತಲೇ ಇರಬೇಕು. ಇದು ರಾಜರ ಅತಿಮುಖ್ಯವಾದ ಮತ್ತು ಶ್ರೇಷ್ಠವಾದ ನೀತಿಯಾಗಿದೆ.

**ನ ಹಿ ಸತ್ಯಾದೃತೇ ಕಿಂಚಿದ್ರಾಜ್ಞಾಂ ವೈ ಸಿದ್ಧಿಕಾರಕಮ್ ।**
**ಸತ್ಯೇ ಹಿ ರಾಜಾ ನಿರತಃ ಪ್ರೇತ್ಯ ಚೇಹ ಚ ನನ್ದತಿ ॥೧೭॥**

ಸತ್ಯವನ್ನು ಬಿಟ್ಟರೆ ಉಳಿದಾವ ಧರ್ಮಗಳೂ ರಾಜನ ಕಾರ್ಯಸಿದ್ಧಿಗೆ ಕಾರಣವಾಗುವುದಿಲ್ಲ. ಯಾವಾಗಲೂ ಸತ್ಯನಿಷ್ಠನಾಗಿರತಕ್ಕ ರಾಜನು ಇಹಲೋಕದಲ್ಲಿಯೂ ಸಂತೋಷದಿಂದಿರುತ್ತಾನೆ. ಅವಸಾನಾನಂತರ ದಲ್ಲಿಯೂ ಅವನಿಗೆ ಉತ್ತಮಲೋಕಗಳು ಲಭಿಸುತ್ತವೆ.

**ಋಷೀಣಾಮಪಿ ರಾಜೇನ್ದ್ರ ಸತ್ಯಮೇವ ಪರಂ ಧನಮ್ ।**
**ತಥಾ ರಾಜ್ಞಾಂ ಪರಂ ಸತ್ಯಾನ್ನಾನ್ಯದ್ವಿಶ್ವಾಸಕಾರಣಮ್ ॥೧೮॥**

ಋಷಿಗಳಿಗಾದರೂ ಸತ್ಯವೇ ಪರಮಶ್ರೇಷ್ಠವಾದ ಧನವಾಗಿರುತ್ತದೆ. ಹಾಗೆಯೇ ರಾಜರಿಗೂ ಪ್ರಜೆಗಳ ವಿಶ್ವಾಸಗಳಿಸಲು ಸತ್ಯನಿಷ್ಠೆಯೊಂದನ್ನು ಬಿಟ್ಟು ಮತ್ತಾವುದೂ ಕಾರಣವಾಗಲಾರದು.

**ಗುಣವಾಞ್ಶೀಲವಾನ್ದಾನ್ತೋ ಮೃದುರ್ಧರ್ಮ್ಯೋ ಜಿತೇನ್ದ್ರಿಯಃ ।**
**ಸುದರ್ಶಃ ಸ್ಥೂಲಲಕ್ಷ್ಯಶ್ಚ ನ ಭ್ರಶ್ಯೇತ ಸದಾ ಶ್ರಿಯಃ ॥೧೯॥**

ಗುಣವಂತನೂ, ಶೀಲವಂತನೂ, ಮನಸ್ಸನ್ನೂ ಮತ್ತು ಇಂದ್ರಿಯಗಳನ್ನೂ ಹತೋಟಿಯಲ್ಲಿಟ್ಟುಕೊಂಡಿರುವವನೂ, ಮೃದುಸ್ವಭಾವದವನೂ, ಧರ್ಮಪರಾಯಣನೂ, ಜಿತೇಂದ್ರಿಯನೂ, ಪ್ರಸನ್ನವದನನೂ, ಅಪಾರವಾಗಿ ದಾನಮಾಡುವ ಉದಾರಸ್ವಭಾವದವನೂ ಆದ ರಾಜನು ರಾಜ್ಯಲಕ್ಷ್ಮಿಯಿಂದಾಗಲೀ, ಐಶ್ವರ್ಯದಿಂದಾಗಲೀ ಯಾವಾಗಲೂ ಭ್ರಷ್ಟನಾಗುವುದಿಲ್ಲ.

**ಆರ್ಜವಂ ಸರ್ವಕಾರ್ಯೇಷು ಶ್ರಯೇಥಾಃ ಕುರುನನ್ದನ ।**
**ಪುನರ್ನಯವಿಚಾರೇಣ ತ್ರಯೀಸಂವರಣೇನ ಚ ॥೨೦॥**

ಕುರುನಂದನನೇ! ರಾಜ್ಯಾಂಗದ ಎಲ್ಲ ಕಾರ್ಯಗಳಲ್ಲಿಯೂ ಸರಳತೆಯನ್ನೇ ಆಶ್ರಯಿಸಬೇಕು. ಆದರೆ ನೀತಿಶಾಸ್ತ್ರದ ಪರಾಮರ್ಶೆಯಿಂದ ಮೂರನ್ನು ಮಾತ್ರ ಗುಟ್ಟಾಗಿಡಬೇಕು. (ತನ್ನಲ್ಲಿರುವ ನ್ಯೂನತೆಗಳು, ಅಮಾತ್ಯ-ಸೇನಾಪತಿಗಳೊಡನೆ ಮಾಡುವ ಗುಪ್ತಸಮಾಲೋಚನೆಗಳು ಮತ್ತು ಶತ್ರುಪಕ್ಷದವರ ನ್ಯೂನತೆಗಳನ್ನು ಕಂಡುಹಿಡಿಯುವ ವಿಧಾನಗಳು–ಈ ಮೂರನ್ನೂ ಗುಟ್ಟಾಗಿಡಬೇಕು.)

**ಮೃದುರ್ಹಿ ರಾಜಾ ಸತತಂ ಲಙ್ಘ್ಯೋ ಭವತಿ ಸರ್ವಶಃ ।**
**ತೀಕ್ಷ್ಣಾಚ್ಚೋದ್ವಿಜತೇ ಲೋಕಸ್ತಸ್ಮಾದುಭಯಮಾಶ್ರಯ ॥೨೧॥**

ರಾಜನು ಮೃದುಸ್ವಭಾವದವನಾಗಿರಬೇಕು. ಆದರೆ ಎಲ್ಲ ಸಮಯಗಳಲ್ಲಿಯೂ ಮೃದುಸ್ವಭಾವವನ್ನೇ ಹೊಂದಿರಬಾರದು. ಹಾಗವನು ಸರ್ವದಾ ಮೃದುವೇ ಆಗಿದ್ದರೆ ಲೋಕದ ಜನರು ಅವನ ಆಜ್ಞೆಯನ್ನು ಪರಿಪಾಲಿಸುವುದಕ್ಕಿಂತಲೂ ಹೆಚ್ಚಾಗಿ ಆಜ್ಞೋಲ್ಲಂಘನೆಯನ್ನೇ ಮಾಡುತ್ತಾರೆ. ಹೀಗೆಂದ ಮಾತ್ರಕ್ಕೆ ಯಾವಾಗಲೂ ರಾಜನು ಕ್ರೂರಿಯೂ ಆಗಿರಬಾರದು. ಸರ್ವದಾ ಕ್ರೂರನಾಗಿಯೇ ಇದ್ದರೆ ಜನರು ಉದ್ವಿಗ್ನರಾಗುತ್ತಾರೆ. (ಹೆದರುತ್ತಾರೆ :

ಹತ್ತಿರಕ್ಕೂ ಬರುವುದಿಲ್ಲ.) ಆದುದರಿಂದ ರಾಜನು ಸಮಯವರಿತು ಮೃದುವೂ ಆಗಿರಬೇಕು ; ಉಗ್ರನೂ ಆಗಿರಬೇಕು.

**ಅದಣ್ಡ್ಯಾಶ್ಚೈವ ತೇ ಪುತ್ರ ವಿಪ್ರಾಶ್ಚ ದದತಾಂ ವರ ।**
**ಭೂತಮೇತತ್ಪರಂ ಲೋಕೇ ಬ್ರಾಹ್ಮಣೋ ನಾಮ ಪಾಣ್ಡವ ॥೨೨॥**

ದಾನಿಗಳಲ್ಲಿ ಶ್ರೇಷ್ಠನಾದವನೇ! ಮಗು ಯುಧಿಷ್ಠಿರ! ನೀನು ಬ್ರಾಹ್ಮಣರನ್ನೆಂದಿಗೂ ಶಿಕ್ಷಿಸಬಾರದು. ಏಕೆಂದರೆ : ಜಗತ್ತಿನಲ್ಲಿ 'ಬ್ರಾಹ್ಮಣ' ಎಂಬುವನು ಸರ್ವಶ್ರೇಷ್ಠವಾದ ಪ್ರಾಣಿಯಾಗಿದ್ದಾನೆ.

ಈ ವಿಷಯದಲ್ಲಿ ಮನುವು ತನ್ನ ಧರ್ಮಶಾಸ್ತ್ರದಲ್ಲಿ ಈ ಎರಡು ಶ್ಲೋಕಗಳನ್ನು ಹೇಳಿದ್ದಾನೆ. ಆ ಎರಡು ಶ್ಲೋಕಗಳನ್ನೂ ನೀನು ಹೃದ್ಗತ ಮಾಡಿಕೊಳ್ಳುವುದು ಯುಕ್ತವಾಗಿದೆ.

**ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ ।**
**ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ॥೨೪॥**

'ಅಗ್ನಿಯು ನೀರಿನಿಂದ ಹುಟ್ಟಿದೆ. ಕ್ಷತ್ರಿಯನು ಬ್ರಾಹ್ಮಣನಿಂದ ಹುಟ್ಟಿದ್ದಾನೆ. ಲೋಹವು ಕಲ್ಲಿನಿಂದ ಹುಟ್ಟಿದೆ. ಅಗ್ನಿ, ಕ್ಷತ್ರಿಯ ಮತ್ತು ಲೋಹಗಳ ತೇಜಸ್ಸುಗಳು ಬೇರೆಲ್ಲೆಡೆಗಳಲ್ಲಿಯೂ ಪ್ರಭಾವವನ್ನು ಬೀರುತ್ತವೆ. ಆದರೆ ಅವುಗಳ ಜನ್ಮಸ್ಥಾನಗಳಲ್ಲಿ ಪ್ರಭಾವವನ್ನು ಬೀರದಿರುವುದು ಮಾತ್ರವಲ್ಲ; ವಿನಾಶವನ್ನೇ ಹೊಂದುತ್ತವೆ. ಆದುದರಿಂದ ಕ್ಷತ್ರಿಯನು ತನ್ನ ಜನ್ಮಕ್ಕೆ ಕಾರಣನಾದ ಬ್ರಾಹ್ಮಣನ ವಿಷಯದಲ್ಲಿ ಪ್ರಭಾವವನ್ನು ಬೀರಲು ಹೋಗಬಾರದು. ಅರ್ಥಾತ್ ಕ್ಷತ್ರಿಯನು ಬ್ರಾಹ್ಮಣನನ್ನು ದಂಡಿಸಬಾರದು.

**ಅಯೋ ಹನ್ತಿ ಯದಾಶ್ಮಾನಮಗ್ನಿನಾ ವಾರಿ ಹನ್ಯತೇ ।**
**ಬ್ರಹ್ಮ ಚ ಕ್ಷತ್ರಿಯೋ ದ್ವೇಷ್ಟಿ ತದಾ ಸೀದನ್ತಿ ತೇ ತ್ರಯಃ ॥೨೫॥**

ಯಾವುದಾದರೂ ಕಬ್ಬಿಣವು (ಉಳಿಯು) ಕಲ್ಲನ್ನು ಒಡೆಯಲು ಹೋದರೆ ಉಳಿಯು ಮೊಂಡಾಗಿ ಹಾಳಾಗುತ್ತದೆ. (ಕಬ್ಬಿಣದ ವಿಷಯವೇ ಹೀಗಾದಮೇಲೆ ಚಿನ್ನ, ಬೆಳ್ಳಿ ಮುಂತಾದ ಮೃದುಲೋಹಗಳ ವಿಷಯವನ್ನು ಹೇಳಬೇಕಾಗಿಯೇ ಇಲ್ಲ.) ಬೆಂಕಿಯು ತನ್ನ ಉಗಮಸ್ಥಾನವಾದ ನೀರನ್ನು ಸುಡಲು ಹೋದರೆ ತಾನೇ ಆರಿಹೋಗುತ್ತದೆ. ಕ್ಷತ್ರಿಯನು ಬ್ರಾಹ್ಮಣನನ್ನು

ದ್ವೇಷಮಾಡಿದರೆ ಹಾಳಾಗುತ್ತಾನೆ. ಆದುದರಿಂದ ಕ್ಷತ್ರಿಯ, ಅಗ್ನಿ ಮತ್ತು ಲೋಹ–ಈ ಮೂರೂ ಅವುಗಳ ಜನ್ಮಸ್ಥಾನಗಳಾದ ಬ್ರಾಹ್ಮಣ, ನೀರು ಮತ್ತು ಕಲ್ಲು–ಇವುಗಳ ಮೇಲೆ ಪ್ರಭಾವಬೀರಲು ಸಾಧ್ಯವಾಗದೇ ಇರುವುದು ಮಾತ್ರವಲ್ಲದೇ, ವಿನಾಶವನ್ನೂ ಹೊಂದುತ್ತವೆ.'

**ಏವಂ ಕೃತ್ವಾ ಮಹಾರಾಜ ನಮಸ್ಯಾ ಏವ ತೇ ದ್ವಿಜಾಃ ।**
**ಭೌಮಂ ಬ್ರಹ್ಮ ದ್ವಿಜಶ್ರೇಷ್ಠಾ ಧಾರಯನ್ತಿ ಸಮರ್ಚಿತಾಃ ॥೨೬॥**

ಈ ಹುಟ್ಟಿನ ರಹಸ್ಯವನ್ನು ತಿಳಿದುಕೊಂಡು ನೀನು ಬ್ರಾಹ್ಮಣರ ವಿಷಯದಲ್ಲಿ ಸರ್ವಕಾಲದಲ್ಲಿಯೂ ಪೂಜ್ಯಭಾವದಿಂದಲೇ ಇರಬೇಕು. ಏಕೆಂದರೆ : ಸತ್ಕೃತರಾದ ಬ್ರಾಹ್ಮಣರು ಭೂಮಿಯಲ್ಲಿ ಪ್ರಚಲಿತವಾಗಿರುವ, ಪ್ರಪಂಚದ ಕಲ್ಯಾಣಕ್ಕೆ ಕಾರಣವಾಗಿರುವ ವೇದಗಳನ್ನು ಧರಿಸಿರುತ್ತಾರೆ.

ಪುರುಷಸಿಂಹನೇ! ಶಾಸ್ತ್ರಮರ್ಯಾದೆಯು ಹೀಗಿದ್ದರೂ ಬ್ರಾಹ್ಮಣ ರೇನಾದರೂ ಮೂರು ಲೋಕಗಳನ್ನೂ ವಿನಾಶಮಾಡಲು ಪ್ರಯತ್ನಿಸಿದಲ್ಲಿ ಅಂತಹವರನ್ನು ನಿನ್ನ ಬಾಹುಬಲದಿಂದ ನಿಗ್ರಹಿಸಲೇಬೇಕು.

ಈ ವಿಷಯದಲ್ಲಿಯೇ ಮಹರ್ಷಿಯಾದ ಶುಕ್ರನು ಹಿಂದೆ ಹೇಳಿರುವ ಎರಡು ಶ್ಲೋಕಗಳು ಪ್ರಸಿದ್ಧವಾಗಿವೆ. ಆ ಎರಡು ಶ್ಲೋಕಗಳನ್ನೂ ನಿನಗೆ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು :

**ಉದ್ಯಮ್ಯ ಶಸ್ತ್ರಮಾಯಾನ್ತಮಪಿ ವೇದಾನ್ತಗಂ ರಣೇ ।**
**ನಿಗೃಹ್ಣೀಯಾತ್ಸ್ವಧರ್ಮೇಣ ಧರ್ಮಾಪೇಕ್ಷೀ ನರಾಧಿಪಃ ॥೨೯॥**

'ರಣರಂಗದಲ್ಲಿ ಶಸ್ತ್ರವನ್ನೆತ್ತಿಕೊಂಡು ಬರುವವನು ವೇದ-ವೇದಾಂಗ ಪಾರಂಗತನಾದ ಬ್ರಾಹ್ಮಣನೇ ಆಗಿದ್ದರೂ–ಬ್ರಾಹ್ಮಣನು ಅವಧ್ಯನೆಂಬ ನೀತಿಯನ್ನನುಸರಿಸದೇ–ಧರ್ಮಪಾಲನೆಯಲ್ಲಿಯೇ ಇಚ್ಛೆಯುಳ್ಳ ರಾಜನು ತನ್ನ ಕ್ಷತ್ರಧರ್ಮಾನುಸಾರವಾಗಿ ಆಯುಧವನ್ನೆತ್ತಿ ಯುದ್ಧಸನ್ನದ್ಧನಾಗಿ ನಿಂತಿರುವ ಬ್ರಾಹ್ಮಣನನ್ನು ಸಂಹರಿಸಲೇಬೇಕು.

**ವಿನಶ್ಯಮಾನಂ ಧರ್ಮಂ ಹಿ ಯೋಽಭಿರಕ್ಷೇತ್ಸ ಧರ್ಮವಿತ್ ।**
**ನ ತೇನ ಧರ್ಮಹಾ ಸ ಸ್ಯಾನ್ಮನ್ಯುಸ್ತನ್ಮನ್ಯುಮೃಚ್ಛತಿ ॥೩೦॥**

ವಿನಾಶವಾಗುತ್ತಿರುವ ಧರ್ಮವನ್ನು ಯಾವನು ರಕ್ಷಿಸುತ್ತಾನೆಯೋ ಅವನೇ ಧರ್ಮವನ್ನು ತಿಳಿದವನು. ಶಸ್ತ್ರವನ್ನು ಹಿಡಿದುಬರುವ ಬ್ರಾಹ್ಮಣನು ಧರ್ಮದ ರಕ್ಷಣೆಯನ್ನು ಮಾಡಲು ಬಂದವನಲ್ಲ. ಯಾವುದೋ ಆಮಿಷಕ್ಕೆ ವಶನಾಗಿ ಕೋಪದಿಂದಲೋ, ಅಸೂಯೆಯಿಂದಲೋ, ಲೋಭ ದಿಂದಲೋ–ಯುದ್ಧಕ್ಕೆ ಬಂದಿರುತ್ತಾನೆ. ಅಂತಹವನನ್ನು ಕೊಲ್ಲುವುದರಿಂದ ರಾಜನು ಧರ್ಮಾತ್ಮನನ್ನು ಹತ್ಯೆಮಾಡಿದಂತಾಗುವುದಿಲ್ಲ. (ಧರ್ಮವನ್ನೂ ನಾಶಪಡಿಸಿದಂತಾಗುವುದಿಲ್ಲ.) ಆ ಸಮಯದಲ್ಲಿ ಬ್ರಾಹ್ಮಣನಿಗೆ ಅಸಹಜವಾಗಿ ಬರುವ ಕ್ರೋಧವೇ ಅವನಿಗೆ ಮೃತ್ಯುಪ್ರಾಯವಾಗುತ್ತದೆ. (ಕೋಪವೇ ಕೋಪವನ್ನು ಎದುರಿಸುತ್ತದೆ.)'

**ಏವಂ ಚೈವ ನರಶ್ರೇಷ್ಠ ರಕ್ಷ್ಯಾ ಏವ ದ್ವಿಜಾತಯಃ ।**
**ಸಾಪರಾಧಾನಪಿ ಹಿ ತಾನ್ವಿಷಯಾನ್ತೇ ಸಮುತ್ಸೃಜೇತ್ ॥೩೧॥**

(ಆದರೆ ಈ ಶುಕ್ರೋಕ್ತಿಯು ಆತತಾಯಿಗಳಾದ ಬ್ರಾಹ್ಮಣರಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಸೂಚಿಸುತ್ತದೆಯೇ ಹೊರತು–ಉಳಿದ ಬ್ರಾಹ್ಮಣರ ವಿಷಯದಲ್ಲಲ್ಲ.) ರಾಜನು ಬ್ರಾಹ್ಮಣರನ್ನು ಸರ್ವಕಾಲದಲ್ಲಿಯೂ ರಕ್ಷಿಸಲೇಬೇಕು. ಒಂದು ವೇಳೆ ಅವರು ಸಾಧಾರಣವಾದ ಅಪರಾಧಗಳನ್ನು ಮಾಡಿದರೆ ಅವರನ್ನು ರಾಜ್ಯದಿಂದ ಗಡೀಪಾರು ಮಾಡುವುದೇ ಪರಮಾವಧಿ ಶಿಕ್ಷೆಯಾಗಿರುತ್ತದೆ.

**ಅಭಿಶಸ್ತಮಪಿ ಹ್ಯೇಷಾಂ ಕೃಪಾಯೀತ ವಿಶಾಮ್ಪತೇ ।**
**ಬ್ರಹ್ಮಘ್ನೇ ಗುರುತಲ್ಪೇ ಚ ಭ್ರೂಣಹತ್ಯೇ ತಥೈವ ಚ ॥೩೨॥**

**ರಾಜದ್ವಿಷ್ಟೇ ಚ ವಿಪ್ರಸ್ಯ ವಿಷಯಾನ್ತೇ ವಿಸರ್ಜನಮ್ ।**
**ವಿಧೀಯತೇ ನ ಶಾರೀರಂ ದಣ್ಡಮೇಷಾಂ ಕದಾಚನ ॥೩೩॥**

ಒಂದು ವೇಳೆ ಬ್ರಾಹ್ಮಣರ ಸಮೂಹದಲ್ಲಿ ಕೆಲವರು ಮಹಾಪಾಪ ಗಳಿಂದಲೇ ಕಳಂಕಿತರಾಗಿದ್ದರೂ ಅವರ ವಿಷಯದಲ್ಲಿ ಕೃಪೆಯನ್ನು ತೋರಲೇ ಬೇಕು. ಬ್ರಹ್ಮಹತ್ಯೆಮಾಡಿದವನು, ಗುರುಪತ್ನೀಸಮಾಗಮಮಾಡಿದವನು, ಭ್ರೂಣಹತ್ಯೆಮಾಡಿದವನು ಮತ್ತು ರಾಜನಿಗೆ ದ್ರೋಹವನ್ನೆಸಗಿದವನು

ಬ್ರಾಹ್ಮಣನಾಗಿದ್ದರೆ ಅವನನ್ನು ದೇಶದಿಂದ ಹೊರಕ್ಕಟ್ಟಬೇಕು. ಶಾರೀರವಾದ (ಕಶಾಪ್ರಹಾರ-ಅಂಗವಿಚ್ಛೇದ ಇತ್ಯಾದಿ ) ಶಿಕ್ಷೆಯನ್ನು ವಿಧಿಸಬಾರದು.

**ದಯಿತಾಶ್ಚ ನರಾಸ್ತೇ ಸ್ಯುರ್ಭಕ್ತಿಮನ್ತೋ ದ್ವಿಜೇಷು ಯೇ ।**
**ನ ಕೋಶಃ ಪರಮೋಽನ್ಯೋಽಸ್ತಿ ರಾಜ್ಞಾಂ ಪುರುಷಸಂಚಯಾತ್ ॥**

ಯಾರು ಬ್ರಾಹ್ಮಣರಲ್ಲಿ ಭಕ್ತಿಭಾವದಿಂದಿರುವರೋ ಆ ಮನುಷ್ಯರು– ರಾಜನಲ್ಲಿಯೂ ಪ್ರೀತಿಯುಳ್ಳವರಾಗಿರುತ್ತಾರೆ. ರಾಜರಿಗೆ ಪುರುಷಸಂಗ್ರಹಕ್ಕಿಂತಲೂ ಅಧಿಕವಾದ ಬೊಕ್ಕಸವು ಬೇರೆ ಯಾವುದೂ ಇರುವುದಿಲ್ಲ. (ಜನಸಂಗ್ರಹವೇ ಧನಸಂಗ್ರಹವೆಂದು ಭಾವಿಸಬೇಕು. ಜನಗಳನ್ನು ಸಂಗ್ರಹಿಸಬೇಕಾದರೆ ಬ್ರಾಹ್ಮಣರನ್ನು ಆದರಿಸಿ ಸತ್ಕರಿಸಬೇಕು. ಹೀಗೆ ಮಾಡುವುದರಿಂದ ಪ್ರಜೆಗಳು ತಾವಾಗಿ ರಾಜನನ್ನು ಗೌರವಿಸುತ್ತಾರೆ.)

**ದುರ್ಗೇಷು ಚ ಮಹಾರಾಜ ಷಟ್ಸು ಯೇ ಶಾಸ್ತ್ರನಿಶ್ಚಿತಾಃ ।**
**ಸರ್ವದುರ್ಗೇಷು ಮನ್ಯನ್ತೇ ನರದುರ್ಗಂ ಸುದುಸ್ತರಮ್ ॥೩೫॥**

ಮಹಾರಾಜ! ಮರುಭೂಮಿ, ನೀರು, ಪೃಥ್ವೀ, ಅರಣ್ಯ, ಪರ್ವತ ಮತ್ತು ಮನುಷ್ಯ–ಈ ಆರು ದುರ್ಗಗಳಲ್ಲಿ ಮನುಷ್ಯದುರ್ಗವೇ ಪ್ರಧಾನಭೂತವಾಗಿರುತ್ತದೆ. ನೀತಿಶಾಸ್ತ್ರವನ್ನು ಚೆನ್ನಾಗಿ ತಿಳಿದವರು ಈ ಆರು ದುರ್ಗಗಳಲ್ಲಿ ನರದುರ್ಗವೇ ದಾಟಲು ಅಸಾಧ್ಯವೆಂದೂ, ದುರ್ಗಮವೆಂದೂ ಭಾವಿಸುತ್ತಾರೆ. (ಎಲ್ಲ ಕೋಟೆಗಳಿಗಿಂತಲೂ ಜನಪ್ರಿಯತೆ ಎಂಬ ಕೋಟೆಯೇ ಬಲವತ್ತರವಾದುದು.)

**ತಸ್ಮಾನ್ನಿತ್ಯಂ ದಯಾ ಕಾರ್ಯಾ ಚಾತುರ್ವರ್ಣ್ಯೇ ವಿಪಶ್ಚಿತಾ ।**
**ಧರ್ಮಾತ್ಮಾ ಸತ್ಯವಾಕ್ಚೈವ ರಾಜಾ ರಞ್ಜಯತಿ ಪ್ರಜಾಃ ॥೩೬॥**

ಆದುದರಿಂದ ವಿದ್ಯಾವಂತನಾದ ರಾಜನು ನಾಲ್ಕು ವರ್ಣದವರ ವಿಷಯದಲ್ಲಿ ಸತತವಾಗಿ ದಯಾಪರನಾಗಿರಬೇಕು. ಧರ್ಮಾತ್ಮನಾಗಿಯೂ ಸತ್ಯನಿಷ್ಠನಾಗಿಯೂ ಇರುವ ರಾಜನು ಪ್ರಜೆಗಳನ್ನು ಸಂತೋಷಗೊಳಿಸಲು ಸಮರ್ಥನಾಗುತ್ತಾನೆ.

**ನ ಚ ಕ್ಷಾನ್ತೇನ ತೇ ನಿತ್ಯಂ ಭಾವ್ಯಂ ಪುತ್ರ ಸಮನ್ತತಃ ।**
**ಅಧರ್ಮೋ ಹಿ ಮೃದೂ ರಾಜಾ ಕ್ಷಮಾವಾನಿವ ಕುಞ್ಜರಃ ॥೩೭॥**

ಮಗು! ಆದರೆ ನೀನು ಎಲ್ಲ ಕಾಲಗಳಲ್ಲಿಯೂ ಎಲ್ಲ ಕಡೆಗಳಲ್ಲಿಯೂ ಕ್ಷಮಾವಂತನಾಗಿಯೇ ಇರಬಾರದು. ಪಳಗಿ ಸಾಧುವಾಗಿರುವ ಆನೆಯನ್ನು ಕಂಡರೆ ಯಾರೂ ಭಯಪಡದಿರುವಂತೆ–ಸರ್ವದಾ ಕ್ಷಮಾಗುಣದಿಂದಲೇ ಕೂಡಿರುವ ರಾಜನನ್ನು ಕಂಡರೂ ಯಾರೂ ಭಯಪಡುವುದಿಲ್ಲ. ಆದುದರಿಂದ ಅತ್ಯಂತಮೃದುಸ್ವಭಾವದಿಂದ ಕೂಡಿರುವುದೂ ಅಧರ್ಮವೇ ಆಗುತ್ತದೆ. (ಅಧರ್ಮಕಾರ್ಯಗಳಿಗೆ ಪ್ರೇರಕವಾಗುತ್ತದೆ.)

ಈ ವಿಷಯದ ಸಮರ್ಥನೆಯಲ್ಲಿ ಬೃಹಸ್ಪತಿಯಿಂದ ರಚಿತವಾದ ನೀತಿ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಒಂದು ಶ್ಲೋಕವನ್ನು ನಾನು ಹಿಂದೆ ಕೇಳಿದ್ದೆನು. ಅದನ್ನೇ ನಿನಗೂ ಹೇಳುತ್ತೇನೆ. ಕೇಳು.

**ಕ್ಷಮಮಾಣಂ ನೃಪಂ ನಿತ್ಯಂ ನೀಚಃ ಪರಿಭವೇಜ್ಜನಃ ।**
**ಹಸ್ತಿಯನ್ತಾ ಗಜಸ್ಯೈವ ಶಿರ ಏವಾರುರುಕ್ಷತಿ ॥೩೯॥**

ಮಾವಟಿಗನು ತನಗಿಂತಲೂ ಹೆಚ್ಚು ದೊಡ್ಡದಾಗಿದ್ದರೂ ಪಳಗಿ ಸಾಧು ವಾಗಿರುವ ಆನೆಯ ತಲೆಯ ಮೇಲೆ ಹತ್ತಿ ಕುಳಿತುಕೊಳ್ಳುತ್ತಾನೆ. ಹೀಗೆಯೇ ಸದಾಕಾಲದಲ್ಲಿಯೂ ಕ್ಷಮಾವಂತನಾಗಿಯೇ ಇರುವ ರಾಜನನ್ನು ನೀಚಜನರು ತಿರಸ್ಕಾರಮಾಡುತ್ತಲೇ ಇರುತ್ತಾರೆ.

**ತಸ್ಮಾನ್ನೈವ ಮೃದುರ್ನಿತ್ಯಂ ತೀಕ್ಷ್ಣೋ ನೈವ ಭವೇನ್ನೃಪಃ ।**
**ವಾಸನ್ತಾರ್ಕ ಇವ ಶ್ರೀಮಾನ್ನ ಶೀತೋ ನ ಚ ಘರ್ಮದಃ ॥೪೦॥**

ವಸಂತರ್ತುವಿನಲ್ಲಿ ಕಾಂತಿಯುಕ್ತನಾದ ಸೂರ್ಯನು ಅತಿಶೀಲ ನಾಗಿಯೂ ಮತ್ತು ಅತಿಪ್ರಖರನಾಗಿಯೂ ಇರದಂತೆ (ಸರ್ವಜನರಿಗೂ ಹಿತಕರವಾದ ರೀತಿಯಲ್ಲಿರುವಂತೆ) ರಾಜನಾದರೂ ಅತ್ಯಂತಮೃದುಸ್ವಭಾವ ದವನೂ ಆಗಿರಬಾರದು ; ತೀಕ್ಷ್ಣಸ್ವಭಾವದವನೂ ಆಗಿರಬಾರದು. ಸಾಮಾನ್ಯವಾಗಿ ಮೃದುವಾಗಿದ್ದು ಸಮಯಗಳಲ್ಲಿ ಕ್ರೌರ್ಯವನ್ನೂ ತೋರಿಸ ಬೇಕಾಗುತ್ತದೆ.

**ಪ್ರತ್ಯಕ್ಷೇಣಾನುಮಾನೇನ ತಥೌಪಮ್ಯಾಗಮೈರಪಿ ।**
**ಪರೀಕ್ಷ್ಯಾಸ್ತೇ ಮಹಾರಾಜ ಸ್ವೇ ಪರೇ ಚೈವ ನಿತ್ಯಶಃ ॥೪೧॥**

ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಆಗಮ–ಈ ನಾಲ್ಕು ಪ್ರಮಾಣಗಳಿಂದ ರಾಜನು ತನ್ನವರು ಯಾರು? ಶತ್ರುಗಳು ಯಾರು?–

ಎಂಬುದನ್ನು ಅನುದಿನವೂ ಪರೀಕ್ಷಿಸುತ್ತಲೇ ಇರಬೇಕು. (ಪ್ರತ್ಯಕ್ಷ ಪ್ರಮಾಣವೆಂದರೆ ಉಪಕಾರ-ಅಪಕಾರಾದಿಗಳು. ಅನುಮಾನವೆಂದರೆ **ನೇತ್ರ ವಕ್ತ್ರವಿಕಾರೇಣ ಜ್ಞಾಯತೇಽನ್ತರ್ಗತಂ ಮನಃ** –ಕಣ್ಣು ಮತ್ತು ಮುಖಗಳ ವಿಕಾರದಿಂದಲೇ ಮನಸ್ಸಿನ ಇಂಗಿತವು ತಿಳಿಯುತ್ತದೆಂಬ ನೀತಿಶಾಸ್ತ್ರಾನು ಸಾರವಾಗಿ ಕಣ್ಣು ಮತ್ತು ಮುಖಗಳ ಚೇಷ್ಟೆಗಳ ಮೂಲಕವಾಗಿ ತಿಳಿಯು ವುದು. ಉಪಮಾನಪ್ರಮಾಣವೆಂದರೆ : ಹೋಲಿಕೆಯಿಂದ ವಿಷಯಗಳನ್ನು ತಿಳಿಯುವುದು. ಆಗಮಗಳು ಎಂದರೆ ಶಬ್ದಪ್ರಮಾಣವೆಂದು ಅರ್ಥವಾಗು ತ್ತದೆ. ಆಪ್ತರು ಹೇಳುವ ಮಾತುಗಳಿಂದ ನಿರ್ಧರಿಸುವುದು. ಪ್ರತ್ಯಕ್ಷವೇ ಮೊದಲಾದ ನಾಲ್ಕು ಪ್ರಮಾಣಗಳಲ್ಲಿ ಶಬ್ದವನ್ನು ನಾಲ್ಕನೆಯ ಪ್ರಮಾಣ ವನ್ನಾಗಿ ಹೇಳಿದೆ.

ಆಗಮಪ್ರಮಾಣಕ್ಕೆ ವ್ಯಾಖ್ಯಾನಕಾರರು **ಸಾಮುದ್ರಿಕಲಕ್ಷಣೇನ ತೇ ಪುರುಷಾಃ ಪರೀಕ್ಷ್ಯಾಃ**–ಸಾಮುದ್ರಿಕಲಕ್ಷಣದಿಂದ ಜನರನ್ನು ಪರೀಕ್ಷಿಸಿ ಅವರ ಸ್ವಭಾವವನ್ನು ತಿಳಿಯಬೇಕು–ಎಂದು ಅರ್ಥಮಾಡಿರುತ್ತಾರೆ. )

**ವ್ಯಸನಾನಿ ಚ ಸರ್ವಾಣಿ ತ್ಯಜೇಥಾ ಭೂರಿದಕ್ಷಿಣ ।**
**ನ ಚೈವ ನ ಪ್ರಯುಞ್ಜೀತ ಸಙ್ಗಂ ತು ಪರಿವರ್ಜಯೇತ್ ॥೪೨॥**

ಭೂರಿದಕ್ಷಿಣನೇ! ಎಲ್ಲ ರೀತಿಯ ವ್ಯಸನಗಳನ್ನೂ ಸಂಪೂರ್ಣವಾಗಿ ತ್ಯಜಿಸಬೇಕು. ಆದರೆ ಸಾಹಸಾದಿಗಳನ್ನೂ ಯಾವಾಗಲೂ ತೋರಿಸಲೇಬಾರ ದೆಂದಲ್ಲ. ಸಾಹಸಾದಿಗಳು ಶತ್ರುವಿಜಯಾದಿಗಳಿಗೆ ಅತ್ಯವಶ್ಯವಾಗಿ ಇರಲೇ ಬೇಕು. ವ್ಯಸನಗಳಲ್ಲಿಯೇ* ಹೆಚ್ಚಿನ ಆಸಕ್ತಿಯನ್ನು ಇಟ್ಟುಕೊಳ್ಳಬಾರದು.

---

* ವ್ಯಸನಗಳು ಹದಿನೆಂಟು : ಕಾಮಜವಾದ ವ್ಯಸನಗಳು ಹತ್ತು. ಕ್ರೋಧಜವಾದ ವ್ಯಸನಗಳು ಎಂಟು. ಬೇಟೆಯಾಡುವುದು, ಜೂಜಾಡುವುದು, ಹಗಲಿನಲ್ಲಿ ಮಲಗುವುದು, ಇತರರನ್ನು ಯಾವಾಗಲೂ ನಿಂದಿಸುತ್ತಲೇ ಇರುವುದು, ಸರ್ವದಾ ಸ್ತ್ರೀಸಹವಾಸದಲ್ಲಿಯೇ ಇರುವುದು, ಮದದಿಂದ ಕೊಬ್ಬಿರುವವನಂತೆ ವ್ಯವಹರಿಸುವುದು, ವಾದ್ಯ-ಗೀತ ಮತ್ತು ನೃತ್ಯ ಇವುಗಳಲ್ಲಿಯೇ ಸರ್ವದಾ ಆಸಕ್ತನಾಗಿರುವುದು ಮತ್ತು ಸುರಾಪಾನಮಾಡು ವುದು–ಈ ಹತ್ತೂ ಕಾಮಜವಾದ ವ್ಯಸನಗಳು. ಚಾಡಿಕೋರತನ, ಸಾಹಸ, ದ್ರೋಹ, ಈರ್ಷ್ಯೆ, ಇತರರಲ್ಲಿ ದೋಷವನ್ನೆಣಿಸುವುದು, ಪುರುಷಾರ್ಥಗಳನ್ನು ದೂಷಿಸುವುದು, ಕಠಿನವಾದ ಮಾತು, ಉಗ್ರವಾದ ಶಿಕ್ಷೆಯನ್ನು ಕೊಡುವುದು–ಇವು ಎಂಟೂ ಕ್ರೋಧಜವಾದ

**ಲೋಕಸ್ಯ ವ್ಯಸನೀ ನಿತ್ಯಂ ಪರಿಭೂತೋ ಭವತ್ಯುತ ।**
**ಉದ್ವೇಜಯತಿ ಲೋಕಂ ಚ ಯೋಽತಿದ್ವೇಷೀ ಮಹೀಪತಿಃ ॥೪೩॥**

ಯಾವ ರಾಜನು ವ್ಯಸನಗಳಲ್ಲಿಯೇ ಸರ್ವದಾ ಆಸಕ್ತನಾಗಿರುತ್ತಾನೆಯೋ, ಬೇರೆಯವರನ್ನು ಬಹಳವಾಗಿ ದ್ವೇಷಿಸುತ್ತಾ ಲೋಕವನ್ನೇ ಉದ್ವೇಗಗೊಳಿಸುತ್ತಾನೆಯೋ ಅಂತಹ ರಾಜನು ಜನರ ತಿರಸ್ಕಾರಕ್ಕೆ ಪಾತ್ರನಾಗುತ್ತಾನೆ.

**ಭವಿತವ್ಯಂ ಸದಾ ರಾಜ್ಞಾ ಗರ್ಭಿಣೀಸಹಧರ್ಮಿಣಾ ।**
**ಕಾರಣಂ ಚ ಮಹಾರಾಜ ಶೃಣು ಯೇನೇದಮಿಷ್ಯತೇ ॥೪೪॥**

ಮಹಾರಾಜ! ರಾಜನು ಗರ್ಭಿಣೀಸ್ತ್ರೀಯಂತೆ ವ್ಯವಹರಿಸಬೇಕು. ಹೀಗೇಕೆ ಇರಬೇಕೆಂಬುದಕ್ಕೆ ಕಾರಣವನ್ನು ಹೇಳುತ್ತೇನೆ, ಕೇಳು :

**ಯಥಾ ಹಿ ಗರ್ಭಿಣೀ ಹಿತ್ವಾ ಸ್ವಂ ಪ್ರಿಯಂ ಮನಸೋಽನುಗಮ್ ।**
**ಗರ್ಭಸ್ಯ ಹಿತಮಾಧತ್ತೇ ತಥಾ ರಾಜ್ಞಾಪ್ಯಸಂಶಯಮ್ ॥೪೫॥**

**ವರ್ತಿತವ್ಯಂ ಕುರುಶ್ರೇಷ್ಠ ಸದಾ ಧರ್ಮಾನುವರ್ತಿನಾ ।**
**ಸ್ವಂ ಪ್ರಿಯಂ ತು ಪರಿತ್ಯಜ್ಯ ಯದ್ಯಲ್ಲೋಕಹಿತಂ ಭವೇತ್ ॥೪೬॥**

ಯಾವ ರೀತಿಯಲ್ಲಿ ಗರ್ಭಿಣಿಯಾದ ಸ್ತ್ರೀಯು ತನ್ನ ಮನಸ್ಸಿನ ಕಾಮನೆಗಳೆಲ್ಲವನ್ನೂ ದೂರೀಕರಿಸಿ ಗರ್ಭಸ್ಥವಾಗಿರುವ ಶಿಶುವಿನ ಹಿತದಲ್ಲಿಯೇ ಆಸಕ್ತಳಾಗಿರುತ್ತಾಳೆಯೋ–ಅದೇ ರೀತಿಯಲ್ಲಿ ಧರ್ಮಾನುಸಾರವಾಗಿ ನಡೆಯುವ ರಾಜನು ಕೂಡ ನಿಸ್ಸಂಶಯವಾಗಿ ತನ್ನ ಮನಸ್ಸಿನ ಕಾಮನೆಗಳೆಲ್ಲವನ್ನೂ ದೂರೀಕರಿಸಿ ಲೋಕಕ್ಕೆ ಹಿತವುಂಟಾಗುವ ರೀತಿಯಲ್ಲಿಯೇ ವ್ಯವಹಾರ

---

ವ್ಯಸನಗಳು. ಮೃಗಯಾಕ್ಷಾ ದಿವಾಸ್ವಾಪಃ ಪರಿವಾರಸ್ತ್ರಿಯೋ ಮದಃ । ತೌರ್ಯತ್ರಿಕಂ ವೃಥಾ ಪಾನಂ ಕಾಮಜೋ ದಶಮೋ ಗುಣಃ ॥ (ತೌರ್ಯತ್ರಿಕವೆಂದರೆ ವಾದ್ಯ-ಗೀತ-ನೃತ್ಯಗಳು) ಪೈಶುನಂ ಸಾಹಸಂ ಕ್ರೋಧಂ ಈರ್ಷ್ಯಾಸೂಯಾರ್ಥದೂಷಣಮ್ । ವಾಗ್ದಣ್ಡಜಂ ಚ ಪಾರುಷ್ಯಂ ಕ್ರೋಧಜೋಽಪಿ ಗುಣೋಽಷ್ಟಕಃ॥

ಗಳನ್ನು ನಡೆಸಬೇಕು. ( ಸ್ವಾರ್ಥವನ್ನು ತ್ಯಾಗಮಾಡಿ ಪ್ರಜೆಗಳ ಹಿತದಲ್ಲಿಯೇ ಸರ್ವದಾ ಆಸಕ್ತನಾಗಿರಬೇಕು. )

**ನ ಸಂತ್ಯಾಜ್ಯಂ ಚ ತೇ ಧೈರ್ಯಂ ಕದಾಚಿದಪಿ ಪಾಣ್ಡವ ।**
**ಧೀರಸ್ಯ ಸ್ಪಷ್ಟದಣ್ಡಸ್ಯ ನ ಭಯಂ ವಿದ್ಯತೇ ಕ್ವಚಿತ್ ॥೪೭॥**

ಯುಧಿಷ್ಠಿರ! ನೀನು ಯಾವುದೇ ಕಾರಣದಿಂದಲೂ ಯಾವುದೇ ಸಮಯದಲ್ಲಿಯೂ ಧೈರ್ಯಗುಂದಬಾರದು. ಅಪರಾಧಿಗಳನ್ನು ನಿಯತವಾದ ರೀತಿಯಲ್ಲಿ ಶಿಕ್ಷಿಸುವವನಿಗೆ ಮತ್ತು ಧೀರನಾದವನಿಗೆ ಯಾವ ಕಾಲದಲ್ಲಿಯೂ ಭಯವೆಂಬುದೇ ಇರುವುದಿಲ್ಲ.

**ಪರಿಹಾಸಶ್ಚ ಭೃತ್ಯೈಸ್ತೇ ನಾತ್ಯರ್ಥಂ ವದತಾಂ ವರ ।**
**ಕರ್ತವ್ಯೋ ರಾಜಶಾರ್ದೂಲ ದೋಷಮತ್ರ ಹಿ ಮೇ ಶೃಣು ॥೪೮॥**

ವಾಗ್ಮಿಗಳಲ್ಲಿ ಶ್ರೇಷ್ಠನಾದವನೇ! ಸೇವಕರೊಡನೆ ಅತಿಯಾಗಿ ಸರಸ ಸಂಭಾಷಣೆಗಳಲ್ಲಿ ತೊಡಗಬಾರದು. ಇದು ರಾಜನ ಕರ್ತವ್ಯವಾಗಿರುತ್ತದೆ. ಸೇವಕರೊಡನೆ ಹೆಚ್ಚು ಸಲಿಗೆಯಿಂದಿರುವುದರಲ್ಲಿ ದೋಷವೇನೆಂಬುದನ್ನು ಹೇಳುವೆನು ; ಕೇಳು.

**ಅವಮನ್ಯನ್ತಿ ಭರ್ತಾರಂ *ಸಂಘರ್ಷಾದುಪಜೀವಿನಃ ।**
**ಸ್ವೇ ಸ್ಥಾನೇ ನ ಚ ತಿಷ್ಠನ್ತಿ ಲಙ್ಘಯನ್ತಿ ಚ ತದ್ವಚಃ ॥೪೯॥**

ರಾಜನ ಆಶ್ರಯದಿಂದಲೇ ಜೀವನವನ್ನು ನಡೆಸುವ ಸೇವಕರು ನಿಕಟ ಸಂಪರ್ಕದಿಂದಾಗಿ ತಮ್ಮ ಒಡೆಯನನ್ನೇ ಲಾಘವದಿಂದ ಕಾಣುತ್ತಾರೆ. ಅವನಿಗೆ ಮರ್ಯಾದೆಯನ್ನೇ ಕೊಡುವುದಿಲ್ಲ. ಅವರು ತಮ್ಮ ಕೆಲಸಗಳನ್ನೂ ಶ್ರದ್ಧೆಯಿಂದ ಮಾಡುವುದಿಲ್ಲ. ಅನೇಕಸಂದರ್ಭಗಳಲ್ಲಿ ರಾಜನ ಆಜ್ಞೆಯನ್ನೂ ಉಲ್ಲಂಘಿಸುತ್ತಾರೆ.

**ಪ್ರೇಷ್ಯಮಾಣಾ ವಿಕಲ್ಪನ್ತೇ ಗುಹ್ಯಂ ಚಾಪ್ಯನುಯುಞ್ಜತೇ ।**
**ಅಯಾಚ್ಯಂ ಚೈವ ಯಾಚನ್ತೇ ಭೋಜ್ಯಾನ್ಯಾಹಾರಯನ್ತಿ ಚ ॥೫೦॥**

---

* ಸಂಘರ್ಷ ಎಂದರೆ ತಿಕ್ಕಾಟ ಎಂದು ಅರ್ಥವಾಗುತ್ತದೆ. ತಿಕ್ಕಾಟವೆಂಬುದು ಪರಸ್ಪರವಾಗಿ ಸೇರುವಿಕೆಯಿಂದ ಉಂಟಾಗುವುದರಿಂದ ವ್ಯಾಖ್ಯಾನಕಾರರು ಅತಿಸಂಶ್ಲೇಷಾತ್ = ಎಂದು ಅರ್ಥಮಾಡಿರುತ್ತಾರೆ.

ಯಾವುದಾದರೂ ಕಾರ್ಯಾರ್ಥವಾಗಿ ಅಂತಹವರನ್ನು ಕಳುಹಿಸಿದರೆ ಕಾರ್ಯದ ಸಿದ್ಧಿಯ ವಿಷಯವಾಗಿ ಸಂದೇಹವನ್ನು ವ್ಯಕ್ತಪಡಿಸುತ್ತಾರೆ. ಅಥವಾ ಹೇಳಿಕಳುಹಿಸಿದ ಕಾರ್ಯವನ್ನು ವಿರುದ್ಧವಾಗುವ ರೀತಿಯಲ್ಲಿ ಮಾಡುತ್ತಾರೆ. ರಾಜನು ಹೇಳುವ ಕಾರ್ಯವನ್ನು ಪೂರೈಸಬೇಕೆಂಬುದು ಅವರ ಧ್ಯೇಯವಾಗಿರುವುದಿಲ್ಲ. ಉದಾಸೀನದಿಂದಲೇ ಮಾಡಿ ಕಾರ್ಯವನ್ನು ಮತ್ತಷ್ಟು ಕೆಡಿಸುತ್ತಾರೆ. ರಾಜಗುಹ್ಯಗಳನ್ನೂ (ಗುಟ್ಟಾದ ವಿಷಯಗಳನ್ನೂ) ಕೇಳುತ್ತಾರೆ. ನಿಕಟಸಂಪರ್ಕದಿಂದ ರಾಜನೊಡನೆ ಅತಿಸಲಿಗೆಯನ್ನು ಪಡೆದ ಅವರು ಕೇಳಬಾರದ ವಸ್ತುಗಳನ್ನೇ ಕೇಳುತ್ತಾರೆ. ರಾಜನಿಗೆ ಸಿದ್ಧಪಡಿಸಿದ ಆಹಾರವನ್ನು ಭಕ್ಷಿಸಲೂ ಅವರು ಹಿಂಜರಿಯುವುದಿಲ್ಲ.

**ಕ್ರುಶ್ಯನ್ತಿ ಪರಿದೀಪ್ಯನ್ತಿ ಭೂಮಿಮಧ್ಯಾಸತೇಽಸ್ಯ ಚ ।**
**ಉತ್ಕ್ರೋಶೈರ್ವರ್ಗ್ಣನಾಭಿಶ್ಚ ಕಾರ್ಯಾಣ್ಯನುವಿಹನ್ತಿ ಚ ॥೫೧॥**

ರಾಜನ ವಿಷಯದಲ್ಲಿ ಹೆಚ್ಚು ಸಲಿಗೆಯಿಂದ ಇರುವ ಸೇವಕರು ರಾಜನು ಕುಳಿತ ಸ್ಥಳದಲ್ಲಿಯೇ ತಾವೂ ಕುಳಿತುಕೊಳ್ಳುತ್ತಾರೆ. 'ತಮ್ಮೊಡನೆ ಇರುವವನು ತಮ್ಮ ಅಧಿಪತಿ'–ಎಂಬ ಪರಿವೆಯೇ ಇಲ್ಲದೇ ಕೂಗಿಕೊಳ್ಳುತ್ತಾರೆ. (ಗಟ್ಟಿಯಾಗಿ ಮಾತನಾಡುತ್ತಾರೆ.) ಕೋಪದಿಂದ ಕಿಡಿ-ಕಿಡಿಯಾಗುತ್ತಾರೆ. ಲಂಚ-ಮೋಸ ಗಳಿಂದ ರಾಜನಿಗೆ ಸಂಬಂಧಿಸಿದ ಕಾರ್ಯಗಳನ್ನೂ ಹಾಳುಮಾಡುತ್ತಾರೆ.

**ಜರ್ಜರಂ ಚಾಸ್ಯ ವಿಷಯಂ ಕುರ್ವನ್ತಿ ಪ್ರತಿರೂಪಕೈಃ ।**
**ಸ್ತ್ರೀರಕ್ಷಿಭಿಶ್ಚ ಸಜ್ಜನ್ತೇ ತುಲ್ಯವೇಷಾ ಭವನ್ತಿ ಚ ॥೫೨॥**

ರಾಜಾಜ್ಞೆಯ ನಕಲುಗಳನ್ನು ತಮಗೆ ಇಚ್ಛೆ ಬಂದಂತೆ ಹೊರಡಿಸಿ ದೇಶವನ್ನು ಶೈಥಿಲ್ಯಗೊಳಿಸುತ್ತಾರೆ. ಅಂತಃಪುರದೊಳಕ್ಕೆ ಹೋಗುವ ಇಚ್ಛೆ ಯುಂಟಾದಾಗ ಅವರು ಪಹರೆಯವರ ಸ್ತ್ರೀವೇಷವನ್ನೇ ಧರಿಸಿ ಅಂತಃಪುರ ದೊಳಕ್ಕೆ ನುಗ್ಗುತ್ತಾರೆ.

**ವಾನ್ತಂ ನಿಷ್ಠೀವನಂ ಚೈವ ಕುರ್ವತೇ ಚಾಸ್ಯ ಸಂನಿಧೌ ।**
**ನಿರ್ಲಜ್ಜಾ ರಾಜಶಾರ್ದೂಲ ವ್ಯಾಹರನ್ತಿ ಚ ತದ್ವಚಃ ॥೫೩॥**

ರಾಜಶ್ರೇಷ್ಠನೇ! ರಾಜನ ಹತ್ತಿರದಲ್ಲಿಯೇ ಕುಳಿತು ಸ್ವಲ್ಪವಾದರೂ ಭಯವಿಲ್ಲದೇ ಆಕಳಿಸುತ್ತಾರೆ. ಮತ್ತು ಛಿ-ಥೂ ಎಂದು ಉಗುಳುತ್ತಾರೆ. ನಾಚಿಕೆಗೆಟ್ಟವರಾಗಿ ರಾಜನು ರಹಸ್ಯದಲ್ಲಿ ಹೇಳಿದ ಮಾತುಗಳನ್ನೂ ಬಹಿರಂಗ ವಾಗಿ ಹೇಳುತ್ತಿರುತ್ತಾರೆ.

**ಹಯಂ ವಾ ದನ್ತಿನಂ ವಾಪಿ ರಥಂ ವಾ ನೃಪಸತ್ತಮ ।**
**ಅಭಿರೋಹನ್ತ್ಯನಾದೃತ್ಯ ಹರ್ಷುಲೇ ಪಾರ್ಥಿವೇ ಮೃದೌ ॥೫೪॥**

ರಾಜನು ಹಾಸ್ಯಪ್ರವೃತ್ತಿಯುಳ್ಳವನೂ ಮತ್ತು ಅತಿಮೃದುಸ್ವಭಾವ ದವನೂ ಆಗಿಬಿಟ್ಟರೆ–ಅವನ ನಿಕಟವರ್ತಿಗಳಾದ ಸೇವಕರು ರಾಜನನ್ನು ಸಂಪೂರ್ಣವಾಗಿ ಅನಾದರಣೆಮಾಡಿ ರಾಜೋಪಭೋಗಕ್ಕೇ ಮೀಸಲಾದ ಕುದುರೆಯನ್ನೂ, ಆನೆಯನ್ನೂ ಮತ್ತು ರಾಜನ ರಥವನ್ನೂ ಹತ್ತಿಕುಳಿತು ಕೊಳ್ಳುತ್ತಾರೆ. ( ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. )

**ಇದಂ ತೇ ದುಷ್ಕರಂ ರಾಜನ್ನಿದಂ ತೇ ದುಷ್ಟಚೇಷ್ಟಿತಮ್ ।**
**ಇತ್ಯೇವಂ ಸುಹೃದೋ ವಾಚಂ ವದನ್ತೇ ಪರಿಷದ್ಗತಾಃ ॥೫೫॥**

ಗಣ್ಯಪುರುಷರು ಸೇರಿರುವ ರಾಜಸಭೆಯಲ್ಲಿಯೂ ಇಂತಹ ಸೇವಕರು ಸುಮ್ಮನಿರುವುದಿಲ್ಲ. ರಾಜನ ಸುಹೃದರು ಹೇಳುವಂತೆ ಅತಿಸಲಿಗೆಯಿಂದ "ರಾಜರೇ! ಇದು ನಿಮಗೆ ಅತಿಕಷ್ಟಸಾಧ್ಯವಾದ ಕೆಲಸ. ಇದಕ್ಕೆ ಕೈಹಾಕ ಬೇಡಿರಿ. ನೀವು ಮಾಡಿದ ಈ ಕಾರ್ಯವು ಅತಿಹೀನವಾದುದು. ನೀವು ಹೀಗೆ ಮಾಡಬಾರದಾಗಿದ್ದಿತು."–ಮುಂತಾಗಿ ಲಾಘವದಿಂದ ಮಾತನಾಡು ತ್ತಾರೆ.

**ಕ್ರುದ್ಧೇ ಚಾಸ್ಮಿನ್ಹಸನ್ತ್ಯೇವ ನ ಚ ಹೃಷ್ಯನ್ತಿ ಪೂಜಿತಾಃ ।**
**ಸಂಘರ್ಷಶೀಲಾಶ್ಚ ಸದಾ ಭವನ್ತ್ಯನ್ಯೋನ್ಯಕಾರಣಾತ್ ॥೫೬॥**

ರಾಜನೇನಾದರೂ ಅಪ್ಪಿ-ತಪ್ಪಿ ಕೋಪಗೊಂಡರೆ ಅವನು ಕೋಪ ಗೊಂಡುದನ್ನೂ ಪರಿಹಾಸವೆಂದೇ ಭಾವಿಸಿ ಕಿಲ-ಕಿಲ ನಗುತ್ತಾರೆ. ಒಂದು ವೇಳೆ ರಾಜನು ಅವರನ್ನು ಸಮ್ಮಾನಿಸಿದರೆ ಅದರಿಂದ ಅವರಿಗೆ ಅತಿಯಾದ ಸಂತೋಷವೇನೂ ಆಗುವುದಿಲ್ಲ. ಪರಸ್ಪರ ಸ್ವಾರ್ಥಸಾಧನೆಯ ಸಲುವಾಗಿ ರಾಜನ ಜೊತೆಯಲ್ಲಿಯೇ ವಿವಾದಕ್ಕೂ ಸಿದ್ಧರಾಗುತ್ತಾರೆ. (ಅವರ

ಸ್ವಾರ್ಥಸಾಧನೆಗೆ ಯಾವಾಗಲೂ ರಾಜನೊಡನೆಯೇ ಇರುವುದು ಮುಖ್ಯ ಸಾಧಕವಾಗುತ್ತದೆ. )

**ವಿಸ್ರಂಸಯನ್ತಿ ಮನ್ತ್ರಂ ಚ ವಿವೃಣ್ವನ್ತಿ ಚ ದುಷ್ಕೃತಮ್ ।**
**ಲೀಲಯಾ ಚೈವ ಕುರ್ವನ್ತಿ ಸಾವಜ್ಞಾಸ್ತಸ್ಯ ಶಾಸನಮ್ ॥೫೭॥**

ರಾಜನು ಮಂತ್ರಿಯೇ ಮೊದಲಾದವರೊಡನೆ ಮಾಡಿದ ಗುಪ್ತಸಮಾಲೋಚನೆಗಳನ್ನೂ ಹೊರಗೆಡಹುತ್ತಾರೆ. ರಾಜನು ಮಾಡಿರಬಹುದಾದ ತಪ್ಪುಗಳನ್ನು ಬಹಿರಂಗಗೊಳಿಸುತ್ತಾರೆ. ರಾಜನ ಆಜ್ಞೆಯ ವಿಷಯದಲ್ಲಿ ಅತ್ಯನಾದರವನ್ನು ತೋರಿಸುವ ಆ ಸೇವಕರು ರಾಜಕಾರ್ಯವನ್ನೂ ಅಸಡ್ಡೆಯಿಂದ ವಿಲಾಸಾರ್ಥವಾದ ಕ್ರೀಡೆಯಂತೆಯೇ ಭಾವಿಸುತ್ತಾರೆ.

**ಅಲಂಕಾರೇ ಚ ಭೋಜ್ಯೇ ಚ ತಥಾ ಸ್ನಾನಾನುಲೇಪನೇ ।**
**ಹೇಲನಾನಿ ನರವ್ಯಾಘ್ರ ಸ್ವಸ್ಥಾಸ್ತಸ್ಯೋಪಶೃಣ್ವತಃ ॥೫೮॥**

ರಾಜನ ಅಲಂಕಾರ, ಭೋಜ್ಯವಸ್ತುಗಳು, ಸ್ನಾನ, ಗಂಧಾನುಲೇಪನ–ಮೊದಲಾದ ವೈಯಕ್ತಿಕವಾದ ವಿಷಯಗಳಲ್ಲಿಯೂ ಆ ಸೇವಕರು ಅವನಿಗೆ ಕೇಳಿಸುವಂತೆಯೇ ನಿರ್ಭಯವಾಗಿ ( ಅವನ ದೇಹದ ಲಕ್ಷಣಗಳ ಬಗೆಗೆ, ಹಾವ-ಭಾವಗಳ ಬಗೆಗೆ ) ಕುತ್ಸಿತವಾದ ಮಾತುಗಳನ್ನಾಡುತ್ತಿರುತ್ತಾರೆ.

**ನಿನ್ದನ್ತೇ ಸ್ವಾನಧೀಕಾರಾನ್ಸಂತ್ಯಜನ್ತೇ ಚ ಭಾರತ ।**
**ನ ವೃತ್ತ್ಯಾ ಪರಿತುಷ್ಯನ್ತಿ ರಾಜದೇಯಂ ಹರನ್ತಿ ಚ ॥೫೯॥**

ತಮಗೆ ವಹಿಸಿಕೊಟ್ಟಿರುವ ಕಾರ್ಯವನ್ನೇ ಅವರು ದೂಷಿಸುತ್ತಾರೆ. ರಾಜನ ಆಜ್ಞಾನುಸಾರವಾಗಿ ಆ ಕಾರ್ಯವನ್ನು ಅವರು ಮುಗಿಸಲು ಪ್ರಯತ್ನಿಸದೇ ಮಧ್ಯದಲ್ಲಿಯೇ ಬಿಟ್ಟುಬಿಡುತ್ತಾರೆ. ತಮಗೆ ಕೊಡುವ ವೇತನದಿಂದ ತೃಪ್ತಿಹೊಂದುವುದೇ ಇಲ್ಲ. ರಾಜನು ಧರ್ಮಕಾರ್ಯಗಳಿಗಾಗಿ ಕೊಟ್ಟಿರುವ ದಾನ-ದತ್ತಿಗಳನ್ನೂ ಅಥವಾ ರಾಜನಿಗೆ ಕೊಡಬೇಕಾದ ಕಂದಾಯ-ತೆರಿಗೆ ಮೊದಲಾದುವನ್ನೂ ಅಪಹರಿಸುತ್ತಾರೆ.

**ಕ್ರೀಡಿತುಂ ತೇನ ಚೇಚ್ಛನ್ತಿ ಸಸೂತ್ರೇಣೇವ ಪಕ್ಷಿಣಾ ।**
**ಅಸ್ಮತ್ಪ್ರಣೇಯೋ ರಾಜೇತಿ ಲೋಕಾಂಶ್ಚೈವ ವದನ್ತ್ಯುತ ॥೬೦॥**

ದಾರದಿಂದ ಕಟ್ಟಿಹಾಕಿದ ಪಕ್ಷಿಯೊಡನೆ ಆಟವಾಡುವಂತೆ–ತಮ್ಮ ವಶ

ದಲ್ಲಿರುವ ರಾಜನೊಡನೆ ಅಂತಹ ರಾಜಸೇವಕರು ಆಟವಾಡಲು, ತಮಗೆ ತೋರಿದಂತೆ ವ್ಯವಹರಿಸಲು (ಅವನನ್ನು ತಮ್ಮ ಇಚ್ಛೆಗೆ ಬಂದಂತೆ ಉಪಯೋಗಿಸಿಕೊಳ್ಳಲು) ಇಷ್ಟಪಡುತ್ತಾರೆ. 'ರಾಜನು ನಾವು ಹೇಳಿದಂತೆ ಕೇಳುತ್ತಾನೆ'–ಎಂದು ಜನಸಾಮಾನ್ಯರೊಡನೆ ಹೇಳುತ್ತಿರುತ್ತಾರೆ.

**ಏತೇ ಚೈವಾಪರೇ ಚೈವ ದೋಷಾಃ ಪ್ರಾದುರ್ಭವನ್ತ್ಯುತ ।**
**ನೃಪತೌ ಮಾರ್ದವೋಪೇತೇ ಹರ್ಷುಲೇ ಚ ಯುಧಿಷ್ಠಿರ ॥೬೧॥**

ಯುಧಿಷ್ಠಿರ! ರಾಜನು ಅತ್ಯಂತಮೃದುಸ್ವಭಾವದವನಾಗಿದ್ದರೆ ಮತ್ತು ಹಾಸ್ಯಪ್ರವೃತ್ತಿಯವನಾಗಿದ್ದರೆ–ನಾನು ಹೇಳಿರುವ ದೋಷಗಳೇ ಅಲ್ಲದೇ ಇನ್ನೂ ಅನೇಕದೋಷಗಳೂ ರಾಜ್ಯದಲ್ಲಿ ಪ್ರಾದುರ್ಭವಿಸುತ್ತವೆ. ಆದುದರಿಂದ ರಾಜನು ಅತಿಹಾಸ್ಯಶೀಲನೂ ಮತ್ತು ಅತಿಮೃದುಸ್ವಭಾವದವನೂ ಆಗಬಾರದು."

ಽ೬ನೆಯ ಅಧ್ಯಾಯವು ಮುಗಿಯಿತು.

ಽ೭ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ರಾಜನಿಗೆ ಧರ್ಮಾನುಕೂಲವಾದ ನೀತಿಯ ವರ್ಣನೆ

ಭೀಷ್ಮನು ಮುಂದುವರಿದು ಹೇಳುತ್ತಾನೆ :

"ಯುಧಿಷ್ಠಿರ! ರಾಜನಾದವನು ಯಾವಾಗಲೂ ಉದ್ಯೋಗಶೀಲನಾಗಿಯೇ ಇರಬೇಕು. ಗೃಹಕೃತ್ಯಗಳಲ್ಲಿ ಅನಾಸಕ್ತಳಾದ ಹೆಂಗಸಿನಂತೆ–ನಿರುದ್ಯೋಗಿಯಾದ ರಾಜನು ಪ್ರಶಂಸೆಗೆ ಪಾತ್ರನಾಗುವುದಿಲ್ಲ. ಈ ವಿಷಯವನ್ನು ಸಮರ್ಥಿಸಿ ಶುಕ್ರಾಚಾರ್ಯರು ಒಂದು ಶ್ಲೋಕವನ್ನು ಹೇಳಿದ್ದಾರೆ. ನಾನು ಹೇಳಲಿರುವ ಆ ಶ್ಲೋಕವನ್ನು ಚಿತ್ತೈಕಾಗ್ರತೆಯಿಂದ ಕೇಳು :

**ದ್ವಾವಿಮೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ ।**
**ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥೩॥**

ಸರ್ಪವು ಬಿಲದಲ್ಲಿರುವ ಇಲಿ-ಕಪ್ಪೆ ಮೊದಲಾದುವುಗಳನ್ನು ನುಂಗಿಬಿಡುವಂತೆ–ಭೂಮಿಯು ಶತ್ರುಗಳೊಡನೆ ಯುದ್ಧಮಾಡದಿರುವ ರಾಜನನ್ನೂ ದೇಶಸಂಚಾರವನ್ನು ಮಾಡದಿರುವ ಬ್ರಾಹ್ಮಣನನ್ನೂ ನುಂಗಿಹಾಕುತ್ತದೆ.

ನರಶ್ರೇಷ್ಠನೇ! ಈ ವಿಷಯವನ್ನು ನೀನು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು.

**ಸಂಧೇಯಾನಭಿಸಂಧತ್ಸ್ವ ವಿರೋಧ್ಯಾಂಶ್ಚ ವಿರೋಧಯ ॥೪॥**

ಸಂಧಿಮಾಡಿಕೊಳ್ಳಲು ಯೋಗ್ಯರಾದವರೊಡನೆ ನೀನು ಸಂಧಿಯನ್ನು ಮಾಡಿಕೊಳ್ಳಬೇಕು. ವಿರೋಧಿಸಬೇಕಾದವರನ್ನು ಎದುರಿಸಲೇಬೇಕು.

**ಸಪ್ತಾಙ್ಗಸ್ಯ ಚ ರಾಜ್ಯಸ್ಯ ವಿಪರೀತಂ ಯ ಆಚರೇತ್ ।**
**ಗುರುರ್ವಾ ಯದಿ ವಾ ಮಿತ್ರಂ ಪ್ರತಿಹನ್ತವ್ಯ ಏವ ಸಃ ॥೫॥**

ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ ಮತ್ತು ಬಲ ಗಳೆಂಬ ಸಪ್ತಾಂಗಗಳಿಂದ ಯುಕ್ತವಾದ ರಾಜ್ಯಕ್ಕೆ ಯಾವನು ಪ್ರಾತಿಕೂಲ್ಯವನ್ನು ಉಂಟುಮಾಡುತ್ತಾನೆಯೋ–ಅವನು ಗುರುವಾಗಿದ್ದರೂ ಸರಿಯೆ, ಮಿತ್ರನಾಗಿದ್ದರೂ ಸರಿಯೆ–ಪ್ರಾಣಾಂತವಾದ ಶಿಕ್ಷೆಗೆ ಅರ್ಹನಾಗುತ್ತಾನೆ. (ಅಂತಹ ದೇಶದ್ರೋಹಿಯನ್ನು ಗುರುವೆಂದಾಗಲೀ–ಮಿತ್ರನೆಂದಾಗಲೀ ಪರಿಗಣಿಸಹೋಗದೇ ವಧಿಸಬೇಕು. )

ಆಚಾರ್ಯರಾದ ಬೃಹಸ್ಪತಿಗಳ ಅಭಿಪ್ರಾಯದಂತೆ ರಾಜಾಧಿಕಾರದ ವಿಷಯದಲ್ಲಿ ರಾಜನಾದ ಮರುತ್ತನು ಹೇಳಿದ ಪುರಾತನವಾದ ಒಂದು ಶ್ಲೋಕವನ್ನು ಉದಾಹರಿಸುತ್ತೇನೆ. ಕೇಳು, ಯುಧಿಷ್ಠಿರ!

**ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಪ್ರತಿಪನ್ನಸ್ಯ ದಣ್ಡೋ ಭವತಿ ಶಾಶ್ವತಃ ॥೭॥**

ದುರಹಂಕಾರದಿಂದ ಅಭಿಭೂತನಾಗಿ 'ಯಾವ ಕಾರ್ಯವನ್ನು ಮಾಡ ಬೇಕು', 'ಯಾವ ಕಾರ್ಯವನ್ನು ಮಾಡಬಾರದು'–ಎಂಬುದನ್ನೇ ತಿಳಿದು ಕೊಳ್ಳದೇ ತಪ್ಪುಹಾದಿಯನ್ನು ಹಿಡಿದಿರುವವನು ಆಚಾರ್ಯನೇ ಆಗಿದ್ದರೂ ಶಿಕ್ಷೆಗೆ ಅರ್ಹನೆಂಬುದು ಸನಾತನಧರ್ಮವಾಗಿದೆ.

ರಾಷ್ಟ್ರದ ಹಿತದೃಷ್ಟಿಯಿಂದ ಮಗನನ್ನೇ ತ್ಯಾಗಮಾಡಿದ ರಾಜರೂ ಇದ್ದಾರೆ.

**ಬಾಹೋಃ ಪುತ್ರೇಣ ರಾಜ್ಞಾ ಚ ಸಗರೇಣ ಚ ಧೀಮತಾ ।**
**ಅಸಮಞ್ಜಾಃ ಸುತೋ ಜ್ಯೇಷ್ಠಸ್ತ್ಯಕ್ತಃ ಪೌರಹಿತೈಷಿಣಾ ॥೮॥**

ಬಾಹುರಾಜನ ಮಗನಾದ, ಧೀಮಂತನಾದ, ಸಗರಚಕ್ರವರ್ತಿಯು ಪುರಜನರಿಗೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದ ಹಿರಿಯಮಗನಾದ ಅಸಮಂಜಸನನ್ನೇ ತ್ಯಾಗಮಾಡಿದನು. ಅಸಮಂಜಸನು ಪುರಜನರ ಮಕ್ಕಳನ್ನು ಎತ್ತಿಕೊಂಡು ಹೋಗಿ ಸರಯೂನದಿಯಲ್ಲಿ ಮುಳುಗಿಸಿಬಿಡುತ್ತಿದ್ದನು. ಆ ದುಷ್ಕಾರ್ಯಕ್ಕಾಗಿ ಸಗರನು ಮಗನನ್ನು ಧಿಕ್ಕರಿಸಿ ಕಾಡಿಗಟ್ಟಿದನು.

ಉದ್ದಾಲಕಮುನಿಯು ಅತ್ಯಂತಪ್ರಿಯಪುತ್ರನಾದ ಮತ್ತು ಮಹಾ ತಪಸ್ವಿಯಾದ ಶ್ವೇತಕೇತುವನ್ನು–ಬ್ರಾಹ್ಮಣರೊಡನೆ ವಂಚನೆಯ ವ್ಯವಹಾರ ಕ್ಕಾಗಿ–ಪರಿತ್ಯಜಿಸಿದನು.

**ಲೋಕರಞ್ಜನಮೇವಾತ್ರ ರಾಜ್ಞಾಂ ಧರ್ಮಃ ಸನಾತನಃ ।**
**ಸತ್ಯಸ್ಯ ರಕ್ಷಣಂ ಚೈವ ವ್ಯವಹಾರಸ್ಯ ಚಾರ್ಜವಮ್ ॥೧೧॥**

ಆದುದರಿಂದ ಪ್ರಜೆಗಳನ್ನು ಸಂತೋಷಗೊಳಿಸುವುದೇ ರಾಜರ ಅತಿ ಮುಖ್ಯವಾದ ಸನಾತನಧರ್ಮವಾಗಿದೆ. ಇದರ ಜೊತೆಗೆ ರಾಜನಾದವನಿಗೆ ಸತ್ಯದ ರಕ್ಷಣೆಯೂ–ವ್ಯವಹಾರದಲ್ಲಿ ಸರಳತೆಯೂ ಮುಖ್ಯವಾದ ಧರ್ಮ ಗಳಾಗಿವೆ.

**ನ ಹಿಂಸ್ಯಾತ್ಪರವಿತ್ತಾನಿ ದೇಯಂ ಕಾಲೇ ಚ ದಾಪಯೇತ್ ।**
**ವಿಕ್ರಾನ್ತಃ ಸತ್ಯವಾಕ್ಕ್ಷಾನ್ತೋ ನೃಪೋ ನ ಚಲತೇ ಪಥಃ ॥೧೨॥**

ಇತರರ ಸ್ವತ್ತನ್ನು ನಾಶಗೊಳಿಸಬಾರದು. ಒಬ್ಬನಿಗೆ ಕೊಡಬೇಕಾದ ದ್ರವ್ಯವನ್ನು ಆಯಾ ಕಾಲದಲ್ಲಿಯೇ ಕೊಟ್ಟುಬಿಡಬೇಕು ಅಥವಾ ಭೃತ್ಯರಿಗೆ ಕೊಡಬೇಕಾದ ವೇತನವನ್ನು ಗೊತ್ತುಪಡಿಸಿದ ಕಾಲಗಳಲ್ಲಿ ಕೊಟ್ಟುಬಿಡಬೇಕು. (ಪ್ರಜೆಗಳು ಕೊಡಬೇಕಾದ ಕಂದಾಯವೇ ಮೊದಲಾದುವನ್ನು ಸಕಾಲದಲ್ಲಿ ಕೊಡುವಂತೆ ವ್ಯವಸ್ಥೆಮಾಡಬೇಕು.) ಪರಾಕ್ರಮಿಯಾದ, ಸತ್ಯನಿಷ್ಠನಾದ ಮತ್ತು ದಯಾಪರನಾದ ರಾಜನು ಧರ್ಮಮಾರ್ಗದಿಂದ ಎಂದಿಗೂ ವಿಚಲಿತನಾಗುವುದಿಲ್ಲ.

**ಆತ್ಮವಾಂಶ್ಚ ಜಿತಕ್ರೋಧಃ ಶಾಸ್ತ್ರಾರ್ಥಕೃತನಿಶ್ಚಯಃ ।**
**ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಸತತಂ ರತಃ ॥೧೩॥**

**ತ್ರಯ್ಯಾಂ ಸಂವೃತಮನ್ತ್ರಶ್ಚ ರಾಜಾ ಭವಿತುಮರ್ಹತಿ ।**
**ವೃಜಿನಂ ಚ ನರೇನ್ದ್ರಾಣಾಂ ನಾನ್ಯಚ್ಚಾ ರಕ್ಷಣಾತ್ಪರಮ್ ॥೧೪॥**

ಮನಸ್ಸನ್ನು ಅಧೀನದಲ್ಲಿಟ್ಟುಕೊಂಡಿರುವವನು, ಕ್ರೋಧವನ್ನು ಜಯಿಸಿರುವವನು, ಶಾಸ್ತ್ರಗಳ ಸಿದ್ಧಾಂತಗಳಲ್ಲಿ ನಿಶ್ಚಿತವಾದ ಜ್ಞಾನವುಳ್ಳವನು, ಧರ್ಮಾರ್ಥ-ಕಾಮ-ಮೋಕ್ಷಗಳ ಸಿದ್ಧಿಯಲ್ಲಿ ಸದಾ ನಿರತನಾಗಿರತಕ್ಕವನು, ಮೂರು ವೇದಗಳ ರಹಸ್ಯಗಳನ್ನೂ ತಿಳಿದಿರತಕ್ಕವನು, ಗುಪ್ತಾಲೋಚನೆಗಳನ್ನು ನಿಗೂಢವಾಗಿಟ್ಟಿರುವವನು–ರಾಜನಾಗಲು ಯೋಗ್ಯನಾಗಿರುತ್ತಾನೆ. ಪ್ರಜೆಗಳನ್ನು ರಕ್ಷಣೆಮಾಡದೇ ಇರುವುದಕ್ಕಿಂತಲೂ ಮಿಗಿಲಾದ ಪಾಪವು ರಾಜನಿಗೆ ಬೇರೊಂದಿಲ್ಲ. (ರಾಜನು ಧರ್ಮದಿಂದ ಪ್ರಜೆಗಳನ್ನು ರಕ್ಷಣೆ ಮಾಡದಿದ್ದರೆ ಕರ್ತವ್ಯಭ್ರಷ್ಟನಾಗುವುದು ಮಾತ್ರವಲ್ಲದೇ–ಪಾಪಿಷ್ಠನೂ ಆಗುತ್ತಾನೆ.)

**ಚಾತುರ್ವರ್ಣ್ಯಸ್ಯ ಧರ್ಮಾಶ್ಚ ರಕ್ಷಿತವ್ಯಾ ಮಹೀಕ್ಷಿತಾ ।**
**ಧರ್ಮಸಂಕರರಕ್ಷಾ ಚ ರಾಜ್ಞಾಂ ಧರ್ಮಃ ಸನಾತನಃ ॥೧೫॥**

ರಾಜನಾದವನು ಚಾತುರ್ವರ್ಣ್ಯದ (ಬ್ರಹ್ಮ-ಕ್ಷತ್ರಾದಿ ನಾಲ್ಕು ವರ್ಣದವರ) ಧರ್ಮಗಳನ್ನೂ ರಕ್ಷಿಸಬೇಕು. ಧರ್ಮಸಂಕರವಾಗದಂತೆ (ವರ್ಣಸಂಕರವಾಗದಂತೆ) ಪ್ರಜೆಗಳನ್ನು ರಕ್ಷಣೆಮಾಡುವುದೂ ರಾಜರ ಸನಾತನವಾದ ಧರ್ಮವಾಗಿದೆ. (ಆಯಾ ವರ್ಣದವರು ತಮ್ಮ ವರ್ಣಗಳಿಗೆ ಸಂಬಂಧಿಸಿದಂತೆ ಅನುಷ್ಠಾನಮಾಡಲು ರಕ್ಷಣೆಯನ್ನು ನೀಡಬೇಕು ಮತ್ತು ವರ್ಣಸಂಕರವಾಗಲು ಅವಕಾಶಕೊಡಬಾರದು–ಇದು ರಾಜನ ಮುಖ್ಯ ಕರ್ತವ್ಯವಾಗಿದೆ. )

**ನ ವಿಶ್ವಸೇಚ್ಚ ನೃಪತಿರ್ನ ಚಾತ್ಯರ್ಥಂ ಚ ವಿಶ್ವಸೇತ್ ।**
***ಷಾಡ್ಗುಣ್ಯಗುಣದೋಷಾಂಶ್ಚ ನಿತ್ಯಂ ಬುದ್ಧ್ಯಾವಲೋಕಯೇತ್ ॥೧೬॥**

ರಾಜನಾದವನು ಯಾರಲ್ಲಿಯೂ ವಿಶ್ವಾಸವನ್ನಿಡಬಾರದು. ವಿಶ್ವಾಸಕ್ಕೆ ಪಾತ್ರರಾದವರ ವಿಷಯದಲ್ಲಿಯೂ ಅತಿಯಾದ ವಿಶ್ವಾಸವನ್ನಿಡಬಾರದು.

---

* ಶತ್ರುವು ತನಗಿಂತಲೂ ಬಲಿಷ್ಠನಾದವನೆಂದು ತಿಳಿದುಬಂದರೆ ಶತ್ರುವಿನೊಡನೆ ಶಾಂತಿಯ ಒಪ್ಪಂದವನ್ನು ಮಾಡಿಕೊಳ್ಳುವುದಕ್ಕೆ ಸಂಧಿ ಎಂದು ಹೆಸರು. ಶತ್ರುವು ತನಗೆ

ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯಗಳಲ್ಲಿರುವ ಗುಣ-ದೋಷಗಳನ್ನು ಅನುದಿನವೂ ತನ್ನ ಬುದ್ಧಿಯಿಂದ ಪರಿಶೀಲಿಸುತ್ತಿರಬೇಕು.

**ದ್ವಿಟ್ಛಿದ್ರದರ್ಶೀ ನೃಪತಿರ್ನಿತ್ಯಮೇವ ಪ್ರಶಸ್ಯತೇ ।**
**ತ್ರಿವರ್ಗೇ ವಿದಿತಾರ್ಥಶ್ಚ ಯುಕ್ತಚಾರೋಪಧಿಶ್ಚ ಯಃ ॥೧೭॥**

ಶತ್ರುಗಳಲ್ಲಿರಬಹುದಾದ ಛಿದ್ರಗಳನ್ನು (ನ್ಯೂನತೆಗಳನ್ನು) ಸದಾಕಾಲದಲ್ಲಿಯೂ ತಿಳಿದುಕೊಳ್ಳುವ ರಾಜನು ಪ್ರಜೆಗಳ ಪ್ರಶಂಸೆಗೆ ಪಾತ್ರನಾಗುತ್ತಾನೆ. ಯಾವ ರಾಜನು ಧರ್ಮಾರ್ಥ-ಕಾಮಗಳ ತತ್ತ್ವವನ್ನು ಸಂಪೂರ್ಣವಾಗಿ ತಿಳಿದಿರುತ್ತಾನೆಯೋ–ಶತ್ರುಪಕ್ಷದ ಗುಪ್ತಮಂತ್ರಾಲೋಚನೆಗಳನ್ನು ತಿಳಿದುಕೊಳ್ಳಲು ಸಮರ್ಥರಾದ ಗೂಢಚಾರರನ್ನಿಟ್ಟುಕೊಂಡಿರುವನೋ ಮತ್ತು ಶತ್ರುಪಕ್ಷದ ರಾಜನ ಮಂತ್ರಿಗಳನ್ನೂ ಸೇನಾಪತಿಗಳನ್ನೂ ಧನ ಮತ್ತು ಅಧಿಕಾರಗಳ ಲೋಭವನ್ನು ತೋರಿಸಿ ತನ್ನವರನ್ನಾಗಿ ಮಾಡಿಕೊಂಡಿರುವನೋ–ಅಂತಹ ರಾಜನೂ ಪ್ರಜೆಗಳ ಪ್ರಶಂಸೆಗೆ ಪಾತ್ರನಾಗುತ್ತಾನೆ.

**ಕೋಶಸ್ಯೋಪಾರ್ಜನರತಿರ್ಯಮವೈಶ್ರವಣೋಪಮಃ ।**
**ವೇತ್ತಾ ಚ ದಶವರ್ಗಸ್ಯ ಸ್ಥಾನವೃದ್ಧಿಕ್ಷಯಾತ್ಮನಃ ॥೧೮॥**

---

ಸಮಾನನೆಂದು ತಿಳಿದು ಬಂದರೆ ಅವನೊಡನೆ ವಿರಸವನ್ನು ಮುಂದುವರಿಸುವುದಕ್ಕೆ ವಿಗ್ರಹವೆಂದು ಹೆಸರು. ಶತ್ರುವು ದುರ್ಬಲನಾಗಿರುವನೆಂದು ತಿಳಿದಾಗ ಅವನೊಡನೆ ಯುದ್ಧಮಾಡಲು ಹೋಗುವುದಕ್ಕೆ ಯಾನವೆಂದು ಹೆಸರು. ಶತ್ರುವು ತನಗಿಂತಲೂ ಬಲಿಷ್ಠನಾಗಿದ್ದು ತನ್ನ ಮೇಲೆ ಆಕ್ರಮಣನಡೆಸಲು ಬಂದಾಗ ಕೋಟೆ-ಕೊತ್ತಲುಗಳನ್ನು ಮುಚ್ಚಿಕೊಂಡು ಆತ್ಮಸಂರಕ್ಷಣೆಮಾಡಿಕೊಳ್ಳುವುದಕ್ಕೆ ಆಸನವೆಂದು ಹೆಸರು. ಶತ್ರುವು ಆಗಮಿಸಿದ ಕಾಲದಲ್ಲಿ ತನ್ನಲ್ಲಿರುವ ಅರ್ಧಸೈನ್ಯವನ್ನು ಶತ್ರುಪಕ್ಷದ ಉಗ್ರಾಣಗಳಲ್ಲಿರುವ ಆಹಾರಪದಾರ್ಥಗಳನ್ನು ನಾಶಗೊಳಿಸುವ ಸಲುವಾಗಿ ಕಳುಹಿಸಬೇಕು. ಉಳಿದ ಅರ್ಧ ಸೈನ್ಯವನ್ನು ಆತ್ಮರಕ್ಷಣೆಗಾಗಿ ಇಟ್ಟುಕೊಳ್ಳಬೇಕು. ಇದಕ್ಕೆ ದ್ವೈಧೀಭಾವವೆಂದು ಹೆಸರು. ತಾನು ಬಹಳ ದುರ್ಬಲನಾಗಿರುವೆನೆಂದು ತಿಳಿದಾಗ ಶತ್ರುಗಳಿಗೆ ಶತ್ರುಗಳಾದ ಧಾರ್ಮಿಕರಾದ ಇತರ ರಾಜರನ್ನು ಆಶ್ರಯಿಸಿ ಶತ್ರುವನ್ನು ಧ್ವಂಸಮಾಡಬೇಕು. ಇದಕ್ಕೆ ಸಮಾಶ್ರಯವೆಂದು ಹೆಸರು. ಈ ವಿಚಾರಗಳೆಲ್ಲವನ್ನೂ ರಾಜನೇ ಸಂಪೂರ್ಣವಾಗಿ ಯೋಚಿಸಿ ಕಾರ್ಯಪ್ರವೃತ್ತನಾಗಬೇಕು.

ರಾಜನು ರಾಜ್ಯದ ಬೊಕ್ಕಸವನ್ನು ತುಂಬುವುದರಲ್ಲಿ ನಿರತನಾಗಿರಬೇಕು. ನ್ಯಾಯವಿಧಾನದಲ್ಲಿ ಯಮರಾಜನಂತೆಯೂ–ದ್ರವ್ಯಸಂಗ್ರಹದಲ್ಲಿ ಕುಬೇರನಂತೆಯೂ ಇರಬೇಕು. ಸ್ಥಾನ, ವೃದ್ಧಿ ಮತ್ತು ಕ್ಷಯಗಳಿಗೆ ಕಾರಣಭೂತಗಳಾದ ಶತ್ರುಪಕ್ಷದ ಐದು ವಿಭಾಗಗಳನ್ನೂ ಮತ್ತು ತನ್ನ ಪಕ್ಷದ ಐದು ವಿಭಾಗಗಳನ್ನೂ ಚೆನ್ನಾಗಿ ತಿಳಿದುಕೊಂಡಿರಬೇಕು.*

**ಅಭೃತಾನಾಂ ಭವೇದ್ಭರ್ತಾ ಭೃತಾನಾಮನ್ವವೇಕ್ಷಕಃ ।**
**ನೃಪತಿಃ ಸುಮುಖಶ್ಚ ಸ್ಯಾತ್ಸ್ಮಿತಪೂರ್ವಾಭಿಭಾಷಿತಾ ॥೧೯॥**

ತನ್ನ ರಾಜ್ಯದಲ್ಲಿ ಭರಣ-ಪೋಷಣೆಗಳಿಲ್ಲದೇ ಯಾರು ಅನಾಥರಾಗಿರುತ್ತಾರೆಯೋ ಅಂತಹವರ ಭರಣ-ಪೋಷಣೆಗಳಿಗೆ ರಾಜನು ಒಡನೆಯೇ ವ್ಯವಸ್ಥೆಮಾಡಬೇಕು. ಯಾರ ಭರಣ-ಪೋಷಣೆಗಳನ್ನು ರಾಜನು ನಡೆಸುತ್ತಿರುವನೋ ಅಂತಹವರಿಗೆ ವಹಿಸಿಕೊಟ್ಟಿರುವ ಕಾರ್ಯಗಳ ವಿಧಾನವನ್ನು ಪರಿಶೀಲಿಸುತ್ತಿರಬೇಕು. ರಾಜನು ಇತರರೊಡನೆ ಮಾತನಾಡುವಾಗ ಯಾವಾಗಲೂ ಪ್ರಸನ್ನಮುಖನಾಗಿರಬೇಕು ಮತ್ತು ಮಂದಸ್ಮಿತನಾಗಿರಬೇಕು.

**ಉಪಾಸಿತಾ ಚ ವೃದ್ಧಾನಾಂ ಜಿತತನ್ದ್ರಿರಲೋಲುಪಃ ।**
**ಸತಾಂ ವೃತ್ತೇ ಸ್ಥಿತಮತಿಃ ಸಂತೋಷ್ಯಶ್ಚಾರುದರ್ಶನಃ ॥೨೦॥**

ವೃದ್ಧರ ಸೇವೆಯನ್ನು ಮಾಡಬೇಕು. (ಅವರು ತಮ್ಮ ಅನುಭವದಿಂದ ಹೇಳುವ ವಿಷಯಗಳನ್ನು ಗ್ರಹಿಸಬೇಕು.) ಆಲಸ್ಯವನ್ನು ಜಯಿಸಬೇಕು. ಮೃಗಯಾದಿ ವ್ಯಸನಗಳಲ್ಲಿ ಹೆಚ್ಚು ಲೋಲುಪನಾಗಬಾರದು. ಸತ್ಪುರುಷರ ನಡೆ-ನುಡಿಗಳಲ್ಲಿಯೇ ಬುದ್ಧಿಯನ್ನು ಸ್ಥಿರವಾಗಿಟ್ಟಿರಬೇಕು. (ಸತ್ಪುರುಷರು ಅನುಸರಿಸುವ ಮಾರ್ಗವನ್ನೇ ಅನುಸರಿಸಬೇಕು.) ಇತರರು ಮಾಡಿದ ದೇಶಹಿತವಾದ ಕಾರ್ಯಗಳಿಗೆ ಸಂತೋಷವನ್ನು ವ್ಯಕ್ತಪಡಿಸಬೇಕು. ಸಂದರ್ಶಿ

---

* ದಶವರ್ಗಗಳು : ಮಂತ್ರಿ, ರಾಷ್ಟ್ರ , ದುರ್ಗ, ಕೋಶ, ಮತ್ತು ದಂಡ–ಈ ಐದನ್ನು 'ಪ್ರಕೃತಿ' ಎಂಬ ಹೆಸರಿನಿಂದ ಕರೆಯುತ್ತಾರೆ. ತನ್ನ ಕಡೆಯವರು ಮತ್ತು ಶತ್ರುಗಳ ಕಡೆಯವರು ಸೇರಿದರೆ ಇದು ದಶವರ್ಗವಾಗುತ್ತದೆ. ಉಭಯಪಕ್ಷಗಳಲ್ಲಿಯೂ ಈ ಐದು ವಿಭಾಗಗಳೂ ಸಮಾನವಾಗಿದ್ದರೆ ಅದಕ್ಕೆ ಸ್ಥಾನವೆನ್ನುತ್ತಾರೆ. ಈ ಐದರಲ್ಲಿ ಶತ್ರುಪಕ್ಷದಲ್ಲಿ ಪ್ರಾಬಲ್ಯವಿದ್ದರೆ ಕ್ಷಯಸಾಧಕವಾಗುತ್ತದೆ. ಶತ್ರುಪಕ್ಷಕ್ಕಿಂತಲೂ ತನ್ನ ಪಕ್ಷದಲ್ಲಿ ಈ ಐದರ ಅಧಿಕಪ್ರಾಬಲ್ಯವಿದ್ದರೆ ವೃದ್ಧಿಸಾಧಕವಾಗುತ್ತದೆ.

ಸಲು ಬಂದವರಿಗೆ ಸುಂದರನಾಗಿ ಕಾಣುವಂತೆ ಮನಮೋಹಕವಾದ ವಸ್ತ್ರಾಭರಣಗಳನ್ನು ಧರಿಸಬೇಕು.

**ನ ಚಾದದೀತ ವಿತ್ತಾನಿ ಸತಾಂ ಹಸ್ತಾತ್ಕದಾಚನ ।**
**ಅಸದ್ಭ್ಯಶ್ಚ ಸಮಾದದ್ಯಾತ್ಸದ್ಭ್ಯಸ್ತು ಪ್ರತಿಪಾದಯೇತ್ ॥೨೧॥**

ಯಾವುದೇ ಕಾರಣದಿಂದಲೂ ಯಾವಾಗಲೂ ಸತ್ಪುರುಷರಿಂದ ಧನವನ್ನು ತೆಗೆದುಕೊಳ್ಳಬಾರದು. ಅಸಾಧುಪುರುಷರಿಂದ (ದುಷ್ಟರಿಂದ) ದಂಡದ ರೂಪದಲ್ಲಿ ಧನವನ್ನು ಸಂಗ್ರಹಿಸಬೇಕು. ಹಾಗೆ ಸಂಗ್ರಹಿಸಿದ ಧನದಲ್ಲಿ ಸ್ವಲ್ಪಭಾಗವನ್ನು ಸತ್ಪುರುಷರಿಗೆ ದಾನಮಾಡಬೇಕು.

**ಸ್ವಯಂ ಪ್ರಹರ್ತಾ ದಾತಾ ಚ ವಶ್ಯಾತ್ಮಾ ರಮ್ಯಸಾಧನಃ ।**
**ಕಾಲೇ ದಾತಾ ಚ ಭೋಕ್ತಾ ಚ ಶುದ್ಧಾಚಾರಸ್ತಥೈವ ಚ ॥೨೨॥**

ದುಷ್ಟರನ್ನು ತಾನೇ ದಂಡಿಸಬೇಕು. ದಾನಶೀಲನಾಗಿರಬೇಕು. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ಸುರಮ್ಯವಾದ (ಪ್ರಜೆಗಳಿಗೆ ಹಿತವಾದ) ಸಾಧನಗಳನ್ನು ಹೊಂದಿರಬೇಕು. ಕಾಲಕಾಲಕ್ಕೆ ದಾನಗಳನ್ನೂ ಮಾಡುತ್ತಿರಬೇಕು. ಐಶ್ವರ್ಯವನ್ನು ತಾನೂ ಉಪಯೋಗಿಸಬೇಕು. ನಿರಂತರವೂ ಶುದ್ಧವಾದ ಆಚಾರವುಳ್ಳವನಾಗಿರಬೇಕು. (ಸದಾಚಾರಿಯಾಗಿರಬೇಕು.)

**ಶೂರಾನ್ಭಕ್ತಾನಸಂಹಾರ್ಯಾನ್ಕುಲೇ ಜಾತಾನರೋಗಿಣಃ ।**
**ಶಿಷ್ಟಾಞ್ಶಿಷ್ಟಾಭಿಸಮ್ಬನ್ಧಾನ್ಮಾನಿನೋಽನವಮಾನಿನಃ ॥೨೩॥**

**ವಿದ್ಯಾವಿದೋ ಲೋಕವಿದಃ ಪರಲೋಕಾನ್ವವೇಕ್ಷಕಾನ್ ।**
**ಧರ್ಮೇ ಚ ನಿರತಾನ್ಸಾಧೂನಚಲಾನಚಲಾನಿವ ॥೨೪॥**

**ಸಹಾಯಾನ್ಸತತಂ ಕುರ್ಯಾದ್ರಾಜಾ ಭೂತಿಪುರಸ್ಕೃತಃ ।**
**ತೈಶ್ಚ ತುಲ್ಯೋ ಭವೇದ್ಭೋಗೈಶ್ಛತ್ರಮಾತ್ರಾಜ್ಞಯಾಧಿಕಃ ॥೨೫॥**

(ರಾಜನು ಎಂತಹವರನ್ನು ಸಹಾಯಕ್ಕಿಟ್ಟುಕೊಳ್ಳಬೇಕು ಮತ್ತು ಅವರನ್ನು ಹೇಗೆ ಕಂಡುಕೊಳ್ಳಬೇಕೆಂಬುದನ್ನು ಭೀಷ್ಮನು ಹೇಳುತ್ತಾನೆ.) “ಯುಧಿಷ್ಠಿರ! ಶೂರರನ್ನೂ, ನಿನ್ನ ಸೇವೆಯಲ್ಲಿಯೇ ಆಸಕ್ತರಾಗಿರತಕ್ಕವರನ್ನೂ, ಶತ್ರುಗಳು ತೋರಿಸುವ ಲೋಭಕ್ಕೆ ವಶರಾಗದವರನ್ನೂ, ಸತ್ಕುಲ

ಪ್ರಸೂತರನ್ನೂ, ನೀರೋಗದೃಢಕಾಯರನ್ನೂ, ಶಿಷ್ಟರನ್ನೂ, ಶಿಷ್ಟರಾದವರಿಗೆ ಬಂಧುಗಳಾಗಿರತಕ್ಕವರನ್ನೂ, ಮಾನಿಷ್ಠರನ್ನೂ, ಬೇರೆಯವರನ್ನು ಅಪಮಾನಗೊಳಿಸುವ ಸ್ವಭಾವವಿಲ್ಲದೇ ಇರುವವರನ್ನೂ, ವಿದ್ಯಾವಂತರನ್ನೂ, ಲೋಕವ್ಯವಹಾರಗಳನ್ನು ತಿಳಿದಿರತಕ್ಕವರನ್ನೂ, ಶತ್ರುಗಳ ವ್ಯವಹಾರಗಳನ್ನು ತಿಳಿದುಕೊಂಡಿರುವವರನ್ನೂ (ಪುಣ್ಯಲೋಕಾಪೇಕ್ಷಿಗಳನ್ನೂ), ಧರ್ಮದಲ್ಲಿಯೇ ನಿರತರಾದವರನ್ನೂ, ಸತ್ಪುರುಷರನ್ನೂ, ಪರ್ವತದಂತೆ ಸ್ಥಿರವಾಗಿರತಕ್ಕವರನ್ನೂ–ರಾಜನಾದವನು ತನ್ನ ಸಹಾಯಕರನ್ನಾಗಿ ಆರಿಸಿಕೊಳ್ಳಬೇಕು. ಅವರನ್ನು ಐಶ್ವರ್ಯಾದಿಗಳಿಂದ ಪುರಸ್ಕರಿಸಬೇಕು. ಇಂತಹ ಸಹಾಯಕರೆಲ್ಲರಿಗೂ ತನ್ನಂತೆಯೇ ಸುಖೋಪಭೋಗಗಳನ್ನು ಒದಗಿಸಿಕೊಡಬೇಕು. ಶ್ವೇತಚ್ಛತ್ರವನ್ನು ಧರಿಸುವುದು ಮತ್ತು ಆಜ್ಞೆಮಾಡುವುದು–ಈ ಎರಡರಿಂದ ಮಾತ್ರವೇ ರಾಜನು ತನ್ನ ಸಹಾಯಕರಿಗಿಂತ ಅಧಿಕನಾಗಿರಬೇಕು.

**ಪ್ರತ್ಯಕ್ಷಾ ಚ ಪರೋಕ್ಷಾ ಚ ವೃತ್ತಿಶ್ಚಾಸ್ಯ ಭವೇತ್ಸಮಾ ।**
**ಏವಂ ಕುರ್ವನ್ನರೇನ್ದ್ರೋಽಪಿ ನ ಖೇದಮಿಹ ವಿನ್ದತಿ ॥೨೬॥**

ಪ್ರತ್ಯಕ್ಷದಲ್ಲಿಯೇ ಆಗಲೀ, ಪರೋಕ್ಷದಲ್ಲಿಯೇ ಆಗಲೀ–ಸಹಾಯಕರೊಡನೆ ರಾಜನ ನಡವಳಿಕೆಯು ಒಂದೇ ಸಮನಾಗಿರಬೇಕು. ರಾಜನು ಹೀಗಿದ್ದುದಾದರೆ ಅವನಿಗೆ ಲೋಕದಲ್ಲಿ ಯಾವ ಖೇದವೂ ಉಂಟಾಗುವುದಿಲ್ಲ.

**ಸರ್ವಾಭಿಶಙ್ಕೀ ನೃಪತಿರ್ಯಶ್ಚ ಸರ್ವಹರೋ ಭವೇತ್ ।**
**ನ ಕ್ಷಿಪ್ರಮನೃಜುರ್ಲುಬ್ಧಃ ಸ್ವಜನೇನೈವ ವಧ್ಯತೇ ॥೨೭॥**

ಕಪಟಿಯೂ ಮತ್ತು ಮಹಾಲೋಭಿಯೂ ಆದ ಯಾವ ರಾಜನು ಎಲ್ಲರ ವಿಷಯದಲ್ಲಿಯೂ ಸಂದೇಹಪಡುತ್ತಾನೆಯೋ ಮತ್ತು ಲೋಭದಿಂದಾಗಿ ಪ್ರಜೆಗಳ ಧನ-ಕನಕ-ವಸ್ತು-ವಾಹನಗಳೆಲ್ಲವನ್ನೂ ಅಪಹರಿಸುತ್ತಾನೆಯೋ ಅಂತಹ ರಾಜನು ಸ್ವಜನರಿಂದಲೇ ವಧಿಸಲ್ಪಡುತ್ತಾನೆ.

**ಶುಚಿಸ್ತು ಪೃಥಿವೀಪಾಲೋ ಲೋಕಚಿತ್ತಗ್ರಹೇ ರತಃ ।**
**ನ ಪತತ್ಯರಿಭಿರ್ಗ್ರಸ್ತಃ ಪತಿತಶ್ಚಾವತಿಷ್ಠತೇ ॥೨೮॥**

ಯಾವ ಭೂಪಾಲನು ಅಂತರಂಗ-ಬಹಿರಂಗಗಳೆರಡರಲ್ಲಿಯೂ ಶುದ್ಧ

ನಾಗಿ ಸೌಜನ್ಯದಿಂದಲೂ ಮತ್ತು ಪ್ರಜೆಗಳಿಗೆ ಹಿತವಾದ ಕಾರ್ಯಗಳನ್ನು ಮಾಡುವುದರಿಂದಲೂ ಪ್ರಜೆಗಳ ಮನಸ್ಸನ್ನು ಆಕರ್ಷಿಸುವುದರಲ್ಲಿಯೇ ನಿರತನಾಗಿರುವನೋ–ಅಂತಹ ರಾಜನು ಶತ್ರುಗಳಿಂದ ಯಾವುದೇ ಕಾರಣ ದಿಂದಲೂ ಆಕ್ರಮಿಸಲ್ಪಟ್ಟು ತನ್ನ ಪದವಿಯಿಂದ ಕೆಳಕ್ಕೆ ಬೀಳುವುದಿಲ್ಲ. ಒಂದು ವೇಳೆ ಅಕಸ್ಮಾತ್ತಾಗಿ ಶತ್ರುಗಳಿಂದ ರಾಜಪದವಿಯನ್ನು ಕಳೆದುಕೊಂಡರೂ ಸಕಲಗುಣಸಂಪನ್ನರಾದ ಸಹಾಯಕರ ನೆರವಿನಿಂದ ಬಹಳ ಬೇಗ ಮತ್ತೆ ರಾಜ್ಯವನ್ನು ಪಡೆದುಕೊಳ್ಳುತ್ತಾನೆ.

**ಅಕ್ರೋಧನೋ ಹ್ಯವ್ಯಸನೀ ಮೃದುದಣ್ಡೋ ಜಿತೇನ್ದ್ರಿಯಃ ।**
**ರಾಜಾ ಭವತಿ ಭೂತಾನಾಂ ವಿಶ್ವಾಸ್ಯೋ ಹಿಮವಾನಿವ ॥೨೯॥**

ಯಾವ ರಾಜನು ಕ್ರೋಧದಿಂದಲೂ, ದುರ್ವ್ಯಸನಗಳಿಂದಲೂ ರಹಿತನಾಗಿರುವನೋ–ಅಪರಾಧಿಗಳನ್ನು ಮೃದುವಾಗಿ ಶಿಕ್ಷಿಸುವನೋ ಮತ್ತು ಜಿತೇಂದ್ರಿಯನಾಗಿರುವನೋ–ಅಂತಹ ರಾಜನು ಹಿಮವಂತನಂತೆ ಪ್ರಪಂಚದಲ್ಲಿರುವ ಎಲ್ಲ ಪ್ರಾಣಿಗಳ ವಿಶ್ವಾಸಕ್ಕೂ ಪಾತ್ರನಾಗುತ್ತಾನೆ.

**ಪ್ರಾಜ್ಞಸ್ತ್ಯಾಗಗುಣೋಪೇತಃ ಪರರನ್ಧ್ರೇಷು ತತ್ಪರಃ ।**
**ಸುದರ್ಶಃ ಸರ್ವವರ್ಣಾನಾಂ ನಯಾಪನಯವಿತ್ತಥಾ ॥೩೦॥**

**ಕ್ಷಿಪ್ರಕಾರೀ ಜಿತಕ್ರೋಧಃ ಸುಪ್ರಸಾದೋ ಮಹಾಮನಾಃ ।**
**ಅರೋಷಪ್ರಕೃತಿರ್ಯುಕ್ತಃ ಕ್ರಿಯಾವಾನವಿಕತ್ಥನಃ ॥೩೧॥**

**ಆರಬ್ಧಾನ್ಯೇವ ಕಾರ್ಯಾಣಿ ಸುಪರ್ಯವಸಿತಾನಿ ಚ ।**
**ಯಸ್ಯ ರಾಜ್ಞಃ ಪ್ರದೃಶ್ಯನ್ತಿ ಸ ರಾಜಾ ರಾಜಸತ್ತಮಃ ॥೩೨॥**

ಪ್ರಾಜ್ಞನಾದವನು, ತ್ಯಾಗಶೀಲನು, ಶತ್ರುಗಳಲ್ಲಿರುವ ನ್ಯೂನತೆಯನ್ನು ತಿಳಿಯಲು ಸರ್ವದಾ ನಿರತನಾಗಿರತಕ್ಕವನು, ಎಲ್ಲ ವರ್ಣದವರನ್ನೂ ಚೆನ್ನಾಗಿ ನೋಡಿಕೊಳ್ಳುವವನು, ಸುನೀತಿ ಮತ್ತು ದುರ್ನೀತಿಗಳು ಯಾವುವೆಂಬುದನ್ನು ತಿಳಿದಿರತಕ್ಕವನು ( ನ್ಯಾಯಾನ್ಯಾಯವಿವೇಚನೆಯಲ್ಲಿ ಸಮರ್ಥನಾದವನು ), ಯಾವ ಕಾರ್ಯವನ್ನೇ ಆದರೂ ಬಹಳ ಬೇಗ ಮಾಡಿ ಮುಗಿಸುವವನು, ಕ್ರೋಧವನ್ನು ಜಯಿಸಿರತಕ್ಕವನು, ಆಶ್ರಿತರ ವಿಷಯದಲ್ಲಿ ಕೃಪೆದೋರುವವನು, ವಿಶಾಲಹೃದಯನು, ಕೋಮಲಸ್ವಭಾವದಿಂದ ಯುಕ್ತ

ನಾದವನು, ಕೋಪಿಸಿಕೊಳ್ಳುವ ಸ್ವಭಾವವಿಲ್ಲದವನು, ಯುಕ್ತಿಯುಕ್ತವಾಗಿ ನಡೆಯುವವನು, ಕಾರ್ಯದಲ್ಲಿ ತತ್ಪರನಾಗಿರತಕ್ಕವನು, ಆತ್ಮಪ್ರಶಂಸೆಯನ್ನು ಮಾಡಿಕೊಳ್ಳದವನು–ರಾಜರಲ್ಲಿಯೇ ಶ್ರೇಷ್ಠನಾಗುತ್ತಾನೆ. ಯಾವ ರಾಜನು ಮೊದಲು ಮಾಡಿದ (ಪ್ರಾರಂಭಿಸಿದ) ಕಾರ್ಯಗಳು ಸುಸೂತ್ರವಾಗಿ ಮುಗಿದಿರುವುದನ್ನೇ ಜನರು ನೋಡುತ್ತಾರೆಯೋ–ಅಂತಹ ರಾಜನು ಸರ್ವಶ್ರೇಷ್ಠನಾದ ರಾಜನಾಗುತ್ತಾನೆ. (ರಾಜ್ಯಕಾರ್ಯಗಳು ಆರಂಭವಾಗಿ ಮಧ್ಯದಲ್ಲಿ ಯಾವ ಕಾರಣದಿಂದಲೂ ನಿಂತುಹೋಗಬಾರದು. ಹಾಗೆ ನಿಂತುಹೋದರೆ ರಾಜನು ಪ್ರಜೆಗಳ ತಾತ್ಸಾರಕ್ಕೆ ಗುರಿಯಾಗುತ್ತಾನೆ. ಮುಗಿಸುವ ಸಾಮರ್ಥ್ಯವಿಲ್ಲದಿದ್ದಲ್ಲಿ ಆರಂಭಿಸಲೇಬಾರದು. ಆರಂಭಿಸಿದುದನ್ನು ಯಾವುದೇ ಕಷ್ಟವೊದಗಿದರೂ ನಿಲ್ಲಿಸದೇ ಸಕಾಲದಲ್ಲಿ ಮುಗಿಸಬೇಕು. ಹೀಗೆ ಮಾಡುವುದು ಹಿಂದಿನ ರಾಜರ ಧರ್ಮವಾಗಿದ್ದಿತು.)

**ಪುತ್ರಾ ಇವ ಪಿತುರ್ಗೇಹೇ ವಿಷಯೇ ಯಸ್ಯ ಮಾನವಾಃ ।**
**ನಿರ್ಭಯಾ ವಿಚರಿಷ್ಯನ್ತಿ ಸ ರಾಜಾ ರಾಜಸತ್ತಮಃ ॥೩೩॥**

ತಂದೆಯ ಮನೆಯಲ್ಲಿ ಮಕ್ಕಳು ಸರ್ವತಂತ್ರಸ್ವತಂತ್ರರಾಗಿ ಯಾವ ವಿಧವಾದ ಆತಂಕವೂ ಇಲ್ಲದೇ ಆಡಿಕೊಂಡಿರುವಂತೆ–ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ನಿರ್ಭಯವಾಗಿ ನಿರಾತಂಕವಾಗಿ ಜೀವನವನ್ನು ನಡೆಸುತ್ತಾರೆಯೋ–ಅಂತಹ ದೇಶದ ರಾಜನೇ ಎಲ್ಲ ರಾಜರಿಗಿಂತಲೂ ಶ್ರೇಷ್ಠನೆನಿಸಿಕೊಳ್ಳುತ್ತಾನೆ.

**ಅಗೂಢವಿಭವಾ ಯಸ್ಯ ಪೌರಾ ರಾಷ್ಟ್ರನಿವಾಸಿನಃ ।**
**ನಯಾಪನಯವೇತ್ತಾರಃ ಸ ರಾಜಾ ರಾಜಸತ್ತಮಃ ॥೩೪॥**

ಯಾವನ ರಾಜ್ಯದಲ್ಲಿ ಅಥವಾ ರಾಜಧಾನಿಯಲ್ಲಿ ವಾಸಮಾಡುವ ಪ್ರಜೆಗಳು (ಕಳ್ಳಕಾಕರು ಅಥವಾ ರಾಜಭಟರು ತಮ್ಮ ಐಶ್ವರ್ಯವನ್ನು ಅಪಹರಿಸುವರೆಂಬ ಭಯವಿಲ್ಲದೇ) ತಮ್ಮಲ್ಲಿರುವ ವೈಭವವನ್ನು ಬಹಿರಂಗವಾಗಿಯೇ ತೋರ್ಪಡಿಸಿಕೊಳ್ಳುತ್ತಿರುತ್ತಾರೆಯೋ ಮತ್ತು ನ್ಯಾಯಾನ್ಯಾಯಗಳನ್ನು ತಿಳಿದವರಾಗಿರುತ್ತಾರೆಯೋ–ಅಂತಹ ರಾಜ್ಯದ ರಾಜನೇ ಎಲ್ಲ ರಾಜರಿಗಿಂತಲೂ ಶ್ರೇಷ್ಠನು.

**ಸ್ವಕರ್ಮನಿರತಾ ಯಸ್ಯ ಜನಾ ವಿಷಯವಾಸಿನಃ ।**
**ಅಸಂಘಾತರತಾ ದಾನ್ತಾಃ ಪಾಲ್ಯಮಾನಾ ಯಥಾವಿಧಿ ॥೩೫॥**
**ವಶ್ಯಾ ನೇಯಾ ವಿಧೇಯಾಶ್ಚ ನ ಚ ಸಂಘರ್ಷಶೀಲಿನಃ ।**
**ವಿಷಯೇ ದಾನರುಚಯೋ ನರಾ ಯಸ್ಯ ಸ ಪಾರ್ಥಿವಃ ॥೩೬॥**

ಯಾವ ರಾಜನ ರಾಜ್ಯದ ಪ್ರಜೆಗಳು ಧರ್ಮದಿಂದ ಪರಿಪಾಲಿಸಲ್ಪಟ್ಟವರಾಗಿ ತಮ್ಮ-ತಮ್ಮ ಕರ್ತವ್ಯಗಳಲ್ಲಿ ನಿರತರಾಗಿರುವರೋ, ಶಾರೀರಸುಖದಲ್ಲಿಯೇ ನಿರತರಾಗಿರದೆ ಧರ್ಮತತ್ಪರರಾಗಿರುವರೋ, ಜಿತೇಂದ್ರಿಯರಾಗಿರುವರೋ, ರಾಜನಿಗೆ ವಶರಾಗಿಯೂ–ವಿಧೇಯರಾಗಿಯೂ ಇರುವರೋ, ಧರ್ಮಮಾರ್ಗದಲ್ಲಿ ಒಯ್ಯಲ್ಪಡತಕ್ಕವರಾಗಿರುವರೋ, ಜಗಳಗಂಟರಾಗಿರುವುದಿಲ್ಲವೋ, ದಾನಶೀಲರಾಗಿರುವರೋ–ಅಂತಹ ಪ್ರಜೆಗಳನ್ನು ಹೊಂದಿರುವ ರಾಜನೇ ನಿಜವಾದ ರಾಜನು.

**ನ ಯಸ್ಯ ಕೂಟಂ ಕಪಟಂ ನ ಮಾಯಾ ನ ಚ ಮತ್ಸರಃ ।**
**ವಿಷಯೇ ಭೂಮಿಪಾಲಸ್ಯ ತಸ್ಯ ಧರ್ಮಃ ಸನಾತನಃ ॥೩೭॥**

ಯಾವ ರಾಜನ ರಾಜ್ಯದಲ್ಲಿ ಕೂಟ (ಸುಳ್ಳು ಅಥವಾ ಮೋಸ) ವಾಗಲೀ, ಕಪಟ (ವಂಚನೆ) ವಾಗಲೀ, ಮಾಯಾವಿದ್ಯೆಯಾಗಲೀ (ಚಮತ್ಕಾರದಿಂದ ಧನವನ್ನು ಅಪಹರಿಸುವುದಾಗಲೀ), ಜನರಲ್ಲಿ ಪರಸ್ಪರ ಅಸೂಯೆಯಾಗಲೀ ಇಲ್ಲವೋ–ಅಂತಹ ರಾಜನ ಧರ್ಮವೇ ಸನಾತನ ಧರ್ಮವೆನಿಸಿಕೊಳ್ಳುತ್ತದೆ.

**ಯಃ ಸತ್ಕರೋತಿ ಜ್ಞಾನಾನಿ ಜ್ಞೇಯೇ ಪರಹಿತೇ ರತಃ ।**
**ಸತಾಂ ವರ್ತ್ಮಾನುಗಸ್ತ್ಯಾಗೀ ಸ ರಾಜಾ ರಾಜ್ಯಮರ್ಹತಿ ॥೩೮॥**

ಯಾವ ರಾಜನು ಜ್ಞಾನಗಳನ್ನು (ವಿದ್ಯೆಗಳನ್ನು) ಪ್ರೋತ್ಸಾಹಿಸುವನೋ, ಜ್ಞಾನಿಗಳನ್ನು ಸತ್ಕರಿಸುವನೋ, ಜ್ಞೇಯನಾದ ಪರಮಾತ್ಮನಲ್ಲಿಯೂ ಮತ್ತು ಪ್ರಜೆಗಳಿಗೆ ಹಿತವನ್ನುಂಟುಮಾಡುವುದರಲ್ಲಿಯೂ ನಿರತನಾಗಿರುವನೋ, ಸತ್ಪುರುಷರು ಅನುಸರಿಸುವ ಮಾರ್ಗವನ್ನೇ ಅನುಸರಿಸುವನೋ, ತ್ಯಾಗಶೀಲನೋ–ಅಂತಹ ರಾಜನು ರಾಜ್ಯಭಾರಮಾಡಲು ಯೋಗ್ಯನಾಗುತ್ತಾನೆ.

**ಯಸ್ಯ ಚಾರಾಶ್ಚ ಮನ್ತ್ರಾಶ್ಚ ನಿತ್ಯಂ ಚೈವ ಕೃತಾಕೃತಾಃ ।**
**ನ ಜ್ಞಾಯನ್ತೇ ಹಿ ರಿಪುಭಿಃ ಸ ರಾಜಾ ರಾಜ್ಯಮರ್ಹತಿ ॥೩೯॥**

ಯಾವ ರಾಜನ ಗೂಢಚಾರರೂ, ಗುಪ್ತವಾದ ಮಂತ್ರಾಲೋಚನೆಗಳೂ, ಅನುದಿನವೂ ಮಾಡುವ ನಿಶ್ಚಿತವಾದ ಕಾರ್ಯಗಳೂ ಮತ್ತು ಮುಂದೆ ಮಾಡಬೇಕಾದ ರಾಜಕಾರ್ಯಗಳೂ ಶತ್ರುಗಳಿಗೆ ತಿಳಿಯುವುದಿಲ್ಲವೋ–ಅಂತಹ ರಾಜನೇ ರಾಜ್ಯಭಾರಮಾಡಲು ಯೋಗ್ಯನಾಗಿರುತ್ತಾನೆ.

ಯುಧಿಷ್ಠಿರ! ಹಿಂದೆ ಮಹಾತ್ಮನಾದ ಶುಕ್ರನು ರಾಜನೊಬ್ಬನಿಗೆ ರಾಜೋಚಿತವಾದ ನೀತಿಯನ್ನು ಹೇಳುತ್ತಿದ್ದಾಗ ಈ ಶ್ಲೋಕವನ್ನು ಹೇಳಿರುವನು. ಅದನ್ನೇ ನಿನಗೂ ಹೇಳುವೆನು ; ಕೇಳು.

**ರಾಜಾನಂ ಪ್ರಥಮಂ ವಿನ್ದೇತ್ತತೋ ಭಾರ್ಯಾಂ ತತೋ ಧನಮ್ ।**
**ರಾಜನ್ಯಸತಿ ಲೋಕಸ್ಯ ಕುತೋ ಭಾರ್ಯಾ ಕುತೋ ಧನಮ್ ॥೪೦॥**

ಮನುಷ್ಯನು ಸುಖದಿಂದ ಬಾಳ್ವೆಯನ್ನು ನಡೆಸಬೇಕಾದರೆ ಮೊದಲು ಒಳ್ಳೆಯ ರಾಜನನ್ನು ಪಡೆದುಕೊಳ್ಳಬೇಕು. ಒಳ್ಳೆಯ ರಾಜನ ಆಶ್ರಯವು ಸಿಕ್ಕಿದನಂತರವೇ ಮದುವೆಯನ್ನು ಮಾಡಿಕೊಳ್ಳಬೇಕು. ಧನವನ್ನು ಸಂಗ್ರಹಿಸಬೇಕು. ಒಳ್ಳೆಯ ರಾಜನೇ ಸಿಕ್ಕದಿದ್ದರೆ ; ದುರ್ಮಾರ್ಗಿಯಾದ ರಾಜನ ಆಶ್ರಯದಲ್ಲಿಯೇ ಇರಬೇಕಾಗಿ ಬಂದರೆ ಅಥವಾ ರಾಜನೇ ಇಲ್ಲದಿದ್ದರೆ, ಮದುವೆಯನ್ನಾದರೂ ಏಕೆ ಮಾಡಿಕೊಳ್ಳಬೇಕು? ಧನವನ್ನಾದರೂ ಏಕೆ ಸಂಗ್ರಹಿಸಬೇಕು? ( ದುರ್ಮಾರ್ಗಿಯಾದ ರಾಜನ ರಾಜ್ಯದಲ್ಲಿ ಭಾರ್ಯೆಯಾಗಲೀ ಅರ್ಥಾತ್ ಸ್ತ್ರೀಯರಾಗಲೀ ಐಶ್ವರ್ಯವಾಗಲೀ, ಸುರಕ್ಷಿತವಾಗಿರುವುದಿಲ್ಲ. )

**ತದ್ರಾಜ್ಯೇ ರಾಜ್ಯಕಾಮಾನಾಂ ನಾನ್ಯೋ ಧರ್ಮಃ ಸನಾತನಃ ।**
**ಋತೇ ರಕ್ಷಾಂ ತು ವಿಸ್ಪಷ್ಟಾಂ ರಕ್ಷಾ ಲೋಕಸ್ಯ ಧಾರಿಣೀ ॥೪೨॥**

ಆದುದರಿಂದ ರಾಜ್ಯಾಪೇಕ್ಷಿಗಳಾದ ರಾಜರಿಗೆ, ರಾಜ್ಯದಲ್ಲಿ ಪ್ರಜೆಗಳನ್ನು ಚೆನ್ನಾಗಿ ಸಂರಕ್ಷಿಸುವುದಕ್ಕಿಂತಲೂ ಮಿಗಿಲಾದ ಸನಾತನಧರ್ಮವೇ ಮತ್ತೊಂದಿರುವುದಿಲ್ಲ. ಏಕೆಂದರೆ : ಪ್ರಜೆಗಳ ರಕ್ಷಣೆಯೆಂಬುದೇ ಲೋಕ

ವನ್ನು ಧರಿಸುವುದಾಗಿರುತ್ತದೆ. ( ಪ್ರಜೆಗಳನ್ನು ರಕ್ಷಿಸುವುದರಿಂದಲೇ ರಾಜ್ಯವು ಅಥವಾ ಲೋಕವು ಉಳಿದುಕೊಳ್ಳುತ್ತದೆ. ರಕ್ಷಣೆಯೇ ಇಲ್ಲದೇ ಪ್ರಜೆಗಳೆಲ್ಲರೂ ನಾಶವಾದರೆ ರಾಜ್ಯವೆಲ್ಲಿಯದು? ಲೋಕವೆಲ್ಲಿಯದು? ಆದುದರಿಂದ ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಬೇಕಾದುದು ರಾಜನ ಅತಿಮುಖ್ಯವಾದ ಸನಾತನ ಧರ್ಮ. )

ಯುಧಿಷ್ಠಿರ! ಪ್ರಚೇತಸನ ಮಗನಾದ ಮನುವು ರಾಜಧರ್ಮದ ವಿಷಯದಲ್ಲಿ ಎರಡು ಶ್ಲೋಕಗಳನ್ನು ಹೇಳಿದ್ದಾನೆ. ಏಕಾಗ್ರಚಿತ್ತನಾಗಿ ಆ ಎರಡು ಶ್ಲೋಕಗಳನ್ನೂ ಅವಧರಿಸು.

**ಷಡೇತಾನ್ಪುರುಷೋ ಜಹ್ಯಾದ್ಭಿನ್ನಾಂ ನಾವಮಿವಾರ್ಣವೇ ।**
**ಅಪ್ರವಕ್ತಾರಮಾಚಾರ್ಯಮನಧೀಯಾನಮೃತ್ವಿಜಮ್ ॥೪೪॥**

**ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಮ್ ।**
**ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಮ್ ॥೪೫॥**

ನಾವೆಯಲ್ಲಿ ಕುಳಿತು ಸಮುದ್ರಪ್ರಯಾಣವನ್ನು ಮಾಡುತ್ತಿರುವಾಗ ವಾತಾಘಾತದಿಂದ ಭಗ್ನವಾದ ನಾವೆಯನ್ನು ಪ್ರಯಾಣಿಕರು ಪ್ರಾಣಸಂರಕ್ಷಣೆಗಾಗಿ ಪರಿತ್ಯಜಿಸುವಂತೆ–ಮುಂದೆ ಹೇಳುವ ಆರು ಮಂದಿಯನ್ನು ಶ್ರೇಯಸ್ಕಾಮನಾದ ಮನುಷ್ಯನು ತ್ಯಜಿಸಬೇಕು.

ಧರ್ಮಾಧರ್ಮಗಳ ವಿಷಯದಲ್ಲಿ–ಕರ್ತವ್ಯಾಕರ್ತವ್ಯಗಳ ವಿಷಯದಲ್ಲಿ ಉಪದೇಶಮಾಡದಿರುವ ಆಚಾರ್ಯನನ್ನು ತ್ಯಜಿಸಬೇಕು. ಸಂಪೂರ್ಣವಾಗಿ ಅಧ್ಯಯನಮಾಡದಿರುವ ಋತ್ವಿಜನನ್ನು ತ್ಯಜಿಸಬೇಕು. ( ಸಂಪೂರ್ಣವಾಗಿ ವೇದಾಧ್ಯಯನಮಾಡದವನಿಗೆ ಆರ್ತ್ವಿಜ್ಯವನ್ನು ವಹಿಸಬಾರದು. ) ಪ್ರಜೆಗಳ ರಕ್ಷಣೆಯನ್ನು ಮಾಡಲು ಅಸಮರ್ಥನಾದ ರಾಜನನ್ನು ತ್ಯಜಿಸ ಬೇಕು. (ಅಂತಹ ರಾಜನನ್ನು ಪ್ರಜೆಗಳೆಲ್ಲರೂ ಸೇರಿ ರಾಜಪದವಿಯಿಂದ ಕಿತ್ತುಹಾಕಬೇಕು. ಅಥವಾ ಅಂತಹ ರಾಜನ ರಾಜ್ಯವನ್ನೇ ಬಿಟ್ಟು ಹೋಗ ಬೇಕು. ) ಯಾವಾಗಲೂ ಅಪ್ರಿಯವಾದ ಮಾತುಗಳನ್ನೇ ಹೇಳುವ ಅಥವಾ ಯಾವಾಗಲೂ ಹೇಳಿದುದಕ್ಕೆ ಬದಲು ಹೇಳುವ ಚಂಡಿಯಂತಹ ಭಾರ್ಯೆಯನ್ನು ಪರಿತ್ಯಜಿಸಬೇಕು. ಗ್ರಾಮದಲ್ಲಿಯೇ ಇರುವ ಇಚ್ಛೆಯುಳ್ಳ

ಗೋಪಾಲನನ್ನು ತ್ಯಜಿಸಬೇಕು. (ಗೋಪಾಲನು ಹಸುಗಳನ್ನು ಅರಣ್ಯಕ್ಕೆ ಹೊಡೆದುಕೊಂಡುಹೋಗಿ ಅಲ್ಲಿ ಸಾಯಂಕಾಲದವರೆಗೂ ಹಸುಗಳನ್ನು ಮೇಯಿಸುತ್ತಿದ್ದರೆ ಸಾಯಂಕಾಲವಾಗುತ್ತಲೇ ಗೋಶಾಲೆಗೆ ಬರುವ ಹಸುಗಳು ಯಥೇಚ್ಛವಾಗಿ ಹಾಲು ಕರೆಯುತ್ತವೆ. ಹಾಗಲ್ಲದೇ ಗೋಪಾಲನು ಗ್ರಾಮದಲ್ಲಿಯೇ ಇದ್ದುಬಿಟ್ಟರೆ ಹಸುಗಳ ಪಾಡೇನು? ಹಾಲು ಕೊಡದಿರುವು ದಕ್ಕಿಂತಲೂ ಹೆಚ್ಚಾಗಿ ಗೋವುಗಳಿಗೂ ಆಹಾರವಿಲ್ಲದೇ ಅವುಗಳಿಗೆ ಅತಿ ಯಾದ ಹಿಂಸೆಯೇ ಆಗುತ್ತದೆ. ಗೋವುಗಳ ಪೋಷಣೆಯು ಗೋಪಾಲನನ್ನೇ ಅವಲಂಬಿಸಿರುವುದರಿಂದ ಗ್ರಾಮದಲ್ಲಿಯೇ ನಿರಂತರವಾಗಿರಲು ಅಪೇಕ್ಷಿ ಸುವ ಗೋಪಾಲನನ್ನು ತ್ಯಾಗಮಾಡಿ ನಿರಂತರವಾಗಿ ಅರಣ್ಯದಲ್ಲಿಯೇ ಇದ್ದು ಗೋವುಗಳನ್ನು ರಕ್ಷಿಸಿ ಪೋಷಿಸುವ ಗೋಪಾಲನನ್ನು ಇಟ್ಟುಕೊಳ್ಳಬೇಕು.) ಅರಣ್ಯವಾಸವನ್ನು ಇಚ್ಛಿಸುವ ನಾಪಿತನನ್ನು ತ್ಯಜಿಸಬೇಕು. (ಕ್ಷುರಕರ್ಮ ವೆಂಬುದು ಶುಭಾಶುಭಗಳೆರಡರಲ್ಲಿಯೂ ಅತಿಮುಖ್ಯವಾದ ಕರ್ಮ. ಕ್ಷುರ ಕರ್ಮಕ್ಕೆ ನಾಪಿತನನ್ನೇ ಆಶ್ರಯಿಸಬೇಕು. ಅವನೇನಾದರೂ ಅರಣ್ಯಕ್ಕೆ ಹೋಗಿ ಕುಳಿತರೆ ಶುಭಾಶುಭಕರ್ಮಗಳು ಹೇಗೆ ನಡೆದಾವು? ನಾಪಿತನು ಯಾವಾಗಲೂ ಗ್ರಾಮದಲ್ಲಿಯೇ ಇರಬೇಕು. ಅರಣ್ಯವಾಸದಲ್ಲಿ ಅಪೇಕ್ಷೆ ಯುಳ್ಳ ನಾಪಿತನನ್ನು ತ್ಯಜಿಸಿ ಅವನ ಸ್ಥಳಕ್ಕೆ ಬೇರೊಬ್ಬ ನಾಪಿತನನ್ನು ನಿಯಮಿಸಿಕೊಳ್ಳಬೇಕು.)"

೫೭ನೆಯ ಅಧ್ಯಾಯವು ಮುಗಿಯಿತು.

೫೮ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಭೀಷ್ಮನಿಂದ ರಾಜ್ಯರಕ್ಷಣೆಯ ಸಾಧನೆಗಳ ವರ್ಣನೆ: ಸಾಯಂಕಾಲವಾಗುತ್ತಲೇ ಯುಧಿಷ್ಠಿರಾದಿಗಳು ಸಂಧ್ಯಾದಿ ನಿತ್ಯಕರ್ಮಗಳಿಗಾಗಿ ಹಸ್ತಿನಾಪಟ್ಟಣಕ್ಕೆ ಹಿಂದಿರುಗಿದುದು

ಭೀಷ್ಮನು ಹೇಳುತ್ತಾನೆ :

ಯುಧಿಷ್ಠಿರ! ನಾನು ಈಗ ಹೇಳಿರುವುದೆಲ್ಲವೂ ಮಹಾಸಮುದ್ರ ರೂಪವಾದ ರಾಜಧರ್ಮಗಳನ್ನು ಕಡೆದು ತೆಗೆದ ಬೆಣ್ಣೆಯಂತಹುದು. (ರಾಜ ಧರ್ಮಗಳ ಸಾರಾಂಶ). ಭಗವಾನ್ ಬೃಹಸ್ಪತಿಯೂ ನ್ಯಾಯಾನುಕೂಲವಾದ

ಈ ಧರ್ಮವನ್ನೇ ಪ್ರಶಂಸೆಮಾಡುತ್ತಾನೆ. ಧರ್ಮಭೃತರಲ್ಲಿ ಶ್ರೇಷ್ಠನಾದವನೇ! ಭಗವಾನ್ ವಿಶಾಲಾಕ್ಷ, ಮಹಾತಪಸ್ವಿಯಾದ ಶುಕ್ರಾಚಾರ್ಯ, ಸಹಸ್ರಾಕ್ಷನಾದ ಮಹೇಂದ್ರ, ಪ್ರಚೇತಸನ ಮಗನಾದ ಮನು, ಭಗವಾನ್ ಭರದ್ವಾಜ ಮತ್ತು ಮುನಿಶ್ರೇಷ್ಠನಾದ ಗೌರಶಿರಸ–ಈ ಎಲ್ಲ ರಾಜಶಾಸ್ತ್ರ ಪ್ರಣೇತಾರರೂ ಬ್ರಾಹ್ಮಣಪ್ರಿಯರೂ ಮತ್ತು ಬ್ರಹ್ಮವಾದಿಗಳೂ ಆಗಿದ್ದು ಪ್ರಜಾಪಾಲನಧರ್ಮವನ್ನೇ ವಿಶೇಷವಾಗಿ ಪ್ರಶಂಸೆಮಾಡಿರುತ್ತಾರೆ. ಕಮಲ ದಂತೆ ಕೆಂಪಾದ ಕಣ್ಣುಗಳುಳ್ಳವನೇ! ರಾಜರು ಪ್ರಜಾಪಾಲನಧರ್ಮವನ್ನು ಹೇಗೆ ಸಾಧಿಸಬೇಕೆಂಬುದನ್ನು ಹೇಳುವೆನು ; ಕೇಳು :

ಚಾರಶ್ಚ ಪ್ರಣಿಧಿಶ್ಚೈವ ಕಾಲೇ ದಾನಮಮತ್ಸರಾತ್ ।
ಯುಕ್ತ್ಯಾ ದಾನಂ ನ ಚಾದಾನಮಯೋಗೇನ ಯುಧಿಷ್ಠಿರ ॥೫॥
ಸತಾಂ ಸಂಗ್ರಹಣಂ ಶೌರ್ಯಂ ದಾಕ್ಷ್ಯಂ ಸತ್ಯಂ ಪ್ರಜಾಹಿತಮ್ ।
ಅನಾರ್ಜವೈರಾರ್ಜವೈಶ್ಚ ಶತ್ರುಪಕ್ಷಸ್ಯ ಭೇದನಮ್ ॥೬॥
ಕೇತನಾನಾಂ ಚ ಜೀರ್ಣಾನಾಮವೇಕ್ಷಾ ಚೈವ ಸೀದತಾಮ್ ।
ದ್ವಿವಿಧಸ್ಯ ಚ ದಣ್ಡಸ್ಯ ಪ್ರಯೋಗಃ ಕಾಲಚೋದಿತಃ ॥೭॥
ಸಾಧೂನಾಮಪರಿತ್ಯಾಗಃ ಕುಲೀನಾನಾಂ ಚ ಧಾರಣಮ್ ।
ನಿಚಯಶ್ಚ ನಿಚೇಯಾನಾಂ ಸೇವಾ ಬುದ್ಧಿಮತಾಮಪಿ ॥೮॥
ಬಲಾನಾಂ ಹರ್ಷಣಂ ನಿತ್ಯಂ ಪ್ರಜಾನಾಮನ್ವವೇಕ್ಷಣಮ್ ।
ಕಾರ್ಯೇಷ್ವಖೇದಃ ಕೋಶಸ್ಯ ತಥೈವ ಚ ವಿವರ್ಧನಮ್ ॥೯॥
ಪುರಗುಪ್ತಿರವಿಶ್ವಾಸಃ ಪೌರಸಂಘಾತಭೇದನಮ್ ।
ಅರಿಮಧ್ಯಸ್ಥಮಿತ್ರಾಣಾಂ ಯಥಾವಚ್ಚಾನ್ವವೇಕ್ಷಣಮ್ ॥೧೦॥
ಉಪಜಾಪಶ್ಚ ಭೃತ್ಯಾನಾಮಾತ್ಮನಃ ಪುರದರ್ಶನಮ್ ।
ಅವಿಶ್ವಾಸಃ ಸ್ವಯಂ ಚೈವ ಪರಸ್ಯಾಶ್ವಾಸನಂ ತಥಾ ॥೧೧॥
ನೀತಿಧರ್ಮಾನುಸರಣಂ ನಿತ್ಯಮುತ್ಥಾನಮೇವ ಚ ।
ರಿಪೂಣಾಮನವಜ್ಞಾನಂ ನಿತ್ಯಂ ಚಾನಾರ್ಯವರ್ಜನಮ್ ॥೧೨॥

ರಾಜನು ವಿಶ್ವಸನೀಯರಾದ ಚಾರರನ್ನೂ–ಪ್ರಣಿಧಿಗಳನ್ನೂ ಇಟ್ಟು

ಕೊಳ್ಳಬೇಕು. (ಪ್ರಣಿಧಿ ಮತ್ತು ಚಾರ–ಎಂಬ ಪದಗಳು ಸಮಾನಾರ್ಥದಲ್ಲಿ ಇವೆಯಾದರೂ ವ್ಯಾಖ್ಯಾನಕಾರರು ಚಾರಃ ಎಂಬುದಕ್ಕೆ **ಗುಪ್ತಸ್ಪಶಃ**–ಗುಪ್ತ ನಾದ ಬೇಹುಗಾರನೆಂದೂ, ಪ್ರಣಿಧಿಃ ಎಂಬುದಕ್ಕೆ ಪ್ರಕಟಸ್ಪಶಃ–ಪ್ರತ್ಯಕ್ಷನಾದ ಬೇಹುಗಾರನೆಂದೂ ಅರ್ಥಮಾಡಿರುತ್ತಾರೆ.) ಅರ್ಥಾತ್ ಗೂಢಚಾರರನ್ನು (ಗೂಢಪುರುಷರನ್ನು) ಸ್ವರಾಜ್ಯದಲ್ಲಿಯೂ ಬಹಿರಂಗಬೇಹುಗಾರರನ್ನು (ಪ್ರತಿನಿಧಿಗಳ ವ್ಯಾಜದಲ್ಲಿ) ವಿದೇಶಗಳಲ್ಲಿಯೂ ನಿಯಮಿಸಬೇಕು. ಸೇವಕರ ಮೇಲೆ ಯಾವ ವಿಧವಾದ ಮಾತ್ಸರ್ಯವನ್ನೂ ಇಟ್ಟುಕೊಳ್ಳದೇ ಕ್ಲೃಪ್ತಕಾಲದಲ್ಲಿ ಅವರಿಗೆ ವೇತನಗಳನ್ನೂ ಭತ್ಯಗಳನ್ನೂ ಕೊಡಬೇಕು. ತೆರಿಗೆದಾರರಿಗೆ ಸ್ವಲ್ಪವೂ ತೊಂದರೆಯಾಗದಂತೆ ಹೂವಿನಿಂದ ದುಂಬಿಯು ಮಧುವನ್ನು ಹೀರುವಂತೆ (ಹೂವಿನ ಮೇಲೆ ದುಂಬಿಯು ಕುಳಿತು ಮಧುವನ್ನು ಹೀರಿಕೊಂಡರೂ ಹೂವು ಬಾಡುವುದಿಲ್ಲ. ಸುವಾಸನೆಯನ್ನೂ ಕಳೆದುಕೊಳ್ಳುವುದಿಲ್ಲ.) ರಾಜನು ಜನರಿಂದ ತೆರಿಗೆಯನ್ನು ಉಪಾಯದಿಂದ ತೆಗೆದುಕೊಳ್ಳಬೇಕು. ಜನರಿಗೆ ಅಪ್ರಿಯವಾಗುವ ರೀತಿಯಲ್ಲಿ ತೆರಿಗೆಯನ್ನು ತೆಗೆದುಕೊಳ್ಳಬಾರದು. ಸತ್ಪುರುಷರನ್ನು ಸಂಗ್ರಹಿಸಬೇಕು. (ಸತ್ಪುರುಷರ ಸ್ನೇಹಮಾಡಬೇಕು.) ಶೂರನಾಗಿರಬೇಕು. ಕಾರ್ಯದಕ್ಷನಾಗಿರಬೇಕು. ಸತ್ಯನಿಷ್ಠನಾಗಿರಬೇಕು. ಪ್ರಜೆಗಳಿಗೆ ಹಿತವನ್ನುಂಟುಮಾಡುವುದರಲ್ಲಿಯೇ ಸರ್ವದಾ ನಿರತನಾಗಿರಬೇಕು. ಸರಳಮಾರ್ಗದಿಂದಲಾದರೂ ಸರಿಯೇ ; ಕುಟಿಲಮಾರ್ಗದಿಂದಲಾದರೂ ಸರಿಯೇ–ಶತ್ರುಪಕ್ಷವನ್ನು ಭೇದಿಸಬೇಕು. ಜೀರ್ಣವಾಗಿ ಹೋಗಿರುವ ಮತ್ತು ವಿನಾಶಹೊಂದುತ್ತಿರುವ ಮನೆ-ಮಠ ಗಳನ್ನೂ, ಮಂದಿರಗಳನ್ನೂ, ರಾಜಭವನಗಳನ್ನೂ ಆಗಿಂದಾಗ್ಗೆ ಜೀರ್ಣೋ ದ್ಧಾರಮಾಡುತ್ತಿದ್ದು ಅವುಗಳ ಸ್ವಚ್ಛತೆಗೆ ಲಕ್ಷ್ಯಕೊಡಬೇಕು. ಸಮಯಾನು ಸಾರವಾಗಿ ಅಪರಾಧಿಗಳಿಗೆ ಶಾರೀರಿಕಶಿಕ್ಷೆಯನ್ನೂ ಮತ್ತು ಆರ್ಥಿಕಶಿಕ್ಷೆಯನ್ನೂ ಕೊಡಬೇಕು. (ದ್ರವ್ಯದಂಡವನ್ನು ಹಾಕಬೇಕು.) ಸತ್ಪುರುಷರನ್ನೆಂದಿಗೂ ಪರಿತ್ಯಾಗಮಾಡಬಾರದು. ಸತ್ಕುಲಪ್ರಸೂತರಾದ ಬಂಧು-ಬಳಗದವರ ಭರಣ-ಪೋಷಣೆಗಳನ್ನು ಮಾಡಬೇಕು. ಸಂಗ್ರಹಿಸಲು ಯೋಗ್ಯವಾದ ವಸ್ತುಗಳನ್ನು ಸಂಗ್ರಹಿಸಬೇಕು. ಬುದ್ಧಿವಂತರಾದವರ ಸೇವೆಯನ್ನು ಮಾಡ ಬೇಕು. ಸಮಯಾನುಸಾರವಾಗಿ ಸೈನಿಕರಿಗೆ ಪಾರಿತೋಷಕಾದಿಗಳನ್ನು ಕೊಟ್ಟು

ಅವರು ಯಾವಾಗಲೂ ಹರ್ಷಿತರಾಗಿರುವಂತೆ ನೋಡಿಕೊಳ್ಳಬೇಕು. ನಿತ್ಯ ನಿರಂತರವಾಗಿ ಪ್ರಜೆಗಳ ಕಷ್ಟ-ಸುಖಗಳನ್ನು ಪರಿಶೀಲಿಸುತ್ತಿರಬೇಕು. ಪ್ರಜೆ ಗಳಿಗೆ ಹಿತಕರವಾದ ಕಾರ್ಯಗಳನ್ನು ಮಾಡುವುದರಲ್ಲಿ ಖೇದವಿರಬಾರದು. ಕೋಶವನ್ನು (ಬೊಕ್ಕಸವನ್ನು ) ತುಂಬಿಸುತ್ತಲೇ ಇರಬೇಕು. ಪಟ್ಟಣದ ರಕ್ಷಣೆಗೆ ಸಂಪೂರ್ಣವಾದ ವ್ಯವಸ್ಥೆಮಾಡಬೇಕು. ಪಟ್ಟಣದ ಅಥವಾ ರಾಜ್ಯದ ರಕ್ಷಣಾವ್ಯವಸ್ಥೆಯನ್ನು ರಾಜನು ತಾನೇ ವಹಿಸಿಕೊಳ್ಳಬೇಕು. ಇತರರ ಮೇಲೆ ವಿಶ್ವಾಸವನ್ನಿಟ್ಟು ರಕ್ಷಣಾಕಾರ್ಯವನ್ನು ಅವರಿಗೆ ಒಪ್ಪಿಸಬಾರದು. (ಯಾರನ್ನೇ ಆದರೂ ಸಂಪೂರ್ಣವಾಗಿ ನಂಬಬಾರದು.) ಪಟ್ಟಣಿಗರೇನಾದರೂ ವಾಣಿಜ್ಯಾದಿ ವ್ಯಾಜದಿಂದ ಶತ್ರುವಿನೊಡನೆ ಸಂಪರ್ಕವಿಟ್ಟುಕೊಂಡಿದ್ದರೆ ಚಾರರ ಮುಖೇನ ಅದನ್ನು ತಿಳಿದು ಅಂತಹ ದೇಶದ್ರೋಹಿ-ರಾಜದ್ರೋಹಿ ಗಳ ಸಂಘಟನೆಯನ್ನು ಭೇದಿಸಬೇಕು. ಶತ್ರುಗಳಾರು? ಮಧ್ಯಸ್ಥರಾರು? ಮತ್ತು ಮಿತ್ರರು ಯಾರು?–ಎಂಬುದನ್ನು ಯಥಾವತ್ತಾಗಿ ಪರಿಶೀಲಿಸಿ ತಿಳಿದುಕೊಳ್ಳಬೇಕು. ಅವರೊಡನೆ ತಕ್ಕುದಾದ ರೀತಿಯಲ್ಲಿ ವ್ಯವಹರಿಸಬೇಕು. ಶತ್ರುಪಕ್ಷದವರು ಲಂಚ-ರುಷುವತ್ತುಗಳ ಮೂಲಕವಾಗಿ ತನಗೂ–ತನ್ನ ಸೇವಕವರ್ಗದವರಿಗೂ ಭಿನ್ನಾಭಿಪ್ರಾಯವನ್ನುಂಟುಮಾಡಲು ಪ್ರಯತ್ನಿಸ ದಿರುವಂತೆ ಜಾಗರೂಕತೆಯಿಂದ ನೋಡಿಕೊಳ್ಳಬೇಕು. ಶತ್ರುಪಕ್ಷದ ಭೃತ್ಯರಿಗೆ ಲಂಚವನ್ನು ಕೊಟ್ಟು ಅವರನ್ನು ವಶಪಡಿಸಿಕೊಳ್ಳಬೇಕು. ರಾಜನಾದವನು ತಾನೇ ಸ್ವತಃ ನಗರದ ಎಲ್ಲ ಭಾಗಗಳಿಗೂ ವೇಷವನ್ನು ಮರೆಸಿಕೊಂಡು ಹೋಗಿ ಪ್ರಜೆಗಳ ಕಷ್ಟ-ಸುಖಗಳನ್ನು ಅರಿಯಬೇಕು. ಇತರರಲ್ಲಿ (ಪಟ್ಟಣದ ವಿಷಯವಾಗಿ ಅಧಿಕಾರಿಗಳು ಹೇಳುವ ಮಾತುಗಳಲ್ಲಿ) ವಿಶ್ವಾಸವಿಡಬಾರದು. ಆಶ್ರಯವನ್ನು ಅಪೇಕ್ಷಿಸಿ ಬಂದವರಿಗೆ ಸಂಪೂರ್ಣವಾದ ಆಶ್ವಾಸನೆಯನ್ನು ನೀಡಬೇಕು. ರಾಜನೀತಿ ಮತ್ತು ರಾಜಧರ್ಮಾನುಸಾರವಾಗಿ ನಡೆದುಕೊಳ್ಳ ಬೇಕು. ಸರ್ವದಾ ಉದ್ಯೋಗಶೀಲನಾಗಿರಬೇಕು. ಶತ್ರುಗಳ ವಿಷಯದಲ್ಲಿ ಯಾವಾಗಲೂ ಜಾಗರೂಕನಾಗಿರಬೇಕು. ಅವರನ್ನು ಶಕ್ತಿಹೀನರೆಂದು ಭಾವಿಸಿ ಉದಾಸೀನನಾಗಿರಬಾರದು. ಎಂದಿಗೂ ದುಷ್ಟಜನರೊಡನೆ ಸಹವಾಸವನ್ನಿಟ್ಟು ಕೊಳ್ಳಬಾರದು. ಅವರನ್ನು ಯಾವಾಗಲೂ ದೂರವಿಡಬೇಕು.

ಯುಧಿಷ್ಠಿರ! ಉದ್ಯೋಗಶೀಲತೆಯೇ ರಾಜಧರ್ಮಕ್ಕೆ ಮೂಲವಾಗಿದೆ. ರಾಜನು ಉದ್ಯೋಗಶೀಲನಾಗಿರಬೇಕೆಂಬ ವಿಷಯದಲ್ಲಿ ಬೃಹಸ್ಪತಿಯು ಹೇಳಿರುವ ಶ್ಲೋಕಗಳನ್ನು ಕೇಳು.

**ಉತ್ಥಾನೇನಾಮೃತಂ ಲಬ್ಧಮುತ್ಥಾನೇನಾಸುರಾ ಹತಾಃ ।**
**ಉತ್ಥಾನೇನ ಮಹೇನ್ದ್ರೇಣ ಶ್ರೈಷ್ಠ್ಯಂ ಪ್ರಾಪ್ತಂ ದಿವೀಹ ಚ ॥೧೪॥**

ದೇವರಾಜನಾದ ಇಂದ್ರನು ಉದ್ಯೋಗಶೀಲನಾಗಿದ್ದುದರಿಂದಲೇ ಅಮೃತವನ್ನು ಪಡೆದುಕೊಂಡನು. ಅಸುರರನ್ನು ಸಂಹಾರಮಾಡಿದನು. ದೇವಲೋಕದಲ್ಲಿಯೂ ಮತ್ತು ಈ ಲೋಕದಲ್ಲಿಯೂ ಶ್ರೇಷ್ಠತೆಯನ್ನು ಪಡೆದನು. ಉದ್ಯೋಗಶೀಲನಾಗಿದ್ದುದರಿಂದಲೇ ಇಂದ್ರನಿಗೆ ಈ ಎಲ್ಲ ಫಲ ಗಳನ್ನೂ ಪಡೆದುಕೊಳ್ಳಲು ಸಾಧ್ಯವಾಯಿತು.

**ಉತ್ಥಾನವೀರಃ ಪುರುಷೋ ವಾಗ್ವೀರಾನಧಿತಿಷ್ಠತಿ ।**
**ಉತ್ಥಾನವೀರಾನ್ವಾಗ್ವೀರಾ ರಮಯನ್ತ ಉಪಾಸತೇ ॥೧೫॥**

ಉದ್ಯೋಗವೀರರು–ವಾಗ್ವೀರರು ಎಂಬುದಾಗಿ ವೀರರಲ್ಲಿ ಎರಡು ವಿಧ. ಉದ್ಯೋಗವೀರರು ಯಾವಾಗಲೂ ಕಾರ್ಯತತ್ಪರರಾಗಿರುತ್ತಾರೆಯೇ ಹೊರತು ಹೆಚ್ಚು ಮಾತನಾಡುವುದಿಲ್ಲ. ವಾಗ್ವೀರರು ಯಾವಾಗಲೂ ಮಾತನಾಡುತ್ತಿರುತ್ತಾರೆಯೇ ಹೊರತು ಹೆಚ್ಚು ಕಾರ್ಯಮಾಡುವುದಿಲ್ಲ. ಆದರೆ ಫಲಿತಾಂಶದಲ್ಲಿ ಉದ್ಯೋಗವೀರರೇ ವಾಗ್ವೀರರನ್ನು ಮೆಟ್ಟಿ ನಿಲ್ಲುತ್ತಾರೆ. ವಾಗ್ವೀರರು ತಮ್ಮ ವಾಗ್ವೈಖರಿಗಳಿಂದ ಉದ್ಯೋಗವೀರರನ್ನೇ ಹೊಗಳಿ-ಹೊಗಳಿ ಹುರಿದುಂಬಿಸಿ ಅವರ ಮನಸ್ಸನ್ನು ಉಲ್ಲಾಸಗೊಳಿಸುತ್ತಾರೆ. ಹೀಗೆ ಉತ್ಥಾನವೀರರ ಉಪಾಸನೆಯನ್ನೇ ಮಾಡುತ್ತಾ ವಾಗ್ವೀರರು ಜೀವನವನ್ನು ಕಳೆಯುತ್ತಾರೆ.

**ಉತ್ಥಾನಹೀನೋ ರಾಜಾ ಹಿ ಬುದ್ಧಿಮಾನಪಿ ನಿತ್ಯಶಃ ।**
**ಪ್ರಧರ್ಷಣೀಯಃ ಶತ್ರೂಣಾಂ ಭುಜಙ್ಗ ಇವ ನಿರ್ವಿಷಃ ॥೧೬॥**

ಉದ್ಯೋಗದಿಂದ ವಿಹೀನನಾದ ( ಉದ್ಯೋಗಶೀಲನಲ್ಲದ ) ರಾಜನು ಬುದ್ಧಿವಂತನೇ ಆಗಿದ್ದರೂ–ವಿಷರಹಿತವಾದ ಸರ್ಪದಂತೆ ಶತ್ರುಗಳ ಆಕ್ರ ಮಣಕ್ಕೆ ಈಡಾಗುತ್ತಾನೆ.

**ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ ।**
**ಅಲ್ಪೋಽಪಿ ಹಿ ದಹತ್ಯಗ್ನಿರ್ವಿಷಮಲ್ಪಂ ಹಿನಸ್ತಿ ಚ ॥೧೭॥**

ಬಲಿಷ್ಠನಾದ ರಾಜನು ಶತ್ರುವು ದುರ್ಬಲನಾಗಿರುವನೆಂದು ಭಾವಿಸಿ ಉದಾಸೀನಮಾಡಬಾರದು. ಬೆಂಕಿಯ ಒಂದು ಕಿಡಿಯೇ ಹುಲ್ಲಿನ ಮೆದೆಯನ್ನು ಭಸ್ಮಮಾಡಿಬಿಡುತ್ತದೆ. ವಿಷವು ಅಲ್ಪವೇ ಆಗಿದ್ದರೂ ಮನುಷ್ಯನನ್ನು ಕೊಲ್ಲುತ್ತದೆ. ಆದುದರಿಂದ ಇಂದು ದುರ್ಬಲನಾಗಿ ಕಾಣುವ ಶತ್ರುವು ಮುಂದೆ ಪ್ರಬಲನಾಗಬಹುದು. ಹಾಗೆ ಆಗಲು ಅವಕಾಶವಾಗದಂತೆ ಕೀರ್ತಿಕಾಮನಾದ ರಾಜನು ಶತ್ರುವು ದುರ್ಬಲನಾಗಿದ್ದರೂ ಅವನನ್ನು ಧ್ವಂಸಮಾಡಲೇಬೇಕು.

**ಏಕಾಙ್ಗೇನಾಪಿ ಸಮ್ಭೂತಃ ಶತ್ರುರ್ದುರ್ಗಮುಪಾಶ್ರಿತಃ ।**
**ಸರ್ವಂ ತಾಪಯತೇ ದೇಶಮಪಿ ರಾಜ್ಞಃ ಸಮೃದ್ಧಿನಃ ॥೧೮॥**

ರಥಾಶ್ವ-ಗಜ-ಪದಾತಿಗಳೆಂಬ ಚತುರಂಗಸೈನ್ಯದಲ್ಲಿ ಒಂದೇ ಒಂದು ಅಂಗದಿಂದ (ಒಂದು ರಥಸೈನ್ಯದಿಂದ ಅಥವಾ ಒಂದು ಗಜಸೈನ್ಯದಿಂದ ಅಥವಾ ಒಂದು ಅಶ್ವಸೈನ್ಯದಿಂದ ಅಥವಾ ಕೇವಲ ಪದಾತಿಸೈನ್ಯದಿಂದ) ಸಂಪನ್ನನಾಗಿ ಕೋಟೆಯನ್ನು ಆಕ್ರಮಿಸಿದ ಶತ್ರುವು ಸರ್ವಸಮೃದ್ಧಿಯಿಂದಲೂ ಸಂಪನ್ನನಾಗಿರುವ ರಾಜನ ದೇಶವನ್ನೇ ಸಂಪೂರ್ಣವಾಗಿ ಸಂತಾಪಗೊಳಿಸಲು ಸಮರ್ಥನಾಗುತ್ತಾನೆ.

**ರಾಜ್ಞೋ ರಹಸ್ಯಂ ಯದ್ವಾಕ್ಯಂ ಜಯಾರ್ಥಂ ಲೋಕಸಂಗ್ರಹಃ ।**
**ಹೃದಿ ಯಚ್ಚಾಸ್ಯ ಜಿಹ್ಮಂ ಸ್ಯಾತ್ಕಾರಣೇನ ಚ ಯದ್ಭವೇತ್ ॥೧೯॥**

**ಯಚ್ಚಾಸ್ಯ ಕಾರ್ಯಂ ವೃಜಿನಮಾರ್ಜವೇನೈವ ಧಾರಯೇತ್ ।**
**ದಮ್ಭನಾರ್ಥಂ ಚ ಲೋಕಸ್ಯ ಧರ್ಮಿಷ್ಠಾಮಾಚರೇತ್ಕ್ರಿಯಾಮ್ ॥೨೦॥**

ರಾಜನ ರಹಸ್ಯವಾದ ಮಾತು ಯಾವುದಿರುವುದೋ, ಶತ್ರುಗಳೊಡನೆ ಮಾಡುವ ಯುದ್ಧದಲ್ಲಿ ಜಯಗಳಿಸುವ ಸಲುವಾಗಿ ಅವನು ಯಾವ ಲೋಕ ಸಂಗ್ರಹವನ್ನು ಮಾಡುವನೋ, ವಿಜಯಗಳಿಸುವ ಉದ್ದೇಶದಿಂದ ರಾಜನ ಹೃದಯದಲ್ಲಿ ಯಾವ ಕುಟಿಲತೆಯಿರುವುದೋ (ದುರುದ್ದೇಶವಿರುವುದೋ)–

ಯುದ್ಧದಲ್ಲಿ ಜಯಗಳಿಸುವ ಕಾರಣದಿಂದಲೇ ಯಾವ ದುಷ್ಕಾರ್ಯವು ನಡೆದುಹೋಗುತ್ತದೆಯೋ ಮತ್ತು ಆ ಸಮಯದಲ್ಲವನು ಮಾಡಬಾರದ ಯಾವ ಕಾರ್ಯವನ್ನು ಮಾಡುವನೋ–ಆ ರಹಸ್ಯವಿಷಯಗಳೆಲ್ಲವನ್ನೂ ಅವನು ಸರಳತೆಯಿಂದಲೇ ಧಾರಣೆಮಾಡಬೇಕು. ಲೋಕದಲ್ಲಿ ತನ್ನ ಪ್ರತಿಷ್ಠೆಯನ್ನು ಊರ್ಜಿತಗೊಳಿಸಲು ರಾಜನಾದವನು ಧಾರ್ಮಿಕಕರ್ಮಗಳ ಅನುಷ್ಠಾನಗಳನ್ನೂ ಮಾಡುತ್ತಲೇ ಇರಬೇಕು. (ರಾಜನು ಋಜುವಾಗಿರಬೇಕೆಂಬುದು ಸರಳವಾಗಿರಬೇಕೆಂಬುದು ಧರ್ಮವಾದರೂ ಎಲ್ಲ ಸಮಯಗಳಲ್ಲಿಯೂ ಋಜುತ್ವದಿಂದಲೇ ಇರಲು ಸಾಧ್ಯವಾಗುವುದಿಲ್ಲ. ಶತ್ರುಗಳನ್ನು ಜಯಿಸಲು ಹೊರಟಾಗ ಅನೇಕ ಕೃತ್ರಿಮೋಪಾಯಗಳನ್ನೇ ಅನುಸರಿಸಬೇಕಾಗುತ್ತದೆ. ಮಾಡಬಾರದ ಕೆಲಸಗಳನ್ನೇ ಮಾಡಬೇಕಾಗುತ್ತದೆ. ರಾಜನು ರಹಸ್ಯವಾಗಿ ಕೆಲವರಿಗೆ ಕೆಲವು ಮಾತುಗಳನ್ನು ಹೇಳಬಹುದು ; ಜಯವನ್ನು ಪಡೆಯಲು ಜನಸಂಗ್ರಹವು ಅವಶ್ಯವಾಗಿರುವುದರಿಂದ ಅದಕ್ಕಾಗಿ ರಹಸ್ಯ ಕಾರ್ಯಗಳನ್ನು ಕೈಗೊಳ್ಳಬೇಕಾಗಬಹುದು. ಕೆಲವು ವೇಳೆ ಹೃದಯದಲ್ಲಿ ಕಾಪಟ್ಯವನ್ನಿಟ್ಟುಕೊಂಡು ಹೊರಗೆ ಬೇರೆಯ ರೀತಿಯಲ್ಲಿ ವ್ಯವಹರಿಸಬಹುದು. ಕೆಲವು ವೇಳೆ ಕೆಲಸವನ್ನು ಸಾಧಿಸುವ ಕಾರಣದಿಂದ ವಕ್ರತೆಯನ್ನು ಆಶ್ರಯಿಸಬೇಕಾಗಬಹುದು. ಕೆಲವು ವೇಳೆ ಪಾಪಕಾರ್ಯಗಳನ್ನೇ ದೇಶದ ಹಿತದೃಷ್ಟಿಯಿಂದ ಮಾಡಬೇಕಾಗಬಹುದು. ಇವುಗಳೆಲ್ಲವೂ ಸರಳತೆಗೆ ವಿರುದ್ಧವಾದರೂ ಅನಿವಾರ್ಯ. ಶತ್ರುವನ್ನು ಜಯಿಸುವ ಮುಖ್ಯೋದ್ದೇಶದಿಂದ ತಾತ್ಕಾಲಿಕವಾಗಿ ಆಶ್ರಯಿಸುವ ಕುಟಿಲನೀತಿಯು ಸರ್ವದಾ ಇರಬೇಕೆಂಬ ಅಭಿಪ್ರಾಯವಲ್ಲ. ರಾಜನು ಸರಳವಾಗಿಯೇ ಇದ್ದುಕೊಂಡು ಶತ್ರುವನ್ನು ಜಯಿಸುವುದಕ್ಕಾಗಿ, ಅಧರ್ಮವನ್ನು ತೊಡೆದುಹಾಕುವುದಕ್ಕಾಗಿ, ಪ್ರಜೆಗಳನ್ನು ರಕ್ಷಿಸುವುದಕ್ಕಾಗಿ, ಅಧರ್ಮವನ್ನು–ಅನಿವಾರ್ಯವಾದ ಸಮಯದಲ್ಲಿ ಕುಟಿಲತೆಯನ್ನು ಆಶ್ರಯಿಸಬಹುದು. ಇದು ದೋಷವಲ್ಲ. ಹಾಗೆ ಮಾಡದಿದ್ದರೆ ದೋಷವಾದೀತು. )

**ರಾಜ್ಯಂ ಹಿ ಸುಮಹತ್ತನ್ತ್ರಂ ಧಾರ್ಯತೇ ನಾಕೃತಾತ್ಮಭಿಃ ।**
**ನ ಶಕ್ಯಂ ಮೃದುನಾ ವೋಢುಮಾಯಾಸಸ್ಥಾನಮುತ್ತಮಮ್ ॥೨೧॥**

ರಾಜ್ಯಭಾರವೆಂಬುದು ಒಂದು ಮಹಾಮಂತ್ರವಾಗಿದೆ. ( ಮಹಾಶಾಸ್ತ್ರ

ವಾಗಿದೆ. ) ಜಿತೇಂದ್ರಿಯರಲ್ಲದವರು ರಾಜ್ಯಭಾರಮಾಡುವ ಸಾಧ್ಯತೆಯೇ ಇಲ್ಲ. ಮೃದುಸ್ವಭಾವದವರಿಂದಲೂ ರಾಜ್ಯವನ್ನು ಭರಿಸಲು ಶಕ್ಯವಿಲ್ಲ. ಏಕೆಂದರೆ : ರಾಜ್ಯವನ್ನು ಆಳುವುದೆಂಬುದು ಅತ್ಯಂತಪರಿಶ್ರಮದಿಂದಲೇ ಸಾಧ್ಯವಾಗುವ ಕಾರ್ಯವಾಗಿದೆ.

**ರಾಜ್ಯಂ ಸರ್ವಾಮಿಷಂ ನಿತ್ಯಮಾರ್ಜವೇನೇಹ ಧಾರ್ಯತೇ ।**
**ತಸ್ಮಾನ್ಮಿಶ್ರೇಣ ಸತತಂ ವರ್ತಿತವ್ಯಂ ಯುಧಿಷ್ಠಿರ ॥೨೨॥**

ಯುಧಿಷ್ಠಿರ! ರಾಜ್ಯವೆಂಬುದು ಎಲ್ಲರೂ ಅಪೇಕ್ಷಿಸುವ ವಸ್ತುವಾಗಿದೆ. (ಆದುದರಿಂದ ಎಲ್ಲರೂ ಅದನ್ನು ಅಪೇಕ್ಷಿಸುತ್ತಾರೆ.) ಆದರೆ ಸರಳ ಸ್ವಭಾವದಿಂದ ಇರುವವನು ಮಾತ್ರವೇ ರಾಜ್ಯಾಡಳಿತದ ಭಾರವನ್ನು ಹೊರ ಬಲ್ಲನು. ಆದುದರಿಂದ ರಾಜ್ಯಭಾರಮಾಡುವವನು ಋಜುವಾಗಿದ್ದರೂ, ಕ್ರೂರಿಗಳಿಗೆ ಕ್ರೂರನಾಗಿಯೂ, ಮೃದುಜನರಿಗೆ ಮೃದುವಾಗಿಯೂ ಇರ ಬೇಕು. ಎರಡು ಸ್ವಭಾವಗಳನ್ನೂ ಅಳವಡಿಸಿಕೊಂಡಿರಬೇಕು. (ಕ್ರೌರ್ಯ ಮಿಶ್ರವಾದ ಋಜುತ್ವದಿಂದ ವರ್ತಿಸಬೇಕು.)

**ಯದ್ಯಪ್ಯಸ್ಯ ವಿಪತ್ತಿಃ ಸ್ಯಾದ್ರಕ್ಷಮಾಣಸ್ಯ ವೈ ಪ್ರಜಾಃ ।**
**ಸೋಽಪ್ಯಸ್ಯ ವಿಪುಲೋ ಧರ್ಮ ಏವಂವೃತ್ತಾ ಹಿ ಭೂಮಿಪಾಃ ॥**

ಪ್ರಜೆಗಳನ್ನು ಧರ್ಮದಿಂದ ರಕ್ಷಣೆಮಾಡುತ್ತಿರುವಾಗ ಒಂದು ವೇಳೆ ರಾಜನಿಗೆ ವಿಪತ್ತೇ ಸಂಭವಿಸಿದರೂ–ಅಂತಹ ವಿಪತ್ತೂ ರಾಜನಿಗೆ ಅಮಿತ ವಾದ ಪುಣ್ಯವನ್ನೇ ಸಂಪಾದಿಸಿಕೊಡುತ್ತದೆ. ಹಿಂದಿನ ರಾಜರೆಲ್ಲರೂ ಇಂತಹ ಸದಾಚಾರ-ಸದ್ವ್ಯವಹಾರಗಳುಳ್ಳವರೇ ಆಗಿದ್ದರು.

ಕುರುಶ್ರೇಷ್ಠನೇ! ನಾನು ನಿನಗೆ ರಾಜಧರ್ಮಗಳಲ್ಲಿ ಲೇಶವನ್ನು ಮಾತ್ರವೇ ಈಗ ಹೇಳಿರುತ್ತೇನೆ. ನಾನು ಹೇಳಿರುವ ಮಾತುಗಳಲ್ಲಿ ನಿನಗೆ ಎಲ್ಲಿ ಸಂದೇಹವುಂಟಾಗಿರುವುದೋ ಅದನ್ನು ಕೇಳು. ವಿವರಿಸಿ ಹೇಳುತ್ತೇನೆ.”

ವೈಶಂಪಾಯನರು ಹೇಳುತ್ತಾರೆ :

“ಜನಮೇಜಯ! ಭೀಷ್ಮನು ಧರ್ಮರಾಜನಿಗೆ ಹೇಳಿದ ಮಾತು ಗಳನ್ನು ಕೇಳಿ ಭಗವಾನ್ ವ್ಯಾಸರೂ, ದೇವಸ್ಥಾನರೂ, ಅಶ್ಮಮುನಿಗಳೂ,

ವಸುದೇವನ ಮಗನಾದ ಶ್ರೀಕೃಷ್ಣನೂ, ಕೃಪರೂ ಮತ್ತು ಸಾತ್ಯಕಿ- ಸಂಜಯರೂ ಪರಮಹೃಷ್ಟರಾಗಿ ವಿಕಸಿತವಾಗಿರುವಂತೆ ಕಾಣುತ್ತಿದ್ದ ಮುಖಾರವಿಂದ ಗಳಿಂದ– "ಸಾಧು! ಭೀಷ್ಮ ಸಾಧು!"–ಎಂದು ಹೇಳುತ್ತಾ ಧರ್ಮಭೃತರಲ್ಲಿ ಶ್ರೇಷ್ಠನಾದ, ನರಶ್ರೇಷ್ಠನಾದ ಭೀಷ್ಮನನ್ನು ಬಹಳವಾಗಿ ಕೊಂಡಾಡಿದರು.

ಬಳಿಕ ಕುರುಶ್ರೇಷ್ಠನಾದ ಯುಧಿಷ್ಠಿರನು ದೀನಾಂತರಂಗನಾಗಿ ಕಂಬನಿದುಂಬಿದ ಕಣ್ಣುಗಳಿಂದ ಭೀಷ್ಮನ ಎರಡು ಪಾದಗಳನ್ನೂ ಮೃದುವಾಗಿ ಸ್ಪರ್ಶಿಸುತ್ತಾ ಹೇಳಿದನು :

"ಪಿತಾಮಹನೇ! ಸೂರ್ಯದೇವನು ಪ್ರಖರವಾದ ಕಿರಣಗಳಿಂದ ಭೂಮಿಯಲ್ಲಿರುವ ರಸವನ್ನೆಲ್ಲಾ ಪಾನಮಾಡಿ ಅಸ್ತಾಚಲದ ಕಡೆಗೆ ಹೋಗು ತ್ತಿದ್ದಾನೆ. ( ಸಂಧ್ಯಾಸಮಯವಾಗಿದೆ ). ಆದುದರಿಂದ ನನಗೆ ಉಂಟಾಗಿರುವ ಸಂದೇಹಗಳೆಲ್ಲವನ್ನೂ ನಾಳೆಯ ದಿವಸ ಪ್ರಶ್ನಿಸಿ ಪರಿಹಾರಮಾಡಿಕೊಳ್ಳು ತ್ತೇನೆ."

ಜನಮೇಜಯ! ಯುಧಿಷ್ಠಿರನು ಹೀಗೆ ಹೇಳಿ ಹಸ್ತಿನಾಪಟ್ಟಣಕ್ಕೆ ಹೋಗಲು ಭೀಷ್ಮನ ಅನುಮತಿಯನ್ನು ಪಡೆದುಕೊಂಡನು. ಕೇಶವ-ಕೃಪ-ಯುಧಿಷ್ಠಿರಾದಿಗಳು ಅಲ್ಲಿದ್ದ ಬ್ರಾಹ್ಮಣರನ್ನು ನಮಸ್ಕರಿಸಿ, ಮಹಾನದಿಯ ( ಗಂಗಾನದಿಯ ) ಮಗನಾದ ಭೀಷ್ಮನನ್ನು ಪ್ರದಕ್ಷಿಣೆಮಾಡಿ ಪರಮ ಹೃಷ್ಟರಾಗಿ ತಮ್ಮ-ತಮ್ಮ ರಥಗಳನ್ನು ಹತ್ತಿದರು.

ಸುವ್ರತರಾದ, ಶತ್ರುತಾಪಕರಾದ ಯುಧಿಷ್ಠಿರಾದಿಗಳು ಮುಂದೆ ದೃಷದ್ವತೀನದಿಯ ತೀರಕ್ಕೆ ಹೋಗಿ ಆ ಮಹಾನದಿಯಲ್ಲಿ ಸ್ನಾನಮಾಡಿ, ವಿಧಿ ಪೂರ್ವಕವಾದ ಸಂಧ್ಯಾವಂದನೆಯ ಮೂಲಕ ಸೂರ್ಯದೇವನಿಗೆ ಅರ್ಘ್ಯ ಪ್ರದಾನಮಾಡಿ, ಗಾಯತ್ರೀಮಂತ್ರವನ್ನು ಜಪಿಸಿ, ಸಂಧ್ಯೋಪಸ್ಥಾನಾದಿ ಮಂಗಳಕಾರ್ಯಗಳನ್ನು ಮುಗಿಸಿ ಹಸ್ತಿನಾಪುರವನ್ನು ಪ್ರವೇಶಿಸಿದರು."

೫೮ನೆಯ ಅಧ್ಯಾಯವು ಮುಗಿಯಿತು.

೫೯ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

# ಮರುದಿನ ಭೀಷ್ಮನು ಬ್ರಹ್ಮನ ನೀತಿಶಾಸ್ತ್ರವನ್ನೂ ಪೃಥುರಾಜನ ಚರಿತ್ರೆಯನ್ನೂ ವರ್ಣಿಸಿದುದು

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಆ ರಾತ್ರಿಯು ಕಳೆದು ಬೆಳಗಾಗುತ್ತಲೇ ಪಾಂಡವರೂ ಮತ್ತು ಯಾದವರೂ ಮೇಲೆದ್ದು ಶೌಚ-ಮುಖಮಾರ್ಜನ-ಸ್ನಾನ-ಸಂಧ್ಯಾವಂದನಾದಿ ಪೌರ್ವಾಹ್ನಿಕಕ್ರಿಯೆಗಳನ್ನು ಯಥಾವಿಧಿಯಾಗಿ ಮುಗಿಸಿ, ನಗರದಷ್ಟೇ ವಿಶಾಲವಾಗಿದ್ದ ರಥಗಳಲ್ಲಿ ಕುಳಿತು ಕುರುಕ್ಷೇತ್ರಕ್ಕೆ ತೆರಳಿದರು. ಕುರುಕ್ಷೇತ್ರವನ್ನು ಸೇರಿ ಭೀಷ್ಮನ ಸಮೀಪಕ್ಕೆ ಹೋಗಿ ರಥಿಗಳಲ್ಲಿ ಶ್ರೇಷ್ಠನಾದ ಗಂಗಾಪುತ್ರನನ್ನು 'ರಾತ್ರಿಯು ಸುಖವಾಗಿ ಕಳೆಯಿತೇ?'–ಎಂದು ಪ್ರಶ್ನಿಸಿದರು. ಆ ವೇಳೆಗಾಗಲೇ ಭೀಷ್ಮನ ಬಳಿಗೆ ಬಂದು ಕುಳಿತಿದ್ದ ವ್ಯಾಸರೇ ಮೊದಲಾದ ಮಹರ್ಷಿಗಳನ್ನು ಪಾಂಡವ-ಯಾದವರು ಅಭಿವಾದನಪೂರ್ವಕವಾಗಿ ನಮಸ್ಕರಿಸಿ, ಅವರಿಂದಲೂ ಅಭಿನಂದಿಸಲ್ಪಟ್ಟವರಾಗಿ ಭೀಷ್ಮನನ್ನು ಸುತ್ತುವರಿದು ಕುಳಿತುಕೊಂಡರು.

ಬಳಿಕ ಮಹಾತೇಜಸ್ವಿಯಾದ, ಧರ್ಮಪುತ್ರನಾದ ಯುಧಿಷ್ಠಿರನು ಭೀಷ್ಮನನ್ನು ಯಥಾವಿಧಿಯಾಗಿ ಸಂಪೂಜಿಸಿ ಕೈಮುಗಿದುಕೊಂಡು ಹೇಳಿದನು:

**ಯ ಏಷ ರಾಜನ್ರಾಜೇತಿ ಶಬ್ದಶ್ಚರತಿ ಭಾರತ ।**
**ಕಥಮೇಷ ಸಮುತ್ಪನ್ನಸ್ತನ್ಮೇ ಬ್ರೂಹಿ ಪರಂತಪ ॥೫॥**

"ಪರಂತಪನೇ! ಭಾರತನೇ! ಲೋಕದಲ್ಲಿ 'ರಾಜ' ಎಂಬ ಶಬ್ದವು ಸರ್ವತ್ರ ಪ್ರಸಿದ್ಧವಾಗಿದೆ. ಈ 'ರಾಜ' ಎಂಬ ಶಬ್ದವು ಹೇಗೆ ಹುಟ್ಟಿತು? ಯಾವಾಗ ಹುಟ್ಟಿತು? ಇದಕ್ಕೇನಾದರೂ ಕಾರಣವಿರುವುದೇ? ಈ ವಿಷಯವನ್ನು ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯಿದೆ.

**ತುಲ್ಯಪಾಣಿಭುಜಗ್ರೀವಸ್ತುಲ್ಯಬುದ್ಧೀನ್ದ್ರಿಯಾತ್ಮಕಃ ।**
**ತುಲ್ಯದುಃಖಸುಖಾತ್ಮಾ ಚ ತುಲ್ಯಪೃಷ್ಠಮುಖೋದರಃ ॥೬॥**

**ತುಲ್ಯಶುಕ್ರಾಸ್ಥಿಮಜ್ಜಾ ಚ ತುಲ್ಯಮಾಂಸಾಸೃಗೇವ ಚ ।**
**ನಿಃಶ್ವಾಸೋಚ್ಛ್ವಾಸತುಲ್ಯಶ್ಚ ತುಲ್ಯಪ್ರಾಣಶರೀರವಾನ್ ॥೭॥**
**ಸಮಾನಜನ್ಮಮರಣಃ ಸಮಃ ಸರ್ವೈರ್ಗುಣೈರ್ನೃಣಾಮ್ ।**
**ವಿಶಿಷ್ಟಬುದ್ಧೀಞ್ಶೂರಾಂಶ್ಚ ಕಥಮೇಕೋಽಧಿತಿಷ್ಠತಿ ॥೮॥**

ಎಲ್ಲರ ಗುಣಗಳೂ ಒಂದೇ ಸಮನಾಗಿರುವಾಗ ಒಬ್ಬನನ್ನು ಮಾತ್ರವೇ ರಾಜನೆಂದು ಕರೆಯುವುದೇಕೆ? ರಾಜನಿಗೂ ಇತರರಿಗೂ ಕೈಗಳೂ ಒಂದೇ ಸಮವಾಗಿರುತ್ತವೆ. ಭುಜಗಳೂ ಒಂದೇ ಸಮವಾಗಿರುತ್ತವೆ. ಕುತ್ತಿಗೆಗಳೂ ಒಂದೇ ಸಮನಾಗಿರುತ್ತವೆ. ಬುದ್ಧೀಂದ್ರಿಯಗಳೂ ರಾಜನಿಗೆ ಇರುವಂತೆಯೇ ಇತರರಿಗೂ ಇರುತ್ತವೆ. ಸುಖ-ದುಃಖಗಳೂ ರಾಜರಿಗೂ ಇತರರಿಗೂ ಒಂದೇ ರೀತಿಯಲ್ಲಿರುತ್ತವೆ. (ರಾಜನಾದವನು ಸರ್ವದಾ ಸುಖದಲ್ಲಿಯೇ ಇರುವನೆಂಬುದೇನೂ ಇಲ್ಲ.) ಅವಯವಗಳನ್ನು ತೆಗೆದುಕೊಂಡರೂ ಪೃಷ್ಠ, ಮುಖ, ಉದರಗಳೂ ರಾಜನಿಗಿರುವಂತೆಯೇ ಇತರರಿಗೂ ಇರುತ್ತವೆ. ಶರೀರದ ಒಳಭಾಗವನ್ನು ತೆಗೆದುಕೊಂಡರೂ ವೀರ್ಯ, ಮೂಳೆ ಮತ್ತು ಮಜ್ಜೆಗಳೂ ಏಕರೂಪವಾಗಿರುತ್ತವೆ. ಮಾಂಸ-ರಕ್ತಗಳೂ ಒಂದೇ ಪ್ರಕಾರ ವಾಗಿರುತ್ತವೆ. ರಾಜನಿಗೂ ಮತ್ತು ಇತರರಿಗೂ ಉಚ್ಛ್ವಾಸ-ನಿಶ್ವಾಸಗಳು ಏಕರೀತಿಯಲ್ಲಿಯೇ ನಡೆಯುತ್ತವೆ. ಪ್ರಾಣ ಮತ್ತು ಶರೀರಗಳೂ ಸಮ ನಾಗಿಯೇ ಇರುತ್ತವೆ. ಇತರರಿಗಿರುವಂತೆಯೇ ರಾಜನಿಗೂ ಜರಾಮರಣ ಗಳೂ ಸಮಾನವಾಗಿವೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಸರ್ವ ಗುಣಗಳಿಂದಲೂ ರಾಜನಿಗೂ ಮತ್ತು ಇತರರಿಗೂ ಸಾಮ್ಯವೇ ಇದೆ. ಯಾವ ವ್ಯತ್ಯಾಸವೂ ಕಾಣುವುದೇ ಇಲ್ಲ. ಬುದ್ಧಿಯಲ್ಲಿ ವಿಶಿಷ್ಟರಾಗಿರುವ ಮತ್ತು ಶೂರರಾಗಿರುವ ಅಸಂಖ್ಯಾತಜನರನ್ನೂ ರಾಜನೊಬ್ಬನೇ ಹೇಗೆ ಅತಿಶಯಿಸುತ್ತಾನೆ?

**ಕಥಮೇಕೋ ಮಹೀಂ ಕೃತ್ಸ್ನಾಂ ಶೂರವೀರಾರ್ಯಸಂಕುಲಾಮ್ ।**
**ರಕ್ಷತ್ಯಪಿ ಚ ಲೋಕಸ್ಯ ಪ್ರಸಾದಮಭಿವಾಞ್ಛತಿ ॥೯॥**

ಒಬ್ಬನೇ ಒಬ್ಬ ರಾಜನು ಶೂರರಿಂದಲೂ, ವೀರರಿಂದಲೂ, ಸಾಧು-

ಸತ್ಪುರುಷರಿಂದಲೂ ಸಮಾಕುಲವಾದ (ತುಂಬಿರುವ) ಅಖಂಡ ಭೂಮಂಡಲವನ್ನೂ ಹೇಗೆ ರಕ್ಷಿಸುತ್ತಾನೆ? ಹೀಗೆ ಭೂಮಂಡಲದ ರಕ್ಷಕನೇ ಆಗಿದ್ದರೂ ಪ್ರಜೆಗಳ ಪ್ರಸನ್ನತೆಯನ್ನೇಕೆ ಅವನು ಅಪೇಕ್ಷಿಸುತ್ತಾನೆ?

**ಏಕಸ್ಯ ತು ಪ್ರಸಾದೇನ ಕೃತ್ಸ್ನೋ ಲೋಕಃ ಪ್ರಸೀದತಿ ।**
**ವ್ಯಾಕುಲೇ ಚಾಕುಲಃ ಸರ್ವೋ ಭವತೀತಿ ವಿನಿಶ್ಚಯಃ ॥೧೦॥**

ಇಷ್ಟು ಮಾತ್ರ ನಿಜ. ರಾಜನೊಬ್ಬನು ಪ್ರಸನ್ನನಾಗಿದ್ದರೆ ಅಖಂಡ ಭೂಮಂಡಲವೇ ಪ್ರಸನ್ನವಾಗಿರುತ್ತದೆ. ರಾಜನು ವ್ಯಾಕುಲಿತನಾದರೆ ಪ್ರಜೆಗಳೆಲ್ಲರೂ ವ್ಯಾಕುಲವನ್ನು ಹೊಂದುತ್ತಾರೆ.

ಭರತರ್ಷಭನೇ! ಈ ವಿಷಯವನ್ನು ನಾನು ಯಥಾವತ್ತಾಗಿ ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ವಾಗ್ಮಿಗಳಲ್ಲಿ ಶ್ರೇಷ್ಠನಾದವನೇ! ಈ ವಿಷಯವನ್ನು ನನಗೆ ಸಂಪೂರ್ಣವಾಗಿ ಯಥಾವತ್ತಾಗಿ ಹೇಳು. ಸಕಲ ಜಗತ್ತೂ ಒಬ್ಬನೇ ಒಬ್ಬ ವ್ಯಕ್ತಿಯನ್ನು ದೇವರಿಗೆ ಸಮಾನನನ್ನಾಗಿ ಕಾಣುತ್ತಾ ಅವನ ಮುಂದೆ ತಲೆತಗ್ಗಿಸಿಕೊಂಡು ಹೋಗುವುದೆಂದರೆ–ಕಾರಣ ಅಲ್ಪವಾಗಿರಲಾರದು. ಅತ್ಯಂತ ಮಹತ್ತ್ವವುಳ್ಳದ್ದೇ ಆಗಿರಬೇಕು."

ಭೀಷ್ಮನು ಹೇಳುತ್ತಾನೆ :

"ಪುರುಷಸಿಂಹನೇ! ಕೃತಯುಗದ ಆದಿಯಲ್ಲಿ (ಮೊದಲನೆಯ ಕೃತ ಯುಗದಲ್ಲಿ) ರಾಜರ ಮತ್ತು ರಾಜ್ಯದ ಉತ್ಪತ್ತಿಯು ಹೇಗಾಯಿತೆಂಬುದನ್ನು ಹೇಳುವೆನು. ಈ ಸಮಸ್ತವಿಷಯಗಳನ್ನೂ ಏಕಾಗ್ರಚಿತ್ತನಾಗಿ ಕೇಳು.

ಹಿಂದೆ ರಾಜ್ಯವೆಂಬುದೂ ಇರಲಿಲ್ಲ ; ರಾಜನೆಂಬುವನೂ ಇರಲಿಲ್ಲ. ದಂಡವೂ ಇರಲಿಲ್ಲ ; ದಂಡಿಸುವುದೂ ಇರಲಿಲ್ಲ. ಎಲ್ಲ ಪ್ರಜೆಗಳೂ ಧರ್ಮ ಮಾರ್ಗದಿಂದಲೇ ಪರಸ್ಪರವಾಗಿ ರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದರು. ಎಲ್ಲ ಮನುಷ್ಯರೂ ಧರ್ಮದಿಂದಲೇ ಪಾಲನೆ-ಪೋಷಣೆಗಳನ್ನು ಅನ್ಯೋನ್ಯ ಸಹಾಯದಿಂದಲೇ ಮಾಡಿಕೊಳ್ಳುತ್ತಿರಲಾಗಿ, ಕೆಲವು ಕಾಲಾನಂತರದಲ್ಲಿ ರಕ್ಷಣಾಭಾರದಿಂದ ಅವರಿಗೆ ಮಹತ್ತರವಾದ ಖೇದವೇ ಉಂಟಾಯಿತು. ಅನಂತರ ಅವರೆಲ್ಲರೂ ಮೋಹವಶರಾದರು. ಮನುಜಶ್ರೇಷ್ಠನೇ! ಪರಸ್ಪರ

ವಾಗಿ ರಕ್ಷಿಸಿಕೊಳ್ಳಲಾರದೇ ಯಾವಾಗ ಅವರೆಲ್ಲರೂ ಮೋಹವಶರಾದರೋ ಆಗ ಅವರಲ್ಲಿ ಕರ್ತವ್ಯಾಕರ್ತವ್ಯಪ್ರಜ್ಞೆಯು ಶೂನ್ಯವಾಯಿತು. ಕರ್ತವ್ಯ ಪ್ರಜ್ಞೆಯ ಶೂನ್ಯತೆಯಿಂದಾಗಿ ಅವರಲ್ಲಿ ಧರ್ಮಾಚರಣೆಯೂ ಅಳಿದು ಹೋಯಿತು. ಅವರೆಲ್ಲರೂ ಮೋಹವಶರಾಗಿ, ಕರ್ತವ್ಯಾಕರ್ತವ್ಯವಿವೇಕ ಶೂನ್ಯರಾಗಿ ಲೋಭಾಭಿಭೂತರಾದರು. ಸಿಕ್ಕದೇ ಇರುವ ವಸ್ತುವನ್ನೂ ಪಡೆದುಕೊಳ್ಳುವ ಸಲುವಾಗಿ ಪ್ರಯತ್ನಗಳನ್ನು ಮಾಡತೊಡಗಿದರು. ಆಗ ಅವರ ಮನಸ್ಸನ್ನು 'ಕಾಮ' ಎಂಬ ಹೆಸರಿನ ಮತ್ತೊಬ್ಬ ಶತ್ರುವು ಆಕ್ರಮಿಸಿದನು. ಕಾಮವಶರಾದ ಆ ಜನರನ್ನು 'ರಾಗ' ಎಂಬ ಹೆಸರಿನ ಮತ್ತೊಂದು ಭೂತವೂ ಆವರಿಸಿಕೊಂಡಿತು. ರಾಗಕ್ಕೆ ವಶೀಭೂತರಾದ ಆ ಜನರು ಕಾರ್ಯಾಕಾರ್ಯಗಳನ್ನೂ ವಿವೇಚಿಸುತ್ತಿರಲಿಲ್ಲ.

**ಅಗಮ್ಯಾಗಮನಂ ಚೈವ ವಾಚ್ಯಾವಾಚ್ಯಂ ತಥೈವ ಚ ।**
**ಭಕ್ಷ್ಯಾಭಕ್ಷ್ಯಂ ಚ ರಾಜೇನ್ದ್ರ ದೋಷಾದೋಷಂ ಚ ನಾತ್ಯಜನ್ ॥೨೦॥**

ಸಮಾಗಮಮಾಡಲು ಅನರ್ಹರೊಡನೆ ಸಮಾಗಮಮಾಡುತ್ತಿದ್ದರು. ಮಾತನಾಡಲು ಯೋಗ್ಯವಾದುದು ; ಮಾತನಾಡಲು ಅಯೋಗ್ಯವಾದುದು, ಭಕ್ಷಿಸಲು ಯೋಗ್ಯವಾದುದು ; ಭಕ್ಷಿಸಲು ಅಯೋಗ್ಯವಾದುದು, ದೋಷಯುಕ್ತವಾದುದು ; ದೋಷವಿಲ್ಲದುದು–ಇವುಗಳಲ್ಲಿ ಯಾವುದನ್ನೂ ಅವರು ಪರಿತ್ಯಜಿಸುತ್ತಿರಲಿಲ್ಲ.

**ವಿಪ್ಲುತೇ ನರಲೋಕೇ ವೈ ಬ್ರಹ್ಮ ಚೈವ ನನಾಶ ಹ ।**
**ನಾಶಾಚ್ಚ ಬ್ರಹ್ಮಣೋ ರಾಜನ್ಧರ್ಮೋ ನಾಶಮಥಾಗಮತ್ ॥೨೧॥**

ಹೀಗೆ ಮನುಷ್ಯಲೋಕದಲ್ಲಿ ಕ್ಷೋಭೆಯುಂಟಾಗಲಾಗಿ, ವೇದಗಳ ಅಧ್ಯಯನವೂ ನಿಂತುಹೋಯಿತು. ವೇದಗಳು ನಶಿಸಿಹೋದನಂತರ ಯಜ್ಞ-ಯಾಗಾದಿಸಮಸ್ತಧಾರ್ಮಿಕಕ್ರಿಯೆಗಳೂ ನಾಶಹೊಂದಿದುವು.

ವೇದವೂ ಮತ್ತು ಧರ್ಮವೂ ನಾಶವಾಗಲಾಗಿ ದೇವತೆಗಳ ಮನಸ್ಸನ್ನು ಭಯವು ಆವರಿಸಿತು. ಭಯಪೀಡಿತರಾದ ದೇವತೆಗಳು ಬ್ರಹ್ಮನನ್ನು ಶರಣು

ಹೊಂದಿದರು. ದುಃಖದ ಆವೇಗದಿಂದ ಪೀಡಿತರಾಗಿದ್ದ ದೇವತೆಗಳು ಲೋಕ ಪಿತಾಮಹನಾದ, ಭಗವಂತನಾದ, ಚತುರ್ಮುಖಬ್ರಹ್ಮನನ್ನು ಸ್ತೋತ್ರಾದಿಗಳಿಂದ ಪ್ರಸನ್ನಗೊಳಿಸಿ ಬದ್ಧಾಂಜಲಿಗಳಾಗಿ ಪ್ರಾರ್ಥಿಸಿದರು :

"ಭಗವನ್! ನರಲೋಕವು ಲೋಭ-ಮೋಹಾದಿ ದುಷ್ಟಭಾವನೆಗಳಿಂದ ಪೀಡಿತವಾಗಿದೆ. ಈ ಕಾರಣದಿಂದ ಸನಾತನವಾದ ವೇದ-ಯಜ್ಞಾದಿಗಳು ಲುಪ್ತವಾಗಿ ಹೋಗಿವೆ. ಆದುದರಿಂದ ನಮ್ಮನ್ನು ಭಯವು ಆವರಿಸಿದೆ.

**ಬ್ರಹ್ಮಣಶ್ಚ ಪ್ರಣಾಶೇನ ಧರ್ಮೋ ವ್ಯನಶದೀಶ್ವರ ।**
**ತತಃ ಸ್ಮ ಸಮತಾಂ ಯಾತಾ ಮರ್ತ್ಯೈಸ್ತ್ರಿಭುವನೇಶ್ವರ ॥೨೫॥**

ತ್ರಿಭುವನೇಶ್ವರನೇ! ವೈದಿಕಜ್ಞಾನದ ವಿನಾಶದಿಂದಾಗಿ ಯಜ್ಞಧರ್ಮವೂ ವಿನಾಶಹೊಂದಿತು. ಈ ಕಾರಣದಿಂದ ನಾವು ಮನುಷ್ಯರಿಗೆ ಸಮಾನರಾಗಿಬಿಟ್ಟಿದ್ದೇವೆ.

**ಅಧೋ ಹಿ ವರ್ಷಮಸ್ಮಾಕಂ ನರಾಸ್ತೂರ್ಧ್ವಪ್ರವರ್ಷಿಣಃ ।**
**ಕ್ರಿಯಾವ್ಯುಪರಮಾತ್ತೇಷಾಂ ತತೋ ಗಚ್ಛಾಮ ಸಂಶಯಮ್ ॥೨೬॥**

ಮನುಷ್ಯರು ಯಜ್ಞಾದಿಗಳ ಮೂಲಕವಾಗಿ ನಮಗೆ ಬೇಕಾದ ಆಹುತಿಗಳನ್ನು ಊರ್ಧ್ವಮುಖವಾಗಿ ಸುರಿಸುತ್ತಿದ್ದರು. ಅದಕ್ಕೆ ಪ್ರತಿಯಾಗಿ ನಾವು ಮನುಷ್ಯರಿಗೆ ಬೇಕಾದ ಆಹಾರಧಾನ್ಯಗಳನ್ನು ಬೆಳೆಸುವ ಸಲುವಾಗಿ ಅಧೋಮುಖವಾಗಿ ಮಳೆಗರೆಯುತ್ತಿದ್ದೆವು. ಅವರೀಗ ಯಜ್ಞಕ್ರಿಯೆಗಳನ್ನೇ ನಿಲ್ಲಿಸಿಬಿಟ್ಟಿರುವುದರಿಂದ ನಮ್ಮ ಜೀವನವೇ ಸಂಶಯಗ್ರಸ್ತವಾಗಿದೆ. (ದೇವ-ಮನುಷ್ಯರ ಜೀವನವು ಪರಸ್ಪರಸಹಕಾರದಿಂದ ನಡೆಯುತ್ತಿದೆ. ಮನುಷ್ಯರು ಯಜ್ಞಗಳ ಮೂಲಕವಾಗಿ ದೇವತೆಗಳಿಗೆ ಆಹುತಿಗಳನ್ನು ಕೊಟ್ಟು ಅವರನ್ನು ತೃಪ್ತಿಪಡಿಸುತ್ತಾರೆ. ಅದಕ್ಕೆ ಪ್ರತಿಯಾಗಿ ದೇವತೆಗಳು ಕಾಲ-ಕಾಲಕ್ಕೆ ಮಳೆಗರೆಯುತ್ತಾರೆ. ಆ ಮಳೆಯಿಂದಲೇ ಮನುಷ್ಯರಿಗೆ ಬೇಕಾದ ಆಹಾರಪದಾರ್ಥಗಳು ಬೆಳೆಯುತ್ತವೆ. ಮನುಷ್ಯರು ಯಜ್ಞಗಳನ್ನೇ ನಿಲ್ಲಿಸಿರುವುದರಿಂದ ದೇವತೆಗಳಿಗೆ ಆಹುತಿರೂಪವಾದ ಆಹಾರವೇ ಇಲ್ಲವಾಗಿದೆ. ಅವರ ಜೀವನವೇ ಸಂದಿಗ್ಧಪರಿಸ್ಥಿತಿಯಲ್ಲಿದೆ. ಹಾಗೆಯೇ ಕಾಲ-ಕಾಲಕ್ಕೆ ಮಳೆಯಿಲ್ಲದೇ ಮನುಷ್ಯರ ಜೀವನವೂ ದುಸ್ತರವಾಗುತ್ತದೆ.)

ಪಿತಾಮಹನೇ! ಈಗ ನಮಗೆ ಯಾವ ರೀತಿಯಿಂದ ಶ್ರೇಯಸ್ಸುಂಟಾಗುವುದೆಂಬುದನ್ನು ನೀನೇ ಚಿಂತಿಸು. ನಿನ್ನ ಪ್ರಭಾವದಿಂದಲೇ ಪ್ರಾಪ್ತವಾಗಿರುವ ನಮ್ಮ ದೈವಸ್ವಭಾವವು ಯಾವುದೇ ಕಾರಣದಿಂದಲೂ ವಿನಾಶ ಹೊಂದಬಾರದು. (ಆಜ್ಯಹೋಮಾದಿಗಳ ಮೂಲಕವಾಗಿಯೇ ನಮಗೆ ಆಹಾರವು ಲಭ್ಯವಾಗಬೇಕಾಗಿರುವುದರಿಂದ ಅದು ತಪ್ಪಿಹೋಗದಂತೆ ವ್ಯವಸ್ಥೆಮಾಡು.)"

ದೇವತೆಗಳ ಮಾತನ್ನು ಕೇಳಿ ಭಗವಂತನಾದ ಸ್ವಯಂಭೂಬ್ರಹ್ಮನು ಹೇಳಿದನು :

"ಸುರಶ್ರೇಷ್ಠನೇ! ನಿಮ್ಮ ಶ್ರೇಯಸ್ಸಿನ ಲಾಭಕ್ಕಾಗಿ ನಾನು ಯೋಚಿಸುತ್ತೇನೆ. ನಿಮ್ಮ ಮನಸ್ಸಿನಲ್ಲುಂಟಾಗಿರುವ ಭಯವನ್ನು ದೂರ ಮಾಡಿರಿ."

ಬ್ರಹ್ಮನು ಹೀಗೆ ಹೇಳಿ ದೇವತೆಗಳನ್ನು ಸಮಾಧಾನಗೊಳಿಸಿ ತನ್ನ ಬುದ್ಧಿಬಲದಿಂದ ಒಂದು ಲಕ್ಷ ಅಧ್ಯಾಯಗಳುಳ್ಳ ನೀತಿಶಾಸ್ತ್ರವನ್ನು ರಚಿಸಿದನು. ಬ್ರಹ್ಮನು ರಚಿಸಿದ ಆ ನೀತಿಶಾಸ್ತ್ರದಲ್ಲಿ ಧರ್ಮಾರ್ಥ-ಕಾಮಗಳ ಸಂಪೂರ್ಣವಾದ ವಿವರಣೆಯಿದ್ದಿತು. ಧರ್ಮ-ಕಾಮಾರ್ಥಗಳೆಂಬ ಮೂರು ಪ್ರಕರಣಗಳನ್ನೂ ಬ್ರಹ್ಮನು ತನ್ನ ನೀತಿಶಾಸ್ತ್ರದಲ್ಲಿ ವಿವರಿಸಿದ್ದ ಕಾರಣ ಧರ್ಮಾರ್ಥ-ಕಾಮಗಳ ಸಮೂಹವು 'ತ್ರಿವರ್ಗ' ಎಂದೇ ವಿಖ್ಯಾತವಾಯಿತು. ನಾಲ್ಕನೆಯದು ಮೋಕ್ಷಪ್ರಕರಣ. ಅದರ ಪ್ರಯೋಜನವೂ ಮತ್ತು ಗುಣಗಳೂ ತ್ರಿವರ್ಗದಿಂದ ಭಿನ್ನವಾಗಿವೆ.

**ಮೋಕ್ಷಸ್ಯಾಸ್ತಿ ತ್ರಿವರ್ಗೋಽನ್ಯಃ ಪ್ರೋಕ್ತಃ ಸತ್ತ್ವಂ ರಜಸ್ತಮಃ ।**
**ಸ್ಥಾನಂ ವೃದ್ಧಿಃ ಕ್ಷಯಶ್ಚೈವ ತ್ರಿವರ್ಗಶ್ಚೈವ ದಣ್ಡಜಃ ॥೩೧॥**

ಮೋಕ್ಷಸಂಬಂಧವಾದ ಮತ್ತೊಂದು ತ್ರಿವರ್ಗವಿದೆ. ಆ ತ್ರಿವರ್ಗದಲ್ಲಿ ಸತ್ತ್ವರಜಸ್ತಮೋಗುಣಗಳು ಸೇರಿವೆ. ದಂಡಜನಿತವಾದ ತ್ರಿವರ್ಗವು ಮತ್ತೊಂದು. ಸ್ಥಾನ, ವೃದ್ಧಿ, ಕ್ಷಯ–ಈ ಮೂರು ದಂಡದಿಂದ ಹುಟ್ಟಿದ ತ್ರಿವರ್ಗವಾಗಿದೆ. (ಸ್ಥಾನ-ವೃದ್ಧಿ-ಕ್ಷಯಗಳಿಗೆ ವ್ಯಾಖ್ಯಾನಕಾರರು ವಿವರಣೆ

ನೀಡಿದ್ದಾರೆ : **ದಣ್ಡಾತ್ ಸ್ಥಾನಂ-ಸಾಮ್ಯಂ ವಣಿಜಾಂ**–ವರ್ತಕರು ಒಂದೇ ಸ್ಥಿತಿಯಲ್ಲಿ ಇರುವಂತೆ ಮಾಡುವುದು. ( ಹೆಚ್ಚಿನ ಲಾಭವನ್ನು ಗಳಿಸಲಾಗದಂತೆ ತೆರಿಗೆ ಮೊದಲಾದುವುಗಳನ್ನು ಹಾಕಿ ಸ್ತಿಮಿತದಲ್ಲಿಟ್ಟುಕೊಳ್ಳುವುದು.) **ವೃದ್ಧಿಸ್ತಪಸ್ವಿನಾಂ**–ತಪಸ್ವಿಗಳ ವೃದ್ಧಿ. **ಕ್ಷಯಶ್ಚೋರಾಣಾಂ** ಕಳ್ಳ-ಕಾಕರ ವಿನಾಶ–ಇವು ದಂಡಜನ್ಯವಾದ ತ್ರಿವರ್ಗದಿಂದ ಸಾಧಿಸಬಹುದಾದ ಕಾರ್ಯಗಳು. )

**ಆತ್ಮಾ ದೇಶಶ್ಚ ಕಾಲಶ್ಚಾಪ್ಯುಪಾಯಾಃ ಕೃತ್ಯಮೇವ ಚ ।**
**ಸಹಾಯಾಃ ಕಾರಣಂ ಚೈವ ಷಡ್ವರ್ಗೋ ನೀತಿಜಃ ಸ್ಮೃತಃ ॥೩೨॥**

ಬ್ರಹ್ಮನು ರಚಿಸಿರುವ ನೀತಿಶಾಸ್ತ್ರದಲ್ಲಿ ಆತ್ಮಾ, ದೇಶ, ಕಾಲ, ಉಪಾಯಗಳು, ಕಾರ್ಯ ಮತ್ತು ಸಹಾಯಕರು–ಈ ಷಡ್ವರ್ಗದ ವರ್ಣನೆಯಿದೆ. ನೀತಿಶಾಸ್ತ್ರದಿಂದ ಹುಟ್ಟಿರುವ ಈ ಷಡ್ವರ್ಗದ ಅನುಷ್ಠಾನವು ಸರ್ವೋನ್ನತಿಗೆ ಕಾರಣವಾಗುತ್ತದೆ.

**ತ್ರಯೀ ಚಾನ್ವೀಕ್ಷಿಕೀ ಚೈವ ವಾರ್ತಾ ಚ ಭರತರ್ಷಭ ।**
**ದಣ್ಡನೀತಿಶ್ಚ ವಿಪುಲಾ ವಿದ್ಯಾಸ್ತತ್ರ ನಿದರ್ಶಿತಾಃ ॥೩೩॥**

ಬ್ರಹ್ಮನು ರಚಿಸಿರುವ ಆ ನೀತಿಶಾಸ್ತ್ರದಲ್ಲಿ ತ್ರಯೀ ( ಕರ್ಮಕಾಂಡ ), ಆನ್ವೀಕ್ಷಿಕೀ ವಿದ್ಯೆ ( ಜ್ಞಾನಕಾಂಡ ), ವಾರ್ತೆ ( ಕೃಷಿ, ಗೋರಕ್ಷಣೆ ಮತ್ತು ವಾಣಿಜ್ಯ ) ಮತ್ತು ದಂಡನೀತಿ–ಈ ವಿಭಾಗಗಳಲ್ಲಿ ವಿಪುಲವಾದ ವಿದ್ಯೆಗಳ ನಿರೂಪಣೆಯಿದೆ.

**ಅಮಾತ್ಯರಕ್ಷಾ ಪ್ರಣಿಧೀ ರಾಜಪುತ್ರಸ್ಯ ಲಕ್ಷಣಮ್ ।**
**ಚಾರಶ್ಚ ವಿವಿಧೋಪಾಯಃ ಪ್ರಣಿಧೇಯಃ ಪೃಥಗ್ವಿಧಃ ॥೩೪॥**
**ಸಾಮ ಭೇದಃ ಪ್ರದಾನಂ ಚ ತತೋ ದಣ್ಡಶ್ಚ ಪಾರ್ಥಿವ ।**
**ಉಪೇಕ್ಷಾ ಪಞ್ಚಮೀ ಚಾತ್ರ ಕಾರ್ತ್ಸ್ನ್ಯೇನ ಸಮುದಾಹೃತಾ ॥೩೫॥**

ಬ್ರಹ್ಮನು ರಚಿಸಿರುವ ಆ ನೀತಿಶಾಸ್ತ್ರದಲ್ಲಿ ಮಂತ್ರಿಗಳ ರಕ್ಷಣೆ, ರಾಜದೂತನ ( ರಾಯಭಾರಿಯ ) ಮತ್ತು ರಾಜಪುತ್ರನ ಲಕ್ಷಣಗಳು, ಗುಪ್ತಚಾರ ಮತ್ತು ಅವರು ಕೈಗೊಳ್ಳಬೇಕಾದ ವಿವಿಧೋಪಾಯಗಳು, ವಿಭಿನ್ನಸ್ಥಾನಗಳಲ್ಲಿ ಆಯಾಸ್ಥಾನಗಳಿಗೆ ಅನುಸಾರವಾಗಿ ವಿಭಿನ್ನರಾದ ಗುಪ್ತಚಾರರನ್ನಿಡುವುದು.

ಸಾಮ, ದಾನ, ಭೇದ, ದಂಡ ಮತ್ತು ಉಪೇಕ್ಷಾ–ಈ ಐದು ಉಪಾಯಗಳು–ಈ ಎಲ್ಲದರ ವಿಷಯವಾಗಿಯೂ ವಿಸ್ತಾರವಾದ ವರ್ಣನೆಯಿದೆ.

**ಮನ್ತ್ರಶ್ಚ ವರ್ಣಿತಃ ಕೃತ್ಸ್ನಸ್ತಥಾ ಭೇದಾರ್ಥ ಏವ ಚ ।**
**ವಿಭ್ರಮಶ್ಚೈವ ಮನ್ತ್ರಸ್ಯ ಸಿದ್ಧ್ಯಸಿದ್ಧ್ಯೋಶ್ಚ ಯತ್ಫಲಮ್ ॥೩೬॥**

ಸಕಲವಿಧವಾದ ಮಂತ್ರಾಲೋಚನೆಗಳು, ಭೇದನೀತಿಪ್ರಯೋಗದ ಪ್ರಯೋಜನ, ರಹಸ್ಯವಾದ ಮಂತ್ರಾಲೋಚನೆಗಳು ಬಹಿರಂಗವಾಗುವುದರಿಂದ ಪ್ರಾಪ್ತವಾಗಬಹುದಾದ ಭಯ, ಮಂತ್ರಾಲೋಚನೆಯು ಸಿದ್ಧಿಸಿದರೆ ಪ್ರಾಪ್ತವಾಗಬಹುದಾದ ಫಲಗಳು, ಸಿದ್ಧಿಸದಿದ್ದರೆ ಆಗುವ ದುಷ್ಫಲಗಳು–ಇವೆಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಿವೆ.

**ಸಂಧಿಶ್ಚ ತ್ರಿವಿಧಾಭಿಖ್ಯೋ ಹೀನೋ ಮಧ್ಯಸ್ತಥೋತ್ತಮಃ ।**
**ಭಯಸತ್ಕಾರವಿತ್ತಾಖ್ಯಂ ಕಾರ್ತ್ಸ್ನ್ಯೇನ ಪರಿವರ್ಣಿತಮ್ ॥೩೭॥**

ಸಂಧಿಯಲ್ಲಿ ಉತ್ತಮ, ಮಧ್ಯಮ ಮತ್ತು ಅಧಮಗಳೆಂಬ ಮೂರು ಭೇದಗಳಿವೆ. ಅವುಗಳಿಗೆ ಅನುಕ್ರಮವಾಗಿ ವಿತ್ತಸಂಧಿ, ಸತ್ಕಾರಸಂಧಿ ಮತ್ತು ಭಯಸಂಧಿಗಳೆಂಬ ಸಂಜ್ಞೆಗಳಿವೆ. ಅಪಾರವಾಗಿ ಧನವನ್ನು ತೆಗೆದುಕೊಂಡು ಸಂಧಿಮಾಡಿಕೊಳ್ಳುವುದು ಉತ್ತಮಸಂಧಿ. ಸತ್ಕಾರವನ್ನು ಪಡೆದುಕೊಂಡು ಸಂಧಿಮಾಡಿಕೊಳ್ಳುವುದು ಮಧ್ಯಮಸಂಧಿ. ಭಯದಿಂದ ಸಂಧಿಮಾಡಿಕೊಳ್ಳುವುದು ಅಧಮಸಂಧಿ. ಈ ಮೂರು ಸಂಧಿಗಳ ವಿಷಯವಾಗಿಯೂ ಬ್ರಹ್ಮನು ರಚಿಸಿರುವ ನೀತಿಶಾಸ್ತ್ರದಲ್ಲಿ ಸಂಪೂರ್ಣವಾದ ವರ್ಣನೆಯಿದೆ.

**ಯಾತ್ರಾಕಾಲಾಶ್ಚ ಚತ್ವಾರಸ್ತ್ರಿವರ್ಗಸ್ಯ ಚ ವಿಸ್ತರಃ ।**
**ವಿಜಯೋ ಧರ್ಮಯುಕ್ತಶ್ಚ ತಥಾರ್ಥವಿಜಯಶ್ಚ ಹ ॥೩೮॥**
**ಆಸುರಶ್ಚೈವ ವಿಜಯಸ್ತಥಾ ಕಾರ್ತ್ಸ್ನ್ಯೇನ ವರ್ಣಿತಃ ।**
**ಲಕ್ಷಣಂ ಪಞ್ಚವರ್ಗಸ್ಯ ತ್ರಿವಿಧಂ ಚಾತ್ರ ವರ್ಣಿತಮ್ ॥೩೯॥**

ಯಾನ ಅಥವಾ ಯಾತ್ರೆ ಎಂದರೆ ಶತ್ರುವಿನ ಮೇಲೆ ಯುದ್ಧಕ್ಕೆ ಹೋಗುವುದು. ಇದಕ್ಕೆ ನಾಲ್ಕು ಕಾಲವಿಶೇಷಗಳಿವೆ. ತನ್ನ ಮಿತ್ರರ ವೃದ್ಧಿ, ತನ್ನ ರಾಜ್ಯದ ಬೊಕ್ಕಸದ ತುಂಬಿರುವಿಕೆ, ಶತ್ರುವಿನ ಮಿತ್ರರನಾಶ, ಶತ್ರುಗಳ

ಬೊಕ್ಕಸದ ನಾಶ–ಇವು ದಂಡಯಾತ್ರೆಯ ಕಾಲಗಳು. ವಿಜಯಕ್ಕೆ ಸಂಬಂಧಿಸಿದಂತೆ ಧರ್ಮವಿಜಯ, ಅರ್ಥವಿಜಯ ಮತ್ತು ಆಸುರವಿಜಯ ಎಂಬ ತ್ರಿವರ್ಗಗಳನ್ನು ವಿಸ್ತಾರವಾಗಿ ಬ್ರಹ್ಮನ ನೀತಿಶಾಸ್ತ್ರದಲ್ಲಿ ಹೇಳಿದೆ. ಮಂತ್ರಿ, ರಾಷ್ಟ್ರ , ದುರ್ಗ, ಸೈನ್ಯ ಮತ್ತು ಕೋಶ–ಎಂಬ ಪಂಚವರ್ಗದ ಲಕ್ಷಣಗಳೂ, ಆ ಪಂಚವರ್ಗದಲ್ಲಿ ಉತ್ತಮ-ಮಧ್ಯಮಾಧಮಗಳೆಂಬ ಮೂರು ವಿಧಾನಗಳೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವಿಸ್ತಾರವಾಗಿ ವರ್ಣಿತವಾಗಿವೆ.

**ಪ್ರಕಾಶಶ್ಚಾಪ್ರಕಾಶಶ್ಚ ದಣ್ಡೋऽಥ ಪರಿಶಬ್ದಿತಃ ।**
**ಪ್ರಕಾಶೋऽಷ್ಟವಿಧಸ್ತತ್ರ ಗುಹ್ಯಶ್ಚ ಬಹುವಿಸ್ತರಃ ॥೪೦॥**

ದಂಡದಲ್ಲಿ (ಸೈನ್ಯದಲ್ಲಿ) ಪ್ರಕಾಶ ಮತ್ತು ಗುಪ್ತಗಳೆಂಬ ಎರಡು ಪ್ರಭೇದಗಳಿವೆ. ಪ್ರತ್ಯಕ್ಷವಾದ ಸೈನ್ಯದಲ್ಲಿ ಎಂಟು ಭೇದಗಳಿವೆ. ಗುಪ್ತಸೇನೆಯ ವಿಚಾರವಾಗಿ ಬಹುವಿಸ್ತಾರವಾದ ವರ್ಣನೆಯಿದೆ.

**ರಥಾ ನಾಗಾ ಹಯಾಶ್ಚೈವ ಪಾದಾತಾಶ್ಚೈವ ಪಾಣ್ಡವ ।**
**ವಿಷ್ಟಿರ್ನಾವಶ್ಚರಾಶ್ಚೈವ ದೇಶಿಕಾ ಇತಿ ಚಾಷ್ಟಮಮ್ ।**
**ಅಙ್ಗಾನ್ಯೇತಾನಿ ಕೌರವ್ಯ ಪ್ರಕಾಶಾನಿ ಬಲಸ್ಯ ತು ॥೪೧॥**

ರಥಗಳು, ಆನೆಗಳು, ಕುದುರೆಗಳು, ಪದಾತಿಗಳು, ಭಾರವನ್ನು ಹೊರುವವರು, ನಾವಿಕರು, ಗೂಢಚಾರರು ಮತ್ತು ಕಾಲಕಾಲಕ್ಕೆ ಮಾಡಬೇಕಾದ ಕರ್ತವ್ಯಗಳನ್ನು ತಿಳಿಯ ಹೇಳುವ ಆಚಾರ್ಯರು–ಇವುಗಳೇ ಪ್ರತ್ಯಕ್ಷಸೈನ್ಯದ ಅಷ್ಟಾಂಗಗಳು.

**ಜಙ್ಗಮಾಜಙ್ಗಮಾಶ್ಚೋಕ್ತಾಶ್ಚೂರ್ಣಯೋಗಾ ವಿಷಾದಯಃ ॥೪೨॥**

ಜಂಗಮಗಳೆಂದರೆ ಚಲಿಸುವ ಸರ್ಪಾದಿಗಳಿಂದ ಉತ್ಪನ್ನವಾದ ವಿಷಾದಿಚೂರ್ಣಯೋಗಗಳು. ಅಜಂಗಮ ಅಥವಾ ಸ್ಥಾವರಗಳೆಂದರೆ ಮರ-ಗಿಡ-ಬಳ್ಳಿಗಳಿಂದ ಉತ್ಪನ್ನವಾದ ವಿಷ-ಚೂರ್ಣಾದಿಗಳು. ಇವು ಸೈನ್ಯದ ಗುಪ್ತಾಂಗಗಳು.

**ಸ್ಪರ್ಶೇ ಚಾಭ್ಯವಹಾರ್ಯೇ ಚಾಪ್ಯುಪಾಂಶುರ್ವಿವಿಧಃ ಸ್ಮೃತಃ ।**
**ಅರಿರ್ಮಿತ್ರ ಉದಾಸೀನ ಇತ್ಯೇತೇऽಪ್ಯನುವರ್ಣಿತಾಃ ॥೪೩॥**

ಗುಪ್ತಸಾಧನವಾದ ವಿಷಾದಿಗಳನ್ನು ಆಯುಧಗಳ ಮೂಲಕ ಅಥವಾ ವಸ್ತ್ರಾದಿಗಳ ಮೂಲಕ ಶತ್ರುವಿಗೆ ಸ್ಪರ್ಶವಾಗುವಂತೆ ಮಾಡಬೇಕು. ಶತ್ರುಗಳ ಭೋಜನಾದಿಗಳಲ್ಲಿ ವಿಷವು ಬೆರೆಯುವಂತೆ ಮಾಡಬೇಕು. ಶತ್ರುನಾಶಕವಾದ ಅನೇಕಮಂತ್ರಗಳನ್ನು ಜಪಿಸಬೇಕು. ಇಷ್ಟೇ ಅಲ್ಲದೇ ಬ್ರಹ್ಮವಿರಚಿತವಾದ ನೀತಿಶಾಸ್ತ್ರದಲ್ಲಿ ಅರಿ, ಮಿತ್ರ ಮತ್ತು ಉದಾಸೀನರ ಬಗ್ಗೆಯೂ ವಿವರವಾದ ವರ್ಣನೆಯಿದೆ.

**ಕೃತ್ಸ್ನಾ ಮಾರ್ಗಗುಣಾಶ್ಚೈವ ತಥಾ ಭೂಮಿಗುಣಾಶ್ಚ ಹ ।**
**ಆತ್ಮರಕ್ಷಣಮಾಶ್ವಾಸಃ ಸರ್ಗಾಣಾಂ ಚಾನ್ವವೇಕ್ಷಣಮ್ ॥೪೪॥**

ಸಮಸ್ತವಾದ ಗ್ರಹ-ನಕ್ಷತ್ರಮಾರ್ಗಗುಣಗಳು (ಗ್ರಹಗಳು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಹೋಗುವುದರಿಂದ ಉಂಟಾಗುವ ಮಾರ್ಪಾಡುಗಳು ; ನಕ್ಷತ್ರಗಳ ಉದಯಾಸ್ತಗಳಿಂದ ಆಗುವ ಪರಿಣಾಮ ಗಳು.) ಎಂಬತ್ತುನಾಲ್ಕು ಭೂಮಿಯ ಗುಣಗಳು ಅಥವಾ ಬಲಗಳು. ಮಂತ್ರ-ಯಂತ್ರಾದಿಗಳಿಂದ ಮಾಡಿಕೊಳ್ಳಬೇಕಾದ ಆತ್ಮರಕ್ಷಣೆ, ಆಶ್ವಾಸನೆ, ರಥಾದಿಗಳ ನಿರ್ಮಾಣ ಮತ್ತು ಅವುಗಳ ನಿರೀಕ್ಷೆ–ಇವುಗಳೆಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವರ್ಣಿಸಲ್ಪಟ್ಟಿವೆ.

**ಕಲ್ಪನಾ ವಿವಿಧಾಶ್ಚಾಪಿ ನೃನಾಗರಥವಾಜಿನಾಮ್ ।**
**ವ್ಯೂಹಾಶ್ಚ ವಿವಿಧಾಭಿಖ್ಯಾ ವಿಚಿತ್ರಂ ಯುದ್ಧಕೌಶಲಮ್ ॥೪೫॥**

**ಉತ್ಪಾತಾಶ್ಚ ನಿಪಾತಾಶ್ಚ ಸುಯುದ್ಧಂ ಸುಪಲಾಯಿತಮ್ ।**
**ಶಸ್ತ್ರಾಣಾಂ ಪಾಲನಂ ಜ್ಞಾನಂ ತಥೈವ ಭರತರ್ಷಭ ॥೪೬॥**

ಸೈನ್ಯವನ್ನು ಪುಷ್ಟಿಗೊಳಿಸಲು ಕೈಗೊಳ್ಳಬೇಕಾದ ನಾನಾವಿಧವಾದ ಉಪಾಯಗಳು. ಆನೆ, ಕುದುರೆ, ರಥ, ಕಾಲಾಳುಗಳ ಮೂಲಕವಾಗಿ ರಚಿಸ ಬಹುದಾದ ನಾನಾವಿಧವಾದ ವ್ಯೂಹರಚನೆಗಳು. ನಾನಾಪ್ರಕಾರವಾದ ಮತ್ತು ವಿಚಿತ್ರವಾದ ಯುದ್ಧಕೌಶಲ, ದ್ವಂದ್ವಯುದ್ಧಮಾಡುವಾಗ ಮೇಲಕ್ಕೆ ಹಾರು ವುದು, ತಪ್ಪಿಸಿಕೊಳ್ಳುವ ಸಲುವಾಗಿ ಕೆಳಕ್ಕೆ ಬೀಳುವುದು, ಎದುರಿಗೆ ನಿಂತು ಧರ್ಮಾನುಸಾರವಾಗಿ ಯುದ್ಧಮಾಡುವುದು, ಶತ್ರುವಿಗೆ ಬಲವಾದ ಪೆಟ್ಟುಕೊಟ್ಟು ಪಲಾಯನಮಾಡುವುದು, (ಯುದ್ಧತಂತ್ರವನ್ನು ಅನುಸರಿಸಿ

ಹಿಮ್ಮೆಟ್ಟುವುದು,)–ಇವುಗಳೆಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವಿವೃತವಾಗಿವೆ. ವ್ಯಾಖ್ಯಾನಕಾರರ ಪ್ರಕಾರ : ಉತ್ಪಾತಃ– ಗ್ರಹಯುದ್ಧ ; ಧೂಮಕೇತು ದರ್ಶನಗಳು. ನಿಪಾತಃ –ಉಲ್ಕಾಪಾತ ಭೂ-ಕಂಪನಾದಿಗಳು ಯಾವಾಗ ಸಂಭವಿಸುವುವೆಂಬುದರ ವಿವರಣೆ.) ಶಸ್ತ್ರಗಳನ್ನು ಹರಿತಗೊಳಿಸುವ ವಿಧಾನ ಅವುಗಳ ಸಂರಕ್ಷಣೆ ಮತ್ತು ಪ್ರಯೋಗಗಳೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವಿಸ್ತಾರ ವಾಗಿ ಹೇಳಲ್ಪಟ್ಟಿವೆ.

**ಬಲವ್ಯಸನಮುಕ್ತಂ ಚ ತಥೈವ ಬಲಹರ್ಷಣಮ್ ।**
**ಪೀಡಾ ಚಾಪದಕಾಲಶ್ಚ ಪತ್ತಿಜ್ಞಾನಂ ಚ ಪಾಣ್ಡವ ॥೪೭॥**

ಸೈನ್ಯಕ್ಕೆ ಒದಗುವ ವ್ಯಸನಗಳು (ತೊಂದರೆಗಳು), ಸೈನಿಕರನ್ನು ಹರ್ಷ ಗೊಳಿಸುವ ಮತ್ತು ಪ್ರೋತ್ಸಾಹಗೊಳಿಸುವ ಬಗೆ, ಶತ್ರುಪೀಡೆ, ರಾಜಧಾನಿ ಯನ್ನು ಬಿಟ್ಟು ಬೇರೆ ಕಡೆಯಲ್ಲಿ ಇರಬೇಕಾದ ಕಾಲ, ಪದಾತಿಸೈನಿಕರ ಸ್ವಾಮಿನಿಷ್ಠೆಯ ಪರೀಕ್ಷಾವಿಧಾನ–ಇವುಗಳೆಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ಉಕ್ತವಾಗಿವೆ.

**ತಥಾ ಖಾತವಿಧಾನಂ ಚ ಯೋಗಃ ಸಂಚಾರ ಏವ ಚ ।**
**ಚೋರೈರಾಟವಿಕೈಶ್ಚೋಗ್ರೈಃ ಪರರಾಷ್ಟ್ರಸ್ಯ ಪೀಡನಮ್ ॥೪೮॥**
**ಅಗ್ನಿದೈರ್ಗರದೈಶ್ಚೈವ ಪ್ರತಿರೂಪಕಕಾರಕೈಃ ।**
**ಶ್ರೇಣಿಮುಖ್ಯೋಪಜಾಪೇನ ವೀರುಧಶ್ಛೇದನೇನ ಚ ॥೪೯॥**
**ದೂಷಣೇನ ಚ ನಾಗಾನಾಮಾತಙ್ಕಜನನೇನ ಚ ।**
**ಆರಾಧನೇನ ಭಕ್ತಸ್ಯ ಪ್ರತ್ಯಯೋಪಾರ್ಜನೇನ ಚ ॥೫೦॥**

ದುರ್ಗದ ನಾಲ್ಕು ಕಡೆಗಳಲ್ಲಿಯೂ ಕಂದಕಗಳನ್ನು ತೋಡುವ ಕ್ರಮ, ಚತುರಂಗಸೈನ್ಯಗಳನ್ನೂ ಯುದ್ಧಕ್ಕಾಗಿ ಸಜ್ಜುಗೊಳಿಸುವುದು, ರಣಯಾತ್ರೆ, ಭಯಂಕರರಾದ ಕಾಡುಜನರ ಮತ್ತು ಕಳ್ಳ-ಕಾಕರ ಮೂಲಕವಾಗಿ ಶತ್ರುಗಳ ರಾಜ್ಯಕ್ಕೆ ಪೀಡೆಯನ್ನುಂಟುಮಾಡುವುದು, ಬೆಂಕಿಯಿಡುವುದರಿಂದಲೂ ವಿಷಹಾಕುವುದರಿಂದಲೂ ಕೃತ್ರಿಮಪತ್ರಗಳ ಸೃಷ್ಟಿಕರ್ತರಿಂದಲೂ ಶತ್ರುಪಕ್ಷದ ಪ್ರಮುಖರಿಗೆ ಹಾನಿಯನ್ನುಂಟುಮಾಡುವುದು, ಮಂತ್ರಿ-ಸೇನಾಪತಿಗಳ ವೇಷಧಾರಿಗಳನ್ನು ಕಳುಹಿಸಿ ಶತ್ರುಗಳನ್ನು ಮೋಸಗೊಳಿಸುವುದು, ಶತ್ರು

ಸೇನಾದಳಗಳ ಮುಖ್ಯರಿಗೆ ಪರಸ್ಪರವಾಗಿ ಭಿನ್ನಾಭಿಪ್ರಾಯವುಂಟಾಗುವಂತೆ ಮಾಡುವುದು, ಬೆಳೆದು ನಿಂತಿರುವ ಫಸಲನ್ನು ಕತ್ತರಿಸಿ ಹಾಕುವುದು, ಶತ್ರುಪಕ್ಷದ ಆನೆಗಳನ್ನು ರೇಗಿಸುವುದು, ಶತ್ರುರಾಜ್ಯದ ಪ್ರಜೆಗಳಿಗೆ ಆತಂಕ ವನ್ನುಂಟುಮಾಡುವುದು, ಶತ್ರುಪಕ್ಷದಲ್ಲಿಯೇ ಅನುರಕ್ತನಾದ ಮತ್ತು ಶತ್ರು ಪಕ್ಷದಲ್ಲಿ ಅತ್ಯಂತಮುಖ್ಯನಾದವನನ್ನು ವಿಶೇಷವಾಗಿ ಪುರಸ್ಕರಿಸುವುದರ ಮೂಲಕ ತನ್ನ ಕಡೆಗೆ ಒಲಿಸಿಕೊಳ್ಳುವುದು–ಈ ಎಲ್ಲ ವಿಷಯಗಳನ್ನೂ ಬ್ರಹ್ಮವಿರಚಿತವಾದ ನೀತಿಶಾಸ್ತ್ರದಲ್ಲಿ ವಿಸ್ತಾರವಾಗಿ ಹೇಳಿದೆ.

**ಸಪ್ತಾಙ್ಗಸ್ಯ ಚ ರಾಜ್ಯಸ್ಯ ಹ್ರಾಸವೃದ್ಧಿಸಮಞ್ಜಸಮ್ ।**
**ದೂತಸಾಮರ್ಥ್ಯಸಂಯೋಗಾತ್ಸ್ವರಾಷ್ಟ್ರಸ್ಯ ವಿವರ್ಧನಮ್ ॥೫೧॥**

**ಅರಿಮಧ್ಯಸ್ಥಮಿತ್ರಾಣಾಂ ಸಮ್ಯಕ್ಪ್ರೋಕ್ತಂ ಪ್ರಪಞ್ಚನಮ್ ।**
**ಅವಮರ್ದಃ ಪ್ರತೀಘಾತಸ್ತಥೈವ ಚ ಬಲೀಯಸಾಮ್ ॥೫೨॥**

ಸಪ್ತಾಂಗಯುಕ್ತವಾದ ರಾಜ್ಯದ ಕ್ಷಯ, ವೃದ್ಧಿ ಮತ್ತು ಸಮತ್ವಗಳ ವರ್ಣನೆಯೂ, ದೂತನ ಸಾಮರ್ಥ್ಯದ ಸಹಯೋಗದಿಂದ ತನ್ನನ್ನೂ ಮತ್ತು ರಾಷ್ಟ್ರವನ್ನೂ ವೃದ್ಧಿಗೊಳಿಸಿಕೊಳ್ಳುವ ವಿಧಿ-ವಿಧಾನಗಳೂ ಬ್ರಹ್ಮನ ನೀತಿ ಶಾಸ್ತ್ರದಲ್ಲಿ ಉಕ್ತವಾಗಿವೆ. ಅರಿ, ಮಧ್ಯಸ್ಥ ಮತ್ತು ಮಿತ್ರರ ವಿಸ್ತಾರವಾದ ವಿವೇಚನೆ, ಬಲಿಷ್ಠರಾದ ಶತ್ರುಗಳನ್ನು ಉಪಾಯಾಂತರಗಳಿಂದ ನಾಶಪಡಿಸು ವುದು, ಸಮಯವು ಒದಗಿಬಂದಾಗ ಶತ್ರುಗಳ ಉಪಾಯಗಳನ್ನು ಭಂಗ ಗೊಳಿಸುವುದು–ಇವುಗಳ ವಿಧಾನಗಳೆಲ್ಲವನ್ನೂ ಬ್ರಹ್ಮರಚಿತವಾದ ನೀತಿಶಾಸ್ತ್ರ ದಲ್ಲಿ ಹೇಳಿದೆ.

**ವ್ಯವಹಾರಃ ಸುಸೂಕ್ಷ್ಮಶ್ಚ ತಥಾ ಕಣ್ಟಕಶೋಧನಮ್ ।**
**ಶ್ರಮೋ ವ್ಯಾಯಾಮಯೋಗಶ್ಚ ತ್ಯಾಗೋ ದ್ರವ್ಯಸ್ಯ ಸಂಗ್ರಹಃ ॥೫೩॥**

ಶಾಸನಸಂಬಂಧವಾದ ಅತಿಸೂಕ್ಷ್ಮವಾದ ವ್ಯವಹಾರ, ಕಂಟಕಶೋಧನ (ರಾಜ್ಯವ್ಯವಹಾರದಲ್ಲಿ ವಿಘ್ನವನ್ನುಂಟುಮಾಡುವವರನ್ನು ಕಂಡುಹಿಡಿದು ಧ್ವಂಸಮಾಡುವುದು), ವ್ಯಾಯಾಮಯೋಗ (ಆಯುಧಗಳ ಪ್ರಯೋಗಾ ಭ್ಯಾಸಗಳು), ಪರಿಶ್ರಮ (ಮಲ್ಲಕ್ರೀಡೆ ಮುಂತಾದುವುಗಳು), ಧನದ ತ್ಯಾಗ ಮತ್ತು ಧನದ ಸಂಗ್ರಹ–ಈ ವಿಷಯಗಳೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ.

**ಆಭೃತಾನಾಂ ಚ ಭರಣಂ ಭೃತಾನಾಂ ಚಾನ್ವವೇಕ್ಷಣಮ್ ।**
**ಅರ್ಥಸ್ಯ ಕಾಲೇ ದಾನಂ ಚ ವ್ಯಸನೇ ಚಾಪ್ರಸಜ್ಗಿತಾ ॥೫೪॥**

ರಾಜ್ಯದಲ್ಲಿ ಯಾರ ಭರಣ-ಪೋಷಣೆಗಳು ಆಗುತ್ತಿಲ್ಲವೋ, ಯಾರು ಕೆಲಸಮಾಡಲು ಅಶಕ್ತರಾಗಿರುವರೋ, ನಿರ್ಗತಿಕರಾಗಿರುವರೋ, ಅಂತಹವರ ಭರಣ-ಪೋಷಣೆಗಳನ್ನು ರಾಜನೇ ನೋಡಿಕೊಳ್ಳಬೇಕು. ರಾಜ್ಯವು ಯಾರಿಗೆ ಭರಣ-ಪೋಷಣಗಳ ವ್ಯವಸ್ಥೆಯನ್ನು ಮಾಡಿರುವುದೋ ಅಂತಹವರ ನಡೆ, ನುಡಿ, ಕಾರ್ಯಗಳ ಬಗೆಗೆ ದೃಷ್ಟಿಯನ್ನಿಟ್ಟಿರಬೇಕು. ಕಾಲ-ಕಾಲಗಳಲ್ಲಿ ಧನವನ್ನು ದಾನಮಾಡಬೇಕು. ದುರ್ವ್ಯಸನಗಳಲ್ಲಿ ಆಸಕ್ತನಾಗಿರಬಾರದು. ಈ ಎಲ್ಲ ವಿಷಯಗಳೂ ಆ ಮಹಾಗ್ರಂಥದಲ್ಲಿ ಹೇಳಿವೆ. ಹಾಗೆಯೇ ರಾಜನ ಗುಣಗಳು, ಸೇನಾಪತಿಯ ಗುಣಗಳು, ತ್ರಿವರ್ಗಾನುಷ್ಠಾನದ ಕಾರಣಗಳು ಮತ್ತು ಗುಣದೋಷಗಳು–ಇವೆಲ್ಲವೂ ಉಕ್ತವಾಗಿವೆ.

**ದುಶ್ಚೇಷ್ಟಿತಂ ಚ ವಿವಿಧಂ ವೃತ್ತಿಶ್ಚೈವಾನುವರ್ತಿನಾಮ್ ।**
**ಶಜ್ಕಿತತ್ವಂ ಚ ಸರ್ವಸ್ಯ ಪ್ರಮಾದಸ್ಯ ಚ ವರ್ಜನಮ್ ॥೫೬॥**

**ಅಲಬ್ಧಲಾಭೋ ಲಬ್ಧಸ್ಯ ತಥೈವ ಚ ವಿವರ್ಧನಮ್ ।**
**ಪ್ರದಾನಂ ಚ ವಿವೃದ್ಧಸ್ಯ ಪಾತ್ರೇಭ್ಯೋ ವಿಧಿವತ್ತತಃ ॥೫೭॥**

**ವಿಸರ್ಗೋಽರ್ಥಸ್ಯ ಧರ್ಮಾರ್ಥಂ ಕಾಮಹೈತುಕಮುಚ್ಯತೇ ।**
**ಚತುರ್ಥಂ ವ್ಯಸನಾಘಾತೇ ತಥೈವಾತ್ರಾನುವರ್ಣಿತಮ್ ॥೫೮॥**

ನಾನಾವಿಧವಾದ ದುಶ್ಚೇಷ್ಟಿತಗಳು ( ದುರ್ವ್ಯವಹಾರಗಳು ), ತನ್ನನ್ನೇ ಅನುಸರಿಸಿ ಇರತಕ್ಕವರಿಗೆ ವಹಿಸಿಕೊಡಬಹುದಾದ ಕಾರ್ಯಭಾರಗಳು, ಎಲ್ಲರ ವಿಷಯದಲ್ಲಿಯೂ ಸಂದೇಹಿಸುವುದು, ಕರ್ತವ್ಯದಲ್ಲಿ ಅಲಕ್ಷ್ಯವನ್ನು–ಅಕರ್ತವ್ಯದಲ್ಲಿ ಆಸಕ್ತಿಯನ್ನು ವಿಸರ್ಜಿಸುವುದು, ಲಭಿಸದೇ ಇರುವ ವಸ್ತುವನ್ನು ಪಡೆದುಕೊಳ್ಳುವುದು, ಪಡೆದುಕೊಂಡ ವಸ್ತುವನ್ನು ರಕ್ಷಿಸುವುದು ಮತ್ತು ಅದನ್ನು ವೃದ್ಧಿಸುವುದು, ಹಾಗೆ ವೃದ್ಧಿಸಿದ ವಸ್ತುವನ್ನು ( ಐಶ್ವರ್ಯವನ್ನು) ಸತ್ಪಾತ್ರರಿಗೆ ವಿಧಿವತ್ತಾಗಿ ಹಂಚಿಕೊಡುವುದು, ವೃದ್ಧಿಸಿದ ಐಶ್ವರ್ಯವನ್ನು ಧರ್ಮಾರ್ಥವಾಗಿ ತ್ಯಾಗಮಾಡುವುದು, ಕಾಮೋಪಭೋಗಗಳಿಗಾಗಿ ವ್ಯಯಿಸುವುದು, ಯಾವುದಾದರೂ ಸಂಕಟವು ಒದಗಿದಲ್ಲಿ ಅದರ ನಿವಾರಣೆ

ಗಾಗಿ ಸಂಚಿತವಾದ ಐಶ್ವರ್ಯವನ್ನು ವ್ಯಯಿಸುವುದು–ಹೀಗೆ ಕೂಡಿಹಾಕಿ ವೃದ್ಧಿಪಡಿಸಿದ ಐಶ್ವರ್ಯವನ್ನು ವ್ಯಯಿಸಲು ಇರುವ ನಾಲ್ಕು ಮಾರ್ಗಗಳೂ ಬ್ರಹ್ಮನು ರಚಿಸಿರುವ ನೀತಿಶಾಸ್ತ್ರದಲ್ಲಿ ವರ್ಣಿತವಾಗಿವೆ.

**ಕ್ರೋಧಜಾನಿ ತಥೋಗ್ರಾಣಿ ಕಾಮಜಾನಿ ತಥೈವ ಚ ।**
**ದಶೋಕ್ತಾನಿ ಕುರುಶ್ರೇಷ್ಠ ವ್ಯಸನಾನ್ಯತ್ರ ಚೈವ ಹ ॥೫೯॥**

ಕುರುಶ್ರೇಷ್ಠನೇ! ಕಾಮ-ಕ್ರೋಧಗಳಿಂದ ಹುಟ್ಟುವ ಹತ್ತು ವಿಧವಾದ ಭಯಂಕರವ್ಯಸನಗಳನ್ನೂ ಆ ನೀತಿಶಾಸ್ತ್ರದಲ್ಲಿ ವಿವರಿಸಿ ಹೇಳಿದ್ದಾರೆ.

**ಮೃಗಯಾಕ್ಷಾಸ್ತಥಾ ಪಾನಂ ಸ್ತ್ರಿಯಶ್ಚ ಭರತರ್ಷಭ ।**
**ಕಾಮಜಾನ್ಯಾಹುರಾಚಾರ್ಯಾಃ ಪ್ರೋಕ್ತಾನೀಹ ಸ್ವಯಮ್ಭುವಾ ॥೬೦॥**

ಬೇಟೆಯಾಡುವುದು, ಜೂಜಾಡುವುದು, ಮದ್ಯಪಾನಮಾಡುವುದು ಮತ್ತು ಸರ್ವದಾ ಸ್ತ್ರೀಯರಲ್ಲಿಯೇ ಆಸಕ್ತನಾಗಿರುವುದು–ಇವುಗಳನ್ನು ನೀತಿ ಶಾಸ್ತ್ರದ ಆಚಾರ್ಯರು ಕಾಮಜನ್ಯವಾದ ವ್ಯಸನಗಳೆಂದು ಹೇಳುತ್ತಾರೆ. ಬ್ರಹ್ಮನು ರಚಿಸಿರುವ ನೀತಿಶಾಸ್ತ್ರದಲ್ಲಿ ಆ ಎಲ್ಲ ವ್ಯಸನಗಳ ವಿಷಯವಾಗಿಯೂ ವಿಸ್ತಾರವಾದ ವರ್ಣನೆಯಿದೆ.

**ವಾಕ್ಪಾರುಷ್ಯಂ ತಥೋಗ್ರತ್ವಂ ದಣ್ಡಪಾರುಷ್ಯಮೇವ ಚ ।**
**ಆತ್ಮನೋ ನಿಗ್ರಹಸ್ತ್ಯಾಗೋ ಹ್ಯರ್ಥದೂಷಣಮೇವ ಚ ॥೬೧॥**

ಮಾತಿನಲ್ಲಿ ಕಾಠಿಣ್ಯ, ಉಗ್ರತೆ, ಉಗ್ರವಾಗಿ ದಂಡಿಸುವುದು, ತನ್ನ ಶರೀರವನ್ನೇ ದಂಡಿಸಿಕೊಳ್ಳುವುದು, ಬಂಧು-ಬಳಗದವರನ್ನು ಕೋಪಾವೇಶ ದಿಂದ ಕಾರಣವಿಲ್ಲದೇ ತ್ಯಾಗಮಾಡುವುದು, ಅರ್ಥದೂಷಣ–ಅರ್ಥಹಾನಿ (ಕೋಪವಶನಾಗಿ ಕೈಗೆ ಸಿಕ್ಕಿದ ವಸ್ತುಗಳನ್ನು ಒಡೆದುಹಾಕುವುದು )–ಇವು ಆರೂ ಕ್ರೋಧಜನ್ಯವಾದ ವ್ಯಸನಗಳು.

**ಯನ್ತ್ರಾಣಿ ವಿವಿಧಾನ್ಯೇವ ಕ್ರಿಯಾಸ್ತೇಷಾಂ ಚ ವರ್ಣಿತಾಃ ।**
**ಆವಮರ್ದಃ ಪ್ರತೀಘಾತಃ ಕೇತನಾನಾಂ ಚ ಭಞ್ಜನಮ್ ॥೬೨॥**

ಬ್ರಹ್ಮನ ನೀತಿಶಾಸ್ತ್ರದಲ್ಲಿ ನಾನಾವಿಧವಾದ ಯಂತ್ರಗಳೂ ಮತ್ತು ಆ

ಯಂತ್ರಗಳ ಮೂಲಕವಾಗಿ ಆಗುವ ವಿಧವಿಧವಾದ ಕಾರ್ಯಗಳೂ ವರ್ಣಿತವಾಗಿವೆ. ಶತ್ರುಗಳ ರಾಷ್ಟ್ರವನ್ನು ಧ್ವಂಸಗೊಳಿಸುವುದು, ಶತ್ರುಗಳ ಸೈನ್ಯಕ್ಕೆ ಆಘಾತವನ್ನುಂಟುಮಾಡುವುದು, ಶತ್ರುಗಳ ರಾಜಧಾನಿಗಳಲ್ಲಿರುವ ಮನೆ-ಮಠಗಳನ್ನು ನಿರ್ನಾಮಗೊಳಿಸುವುದು–ಇವೆಲ್ಲದರ ಉಲ್ಲೇಖವೂ ಆ ಮಹಾನೀತಿಗ್ರಂಥದಲ್ಲಿದೆ.

**ಚೈತ್ಯದ್ರುಮಾವಮರ್ದಶ್ಚ ರೋಧಃ ಕರ್ಮಾನುಶಾಸನಮ್ ।**
**ಅಪಸ್ಕರೋಽಥ ವಸನಂ ತಥೋಪಾಯಾಶ್ಚ ವರ್ಣಿತಾಃ ॥೬೩॥**

ಶತ್ರುಗಳ ರಾಜಧಾನಿಯಲ್ಲಿರುವ ಚೈತ್ಯವೃಕ್ಷಗಳನ್ನು (ಅಶ್ವತ್ಥವೇ ಮೊದಲಾದ ದೊಡ್ಡ ದೊಡ್ಡ ವೃಕ್ಷಗಳನ್ನು) ಧ್ವಂಸಮಾಡುವುದು, ಶತ್ರುವಿನ ಅರಮನೆಯನ್ನು ಅಥವಾ ರಾಜಧಾನಿಯನ್ನು ನಾಲ್ಕು ದಿಕ್ಕುಗಳಿಂದಲೂ ಮುತ್ತಿಗೆಹಾಕುವುದು–ಇವುಗಳಿಗೆ ಸಂಬಂಧಿಸಿದ ಉಪಾಯಗಳೆಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವರ್ಣಿತವಾಗಿದೆ. ಕೃಷಿ, ಶಿಲ್ಪ–ಇವುಗಳೇ ಮೊದಲಾದುವನ್ನು ಹೇಗೆ ಮಾಡಬೇಕೆಂಬುದೂ ವರ್ಣಿತವಾಗಿದೆ. ರಥದ ಅಂಗಗಳ ನಿರ್ಮಾಣ, ಗ್ರಾಮಗಳಲ್ಲಿ ಮತ್ತು ನಗರಗಳಲ್ಲಿ ಗೃಹನಿರ್ಮಾಣ ವಿಧಿ, ಜೀವನನಿರ್ವಹಣೆಗೆ ಇರುವ ಅನೇಕೋಪಾಯಗಳೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವರ್ಣಿತವಾಗಿವೆ.

**ಪಣವಾನಕಶಙ್ಖಾನಾಂ ಭೇರೀಣಾಂ ಚ ಯುಧಿಷ್ಠಿರ ।**
**ಉಪಾರ್ಜನಂ ಚ ದ್ರವ್ಯಾಣಾಂ ಪರಿಮರ್ದಶ್ಚ ತಾನಿ ಷಟ್ ॥೬೪॥**

ಯುಧಿಷ್ಠಿರ! ಮದ್ದಳೆ, ನಗಾರಿ, ಶಂಖ, ಭೇರೀ–ಇವೇ ಮೊದಲಾದ ರಣವಾದ್ಯಗಳನ್ನು ಬಾರಿಸುವ ಕ್ರಮ ; ಮಣಿ, ಪಶು, ಪೃಥ್ವೀ, ವಸ್ತ್ರ, ದಾಸ-ದಾಸಿಯರು ಮತ್ತು ಸುವರ್ಣ–ಇವುಗಳನ್ನು ಸಂಪಾದಿಸುವ ವಿಧಾನ ; ಶತ್ರುಪಕ್ಷದಲ್ಲಿರುವ ಇವೇ ಆರು ವಸ್ತುಗಳನ್ನು ವಿಧ್ವಂಸಮಾಡುವ ವಿಧಾನ–ಈ ಎಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿವೆ.

**ಲಬ್ಧಸ್ಯ ಚ ಪ್ರಶಮನಂ ಸತಾಂ ಚೈವಾಭಿಪೂಜನಮ್ ।**
**ವಿದ್ವದ್ಭಿರೇಕೀಭಾವಶ್ಚ ದಾನಹೋಮವಿಧಿಜ್ಞತಾ ॥೬೫॥**

**ಮಙ್ಗಲಾಲಮ್ಭನಂ ಚೈವ ಶರೀರಸ್ಯ ಪ್ರತಿಕ್ರಿಯಾ ।**
**ಆಹಾರಯೋಜನಂ ಚೈವ ನಿತ್ಯಮಾಸ್ತಿಕ್ಯಮೇವ ಚ ॥೬೬॥**

ತನ್ನ ಅಧೀನಕ್ಕೊಳಪಟ್ಟಿರುವ ದೇಶದಲ್ಲಿ ಶಾಂತಿಯನ್ನು ಸ್ಥಾಪಿಸುವುದು, ಸತ್ಪುರುಷರನ್ನು ಸತ್ಕರಿಸುವುದು, ವಿದ್ವಾಂಸರೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಳ್ಳುವುದು, ದಾನ ಮತ್ತು ಹೋಮಗಳ ವಿಧಿಯನ್ನು ತಿಳಿದುಕೊಳ್ಳುವುದು, ಮಂಗಲವಸ್ತುಗಳನ್ನು ಸ್ಪರ್ಶಿಸುವುದು, ಶರೀರವನ್ನು ವಸ್ತ್ರದಿಂದಲೂ ಮತ್ತು ಆಭರಣಗಳಿಂದಲೂ ಸಿಂಗರಿಸಿಕೊಳ್ಳುವ ರೀತಿ, ಭೋಜನದ ವ್ಯವಸ್ಥೆ, ಸರ್ವದಾ ಆಸ್ತಿಕ್ಯ ಬುದ್ಧಿಯಿಂದಲೇ ಇರುವುದು–ಈ ಎಲ್ಲ ವಿಷಯಗಳೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ವರ್ಣಿತವಾಗಿವೆ.

**ಏಕೇನ ಚ ಯಥೋತ್ಥೇಯಂ ಸತ್ಯತ್ವಂ ಮಧುರಾ ಗಿರಃ ।**
**ಉತ್ಸವಾನಾಂ ಸಮಾಜಾನಾಂ ಕ್ರಿಯಾಃ ಕೇತನಜಾಸ್ತಥಾ ॥೬೭॥**

ರಾಜನು ಏಕಾಕಿಯಾಗಿದ್ದರೂ ಉನ್ನತಸ್ಥಿತಿಗೆ ಬರುವ ವಿಧಾನಗಳು, ಸತ್ಯನಿಷ್ಠೆ, ಉತ್ಸವಾದಿಗಳಲ್ಲಿ ಮತ್ತು ಸಮಾಜದಲ್ಲಿ ಹೇಳಬೇಕಾದ ಮಧುರ ವಾದ ಮಾತುಗಳು, ಮಾಡಬೇಕಾದ ಕೆಲಸಗಳು ಮತ್ತು ಗೃಹಕೃತ್ಯಗಳಿಗೆ ಸಂಬಂಧಿಸಿದ ವಿಷಯಗಳು–ಈ ಎಲ್ಲವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ಉಕ್ತ ವಾಗಿವೆ.

**ಪ್ರತ್ಯಕ್ಷಾಶ್ಚ ಪರೋಕ್ಷಾಶ್ಚ ಸರ್ವಾಧಿಕರಣೇಷ್ವಥ ।**
**ವೃತ್ತೇರ್ಭರತಶಾರ್ದೂಲ ನಿತ್ಯಂ ಚೈವಾನ್ವವೇಕ್ಷಣಮ್ ॥೬೮॥**

ಭರತಶಾರ್ದೂಲನೇ! ದೇಶದ ಎಲ್ಲ ನ್ಯಾಯಾಲಯಗಳಲ್ಲಿಯೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಯಾವ ವ್ಯವಹಾರಗಳು ನಡೆಯುತ್ತಿರು ತ್ತವೆಯೋ ಮತ್ತು ಅಲ್ಲಿನ ನ್ಯಾಯಾಧೀಶರು ಯಾವ ವಿಧವಾದ ವ್ಯವಹಾರ ಗಳನ್ನು ಇಟ್ಟುಕೊಂಡಿರುತ್ತಾರೆಯೋ–ಆ ಎಲ್ಲ ವಿಷಯಗಳನ್ನೂ ರಾಜನಾದ ವನು ಪ್ರತ್ಯಕ್ಷವಾಗಿ ಅಥವಾ ಚಾರರ ಮೂಲಕವಾಗಿ ಗಮನಿಸುತ್ತಲೇ ಇರಬೇಕು. ಈ ವಿಷಯವೂ ಬ್ರಹ್ಮನ ನೀತಿಶಾಸ್ತ್ರದಲ್ಲಿ ಪ್ರಸ್ತಾಪಿತವಾಗಿದೆ.

**ಅದಣ್ಡ್ಯತ್ವಂ ಚ ವಿಪ್ರಾಣಾಂ ಯುಕ್ತ್ಯಾ ದಣ್ಡನಿಪಾತನಮ್ ।**
**ಅನುಜೀವಿಸ್ವಜಾತಿಭ್ಯೋ ಗುಣೇಭ್ಯಶ್ಚ ಸಮುದ್ಭವಃ ॥೬೯॥**

ಬ್ರಾಹ್ಮಣರನ್ನು ಶಾರೀರಕವಾಗಿ ಶಿಕ್ಷಿಸದಿರುವುದು, ಅಪರಾಧಿಗಳಿಗೆ ಯುಕ್ತಿಪೂರ್ವಕವಾಗಿ ದಂಡವನ್ನು ವಿಧಿಸುವುದು, ಮತ್ತು ತನ್ನ ಅನುಯಾಯಿಗಳಿಗೂ, ಜ್ಞಾತಿಬಾಂಧವರಿಗೂ ಗುಣವಂತರಿಗೂ, ಹೇಗೆ ಅನುಕೂಲಮಾಡಿಕೊಡಬೇಕೆಂಬುದೂ–ನೀತಿಶಾಸ್ತ್ರದಲ್ಲಿ ಹೇಳಿದೆ.

**ರಕ್ಷಣಂ ಚೈವ ಪೌರಾಣಾಂ ರಾಷ್ಟ್ರಸ್ಯ ಚ ವಿವರ್ಧನಮ್ ।**
**ಮಣ್ಡಲಸ್ಥಾ ಚ ಯಾ ಚಿನ್ತಾ ರಾಜನ್ದ್ವಾದಶರಾಜಿಕಾ* ॥೭೦॥**

ಪಟ್ಟಣಿಗರ ರಕ್ಷಣೆ, ರಾಷ್ಟ್ರದ ವೃದ್ಧಿ, ಮಂಡಲಸ್ಥರಾದ ಹನ್ನೆರಡು ಬಗೆಯ ರಾಜರ ಸಂಬಂಧವಾದ ಚಿಂತೆ–ಇವುಗಳೆಲ್ಲವೂ ಆ ಮಹಾನೀತಿಶಾಸ್ತ್ರ ದಲ್ಲಿ ವರ್ಣಿಸಲ್ಪಟ್ಟಿವೆ.

**ದ್ವಾಸಪ್ತತಿವಿಧಾ ಚೈವ ಶರೀರಸ್ಯ ಪ್ರತಿಕ್ರಿಯಾ ।**
**ದೇಶಜಾತಿಕುಲಾನಾಂ ಚ ಧರ್ಮಾಃ ಸಮನುವರ್ಣಿತಾಃ ॥೭೧॥**

ವೈದ್ಯಶಾಸ್ತ್ರಾನುಸಾರವಾಗಿ ಶರೀರಕ್ಕೆ ನಡೆಸುವ ಎಪ್ಪತ್ತೆರಡು ವಿಧವಾದ ಚಿಕಿತ್ಸೆಗಳು, ದೇಶ, ಜಾತಿ ಮತ್ತು ಕುಲಗಳ ಧರ್ಮಗಳು ಬ್ರಹ್ಮನು ರಚಿಸಿರುವ ನೀತಿಶಾಸ್ತ್ರದಲ್ಲಿವೆ.

**ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚಾತ್ರಾನುವರ್ಣಿತಾಃ ।**
**ಉಪಾಯಾಶ್ಚಾರ್ಥಲಿಪ್ಸಾ ಚ ವಿವಿಧಾ ಭೂರಿದಕ್ಷಿಣ ॥೭೨॥**

ಭೂರಿದಕ್ಷಿಣನೇ! ಆ ಮಹಾಗ್ರಂಥದಲ್ಲಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳ ಪ್ರಾಪ್ತ್ಯುಪಾಯಗಳನ್ನೂ ನಾನಾಪ್ರಕಾರವಾದ ಧನಾಭಿಲಾಷೆಗಳನ್ನೂ ಹೇಳಿದೆ.

---

* ದ್ವಾದಶರಾಜಿಕಾ = ದ್ವಾದಶಾನಾಂ ರಾಜ್ಞಾಂ ಸಮೂಹಃ – ಹನ್ನೆರಡು ರಾಜರ ಸಮೂಹ. ನಾಲ್ಕು ದಿಕ್ಕುಗಳಲ್ಲಿಯೂ ಇರುವ ನಾಲ್ವರು ಶತ್ರುರಾಜರು, ನಾಲ್ವರು ಮಿತ್ರರಾಜರು, ನಾಲ್ವರು ಉದಾಸೀನರಾಜರು–ಒಟ್ಟು ಹನ್ನೆರಡು ಎಂದು ವ್ಯಾಖ್ಯಾನ ಕಾರರು ಹೇಳಿದ್ದಾರೆ. ಇದನ್ನು ಹೀಗೆ ವಿವರಿಸಬಹುದಾಗಿದೆ. 1) ಶತ್ರುರಾಜ 2) ಮಿತ್ರ ರಾಜ 3) ಶತ್ರುವಿನ ಮಿತ್ರರಾಜ 4) ಮಿತ್ರನ ಮಿತ್ರರಾಜ 5) ಶತ್ರುವಿನ ಮಿತ್ರನ ಮಿತ್ರರಾಜ 6) ಹಿಂಭಾಗದಲ್ಲಿ ತನ್ನನ್ನು ರಕ್ಷಿಸುವ ಸಲುವಾಗಿ ನಿಂತಿರುವ ರಾಜ 7) ಶತ್ರುವಿನ ರಕ್ಷಣೆಗಾಗಿ ಅವನ ಹಿಂಭಾಗದಲ್ಲಿ ನಿಂತಿರುವ ಸಹಾಯಕ ರಾಜ

**ಮೂಲಕರ್ಮಕ್ರಿಯಾ ಚಾತ್ರ ಮಾಯಾ ಯೋಗಶ್ಚ ವರ್ಣಿತಃ ।**
**ದೂಷಣಂ ಸ್ರೋತಸಾಂ ಚೈವ ವರ್ಣಿತಂ ಚಾಸ್ಥಿರಾಮ್ಭಸಾಮ್ ॥೭೩॥**

ಆ ಗ್ರಂಥದಲ್ಲಿ ಕೋಶವನ್ನು ವೃದ್ಧಿಗೊಳಿಸುವ ಮೂಲಕರ್ಮಗಳಾದ ಕೃಷಿ-ವಾಣಿಜ್ಯಾದಿಗಳನ್ನು ಹೇಗೆ ಮಾಡಬೇಕೆಂಬುದನ್ನು ಹೇಳಿದೆ. ಮಾಯಾ ಪ್ರಯೋಗವನ್ನು ಯಾವ ಸಮಯದಲ್ಲಿ ಹೇಗೆ ಮಾಡಬೇಕೆಂಬುದನ್ನು ಹೇಳಿದೆ. ಹರಿಯುವ ಮತ್ತು ನಿಂತಿರುವ ನೀರಿನ ದೂಷಣವಿಧಾನ (ಕೆಡಿಸುವ ರೀತಿ) ಗಳನ್ನೂ ಹೇಳಿದೆ.

**ಯೈರ್ಯೈರುಪಾಯೈರ್ಲೋಕಸ್ತು ನ ಚಲೇದಾರ್ಯವರ್ತ್ಮನಃ ।**
**ತತ್ಸರ್ವಂ ರಾಜಶಾರ್ದೂಲ ನೀತಿಶಾಸ್ತ್ರೇಽಭಿವರ್ಣಿತಮ್ ॥೭೪॥**

ರಾಜಸಿಂಹನೇ! ಯಾವ ಯಾವ ಉಪಾಯಗಳಿಂದ ಈ ಜಗತ್ತು ಸನ್ಮಾರ್ಗದಿಂದ ವಿಚಲಿತವಾಗುವುದಿಲ್ಲವೋ–ಆ ಎಲ್ಲ ಉಪಾಯಗಳನ್ನೂ ಬ್ರಹ್ಮನಿಂದ ರಚಿಸಲ್ಪಟ್ಟಿರುವ ನೀತಿಶಾಸ್ತ್ರದಲ್ಲಿ ಹೇಳಿದೆ.

ಭಗವಂತನಾದ, ಪ್ರಭುವಾದ ಬ್ರಹ್ಮನು ಪ್ರಜಾಕೋಟಿಗೆ ಅತ್ಯಂತ ಶುಭಕರವಾದ ನೀತಿಶಾಸ್ತ್ರವನ್ನು ರಚಿಸಿ ಪರಮಹೃಷ್ಟನಾಗಿ ಇಂದ್ರಪುರಸ್ಸರರಾದ ದೇವತೆಗಳಿಗೆ ಹೇಳಿದನು :

**ಉಪಕಾರಾಯ ಲೋಕಸ್ಯ ತ್ರಿವರ್ಗಸ್ಥಾಪನಾಯ ಚ ।**
**ನವನೀತಂ ಸರಸ್ವತ್ಯಾ ಬುದ್ಧಿರೇಷಾ ಪ್ರಭಾವಿತಾ ॥೭೬॥**

"ದೇವತೆಗಳೇ! ಲೋಕೋಪಕಾರಕ್ಕಾಗಿ ಮತ್ತು ಧರ್ಮಾರ್ಥ-ಕಾಮ ಗಳನ್ನು ಪ್ರತಿಷ್ಠಾಪಿಸುವ ಸಲುವಾಗಿ ವಾಗ್ದೇವಿಯ ಸಾರಭೂತವಾದ ಬೆಣ್ಣೆ ಯಂತಹ ವಿಷಯಗಳು ಈ ನೀತಿಶಾಸ್ತ್ರದಲ್ಲಿ ಪ್ರಕಟವಾಗಿವೆ.

**ದಣ್ಡೇನ ಸಹಿತಾ ಹ್ಯೇಷಾ ಲೋಕರಕ್ಷಣಕಾರಿಕಾ ।**
**ನಿಗ್ರಹಾನುಗ್ರಹರತಾ ಲೋಕಾನನುಚರಿಷ್ಯತಿ ॥೭೭॥**

---

8) ತನ್ನ ಪಕ್ಷಕ್ಕೆ ಸಹಾಯಕ್ಕೆ ಬರಬೇಕೆಂದು ಪ್ರಾರ್ಥಿಸಿದ ನಂತರ ಬರುವ ರಾಜ 9) ಶತ್ರುವಿನ ಆಹ್ವಾನವನ್ನು ಮನ್ನಿಸಿ ಅವನ ಸಹಾಯಕ್ಕೆ ಬಂದಿರುವ ರಾಜ 10) ವಿಜಯಾಭಿಲಾಷಿಯಾದ ನರೇಶ 11) ತನ್ನ ವಿಷಯದಲ್ಲಿಯೂ ಮತ್ತು ಶತ್ರುವಿನ ವಿಷಯದಲ್ಲಿಯೂ ಮಧ್ಯಸ್ಥನಾಗಿರುವ ರಾಜ 12) ಇಬ್ಬರ ದೃಷ್ಟಿಯಿಂದಲೂ ಅಧಿಕಶಕ್ತಿಶಾಲಿಯಾಗಿಯೂ ಮತ್ತು ಉದಾಸೀನನಾಗಿಯೂ ಇರುವ ರಾಜ.

ದಂಡನೀತಿಯಿಂದಲೂ ಕೂಡಿರುವ ಈ ನೀತಿಶಾಸ್ತ್ರವು ಲೋಕವನ್ನೇ ರಕ್ಷಣೆಮಾಡುವುದಾಗಿದೆ. ದುಷ್ಟರ ನಿಗ್ರಹದಲ್ಲಿಯೂ–ಶಿಷ್ಟರ ಅನುಗ್ರಹ ದಲ್ಲಿಯೂ ಸರ್ವದಾ ತತ್ಪರವಾಗಿರುವ ಈ ನೀತಿಶಾಸ್ತ್ರವು ಎಲ್ಲ ಲೋಕ ಗಳಲ್ಲಿಯೂ ಪ್ರಚಲಿತವಾಗಿದೆ.

**ದಣ್ಡೇನ ನೀಯತೇ ಚೇದಂ ದಣ್ಡಂ ನಯತಿ ವಾ ಪುನಃ ।**
**ದಣ್ಡನೀತಿರಿತಿ ಖ್ಯಾತಾ ತ್ರೀಂಲ್ಲೋಕಾನಭಿವರ್ತತೇ ॥೭೮॥**

ಈ ನೀತಿಶಾಸ್ತ್ರಾನುಸಾರವಾಗಿ ದಂಡದ ಮೂಲಕವಾಗಿ ಜಗತ್ತನ್ನು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಬಹುದು. ಅಥವಾ ರಾಜನು ಈ ನೀತಿಶಾಸ್ತ್ರಾನುಸಾರವಾಗಿ ಪ್ರಜೆಗಳಲ್ಲಿ ದಂಡನೀತಿಯನ್ನು ಆಚರಣೆಗೆ ತರುತ್ತಾನೆ. ಆದುದರಿಂದಲೇ ಈ ಶಾಸ್ತ್ರವು ದಂಡನೀತಿಯೆಂದೂ ಪ್ರಸಿದ್ಧ ವಾಗಿದೆ. ಇದು ಮೂರು ಲೋಕಗಳನ್ನೂ ವ್ಯಾಪಿಸಿದೆ.

**ಷಾಡ್ಗುಣ್ಯಗುಣಸಾರೈಷಾ ಸ್ಥಾಸ್ಯತ್ಯಗ್ರೇ ಮಹಾತ್ಮಸು ।**
**ಧರ್ಮಾರ್ಥಕಾಮಮೋಕ್ಷಾಶ್ಚ ಸಕಲಾ ಹ್ಯತ್ರ ಶಬ್ದಿತಾಃ ॥೭೯॥**

ಈ ನೀತಿಶಾಸ್ತ್ರವು ಸಂಧಿ-ವಿಗ್ರಹಾದಿ ಆರು ಗುಣಗಳ ಸಾರಭೂತ ವಾಗಿದೆ. ಮಹಾತ್ಮರ ದೃಷ್ಟಿಯಲ್ಲಿ ಈ ನೀತಿಶಾಸ್ತ್ರದ ಸ್ಥಾನವು ಅತ್ಯುಚ್ಚ ವಾಗಿರುತ್ತದೆ. ಧರ್ಮಾರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥ ಗಳೂ ಈ ಗ್ರಂಥದಲ್ಲಿ ಪ್ರತಿಪಾದಿತವಾಗಿವೆ.

ಎಲ್ಲರಿಗಿಂತಲೂ ಮೊದಲು ಬಹುರೂಪನಾದ, ವಿಶಾಲಾಕ್ಷನಾದ, ಶಿವ ನಾದ, ಸ್ಥಾಣುವಾದ, ಉಮಾಪತಿಯಾದ ಭಗವಾನ್ ಶಂಕರನು ಈ ನೀತಿ ಶಾಸ್ತ್ರವನ್ನು ಬ್ರಹ್ಮನಿಂದ ಪ್ರತಿಗ್ರಹಿಸಿದನು.

ವಿಶಾಲಾಕ್ಷನಾದ ಭಗವಾನ್ ಶಿವನು–ಪ್ರಜೆಗಳ ಆಯುಷ್ಯವು ಬಹಳ ಕ್ಷೀಣವಾಗುತ್ತಿರುವುದನ್ನು ಗಮನಿಸಿ ಬ್ರಹ್ಮನು ರಚಿಸಿದ ಮಹಾರ್ಥಯುಕ್ತವಾದ ಆ ನೀತಿಶಾಸ್ತ್ರವನ್ನು ಅಲ್ಪಾಯುಗಳಾದ ಮನುಷ್ಯರು ಅಧ್ಯಯನ ಮಾಡಲಾರರೆಂದು ಭಾವಿಸಿ ಸಂಕ್ಷೇಪಿಸಿದನು. ಶಿವನು ಸಂಕ್ಷೇಪಿಸಿದ ಆ ಮಹಾಗ್ರಂಥಕ್ಕೆ ವೈಶಾಲಾಕ್ಷವೆಂದು ಹೆಸರಾಯಿತು. ಬಳಿಕ ಸಂಕ್ಷಿಪ್ತವಾದ ವೈಶಾಲಾಕ್ಷವನ್ನು ಶಿವನಿಂದ ಇಂದ್ರನು ಪಡೆದುಕೊಂಡನು.

ಮಹಾತಪಸ್ವಿಯಾದ, ಸುಬ್ರಹ್ಮಣ್ಯನಾದ ಭಗವಾನ್ ಪುರಂದರನು ಶಿವನಿಂದ ಪಡೆದುಕೊಂಡ ವೈಶಾಲಾಕ್ಷವನ್ನು ಅಧ್ಯಯನಮಾಡಿದಾಗ ಅದರಲ್ಲಿ ಹತ್ತು ಸಾವಿರ ಅಧ್ಯಾಯಗಳಿದ್ದುವು. ಪುನಃ ಇಂದ್ರನು ವೈಶಾಲಾಕ್ಷವನ್ನು ಮತ್ತಷ್ಟು ಸಂಕ್ಷೇಪಿಸಿದನು. ಅವನು ಸಂಕ್ಷೇಪಿಸಿದ ಗ್ರಂಥವು ' ಬಾಹುದಂತಕ' ವೆಂಬ ಅಭಿಧಾನವನ್ನು ಹೊಂದಿ ಐದು ಸಾವಿರ ಅಧ್ಯಾಯಗಳ ನ್ನೊಳಗೊಂಡಿದ್ದಿತು. ಮುಂದೆ ಮಹಾಸಮರ್ಥನಾದ ಬೃಹಸ್ಪತಿಯು ತನ್ನ ಬುದ್ಧಿಶಕ್ತಿಯಿಂದ ಇಂದ್ರದತ್ತವಾದ ಬಾಹುದಂತಕಗ್ರಂಥವನ್ನು ಮತ್ತಷ್ಟು ಸಂಕ್ಷೇಪಿಸಿದನು. ಬಾರ್ಹಸ್ಪತ್ಯವೆಂದು ಹೆಸರನ್ನು ಪಡೆದ ಆ ಮಹಾಗ್ರಂಥದಲ್ಲಿ ಮೂರು ಸಾವಿರ ಅಧ್ಯಾಯಗಳು ಮಾತ್ರವೇ ಇದ್ದುವು. ಮಹಾತಪಸ್ವಿಯಾದ, ಯೋಗಶಾಸ್ತ್ರಕ್ಕೆ ಆಚಾರ್ಯನಾದ, ಅಮಿತಪ್ರಜ್ಞನಾದ, ಮಹಾಯಶೋವಂತ ನಾದ ಶುಕ್ರಾಚಾರ್ಯನು ಬಾರ್ಹಸ್ಪತ್ಯನೀತಿಶಾಸ್ತ್ರವನ್ನು ಮತ್ತಷ್ಟು ಸಂಕ್ಷೇಪಿ ಸಿದನು. ಶುಕ್ರನು ಸಂಕ್ಷೇಪಿಸಿದ ಆ ನೀತಿಗ್ರಂಥದಲ್ಲಿ ಒಂದು ಸಾವಿರ ಅಧ್ಯಾಯಗಳಿದ್ದುವು.

ಹೀಗೆ ಲೋಕದಲ್ಲಿ ಮನುಷ್ಯರ ಆಯುಃಪ್ರಮಾಣವು ಕಡಿಮೆಯಾಗು ತ್ತಿರುವುದನ್ನು ಮಹರ್ಷಿಗಳು ಮನಗಂಡು ಬ್ರಹ್ಮರಚಿತವಾದ ನೀತಿಗ್ರಂಥವನ್ನು ಜಗತ್ತಿನ ಹಿತಕ್ಕಾಗಿ ಸಂಗ್ರಹಿಸುತ್ತಲೇ ಬಂದಿರುತ್ತಾರೆ.

ಒಮ್ಮೆ ದೇವತೆಗಳೆಲ್ಲರೂ ಪ್ರಜಾಪತಿಯಾದ ಭಗವಾನ್ ವಿಷ್ಣುವಿನ ಬಳಿಗೆ ಹೋಗಿ ಹೇಳಿದರು : "ಭಗವನ್! ಮನುಷ್ಯರಲ್ಲಿ ಎಲ್ಲರಿಗಿಂತಲೂ ಶ್ರೇಷ್ಠವಾದ ಪದವಿಯನ್ನು ಪಡೆದುಕೊಳ್ಳಲು ಅರ್ಹನಾಗಿರುವವನು ಯಾರೆಂಬುದನ್ನು ಹೇಳು."

ದೇವತೆಗಳು ಹೀಗೆ ಪ್ರಾರ್ಥಿಸಲಾಗಿ ; ದೇವದೇವನಾದ ನಾರಾಯಣ ನಾದ, ಪ್ರಭುವಾದ ಭಗವಾನ್ ವಿಷ್ಣುವು ಸ್ವಲ್ಪಕಾಲ ಯೋಚಿಸುತ್ತಿದ್ದು, ತನ್ನ ತೇಜಸ್ಸಿನಿಂದ ಒಬ್ಬ ಮಾನಸಪುತ್ರನನ್ನು ಸೃಷ್ಟಿಸಿದನು. ಆ ಪುತ್ರನು 'ವಿರಜಸ' ಎಂಬ ಹೆಸರಿನಿಂದ ವಿಖ್ಯಾತನಾದನು.

ಪಾಂಡುನಂದನ! ಮಹಾಭಾಗ್ಯಶಾಲಿಯಾದ ವಿರಜಸನು ಲೋಕದ ಪ್ರಭುತ್ವವನ್ನು ಪಡೆದುಕೊಳ್ಳಲು ಇಚ್ಛೆಪಡಲಿಲ್ಲ. ಅವನ ಬುದ್ಧಿಯು

ಯಾವಾಗಲೂ ಸಂನ್ಯಾಸಸ್ವೀಕಾರದಲ್ಲಿಯೇ ಆಸಕ್ತವಾಗಿದ್ದಿತು. ವಿರಜಸನಿಗೆ ಕೀರ್ತಿಮಂತನೆಂಬ ಮಗನು ಹುಟ್ಟಿದನು. ಅವನೂ ಕೂಡ ಪಂಚತತ್ತ್ವಗಳಿಂದ ಅತೀತವಾದ ಮೋಕ್ಷಮಾರ್ಗವನ್ನೇ ಅವಲಂಬಿಸಿದನು. ಕರ್ದಮನೆಂಬುವನು ಕೀರ್ತಿಮಂತನ ಮಗ. ಅವನೂ ಮಹಾತಪಸ್ಸಿನಲ್ಲಿಯೇ ನಿರತನಾದನು. ಅನಂಗನೆಂಬುವನು ಕರ್ದಮಪ್ರಜಾಪತಿಯ ಪುತ್ರನು. ಅನಂಗನು ಪ್ರಜೆಗಳ ರಕ್ಷಣೆಯಲ್ಲಿ ಬಹಳ ಸಮರ್ಥನಾಗಿಯೂ, ಸತ್ಪುರುಷನಾಗಿಯೂ, ದಂಡನೀತಿಯಲ್ಲಿ ವಿಶಾರದನಾಗಿಯೂ ಇದ್ದನು. ಅತಿಬಲನೆಂಬುವನು ಅನಂಗನ ಮಗ. ಅವನೂ ಸಹ ನೀತಿಶಾಸ್ತ್ರದಲ್ಲಿ ಮಹಾಪ್ರವೀಣನಾಗಿದ್ದನು. ಅವನು ವಿಶಾಲವಾದ ರಾಜ್ಯವನ್ನು ಪಡೆದುಕೊಂಡನು. ಆದರೆ ಅವನು ಇಂದ್ರಿಯಗಳಿಗೆ ದಾಸನಾಗಿಬಿಟ್ಟನು.

ಮೃತ್ಯುವಿಗೆ ಸುನೀಥಾ ಎಂಬ ಹೆಸರಿನ ಮಾನಸಪುತ್ರಿಯಿದ್ದಳು. ಅವಳು ತನ್ನ ರೂಪ-ಯೌವನ-ಗುಣಗಳಿಂದ ಮೂರು ಲೋಕಗಳಲ್ಲಿಯೂ ವಿಖ್ಯಾತಳಾಗಿದ್ದಳು. ಅವಳು ಅತಿಬಲನಿಂದ 'ವೇನ' ಎಂಬುವನಿಗೆ ಜನ್ಮವನ್ನಿತ್ತಳು. ವೇನನು ರಾಗ-ದ್ವೇಷಗಳಿಂದ ಕೂಡಿದವನಾಗಿ ಪ್ರಜೆಗಳ ಮೇಲೆ ಅಪಚಾರವೆಸಗಲು ಪ್ರಾರಂಭಿಸಿದನು. ಆ ಸಮಯದಲ್ಲಿ ಬ್ರಹ್ಮವಾದಿಗಳಾದ ಋಷಿಗಳು ಮಂತ್ರಪೂರ್ವಕವಾದ ದರ್ಭೆಗಳಿಂದಲೇ ವೇನನನ್ನು ಸಂಹರಿಸಿದರು. ಬಳಿಕ ಋಷಿಗಳೆಲ್ಲರೂ ಸೇರಿ ಮಂತ್ರೋಚ್ಚಾರಣಪೂರ್ವಕವಾಗಿ ವೇನನ ಬಲತೊಡೆಯನ್ನು ಕಡೆದರು. ವೇನನ ತೊಡೆಯನ್ನು ಮಥಿಸಿದುದರ ಪರಿಣಾಮವಾಗಿ ವಿಕಾರವಾದ ಆಕಾರವನ್ನು ಹೊಂದಿದ್ದ ಕುರೂಪಿಯಾದ ಕುಬ್ಜನಾದ ಮನುಷ್ಯನೊಬ್ಬನು ಹುಟ್ಟಿದನು. ಅವನು ಸುಟ್ಟು ಕರುಕಾದ ಕಂಬದಂತೆ ಕಾಣುತ್ತಿದ್ದನು. ಕೆಂಗಣ್ಣನಾಗಿದ್ದನು. ತಲೆಯಲ್ಲಿ ಕಪ್ಪಾದ ಕೂದಲುಗಳಿದ್ದುವು. ಅವನು ಹುಟ್ಟಿದೊಡನೆಯೇ ಬ್ರಹ್ಮವಾದಿಗಳಾದ ಋಷಿಗಳು–'ನಿಷೀದ' 'ಕುಳಿತುಕೋ'–ಎಂದು ಹೇಳಿದರು.

ಪರ್ವತಗಳನ್ನೂ ಮತ್ತು ವನವನ್ನೂ ಆಶ್ರಯಿಸಿರುವ ಕ್ರೂರಿಗಳಾದ ನಿಷಾದರು ಆ ಮನುಷ್ಯನಿಂದಲೇ ಹುಟ್ಟಿದರು. ವಿಂಧ್ಯಾಚಲನಿವಾಸಿಗಳಾದ ಲಕ್ಷೋಪಲಕ್ಷ ಮ್ಲೇಚ್ಛರೂ ಅವನಿಂದಲೇ ಪ್ರಾದುರ್ಭವಿಸಿದರು.

ಪುನಃ ಬ್ರಹ್ಮವಾದಿಗಳಾದ ಋಷಿಗಳು ಮಂತ್ರಪೂರ್ವಕವಾಗಿ ವೇನನ ಬಲಗೈಯನ್ನು ಕಡೆದರು. ರೂಪಸಂಪತ್ತಿನಿಂದ ಎರಡನೆಯ ಇಂದ್ರನೋ ಎಂಬಂತೆ ಕಾಣುತ್ತಿದ್ದ ಮತ್ತೊಬ್ಬ ಪುರುಷನು ಹುಟ್ಟಿದನು. ಆ ಪುರುಷನು ಕವಚವನ್ನು ಧರಿಸಿದ್ದು, ಕತ್ತಿಯನ್ನು ಸೊಂಟಕ್ಕೆ ಕಟ್ಟಿಕೊಂಡಿದ್ದನು. ಬಾಣಸಹಿತವಾದ ಧನುಸ್ಸನ್ನು ಹಿಡಿದಿದ್ದನು. ವೇದ-ವೇದಾಂಗಗಳನ್ನೂ ತಿಳಿದವನಾಗಿದ್ದನಲ್ಲದೇ ಧನುರ್ವೇದದಲ್ಲಿಯೂ ಪಾರಂಗತನಾಗಿದ್ದನು. ಆ ನರಶ್ರೇಷ್ಠನನ್ನು ಸಮಸ್ತವಾದ ದಂಡನೀತಿಗಳೂ ಆಶ್ರಯಿಸಿದುವು. ವೇನನ ಬಲಗೈಯಿಂದ ಪ್ರಾದುರ್ಭೂತನಾದ ವೈನ್ಯನು ಬದ್ಧಾಂಜಲಿಯಾಗಿ ಋಷಿಗಳೆಲ್ಲರನ್ನೂ ಸಂಬೋಧಿಸಿ ಹೇಳಿದನು :

"ಮಹಾತ್ಮರೇ! ಧರ್ಮಾರ್ಥಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಗ್ರಹಿಸುವ ಅತ್ಯಂತಸೂಕ್ಷ್ಮವಾದ ಬುದ್ಧಿಯು ನನಗೆ ಪ್ರಾಪ್ತವಾಗಿದೆ. ಈ ಬುದ್ಧಿಯಿಂದ ನಾನು ಯಾವ ಕಾರ್ಯವನ್ನು ಮಾಡಬೇಕೆಂಬುದನ್ನು ಯಥಾವತ್ತಾಗಿ ಹೇಳಿರಿ. ನೀವೆಲ್ಲರೂ ಸೇರಿ ಪ್ರಯೋಜನಕಾರಿಯಾದ ಯಾವ ಕಾರ್ಯವನ್ನು ಮಾಡುವಂತೆ ನನಗೆ ಹೇಳುವಿರೋ, ಆ ಕಾರ್ಯವನ್ನು ನಾನು ಅವಶ್ಯವಾಗಿ ಮಾಡುತ್ತೇನೆ. ತಾವು ಈ ವಿಷಯದಲ್ಲಿ ಬೇರೆಯ ವಿಧವಾಗಿ ವಿಚಾರಮಾಡುವ ಅಗತ್ಯವಿಲ್ಲ."

ವೈನ್ಯನ ಮಾತನ್ನು ಕೇಳಿ ಅಲ್ಲಿದ್ದ ದೇವತೆಗಳೂ ಮತ್ತು ಮಹರ್ಷಿಗಳೂ ಹೇಳಿದರು :

**ನಿಯತೋ ಯತ್ರ ಧರ್ಮೋ ವೈ ತಮಶಙ್ಕಃ ಸಮಾಚರ ||**

"ಯಾವ ಕಾರ್ಯದಲ್ಲಿ ಧರ್ಮವು ನಿಯತವಾಗಿರುವುದೋ, ಆ ಕಾರ್ಯವನ್ನು ಯಾವ ವಿಧವಾದ ಸಂಶಯವೂ ಇಲ್ಲದೇ ಮಾಡು.

**ಪ್ರಿಯಾಪ್ರಿಯೇ ಪರಿತ್ಯಜ್ಯ ಸಮಃ ಸರ್ವೇಷು ಜನ್ತುಷು |**
**ಕಾಮಂ ಕ್ರೋಧಂ ಚ ಲೋಭಂ ಚ ಮಾನಂ ಚೋತ್ಸೃಜ್ಯ ದೂರತಃ ||೧೦೪||**

ಪ್ರಿಯ ಮತ್ತು ಅಪ್ರಿಯಗಳೆಂಬ ವಿಚಾರಗಳನ್ನು ಪರಿತ್ಯಜಿಸಿ, ಕಾಮ-

ಕ್ರೋಧ-ಲೋಭ ಮತ್ತು ಅಭಿಮಾನಗಳನ್ನು ದೂರೀಕರಿಸಿ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಸಮಭಾವದಿಂದಿರು.

**ಯಶ್ಚ ಧರ್ಮಾತ್ಪ್ರವಿಚಲೇಲ್ಲೋಕೇ ಕಶ್ಚನ ಮಾನವಃ ।**
**ನಿಗ್ರಾಹ್ಯಸ್ತೇ ಸ್ವಬಾಹುಭ್ಯಾಂ ಶಶ್ವದ್ಧರ್ಮಮವೇಕ್ಷತಾ ॥೧೦೫॥**

ಸರ್ವಕಾಲದಲ್ಲಿಯೂ ಧರ್ಮಮಾರ್ಗವನ್ನೇ ಪ್ರತೀಕ್ಷಿಸುವ ನೀನು ಯಾವನಾದರೊಬ್ಬ ಮನುಷ್ಯನು ( ಪ್ರಜೆಯು ) ಅಧರ್ಮದಿಂದ ವರ್ತಿಸಿದ್ದೇ ಆದರೆ ( ಧರ್ಮಭ್ರಷ್ಟನಾದರೆ ) ಒಡನೆಯೇ ಅವನನ್ನು ನಿನ್ನ ಭುಜಬಲ-ಪರಾಕ್ರಮಗಳಿಂದ ನಿಗ್ರಹಿಸಬೇಕು.

**ಪ್ರತಿಜ್ಞಾಂ ಚಾಧಿರೋಹಸ್ವ ಮನಸಾ ಕರ್ಮಣಾ ಗಿರಾ ।**
**ಪಾಲಯಿಷ್ಯಾಮ್ಯಹಂ ಭೌಮಂ ಬ್ರಹ್ಮ ಇತ್ಯೇವ ಚಾಸಕೃತ್ ॥೧೦೬॥**

ಅಲ್ಲದೇ–'ಮನಸ್ಸಿನಿಂದಲೂ, ಮಾತಿನಿಂದಲೂ ಮತ್ತು ಕ್ರಿಯೆಯಿಂದಲೂ ನಾನು ಈ ಭೂಮಿಯಲ್ಲಿರುವ ಬ್ರಹ್ಮವನ್ನು ( ವೇದವನ್ನು ) ನಿರಂತರವಾಗಿ ಕಾಪಾಡುತ್ತೇನೆ'–ಎಂಬ ಪ್ರತಿಜ್ಞೆಯನ್ನೂ ಮಾಡಬೇಕು.

**ಯಶ್ಚಾತ್ರ ಧರ್ಮೋ ನಿತ್ಯೋಕ್ತೋ ದಣ್ಡನೀತಿವ್ಯಪಾಶ್ರಯಃ ।**
**ತಮಶಙ್ಕಃ ಕರಿಷ್ಯಾಮಿ ಸ್ವವಶೋ ನ ಕದಾಚನ ॥೧೦೭॥**

'ವೇದದಲ್ಲಿ ದಂಡನೀತಿಗೆ ಸಂಬಂಧಿಸಿದ ಯಾವ ನಿತ್ಯಧರ್ಮವು ಉಕ್ತವಾಗಿರುವುದೋ–ಅದನ್ನು ಯಾವ ವಿಧವಾದ ಭಯವೂ ಇಲ್ಲದೇ ಪಾಲನೆ ಮಾಡುತ್ತೇನೆ. ನಾನು ಯಾವಾಗಲೂ ನನ್ನ ಇಂದ್ರಿಯಗಳಿಗೆ ದಾಸನಾಗುವುದಿಲ್ಲ'–ಹೀಗೂ ಪ್ರತಿಜ್ಞೆಮಾಡಬೇಕು.

ಪ್ರಭುವೇ! ಪರಂತಪನೇ! ಈ ಪ್ರತಿಜ್ಞೆಯ ಜೊತೆಗೆ ಇನ್ನೂ ಎರಡು ಪ್ರತಿಜ್ಞಾವಾಕ್ಯಗಳನ್ನೂ ಸೇರಿಸಬೇಕು. **ಅದಣ್ಡ್ಯಾ ಮೇ ದ್ವಿಜಾಃ । ಲೋಕಂ ಚ ಸಂಕರಾತ್ಕೃತ್ಸ್ನಂ ತ್ರಾತಾಸ್ಮಿ** = ನಾನು ಬ್ರಾಹ್ಮಣರನ್ನು ದಂಡಿಸುವುದಿಲ್ಲ. ಸಂಪೂರ್ಣಜಗತ್ತನ್ನೂ ನಾನು ವರ್ಣಸಂಕರದಿಂದ ಕಾಪಾಡುತ್ತೇನೆ. ಲೋಕದಲ್ಲಿ ವರ್ಣಸಂಕರವಾಗಲು ಅವಕಾಶ ಕೊಡುವುದಿಲ್ಲ'–ಈ ಪ್ರತಿಜ್ಞೆಗಳನ್ನೂ ನಮ್ಮ ಮುಂದೆ ಮಾಡಿ ಅದರಂತೆ ನಡೆದುಕೊಳ್ಳಬೇಕು."

ವೈನ್ಯನು ದೇವರ್ಷಿಗಳ ಮಾತನ್ನು ಕೇಳಿ ಋಷಿಪುರೋಗರಾದ ದೇವತೆಗಳೊಡನೆ ಹೇಳಿದನು :

**ಬ್ರಾಹ್ಮಣಾ ಮೇ ಮಹಾಭಾಗಾ ನಮಸ್ಯಾಃ ಪುರುಷರ್ಷಭಾಃ ॥**

"ಪುರುಷರ್ಷಭರೇ! ಮಹಾಭಾಗ್ಯಶಾಲಿಗಳಾದ ಬ್ರಾಹ್ಮಣರು ನನಗೆ ಯಾವಾಗಲೂ ವಂದನೀಯರೇ ಸರಿ."

ವೈನ್ಯನ ಆ ಮಾತಿಗೆ ಪ್ರತ್ಯುತ್ತರವಾಗಿ ಬ್ರಹ್ಮವಾದಿಗಳು 'ಹಾಗೆಯೇ ಆಗಲಿ'–ಎಂದರು. ಬ್ರಹ್ಮಮಯನಾದ, ವೈದಿಕಜ್ಞಾನಕ್ಕೆ ನಿಧಿಪ್ರಾಯನಾದ ಶುಕ್ರನು ವೈನ್ಯನಿಗೆ ಪುರೋಹಿತನಾದನು.

ವಾಲಖಿಲ್ಯರೂ ಮತ್ತು ಸರಸ್ವತೀನದಿಯ ತೀರದಲ್ಲಿ ವಾಸಮಾಡುತ್ತಿದ್ದ ಋಷಿಗಳೂ ವೈನ್ಯನಿಗೆ ಮಂತ್ರಿಗಳಾದರು. ಮಹರ್ಷಿಯಾದ ಭಗವಾನ್ ಗರ್ಗನು ವೈನ್ಯನಿಗೆ ಜ್ಯೌತಿಷಿಕನಾದನು. ಪೃಥುರಾಜನು ( ವೈನ್ಯನು ) ಭಗವಾನ್ ವಿಷ್ಣುವಿನಿಂದ ಎಂಟನೆಯವನೆಂದು* ಮನುಷ್ಯಲೋಕದಲ್ಲಿ ಪ್ರಸಿದ್ಧನಾದನು. ಪೃಥುವು ಹುಟ್ಟುವುದಕ್ಕೆ ಮೊದಲೇ ಸೂತ ಮತ್ತು ಮಾಗಧರೆಂಬ ಸ್ತುತಿಪಾಠಕರು ಹುಟ್ಟಿದ್ದರು. ಸೂತ-ಮಾಗಧರ ಸ್ತೋತ್ರಗಳಿಂದ ಪ್ರಸನ್ನನಾದ ಪ್ರತಾಪವಂತನಾದ ವೈನ್ಯನು, ಸೂತನಿಗೆ ಸಾಗರಸಮೀಪದ ಪ್ರಾಂತವನ್ನೂ (ಅನೂಪದೇಶವನ್ನೂ ), ಮಾಗಧನಿಗೆ ಮಗಧದೇಶವನ್ನೂ ಬಳುವಳಿಯನ್ನಾಗಿ ಕೊಟ್ಟನು.

**ಸಮತಾಂ ವಸುಧಾಯಾಶ್ಚ ಸ ಸಮ್ಯಗುದಪಾದಯತ್ ।**
**ವೈಷಮ್ಯಂ ಹಿ ಪರಂ ಭೂಮೇರಾಸೀದಿತಿ ಚ ನಃ ಶ್ರುತಮ್ ॥೧೧೪॥**

ಹಿಂದೆ ಭೂಮಿಯು ಹಳ್ಳ-ತಿಟ್ಟುಗಳಿಂದ ಕೂಡಿದ್ದಿತೆಂದೂ–ಅದನ್ನು ವೈನ್ಯನು ಸಮತಟ್ಟಾಗಿ ಮಾಡಿದನೆಂದೂ ನಾವು ಕೇಳಿದ್ದೇವೆ.

**ಮನ್ವನ್ತರೇಷು ಸರ್ವೇಷು ವಿಷಮಾ ಜಾಯತೇ ಮಹೀ ।**

---

* ಆತ್ಮನಾ ಅಷ್ಟಮಃ = ಪೃಥುವು ವಿಷ್ಣುವಿನಿಂದ ಎಂಟನೆಯವನು. ೧) ವಿಷ್ಣು, ೨) ವಿರಜಸ, ೩) ಕೀರ್ತಿಮಂತ, ೪) ಕರ್ದಮ, ೫) ಅನಂಗ, ೬) ಅತಿಬಲ, ೭) ವೇನ, ೮) ವೈನ್ಯ ಅಥವಾ ಪೃಥು.

**ಉಜ್ಜಹಾರ ತತೋ ವೈನ್ಯಃ ಶಿಲಾಜಾಲಾನ್ಸಮನ್ತತಃ ।**
**ಧನುಷ್ಕೋಟ್ಯಾ ಮಹಾರಾಜ ತೇನ ಶೈಲಾ ವಿವರ್ಧಿತಾಃ ॥೧೧೫॥**

ಎಲ್ಲ ಮನ್ವಂತರಗಳಲ್ಲಿಯೂ ಈ ಭೂಮಂಡಲವು ಹಳ್ಳ-ತಿಟ್ಟುಗಳಾಗಿ ಪರಿವರ್ತಿತವಾಗುತ್ತದೆ. ವೈನ್ಯನು ಪ್ರಪಂಚದ ಎಲ್ಲ ಕಡೆಗಳಲ್ಲಿಯೂ ಇದ್ದ ಬಂಡೆಗಳ ಸಮೂಹವನ್ನು ಧನುಸ್ಸಿನ ತುದಿಯಿಂದ ಕಿತ್ತು ಒಂದೊಂದು ಕಡೆಯಲ್ಲಿ ಪೇರಿಸಿದನು. ಆ ಬಂಡೆಗಳೆಲ್ಲವೂ ಪರ್ವತಗಳಾಗಿ ಎತ್ತರವಾಗಿಯೂ, ಅಗಲವಾಗಿಯೂ, ಉದ್ದವಾಗಿಯೂ ಬೆಳೆದುವು. ಭಗವಾನ್ ವಿಷ್ಣು, ದೇವತೆಗಳಿಂದ ಸಹಿತನಾದ ಇಂದ್ರದೇವ, ಋಷಿಗಳು, ಪ್ರಜಾಪತಿಗಳು ಮತ್ತು ಬ್ರಾಹ್ಮಣರು–ಇವರೆಲ್ಲರೂ ಪೃಥುವನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿದರು. ಯುಧಿಷ್ಠಿರ! ಸಾಕ್ಷಾತ್ ಭೂದೇವಿಯೂ, ನದಿಗಳಿಗೆ ಒಡೆಯನಾದ ಸಾಗರನೂ, ಪರ್ವತಶ್ರೇಷ್ಠನಾದ ಹಿಮವಂತನೂ, ಅನೇಕ ವಿಧವಾದ ರತ್ನಗಳನ್ನು ಬಳುವಳಿಯಾಗಿ ತೆಗೆದುಕೊಂಡು ಬಂದು ವೈನ್ಯನನ್ನು ಸೇವಿಸಿದರು. ಇಂದ್ರನೂ ವೈನ್ಯನಿಗೆ ಅಕ್ಷಯವಾದ ಧನವನ್ನು ಅರ್ಪಿಸಿದನು. ಸುವರ್ಣಮಯಪರ್ವತವಾದ ಮಹಾಮೇರುವು ತಾನಾಗಿಯೇ ವೈನ್ಯನ ಬಳಿಗೆ ಬಂದು ಸುವರ್ಣದ ರಾಶಿಯನ್ನೇ ಕಾಣಿಕೆಯನ್ನಾಗಿ ಸಮರ್ಪಿಸಿದನು. ಯಕ್ಷ-ರಾಕ್ಷಸರ ಸ್ವಾಮಿಯಾದ, ನರವಾಹನನಾದ ಭಗವಾನ್ ಕುಬೇರನು ಧರ್ಮಾರ್ಥಕಾಮಗಳ ನಿರ್ವಹಣೆಗೆ ಸಾಕಾಗುವಷ್ಟು ಧನವನ್ನು ವೈನ್ಯನಿಗೆ ಕೊಟ್ಟನು.

ಪಾಂಡವ! ವೈನ್ಯನು ಸ್ಮರಿಸುತ್ತಿದ್ದಂತೆಯೇ ಕೋಟಿ-ಕೋಟಿ ಕುದುರೆಗಳೂ, ರಥಗಳೂ, ಪದಾತಿಸೈನಿಕರೂ ಪ್ರಾದುರ್ಭವಿಸಿದರು.

**ನ ಜರಾ ನ ಚ ದುರ್ಭಿಕ್ಷಂ ನಾಧಯೋ ವ್ಯಾಧಯಸ್ತಥಾ ।**
**ಸರೀಸೃಪೇಭ್ಯಸ್ತೇನೇಭ್ಯೋ ನ ಚಾನ್ಯೋನ್ಯಾತ್ಕದಾಚನ ।**
**ಭಯಮುತ್ಪದ್ಯತೇ ತತ್ರ ತಸ್ಯ ರಾಜ್ಞೋಽಭಿರಕ್ಷಣಾತ್ ॥೧೨೨॥**

ವೈನ್ಯನ ರಾಜ್ಯದಲ್ಲಿ ಯಾರಿಗೂ ಮುಪ್ಪು ಬರುತ್ತಿರಲಿಲ್ಲ. ದೇಶದಲ್ಲಿ ಯಾವ ಪದಾರ್ಥಕ್ಕೇ ಆದರೂ ದುರ್ಭಿಕ್ಷವೆಂಬುದಿರಲಿಲ್ಲ. ಮನುಷ್ಯನಿಗೆ ಮಾನಸಿಕಚಿಂತೆಯಾಗಲೀ ಶಾರೀರಕರೋಗಗಳಾಗಲೀ ಇರುತ್ತಿರಲಿಲ್ಲ.

ರಾಜನ ರಕ್ಷಣಾವ್ಯವಸ್ಥೆಯು ಸಮುಚಿತವಾಗಿದ್ದುದರಿಂದ ವೈನ್ಯನ ರಾಷ್ಟ್ರದಲ್ಲಿ ಸರ್ಪಗಳಿಂದಾಗಲೀ, ಕಳ್ಳರಿಂದಾಗಲೀ ಯಾವ ವಿಧವಾದ ಭಯವೂ ಇರಲಿಲ್ಲ. ಪ್ರಜೆಗಳು ಒಬ್ಬರನ್ನು ಕಂಡರೆ ಮತ್ತೊಬ್ಬರು ಭಯಪಡಬೇಕಾಗಿರಲಿಲ್ಲ.

ವೈನ್ಯರಾಜನು ಸಮುದ್ರಾಭಿಮುಖವಾಗಿ ಹೋಗುತ್ತಿದ್ದಾಗ ನೀರುಗಳು ಸ್ತಂಭಿತವಾಗಿ (ಘನೀಭೂತವಾಗಿ) ಅವನ ರಥವು ಮುಂದೆ ಹೋಗಲು ಹಾದಿಮಾಡಿಕೊಡುತ್ತಿದ್ದುವು. ಅಡ್ಡಲಾಗಿ ಪರ್ವತಗಳೇನಾದರೂ ಸಿಕ್ಕಿದರೆ ಪರ್ವತಗಳೇ ಎರಡು ಭಾಗಗಳಾಗಿ ವೈನ್ಯನ ರಥವು ಮುಂದೆ ಹೋಗಲು ಹಾದಿಯನ್ನು ನೀಡುತ್ತಿದ್ದುವು. ಅವನ ರಥದ ಮೇಲಿದ್ದ ಧ್ವಜವೂ ಕೂಡ ಯಾವುದೇ ಕಾರಣದಿಂದಲೂ ಭಗ್ನವಾಗುತ್ತಿರಲಿಲ್ಲ. ವೈನ್ಯನು ಗೋರೂಪಳಾದ ಭೂದೇವಿಯಲ್ಲಿ ಹದಿನೇಳು ವಿಧವಾದ ಧಾನ್ಯಗಳನ್ನು ಕರೆದನು. ಯಕ್ಷ-ರಾಕ್ಷಸ-ನಾಗರುಗಳಲ್ಲಿ ಯಾರಿಗೆ ಯಾವ ವಸ್ತುಗಳಲ್ಲಿ ಅಪೇಕ್ಷೆಯೋ– ಆಯಾ ವಸ್ತುಗಳನ್ನೇ ವೈನ್ಯನು ಗೋರೂಪಳಾದ ಭೂಮಿಯಿಂದ ಕರೆದು ಕೊಡುತ್ತಿದ್ದನು. ಮಹಾತ್ಮನಾದ ವೈನ್ಯನು ಲೋಕದಲ್ಲಿ ಧರ್ಮಕ್ಕೆ ಪ್ರಾಧಾನ್ಯವನ್ನು ಪ್ರತಿಷ್ಠಾಪಿಸಿದನು. ಅವನ ಆಡಳಿತಕಾಲದಲ್ಲಿ ಪ್ರಜೆಗಳೆಲ್ಲರೂ ಮನೋರಂಜನೆಯನ್ನು (ಸಂತೋಷವನ್ನು) ಹೊಂದಿದರು. ಆದುದರಿಂದಲೇ ವೈನ್ಯನನ್ನು 'ರಾಜಾ' ಎಂಬ ಹೆಸರಿನಿಂದ ಕರೆಯುತ್ತಿದ್ದರು.

**ಬ್ರಾಹ್ಮಣಾನಾಂ ಕ್ಷತತ್ರಾಣಾತ್ತತಃ ಕ್ಷತ್ರಿಯ ಉಚ್ಯತೇ ।**
**ಪ್ರಥಿತಾ ಧರ್ಮತಶ್ಚೇಯಂ ಪೃಥಿವೀ ಬಹುಭಿಃ ಸ್ಮೃತಾ ॥೧೨೬॥**

ಬ್ರಾಹ್ಮಣರಿಗೆ ಉಂಟಾಗಬಹುದಾದ ತೊಂದರೆಯನ್ನು ನಿವಾರಿಸಿ ಹಿಂಸೆಗಳಿಂದ ಅವರನ್ನು ರಕ್ಷಿಸುವವನಾದುದರಿಂದ ವೈನ್ಯನನ್ನು ಜನರು ಕ್ಷತ್ರಿಯನೆಂದೂ ಕರೆದರು. ವೈನ್ಯನು ಧರ್ಮದ ಮೂಲಕವಾಗಿಯೇ ಈ ಭೂಮಿ ಯನ್ನು ಖ್ಯಾತಿಗೊಳಿಸಿದುದರಿಂದ ಅವನು ಆಳುತ್ತಿದ್ದ ಈ ಭೂಮಂಡಲವನ್ನು ಬಹುಜನರು 'ಪೃಥಿವೀ' ಎಂದೇ ಕರೆಯತೊಡಗಿದರು.

ಸನಾತನನಾದ ಶ್ರೀಮಹಾವಿಷ್ಣುವು ತಾನಾಗಿಯೇ–'ನಾತಿವರ್ತಿಷ್ಯತೇ

**ಕಚ್ಚಿದ್ರಾಜಂಸ್ತ್ವಾಂ** –ಮಹಾರಾಜಾ! ನಿನ್ನನ್ನು ( ನಿನ್ನ ಆಜ್ಞೆಯನ್ನು ) ಅತಿಕ್ರಮಿಸಿ ಯಾರೂ ನಡೆದುಕೊಳ್ಳುವುದಿಲ್ಲ '–ಎಂಬುದಾಗಿ ಹೇಳಿ ವೈನ್ಯನನ್ನು ರಾಜಪದವಿಯಲ್ಲಿ ಸಂಸ್ಥಾಪಿಸಿದನು. ಪೃಥುವು ಮಾಡಿದ ತಪಸ್ಸಿನಿಂದ ಪ್ರಸನ್ನನಾದ ಮಹಾವಿಷ್ಣುವು ರಾಜನನ್ನು ಪ್ರವೇಶಿಸಿದನು. ( ವೈಷ್ಣವೀ ತೇಜಸ್ಸು ಅವನಲ್ಲಿ ಪ್ರವೇಶಿಸಿತು. ) ಈ ಕಾರಣದಿಂದ ಸಮಸ್ತರಾಜರ ಮಧ್ಯದಲ್ಲಿ ಪೃಥುವಿಗೆ ಮಾತ್ರವೇ ಭೂಮಂಡಲದ ಸಕಲಪ್ರಜೆಗಳೂ ದೇವತೆಗಳಿಗೆ ನಮಸ್ಕರಿಸುವಂತೆ ನಮಸ್ಕರಿಸುತ್ತಿದ್ದರು.

ನರೇಶ್ವರ! ಆದುದರಿಂದ ಯಾವ ಶತ್ರುವೂ ನಿನ್ನನ್ನು ಆಕ್ರಮಿಸದಂತೆ, ಶತ್ರುಗಳಿಂದ ವಿಚಲಿತರಾಗದ ಚಾರರ ಮೂಲಕ ರಾಜ್ಯದ ಪರಿಸ್ಥಿತಿಯನ್ನು ವೀಕ್ಷಿಸುತ್ತಾ ದಂಡನೀತಿಯ ಮೂಲಕವಾಗಿ ರಾಜ್ಯವನ್ನು ಸತತವಾಗಿ ಸಂರಕ್ಷಿಸುತ್ತಿರಬೇಕು.

**ಶುಭಂ ಹಿ ಕರ್ಮ ರಾಜೇನ್ದ್ರ ಶುಭತ್ವಾಯೋಪಕಲ್ಪತೇ ।**
**ಆತ್ಮನಾ ಕಾರಣೈಶ್ಚೈವ ಸಮಸ್ಯೇಹ ಮಹೀಕ್ಷಿತಃ ।**
**ಕೋ ಹೇತುರ್ಯದ್ವಶೇ ತಿಷ್ಠೇಲ್ಲೋಕೋ ದೈವಾದೃತೇ ಗುಣಾತ್ ॥೧೩೦॥**

ಮನಸ್ಸಿನ ಮತ್ತು ಕ್ರಿಯೆಗಳ ಮೂಲಕವಾಗಿ ಸರ್ವಸಮಭಾವದಿಂದ (ತನ್ನ ರಾಜ್ಯದಲ್ಲಿರುವ ಪ್ರಜೆಗಳೆಲ್ಲರೂ ಸುಖದಿಂದಿರಬೇಕೆನ್ನುವ ಏಕೈಕ ದೃಷ್ಟಿಯಿಂದ ) ರಾಜನು ಮಾಡುವ ಶುಭಕರ್ಮಗಳು ಪ್ರಜೆಗಳ ಶುಭ ದಲ್ಲಿಯೇ ಪರ್ಯವಸಾನಹೊಂದುತ್ತವೆ. ರಾಷ್ಟ್ರದಲ್ಲಿರುವ ಎಲ್ಲ ಪ್ರಜೆಗಳೂ ಒಬ್ಬ ವ್ಯಕ್ತಿಯ ಅಧೀನದಲ್ಲಿರಬೇಕಾದರೆ–ಅವನಲ್ಲಿರುವ ದೈವಗುಣಗಳು ಕಾರಣವಲ್ಲದೇ ಮತ್ತಾವುದು ತಾನೇ ಕಾರಣವಾಗುತ್ತದೆ? ರಾಜನಲ್ಲಿ ದೈವ ಗುಣಗಳು ವಿಶೇಷವಾಗಿರುವುದರಿಂದ ಮತ್ತು ಅವನಲ್ಲಿ ಮಹಾವಿಷ್ಣುವಿನ ಆವಿರ್ಭಾವವಿರುವುದರಿಂದ ರಾಷ್ಟ್ರದ ಜನರೆಲ್ಲರೂ ರಾಜನ ವಶಾನುವರ್ತಿ ಗಳಾಗಿರುತ್ತಾರೆ.

**ವಿಷ್ಣೋರ್ಲಲಾಟಾತ್ಕಮಲಂ ಸೌವರ್ಣಮಭವತ್ತದಾ ।**
**ಶ್ರೀಃ ಸಮ್ಭೂತಾ ಯತೋ ದೇವೀ ಪತ್ನೀ ಧರ್ಮಸ್ಯ ಧೀಮತಃ ॥**

ಆ ಸಮಯದಲ್ಲಿ ಮಹಾವಿಷ್ಣುವಿನ ಲಲಾಟದಿಂದ ಸುವರ್ಣಮಯವಾದ ಕಮಲವು ಪ್ರಾದುರ್ಭೂತವಾಯಿತು. ಆ ಸುವರ್ಣಕಮಲದಿಂದ ಧೀಮಂತನಾದ ಧರ್ಮನ ಪತ್ನಿಯಾದ ಶ್ರೀದೇವಿಯು ಪ್ರಾದುರ್ಭವಿಸಿದಳು.

**ಶ್ರಿಯಃ ಸಕಾಶಾದರ್ಥಶ್ಚ ಜಾತೋ ಧರ್ಮೇಣ ಪಾಣ್ಡವ ।**
**ಅಥ ಧರ್ಮಸ್ತಥೈವಾರ್ಥಃ ಶ್ರೀಶ್ಚ ರಾಜ್ಯೇ ಪ್ರತಿಷ್ಠಿತಾ ॥೧೩೨॥**

ಯುಧಿಷ್ಠಿರ! ಧರ್ಮದಿಂದ ಶ್ರೀದೇವಿಯಲ್ಲಿ ಅರ್ಥವು ಹುಟ್ಟಿತು. ಹೀಗೆ ಪೃಥುವಿನ ರಾಜ್ಯದಲ್ಲಿ ಧರ್ಮ, ಅರ್ಥ ಮತ್ತು ಶ್ರೀ–ಈ ಮೂರೂ ಪ್ರತಿಷ್ಠಿತವಾದುವು. ಧರ್ಮಾದರ್ಥಶ್ಚ ಕಾಮಶ್ಚ–ಎಂಬಂತೆ ಧರ್ಮವನ್ನು ಪರಿಪಾಲಿಸುವುದರಿಂದ ಅರ್ಥ-ಕಾಮಗಳೂ ಸಿದ್ಧಿಸುತ್ತವೆ. ಆದುದರಿಂದ ಪೃಥುವಿನ ರಾಜ್ಯದಲ್ಲಿ ಧರ್ಮಕ್ಕೇ ಪ್ರಾಧಾನ್ಯವಿದ್ದಿತು.

**ಸುಕೃತಸ್ಯ ಕ್ಷಯಾಚ್ಚೈವ ಸ್ವರ್ಲೋಕಾದೇತ್ಯ ಮೇದಿನೀಮ್ ।**
**ಪಾರ್ಥಿವೋ ಜಾಯತೇ ತಾತ ದಣ್ಡನೀತಿವಿಶಾರದಃ ॥೧೩೩॥**

ಜನ್ಮಾಂತರಗಳಲ್ಲಿ ಮಾಡಿದ ಸುಕೃತವು ಕ್ಷಯಿಸಿದನಂತರ ಮನುಷ್ಯನು ಸ್ವರ್ಗದಿಂದ ಚ್ಯುತನಾಗಿ ದಂಡನೀತಿವಿಶಾರದನಾದ ರಾಜನಾಗಿ (ಭೂಮಿಯಲ್ಲಿ) ಹುಟ್ಟುತ್ತಾನೆ.

**ಮಹತ್ತ್ವೇನ ಚ ಸಂಯುಕ್ತೋ ವೈಷ್ಣವೇನ ನರೋ ಭುವಿ ।**
**ಬುದ್ಧ್ಯಾ ಭವತಿ ಸಂಯುಕ್ತೋ ಮಾಹಾತ್ಮ್ಯಂ ಚಾಧಿಗಚ್ಛತಿ ॥೧೩೪॥**

ಹಾಗೆ ಹುಟ್ಟುವ ಪಾರ್ಥಿವನು ಈ ಭೂಮಂಡಲದಲ್ಲಿ ಮಹಾವಿಷ್ಣುವಿನ ಮಹತ್ತ್ವದಿಂದಲೂ ಯುಕ್ತನಾಗಿ, ಬುದ್ಧಿಸಂಪನ್ನನಾಗಿ ವಿಶೇಷವಾದ ಹಿರಿಮೆಯನ್ನೂ ಹೊಂದುತ್ತಾನೆ.

**ಸ್ಥಾಪಿತಂ ಚ ತತೋ ದೇವೈರ್ನ ಕಶ್ಚಿದತಿವರ್ತತೇ ।**
**ತಿಷ್ಠತ್ಯೇಕಸ್ಯ ಚ ವಶೇ ತಂ ಚೇದಂ ನ ವಿಧೀಯತೇ ॥೧೩೫॥**

ದೇವತೆಗಳೇ ಅವನನ್ನು ಭೂಮಂಡಲಕ್ಕೆ ರಾಜನನ್ನಾಗಿ ಸ್ಥಾಪಿಸಿರುವರೆಂದು ಭಾವಿಸಿ ಪ್ರಜೆಗಳಲ್ಲಿ ಯಾರೂ ಆ ರಾಜನ ಆಜ್ಞೆಯನ್ನು ಉಲ್ಲಂಘಿಸುವುದಿಲ್ಲ. ಪ್ರಜೆಗಳೆಲ್ಲರೂ ಒಬ್ಬನೇ ರಾಜನ ಅಧೀನಕ್ಕೆ ಒಳಪಟ್ಟಿರುತ್ತಾರೆ. ಈ

ಜಗತ್ತು ಅಥವಾ ಜಗತ್ತಿನ ಪ್ರಜೆಗಳು ರಾಜನಿಗೆ ಆಜ್ಞೆಮಾಡಲು ಹೋಗುವುದಿಲ್ಲ.

**ಶುಭಂ ಹಿ ಕರ್ಮ ರಾಜೇನ್ದ್ರ ಶುಭತ್ವಾಯೋಪಕಲ್ಪತೇ ।**
**ತುಲ್ಯಸ್ಯೈಕಸ್ಯ ಯಸ್ಯಾಯಂ ಲೋಕೋ ವಚಸಿ ತಿಷ್ಠತೇ ॥೧೩೬॥**

ರಾಜೇಂದ್ರ! ಶುಭಕರ್ಮದ ಪರಿಣಾಮವು ಶುಭಫಲಪ್ರಾಪ್ತಿಯಲ್ಲಿಯೇ ಪರ್ಯವಸಾನವಾಗುತ್ತದೆ. ರಾಜನು ಬೇರೆಯವರಂತೆ ಹಸ್ತಾದ್ಯವಯವಗಳಿಂದ ಯುಕ್ತನಾಗಿ ಇತರರಿಗೆ ಸಮಾನನಾಗಿದ್ದರೂ 'ರಾಜನ' ಆಜ್ಞೆಯಲ್ಲಿಯೇ ಜಗತ್ತು ಪ್ರತಿಷ್ಠಿತವಾಗಿರುತ್ತದೆ. (ಜಗತ್ತು ರಾಜನೊಬ್ಬನ ಆಜ್ಞೆಯನ್ನೇ ಮಾನ್ಯಮಾಡುತ್ತದೆ.)

**ಯೋಽಸ್ಯ ವೈ ಮುಖಮದ್ರಾಕ್ಷೀತ್ಸೌಮ್ಯಂ ಸೋಽಸ್ಯ ವಶಾನುಗಃ ।**
**ಸುಭಗಂ ಚಾರ್ಥವನ್ತಂ ಚ ರೂಪವನ್ತಂ ಚ ಪಶ್ಯತಿ ॥೧೩೭॥**

ಯಾವನು ರಾಜನ ಸೌಮ್ಯವಾದ ಮುಖವನ್ನು ನೋಡುತ್ತಾನೆಯೋ ಮತ್ತು ಅವನು ಸೌಭಾಗ್ಯಶಾಲಿಯಾಗಿರುವುದನ್ನೂ, ಧನವಂತನಾಗಿರುವುದನ್ನೂ ಮತ್ತು ರೂಪವಂತನಾಗಿರುವುದನ್ನೂ ಕಾಣುತ್ತಾನೆಯೋ–ಅವನು ಆ ರಾಜನ ವಶವರ್ತಿಯಾಗುತ್ತಾನೆ. (ಆಜ್ಞಾಧಾರಕನಾಗುತ್ತಾನೆ.) (ಪ್ರಜೆಗಳು ರಾಜನಲ್ಲಿ ಈ ಗುಣಗಳನ್ನು ನೋಡಿದನಂತರವೇ ಅವನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುತ್ತಾರೆ.)

**ಮಹತ್ತ್ವಾತ್ತಸ್ಯ ದಣ್ಡಸ್ಯ ನೀತಿರ್ವಿಸ್ಪಷ್ಟಲಕ್ಷಣಾ ।**
**ನಯಚಾರಶ್ಚ ವಿಪುಲೋ ಯೇನ ಸರ್ವಮಿದಂ ತತಮ್ ॥೧೩೮॥**

ಹಿಂದೆ ಹೇಳಿದ ದಂಡನೀತಿಯು ಸ್ಪಷ್ಟವಾದ ಲಕ್ಷಣಗಳಿಂದ ಕೂಡಿದುದಾಗಿದೆ. ಆ ನೀತಿಯ ಮಹತ್ತ್ವದಿಂದಲೇ ಈ ಜಗತ್ತು–ನೀತಿ ಮತ್ತು ಸದಾಚಾರಗಳಿಂದ ವ್ಯಾಪ್ತವಾಗಿರುತ್ತದೆ.

ಪುರಾಣಗಳು, ಮಹರ್ಷಿಗಳ ಉತ್ಪತ್ತಿ, ತೀರ್ಥಗಳ ಸಮೂಹ, ನಕ್ಷತ್ರಗಳ ಸಮುದಾಯ, ಬ್ರಹ್ಮಚರ್ಯವೇ ಮೊದಲಾದ ನಾಲ್ಕು ಆಶ್ರಮಗಳು, ಹೋತೃದ್ಗಾತೃಗಳೇ ಮೊದಲಾದ ನಾಲ್ಕು ಋತ್ವಿಜರಿಂದ ಕೂಡಿದ ಯಜ್ಞಕರ್ಮ, ಬ್ರಾಹ್ಮಣ-ಕ್ಷತ್ರಿಯಾದಿ ನಾಲ್ಕು ವರ್ಣಗಳು, ನಾಲ್ಕು ವಿದ್ಯೆಗಳು,

ಇತಿಹಾಸಗಳು, ವೇದಗಳು, ನ್ಯಾಯಶಾಸ್ತ್ರ–ಇವೆಲ್ಲವೂ ಬ್ರಹ್ಮನು ರಚಿಸಿರುವ ನೀತಿಶಾಸ್ತ್ರದಲ್ಲಿ ಸಂಪೂರ್ಣವಾಗಿ ವರ್ಣಿಸಲ್ಪಟ್ಟಿವೆ. ತಪಸ್ಸು, ಜ್ಞಾನ, ಅಹಿಂಸೆ, ಸತ್ಯಾಸತ್ಯಗಳಿಗಿಂತಲೂ ಅತೀತವಾದ ಬ್ರಹ್ಮವಸ್ತು, ವೃದ್ಧರ ಸೇವೆ, ದಾನ, ಶೌಚ, ಕಾರ್ಯತತ್ಪರತೆ, ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಯಾಪರತೆ–ಈ ಎಲ್ಲ ವಿಷಯಗಳೂ ಬ್ರಹ್ಮರಚಿತವಾದ ನೀತಿಶಾಸ್ತ್ರದಲ್ಲಿವೆ.

ಯುಧಿಷ್ಠಿರ! ಹೆಚ್ಚೇನು ಹೇಳಲಿ? ಈ ಭೂಮಿಯ ಮೇಲಿರುವುದು, ಭೂಮಿಯ ಕೆಳಭಾಗದಲ್ಲಿರುವುದು–ಈ ಎಲ್ಲ ವಿಷಯಗಳೂ ಪಿತಾಮಹನ ಆ ನೀತಿಶಾಸ್ತ್ರದಲ್ಲಿ ಅಡಕವಾಗಿವೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ನೀತಿಶಾಸ್ತ್ರವು ಸರ್ವತ್ರ ಪ್ರಚಲಿತವಾದನಂತರ, ದೇವತೆಗಳೂ ಮತ್ತು ಭೂಮಂಡಲದಲ್ಲಿರುವ ರಾಜರೂ ಸಮಾನರೆಂದು ವಿದ್ವಾಂಸರು ಸತತವಾಗಿ ಉದ್ಘೋಷಿಸತೊಡಗಿದರು.

ಭರತಶ್ರೇಷ್ಠನೇ! ರಾಜರ ಮಹತ್ವದ ವಿಷಯವಾಗಿ ನಿನಗೆ ಎಲ್ಲವನ್ನೂ ಆಮೂಲಾಗ್ರವಾಗಿಯೇ ಹೇಳಿರುತ್ತೇನೆ. ಈ ವಿಷಯದಲ್ಲಿ ಪುನಃ ಹೇಳಬೇಕಾದುದು ಯಾವುದಿದೆ? (ರಾಜರ ಸಂಬಂಧವಾಗಿ ಹೇಳಬೇಕಾದುದು ಯಾವುದೂ ಉಳಿದಿಲ್ಲ.)"

ಁಀನೆಯ ಅಧ್ಯಾಯವು ಮುಗಿಯಿತು.

೬೦ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ವರ್ಣಧರ್ಮಗಳ ವಿವರಣೆ

ವೈಶಂಪಾಯನರು ಹೇಳುತ್ತಾರೆ :

"ಜನಮೇಜಯ! ಯುಧಿಷ್ಠಿರನು, ಪಿತಾಮಹನಾದ ಗಂಗಾಪುತ್ರನಾದ ಭೀಷ್ಮನಿಗೆ ಅಭಿವಾದನಪೂರ್ವಕವಾಗಿ ನಮಸ್ಕರಿಸಿ ಪುನಃ ಪ್ರಶ್ನಿಸಿದನು.

**ಕೇ ಧರ್ಮಾಃ ಸರ್ವವರ್ಣಾನಾಂ ಚಾತುರ್ವರ್ಣ್ಯಸ್ಯ ಕೇ ಪೃಥಕ್ ।**
**ಚಾತುರ್ವರ್ಣ್ಯಾಶ್ರಮಾಣಾಂ ಚ ರಾಜಧರ್ಮಾಶ್ಚ ಕೇ ಮತಾಃ ॥೧॥**

"ಪಿತಾಮಹ! ಸರ್ವವರ್ಣದವರಿಗೂ ಸಮಾನವಾದ ಧರ್ಮಗಳು ಯಾವುವು? ಚಾತುರ್ವರ್ಣ್ಯದವರೂ ಪ್ರತ್ಯೇಕ-ಪ್ರತ್ಯೇಕವಾಗಿ ಅನುಸರಿಸಬೇಕಾದ ಧರ್ಮಗಳು ಯಾವುವು? ಚಾತುರ್ವರ್ಣ್ಯದವರಲ್ಲಿರುವ ನಾಲ್ಕು ಆಶ್ರಮಧರ್ಮಗಳು ಯಾವುವು? ಯಾವ ಧರ್ಮಗಳನ್ನು ರಾಜಧರ್ಮಗಳೆಂದು ಬಲ್ಲವರು ಅಭಿಪ್ರಾಯಪಡುತ್ತಾರೆ?

**ಕೇನ ವೈ ವರ್ಧತೇ ರಾಷ್ಟ್ರಂ ರಾಜಾ ಕೇನ ವಿವರ್ಧತೇ ।**
**ಕೇನ ಪೌರಾಶ್ಚ ಭೃತ್ಯಾಶ್ಚ ವರ್ಧನ್ತೇ ಭರತರ್ಷಭ ॥೩॥**

ಭರತರ್ಷಭನೇ! ಯಾವ ಸಾಧನದಿಂದ ಅಥವಾ ಯಾರಿಂದ ರಾಷ್ಟ್ರವು ಅಭಿವೃದ್ಧಿಹೊಂದುತ್ತದೆ? ರಾಜನು ಯಾವ ಉಪಾಯದಿಂದ ಅಥವಾ ಯಾರಿಂದ ಅಭಿವೃದ್ಧಿಹೊಂದುತ್ತಾನೆ? ಯಾರಿಂದ ಅಥವಾ ಯಾವುದರಿಂದ ನಾಗರಿಕರೂ–ಸೇವಕರೂ ಅಭಿವೃದ್ಧಿಯನ್ನು ಹೊಂದುತ್ತಾರೆ?

**ಕೋಶಂ ದಣ್ಡಂ ಚ ದುರ್ಗಂ ಚ ಸಹಾಯಾನ್ಮನ್ತ್ರಿಣಸ್ತಥಾ ।**
**ಋತ್ವಿಕ್ಪುರೋಹಿತಾಚಾರ್ಯಾನ್ಕೀದೃಶಾನ್ವರ್ಜಯೇನ್ನೃಪಃ ॥೪॥**

ರಾಜನಾದವನು ಯಾವ ಬಗೆಯ ಕೋಶಾಧಿಕಾರಿಗಳನ್ನೂ, ದಂಡಾಧಿಕಾರಿಗಳನ್ನೂ, ದುರ್ಗಾಧಿಕಾರಿಗಳನ್ನೂ, ಸಹಾಯಕರನ್ನೂ, ಮಂತ್ರಿಗಳನ್ನೂ, ಋತ್ವಿಜರನ್ನೂ, ಪುರೋಹಿತರನ್ನೂ, ಆಚಾರ್ಯರನ್ನೂ ತ್ಯಾಗ ಮಾಡಬೇಕು?

**ಕೇಷು ವಿಶ್ವಸಿತವ್ಯಂ ಸ್ಯಾದ್ರಾಜ್ಞಾ ಕಸ್ಯಾಞ್ಚಿದಾಪದಿ ।**
**ಕುತೋ ವಾತ್ಮಾ ದೃಢಂ ರಕ್ಷ್ಯಸ್ತನ್ಮೇ ಬ್ರೂಹಿ ಪಿತಾಮಹ ॥೫॥**

ಪಿತಾಮಹ! ಯಾವುದಾದರೂ ಆಪತ್ಕಾಲವು ಒದಗಿಬಂದಾಗ, ರಾಜನಾದವನು ಯಾರಲ್ಲಿ ವಿಶ್ವಾಸವನ್ನಿಡಬೇಕು? ಯಾರಿಂದ ತನ್ನನ್ನು ದೃಢವಾಗಿ ರಕ್ಷಿಸಿಕೊಳ್ಳಬೇಕು?–ಈ ವಿಷಯಗಳನ್ನೂ ಹೇಳು."

ಭೀಷ್ಮನು ಹೇಳುತ್ತಾನೆ :

**ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ ।**
**ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ವಕ್ಷ್ಯಾಮಿ ಶಾಶ್ವತಾನ್ ॥೬॥**

"ಮಹಾಧರ್ಮಕ್ಕೆ ನಮಸ್ಕಾರಮಾಡುತ್ತೇನೆ! ವಿಶ್ವದ ಸೃಷ್ಟಿಕರ್ತೃವಾದ ಶ್ರೀಕೃಷ್ಣನಿಗೆ ನಮಸ್ಕಾರಮಾಡುತ್ತೇನೆ! ಬ್ರಾಹ್ಮಣರಿಗೂ ನಮಸ್ಕಾರಮಾಡಿ ನೀನು ಕೇಳಿದ ಸನಾತನಧರ್ಮಗಳನ್ನು ಹೇಳುತ್ತೇನೆ.

ಯುಧಿಷ್ಠಿರ! ನೀನು ಕೇಳಿರುವ–'ಕೇ ಧರ್ಮಾಃ ಸರ್ವ ವರ್ಣಾನಾಂ–ಎಲ್ಲ ವರ್ಣಗಳಿಗೂ ಸಮಾನವಾದ ಧರ್ಮವು ಯಾವುದು?'–ಎಂಬ ಪ್ರಶ್ನೆಗೆ ಉತ್ತರಿಸುತ್ತೇನೆ :

**ಅಕ್ರೋಧಃ ಸತ್ಯವಚನಂ ಸಂವಿಭಾಗಃ ಕ್ಷಮಾ ತಥಾ ।**
**ಪ್ರಜನಃ ಸ್ವೇಷು ದಾರೇಷು ಶೌಚಮದ್ರೋಹ ಏವ ಚ ।**
**ಆರ್ಜನಂ ಭೃತ್ಯಭರಣಂ ನವೈತೇ ಸಾರ್ವವರ್ಣಿಕಾಃ ॥೭॥**

ಕ್ರೋಧವಿಲ್ಲದಿರುವಿಕೆ (ಯಾರ ಮೇಲೂ ಕೋಪಮಾಡಿಕೊಳ್ಳದೇ ಇರುವುದು), ಸತ್ಯವನ್ನೇ ಹೇಳುವುದು, ಸಂಪಾದಿಸಿದ ಐಶ್ವರ್ಯವನ್ನು ಹಂಚಿಕೊಂಡು ಉಪಭೋಗಿಸುವುದು, ಕ್ಷಮಾಶೀಲನಾಗಿರುವುದು, ತನ್ನ ಧರ್ಮಪತ್ನಿಯಲ್ಲಿ ಮಕ್ಕಳನ್ನು ಪಡೆಯುವುದು, ಅಂತರಂಗದಲ್ಲಿಯೂ ಮತ್ತು ಬಹಿರಂಗದಲ್ಲಿಯೂ ಶುಚಿಯಾಗಿರುವುದು (ಮನಸ್ಸಿನ ನೈರ್ಮಲ್ಯವನ್ನೂ–ಶರೀರದ ನೈರ್ಮಲ್ಯವನ್ನೂ ಹೊಂದಿರುವುದು), ಯಾರಿಗೇ ಆಗಲೀ ದ್ರೋಹವನ್ನು ಬಗೆಯದಿರುವುದು, ಋಜುತ್ವದಿಂದ ಅಥವಾ ಸರಳತೆಯಿಂದಿರುವುದು, ತನ್ನ ಕುಟುಂಬಕ್ಕೆ ಸೇರಿದವರ ಭರಣ-ಪೋಷಣೆಗಳನ್ನು ಮಾಡುವುದು–ಈ ಒಂಬತ್ತು ಚಾತುರ್ವರ್ಣ್ಯದವರೂ ಅನುಸರಿಸಲೇಬೇಕಾದ ಸಾಮಾನ್ಯಧರ್ಮಗಳಾಗಿವೆ.

ಯುಧಿಷ್ಠಿರ! ಮುಂದೆ ನಾನು ಬ್ರಾಹ್ಮಣವರ್ಣಕ್ಕೆ ಸಂಬಂಧಪಟ್ಟ ಧರ್ಮಗಳನ್ನು ಹೇಳುತ್ತೇನೆ :

**ದಮಮೇವ ಮಹಾರಾಜ ಧರ್ಮಮಾಹುಃ ಪುರಾತನಮ್ ।**
**ಸ್ವಾಧ್ಯಾಯಾಭ್ಯಸನಂ ಚೈವ ತತ್ರ ಕರ್ಮ ಸಮಾಪ್ಯತೇ ॥೯॥**

ಇಂದ್ರಿಯನಿಗ್ರಹವೇ ಬ್ರಾಹ್ಮಣರಿಗೆ ಉಕ್ತವಾಗಿರುವ ಶ್ರೇಷ್ಠವಾದ ಸನಾತನಧರ್ಮವೆಂದು ತಿಳಿದವರು ಹೇಳುತ್ತಾರೆ. ಎರಡನೆಯದಾಗಿ

ಬ್ರಾಹ್ಮಣನು ಸರ್ವಕಾಲದಲ್ಲಿಯೂ ವೇದ-ಶಾಸ್ತ್ರಗಳ ಅಧ್ಯಯನದಲ್ಲಿಯೇ ನಿರತನಾಗಿರಬೇಕು. ವೇದ-ಶಾಸ್ತ್ರಗಳ ಅಧ್ಯಯನದಿಂದಲೇ ಅವನು ಮಾಡ ಬೇಕಾದ ಎಲ್ಲ ಕರ್ಮಗಳೂ ಪೂರೈಸಿದಂತಾಗುತ್ತವೆ.

**ತಂ ಚೇದ್ದ್ವಿಜಮುಪಾಗಚ್ಛೇದ್ವರ್ತಮಾನಂ ಸ್ವಕರ್ಮಣಿ ।**
**ಅಕುರ್ವಾಣಂ ವಿಕರ್ಮಾಣಿ ಶಾನ್ತಂ ಪ್ರಜ್ಞಾನತರ್ಪಿತಮ್ ॥೧೦॥**
**ಕುರ್ವೀತಾಪತ್ಯಸಂತಾನಮಥೋ ದದ್ಯಾದ್ಯಜೇತ ಚ ।**
**ಸಂವಿಭಜ್ಯ ಚ ಭೋಕ್ತವ್ಯಂ ಧನಂ ಸದ್ಭಿರಿತೀರ್ಯತೇ ॥೧೧॥**

ಸ್ವವರ್ಣೋಕ್ತವಾದ ಸ್ವಾಧ್ಯಾಯಾಭ್ಯಾಸದಲ್ಲಿಯೇ ನಿರತನಾಗಿರುವ, ಜಿತೇಂದ್ರಿಯನಾಗಿರುವ, ಶಾಂತನಾಗಿರುವ, ತನಗಿರುವ ಜ್ಞಾನ-ವಿಜ್ಞಾನ ಗಳಿಂದಲೇ ತೃಪ್ತಿಯನ್ನು ಹೊಂದಿರುವ, ತನ್ನ ವರ್ಣಾಶ್ರಮಧರ್ಮಗಳಿಗೆ ವಿರೋಧವಾಗಿ ಯಾವ ಕಾರ್ಯವನ್ನೂ ಮಾಡದಿರುವ ಬ್ರಾಹ್ಮಣನನ್ನು ಐಶ್ವರ್ಯವೇನಾದರೂ ಆಶ್ರಯಿಸಿದರೆ–ಆ ಬ್ರಾಹ್ಮಣನು ಮದುವೆಯನ್ನು ಮಾಡಿಕೊಂಡು ಸತ್ಸಂತಾನವನ್ನು ಪಡೆದುಕೊಳ್ಳಬೇಕು. ದಾನಮಾಡಬೇಕು ಮತ್ತು ಯಜ್ಞಮಾಡಬೇಕು. ಅಯಾಚಿತವಾಗಿ ಪ್ರಾಪ್ತವಾದ ಐಶ್ವರ್ಯವನ್ನು ಬಂಧು-ಮಿತ್ರರಿಗೂ ಹಂಚಿಕೊಟ್ಟು ತಾನೂ ಉಪಭುಂಜಿಸಬೇಕು–ಇದು ಬ್ರಾಹ್ಮಣನ ಕರ್ತವ್ಯವಾಗಿರುವುದೆಂದು ಸತ್ಪುರುಷರು ಹೇಳುತ್ತಾರೆ.

**ಪರಿನಿಷ್ಠಿತಕಾರ್ಯಸ್ತು ಸ್ವಾಧ್ಯಾಯೇನೈವ ಬ್ರಾಹ್ಮಣಃ ।**
**ಕುರ್ಯಾದನ್ಯನ್ನ ವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥೧೨॥**

ಇತರ ಯಾವುದೇ ಕರ್ಮಗಳನ್ನು ಮಾಡಲಿ ಅಥವಾ ಮಾಡದಿರಲಿ– ಬ್ರಾಹ್ಮಣನು ವೇದ-ಶಾಸ್ತ್ರಾಧ್ಯಯನದಿಂದಲೇ ಕೃತಕೃತ್ಯತೆಯನ್ನು ಹೊಂದು ತ್ತಾನೆ. ( ಬ್ರಾಹ್ಮಣನು ವೇದಾಧ್ಯಯನ-ಶಾಸ್ತ್ರಾಧ್ಯಯನಗಳ ಹೊರತಾಗಿ ಬೇರೆ ಯಾವ ಕರ್ಮಗಳನ್ನೂ ಮಾಡಬೇಕಾದ ಆವಶ್ಯಕತೆಯೇ ಇಲ್ಲ. ಸರ್ವದಾ ಸ್ವಾಧ್ಯಾಯದಲ್ಲಿ ನಿರತನಾಗಿರುವುದರಿಂದಲೇ ಅವನು ಮಾಡಬೇಕಾದ ಎಲ್ಲ ಕರ್ಮಗಳನ್ನೂ ಮಾಡಿದಂತೆಯೇ ಆಗುತ್ತದೆ. ) ಬ್ರಾಹ್ಮಣನು ಎಲ್ಲರಲ್ಲಿಯೂ ಮೈತ್ರಿಯಿಂದಲೇ ಇರುವುದರಿಂದ ಅವನನ್ನು 'ಮೈತ್ರ'–ಎಂದೂ ಕರೆಯು ತ್ತಾರೆ.

ಭರತನಂದನ! ಕ್ಷತ್ರಿಯನ ಧರ್ಮಗಳು ಯಾವುವೆಂಬುದನ್ನು ಹೇಳುತ್ತೇನೆ.

**ದದ್ಯಾದ್ರಾಜನ್ನ ಯಾಚೇತ ಯಜೇತ ನ ಚ ಯಾಜಯೇತ್ ।**
**ನಾಧ್ಯಾಪಯೇದಧೀಯೀತ ಪ್ರಜಾಶ್ಚ ಪರಿಪಾಲಯೇತ್ ।**
**ನಿತ್ಯೋದ್ಯುಕ್ತೋ ದಸ್ಯುವಧೇ ರಣೇ ಕುರ್ಯಾತ್ಪರಾಕ್ರಮಮ್ ॥೧೪॥**

ಕ್ಷತ್ರಿಯನು ಸತ್ಪಾತ್ರರಿಗೆ ದಾನವನ್ನು ಕೊಡಬೇಕು. ತಾನು ಮಾತ್ರ ಇತರರನ್ನು ಯಾಚನೆಮಾಡಬಾರದು. ( ದಾನತೆಗೆದುಕೊಳ್ಳಬಾರದು. ) ತಾನು ಯಾಗಮಾಡಬೇಕು. ಬೇರೆಯವರಿಗೆ ಯಾಗಮಾಡಿಸಬಾರದು. ವೇದ ಶಾಸ್ತ್ರಗಳನ್ನು ಅಧ್ಯಯನಮಾಡಬೇಕು. ಇತರರಿಗೆ ವೇದ-ಶಾಸ್ತ್ರಗಳನ್ನು ಹೇಳಿಕೊಡಬಾರದು. ಪ್ರಜೆಗಳನ್ನು ಪರಿಪಾಲನೆಮಾಡಬೇಕು. ಪ್ರಜೆಗಳನ್ನು ಹಿಂಸಿಸುವ ಕಳ್ಳ-ಕಾಕರನ್ನೂ ದರೋಡೆಗಾರರನ್ನೂ ಧ್ವಂಸಮಾಡುವುದರಲ್ಲಿಯೇ ಸರ್ವದಾ ನಿರತನಾಗಿರಬೇಕು. ರಣಭೂಮಿಯಲ್ಲಿ ಶತ್ರುವಿನೊಡನೆ ಯುದ್ಧಮಾಡುವಾಗ ಪರಾಕ್ರಮವನ್ನು ಪ್ರದರ್ಶಿಸಬೇಕು.

**ಯೇ ತು ಕ್ರತುಭಿರೀಜಾನಾಃ ಶ್ರುತವನ್ತಶ್ಚ ಭೂಮಿಪಾಃ ।**
**ಯ ಏವಾಹವಜೇತಾರಸ್ತ ಏಷಾಂ ಲೋಕಜಿತ್ತಮಾಃ ॥೧೫॥**

ಯಾರು ಮಹಾಯಾಗಗಳಿಂದ ದೇವತೆಗಳನ್ನು ತೃಪ್ತಿಪಡಿಸುವರೋ, ಯಾರು ವೇದ-ಶಾಸ್ತ್ರಗಳನ್ನು ತಿಳಿದುಕೊಂಡಿರುವರೋ ಮತ್ತು ಯಾರು ಯುದ್ಧದಲ್ಲಿ ವಿಜಯವನ್ನು ಗಳಿಸಲು ಸಮರ್ಥರೋ–ಅಂತಹ ರಾಜರ ಮಧ್ಯದಲ್ಲಿ ಯುದ್ಧದಲ್ಲಿ ಜಯಗಳಿಸುವ ರಾಜರೇ ಪುಣ್ಯಲೋಕಜಿತರಾದ ಈ ರಾಜರುಗಳಲ್ಲಿ ಶ್ರೇಷ್ಠರೆನಿಸಿಕೊಳ್ಳುತ್ತಾರೆ.

**ಅವಿಕ್ಷತೇನ ದೇಹೇನ ಸಮರಾದ್ಯೋ ನಿವರ್ತತೇ ।**
**ಕ್ಷತ್ರಿಯೋ ನಾಸ್ಯ ತತ್ಕರ್ಮ ಪ್ರಶಂಸನ್ತಿ ಪುರಾವಿದಃ ॥೧೬॥**

ಯಾವ ಕ್ಷತ್ರಿಯನು ಯುದ್ಧಮಾಡಲು ಸಮರಭೂಮಿಗೆ ಹೋಗಿ ಶರೀರದಲ್ಲಿ ಯಾವ ಗಾಯವೂ ಆಗದೇ ಸೋತು ಹಿಂದಿರುಗುವನೋ–ಅಂತಹವನ ಆ ಕ್ರಿಯೆಯನ್ನು ಪುರಾತನಧರ್ಮವನ್ನು ತಿಳಿದಿರುವ ವಿದ್ವಾಂಸರು ಪ್ರಶಂಸೆಮಾಡುವುದಿಲ್ಲ.

**ಏವಂ ಹಿ ಕ್ಷತ್ರಬನ್ಧೂನಾಂ ಮಾರ್ಗಮಾಹುಃ ಪ್ರಧಾನತಃ ।**
**ನಾಸ್ಯ ಕೃತ್ಯತಮಂ ಕಿಂಚಿದನ್ಯದ್ದಸ್ಯುನಿಬರ್ಹಣಾತ್ ॥೧೭॥**

**ದಾನಮಧ್ಯಯನಂ ಯಜ್ಞೋ ರಾಜ್ಞಾಂ ಕ್ಷೇಮೋ ವಿಧೀಯತೇ ।**
**ತಸ್ಮಾದ್ರಾಜ್ಞಾ ವಿಶೇಷೇಣ ಯೋದ್ಧವ್ಯಂ ಧರ್ಮಮೀಪ್ಸತಾ ॥೧೮॥**

ಈ ರೀತಿಯಲ್ಲಿ ಕ್ಷತ್ರಿಯನಿಗೆ ಯುದ್ಧಮಾಡುವುದೇ ಪ್ರಧಾನಮಾರ್ಗವೆಂದು ವಿದ್ವಾಂಸರು ಹೇಳುತ್ತಾರೆ. ಪ್ರಜೆಗಳಿಗೆ ಉಪಟಳವನ್ನುಂಟುಮಾಡುವ ಕಳ್ಳ-ಕಾಕರನ್ನೂ ದಂಗೆಕೋರರರನ್ನೂ ಧ್ವಂಸಮಾಡುವುದಕ್ಕಿಂತಲೂ ಬೇರೆಯದಾದ ಮತ್ತು ಶ್ರೇಷ್ಠವಾದ ಕರ್ತವ್ಯವೇ ರಾಜನಿಗಿರುವುದಿಲ್ಲ. ದಾನಾಧ್ಯಯನ-ಯಜ್ಞಗ್ಗಳನ್ನು ಮಾಡುವುದರಿಂದಲೂ ಕ್ಷತ್ರಿಯನಿಗೆ ಶ್ರೇಯಸ್ಸುಂಟಾಗುತ್ತದೆ. ಆದರೆ ಶತ್ರುಗಳೊಡನೆ ಮತ್ತು ದಸ್ಯುಗಳೊಡನೆ ಯುದ್ಧಮಾಡುವುದೇ ರಾಜನ ಮುಖ್ಯಧರ್ಮವಾಗಿರುವುದರಿಂದ ಧರ್ಮ ಮಾರ್ಗದಲ್ಲಿಯೇ ಇರಬೇಕೆಂದು ಇಚ್ಛಿಸುವ ರಾಜನು ವಿಶೇಷವಾಗಿ ಯುದ್ಧ ಶೀಲನಾಗಿಯೂ, ಯಾವುದೇ ಸಮಯದಲ್ಲಾದರೂ ಯುದ್ಧಸನ್ನದ್ಧನಾಗಿಯೂ ಇರಬೇಕು.

**ಸ್ವೇಷು ಧರ್ಮೇಷ್ವವಸ್ಥಾಪ್ಯ ಪ್ರಜಾಃ ಸರ್ವಾ ಮಹೀಪತಿಃ ।**
**ಧರ್ಮೇಣ ಸರ್ವಕೃತ್ಯಾನಿ ಶಮನಿಷ್ಠಾನಿ ಕಾರಯೇತ್ ॥೧೯॥**

ರಾಜನು ಎಲ್ಲ ಪ್ರಜೆಗಳನ್ನೂ ಅವರವರ ವರ್ಣಾಶ್ರಮಧರ್ಮಗಳಲ್ಲಿ ಪ್ರತಿಷ್ಠಾಪಿಸಬೇಕು ಮತ್ತು ಅವರ ಮೂಲಕವಾಗಿ ಶಾಂತಿಯೇ ಪ್ರಧಾನವಾಗಿರುವ ಎಲ್ಲ ಕಾರ್ಯಗಳನ್ನೂ ಧರ್ಮಾನುಸಾರವಾಗಿ ಮಾಡಿಸಬೇಕು.

**ಪರಿನಿಷ್ಠಿತಕಾರ್ಯಸ್ತು ನೃಪತಿಃ ಪರಿಪಾಲನಾತ್ ।**
**ಕುರ್ಯಾದನ್ಯನ್ನ ವಾ ಕುರ್ಯಾದೈನ್ದ್ರೋ ರಾಜನ್ಯ ಉಚ್ಯತೇ ॥೨೦॥**

ಬೇರೆಯ ಯಾವುದೇ ಕರ್ಮವನ್ನಾದರೂ ಮಾಡಲೀ ಅಥವಾ ಮಾಡದೆಯೇ ಇರಲಿ–ರಾಜನು ಧರ್ಮದಿಂದ ಪ್ರಜೆಗಳನ್ನು ಪರಿಪಾಲನೆಮಾಡುವುದರಿಂದಲೇ ಕೃತಕೃತ್ಯನಾಗುತ್ತಾನೆ. ಪ್ರಜಾಪಾಲನವೆಂಬುದೇ ರಾಜನಿಗೆ ಅತಿ ಮುಖ್ಯವಾದ ಮತ್ತು ಅತಿಶ್ರೇಷ್ಠವಾದ ಧರ್ಮವಾಗಿದೆ. ರಾಜನು ಇಂದ್ರ ದೇವನಿಗೆ ಸಂಬಂಧಿಸಿದಂತೆ ಬಲಪ್ರಧಾನನಾಗಿರುವುದರಿಂದ ಅವನನ್ನು 'ಐಂದ್ರ'–ಎಂಬ ಹೆಸರಿನಿಂದಲೂ ಕರೆಯುತ್ತಾರೆ.

ಯುಧಿಷ್ಠಿರ! ಮುಂದೆ ನಾನು ವೈಶ್ಯರು ಅನುಸರಿಸಬೇಕಾದ ಸನಾತನ ಧರ್ಮಗಳನ್ನು ಹೇಳುತ್ತೇನೆ.

**ದಾನಮಧ್ಯಯನಂ ಯಜ್ಞಃ ಶೌಚೇನ ಧನಸಂಚಯಃ ।**
**ಪಿತೃವತ್ಪಾಲಯೇದ್ವೈಶ್ಯೋ ಯುಕ್ತಃ ಸರ್ವಾನ್ಪಶೂನಿಹ ।**
**ವಿಕರ್ಮ ತದ್ಭವೇದನ್ಯತ್ಕರ್ಮ ಯತ್ಸ ಸಮಾಚರೇತ್ ॥೨೨॥**

ದಾನ, ಅಧ್ಯಯನ, ಯಜ್ಞಗಳನ್ನು ಮಾಡುವುದು ಮತ್ತು ಶುದ್ಧ ಮಾರ್ಗದಿಂದ ಹಣವನ್ನು ಸಂಗ್ರಹಿಸುವುದು–ಇವು ವೈಶ್ಯನ ಕರ್ಮಗಳಾಗಿರುತ್ತವೆ. ವೈಶ್ಯನು ಸರ್ವದಾ ಉದ್ಯೋಗಶೀಲನಾಗಿದ್ದು–ತಂದೆಯಾದವನು ಮಕ್ಕಳನ್ನು ಪೋಷಿಸುವಂತೆ–ಎಲ್ಲ ವಿಧವಾದ ಪಶುಗಳನ್ನೂ ಅಕ್ಕರೆಯಿಂದಲೂ ಮತ್ತು ಜಾಗರೂಕತೆಯಿಂದಲೂ ಪಾಲನೆಮಾಡಬೇಕು. ಪಶುಪಾಲನಕರ್ಮವನ್ನು ಬಿಟ್ಟು ವೈಶ್ಯನು ಬೇರೆ ಯಾವುದೇ ಕರ್ಮವನ್ನು ಮಾಡಿದರೂ ಅದು ವಿಕರ್ಮವೇ ಆಗುತ್ತದೆ. (ಸ್ವಕರ್ಮವನ್ನು ಮಾಡಿದಂತಾಗುವುದಿಲ್ಲ. )

**ರಕ್ಷಯಾ ಸ ಹಿ ತೇಷಾಂ ವೈ ಮಹತ್ಸುಖಮವಾಪ್ನುಯಾತ್ ।**
**ಪ್ರಜಾಪತಿರ್ಹಿ ವೈಶ್ಯಾಯ ಸೃಷ್ಟ್ವಾ ಪರಿದದೌ ಪಶೂನ್ ॥೨೩॥**

ಪಶುಗಳ ಪರಿಪಾಲನೆಯಿಂದ ವೈಶ್ಯನು ಮಹತ್ತಾದ ಸುಖವನ್ನು ಹೊಂದುತ್ತಾನೆ. ಪ್ರಜಾಪತಿಯು ಪಶುಗಳನ್ನು ಸೃಷ್ಟಿಸಿ ಅವುಗಳ ರಕ್ಷಣೆಯ ಭಾರವನ್ನು ವೈಶ್ಯನಿಗೆ ವಹಿಸಿಕೊಟ್ಟನು.

**ಬ್ರಾಹ್ಮಣಾಯ ಚ ರಾಜ್ಞೇ ಚ ಸರ್ವಾಃ ಪರಿದದೇ ಪ್ರಜಾಃ ।**

ಪ್ರಜಾಪತಿಯು ಬ್ರಾಹ್ಮಣನಿಗೂ ಮತ್ತು ರಾಜನಿಗೂ ಎಲ್ಲ ಪ್ರಜೆಗಳ ಭರಣ-ಪೋಷಣೆಗಳ ಭಾರವನ್ನು ವಹಿಸಿಕೊಟ್ಟಿರುವನು.

ಯುಧಿಷ್ಠಿರ! ಮುಂದೆ ನಾನು ವೈಶ್ಯನ ವೃತ್ತಿಯನ್ನೂ ಮತ್ತು ಅವನು ಹೇಗೆ ಜೀವನವನ್ನು ನಿರ್ವಹಿಸಬೇಕೆಂಬುದನ್ನೂ ಹೇಳುತ್ತೇನೆ:

**ಷಣ್ಣಾಮೇಕಾಂ ಪಿಬೇದ್ಧೇನುಂ ಶತಾಚ್ಚ ಮಿಥುನಂ ಹರೇತ್ ।**
**ಲಬ್ಧಾಚ್ಚ ಸಪ್ತಮಂ ಭಾಗಂ ತಥಾ ಶೃಙ್ಗೇ ಕಲಾಂ ಖುರೇ ॥೨೪॥**

ವೈಶ್ಯನು ರಾಜನಿಂದ ಅಥವಾ ಪ್ರಜೆಗಳಿಂದ ಆರು ಹಸುಗಳನ್ನು ಪಡೆದು

ಕೊಂಡು ಅವುಗಳನ್ನು ಸಾಕುತ್ತಿದ್ದರೆ ಆ ಆರು ಹಸುಗಳಲ್ಲಿ ಒಂದು ಹಸುವಿನ ಹಾಲನ್ನು ತನ್ನ ಜೀವನಕ್ಕಾಗಿ ಉಪಯೋಗಿಸಿಕೊಳ್ಳಬಹುದು. ನೂರು ಹಸುಗಳನ್ನು ಸಾಕುತ್ತಿದ್ದರೆ–ಒಂದು ಹಸುವನ್ನೂ ಮತ್ತು ಒಂದು ಎತ್ತನ್ನೂ ತನ್ನ ಜೀವನಕ್ಕಾಗಿ ಉಪಯೋಗಿಸಿಕೊಳ್ಳಬಹುದು. ಅಥವಾ ನೂರು ಹಸುಗಳ ಹಾಲು, ತುಪ್ಪ–ಇತ್ಯಾದಿಗಳಿಂದ ಲಭ್ಯವಾಗುವ ಒಟ್ಟು ಮೌಲ್ಯದಲ್ಲಿ ಏಳನೆಯ ಒಂದು ಭಾಗವನ್ನು ವೈಶ್ಯನು ತನ್ನ ಜೀವನಕ್ಕಾಗಿ ಇಟ್ಟುಕೊಳ್ಳಬಹುದು. (ಸತ್ತುಹೋದ ) ಹಸುಗಳ ಕೊಂಬುಗಳ ಮಾರಾಟದಿಂದ ಬರುವ ಹಣದಲ್ಲಿ ಏಳನೆಯ ಒಂದು ಭಾಗವನ್ನೂ, ಗೊರಸುಗಳ ಮಾರಾಟದಿಂದ ಬರುವ ಹಣದಲ್ಲಿ ಹದಿನಾರನೆಯ ಒಂದು ಭಾಗವನ್ನೂ ವೈಶ್ಯನು ತನ್ನ ಜೀವಿಕೆಗಾಗಿ ಇಟ್ಟುಕೊಳ್ಳಬಹುದು.

**ಸಸ್ಯಾನಾಂ ಸರ್ವಬೀಜಾನಾಮೇಷಾ ಸಾಂವತ್ಸರೀ ಭೃತಿಃ ।**
**ನ ಚ ವೈಶ್ಯಸ್ಯ ಕಾಮಃ ಸ್ಯಾನ್ನ ರಕ್ಷೇಯಂ ಪಶೂನಿತಿ ॥೨೬॥**

ವೈಶ್ಯನು ಬೆಳೆಯುವ ಸಕಲವಿಧವಾದ ಆಹಾರಧಾನ್ಯಗಳಲ್ಲಿಯೂ ಈ ವಿಧವಾದ ಹದಿನಾರನೆಯ ಒಂದು ಭಾಗವನ್ನೇ ಅವನು ಪಡೆದುಕೊಳ್ಳಬೇಕು. ಇದು ಅವನ ವಾರ್ಷಿಕವೇತನವಾಗಿರುತ್ತದೆ. ಆದರೆ ವೈಶ್ಯನೆಂದಿಗೂ ಪಶುಗಳನ್ನು ರಕ್ಷಣೆಮಾಡುವುದಿಲ್ಲವೆಂಬ ಆಶಯವನ್ನು ಹೊಂದಲೇಬಾರದು.

**ವೈಶ್ಯೇ ಚೇಚ್ಛತಿ ನಾನ್ಯೇನ ರಕ್ಷಿತವ್ಯಾಃ ಕಥಂಚನ ।**
**ಶೂದ್ರಸ್ಯಾಪಿ ಹಿ ಯೋ ಧರ್ಮಸ್ತಂ ತೇ ವಕ್ಷ್ಯಾಮಿ ಭಾರತ ॥೨೭॥**

ಎಲ್ಲಿಯವರೆಗೆ ವೈಶ್ಯನು ಪಶುಗಳನ್ನು ಸಾಕಲು ಇಚ್ಛಿಪಡುವನೋ–ಅಲ್ಲಿಯವರೆಗೂ ಪಶುಗಳ ರಕ್ಷಣಾಕಾರ್ಯವನ್ನು ಬೇರೆಯವರಿಗೆ ಯಾವುದೇ ಕಾರಣದಿಂದಲೂ ವಹಿಸಿಕೊಡಬಾರದು.

ಭಾರತನೇ! ಶೂದ್ರನು ಯಾವ ಧರ್ಮವನ್ನು ಅನುಸರಿಸಬೇಕೆಂಬುದನ್ನೂ ಈಗ ಹೇಳುತ್ತೇನೆ:

**ಪ್ರಜಾಪತಿರ್ಹಿ ವರ್ಣಾನಾಂ ದಾಸಂ ಶೂದ್ರಮಕಲ್ಪಯತ್ ।**
**ತಸ್ಮಾಚ್ಛೂದ್ರಸ್ಯ ವರ್ಣಾನಾಂ ಪರಿಚರ್ಯಾ ವಿಧೀಯತೇ ॥೨೮॥**

ಪ್ರಜಾಪತಿಬ್ರಹ್ಮನು ಬ್ರಹ್ಮ-ಕ್ಷತ್ರ-ವೈಶ್ಯರ ಸೇವಕನ ರೂಪದಲ್ಲಿ ಶೂದ್ರನನ್ನು ಸೃಷ್ಟಿಸಿದನು. ಆದುದರಿಂದ ಶೂದ್ರನಿಗೆ ಉಳಿದ ಮೂರು ವರ್ಣಗಳ ಸೇವೆಮಾಡುವುದೇ ಶಾಸ್ತ್ರವಿಹಿತವಾದ ಕರ್ಮವಾಗಿದೆ.

**ತೇಷಾಂ ಶುಶ್ರೂಷಣಾಚ್ಚೈವ ಮಹತ್ಸುಖಮವಾಪ್ನುಯಾತ್ ।**
**ಶೂದ್ರ ಏತಾನ್ಪರಿಚರೇತ್ತ್ರೀನ್ವರ್ಣಾನನುಪೂರ್ವಶಃ ॥೨೯॥**

ಮೂರು ವರ್ಣದವರ ಶುಶ್ರೂಷೆಮಾಡುವುದರಿಂದಲೇ ಶೂದ್ರನು ಮಹಾಸುಖವನ್ನು ಹೊಂದುತ್ತಾನೆ. ಆದುದರಿಂದ ಶೂದ್ರನು ಮೂರು ವರ್ಣದವರನ್ನೂ ಕ್ರಮವಾಗಿ ಸೇವಿಸಬೇಕು.

**ಸಂಚಯಾಂಶ್ಚ ನ ಕುರ್ವೀತ ಜಾತು ಶೂದ್ರಃ ಕಥಂಚನ ।**
**ಪಾಪೀಯಾನ್ಹಿ ಧನಂ ಲಬ್ಧ್ವಾ ವಶೇ ಕುರ್ಯಾದ್ಗರೀಯಸಃ ॥೩೦॥**

ಶೂದ್ರನು ಧನಸಂಗ್ರಹವನ್ನು ಯಾವಾಗಲೂ ಯಾವುದೇ ಕಾರಣ ಕ್ಕಾದರೂ ಮಾಡಬಾರದು. ಏಕೆಂದರೆ: ಶೂದ್ರನು ಧನವಂತನಾದರೆ ಪಾಪ ಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ. ಧನಬಲದಿಂದ ತನಗಿಂತಲೂ ಶ್ರೇಷ್ಠ ರಾದವರನ್ನೂ ಅವನು ತನ್ನ ಅಧೀನದಲ್ಲಿಟ್ಟುಕೊಳ್ಳಬಹುದಾಗಿದೆ.

**ರಾಜ್ಞಾ ವಾ ಸಮನುಜ್ಞಾತಃ ಕಾಮಂ ಕುರ್ವೀತ ಧಾರ್ಮಿಕಃ ।**
**ತಸ್ಯ ವೃತ್ತಿಂ ಪ್ರವಕ್ಷ್ಯಾಮಿ ಯಚ್ಚ ತಸ್ಯೋಪಜೀವನಮ್ ॥೩೧॥**

ಅಥವಾ ಧರ್ಮಾತ್ಮನಾದ ಶೂದ್ರನು ರಾಜನ ಅನುಮತಿಯನ್ನು ಪಡೆದುಕೊಂಡು ಧನವನ್ನು ಸಂಗ್ರಹಿಸಿ ತನ್ನ ಇಚ್ಛಾನುಸಾರವಾಗಿ ಧಾರ್ಮಿಕ ಕಾರ್ಯಗಳನ್ನು ಮಾಡಬಹುದು. ಅವನ ವೃತ್ತಿಯನ್ನೂ ಅವನ ಜೀವಿಕೆಯು ಹೇಗೆಂಬುದನ್ನೂ ಹೇಳುತ್ತೇನೆ :

**ಅವಶ್ಯಂ ಭರಣೀಯೋ ಹಿ ವರ್ಣಾನಾಂ ಶೂದ್ರ ಉಚ್ಯತೇ ।**
**ಛತ್ರಂ ವೇಷ್ಟನಮೌಶೀರಮುಪಾನದ್ವ್ಯಜನಾನಿ ಚ ।**
**ಯಾತಯಾಮಾನಿ ದೇಯಾನಿ ಶೂದ್ರಾಯ ಪರಿಚಾರಿಣೇ ॥೩೨॥**

ಮೂರು ವರ್ಣದವರೂ ಶೂದ್ರನ ಭರಣ-ಪೋಷಣೆಗಳನ್ನು ಅತ್ಯ ವಶ್ಯವಾಗಿ ಮಾಡಲೇಬೇಕು. ಏಕೆಂದರೆ : ಶೂದ್ರನು ಭರಣ-ಪೋಷಣಾದಿ

ಗಳಿಗೆ ಯೋಗ್ಯನಾಗಿರುತ್ತಾನೆ. ಪರಿಚರ್ಯೆಯನ್ನು ಮಾಡುವ ಶೂದ್ರನಿಗೆ ಉಪಯೋಗಿಸಿದ ಛತ್ರಿಯನ್ನೂ, ಶಿರೋವೇಷ್ಟನವನ್ನೂ, ಶಯನಾಸನಗಳನ್ನೂ, ಪಾದರಕ್ಷೆಗಳನ್ನೂ ಮತ್ತು ಬೀಸಣಿಗೆಗಳನ್ನೂ ಕೊಡಬೇಕು.

**ಅಧಾರ್ಯಾಣಿ ವಿಶೀರ್ಣಾನಿ ವಸನಾನಿ ದ್ವಿಜಾತಿಭಿಃ ।**
**ಶೂದ್ರಾಯೈವ ಪ್ರದೇಯಾನಿ ತಸ್ಯ ಧರ್ಮಧನಂ ಹಿ ತತ್ ॥೩೩॥**

ದ್ವಿಜರು (ಬ್ರಾಹ್ಮಣ-ಕ್ಷತ್ರಿಯ-ವೈಶ್ಯರು) ಧರಿಸಲು ಅಯೋಗ್ಯವಾದ ಹರಿದುಹೋಗಿರುವ ಬಟ್ಟೆಗಳನ್ನು ಶೂದ್ರನಿಗೆ ಕೊಡಬೇಕು. ಏಕೆಂದರೆ : ಅಂತಹ ಎಲ್ಲ ವಸ್ತುಗಳೂ ಧರ್ಮತಃ ಶೂದ್ರನ ಧನವಾಗಿರುತ್ತವೆ.

**ಯಂ ಚ ಕಶ್ಚಿದ್ದ್ವಿಜಾತೀನಾಂ ಶೂದ್ರಃ ಶುಶ್ರೂಷುರಾವ್ರಜೇತ್ ।**
**ಕಲ್ಪ್ಯಾಂ ತೇನ ತು ತೇ ಪ್ರಾಹುರ್ವೃತ್ತಿಂ ಧರ್ಮವಿದೋ ಜನಾಃ ॥೩೪॥**

ದ್ವಿಜಾತೀಯರಲ್ಲಿ ಯಾರ ಸಮೀಪಕ್ಕಾದರೂ ಶೂದ್ರನು ಶುಶ್ರೂಷೆಯನ್ನು ಮಾಡುವ ಇಚ್ಛೆಯಿಂದ ಬಂದುದೇ ಆದರೆ, ಆ ದ್ವಿಜನು ಸೇವಾಕಾಂಕ್ಷಿಯಾಗಿ ಬಂದ ಶೂದ್ರನಿಗೆ ಜೀವನಕ್ಕೆ ವ್ಯವಸ್ಥೆಯನ್ನು ಮಾಡಿಯೇ ತೀರಬೇಕೆಂದು ಧರ್ಮಜ್ಞಪುರುಷರು ಹೇಳುತ್ತಾರೆ.

**ದೇಯಃ ಪಿಣ್ಡೋಽನಪತ್ಯಾಯ ಭರ್ತವ್ಯೌ ವೃದ್ಧದುರ್ಬಲೌ ।**
**ಶೂದ್ರೇಣ ತು ನ ಹಾತವ್ಯೋ ಭರ್ತಾ ಕಸ್ಯಾಞ್ಚಿದಾಪದಿ ॥೩೫॥**

**ಅತಿರೇಕೇಣ ಭರ್ತವ್ಯೋ ಭರ್ತಾ ದ್ರವ್ಯಪರಿಕ್ಷಯೇ ।**
**ನ ಹಿ ಸ್ವಮಸ್ತಿ ಶೂದ್ರಸ್ಯ ಭರ್ತೃಹಾರ್ಯಧನೋ ಹಿ ಸಃ ॥೩೬॥**

ಒಂದು ವೇಳೆ ಯಜಮಾನನಿಗೆ ಮಕ್ಕಳಿಲ್ಲವಾದರೆ ಶುಶ್ರೂಷೆಯನ್ನು ಮಾಡುವ ಶೂದ್ರನೇ ಅವನಿಗೆ ಪಿಂಡಪ್ರದಾನವನ್ನೂ ಮಾಡಬೇಕು. ಸ್ವಾಮಿಯು ದುರ್ಬಲನಾಗಿದ್ದರೆ ಅಥವಾ ವೃದ್ಧನಾಗಿದ್ದರೆ ಅವನ ಭರಣ-ಪೋಷಣೆಗಳನ್ನೂ ಶೂದ್ರನೇ ಮಾಡಬೇಕು. ಸ್ವಾಮಿಯು ಯಾವುದಾದರೂ ಆಪತ್ತಿನಲ್ಲಿರುವಾಗ ಸೇವಾನಿರತನಾದ ಶೂದ್ರನು ಯಾವುದೇ ಕಾರಣದಿಂದಲೂ ಅವನನ್ನು ಬಿಟ್ಟುಹೋಗಬಾರದು. ಒಂದು ವೇಳೆ ತನ್ನ ಯಜಮಾನನಲ್ಲಿದ್ದ ಹಣವು ನಾಶವಾಗಿ, ಯಜಮಾನನು ನಿರ್ಧನನಾದಲ್ಲಿ ಆಗಲೂ

ಶೂದ್ರನು ಯಜಮಾನನನ್ನು ದೂರೀಕರಿಸದೇ, ತನ್ನ ಕುಟುಂಬದ ಪಾಲನೆಯಾದನಂತರ ಉಳಿಯುವ ಧನದಿಂದ ಯಜಮಾನನ ಭರಣ-ಪೋಷಣೆಗಳನ್ನು ಮಾಡಬೇಕು. ಶೂದ್ರನಿಗೆ ತನ್ನ ಧನವೆಂಬುದೇ ಇಲ್ಲ. ಅವನು ಒಡೆಯನಿಂದ ಪಡೆಯಬಹುದಾದ ಧನವುಳ್ಳವನು ಅರ್ಥಾತ್ ಶೂದ್ರನಲ್ಲಿರುವ ಹಣದ ಮೇಲಿನ ಅಧಿಕಾರವು ಅವನ ಸ್ವಾಮಿಗಿರುತ್ತದೆ.

**ಉಕ್ತಸ್ತ್ರಯಾಣಾಂ ವರ್ಣಾನಾಂ ಯಜ್ಞಸ್ತಸ್ಯ ಚ ಭಾರತ ।**
**ಸ್ವಾಹಾಕಾರವಷಟ್ಕಾರೌ ಮನ್ತ್ರಃ ಶೂದ್ರೇ ನ ವಿದ್ಯತೇ ॥೩೭॥**

ಮೂರು ವರ್ಣದವರಿಗೂ ಉಕ್ತವಾಗಿರುವ ಯಜ್ಞವನ್ನು ಶೂದ್ರನೂ ಮಾಡಬೇಕು. ಆದರೆ ಶೂದ್ರನು ಮಾಡುವ ಯಜ್ಞದಲ್ಲಿ ಸ್ವಾಹಾಕಾರ ವಷಟ್ಕಾರಗಳೂ ಮತ್ತು ವೈದಿಕಮಂತ್ರಗಳ ಪ್ರಯೋಗಗಳೂ ಇರುವುದಿಲ್ಲ.

**ತಸ್ಮಾಚ್ಛೂದ್ರಃ ಪಾಕಯಜ್ಞೈರ್ಯಜೇತಾವ್ರತವಾನ್ಸ್ವಯಮ್ ।**
**ಪೂರ್ಣಪಾತ್ರಮಯೀಮಾಹುಃ ಪಾಕಯಜ್ಞಸ್ಯ ದಕ್ಷಿಣಾಮ್ ॥೩೮॥**

ಆದುದರಿಂದ ಶೂದ್ರನು ತಾನೇ ವ್ರತವನ್ನು ಕೈಗೊಳ್ಳದೇ (ಪಾಕಯಜ್ಞಗಳ ಮೂಲಕವಾಗಿ) ಯಜ್ಞಮಾಡಬೇಕು. ಹೀಗೆ ಮಾಡುವ ಪಾಕಯಜ್ಞದ ದಕ್ಷಿಣೆಯನ್ನು 'ಪೂರ್ಣಪಾತ್ರಮಯೀ'* ಎಂದು ಹೇಳುತ್ತಾರೆ.

**ಶೂದ್ರಃ ಪೈಜವನೋ ನಾಮ ಸಹಸ್ರಾಣಾಂ ಶತಂ ದದೌ ।**
**ಐನ್ದ್ರಾಗ್ನೇನ ವಿಧಾನೇನ ದಕ್ಷಿಣಾಮಿತಿ ನಃ ಶ್ರುತಮ್ ॥೩೯॥**

'ಪೈಜವನ' ಎಂಬ ಹೆಸರಿನ ಶೂದ್ರನು ಐಂದ್ರಾಗ್ನಯಜ್ಞದ ವಿಧಾನದಿಂದ ಸ್ವಾಹಾಕಾರ-ವಷಟ್ಕಾರರಹಿತವಾದ ಯಜ್ಞವನ್ನುಮಾಡಿ ಯಜ್ಞವು

---

* ಪೂರ್ಣಪಾತ್ರದಕ್ಷಿಣೆಯ ಪರಿಮಾಣವು ಈ ರೀತಿಯಲ್ಲಿದೆ : ಹೋಮಕಾರ್ಯಗಳಲ್ಲಿ ಕೊಡುವ ಬ್ರಹ್ಮನ ದಕ್ಷಿಣೆ, ೨೫೬ ಮುಷ್ಟಿ (ಹಿಡಿ) ಗಳ ಪ್ರಮಾಣದಷ್ಟು ಧಾನ್ಯ. ಅಷ್ಟಮುಷ್ಟಿರ್ಭವೇತ್ಕುಞ್ಚಿಃ ಕುಞ್ಚಯೋऽಷ್ಟೌ ಚ ಪುಷ್ಕಲಮ್ । ಪುಷ್ಕಲಾನಿ ಚ ಚತ್ವಾರಿ ಪರಿಪೂರ್ಣಂ ವಿಧೀಯತೇ ॥ ೮ ಮುಷ್ಟಿಗಳು = ೧ ಕುಂಚ, ೮ ಕುಂಚಗಳು = ೧ ಪುಷ್ಕಲ, ೪ ಪುಷ್ಕಲಗಳು = ೧ ಪೂರ್ಣಪಾತ್ರ. ಅರ್ಥಾತ್ ೨೫೬ ಹಿಡಿಗಳಿಗೆ ಒಂದು ಪೂರ್ಣಪಾತ್ರವೆಂದು ಹೆಸರು. ಹೋಮಾಂತೇ ಪೂರ್ಣಪಾತ್ರಂ ಬ್ರಹ್ಮಣೇ ದದ್ಯಾತ್ =

ಮುಗಿದನಂತರ ದಕ್ಷಿಣಾರೂಪವಾಗಿ ಒಂದು ಲಕ್ಷ ಪೂರ್ಣಪಾತ್ರಗಳನ್ನು ದಾನವಾಗಿ ಕೊಟ್ಟನೆಂದು ನಾವು ಕೇಳಿದ್ದೇವೆ.

**ಯತೋ ಹಿ ಸರ್ವವರ್ಣಾನಾಂ ಯಜ್ಞಸ್ತಸ್ಯೈವ ಭಾರತ ।**
**ಅಗ್ರೇ ಸರ್ವೇಷು ಯಜ್ಞೇಷು ಶ್ರದ್ಧಾಯಜ್ಞೋ ವಿಧೀಯತೇ ।**
**ದೈವತಂ ಹಿ ಮಹಚ್ಛ್ರದ್ಧಾ ಪವಿತ್ರಂ ಯಜತಾಂ ಚ ಯತ್ ॥೪೦॥**

(ಮತ್ತೊಂದು ರೀತಿಯಲ್ಲಿ ಶೂದ್ರನಿಗೆ ಯಜ್ಞಸಂಬಂಧವನ್ನು ಹೇಳುತ್ತಾರೆ.) ಶೂದ್ರನು, ಬ್ರಾಹ್ಮಣ-ಕ್ಷತ್ರಿಯ-ವೈಶ್ಯರ ಸೇವೆಯಲ್ಲಿಯೇ ನಿರತನಾಗಿರುವುದರಿಂದ ಅವರು ಮಾಡುವ ಯಜ್ಞವು ಶೂದ್ರನದೂ ಆಗುತ್ತದೆ. ಅವನು ಪ್ರತ್ಯೇಕವಾಗಿ ಯಜ್ಞಮಾಡುವ ಕಾರಣವಿಲ್ಲ. ಯಜ್ಞಮಾಡುವುದರಿಂದ ಆ ಮೂರು ವರ್ಣದವರಿಗೂ ಫಲವು ಪ್ರಾಪ್ತವಾಗುವಂತೆ ಯಜ್ಞವನ್ನು ಮಾಡದಿದ್ದರೂ ಯಜ್ಞಮಾಡುವವರ ಸೇವೆಯಲ್ಲಿಯೇ ನಿರತನಾಗಿರುವುದರಿಂದ ಶೂದ್ರನಿಗೂ ಯಜ್ಞಮಾಡಿದ ಫಲವು ಲಭಿಸುತ್ತದೆ. ಎಲ್ಲ ಯಜ್ಞಗಳಿಗೂ ಮೊದಲು ಶ್ರದ್ಧಾಯಜ್ಞವೆಂಬುದೊಂದು ಯಜ್ಞವು ವಿಹಿತವಾಗಿದೆ. ಶ್ರದ್ಧೆಯೆಂಬುದು ಎಲ್ಲ ದೇವತೆಗಳಿಗಿಂತಲೂ ಮಹತ್ತಾದ ದೇವತೆ. ಯಜ್ಞಮಾಡುವವರಿಗೆ ಶ್ರದ್ಧೆಯೇ ಪಾವಿತ್ರ್ಯವನ್ನುಂಟುಮಾಡುತ್ತದೆ.

(ಇದಕ್ಕೆ ವ್ಯಾಖ್ಯಾನಕಾರರು ಹೀಗೆ ವಿವರಣೆಯನ್ನು ಕೊಟ್ಟಿರುತ್ತಾರೆ. **ಯಥಾ ಹಿ ಶ್ರದ್ಧಯಾ ಗುರ್ವಗ್ನೀನ್ಪರಿಚರತಃ ಉಪಕೋಸಲಸ್ಯ ಅಗ್ನಯಃ ಬ್ರಹ್ಮವಿದ್ಯಾಂ ದತ್ತವನ್ತಃ ಏವಂ ಶ್ರದ್ಧಯಾ ಬ್ರಾಹ್ಮಣಾದೀನ್ ಆರಾಧಯತಃ ಶೂದ್ರಸ್ಯಾಪಿ ಬ್ರಾಹ್ಮಣಕೃತಯಜ್ಞಫಲಭಾಗಿತ್ವಮಸ್ತ್ಯೇವ** = ಯಾವ ರೀತಿಯಲ್ಲಿ ಗುರುಗಳನ್ನೂ ಅಗ್ನಿಗಳನ್ನೂ ಶ್ರದ್ಧೆಯಿಂದ ಉಪಚರಿಸುತ್ತಿದ್ದ ಉಪಕೋಸಲನೆಂಬುವವನಿಗೆ ಅಗ್ನಿತ್ರಯರು ಬ್ರಹ್ಮವಿದ್ಯೆಯನ್ನೇ ದಯಪಾಲಿಸಿದರೋ—ಅದೇ ರೀತಿಯಲ್ಲಿ

---

ಹೋಮದ ಕೊನೆಯಲ್ಲಿ ಪೂರ್ಣಪಾತ್ರವನ್ನು ಬ್ರಹ್ಮನಿಗೆ ಕೊಡಬೇಕು ಎಂದು ಗೋಭಿಲಸ್ಮೃತಿಯಲ್ಲಿ ಹೇಳಿದ್ದಾರೆ. **ಅಷ್ಟಮುಷ್ಟಿರ್ಭವೇತ್ಕಿಂಚಿತ್ಕಿಂಚಿಚ್ಚತ್ವಾರಿ ಪುಷ್ಕಲಮ್ । ಪುಷ್ಕಲಾನಿ ಚ ಚತ್ವಾರಿ ಪೂರ್ಣಪಾತ್ರಂ ಪ್ರಕ್ಷತೇ ಚ ॥** ಎಂದು ಆಪಸ್ತಂಬಗೃಹ್ಯಸೂತ್ರದ ವ್ಯಾಖ್ಯಾನಕಾರರು ಹೇಳಿದ್ದಾರೆ. ಈ ವ್ಯಾಖ್ಯಾನಕಾರರ ಪ್ರಕಾರ ೧೨೮ ಮುಷ್ಟಿಗಳಿಗೇ ಪೂರ್ಣಪಾತ್ರವಾಗುತ್ತದೆ.

ಶ್ರದ್ಧೆಯಿಂದ ಸೇವೆಮಾಡುವ ಶೂದ್ರನಿಗೂ ಬ್ರಾಹ್ಮಣರು ಮಾಡಿದ ಯಜ್ಞದ ಫಲದಲ್ಲಿ ಭಾಗವಿದ್ದೇ ಇರುವುದು. )

**ದೈವತಂ ಪರಮಂ ವಿಪ್ರಾಃ ಸ್ವೇನ ಸ್ವೇನ ಪರಸ್ಪರಮ್ ।**
**ಏಯಜನ್ನಿಹ ಸತ್ರೈಸ್ತೇ ತೈಸ್ತೈಃ ಕಾಮೈಃ ಸಮಾಹಿತಾಃ ॥೪೧॥**

ಬ್ರಾಹ್ಮಣರು ಸಮಾಧಾನಚಿತ್ತರಾಗಿ, ಬಗೆಬಗೆಯ ಕಾಮನೆಗಳಿಂದ ಕೂಡಿದವರಾಗಿ ಅನ್ಯೋನ್ಯವಾಗಿ, ತಮ್ಮವರೊಡನೆ ಕೂಡಿಕೊಂಡು ಪರಮ ದೈವವನ್ನು ( ಪರಮಾತ್ಮನನ್ನು ) ಸತ್ರಯಾಗಗಳಿಂದ ಆರಾಧಿಸುತ್ತಾರೆ. (ಪರಮಾತ್ಮನ ಪ್ರೀತ್ಯರ್ಥವಾಗಿ ಮತ್ತು ತಮ್ಮ ಕಾಮನೆಗಳನ್ನು ಪಡೆದು ಕೊಳ್ಳುವುದಕ್ಕಾಗಿ ಸತ್ರಯಾಗಗಳನ್ನು ಮಾಡುತ್ತಾರೆ. )

**ಸಂಸೃಷ್ಟಾ ಬ್ರಾಹ್ಮಣೈರೇವ ತ್ರಿಷು ವರ್ಣೇಷು ಸೃಷ್ಟಯಃ ॥೪೨॥**

ಬ್ರಾಹ್ಮಣರಿಂದಲೇ ಉಳಿದ ಮೂರು ವರ್ಣದವರಲ್ಲಿ ಸೃಷ್ಟಿಕಾರ್ಯವು ನಡೆದಿರುತ್ತದೆ. ಬ್ರಾಹ್ಮಣರಿಂದಲೇ ಕ್ಷತ್ರಿಯ-ವೈಶ್ಯ-ಶೂದ್ರರು ಸೃಷ್ಟಿಸ ಲ್ಪಟ್ಟಿದ್ದಾರೆ. ಆದುದರಿಂದ ಯಜ್ಞಮಾಡುವ ಅಧಿಕಾರವು ಶೂದ್ರರಿಗೂ ಇರುತ್ತದೆ. ಈ ಕಾರಣದಿಂದಲೇ ನಾಲ್ಕು ವರ್ಣದವರೂ ಯಾಗಗಳನ್ನು ಮಾಡಿ ತಮ್ಮ ಮನೋವಾಂಛಿತವಾದ ಫಲಗಳನ್ನು ಪಡೆದುಕೊಂಡಿರುತ್ತಾರೆ.

**ದೇವಾನಾಮಪಿ ಯೇ ದೇವಾ ಯದ್ಬ್ರೂಯುಸ್ತೇ ಪರಂ ಹಿತಮ್ ।**
**ತಸ್ಮಾದ್ವರ್ಣೈಃ ಸರ್ವಯಜ್ಞಾಃ ಸಂಸೃಜ್ಯನ್ತೇ ನ ಕಾಮ್ಯಯಾ ॥೪೩॥**

ದೇವತೆಗಳಿಗೂ ದೇವತೆಗಳಾದ ಬ್ರಾಹ್ಮಣರು ಧರ್ಮ-ಕರ್ಮಗಳ ಸಂಬಂಧವಾಗಿ ವೇದ-ಶಾಸ್ತ್ರದೃಷ್ಟವಾದ ಯಾವ ಮಾತನ್ನು ಹೇಳುತ್ತಾ ರೆಯೋ–ಆ ಮಾತು ಎಲ್ಲ ವರ್ಣದವರಿಗೂ ಪರಮಹಿತಕರವಾಗಿರುತ್ತದೆ. ಆದುದರಿಂದ ಉಳಿದ ಮೂರು ವರ್ಣದವರೂ ಬ್ರಾಹ್ಮಣರ ನಿರ್ದೇಶಾನು ಸಾರವಾಗಿ ಸರ್ವಯಜ್ಞಗಳನ್ನೂ ಮಾಡಬೇಕೇ ಹೊರತು ಸ್ವೇಚ್ಛೆಯಿಂದ ಅಥವಾ ಮನಸ್ಸಿಗೆ ತೋರಿದಂತೆ ಮಾಡಬಾರದು.

**ಋಗ್ಯಜುಃಸಾಮವಿತ್ಪೂಜ್ಯೋ ನಿತ್ಯಂ ಸ್ಯಾದ್ದೇವವದ್ದ್ವಿಜಃ ।**
**ಅನೃಗ್ಯಜುರಸಾಮಾ ಚ ಪ್ರಾಜಾಪತ್ಯ ಉಪದ್ರವಃ ।**
**ಯಜ್ಞೋ ಮನೀಷಯಾ ತಾತ ಸರ್ವವರ್ಣೇಷು ಭಾರತ ॥೪೪॥**

ಋಗ್ಯಜುಸ್ಸಾಮವೇದಗಳನ್ನು ಪೂರ್ಣವಾಗಿ ಅಧ್ಯಯನಮಾಡಿರುವ ಬ್ರಾಹ್ಮಣನು ಸರ್ವಕಾಲದಲ್ಲಿಯೂ ದೇವತೆಗಳಂತೆಯೇ ಎಲ್ಲರಿಗೂ ಪೂಜ್ಯನಾಗಿರುತ್ತಾನೆ. ಋಗ್ಯಜುಸ್ಸಾಮವೇದಗಳನ್ನು ಅಧ್ಯಯನಮಾಡದಿರುವವನು ಪ್ರಜಾಪತಿಗೆ ಸಂಬಂಧಿಸಿದ (ಬ್ರಹ್ಮಸೃಷ್ಟವಾದ) ಉಪದ್ರವವೆಂದು ಹೇಳಲ್ಪಡುತ್ತಾನೆ. (ವೇದಾಧ್ಯಯನಮಾಡದ ಬ್ರಾಹ್ಮಣನು ಉಪದ್ರವ ರೂಪದಲ್ಲಿರುತ್ತಾನೆ.) ಎಲ್ಲ ವರ್ಣದವರೂ ಯಜ್ಞವನ್ನು ಬುದ್ಧಿಪೂರ್ವಕವಾಗಿ ಶ್ರದ್ಧೆಯಿಂದಲೇ ಮಾಡುತ್ತಾರೆ.

**ನಾಸ್ಯ ಯಜ್ಞಕೃತೋ ದೇವಾ ಈಹನ್ತೇ ನೇತರೇ ಜನಾಃ ।**
**ತತಃ ಸರ್ವೇಷು ವರ್ಣೇಷು ಶ್ರದ್ಧಾಯಜ್ಞೋ ವಿಧೀಯತೇ ॥೪೫॥**

ಹೀಗೆ ಶ್ರದ್ಧಾಪೂರ್ವಕವಾಗಿ ಯಜ್ಞಮಾಡುವವನ ಯಜ್ಞವನ್ನು ದೇವತೆಗಳಾಗಲೀ ಇತರ ಜನರಾಗಲೀ ಅಪೇಕ್ಷಿಸುವುದಿಲ್ಲ ಎಂಬುದಿಲ್ಲ. ದೇವತೆಗಳೂ ಸಹ ಶ್ರದ್ಧಾಪೂರ್ವಕವಾಗಿ, ಬುದ್ಧಿಪೂರ್ವಕವಾಗಿ ಮಾಡುವ ಯಜ್ಞವನ್ನು ಅಪೇಕ್ಷಿಸಿಯೇ ಅಪೇಕ್ಷಿಸುತ್ತಾರೆ. ಆದುದರಿಂದ ಶ್ರದ್ಧಾಪ್ರಧಾನವಾದ ಯಜ್ಞವನ್ನು ಮಾಡಲು ಎಲ್ಲ ವರ್ಣದವರಿಗೂ ಅಧಿಕಾರವಿದೆ.

**ಸ್ವಂ ದೈವತಂ ಬ್ರಾಹ್ಮಣಃ ಸ್ವೇನ ನಿತ್ಯಂ**
**ಪರಾನ್ವರ್ಣಾನಯಜನ್ನೈವಮಾಸೀತ್ ।**
**ಅಧರೋ ವಿತಾನಃ ಸಂಸೃಷ್ಟೋ ವೈಶ್ಯೋ**
**ಬ್ರಾಹ್ಮಣಸ್ತ್ರಿಷು ವರ್ಣೇಷು ಯಜ್ಞಸೃಷ್ಟಃ ॥೪೬॥**

ಬ್ರಾಹ್ಮಣನು ತನ್ನ ಕರ್ಮದ ಮೂಲಕವಾಗಿ ಇತರ ಮೂರು ವರ್ಣದವರಿಗೂ ಅಸಾಧಾರಣವಾದ ದೇವತೆಯಾಗಿದ್ದಾನೆ. ಆದುದರಿಂದ ಎಲ್ಲರ ಆತ್ಮೀಯರೂ ಆದ ಬ್ರಾಹ್ಮಣರು ಇತರ ವರ್ಣದವರ ಸಲುವಾಗಿ ಯಜ್ಞ ಮಾಡುವುದಿಲ್ಲವೆಂಬುದು ಇಲ್ಲವೇ ಇಲ್ಲ. (ಅವರು ಯಾವಾಗಲೂ ಇತರರ ಯೋಗ-ಕ್ಷೇಮಗಳಿಗಾಗಿಯೇ ಯಜ್ಞಾದಿಗಳನ್ನು ಮಾಡುತ್ತಿರುತ್ತಾರೆ. **'ಅಮುಕಕಾಮೇನ ಆಮುಕಶರ್ಮಣಾಹಂ ವೃತೋಽಮುಕಯಜ್ಞೇನ ಯಕ್ಷ್ಯೇ**–ಹೀಗೆ ಸಂಕಲ್ಪಿಸಿ ಬ್ರಾಹ್ಮಣರು ಇತರರ ಶ್ರೇಯಸ್ಸಿಗಾಗಿ ಯಜ್ಞಾದಿ

ಗಳನ್ನು ಮಾಡುತ್ತಲೇ ಇರುತ್ತಾರೆ. ಶೂದ್ರನು ಯಜ್ಞಮಾಡುವಾಗ ಅಥವಾ ಶೂದ್ರನಿಗೆ ಯಜ್ಞವನ್ನು ಮಾಡಿಸುವಾಗ ಅವನಿಗೆ ಶ್ರೌತಾಗ್ನಿಯಾಗಲೀ ಔಪಾಸನಾಗ್ನಿಯಾಗಲೀ ಇಲ್ಲದೇ ಇರುವುದರಿಂದ ಲೌಕಿಕಾಗ್ನಿಯನ್ನೇ ಇಟ್ಟು ಕೊಳ್ಳಬೇಕು. ( ಯಜ್ಞಕರ್ಮಕ್ಕೆ ಲೌಕಿಕಾಗ್ನಿಯು ಉಚಿತವೇ ಎಂಬುದಕ್ಕೆ ವೈಶ್ಯನ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ) ಕೆಲವು ಅನಿವಾರ್ಯ ಸಮಯದಲ್ಲಿ ದಕ್ಷಿಣಾಗ್ನಿಗಾಗಿ ವೈಶ್ಯನ ಮನೆಯಿಂದ ಅಗ್ನಿಯನ್ನು ತಂದು ಯಜ್ಞದಲ್ಲಿ ಉಪಯೋಗಿಸುವಂತೆ ಶೂದ್ರನು ಮಾಡುವ ಯಜ್ಞದಲ್ಲಿ ಲೌಕಿಕಾಗ್ನಿಯನ್ನು ಉಪಯೋಗಿಸಿಕೊಳ್ಳಬಹುದು. ಉಳಿದ ಮೂರು ವರ್ಣದವರ ಶ್ರೇಯಸ್ಸಿಗೆ ಯಜ್ಞಮಾಡುವ ಸಲುವಾಗಿಯೇ ಬ್ರಾಹ್ಮಣನ ಸೃಷ್ಟಿಯಾಗಿದೆ.

**ತಸ್ಮಾದ್ವರ್ಣಾ ಋಜವೋ ಜ್ಞಾತಿವರ್ಣಾಃ**
**ಸಂಸೃಜ್ಯನ್ತೇ ತಸ್ಯ ವಿಕಾರ ಏವ ।**
**ಏಕಂ ಸಾಮ ಯಜುರೇಕಮೃಗೇಕಾ**
**ವಿಪ್ರಶ್ಚೈಕೋ ನಿಶ್ಚಯೋ ತೇಷು ಸೃಷ್ಟಃ ॥೪೭॥**

ಬ್ರಹ್ಮನು ಏಕಮಾತ್ರ ಬ್ರಾಹ್ಮಣನ ಮೂಲಕವಾಗಿ ಉಳಿದ ಮೂರು ವರ್ಣಗಳನ್ನೂ ಸೃಷ್ಟಿಮಾಡಿರುತ್ತಾನೆ. ಆದುದರಿಂದ ಮೂರು ವರ್ಣಗಳೂ ಬ್ರಾಹ್ಮಣವರ್ಣಕ್ಕೆ ಸಮಾನವರ್ಣಗಳಾಗಿವೆ. ಬ್ರಾಹ್ಮಣವರ್ಣದಂತೆಯೇ ಉಳಿದ ಮೂರು ವರ್ಣಗಳೂ ಸರಳಸ್ವಭಾವಗಳಿಂದ ಕೂಡಿವೆ ಮತ್ತು ಉಳಿದ ಮೂರು ವರ್ಣಗಳೂ ಬ್ರಾಹ್ಮಣವರ್ಣಕ್ಕೆ ಜ್ಞಾತಿವರ್ಣಗಳೇ (ಸೋದರ ವರ್ಣಗಳೇ ) ಆಗಿವೆ. ಕ್ಷತ್ರ-ವೈಶ್ಯ-ಶೂದ್ರವರ್ಣಗಳು ಬ್ರಹ್ಮವರ್ಣದಿಂದಲೇ ಹುಟ್ಟಿದ ವಿಕಾರಗಳೇ ಆಗಿವೆ. ಯಾವ ರೀತಿಯಲ್ಲಿ **ಅಕಾರೋ ವೈ ಸರ್ವಾ ವಾಕ್** ಎಂಬಂತೆ ಅಕಾರದಿಂದ ಹುಟ್ಟಿರುವ ಋಗ್ಯಜುಃಸಾಮಗಳು ಅಕಾರದಿಂದ ಅಭಿನ್ನಗಳೋ–ಅದೇ ರೀತಿಯಲ್ಲಿ ಬ್ರಾಹ್ಮಣರಿಂದ ಹುಟ್ಟಿರುವ ಉಳಿದ ಮೂರು ವರ್ಣಗಳೂ ಬ್ರಾಹ್ಮಣರಿಂದ ಅಭಿನ್ನವಾಗಿವೆ. ( ಬ್ರಾಹ್ಮಣನೇ ಕ್ಷತ್ರಿಯ-ವೈಶ್ಯ-ಶೂದ್ರರೂಪನಾಗಿದ್ದಾನೆ. )

ರಾಜೇಂದ್ರ! ಹಿಂದಿನ ಇತಿಹಾಸವನ್ನು ತಿಳಿದಿರುವ ವಿದ್ವಾಂಸರು ಈ

ವಿಷಯದಲ್ಲಿ ಯಜ್ಞಕಾಮರಾದ ವೈಖಾನಸಮುನಿಗಳಿಗೆ ಸಂಬಂಧಿಸಿದ ಯಜ್ಞ ಗೀತಾಶ್ಲೋಕಗಳನ್ನು ಉದಾಹರಿಸುತ್ತಾರೆ. ಅದನ್ನೇ ನಿನಗೂ ಹೇಳುತ್ತೇನೆ.

**ಉದಿತೇಽನುದಿತೇ ವಾಪಿ ಶ್ರದ್ದಧಾನೋ ಜಿತೇನ್ದ್ರಿಯಃ ।**
**ವಹ್ನಿಂ ಜುಹೋತಿ ಧರ್ಮೇಣ ಶ್ರದ್ಧಾ ವೈ ಕಾರಣಂ ಮಹತ್ ॥**

ಸೂರ್ಯೋದಯವಾದನಂತರವಾಗಲೀ, ಸೂರ್ಯೋದಯಕ್ಕೆ ಮೊದಲಾಗಲೀ, ಶ್ರದ್ಧಾಳುವಾದ ಮತ್ತು ಜಿತೇಂದ್ರಿಯನಾದ ಮನುಷ್ಯನು ಧರ್ಮಾನುಸಾರವಾಗಿ ಯಜ್ಞೇಶ್ವರನಿಗೆ ಅಗ್ನಿಹೋತ್ರಸಂಬಂಧಿಯಾದ ಆಹುತಿಯನ್ನು ಕೊಡುತ್ತಾನೆ. ಇದಕ್ಕೆ ಕರ್ಮಶ್ರದ್ಧೆಯೇ ಮುಖ್ಯಕಾರಣವಾಗಿರುತ್ತದೆ.

***ಯತ್ಸ್ಕನ್ನಮಸ್ಯ ತತ್ಪೂರ್ವಂ ಯದಸ್ಕನ್ನಂ ತದುತ್ತರಮ್ ।**
**ಬಹೂನಿ ಯಜ್ಞರೂಪಾಣಿ ನಾನಾಕರ್ಮಫಲಾನಿ ಚ ॥೫೦॥**

ಜಿತೇಂದ್ರಿಯನಾದವನು ಮಾಡುವ ಈ ಅಗ್ನಿಹೋತ್ರಹೋಮದಲ್ಲಿ ಯಾವುದು 'ಸ್ಕನ್ನವೋ' ಅದು ಮೊದಲನೆಯವನಿಗೂ, ಯಾವುದು 'ಅಸ್ಕನ್ನವೋ' ಅದು ಎರಡನೆಯವನಿಗೂ ಸೇರುತ್ತದೆ. ನಾನಾಕರ್ಮಫಲಗಳನ್ನು ಕೊಡುವ ಯಜ್ಞವಿಧಾನಗಳು ಅನೇಕವಾಗಿವೆ.

(ಅಗ್ನಿಹೋತ್ರವನ್ನು ಎರಡು ಕಾಲಗಳಲ್ಲಿ ಮಾಡುತ್ತಾರೆ. ಸೂರ್ಯೋದಯಕ್ಕೆ ಮುಂಚೆ, ಸೂರ್ಯೋದಯವಾದನಂತರ. ಸೂರ್ಯೋದಯಕ್ಕೆ ಮುಂಚೆ ಮಾಡುವುದಕ್ಕೆ ಅನುದಿತಹೋಮವೆಂತಲೂ ಸೂರ್ಯೋದಯ

---

* ಈ ಶ್ಲೋಕವು ಹದಿನಾರು ಬಗೆಯ ಅಗ್ನಿಹೋತ್ರಗಳಿಗೆ ಸಂಬಂಧಿಸಿದುದೆಂದು ವ್ಯಾಖ್ಯಾನಕಾರರು ವಿವರಣೆ ನೀಡಿದ್ದಾರೆ. **ರೌದ್ರಂ ಗವಿ । ಸದ್ವಾಯವ್ಯಮುಪಾವಸೃಷ್ಟಂ ಇತ್ಯಾದಿ ಬಹ್ವೃಚಬ್ರಾಹ್ಮಣೇ ಷೋಡಶಕಂ ಅಗ್ನಿಹೋತ್ರಮುಕ್ತಂ । ರೌದ್ರಂ ಗವಿ**–ಎಂಬ ಮಂತ್ರದಿಂದ ಮೊದಲ್ಗೊಂಡು ಹದಿನಾರು ಪ್ರಕಾರವಾದ ಅಗ್ನಿಹೋತ್ರವನ್ನು ಬಹ್ವೃಚಬ್ರಾಹ್ಮಣದಲ್ಲಿ ಹೇಳಿದ್ದಾರೆ. **ತತ್ರ ಮಾರುತಂ ವಿಷ್ಯನ್ದಮಾನಂ–ಇತಿ ಸ್ಕನ್ನಮಪಿ ಮರುದ್ದೈವತ್ಯಂ ಭವತೀತಿ ತತ್ಪೂರ್ವಂ ಆದ್ಯಂ ಅಗ್ನಿಹೋತ್ರಂ**–ಅಲ್ಲಿ **ಮಾರುತಂ** ವಿಷ್ಯನ್ದಮಾನಂ ಎಂಬ ಮಂತ್ರವಿದೆ. ಈ ಶ್ಲೋಕದಲ್ಲಿ ವಿಷ್ಯನ್ದಮಾನಂ ಎಂಬ ಪದಕ್ಕೆ 'ಸ್ಕನ್ನಂ' ಎಂಬ ಶಬ್ದವಿದೆ. ಆದುದರಿಂದ **ಯತ್ ಸ್ಕನ್ನಂ** = ಯಾವುದು ಸ್ಕನ್ನವಾಗುವುದೋ ಅದು ಮರುದ್ದೈವತ್ಯವಾಗುತ್ತದೆ.

ವಾದನಂತರ ಮಾಡುವುದಕ್ಕೆ ಉದಿತಹೋಮವೆಂತಲೂ ಹೆಸರು. ಅನುದಿತ ಹೋಮಕ್ಕೆ ಅಗ್ನಿಯು ಪ್ರಧಾನದೇವತೆ. ಇವನು ಮೊದಲಿಗನು. ಉದಿತ ಹೋಮಕ್ಕೆ ಸೂರ್ಯನು ಪ್ರಧಾನದೇವತೆ. ಇವನು ಎರಡನೆಯವನು ಅಥವಾ ಕಡೆಯವನು. **ಅಗ್ನಿಃ ಪೂರ್ವರೂಪಮ್ । ಆದಿತ್ಯ ಉತ್ತರರೂಪಮ್ ।** ಎಂಬ ಉಪನಿಷದ್ವಾಕ್ಯವೂ ಇದೆ. ಈ ಹಿನ್ನೆಲೆಯಲ್ಲಿ ಸ್ಕನ್ನ ಅಸ್ಕನ್ನ ಶಬ್ದಗಳಿಗೆ ಅರ್ಥಮಾಡಬೇಕು. **ಅಸ್ಯ ಅಗ್ನಿಹೋತ್ರಸ್ಯ ಯತ್ ಸ್ಕನ್ನಂ ತತ್ ಪೂರ್ವಂ ದೇವಂ ವ್ರಜತಿ** ಈ ಅಗ್ನಿಹೋತ್ರದಲ್ಲಿ ಯಾವ ಹೋಮದ್ರವ್ಯವು ಕೆಳಗೆ ಚೆಲ್ಲಿರುವುದೋ ಅದು ಮೊದಲಿಗನಾದ ಅಗ್ನಿಯನ್ನೇ ಸೇರುತ್ತದೆ. **ಯತ್ ಅಸ್ಕನ್ನಂ ತತ್ ಉತ್ತರಂ ದೇವಂ ವ್ರಜತಿ** ಯಾವ ಹೋಮದ್ರವ್ಯವು ಕೆಳಕ್ಕೆ ಚೆಲ್ಲಿರುವುದಿಲ್ಲವೋ ಅದು ಎರಡನೆಯವನಾದ ಅಥವಾ ಕಡೆಯವನಾದ ಸೂರ್ಯನನ್ನು ಸೇರುತ್ತದೆ. )

**ತಾನಿ ಯಃ ಸಮ್ಪ್ರಜಾನಾತಿ ಜ್ಞಾನನಿಶ್ಚಯನಿಶ್ಚಿತಃ ।**
**ದ್ವಿಜಾತಿಃ ಶ್ರದ್ಧಯೋಪೇತಃ ಸ ಯಷ್ಟುಂ ಪುರುಷೋಽರ್ಹತಿ ॥೫೧॥**

ಯಾವನು ಹಲವು ಯಜ್ಞರೂಪಗಳನ್ನೂ ಅವುಗಳ ಫಲಗಳನ್ನೂ ತಿಳಿದುಕೊಂಡಿರುವನೋ, ಅವನೇ ಯಜ್ಞಗಳ ಸಂಬಂಧದಲ್ಲಿ ನಿಶ್ಚಯ ಜ್ಞಾನವುಳ್ಳವನಾಗಿರುತ್ತಾನೆ. ಜ್ಞಾನಿಯಾದ ಮತ್ತು ಶ್ರದ್ಧಾಳುವಾದ ಅಂತಹ ದ್ವಿಜನು ಯಜ್ಞಮಾಡಲು ಅಧಿಕಾರವುಳ್ಳವನಾಗಿರುತ್ತಾನೆ.

**ಸ್ತೇನೋ ವಾ ಯದಿ ವಾ ಪಾಪೋ ಯದಿ ವಾ ಪಾಪಕೃತ್ತಮಃ ।**
**ಯಷ್ಟುಮಿಚ್ಛತಿ ಯಜ್ಞಂ ಯಃ ಸಾಧುಮೇವ ವದನ್ತಿ ತಮ್ ॥೫೨॥**

---

ಅದು ಮೊದಲನೆಯ ಅಗ್ನಿಹೋತ್ರ. ಯತ್ ಅಸ್ಕನ್ನಂ ಯಥಾವಿಧಿ ಹುತಂ ಉತ್ತರಂ **ಸರ್ವೋತ್ಕೃಷ್ಟಂ** = ಯಾವುದು ಯಥಾವಿಧಿಯಾಗಿ ಹುತಮಾಡಲ್ಪಟ್ಟಿತೋ ಅದು ಸರ್ವೋತ್ಕೃಷ್ಟವಾದುದು. ಮುಂದೆ ಇವರು ಬಹೂನಿ ಎಂಬುವುದಕ್ಕೆ ರೌದ್ರಾದೀನಿ = ರೌದ್ರವೇ ಮೊದಲಾದ ಹದಿನಾರು ಅಗ್ನಿಹೋತ್ರಗಳು ಎಂದು ಅರ್ಥಮಾಡಿರುತ್ತಾರೆ. ವ್ಯಾಖ್ಯಾನಕಾರರು ಹೇಳಿರುವ ರೌದ್ರಂ ಗವಿ ಎಂದು ಪ್ರಾರಂಭವಾಗುವ ಈ ಅನುವಾಕವು ಅಗ್ನಿಹೋತ್ರಪ್ರಕರಣದಲ್ಲಿ (ಯಜುರ್ಬ್ರಾಹ್ಮಣ ಎರಡನೆಯ ಅಷ್ಟಕ ಮೊದಲನೆಯ ಪ್ರಶ್ನೆಯಲ್ಲಿ ) ಬರುತ್ತದೆ. ಆದರೆ ಈ ಅನುವಾಕವು–'ಅಗ್ನಿಹೋತ್ರದ ಹೋಮದ್ರವ್ಯ ಗಳಲ್ಲೊಂದಾದ ಹಾಲು, ಸರ್ವದೇವತಾಪ್ರಿಯವಾದುದು'– ಎಂದು ಈ ಹಾಲನ್ನು

ಕಳ್ಳನೇ ಆಗಿರಲಿ, ಪಾಪಿಷ್ಠನೇ ಆಗಿರಲಿ, ಪಾಪಿಷ್ಠರಲ್ಲಿಯೇ ಅತ್ಯಂತ ಪಾಪಿಷ್ಠನೇ ಆಗಿರಲೀ–ಅವನು ಯಜ್ಞಮಾಡಲು ಇಚ್ಛಿಸಿದುದೇ ಆದರೆ ಅಂತಹವನನ್ನೂ ಸಾಧು ಅಥವಾ ಸತ್ಪುರುಷ–ಎಂದೇ ಎಲ್ಲರೂ ಹೇಳುತ್ತಾರೆ. ಹೀಗಿರುವಾಗ ಬ್ರಾಹ್ಮಣಸ್ವರೂಪರೇ ಆಗಿರುವ ಕ್ಷತ್ರಿಯ-ವೈಶ್ಯ- ಶೂದ್ರರ ವಿಷಯವಾಗಿ ಹೇಳುವುದೇನಿದೆ? (**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।ಸಾಧುರೇವ ಸ ಮನ್ತವ್ಯಃ ಸಮ್ಯಗ್ವ್ಯ ವಸಿತೋ ಹಿ ಸಃ॥** ಶ್ರೀಗೀತೆ-ಅ.೯-ಶ್ಲೋ.೩೦. ಎಂಬ ಗೀತಾವಾಕ್ಯವೂ ಇದನ್ನೇ ಪ್ರತಿಪಾದಿಸುತ್ತದೆ. ಯಾವ ವರ್ಣದವನೇ ಆದರೂ ಯಜ್ಞಮಾಡಲು ಸಮೀಚೀನವಾದ ನಿಶ್ಚಯವುಳ್ಳವನಾದುದರಿಂದ ಸತ್ಪುರುಷನೆಂದೇ ಪರಿಗಣಿಸಲ್ಪಡುತ್ತಾನೆ.)

**ಋಷಯಸ್ತಂ ಪ್ರಶಂಸನ್ತಿ ಸಾಧು ಚೈತದಸಂಶಯಮ್ ।**
**ಸರ್ವಥಾ ಸರ್ವದಾ ವರ್ಣೈರ್ಯಷ್ಟವ್ಯಮಿತಿ ನಿರ್ಣಯಃ ॥೫೩॥**

ಋಷಿಗಳೂ ಸಹ ಯಜ್ಞಕಾಮನನ್ನು ಪ್ರಶಂಸೆಮಾಡುತ್ತಾರೆ. ಯಜ್ಞ ಮಾಡುವುದು ಅತ್ಯಂತಶ್ರೇಯಸ್ಕರವಾದುದು. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಎಲ್ಲ ವರ್ಣಗಳ ಎಲ್ಲ ಜನರೂ ಸರ್ವಪ್ರಕಾರಗಳಿಂದಲೂ ಎಲ್ಲ ಕಾಲಗಳಲ್ಲಿಯೂ ಯಜ್ಞವನ್ನು ಮಾಡುತ್ತಲೇ ಇರಬೇಕೆಂಬುದೇ ಶಾಸ್ತ್ರಗಳ ನಿರ್ಣಯವಾಗಿದೆ.

**ನ ಹಿ ಯಜ್ಞಸಮಂ ಕಿಞ್ಚಿತ್ತ್ರಿಷು ಲೋಕೇಷು ವಿದ್ಯತೇ ।**
**ತಸ್ಮಾದ್ಯಷ್ಟವ್ಯಮಿತ್ಯಾಹುಃ ಪುರುಷೇಣಾನಸೂಯತಾ ।**
**ಶ್ರದ್ಧಾಪವಿತ್ರಮಾಶ್ರಿತ್ಯ ಯಥಾಶಕ್ತಿ ಯಥೇಚ್ಛಯಾ ॥೫೪॥**

---

ಹೊಗಳುವ ಮತ್ತು ಹಾಗೆ ಅನುಸಂಧಾನ ಮಾಡಬೇಕೆನ್ನುವ ಅನುವಾಕವಾಗಿದೆಯೇ ಹೊರತು ವ್ಯಾಖ್ಯಾನಕಾರರು ಹೇಳಿರುವಂತೆ ಹದಿನಾರು ಅಗ್ನಿಹೋತ್ರಗಳನ್ನು ಹೇಳುವ ಅನುವಾಕವಾಗಿಲ್ಲ. ಹೋಮದ್ರವ್ಯಗಳು ಹತ್ತು ಸಂಖ್ಯೆಯಲ್ಲಿದ್ದರೂ ಅಗ್ನಿಹೋತ್ರ ಎಂಬುದು ಒಂದೇ ಎಂದು ತಿಳಿದವರು ಹೇಳುತ್ತಾರೆ. ಯಜುರ್ವೇದದಲ್ಲಿ ಬಂದಿರುವ ಅನುವಾಕದಲ್ಲಿ 'ಮಾರುತಂ ವಿಷ್ಯನ್ದಮಾನಂ' ಎಂಬುದಕ್ಕೆ ಬದಲಾಗಿ 'ಸಾರಸ್ವತಂ ವಿಷ್ಯನ್ದಮಾನಂ' ಎಂಬುದಾಗಿರುತ್ತದೆ. ಇದರ ಅರ್ಥ ಹಾಲು ಕರೆದನಂತರ ಪಾತ್ರೆಯಲ್ಲಿ ಹರಡಿಕೊಳ್ಳುವ ಹಾಲು ಸರಸ್ವತಿಗೆ ಅಥವಾ ಬ.ಬ್ರಾ. ಪ್ರಕಾರ ವಾಯುದೇವತೆಗೆ

ಮೂರು ಲೋಕಗಳಲ್ಲಿಯೂ ಯಜ್ಞಕ್ಕೆ ಸಮಾನವಾದ ಶ್ರೇಷ್ಠಕರ್ಮವು ಮತ್ತೊಂದಿರುವುದಿಲ್ಲ. ಆದುದರಿಂದ ಮಾನವನು ಅಸೂಯಾರಹಿತನಾಗಿ ತನ್ನ ಶಕ್ತಿಗೂ ಮತ್ತು ಇಚ್ಛೆಗೂ ಅನುಸಾರವಾಗಿ ಪರಮಪವಿತ್ರವಾದ ಶ್ರದ್ಧೆಯನ್ನು ಆಶ್ರಯಿಸಿ (ಶ್ರದ್ಧಾಪೂರ್ವಕವಾಗಿ) ಯಜ್ಞವನ್ನು ಮಾಡಬೇಕೆಂದು ವಿದ್ವಾಂಸರು ಹೇಳುತ್ತಾರೆ." (**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವತತ್ । ...ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್** – ಶ್ರೀಗೀತೆ ಅ.೧೮ ಶ್ಲೋ.೫-೬ ) ಎಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿರುವುದನ್ನೇ ಇಲ್ಲಿ ಭೀಷ್ಮನು ಯುಧಿಷ್ಠಿರನಿಗೆ ಹೇಳಿದ್ದಾನೆ.)

ಲ೬೦ನೆಯ ಅಧ್ಯಾಯವು ಮುಗಿಯಿತು.

೬೧ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಆಶ್ರಮಧರ್ಮಗಳ ವರ್ಣನೆ

ಭೀಷ್ಮನು ಯುಧಿಷ್ಠಿರನಿಗೆ ಹೇಳುತ್ತಾನೆ :

"ಮಹಾಬಾಹುವೇ! ಸತ್ಯಪರಾಕ್ರಮನೇ! ನಾಲ್ಕು ಆಶ್ರಮಗಳ ನಾಮಧೇಯಗಳನ್ನೂ ಮತ್ತು ಅವುಗಳ ಧರ್ಮಗಳನ್ನೂ ಹೇಳುವೆನು ; ಕೇಳು.

**ವಾನಪ್ರಸ್ಥಂ ಭೈಕ್ಷ್ಯಚರ್ಯಂ ಗಾರ್ಹಸ್ಥ್ಯಂ ಚ ಮಹಾಶ್ರಮಮ್ ।**
**ಬ್ರಹ್ಮಚರ್ಯಾಶ್ರಮಂ ಪ್ರಾಹುಶ್ಚತುರ್ಥಂ ಬ್ರಾಹ್ಮಣೈರ್ವೃತಮ್ ॥೧॥**

ಬ್ರಹ್ಮಚರ್ಯೆ, ಮಹಾಶ್ರಮವಾದ ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಭೈಕ್ಷ್ಯಚರ್ಯ (ಸಂನ್ಯಾಸ)–ಎಂಬ ನಾಲ್ಕು ಆಶ್ರಮಗಳಿವೆ. ನಾಲ್ಕನೆಯದಾದ ಸಂನ್ಯಾಸಾಶ್ರಮವು ಬ್ರಾಹ್ಮಣರಿಂದ ಮಾತ್ರವೇ ಸ್ವೀಕರಿಸಲ್ಪಡತಕ್ಕುದಾಗಿದೆ.

---

ಪ್ರಿಯವಾದುದು ಎಂದಾಗುತ್ತದೆ. ಹೋಮಪ್ರಕರಣಕ್ಕೂ ಮತ್ತು ಇದಕ್ಕೂ ಯಾವ ಸಂಬಂಧವೂ ಇಲ್ಲಿ ಕಾಣುವುದಿಲ್ಲ. ಆದುದರಿಂದ ಮೇಲೆ ನಾವು ಕೊಟ್ಟಿರುವ ಅರ್ಥವು ಸಮಂಜಸವಾಗಿರುವುದೆಂದು ಭಾವಿಸಲಾಗಿದೆ. ತಿಳಿದ ವಿದ್ವಾಂಸರು ಈ ವಿಷಯವಾಗಿ ಬರೆದು ಕಳುಹಿಸಿದಲ್ಲಿ ಕೃತಜ್ಞತೆಯಿಂದ ಪ್ರಕಟಿಸುತ್ತೇವೆ.

**ಜಟಾಧಾರಣಸಂಸ್ಕಾರಂ ದ್ವಿಜಾತಿತ್ವಮವಾಪ್ಯ ಚ ।**
**ಆಧಾನಾದೀನಿ ಕರ್ಮಾಣಿ ಪ್ರಾಪ್ಯ ವೇದಮಧೀತ್ಯ ಚ ॥೩॥**
**ಸದಾರೋ ವಾಪ್ಯದಾರೋ ವಾ ಆತ್ಮವಾನ್ಸಂಯತೇನ್ದ್ರಿಯಃ ।**
**ವಾನಪ್ರಸ್ಥಾಶ್ರಮಂ ಗಚ್ಛೇತ್ಕೃತಕೃತ್ಯೋ ಗೃಹಾಶ್ರಮಾತ್ ॥೪॥**

ಬ್ರಾಹ್ಮಣನು ಚೂಡಾಕರ್ಮವಾದನಂತರ ಎಂಟನೆಯ ವರ್ಷದಲ್ಲಿ ಉಪನೀತನಾಗಿ ದ್ವಿಜಾತಿತ್ವವನ್ನು ಹೊಂದಿ, ವೇದಾಧ್ಯಯನವನ್ನು ಮಾಡಿ ವ್ರತಸಮಾವರ್ತನೆಯನ್ನು ಮುಗಿಸಿ, ವಿವಾಹಿತನಾಗಿ, ಔಪಾಸನಾಗ್ನಿಹೋತ್ರ-ವೈಶ್ವದೇವಾದಿಗಳನ್ನು (ಆಧಾನಾದಿಗಳನ್ನು) ಮಾಡುತ್ತಾ, ಸುಪ್ರಜೆಗಳನ್ನು ಪಡೆದುಕೊಂಡನಂತರ ಗೃಹಸ್ಥಾಶ್ರಮದಲ್ಲಿ ಕೃತಕೃತ್ಯನಾಗಿ, ಜಿತೇಂದ್ರಿಯನಾಗಿ, ಜಟಾಧಾರಿಯಾಗಿ, ಆತ್ಮಾನುಸಂಧಾನಪರನಾಗಿ ಪತ್ನಿಯೊಡನೆ ಅಥವಾ ಒಬ್ಬನೇ ವಾನಪ್ರಸ್ಥಾಶ್ರಮವನ್ನು ಪ್ರವೇಶಿಸಬೇಕು. (ಅರಣ್ಯವನ್ನು ಪ್ರವೇಶಿಸಬೇಕು.)

**ತತ್ರಾರಣ್ಯಕಶಾಸ್ತ್ರಾಣಿ ಸಮಧೀತ್ಯ ಸ ಧರ್ಮವಿತ್ ।**
**ಊರ್ಧ್ವರೇತಾಃ ಪ್ರವ್ರಜಿತ್ವಾ ಗಚ್ಛತ್ಯಕ್ಷರಸಾತ್ಮತಾಮ್ ॥೫॥**

ಧರ್ಮವಿದನಾದ ವಾನಪ್ರಸ್ಥನು ಅರಣ್ಯದಲ್ಲಿ ಆರಣ್ಯಕಶಾಸ್ತ್ರಗಳನ್ನು (ಆತ್ಮವಿದ್ಯೆಯನ್ನು) ಚೆನ್ನಾಗಿ ಅಧ್ಯಯನಮಾಡಿ ವಾನಪ್ರಸ್ಥಧರ್ಮವನ್ನು ಪಾಲನೆಮಾಡಬೇಕು. ಊರ್ಧ್ವರೇತಸ್ಕನಾಗಿ (ಬ್ರಹ್ಮಚರ್ಯವ್ರತವನ್ನು ಪಾಲನೆಮಾಡುತ್ತಾ) ವಾನಪ್ರಸ್ಥಾಶ್ರಮವನ್ನು ಬಿಟ್ಟು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಆತ್ಮಾನುಸಂಧಾನಮಾಡುತ್ತಿದ್ದರೆ ಅವಿನಾಶಿಯಾದ ಬ್ರಹ್ಮಭಾವವನ್ನು ಹೊಂದುತ್ತಾನೆ.

ಊರ್ಧ್ವರೇತಸ್ಕರಾದ ಮುನಿಗಳಿಗೆ ಇವೇ ಲಕ್ಷಣಗಳಾಗಿವೆ. ಮುನಿಗಳಾಗಿರುವವರು ಅನುಕ್ರಮವಾಗಿ ಈ ಕರ್ಮಗಳೆಲ್ಲವನ್ನೂ ಮಾಡಿರುತ್ತಾರೆ. ವಿದ್ವಾಂಸನಾದ ಬ್ರಾಹ್ಮಣನೂ ಈ ಕರ್ಮಗಳನ್ನು ಅನುಕ್ರಮವಾಗಿ ಮಾಡಲೇಬೇಕು. ಇದು ಅವನ ಕರ್ತವ್ಯವಾಗಿರುತ್ತದೆ.

**ಚರಿತಬ್ರಹ್ಮಚರ್ಯಸ್ಯ ಬ್ರಾಹ್ಮಣಸ್ಯ ವಿಶಾಮ್ಪತೇ ।**
**ಭೈಕ್ಷಚರ್ಯಾಸ್ವಧೀಕಾರಃ ಪ್ರಶಸ್ತ ಇಹ ಮೋಕ್ಷಿಣಃ ॥೭॥**

ಬ್ರಹ್ಮಚಾರಿಯಾಗಿ ಬ್ರಹ್ಮಚರ್ಯವ್ರತವನ್ನು ಕಟ್ಟುನಿಟ್ಟಾಗಿ ಪರಿಪಾಲಿಸುತ್ತಿರುವ ಬ್ರಾಹ್ಮಣವಟುವೇನಾದರೂ ಮೋಕ್ಷವನ್ನಪೇಕ್ಷಿಸಿದ್ದೇ ಆದರೆ, ಅಂತಹವನಿಗೆ ನೇರವಾಗಿಯೇ ಸಂನ್ಯಾಸಕ್ಕೆ ಸಂಬಂಧಿಸಿದ ಕರ್ಮಗಳನ್ನು ಮಾಡಲು ಅಧಿಕಾರವನ್ನು ನೀಡುವುದು ( ಸಂನ್ಯಾಸದೀಕ್ಷೆಯನ್ನು ನೀಡುವುದು) ಪ್ರಶಸ್ತವಾಗಿಯೇ ಇದೆ.

**ಯತ್ರಾಸ್ತಮಿತಶಾಯೀ ಸ್ಯಾನ್ನಿರಾಶೀರನಿಕೇತನಃ ।**
**ಯಥೋಪಲಬ್ಧಜೀವೀ ಸ್ಯಾನ್ಮುನಿರ್ದಾನ್ತೋ ಜಿತೇನ್ದ್ರಿಯಃ ॥೮॥**

ಮುನಿಯಾಗಲು ಅಥವಾ ಸಂನ್ಯಾಸಿಯಾಗಲು ಇಚ್ಛಿಸುವವನು ಬಹಿರಿಂದ್ರಿಯಗಳನ್ನೂ ಅಂತರಿಂದ್ರಿಯಗಳನ್ನೂ ಜಯಿಸಬೇಕು. ಅವನಿಗೆ ಆಶೆಯೆಂಬುದೇ ಇರಬಾರದು. ಮಠ-ಕುಟೀರಗಳಾವುವೂ ಇರಬಾರದು. ಯಾವಾಗಲೂ ಸಂಚಾರಮಾಡುತ್ತಲೇ ಇರಬೇಕು. ಸಾಯಂಕಾಲವಾಗುತ್ತಲೇ ಒಂದೆಡೆಯಲ್ಲಿ ತಂಗಬೇಕು. ದೈವೇಚ್ಛೆಯಿಂದ ಯಾವ ಆಹಾರವು ಎಷ್ಟು ಲಭ್ಯವಾಗುವುದೋ ಅಷ್ಟನ್ನೇ ತಿಂದು ತೃಪ್ತನಾಗಿ ಜೀವನನಿರ್ವಹಣೆಯನ್ನು ಮಾಡಬೇಕು.

**ನಿರಾಶೀಃ ಸ್ಯಾತ್ಸರ್ವಸಮೋ ನಿರ್ಭೋಗೋ ನಿರ್ವಿಕಾರವಾನ್ ।**
**ವಿಪ್ರಃ ಕ್ಷೇಮಾಶ್ರಮಂ ಪ್ರಾಪ್ತೋ ಗಚ್ಛತ್ಯಕ್ಷರಸಾತ್ಮತಾಮ್ ॥೯॥**

ಸಂನ್ಯಾಸಿಯು ಆಶಾರಹಿತನಾಗಿರಬೇಕು. ಎಲ್ಲರನ್ನೂ ಸಮಭಾವದಿಂದ ಕಾಣಬೇಕು. ಎಲ್ಲ ವಿಧವಾದ ಭೋಗಗಳಿಂದಲೂ ರಹಿತನಾಗಿರಬೇಕು. ಮನೋವಿಕಾರಶೂನ್ಯನಾಗಿರಬೇಕು (ಮನಸ್ಸಿನಿಂದಲೂ ಭೋಗಗಳನ್ನು ಕಾಮಿಸಬಾರದು). ಈ ಧರ್ಮಗಳನ್ನೊಳಗೊಂಡ ಆಶ್ರಮಕ್ಕೆ ಕ್ಷೇಮಾಶ್ರಮವೆಂದು ಹೆಸರು. ಇಂತಹ ಕ್ಷೇಮಾಶ್ರಮವನ್ನು ಹೊಂದಿದ ಬ್ರಾಹ್ಮಣನು ಅವಿನಾಶಿಯಾದ ಬ್ರಹ್ಮನೊಡನೆ ಏಕತೆಯನ್ನು ಹೊಂದುತ್ತಾನೆ. (ಬ್ರಹ್ಮಭೂತನಾಗುತ್ತಾನೆ.)

**ಅಧೀತ್ಯ ವೇದಾನ್ಕೃತಸರ್ವಕೃತ್ಯಃ**
**ಸನ್ತಾನಮುತ್ಪಾದ್ಯ ಸುಖಾನಿ ಭುಕ್ತ್ವಾ ।**
**ಸಮಾಹಿತಃ ಪ್ರಚರೇದ್ದುಶ್ಚರಂ ಯೋ**
**ಗಾರ್ಹಸ್ಥ್ಯಧರ್ಮಂ ಮುನಿಧರ್ಮಜುಷ್ಟಮ್ ॥೧೦॥**

ಯುಧಿಷ್ಠಿರ! ಗೃಹಸ್ಥಧರ್ಮವನ್ನು ಕೇಳು.

ಉಪನೀತನಾದನಂತರ ಎಲ್ಲ ವೇದಗಳನ್ನೂ ಅಧ್ಯಯನಮಾಡಬೇಕು. ವೇದಾಧ್ಯಯನವು ಮುಗಿದನಂತರ ಗುರುದಕ್ಷಿಣೆಯನ್ನು ಕೊಟ್ಟು, ಅವರ ಅಪ್ಪಣೆಯನ್ನು ಪಡೆದುಕೊಂಡು, ವ್ರತಸಮಾವರ್ತನಾದಿ ವೇದೋಕ್ತಕರ್ಮಗಳನ್ನು ಮುಗಿಸಿ ವಿವಾಹವನ್ನು ಮಾಡಿಕೊಳ್ಳಬೇಕು. ಧರ್ಮಪತ್ನಿಯಲ್ಲಿ ಸತ್ಸಂತಾನವನ್ನು ಪಡೆದು ಗೃಹಸ್ಥಾಶ್ರಮೋಚಿತವಾದ ಸುಖಗಳನ್ನು ಅನುಭವಿಸಬೇಕು. ಹೀಗೆ ಏಕಾಗ್ರಚಿತ್ತನಾಗಿ ಮುನಿಜನೋಚಿತವಾದ ಧರ್ಮಗಳಿಂದ ಯುಕ್ತವಾದ, ಅತ್ಯಂತಕಷ್ಟಕರವಾದ ಗಾರ್ಹಸ್ಥ್ಯಧರ್ಮವನ್ನು ಪರಿಪಾಲಿಸಬೇಕು.

**ಸ್ವದಾರತುಷ್ಟಸ್ತ್ವೃತುಕಾಲಗಾಮೀ**
**ನಿಯೋಗಸೇವೀ ನ ಶಠೋ ನ ಜಿಹ್ಮಃ ।**
**ಮಿತಾಶನೋ ದೇವರತಃ ಕೃತಜ್ಞಃ**
**ಸತ್ಯೋ ಮೃದುಶ್ಚಾನೃಶಂಸಃ ಕ್ಷಮಾವಾನ್ ॥೧೧॥**

ಗೃಹಸ್ಥನು ತನ್ನ ಪತ್ನಿಯಲ್ಲಿಯೇ ಅನುರಕ್ತನಾಗಿ ತೃಪ್ತಿಯನ್ನು ಪಟ್ಟುಕೊಳ್ಳಬೇಕು. ಋತುಸಮಯಗಳಲ್ಲಿ ಮಾತ್ರವೇ ಪತ್ನಿಯೊಡನೆ ಸಮಾಗಮಮಾಡಬೇಕು. ಶಾಸ್ತ್ರನಿರ್ದಿಷ್ಟವಾದ ರೀತಿಯಲ್ಲಿ ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾಡುತ್ತಿರಬೇಕು. ಶಠನೂ, ವಂಚಕನೂ ಆಗಬಾರದು. ಮಿತಾಹಾರಿಯಾಗಿರಬೇಕು. ದೇವತಾರಾಧನೆಯಲ್ಲಿ ತತ್ಪರನಾಗಿರಬೇಕು. ಉಪಕಾರಮಾಡಿದವರನ್ನು ಸ್ಮರಿಸಬೇಕು. ಸತ್ಯನಿಷ್ಠನಾಗಿರಬೇಕು. ಮೃದುಸ್ವಭಾವದಿಂದಿರಬೇಕು (ಎಲ್ಲರಲ್ಲಿಯೂ ಸೌಜನ್ಯದಿಂದ ನಡೆದುಕೊಳ್ಳಬೇಕು). ದಯಾಳುವಾಗಿರಬೇಕು ಮತ್ತು ಕ್ಷಮಾಶೀಲನಾಗಿರಬೇಕು.

**ದಾನ್ತೋ ವಿಧೇಯೋ ಹವ್ಯಕವ್ಯೇಽಪ್ರಮತ್ತೋ**
**ಹ್ಯನ್ನಸ್ಯ ದಾತಾ ಸತತಂ ದ್ವಿಜೇಭ್ಯಃ ।**
**ಅಮತ್ಸರೀ ಸರ್ವಲಿಙ್ಗಪ್ರದಾತಾ**
**ವೈತಾನನಿತ್ಯಶ್ಚ ಗೃಹಾಶ್ರಮೀ ಸ್ಯಾತ್ ॥೧೨॥**

ಗೃಹಸ್ಥಾಶ್ರಮಿಯು ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿರಬೇಕು. ಗುರುಜನರಿಗೂ, ವೃದ್ಧರಿಗೂ, ಶಾಸ್ತ್ರಗಳಿಗೂ, ವಿಧೇಯನಾಗಿರಬೇಕು. ದೇವ-ಪಿತೃಗಳ ತೃಪ್ತಿಗಾಗಿ ಆಯಾಕಾಲಗಳಲ್ಲಿ ಹವ್ಯ-ಕವ್ಯಗಳನ್ನು ಅರ್ಪಿಸಲು ಜಾಗರೂಕನಾಗಿರಬೇಕು. ಸತತವಾಗಿ ಬ್ರಾಹ್ಮಣರಿಗೆ ಅನ್ನದಾನ ಮಾಡುತ್ತಲೇ ಇರಬೇಕು. ಈರ್ಷ್ಯಾ-ದ್ವೇಷಗಳಿಂದ ರಹಿತನಾಗಿರಬೇಕು. ಉಳಿದ ಎಲ್ಲ ಆಶ್ರಮಿಗಳಿಗೂ ಅನ್ನವನ್ನಿತ್ತು ಅವರ ಪಾಲನ-ಪೋಷಣೆಗಳನ್ನು ಮಾಡಬೇಕು ಮತ್ತು ಸದಾ ಯಜ್ಞ-ಯಾಗಾದಿಗಳಲ್ಲಿಯೇ ನಿರತನಾಗಿರಬೇಕು.

ಯುಧಿಷ್ಠಿರ! ಈ ವಿಷಯದಲ್ಲಿ ಮಹಾನುಭಾವರಾದ ಮಹರ್ಷಿಗಳು–ಮಹಾತಪಶ್ಚರಣೆಯಿಂದ ಪ್ರೇರಿತವಾದ, ಮಹಾರ್ಥಯುಕ್ತವಾದ ನಾರಾಯಣಗೀತೆಯನ್ನು ಉದಾಹರಿಸುತ್ತಾರೆ. ಅದನ್ನೇ ನಿನಗೂ ಹೇಳುವೆನು; ಅವಧರಿಸು.

**ಸತ್ಯಾರ್ಜವಂ ಚಾತಿಥಿಪೂಜನಂ ಚ**
**ಧರ್ಮಸ್ತಥಾರ್ಥಶ್ಚ ರತಿಃ ಸ್ವದಾರೈಃ ।**
**ನಿಷೇವಿತವ್ಯಾನಿ ಸುಖಾನಿ ಲೋಕೇ**
**ಹ್ಯಸ್ಮಿನ್ಪರೇ ಚೈವ ಮತಂ ಮಮೈತತ್ ॥೧೪॥**

'ಗೃಹಸ್ಥನು ಸತ್ಯನಿಷ್ಠನಾಗಿರಬೇಕು. ಸರಳಸ್ವಭಾವದಿಂದಿರಬೇಕು. ಅತಿಥಿಗಳನ್ನು ಸತ್ಕರಿಸಬೇಕು. ಧರ್ಮಪರಾಯಣನಾಗಿರಬೇಕು. ಧರ್ಮಮಾರ್ಗದಲ್ಲಿ ಅರ್ಥವನ್ನು ಸಂಗ್ರಹಿಸಬೇಕು. ತನ್ನ ಪತ್ನಿಯಲ್ಲಿ ಅನುರಕ್ತನಾಗಿರಬೇಕು. ಹೀಗೆ ಅವನು ಈ ಲೋಕದಲ್ಲಿ ಸುಖಗಳನ್ನು ಅನುಭವಿಸಬೇಕು. ಈ ಧರ್ಮವನ್ನು ಅನುಸರಿಸಿ ನಡೆಯುವ ಗೃಹಸ್ಥನು ಪರಲೋಕದಲ್ಲಿಯೂ ಸುಖವನ್ನು ಅನುಭವಿಸುವನೆಂಬುದು ನನ್ನ ಅಭಿಪ್ರಾಯವಾಗಿದೆ.'

**ಭರಣಂ ಪುತ್ರದಾರಾಣಾಂ ವೇದಾನಾಂ ಧಾರಣಂ ತಥಾ ।**
**ವಸತಾಮಾಶ್ರಮಂ ಶ್ರೇಷ್ಠಂ ವದನ್ತಿ ಪರಮರ್ಷಯಃ ॥೧೫॥**

ಪತ್ನೀ-ಪುತ್ರರ ಭರಣ-ಪೋಷಣೆಗಳೂ ಮತ್ತು ವೇದಗಳ ಧಾರ ಣೆಯೂ (ನಿರಂತರವೇದಾಭ್ಯಾಸವೂ) ಶ್ರೇಷ್ಠವಾದ ಗೃಹಸ್ಥಾಶ್ರಮವನ್ನು ಆಶ್ರಯಿಸಿರುವವರ ಮುಖ್ಯಕರ್ತವ್ಯವಾಗಿವೆಯೆಂದು ಪರಮರ್ಷಿಗಳು ಹೇಳುತ್ತಾರೆ.

**ಏವಂ ಹಿ ಯೋ ಬ್ರಾಹ್ಮಣೋ ಯಜ್ಞಶೀಲೋ**
**ಗಾರ್ಹಸ್ಥ್ಯಮಧ್ಯಾವಸತೇ ಯಥಾವತ್ ।**
**ಗೃಹಸ್ಥವೃತ್ತಿಂ ಪ್ರವಿಶೋಧ್ಯ ಸಮ್ಯ-**
**ಕ್ಸ್ವರ್ಗೇ ವಿಶುದ್ಧಂ ಫಲಮಾಪ್ನುತೇ ಸಃ ॥೧೬॥**

ಹೀಗೆ ಯಾವ ಬ್ರಾಹ್ಮಣನು ಯಜ್ಞಶೀಲನಾಗಿ ಗೃಹಸ್ಥಧರ್ಮವನ್ನು ಯಥಾವತ್ತಾಗಿ ಪರಿಪಾಲನೆಮಾಡುತ್ತಾನೆಯೋ, ಗೃಹಸ್ಥವೃತ್ತಿಯನ್ನು ಚೆನ್ನಾಗಿ ಶುದ್ಧಗೊಳಿಸುತ್ತಾನೆಯೋ (ನ್ಯಾಯಾರ್ಜಿತವಾದ ಧನದಿಂದ ಜೀವಿಕೆಯನ್ನು ನಡೆಸುತ್ತಾನೆಯೋ)–ಅಂತಹವನು ಸ್ವರ್ಗಲೋಕದಲ್ಲಿಯೂ ವಿಶುದ್ಧವಾದ ಫಲವನ್ನು ಹೊಂದುತ್ತಾನೆ.

**ತಸ್ಯ ದೇಹಪರಿತ್ಯಾಗಾದಿಷ್ಟಾಃ ಕಾಮಾಕ್ಷಯಾ ಮತಾಃ ।**
**ಅನನ್ತ್ಯಾಯೋಪತಿಷ್ಠನ್ತಿ ಸರ್ವತೋಽಕ್ಷಿಶಿರೋಮುಖಾಃ ॥೧೭॥**

ಅಂತಹ ಗೃಹಸ್ಥನು ದೇಹಪರಿತ್ಯಾಗಮಾಡಿದನಂತರ ಅವನಿಗೆ ಇಷ್ಟವಾದ ಕಾಮನೆಗಳೆಲ್ಲವೂ ಅಕ್ಷಯವಾಗಿ ಪ್ರಾಪ್ತವಾಗುತ್ತವೆ. ಸ್ವರ್ಗದಲ್ಲವನು ಅಕ್ಷಯವಾದ ಸುಖೋಪಭೋಗಗಳನ್ನು ಅನುಭವಿಸುತ್ತಾನೆ. ಆ ಎಲ್ಲ ಕಾಮನೆಗಳೂ–ಎಲ್ಲ ಕಡೆಗಳಲ್ಲಿಯೂ ಕಣ್ಣುಗಳನ್ನೂ, ಶಿರಸ್ಸುಗಳನ್ನೂ ಮತ್ತು ಮುಖಗಳನ್ನೂ ಹೊಂದಿದುವುಗಳಾಗಿ ಸೇವಕರೋಪಾದಿಯಲ್ಲಿ ನಮ್ಯನ್ತೇಽಸ್ಮೈ ಕಾಮಾಃ ಎಂಬ ಶ್ರುತಿವಾಕ್ಯದಂತೆ ಅನಂತಕಾಲದವರೆಗೂ ಅಂತಹವನ ಸೇವೆಯಲ್ಲಿಯೇ ನಿರತವಾಗಿರುತ್ತವೆ. (ಕೇವಲ ಸಂಕಲ್ಪಮಾತ್ರದಿಂದಲೇ ಅವನ ಕಾಮನೆಗಳೆಲ್ಲವೂ ಸಿದ್ಧವಾಗುತ್ತವೆ.)

**ಸ್ಮರನ್ನೇಕೋ ಜಪನ್ನೇಕಃ ಸರ್ವಾನೇಕೋ ಯುಧಿಷ್ಠಿರ ।**
**ಏಕಸ್ಮಿನ್ನೇವ ಚಾಚಾರ್ಯೇ ಶುಶ್ರೂಷುರ್ಮಲಪಙ್ಕವಾನ್ * ॥೧೮॥**

---

* ಈ ಶ್ಲೋಕದಲ್ಲಿ ಬ್ರಹ್ಮಚಾರೀ ಎಂಬ ಪದವಿಲ್ಲ. 'ಮಲಪಙ್ಕವಾನ್' ಕೊಳೆ ಮತ್ತು ಕೆಸರಿನಿಂದ ಯುಕ್ತನಾದ–ಎಂಬ ವಿಶೇಷಣದಿಂದಲೇ 'ಬ್ರಹ್ಮಚಾರೀ' ಎಂದು ವ್ಯಾಖ್ಯಾನಿಸಬೇಕಾಗಿದೆ. ಗುರುಶುಶ್ರೂಷೆ–ಗುರುಗಳ ಮನೆಯಲ್ಲಿರುವ ಗೋವುಗಳ ಸೇವೆ–ಇವುಗಳಲ್ಲಿಯೇ ಬ್ರಹ್ಮಚಾರಿಯು ನಿರತನಾಗಿರುವುದರಿಂದ ಶರೀರವು ಮಲಿನವಾಗಿರುವುದೆಂದು ಭಾವಿಸಬಹುದಾಗಿದೆ. ಬ್ರಹ್ಮಚಾರಿಯ ಲಕ್ಷ್ಯವು ವೇದಾಧ್ಯಯನದ ಮೇಲಿರಬೇಕೇ ಹೊರತು ಲೌಕಿಕಸುಖಗಳ ಕಡೆಗಿರಬಾರದು.

ಯುಧಿಷ್ಠಿರ! ಕೊಳೆ ಮತ್ತು ಕೆಸರಿನಿಂದ ಯುಕ್ತನಾದ ಬ್ರಹ್ಮಚಾರಿಯು ಏಕಾಕಿಯಾಗಿ ವೇದಮಂತ್ರಗಳನ್ನು ಚಿಂತಿಸುತ್ತಿರಬೇಕು. (ಹನುಸ್ಸುಗಳ ತಿರುವೆಯನ್ನು ಹಾಕುತ್ತಿರಬೇಕು.) ಏಕಾಕಿಯಾಗಿ ಕುಳಿತು ಗಾಯತ್ರೀಮಂತ್ರ ವನ್ನು ಜಪಿಸಬೇಕು. ತನ್ನ ಎಲ್ಲ ಕಾರ್ಯಗಳನ್ನೂ ತಾನೇ ಮಾಡಿಕೊಳ್ಳಬೇಕು. ಒಬ್ಬನೇ ಒಬ್ಬನನ್ನು ಆಚಾರ್ಯನನ್ನಾಗಿ ಮಾಡಿಕೊಂಡು ಅವನ ಶುಶ್ರೂಷೆಯಲ್ಲಿಯೇ ಸರ್ವದಾ ನಿರತನಾಗಿರಬೇಕು.

**ಬ್ರಹ್ಮಚಾರೀ ವ್ರತೀ ನಿತ್ಯಂ ನಿತ್ಯಂ ದೀಕ್ಷಾಪರೋ ವಶೀ ।**
**ಪರಿಚಾರ್ಯ ತಥಾ ವೇದಂ ಕೃತ್ಯಂ ಕುರ್ವನ್ವಸೇತ್ಸದಾ ॥೧೯॥**

ಬ್ರಹ್ಮಚಾರಿಯು ನಿತ್ಯನಿರಂತರವಾಗಿ ಮನಸ್ಸನ್ನೂ, ಇಂದ್ರಿಯಗಳನ್ನೂ ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ವ್ರತನಿಷ್ಠನಾಗಿರಬೇಕು. ಕೆಲವು ಸಮಯಗಳಲ್ಲಿ ದೀಕ್ಷಾಬದ್ಧನಾಗಿರಬೇಕು. ವೇದಾಧ್ಯಯನವನ್ನು ಸದಾ ಕಾಲದಲ್ಲಿಯೂ ಮಾಡುತ್ತಾ, ಕರ್ತವ್ಯಕರ್ಮಗಳನ್ನು ಮಾಡುತ್ತಾ, ಗುರುವಿನ ಮನೆಯಲ್ಲಿಯೇ ವಾಸಮಾಡಬೇಕು.

**ಶುಶ್ರೂಷಾಂ ಸತತಂ ಕುರ್ವನ್ಗುರೋಃ ಸಮ್ಪ್ರಣಮೇತ ಚ ।**
**ಷಟ್ಕರ್ಮಸ್ವನಿವೃತ್ತಶ್ಚ ನ ಪ್ರವೃತ್ತಶ್ಚ ಸರ್ವಶಃ ॥೨೦॥**

ನಿರಂತರವಾಗಿ ಗುರುಗಳ ಸೇವೆಯಲ್ಲಿಯೇ ನಿರತನಾಗಿರಬೇಕು. ಗುರು ಗಳನ್ನು ಅಭಿವಾದನಪೂರ್ವಕವಾಗಿ ನಮಸ್ಕರಿಸಬೇಕು. ಯಜನ-ಯಾಜನ, ಅಧ್ಯಯನ-ಅಧ್ಯಾಪನ, ದಾನ-ಪ್ರತಿಗ್ರಹಗಳೆಂಬ ಬ್ರಾಹ್ಮಣನಿಗೆ ವಿಹಿತವಾಗಿ ರುವ ಷಟ್ಕರ್ಮಗಳನ್ನು ಬಿಡಬಾರದು. ಸದಾ ಅವುಗಳಲ್ಲಿ ತೊಡಗಿರಲೂ ಬಾರದು. ಎಂದರೆ ಗುರುಶುಶ್ರೂಷೆಗೆ ವಿರೋಧವಾಗದಂತೆ ಅವುಗಳನ್ನು ಇಟ್ಟುಕೊಳ್ಳಬೇಕು. ಉದಾಹರಣೆಗಾಗಿ ಯಾಜನ ಪ್ರತಿಗ್ರಹಗಳನ್ನು ತನ ಗೋಸ್ಕರ ಇಟ್ಟುಕೊಳ್ಳಬಾರದು. ಗುರುಗಳ ಅಪ್ಪಣೆಯಂತೆ ಅವರ ಸೇವೆಗಾಗಿ ಇಟ್ಟುಕೊಳ್ಳಬೇಕು. ಗುರುಶುಶ್ರೂಷೆಗೆ ಧಕ್ಕೆ ಬರುವಂತಿದ್ದರೆ ಅವುಗಳನ್ನು ಬಿಡಬೇಕು. ಷಟ್ಕರ್ಮಗಳಲ್ಲಿ ಸಂಕೋಚವಾದರೂ ಗುರುಶುಶ್ರೂಷೆಯಲ್ಲಿ

ಸಂಕೋಚವಾಗಬಾರದು–ಎಂದರ್ಥ. ಏಕೆಂದರೆ, ಗುರುಶುಶ್ರೂಷೆಯೇ ಬ್ರಹ್ಮಚಾರಿಯ ಪ್ರಧಾನಕರ್ತವ್ಯ.

**ನ ಚರತ್ಯಧಿಕಾರೇಣ ಸೇವೇತ ದ್ವಿಷತೋ ನ ಚ ।**
**ಏಷೋಽಽಶ್ರಮಪದಸ್ತಾತ ಬ್ರಹ್ಮಚಾರಿಣ ಇಷ್ಯತೇ ॥೨೧॥**

ಮಗು! ಯುಧಿಷ್ಠಿರ! ಬ್ರಹ್ಮಚಾರಿಯಾದವನು ನಿಗ್ರಹಾನುಗ್ರಹಗಳನ್ನು ಮಾಡಲು ಹೋಗಬಾರದು. ದ್ವೇಷಮಾಡುವವರ ಸಹವಾಸವನ್ನು ಮಾಡಬಾರದು. ಬ್ರಹ್ಮಚಾರಿಗಳಿಗೆ ಈ ಆಶ್ರಮಧರ್ಮವು ಹೇಳಲ್ಪಟ್ಟಿದೆ."

ಓ೧ನೆಯ ಅಧ್ಯಾಯವು ಮುಗಿಯಿತು.

ಓ೨ನೆಯ ಅಧ್ಯಾಯ ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ಬ್ರಾಹ್ಮಣಧರ್ಮ ಮತ್ತು ಕರ್ತವ್ಯಪಾಲನೆಯ ಮಹತ್ತ್ವ

ಯುಧಿಷ್ಠಿರನು ಹೇಳುತ್ತಾನೆ :

**ಶಿವಾನ್ಸುಖಾನ್ಮಹೋದರ್ಕಾನಹಿಂಸ್ರಾಲ್ಲೋಕಸಮ್ಮತಾನ್ ।**
**ಬ್ರೂಹಿ ಧರ್ಮಾನ್ಸುಖೋಪಾಯಾನ್ಮದ್ವಿಧಾನಾಂ ಸುಖಾವಹಾನ್ ॥೧॥**

"ಪಿತಾಮಹ! ಕಲ್ಯಾಣಮಯವಾದ, ಸುಖಮಯವಾದ, ಭವಿಷ್ಯದಲ್ಲಿ ಅಭ್ಯುದಯವನ್ನುಂಟುಮಾಡುವ, ಹಿಂಸಾರಹಿತವಾದ, ಲೋಕಸಮ್ಮತ ವಾದ, ಸುಖಸಾಧಕವಾದ, ನಮ್ಮಂತಹವರಿಗೆ ಸುಖಾವಹವಾದ ಧರ್ಮ ಗಳನ್ನು ಹೇಳು."

ಭೀಷ್ಮನು ಹೇಳುತ್ತಾನೆ :

"ಪ್ರಭುವೇ! ಭರತಶ್ರೇಷ್ಠನೇ! ಬ್ರಾಹ್ಮಣನಿಗೆ ನಾಲ್ಕು ಆಶ್ರಮಗಳೂ ವಿಹಿತವಾಗಿವೆ. ಉಳಿದ ಮೂರು ವರ್ಣದವರು ( ಕ್ಷತ್ರಿಯ-ವೈಶ್ಯ- ಶೂದ್ರರು) ಈ ಎಲ್ಲ ಆಶ್ರಮಧರ್ಮಗಳನ್ನೂ ಆಚರಣೆಯಲ್ಲಿಟ್ಟುಕೊಂಡಿರುವುದಿಲ್ಲ.

**ಉಕ್ತಾನಿ ಕರ್ಮಾಣಿ ಬಹೂನಿ ರಾಜ-**
**ನ್ಸ್ವರ್ಗ್ಯಾಣಿ ರಾಜನ್ಯಪರಾಯಣಾನಿ ।**

ನೇಮಾನಿ ದೃಷ್ಟಾನ್ತವಿಧೌ ಸ್ಮೃತಾನಿ
ಕ್ಷಾತ್ರೇ ಹಿ ಸರ್ವಂ ವಿಹಿತಂ ಯಥಾವತ್ ॥೩॥

ಕ್ಷತ್ರಿಯರಿಗೆ ಆಶ್ರಯಿಸಲು ಯೋಗ್ಯವಾದ ಮತ್ತು ಸ್ವರ್ಗಪ್ರಾಪಕವಾದ ಅನೇಕ ರೀತಿಯ ಕರ್ಮಗಳು (ಯುದ್ಧ-ಯಜ್ಞಾದಿಗಳು) ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ. ಆದರೆ ಹಿಂಸಾಪ್ರಧಾನವಾದ ಯುದ್ಧಾದಿಗಳು ಬ್ರಾಹ್ಮಣರಿಗೆ ಆದರ್ಶವಾಗಿರುವುದಿಲ್ಲ. ಅರ್ಥಾತ್ ಈ ಕರ್ಮಗಳು ಬ್ರಾಹ್ಮಣನ ಕರ್ಮಗಳಿಗೆ ಅನುಗುಣವಾಗಿರುವುದಿಲ್ಲ. ಏಕೆಂದರೆ ಕ್ಷಾತ್ರಧರ್ಮದಲ್ಲಿ ಯುದ್ಧವೇ ಮೊದಲಾದ ಹಿಂಸಾಕರ್ಮಗಳು ಯಥಾವತ್ತಾಗಿ ವಿಹಿತವಾಗಿವೆ. (ಯುದ್ಧ ಮಾಡಿ ಶತ್ರುಗಳನ್ನು ಅಥವಾ ದಸ್ಯುಗಳನ್ನು ಸಂಹರಿಸುವುದೇ ರಾಜನ ಮುಖ್ಯಧರ್ಮವಾಗಿದೆಯೆಂದು ಶಾಸ್ತ್ರಗಳು ಸಾರುತ್ತವೆ.)

ಕ್ಷಾತ್ರಾಣಿ ವೈಶ್ಯಾನಿ ಚ ಸೇವಮಾನಃ
ಶೌದ್ರಾಣಿ ಕರ್ಮಾಣಿ ಚ ಬ್ರಾಹ್ಮಣಃ ಸನ್ ।
ಅಸ್ಮಿಂಲ್ಲೋಕೇ ನಿನ್ದಿತೋ ಮನ್ದಚೇತಾಃ
ಪರೇ ಚ ಲೋಕೇ ನಿರಯಂ ಪ್ರಯಾತಿ ॥೪॥

ಬ್ರಾಹ್ಮಣನಾಗಿದ್ದರೂ ಕ್ಷತ್ರಿಯೋಚಿತವಾದ, ವೈಶ್ಯೋಚಿತವಾದ ಅಥವಾ ಶೂದ್ರೋಚಿತವಾದ ಕರ್ಮಗಳನ್ನು ಮಾಡುವ ಮಂದಬುದ್ಧಿಯ ಬ್ರಾಹ್ಮಣನು ಈ ಲೋಕದಲ್ಲಿ ನಿಂದಿತನಾಗುವುದೇ ಅಲ್ಲದೇ–ಪರಲೋಕದಲ್ಲಿ ನರಕಕ್ಕೂ ಹೋಗುತ್ತಾನೆ.

ಯಾ ಸಂಜ್ಞಾ ವಿಹಿತಾ ಲೋಕೇ ದಾಸೇ ಶುನಿ ವೃಕೇ ಪಶೌ ।
ವಿಕರ್ಮಣಿ ಸ್ಥಿತೇ ವಿಪ್ರೇ ಸೈವ ಸಂಜ್ಞಾ ಚ ಪಾಣ್ಡವ ॥೫॥

ದಾಸ, ನಾಯಿ, ತೋಳ ಮತ್ತು ಪಶುಗಳಿಗೆ ಲೋಕದಲ್ಲಿ ನಿಂದಾಸೂಚಕವಾದ ಯಾವ ಸಂಜ್ಞೆಯು ವಿಹಿತವಾಗಿರುವುದೋ–ಅಂತಹ ನಿಂದಾಸೂಚಕವಾದ ಸಂಜ್ಞೆಯೇ ಕರ್ಮಭ್ರಷ್ಟನಾದ ಬ್ರಾಹ್ಮಣನಿಗೂ ಅನ್ವಯಿಸುತ್ತದೆ.

ಷಟ್ಕರ್ಮಸಮ್ಪ್ರವೃತ್ತಸ್ಯ ಆಶ್ರಮೇಷು ಚತುರ್ಷ್ವಪಿ ।
ಸರ್ವಧರ್ಮೋಪಪನ್ನಸ್ಯ ಸಂವೃತಸ್ಯ ಕೃತಾತ್ಮನಃ ॥೬॥

**ಬ್ರಾಹ್ಮಣಸ್ಯ ವಿಶುದ್ಧಸ್ಯ ತಪಸ್ಯಭಿರತಸ್ಯ ಚ ।**
**ನಿರಾಶಿಷೋ ವದಾನ್ಯಸ್ಯ ಲೋಕಾ ಹ್ಯಕ್ಷರಸಮ್ಮಿತಾಃ ॥೭॥**

ಯಾವ ಬ್ರಾಹ್ಮಣನು ಯಜನ-ಯಾಜನ, ಅಧ್ಯಯನ-ಅಧ್ಯಾಪನ, ದಾನ-ಪ್ರತಿಗ್ರಹಗಳೆಂಬ ಷಟ್ಕರ್ಮಗಳಲ್ಲಿ ನಿರತನಾಗಿರುತ್ತಾನೆಯೋ ಮತ್ತು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮಗಳನ್ನು ಅನುಕ್ರಮವಾಗಿ ಯಥಾಯೋಗ್ಯವಾದ ಕಾಲಗಳಲ್ಲಿ ಸ್ವೀಕರಿಸಿ ಆಯಾ ಆಶ್ರಮ ಧರ್ಮಗಳನ್ನು ಸಂಪೂರ್ಣವಾಗಿ ಪರಿಪಾಲಿಸುತ್ತಿರುವನೋ, ಧರ್ಮವೆಂಬ ಕವಚದಿಂದ ಸಂವೃತನಾಗಿರುವನೋ, ಜಿತಚಿತ್ತನಾಗಿರುವನೋ, ವಿಶುದ್ಧಾತ್ಮ ನಾಗಿರುವನೋ, ತಪಸ್ಸಿನಲ್ಲಿಯೇ ಯಾವಾಗಲೂ ನಿರತನಾಗಿರುವನೋ, ಆಶಾರಹಿತನಾಗಿರುವನೋ, ಉದಾರನಾಗಿರುವನೋ–ಅಂತಹ ಬ್ರಾಹ್ಮಣ ನಿಗೆ ಅಕ್ಷಯವಾದ ಪುಣ್ಯಲೋಕಗಳು ಪ್ರಾಪ್ತವಾಗುತ್ತವೆ. ( ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಿಗಳಿಗೂ ಯಜನ-ಯಾಜನಾದಿ ಷಟ್ಕರ್ಮಗಳು ಸಮಾನವಲ್ಲ ವಾದುದರಿಂದ ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಮೌನ, ಸಮಾಧಿಗಳು ಷಟ್ಕರ್ಮಸಂಜ್ಞೆಗಳೆಂದು ವ್ಯಾಖ್ಯಾನಕಾರರು ಹೇಳಿರುತ್ತಾರೆ. ಆದರೆ ಯಮ-ನಿಯಮಾದಿಗಳು ಅಷ್ಟಾಂಗಯೋಗದಲ್ಲಿ ಉಕ್ತವಾಗಿರುವುವೇ ಹೊರತು ಷಟ್ಕರ್ಮಗಳಲ್ಲಿ ಪರಿಗಣಿತವಾಗಿರುವುದಿಲ್ಲ. ಬ್ರಾಹ್ಮಣನು ಷಟ್ಕರ್ಮನಿರತನಾಗಿರಬೇಕೆಂಬುದು ಪ್ರಸಿದ್ಧವಾಗಿರುವುದರಿಂದ ಇಲ್ಲಿ ಹೇಳಿ ರುವ ಷಟ್ಕರ್ಮಗಳಿಗೂ ಯಜನ-ಯಾಜನಾದಿ ಷಟ್ಕರ್ಮಗಳೆಂದು ಅರ್ಥ ಮಾಡುವುದೇ ಸಮುಚಿತವಾಗಿ ಕಾಣುತ್ತದೆ. )

**ಯೋ ಯಸ್ಮಿನ್ಕುರುತೇ ಕರ್ಮ ಯಾದೃಶಂ ಯೇನ ಯತ್ರ ಚ ।**
**ತಾದೃಶಂ ತಾದೃಶೇನೈವ ಸ ಗುಣಂ ಪ್ರತಿಪದ್ಯತೇ ॥೮॥**

ಯಾವನು ( ಯಾವ ಬ್ರಾಹ್ಮಣನು ) ಯಾವ ಆಶ್ರಮದಲ್ಲಿ ಯಾವ ಕರ್ಮವನ್ನು ಯಾವ ಕಾರಣದಿಂದ ಎಲ್ಲಿ ಮಾಡುತ್ತಾನೆಯೋ–ಆ ಬ್ರಾಹ್ಮಣನು ಅಂತಹ ಕರ್ಮಕ್ಕೆ ತಕ್ಕುದಾದ ಫಲವನ್ನು ಆ ವಿಧಾನದಿಂದಲೇ ಪಡೆದು ಕೊಳ್ಳುತ್ತಾನೆ.

**ವೃದ್ಧ್ಯಾ ಕೃಷಿವಣಿಕ್ತ್ವೇನ ಜೀವಸಂಜೀವನೇನ ಚ ।**
**ವೇತ್ತುಮರ್ಹಸಿ ರಾಜೇನ್ದ್ರ ಸ್ವಾಧ್ಯಾಯಗಣಿತಂ ಮಹತ್ ॥೯॥**

ಯುಧಿಷ್ಠಿರ! ವೈಶ್ಯನಿಗೆ ಕೃಷಿ, ವಾಣಿಜ್ಯ ಮತ್ತು ಬಡ್ಡಿ ಹಣದ ಸಂಗ್ರಹಗಳು ಹೇಗೆ ಮುಖ್ಯಧರ್ಮಗಳಾಗಿವೆಯೋ–ಕ್ಷತ್ರಿಯನಿಗೆ ಜೀವರುಗಳನ್ನು ಚೆನ್ನಾಗಿ ಜೀವಿಸುವಂತೆ ಮಾಡುವುದು ಅರ್ಥಾತ್ ಪ್ರಜಾಪರಿಪಾಲನವು ಹೇಗೆ ಮುಖ್ಯಧರ್ಮವಾಗಿರುವುದೋ–ಹಾಗೆಯೇ ಬ್ರಾಹ್ಮಣನಿಗೆ ವೇದಾಭ್ಯಾಸರೂಪವಾದ ಕರ್ಮವು ಬಹಳ ಮಹತ್ತ್ವದ್ದಾಗಿದೆ. ಈ ವಿಷಯವನ್ನು ನೀನು ಚೆನ್ನಾಗಿ ಗ್ರಹಿಸಬೇಕು.

**ಕಾಲಸಂಚೋದಿತೋ ಲೋಕಃ ಕಾಲಪರ್ಯಾಯನಿಶ್ಚಿತಃ ।**
**ಉತ್ತಮಾಧಮಮಧ್ಯಾನಿ ಕರ್ಮಾಣಿ ಕುರುತೇಽವಶಃ ॥೧೦॥**

ಕಾಲನಿಂದ ಪ್ರೇರಿತರಾಗಿ ಮತ್ತು ಹಿಂದಿನ ಕರ್ಮದ ವಾಸನೆಯಿಂದ ಪ್ರಭಾವಿತರಾಗಿ ಸುನಿಶ್ಚಿತವಾದ ಕರ್ಮವನ್ನು ಪಡೆದುಕೊಂಡ ಜನರು ಕಾಲಪರವಶರಾಗಿಯೇ ಉತ್ತಮಾಧಮ–ಮಧ್ಯಮಕರ್ಮಗಳನ್ನು ಮಾಡುತ್ತಿರುತ್ತಾರೆ.

( ಆಯಾ ವರ್ಣದವರು ಆಯಾ ವರ್ಣಕ್ಕೆ ಉಕ್ತವಾದ ಕರ್ಮಗಳನ್ನೇ ಏಕೆ ಮಾಡುವುದಿಲ್ಲವೆಂಬುದಕ್ಕೆ ಭೀಷ್ಮನು ಸಮಾಧಾನ ಹೇಳುತ್ತಾನೆ. ಒಬ್ಬ ಮನುಷ್ಯನು ಯಾವ ವರ್ಣದಲ್ಲಿಯೇ ಹುಟ್ಟಿದರೂ ಅವನ ಕರ್ಮಗಳು ಪೂರ್ವಜನ್ಮದ ವಾಸನೆಯಿಂದ ಪ್ರೇರಿತವಾಗಿರುತ್ತವೆ. ತಾನು ಜೀವಿಸುತ್ತಿರುವ ಕಾಲಕ್ಕೆ ಅನುಗುಣವಾಗಿರುತ್ತವೆ. ಮೇಲಾಗಿ ಮನುಷ್ಯನು ಯಾವಾಗಲೂ ಸ್ವತಂತ್ರನಲ್ಲ. ಕಾಲಕ್ಕೆ ಅಧೀನನಾಗಿರುತ್ತಾನೆ. ಕಾಲ ಮತ್ತು ದೇಶಗಳಿಗೆ ಅನುಸಾರವಾಗಿ ಮನುಷ್ಯನು ಯಾವ ವರ್ಣದಲ್ಲಿಯೇ ಹುಟ್ಟಿದರೂ ಉತ್ತಮ, ಮಧ್ಯಮ ಮತ್ತು ಅಧಮಕರ್ಮಗಳನ್ನು ಮಾಡುತ್ತಿರುತ್ತಾನೆ. )

**ಅನ್ತವನ್ತಿ ಪ್ರಧಾನಾನಿ ಪುರಾ ಶ್ರೇಯಸ್ಕರಾಣಿ ಚ ।**
**ಸ್ವಕರ್ಮನಿರತೋ ಲೋಕೇ ಹ್ಯಕ್ಷರಃ ಸರ್ವತೋಮುಖಃ ॥೧೧॥**

ಈ ದೇಹಪ್ರಾಪ್ತಿಯೆಂಬ ಶ್ರೇಯಸ್ಸಿಗೆ ಹಿಂದೆ ಕಾರಣಭೂತಗಳಾಗಿದ್ದ ಸತ್ತ್ವರಜಸ್ತಮೋಗುಣಗಳೂ (ಪುಣ್ಯಾಪುಣ್ಯಗಳೂ) ದೇಹದೊಡನೆಯೇ ವಿನಾಶಹೊಂದತಕ್ಕುವುಗಳೇ ಆಗಿವೆ. ಆದುದರಿಂದ ಸ್ವಕರ್ಮದಲ್ಲಿಯೇ ನಿರತನಾದವನು ಮೂರು ಗುಣಗಳಿಂದಲೂ ಅತೀತನಾಗಿ ಶಾಶ್ವತನೂ ಸರ್ವವ್ಯಾಪಿಯೂ ಆಗುತ್ತಾನೆ. (ಸ್ವೇಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ಎಂಬ ಗೀತಾಶ್ಲೋಕವೂ ಇದನ್ನೇ ಪ್ರತಿಪಾದಿಸುತ್ತದೆ.)"

೬೨ನೆಯ ಅಧ್ಯಾಯವು ಮುಗಿಯಿತು.

೬೩ನೆಯ ಅಧ್ಯಾಯ — ರಾಜಧರ್ಮಾನುಶಾಸನಪರ್ವ (ಮುಂದುವರಿದಿದೆ.)

## ವರ್ಣಾಶ್ರಮಧರ್ಮಗಳ ವರ್ಣನೆ ಮತ್ತು ರಾಜಧರ್ಮದ ಶ್ರೇಷ್ಠತೆ

ಭೀಷ್ಮನು ಪ್ರವಚನವನ್ನು ಮುಂದುವರಿಸುತ್ತಾ ಹೇಳುತ್ತಾನೆ :

**ಜ್ಯಾಕರ್ಷಣಂ ಶತ್ರುನಿಬರ್ಹಣಂ ಚ**
**ಕೃಷಿರ್ವಣಿಜ್ಯಾ ಪಶುಪಾಲನಂ ಚ ।**
**ಶುಶ್ರೂಷಣಂ ಚಾಪಿ ತಥಾರ್ಥಹೇತೋ-**
**ರಕಾರ್ಯಮೇತತ್ಪರಮಂ ದ್ವಿಜಸ್ಯ ॥೧॥**

"ಧರ್ಮಜ! ಧನುಸ್ಸಿನ ಮೌರ್ವಿಯನ್ನು ಸೆಳೆದುಕಟ್ಟುವುದು (ಬಿಲ್ಲು ಹಿಡಿಯುವುದು), ಶತ್ರುಗಳನ್ನು ಧ್ವಂಸಮಾಡುವುದು, ಕೃಷಿ, ವಾಣಿಜ್ಯ, ಪಶುಪಾಲನೆ, ಹಣದ ಆಸೆಗಾಗಿ ಮತ್ತೊಬ್ಬರ ಸೇವೆಯನ್ನು ಮಾಡುವುದು– ಈ ಕರ್ಮಗಳು ಬ್ರಾಹ್ಮಣನಿಗೆ ಅತ್ಯಂತವಾಗಿ ನಿಷಿದ್ಧವಾದುವುಗಳು.

**ಸೇವ್ಯಂ ತು ಬ್ರಹ್ಮ ಷಟ್ಕರ್ಮ ಗೃಹಸ್ಥೇನ ಮನೀಷಿಣಾ ।**
**ಕೃತಕೃತ್ಯಸ್ಯ ಚಾರಣ್ಯೇ ವಾಸೋ ವಿಪ್ರಸ್ಯ ಶಸ್ಯತೇ ॥೨॥**

ಮನನಶೀಲನಾದ, ಗೃಹಸ್ಥಾಶ್ರಮಿಯಾದ ಬ್ರಾಹ್ಮಣನು ವೇದಾಭ್ಯಾಸ ನಿರತನಾಗಿರಬೇಕು. ಯಜನ-ಯಾಜನಾದಿ ಷಟ್ಕರ್ಮಗಳಲ್ಲಿ ನಿರತನಾಗಿರಬೇಕು. ಗೃಹಸ್ಥಾಶ್ರಮದ ಉದ್ದೇಶವು ಪರಿಪೂರ್ಣವಾದನಂತರ ವಾನಪ್ರಸ್ಥಾ

ಶ್ರಮವನ್ನು ಸ್ವೀಕರಿಸಿ ಅರಣ್ಯದಲ್ಲಿ ವಾಸಮಾಡುವುದು ಬ್ರಾಹ್ಮಣನ ಪ್ರಶಸ್ತ ವಾದ ಕರ್ತವ್ಯವಾಗಿರುತ್ತದೆ.

**ರಾಜಪ್ರೇಷ್ಯಂ ಕೃಷಿಧನಂ ಜೀವನಂ ಚ ವಣಿಕ್ಪಥಾ ।**
**ಕೌಟಿಲ್ಯಂ ಕೌಲಟೇಯಂ ಚ ಕುಸೀದಂ ಚ ವಿವರ್ಜಯೇತ್ ॥೩॥**

ಗೃಹಸ್ಥನಾದ ಬ್ರಾಹ್ಮಣನು ರಾಜಸೇವೆ, ಕೃಷಿಯಿಂದ ಧನಸಂಪಾದನೆ, ವಾಣಿಜ್ಯದಿಂದ ಜೀವನನಿರ್ವಹಣೆ, ಕುಟಿಲತೆ, ವ್ಯಭಿಚಾರಿಣೀ ಸ್ತ್ರೀಯ ರೊಡನೆ ಸೇರುವುದು, ಬಡ್ಡೀಹಣದಿಂದ ಜೀವನನಿರ್ವಹಣೆ–ಇವುಗಳನ್ನು ತ್ಯಜಿಸಬೇಕು.

**ಶೂದ್ರೋ ರಾಜನ್ಭವತಿ ಬ್ರಹ್ಮಬನ್ಧು-**
**ರ್ದುಶ್ಚಾರಿತ್ರೋ ಯಶ್ಚ ಧರ್ಮಾದಪೇತಃ ।**
**ವೃಷಲೀಪತಿಃ ಪಿಶುನೋ ನರ್ತಕಶ್ಚ**
**ರಾಜಪ್ರೇಷ್ಯೋ ಯಶ್ಚ ಭವೇದ್ವಿಕರ್ಮಾ ॥೪॥**

ಯಾವ ಬ್ರಾಹ್ಮಣನು ದುರಾಚಾರನಾಗಿರುವನೋ, ಧರ್ಮಹೀನ ನಾಗಿರುವನೋ, ಶೂದ್ರಜಾತಿಯ ಸ್ತ್ರೀಯೊಡನೆ ಸಂಬಂಧವನ್ನಿಟ್ಟುಕೊಂಡಿರು ವನೋ, ಚಾಡೀಕೋರನಾಗಿರುವನೋ, ನರ್ತಕನಾಗಿರುವನೋ, ರಾಜ ಸೇವಕನಾಗಿರುವನೋ, ಬ್ರಾಹ್ಮಣಧರ್ಮಕ್ಕೆ ಪರಮವಿರೋಧವೆನಿಸಿದ ಕುತ್ಸಿತಕರ್ಮಗಳನ್ನು ಮಾಡುವನೋ–ಅಂತಹವನು ಶೂದ್ರಸಮಾನನೇ ಆಗುತ್ತಾನೆ.

**ಜಪನ್ವೇದಾನಜಪಂಶ್ಚಾಪಿ ರಾಜ-**
**ನ್ಸಮಃ ಶೂದ್ರೈರ್ದಾಸವಚ್ಚಾಪಿ ಭೋಜ್ಯಃ ।**
**ಏತೇ ಸರ್ವೇ ಶೂದ್ರಸಮಾ ಭವನ್ತಿ**
**ರಾಜನ್ನೇತಾನ್ವರ್ಜಯೇದ್ದೇವಕೃತ್ಯೇ ॥೫॥**

ಮೇಲೆ ಹೇಳಿದ ದುರ್ಗುಣಗಳಿಂದ ಕೂಡಿರುವ ಬ್ರಾಹ್ಮಣನು ಅನು ದಿನವೂ ವೇದಗಳನ್ನು ಅಧ್ಯಯನಮಾಡಿಕೊಂಡೇ ಇರಲಿ, ವೇದಗಳನ್ನು ಅಧ್ಯಯನಮಾಡದೆಯೇ ಇರಲಿ–ಅವನು ಶೂದ್ರನಿಗೆ ಸಮಾನನಾಗುತ್ತಾನೆ. ದಾಸನೊಡನೆ ಸಹಪಂಕ್ತಿಭೋಜನಮಾಡದಂತೆ ಇಂತಹ ಧರ್ಮಹೀನನಾದ

ಬ್ರಾಹ್ಮಣನೊಡನೆಯೂ ಸಹಪಂಕ್ತಿಭೋಜನವನ್ನು ಮಾಡಬಾರದು. ರಾಜಸೇವಕ, ವೃಷಲೀಪತಿ, ಚಾಡಿಕೋರ, ನರ್ತಕ–ಇವರೆಲ್ಲರೂ ಶೂದ್ರನಿಗೆ ಸಮಾನರಾಗಿರುತ್ತಾರೆ. ದೇವತಾಸಂಬಂಧವಾದ ಕಾರ್ಯಗಳಲ್ಲಿ ಇಂತಹ ವರನ್ನು ಪರಿತ್ಯಾಗಮಾಡಬೇಕು.

**ನಿರ್ಮರ್ಯಾದೇ ಚಾಶುಚೌ ಕ್ರೂರವೃತ್ತೌ**
**ಹಿಂಸಾತ್ಮಕೇ ತ್ಯಕ್ತಧರ್ಮಸ್ವವೃತ್ತೇ ।**
**ಹವ್ಯಂ ಕವ್ಯಂ ಯಾನಿ ಚಾನ್ಯಾನಿ ರಾಜ-**
**ನ್ದೇಯಾನ್ಯದೇಯಾನಿ ಭವನ್ತಿ ಚಾಸ್ಮೈ ॥೬॥**

ಯಾವ ಬ್ರಾಹ್ಮಣನು ಮರ್ಯಾದಾಶೂನ್ಯನಾಗಿರುವನೋ, ಅಪವಿತ್ರ ನಾಗಿರುವನೋ, ಕ್ರೂರಸ್ವಭಾವದವನಾಗಿರುವನೋ, ಹಿಂಸಾಪರಾಯಣ ನಾಗಿರುವನೋ, ತನ್ನ ಧರ್ಮವನ್ನೂ ಮತ್ತು ಸದಾಚಾರವನ್ನೂ ಪರಿತ್ಯಾಗ ಮಾಡಿರುವನೋ–ಅಂತಹ ಬ್ರಾಹ್ಮಣನನ್ನು ಆಹ್ವಾನಿಸಿ ಮಾಡುವ ಹವ್ಯ-ಕವ್ಯಗಳೂ (ದೇವ-ಪಿತೃಕಾರ್ಯಗಳೂ), ದಾನಾದಿಗಳೂ ಮಾಡಿದರೂ ಮಾಡದಂತೆಯೇ ಆಗುತ್ತವೆ. (ಅಂತಹ ದುರಾಚಾರಿಯಾದ ಬ್ರಾಹ್ಮಣನನ್ನು ಹವ್ಯ-ಕವ್ಯಾದಿಗಳಿಗೆ ಆಮಂತ್ರಣವೀಯಬಾರದು.)

**ತಸ್ಮಾದ್ಧರ್ಮೋ ವಿಹಿತೋ ಬ್ರಾಹ್ಮಣಸ್ಯ**
**ದಮಃ ಶೌಚಮಾರ್ಜವಂ ಚಾಪಿ ರಾಜನ್ ।**
**ತಥಾ ವಿಪ್ರಸ್ಯಾಶ್ರಮಾಃ ಸರ್ವ ಏವ**
**ಪುರಾ ರಾಜನ್ಬ್ರಾಹ್ಮಣಾ ವೈ ನಿಸೃಷ್ಟಾಃ ॥೭॥**

ಆದುದರಿಂದ ಬ್ರಾಹ್ಮಣನಿಗೆ ಇಂದ್ರಿಯಗಳ ಸಂಯಮನ, ಬಹಿರಂತ ಶ್ಶುದ್ಧಿ, ಸರಳತೆ–ಈ ಧರ್ಮಗಳು ವಿಹಿತವಾಗಿವೆ. ನಾಲ್ಕು ವಿಧವಾದ ಆಶ್ರಮ ಧರ್ಮಗಳೂ ಬ್ರಾಹ್ಮಣನಿಗೆ ಮಾತ್ರವೇ ಇರುತ್ತವೆ. ಏಕೆಂದರೆ : ಎಲ್ಲರಿ ಗಿಂತಲೂ ಮೊದಲು ಬ್ರಾಹ್ಮಣನ ಸೃಷ್ಟಿಯಾಗಿರುತ್ತದೆ.

**ಯಃ ಸ್ಯಾದ್ದಾನ್ತಃ ಸೋಮಪಶ್ಚಾರ್ಯಶೀಲಃ**
**ಸಾನುಕ್ರೋಶಃ ಸರ್ವಸಹೋ ನಿರಾಶೀಃ ।**

**ಋಜುರ್ಮೃದುರನೃಶಂಸಃ ಕ್ಷಮಾವಾ-**
**ನ್ಸ ವೈ ವಿಪ್ರೋ ನೇತರಃ ಪಾಪಕರ್ಮಾ ॥೮॥**

ಯಾವನು ಇಂದ್ರಿಯಗಳನ್ನು ಸಂಯಮದಲ್ಲಿಟ್ಟುಕೊಂಡಿರುವನೋ, ಸೋಮಯಾಗವನ್ನು ಮಾಡಿ ಸೋಮರಸವನ್ನು ಪಾನಮಾಡಿರುವನೋ, ಸದಾಚಾರಿಯೋ, ದಯಾಳುವೋ, ಕಷ್ಟಸಹಿಷ್ಣುವೋ, ನಿಷ್ಕಾಮನೋ, ಸರಳನೋ, ( ನಿಷ್ಕಪಟಿಯೋ ), ಮೃದುಸ್ವಭಾವದವನೋ, ಅಕ್ರೂರನೋ, ಕ್ಷಮಾವಂತನೋ–ಅಂತಹವನನ್ನು ಮಾತ್ರವೇ ಬ್ರಾಹ್ಮಣನೆಂದು ಹೇಳುವುದು ಯೋಗ್ಯವಾಗಿದೆ. ಈ ಗುಣಗಳಿಗೆ ವಿಪರೀತವಾದ ಗುಣಗಳುಳ್ಳವನು ಮತ್ತು ಪಾಪಕರ್ಮನು ಬ್ರಾಹ್ಮಣನೇ ಆಗಿದ್ದರೂ–ಅಂತಹವನನ್ನು ಬ್ರಾಹ್ಮಣನೆಂದು ಭಾವಿಸಕೂಡದು.

**ಶೂದ್ರಂ ವೈಶ್ಯಂ ರಾಜಪುತ್ರಂ ಚ ರಾಜ-**
**ಲ್ಲೋಕಾಃ ಸರ್ವೇ ಸಂಶ್ರಿತಾ ಧರ್ಮಕಾಮಾಃ ।**
**ತಸ್ಮಾದ್ವರ್ಣಾಞ್ಶಾನ್ತಿಧರ್ಮೇಷ್ವಸಕ್ತಾ-**
**ನ್ಮತ್ವಾ ವಿಷ್ಣುರ್ನೇಚ್ಛತಿ ಪಾಣ್ಡುಪುತ್ರ ॥೯॥**

ಪಾಂಡುನಂದನ! ಪ್ರವೃತ್ತಿಮಾರ್ಗದಲ್ಲಿರುವ ಧರ್ಮಕಾಮರಾದ ಎಲ್ಲ ಜನರೂ ಸಹಾಯಕ್ಕಾಗಿ ಶೂದ್ರನನ್ನೂ, ವೈಶ್ಯನನ್ನೂ, ರಾಜಪುತ್ರನನ್ನೂ (ಕ್ಷತ್ರಿಯನನ್ನೂ ) ಆಶ್ರಯಿಸುತ್ತಾರೆ. ಆದುದರಿಂದ ಯಾವ ವರ್ಣದವರು ಮೋಕ್ಷಧರ್ಮದಲ್ಲಿ ಆಸಕ್ತರಾಗಿರುವುದಿಲ್ಲವೋ–ಅಂತಹವರಿಗೆ ಭಗವಾನ್ ವಿಷ್ಣುವು ಮೋಕ್ಷಸಾಧನಧರ್ಮವನ್ನು ಉಪದೇಶಿಸಲು ಇಚ್ಛಿಪಡುವುದಿಲ್ಲ.

**ಲೋಕೇ ಚೇದಂ ಸರ್ವಲೋಕಸ್ಯ ನ ಸ್ಯಾ-**
**ಚ್ಚಾತುರ್ವರ್ಣ್ಯಂ ವೇದವಾದಾಶ್ಚ ನ ಸ್ಯುಃ ।**
**ಸರ್ವಾಶ್ಚೇಜ್ಯಾಃ ಸರ್ವಲೋಕಕ್ರಿಯಾಶ್ಚ**
**ಸದ್ಯಃ ಸರ್ವೇ ಚಾಶ್ರಮಸ್ಥಾ ನ ವೈ ಸ್ಯುಃ ॥೧೦॥**

ಒಂದು ವೇಳೆ ಮಹಾವಿಷ್ಣುವು, ಅಪೇಕ್ಷಿಸದೇ ಇದ್ದವರಿಗೂ ಮೋಕ್ಷ ಧರ್ಮವನ್ನೇ ಉಪದೇಶಮಾಡಿಬಿಟ್ಟಿದ್ದರೆ–ಪ್ರವೃತ್ತಿಮಾರ್ಗಕ್ಕೆ ಸಂಬಂಧಿಸಿದ ಸುಖವು ಈ ಲೋಕದಲ್ಲಿಯೂ ಇರುತ್ತಿರಲಿಲ್ಲ ; ಎಲ್ಲ ( ಯಾವ ) ಲೋಕ

ಗಳಲ್ಲಿಯೂ ಇರುತ್ತಿರಲಿಲ್ಲ. (ಪ್ರವೃತ್ತಿಮಾರ್ಗಿಗಳು ಮಾಡುವ ಯಜ್ಞ-ಯಾಗಾದಿಗಳಿಂದಲೇ ಎಲ್ಲ ಲೋಕದವರಿಗೂ ಸೌಖ್ಯವುಂಟಾಗುತ್ತದೆ.) ಚಾತುರ್ವರ್ಣ್ಯಗಳಾಗಲೀ ವೇದಾಧ್ಯಯನಗಳಾಗಲೀ ಇರುತ್ತಿರಲಿಲ್ಲ. ಯಾವ ವಿಧವಾದ ಯಜ್ಞಗಳೂ ನಡೆಯುತ್ತಿರಲಿಲ್ಲ. ಯಾವ ವಿಧವಾದ ಲೌಕಿಕ ಕ್ರಿಯೆಗಳೂ ನಡೆಯುತ್ತಿರಲಿಲ್ಲ. ಬ್ರಹ್ಮಚರ್ಯವೇ ಮೊದಲಾದ ಆಶ್ರಮಗಳಲ್ಲಿಯೂ ಯಾರೂ ಇರುತ್ತಿರಲಿಲ್ಲ.

**ಯಶ್ಚ ತ್ರಯಾಣಾಂ ವರ್ಣಾನಾಮಿಚ್ಛೇದಾಶ್ರಮಸೇವನಮ್ ।**
**ಚಾತುರಾಶ್ರಮ್ಯದೃಷ್ಟಾಂಶ್ಚ ಧರ್ಮಾಂಸ್ತಾಞ್ಶೃಣು ಪಾಣ್ಡವ ॥೧೦॥**

ಯುಧಿಷ್ಠಿರ! ರಾಜನು ತನ್ನ ರಾಜ್ಯದಲ್ಲಿ ಬ್ರಾಹ್ಮಣ-ವೈಶ್ಯ-ಶೂದ್ರರು ಶಾಸ್ತ್ರವಿಧಿಗಳಿಗೆ ಅನುಸಾರವಾಗಿ ತಮ್ಮ-ತಮ್ಮ ವರ್ಣಾಶ್ರಮಧರ್ಮಗಳನ್ನು ಸೇವಿಸುತ್ತಿರಬೇಕೆಂದು ಇಚ್ಛೆಪಡುವುದಾದರೆ–ನಾಲ್ಕು ವರ್ಣಾಶ್ರಮಗಳಿಗೂ ಹೇಳಲ್ಪಟ್ಟಿರುವ ಈ ಧರ್ಮಗಳನ್ನು ಕೇಳು.

**ಶುಶ್ರೂಷಾಕೃತಕಾರ್ಯಸ್ಯ ಕೃತಸಂತಾನಕರ್ಮಣಃ ।**
**ಅಭ್ಯನುಜ್ಞಾತರಾಜಸ್ಯ ಶೂದ್ರಸ್ಯ ಜಗತೀಪತೇ ॥೧೨॥**
**ಅಲ್ಪಾನ್ತರಗತಸ್ಯಾಪಿ ದಶಧರ್ಮಗತಸ್ಯ ವಾ ।**
**ಆಶ್ರಮಾ ವಿಹಿತಾಃ ಸರ್ವೇ ವರ್ಜಯಿತ್ವಾ ನಿರಾಶಿಷಮ್ ॥೧೩॥**

ಮಹಾರಾಜ! ಯಾವನು ಮೂರು ವರ್ಣದವರ ಸೇವೆಯನ್ನೂ ಮಾಡಿ ಕೃತಾರ್ಥನಾಗಿರುವನೋ, ಸುಪುತ್ರನನ್ನೂ ಪಡೆದಿರುವನೋ, ಸದಾಚಾರ-ಸದ್ವ್ಯವಹಾರಗಳಲ್ಲಿ ತನಗೂ ಉಳಿದ ವರ್ಣದವರಿಗೂ ಸ್ವಲ್ಪವೇ ಅಂತರವುಳ್ಳವನಾಗಿರುವನೋ, *ಹತ್ತು ಧರ್ಮಗಳನ್ನೂ ಪರಿಪಾಲಿಸುತ್ತಿರು

---

* ಸರ್ವವರ್ಣದವರಿಗೂ ಸಮಾನವಾದ ಹತ್ತು ಧರ್ಮಗಳು :– 1) ಧೃತಿಃ = ಸಂತೋಷ 2) ಕ್ಷಮಾ = ಇತರರಿಂದ ಆಗುವ ಅಪಕಾರಕ್ಕೆ ಪ್ರತಿಯಾಗಿ ಮಾಡದಿರು ವುದು 3) ದಮಃ = ಚಿತ್ತಸ್ಥೈರ್ಯ 4) ಅಸ್ತೇಯಃ = ಕದಿಯದಿರುವುದು 5) ಶೌಚಃ = ಶುಚಿಯಾಗಿರುವುದು 6) ಇಂದ್ರಿಯನಿಗ್ರಹಃ = ಇಂದ್ರಿಯಗಳ ಜಯ 7) ಧೀಃ= ಶಾಸ್ತ್ರಜ್ಞಾನ 8) ವಿದ್ಯಾ = ಆತ್ಮಜ್ಞಾನ 9) ಸತ್ಯಂ = ನಿಜ ಹೇಳುವುದು 10) ಅಕ್ರೋಧಃ = ಕೋಪವಿಲ್ಲದಿರುವುದು.

ವನೋ–ಅಂತಹ ಧರ್ಮಾತ್ಮನಾದ ಶೂದ್ರನು ರಾಜನ ಅನುಮತಿಯನ್ನು ಪಡೆದು ಸಂನ್ಯಾಸಾಶ್ರಮವನ್ನು ಬಿಟ್ಟು ಉಳಿದೆಲ್ಲ ಆಶ್ರಮಗಳನ್ನೂ ಸ್ವೀಕರಿಸಬಹುದು. ( ಉಪನೀತನಾಗದೇ ಇರುವುದರಿಂದ ಬ್ರಹ್ಮಚಾರಿಯಾಗಲಾರನು. ಮಕ್ಕಳಾಗಬೇಕೆಂಬ ನಿಯಮವನ್ನು ಮೇಲೆ ಹೇಳಿರುವುದರಿಂದ ಗೃಹಸ್ಥಾಶ್ರಮವೂ ಮುಗಿದಂತಾಗಿದೆ. ಸಂನ್ಯಾಸಾಶ್ರಮವನ್ನು ಸ್ವೀಕರಿಸುವಂತಿಲ್ಲ. ಆದುದರಿಂದ ದಶಧರ್ಮಾನ್ವಿತನಾದ ಶೂದ್ರನು ವಾನಪ್ರಸ್ಥನಾಗಬಹುದು. )

**ಭೈಕ್ಷ್ಯಚರ್ಯಾಂ ತತಃ ಪ್ರಾಹುಸ್ತಸ್ಯ ತದ್ಧರ್ಮಚಾರಿಣಃ ।**
**ತಥಾ ವೈಶ್ಯಸ್ಯ ರಾಜೇನ್ದ್ರ ರಾಜಪುತ್ರಸ್ಯ ಚೈವ ಹಿ ॥೧೪॥**

ಈಗ ಹೇಳಿದ ಧರ್ಮಗಳನ್ನು ಪರಿಪಾಲಿಸುವ ಶೂದ್ರನಿಗೆ ವಾನಪ್ರಸ್ಥಾಶ್ರಮವನ್ನು ಹೇಳಿರುವಂತೆ ವೈಶ್ಯ-ಕ್ಷತ್ರಿಯರಿಗೂ ವಾನಪ್ರಸ್ಥಾಶ್ರಮ ಸ್ವೀಕಾರಾಧಿಕಾರವನ್ನು ಕೆಲವು ಸಂದರ್ಭದಲ್ಲಿ ಹೇಳಿದ್ದಾರೆ.

**ಕೃತಕೃತ್ಯೋ ವಯೋಽತೀತೋ ರಾಜ್ಞಃ ಕೃತಪರಿಶ್ರಮಃ ।**
**ವೈಶ್ಯೋ ಗಚ್ಛೇದನುಜ್ಞಾತೋ ನೃಪೇಣಾಶ್ರಮಸಂಶ್ರಯಮ್ ॥೧೫॥**

ವೈಶ್ಯನು ತನ್ನ ವರ್ಣಾಶ್ರಮಧರ್ಮಗಳನ್ನು ಪರಿಶ್ರಮಪೂರ್ವಕವಾಗಿ ಯಥಾಶಾಸ್ತ್ರವಾಗಿ ಪರಿಪಾಲಿಸುತ್ತಿದ್ದು ಕೃತಕೃತ್ಯನಾಗಿ ವಯೋವೃದ್ಧನಾದ ನಂತರ ರಾಜನ ಅನುಮತಿಯನ್ನು ಪಡೆದು ವಾನಪ್ರಸ್ಥಾಶ್ರಮವನ್ನು ಸ್ವೀಕಾರ ಮಾಡಬಹುದು.

**ವೇದಾನಧೀತ್ಯ ಧರ್ಮೇಣ ರಾಜಶಾಸ್ತ್ರೇಣ ಚಾನಘ ।**
**ಸಂತಾನಾದೀನಿ ಕರ್ಮಾಣಿ ಕೃತ್ವಾ ಸೋಮಂ ನಿಷೇವ್ಯ ಚ ॥೧೬॥**
**ಪಾಲಯಿತ್ವಾ ಪ್ರಜಾಃ ಸರ್ವಾ ಧರ್ಮೇಣ ವದತಾಂ ವರ ।**
**ರಾಜಸೂಯಾಶ್ವಮೇಧಾದೀನ್ಮಖಾನನ್ಯಾಂಸ್ತಥೈವ ಚ ॥೧೭॥**
**ಆನಯಿತ್ವಾ ಯಥಾಪಾಠಂ ವಿಪ್ರೇಭ್ಯೋ ದತ್ತದಕ್ಷಿಣಃ ।**
**ಸಂಗ್ರಾಮೇ ವಿಜಯಂ ಪ್ರಾಪ್ಯ ತಥಾಲ್ಪಂ ಯದಿ ವಾ ಬಹು ॥೧೮॥**
**ಸ್ಥಾಪಯಿತ್ವಾ ಪ್ರಜಾಪಾಲಂ ಪುತ್ರಂ ರಾಜ್ಯೇ ಚ ಪಾಣ್ಡವ ।**
**ಅನ್ಯಗೋತ್ರಂ ಪ್ರಶಸ್ತಂ ವಾ ಕ್ಷತ್ರಿಯಂ ಕ್ಷತ್ರಿಯರ್ಷಭ ॥೧೯॥**

**ಅರ್ಚಯಿತ್ವಾ ಪಿತೄನ್ಸಮ್ಯಕ್ಪಿತೃಯಜ್ಞೈರ್ಯಥಾವಿಧಿ ।**
**ದೇವಾನ್ಯಜ್ಞೈರ್ಋಷೀನ್ವೇದೈರರ್ಚಯಿತ್ವಾ ತು ಯತ್ನತಃ ॥೨೦॥**

**ಅನ್ತಕಾಲೇ ಚ ಸಮ್ಪ್ರಾಪ್ತೇ ಯ ಇಚ್ಛೇದಾಶ್ರಮಾನ್ತರಮ್ ।**
**ಸೋಽನುಪೂರ್ವ್ಯಾಶ್ರಮಾನ್ರಾಜನ್ಗತ್ವಾ ಸಿದ್ಧಿಮವಾಪ್ನುಯಾತ್ ॥೨೧॥**

ರಾಜನಾದವನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕಾದರೆ, ಅವನು ಮೊದಲು ತನ್ನ ವರ್ಣಾಶ್ರಮಧರ್ಮೋಕ್ತವಾದ ಈ ಕಾರ್ಯಗಳೆಲ್ಲವನ್ನೂ ಮುಗಿಸಿಯೇ ತೀರಬೇಕು. ಧರ್ಮದಿಂದ ವೇದಾಧ್ಯಯನವನ್ನು ಮಾಡಬೇಕು. ರಾಜಶಾಸ್ತ್ರಗಳನ್ನು (ನೀತಿಶಾಸ್ತ್ರ, ಧನುರ್ವಿದ್ಯೆ–ಮುಂತಾದುವುಗಳನ್ನು) ಅಧ್ಯಯನಮಾಡಬೇಕು. ಮದುವೆಮಾಡಿಕೊಂಡು ಸುಪುತ್ರರನ್ನು ಪಡೆಯ ಬೇಕು. ಯಜ್ಞದಲ್ಲಿ ಸೋಮರಸವನ್ನು ಪಾನಮಾಡಬೇಕು. ಧರ್ಮದಿಂದ ಪ್ರಜೆಗಳನ್ನು ಪಾಲನೆಮಾಡಬೇಕು. ರಾಜಸೂಯಾಶ್ವಮೇಧಗಳನ್ನೂ ಇನ್ನೂ ಇತರ ಮಹಾಯಜ್ಞಗಳನ್ನೂ ಮಾಡಬೇಕು. ಶಾಸ್ತ್ರೋಕ್ತವಾದ ರೀತಿಯಲ್ಲಿ ಧನವನ್ನೂ ಮತ್ತು ಇತರ ಐಶ್ವರ್ಯಗಳನ್ನೂ ಸಂಗ್ರಹಿಸಿ ಯಜ್ಞಸಮಯಗಳಲ್ಲಿ ಬ್ರಾಹ್ಮಣರಿಗೆ ದಾನಮಾಡಬೇಕು. ಸಂಗ್ರಾಮದಲ್ಲಿ ಮಹಾವಿಜಯವನ್ನೇ ಗಳಿಸಬೇಕು. ಸಾಧ್ಯವಾಗದಿದ್ದರೆ ತನಗೆ ಹೆಚ್ಚಿನ ನಷ್ಟವು ಸಂಭವಿಸದ ರೀತಿಯಲ್ಲಿ ಅಲ್ಪಜಯವನ್ನಾದರೂ ಗಳಿಸಬೇಕು. ತನ್ನ ಮಗನನ್ನು ಪ್ರಜಾಪಾಲನನ್ನಾಗಿ ಸಿಂಹಾಸನದಲ್ಲಿ ಪ್ರತಿಷ್ಠಾಪಿಸಬೇಕು. (ಮಗನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಬೇಕು.) ಒಂದು ವೇಳೆ ತನಗೆ ಪುತ್ರರಿಲ್ಲದಿದ್ದರೆ ಅನ್ಯಗೋತ್ರದ ಅಥವಾ ಶ್ರೇಷ್ಠನಾದ ಕ್ಷತ್ರಿಯತರುಣನನ್ನು ರಾಜ್ಯ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಬಹುದು. ಶ್ರಾದ್ಧ-ತರ್ಪಣಾದಿ ಪಿತೃಯಜ್ಞಗಳಿಂದ ಪಿತೃಗಳನ್ನೂ, ಯಜ್ಞಗಳಿಂದ ದೇವತೆಗಳನ್ನೂ, ವೇದಾಧ್ಯಯನದಿಂದ ಋಷಿಗಳನ್ನೂ ಪ್ರಯತ್ನಪೂರ್ವಕವಾಗಿ ತೃಪ್ತಿಗೊಳಿಸಬೇಕು. ಅಂತ್ಯಕಾಲವು ಸಮೀಪಿಸಲಾಗಿ ಆ ಸಮಯದಲ್ಲಿ ಯಾವ ರಾಜನಾದರೂ ಆಶ್ರಮಾಂತರ ವನ್ನು ಇಚ್ಛಿಸಿದ್ದೇ ಆದರೆ–ಅಂತಹ ರಾಜನು ಆನುಪೂರ್ವಿಯಾದ ಆಶ್ರಮಧರ್ಮವನ್ನು (ವಾನಪ್ರಸ್ಥಾಶ್ರಮವನ್ನು) ಸ್ವೀಕರಿಸಿ ಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ.

**ರಾಜರ್ಷಿತ್ವೇನ ರಾಜೇನ್ದ್ರ ಭೈಕ್ಷ್ಯಚರ್ಯಾಂ ನ ಸೇವಯಾ ।**
**ಅಪೇತಗೃಹಧರ್ಮೋಽಪಿ ಚರೇಜ್ಜೀವಿತಕಾಮ್ಯಯಾ ॥೨೨॥**

ರಾಜನು ಮೇಲೆ ಹೇಳಿದ ರೀತಿಯಲ್ಲಿ ಗೃಹಸ್ಥಾಶ್ರಮವನ್ನು ತ್ಯಾಗ ಮಾಡಿದರೂ ರಾಜರ್ಷಿಭಾವವನ್ನು ತಳೆದು ಜೀವನನಿರ್ವಹಣೆಗಾಗಿ ಭಿಕ್ಷೆಯನ್ನೇ ಮಾಡಬೇಕು. ಇತರರ ಸೇವೆಯಿಂದ ಜೀವನನಿರ್ವಹಣೆಯನ್ನು ಮಾಡಬಾರದು.

**ನ ಚೈತನ್ನೈಷ್ಠಿಕಂ ಕರ್ಮ ತ್ರಯಾಣಾಂ ಭೂರಿದಕ್ಷಿಣ ।**
**ಚತುರ್ಣಾಂ ರಾಜಶಾರ್ದೂಲ ಪ್ರಾಹುರಾಶ್ರಮವಾಸಿನಾಮ್ ॥೨೩॥**

ಭೂರಿದಕ್ಷಿಣನೇ! ಭಿಕ್ಷಾವೃತ್ತಿಯಿಂದ ಜೀವನನಿರ್ವಹಣೆಮಾಡುವುದು ಕ್ಷತ್ರಿಯ-ವೈಶ್ಯ-ಶೂದ್ರರಿಗೆ ನಿಯತವಾದುದೇನೂ ಅಲ್ಲ. ಭಿಕ್ಷಾವೃತ್ತಿಯೆಂಬುದು ನಾಲ್ಕು ವರ್ಣಗಳ ಆಶ್ರಮವಾಸಿಗಳಿಗೂ ( ವಾನಪ್ರಸ್ಥರಿಗೂ ) ಐಚ್ಛಿಕವಾದುದು.

**ಬಾಹ್ವಾಯತ್ತಂ ಕ್ಷತ್ರಿಯೈರ್ಮಾನವಾನಾಂ**
**ಲೋಕಶ್ರೇಷ್ಠಂ ಧರ್ಮಮಾಸೇವಮಾನೈಃ ।**
**ಸರ್ವೇ ಧರ್ಮಾಃ ಸೋಪಧರ್ಮಾಸ್ತ್ರಯಾಣಾಂ**
**ರಾಜ್ಞೋ ಧರ್ಮಾದಿತಿ ವೇದಾಚ್ಛೃಣೋಮಿ ॥೨೪॥**

ಯುಧಿಷ್ಠಿರ! ರಾಜಧರ್ಮವು ಬಾಹುಬಲವನ್ನವಲಂಬಿಸಿರತಕ್ಕುದು. ಸರ್ವಮಾನವರ ಧರ್ಮಗಳನ್ನೂ ರಕ್ಷಿಸುವ ಕ್ಷತ್ರಿಯರಿಂದ ಸೇವಿಸಲ್ಪಡುವ ಈ ರಾಜಧರ್ಮವು ಲೋಕದಲ್ಲಿಯೇ ಅತ್ಯಂತಶ್ರೇಷ್ಠವಾದುದು. ಬ್ರಾಹ್ಮಣ-ವೈಶ್ಯ-ಶೂದ್ರರ ಧರ್ಮಗಳೂ ಮತ್ತು ಉಪಧರ್ಮಗಳೂ ರಾಜಧರ್ಮದಿಂದಲೇ ಸಂರಕ್ಷಿಸಲ್ಪಡತಕ್ಕುವುಗಳೆಂಬ ವೇದವಾಕ್ಯಗಳನ್ನೇ ನಾನು ಕೇಳಿ ದ್ದೇನೆ.

**ಯಥಾ ರಾಜನ್ಹಸ್ತಿಪದೇ ಪದಾನಿ**
**ಸಂಲೀಯನ್ತೇ ಸರ್ವಸತ್ತ್ವೋದ್ಭವಾನಿ ।**
**ಏವಂ ಧರ್ಮಾನ್ರಾಜಧರ್ಮೇಷು ಸರ್ವಾ-**
**ನ್ಸರ್ವಾವಸ್ಥಾನ್ಸಮ್ಪ್ರಲೀನಾನ್ನಿಬೋಧ ॥೨೫॥**

ನರೇಶ್ವರ! ಆನೆಯ ಪದಚಿಹ್ನೆಗಳಲ್ಲಿ ಇತರ ಎಲ್ಲ ಪ್ರಾಣಿಗಳ ಹೆಜ್ಜೆಗಳ

ಗುರುತುಗಳೂ ಯಾವ ರೀತಿಯಲ್ಲಿ ವಿಲೀನವಾಗಿಬಿಡುವುವೋ–ಅದೇ ರೀತಿಯಲ್ಲಿ ಎಲ್ಲ ಧರ್ಮಗಳೂ ಮತ್ತು ಅವುಗಳ ಎಲ್ಲ ಅವಸ್ಥಾಭೇದಗಳೂ ರಾಜಧರ್ಮದಲ್ಲಿಯೇ ಲೀನವಾಗಿವೆ ಅಥವಾ ರಾಜಧರ್ಮವನ್ನೇ ಆಶ್ರಯಿಸಿವೆಯೆಂಬುದನ್ನು ತಿಳಿ.

**ಅಲ್ಪಾಶ್ರಯಾನಲ್ಪಫಲಾನ್ವದನ್ತಿ**
**ಧರ್ಮಾನನ್ಯಾನ್ಧರ್ಮವಿದೋ ಮನುಷ್ಯಾಃ ।**
**ಮಹಾಶ್ರಯಂ ಬಹುಕಲ್ಯಾಣರೂಪಂ**
**ಕ್ಷಾತ್ರಂ ಧರ್ಮಂ ನೇತರಂ ಪ್ರಾಹುರಾರ್ಯಾಃ ॥೨೬॥**

ಇತರ ಎಲ್ಲ ಧರ್ಮಗಳನ್ನೂ ಆಶ್ರಯಿಸುವುದು–ಅಲ್ಪಾಶ್ರಯವೆಂದೂ, ಅವು ಅಲ್ಪಫಲಗಳನ್ನು ಕೊಡತಕ್ಕುವುಗಳೆಂದೂ–ಧರ್ಮವನ್ನು ತಿಳಿದಿರುವ ಆರ್ಯಪುರುಷರು ಹೇಳುತ್ತಾರೆ. ಕ್ಷಾತ್ರಧರ್ಮವು ಎಲ್ಲ ಧರ್ಮಗಳಿಗೂ ಮಹಾಶ್ರಯವಾಗಿರುವುದೆಂದೂ, ಪರಮಕಲ್ಯಾಣರೂಪವಾಗಿರುವುದೆಂದೂ ಮತ್ತು ಅದಕ್ಕೆ ಸಮಾನವಾದ ಧರ್ಮವು ಬೇರೆ ಯಾವುದೂ ಇಲ್ಲವೆಂದೂ–ಆರ್ಯಪುರುಷರ ನಿಶ್ಚಿತವಾದ ಅಭಿಪ್ರಾಯವಾಗಿದೆ.

**ಸರ್ವೇ ಧರ್ಮಾ ರಾಜಧರ್ಮಪ್ರಧಾನಾಃ**
**ಸರ್ವೇ ವರ್ಣಾಃ ಪಾಲ್ಯಮಾನಾ ಭವನ್ತಿ ।**
**ಸರ್ವಸ್ತ್ಯಾಗೋ ರಾಜಧರ್ಮೇಷು ರಾಜಂ-**
**ಸ್ತ್ಯಾಗಂ ಧರ್ಮಂ ಚಾಹುರಗ್ರ್ಯಂ ಪುರಾಣಮ್ ॥೨೭॥**

ಯುಧಿಷ್ಠಿರ! ಎಲ್ಲ ಧರ್ಮಗಳೂ ರಾಜಧರ್ಮವನ್ನೇ ಪ್ರಧಾನಧರ್ಮವನ್ನಾಗಿ ಅಂಗೀಕರಿಸಿವೆ. ಏಕೆಂದರೆ : ಎಲ್ಲ ವರ್ಣಗಳೂ ರಾಜಧರ್ಮದಿಂದಲೇ ಪಾಲಿಸಲ್ಪಡುತ್ತಿವೆ. ( ರಾಜಧರ್ಮವೊಂದೇ ಎಲ್ಲ ವರ್ಣಗಳನ್ನೂ ಪಾಲಿಸುತ್ತದೆ. ) ರಾಜಧರ್ಮದಲ್ಲಿಯೇ ಎಲ್ಲ ವಿಧವಾದ ತ್ಯಾಗಗಳೂ ಸಮಾವೇಶಗೊಂಡಿವೆ. ತ್ಯಾಗಧರ್ಮವೇ ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವೆಂದೂ ಪ್ರಾಚೀನಧರ್ಮವೆಂದೂ ಆರ್ಯರು ಹೇಳುತ್ತಾರೆ.

**ಮಜ್ಜೇತ್ತ್ರಯೀ ದಣ್ಡನೀತೌ ಹತಾಯಾಂ**
**ಸರ್ವೇ ಧರ್ಮಾಃ ಪ್ರಕ್ಷಯೇಯುರ್ವಿಬುದ್ಧಾಃ ।**

**ಸರ್ವೇ ಧರ್ಮಾಶ್ಚಾಶ್ರಮಾಣಾಂ ಹತಾಃ ಸ್ಯುಃ**
**ಕ್ಷಾತ್ರೇ ತ್ಯಕ್ತೇ ರಾಜಧರ್ಮೇ ಪುರಾಣೇ ॥೨೮॥**

ದಂಡನೀತಿಯು ನಷ್ಟವಾಗಿ ಹೋದರೆ ಮೂರು ವೇದಗಳೂ ರಸಾತಲದಲ್ಲಿ ಹುದುಗಿಕೊಳ್ಳುತ್ತವೆ. ವೇದಗಳು ನಷ್ಟವಾದರೆ ಸಮಾಜದಲ್ಲಿ ಪ್ರಚಲಿತವಾಗಿರುವ ಸರ್ವಧರ್ಮಗಳೂ ಸಂಪೂರ್ಣವಾಗಿ ವಿನಾಶಹೊಂದುತ್ತವೆ. ಪುರಾತನವಾದ, ಕ್ಷತ್ರಿಯರಿಗೆ ಸಂಬಂಧಿಸಿದ ರಾಜಧರ್ಮವೇನಾದರೂ ಲುಪ್ತವಾದರೆ–ಎಲ್ಲ ಆಶ್ರಮಧರ್ಮಗಳೂ ಸಂಪೂರ್ಣವಾಗಿ ಅಳಿಸಿಹೋಗುತ್ತವೆ.

**ಸರ್ವೇ ತ್ಯಾಗಾ ರಾಜಧರ್ಮೇಷು ದೃಷ್ಟಾಃ**
**ಸರ್ವಾ ದೀಕ್ಷಾ ರಾಜಧರ್ಮೇಷು ಚೋಕ್ತಾಃ ।**
**ಸರ್ವಾ ವಿದ್ಯಾ ರಾಜಧರ್ಮೇಷು ಯುಕ್ತಾಃ ।**
**ಸರ್ವೇ ಲೋಕಾ ರಾಜಧರ್ಮೇ ಪ್ರವಿಷ್ಟಾಃ ॥೨೯॥**

ಎಲ್ಲ ವಿಧವಾದ ತ್ಯಾಗಗಳನ್ನೂ ರಾಜಧರ್ಮದಲ್ಲಿ ಕಾಣಬಹುದಾಗಿದೆ. ಎಲ್ಲ ವಿಧವಾದ ದೀಕ್ಷೆಗಳೂ ರಾಜಧರ್ಮದಲ್ಲಿ ಪ್ರತಿಪಾದಿತವಾಗಿವೆ. ಎಲ್ಲ ವಿದ್ಯೆಗಳೂ ರಾಜಧರ್ಮಗಳಲ್ಲಿಯೇ ಪ್ರತಿಷ್ಠಿತವಾಗಿವೆ. ಎಲ್ಲ ಲೋಕಗಳೂ ರಾಜಧರ್ಮದಲ್ಲಿಯೇ ಸಮಾವೇಶಗೊಂಡಿವೆ.

**ಯಥಾ ಜೀವಾಃ ಪ್ರಾಕೃತೈರ್ವಧ್ಯಮಾನಾ**
**ಧರ್ಮಶ್ರುತಾನಾಮುಪಪೀಡನಾಯ ।**
**ಏವಂ ಧರ್ಮಾ ರಾಜಧರ್ಮೈರ್ವಿಯುಕ್ತಾಃ**
**ಸಂಚಿನ್ವನ್ತೋ ನಾದ್ರಿಯನ್ತೇ ಸ್ವಧರ್ಮಮ್ ॥೩೦॥**

ವ್ಯಾಧನೇ ಮೊದಲಾದ ನೀಚರಾದ ಜನರಿಂದ ವಧಿಸಲ್ಪಡುವ ಪಶು-ಪಕ್ಷಿಗಳು ಯಾವ ರೀತಿಯಲ್ಲಿ ಅಹಿಂಸಾಧರ್ಮವನ್ನು ಆಶ್ರಯಿಸಿರುವವರ ಮನಸ್ಸಿನ ಖೇದಕ್ಕೆ ಕಾರಣವಾಗುತ್ತವೆಯೋ–ಅದೇ ರೀತಿಯಲ್ಲಿ ರಾಜಧರ್ಮದಿಂದ ವಿಯುಕ್ತವಾದ ಧರ್ಮಗಳು ರಕ್ಷಣೆಯಿಲ್ಲದುವುಗಳಾಗಿ ಧರ್ಮಾವಲಂಬಿಗಳ ಮನಸ್ಸಿನ ಖೇದಕ್ಕೆ ಕಾರಣಗಳಾಗುತ್ತವೆ. ಜನರು ತಾವು ಮಾಡುವ ಧರ್ಮಕಾರ್ಯಗಳಿಗೆ ರಕ್ಷಣೆಯಿಲ್ಲವೆಂಬುದನ್ನು ಚಿಂತಿಸುತ್ತಾ ಸ್ವಧರ್ಮ

ವನ್ನೇ ಅನಾದರಣೆಮಾಡುತ್ತಾರೆ. ಆದುದರಿಂದ ಎಲ್ಲ ಧರ್ಮಗಳಿಗಿಂತಲೂ ರಾಜಧರ್ಮವೇ ಶ್ರೇಷ್ಠವಾದುದು.”

೬೩ನೆಯ ಅಧ್ಯಾಯವು ಮುಗಿಯಿತು.

೨೧ನೆಯ ಸಂಪುಟವು ಮುಗಿಯಿತು.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವನ್ತು ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತೋ ಬ್ರಾಹ್ಮಣಾಃ ಸನ್ತು ನಿರ್ಭಯಾಃ ॥

ಅಪುತ್ರಾಃ ಪುತ್ರಿಣಃ ಸನ್ತುಃ ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾಃ ಸನ್ತು ಜೀವನ್ತು ಶರದಾಂ ಶತಮ್ ॥

ಕಾಯೇನ ವಾಚಾ ಮನಸೇನ್ದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥

ಹರಿಃ ಓಂ ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್



# ಪರಿಶಿಷ್ಟ

(೨೦ನೆಯ ಸಂಪುಟದಿಂದ ಮುಂದುವರಿದುದು.)

೮೫ನೆಯ ಅಧ್ಯಾಯ :– ನಕುಲನಿಗಾದ ದುರವಸ್ಥೆಯನ್ನು ಕಂಡು ಪಾಂಡವಯೋಧರು ಕೌರವರ ಮೇಲೆ ಯುದ್ಧಕ್ಕೆ ಹೋಗುತ್ತಾರೆ. ಕೃಪ-ಕೃತವರ್ಮಾಶ್ವತ್ಥಾಮಾದಿಗಳು ಅವರನ್ನು ನಿರೋಧಿಸುತ್ತಾರೆ. ಕೌರವರು ಕುಲಿಂದರಾಜಕುಮಾರನನ್ನೂ, ಶತಾನೀಕನು ಕಲಿಂಗಪುತ್ರನನ್ನೂ ಸಂಹರಿಸುತ್ತಾರೆ. ಅನಂತರ ವೃಷಸೇನನು ಶತಾನೀಕನನ್ನೂ–ಕಲಿಂಗಪುತ್ರನನ್ನೂ ಬಾಣಗಳಿಂದ ಪೀಡಿಸುತ್ತಾನೆ. ಬಳಿಕ ವೃಷಸೇನನು ಅರ್ಜುನನೊಡನೆಯೇ ನೇರವಾಗಿ ಯುದ್ಧಮಾಡಿ ಅವನನ್ನು ಬಹಳವಾಗಿ ಗಾಯಗೊಳಿಸುತ್ತಾನೆ. ಆ ಸಮಯದಲ್ಲಿ ಅರ್ಜುನನು ವೃಷಸೇನನನ್ನು ಸಂಹರಿಸಲು ನಿಶ್ಚಯಿಸಿ ಕರ್ಣನನ್ನು ಹಂಗಿಸುತ್ತಾನೆ. ಹಿಂದಿನ ಅಭಿಮನ್ಯುವಿನ ಪ್ರಕರಣವನ್ನು ಅವನ ಸ್ಮರಣೆಗೆ ತಂದು– 'ನಾನಿಲ್ಲದಿದ್ದಾಗ ನೀವೆಲ್ಲರೂ ಸೇರಿ ನನ್ನ ಮಗನನ್ನು ಸಂಹರಿಸಿದಿರಿ. ನೀವೆಲ್ಲರೂ ಇರುವಾಗಲೇ ನಿನ್ನ ಮಗನನ್ನು ಸಂಹರಿಸುತ್ತೇನೆ. ಸಾಧ್ಯವಾದರೆ ರಕ್ಷಿಸು'–ಎಂಬ ಎಚ್ಚರಿಕೆಯನ್ನು ನೀಡಿ ಅರ್ಜುನನು ವೃಷಸೇನನನ್ನು ಸಂಹರಿಸುತ್ತಾನೆ. ಅದಕ್ಕೆ ಕರ್ಣನ ಪ್ರತಿಕ್ರಿಯೆ ಕೇವಲ ದುಃಖಮಾತ್ರ. ಇದು ಸ್ವಲ್ಪ ವಿಚಿತ್ರವಾಗಿ ಕಾಣುತ್ತದೆ. ಮಗನ ರಕ್ಷಣೆಗಾಗಿ ಕರ್ಣನು ಒಂದೇ ಒಂದು ಬಾಣವನ್ನೂ ಪ್ರಯೋಗಿಸುವುದಿಲ್ಲ. ಕರ್ಣನ ಸಮೀಪದಲ್ಲಿಯೇ ವೃಷಸೇನನಿದ್ದನೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಸ ಸೂತಜಸ್ಯ ಪ್ರಮುಖೇ ಸ್ಥಿತಸ್ತದಾ ( ೨೫ )–ವೃಷಸೇನನ ವಧೆಯೊಡನೆ ಅಧ್ಯಾಯವು ಮುಗಿಯುತ್ತದೆ.

೮೬ನೆಯ ಅಧ್ಯಾಯ :– ಶ್ರೀಕೃಷ್ಣನು–ಕರ್ಣನೊಡನೆ ಯುದ್ಧಮಾಡುವಂತೆ ಅರ್ಜುನನನ್ನು ಪ್ರೋತ್ಸಾಹಿಸುವ ಅಧ್ಯಾಯವಿದು. ಈ ಹಿಂದಿನ ಅಧ್ಯಾಯದಲ್ಲಿ ಕರ್ಣನ ಸಮಕ್ಷದಲ್ಲಿಯೇ ವೃಷಸೇನನ ವಧೆಯಾಯಿತು–ಎಂದಿದೆ. ಈ ಅಧ್ಯಾಯದಲ್ಲಿ ಕರ್ಣನು ಎತ್ತಲಿಂದಲೋ ಅರ್ಜುನನ ಕಡೆಗೆ ರಭಸದಿಂದ ಬರುತ್ತಿರುವನೆಂಬ ವರ್ಣನೆಯಿದೆ. ಹಾಗೆ ಬರುತ್ತಿರುವ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಪ್ರಚೋದನೆಯ ಮಾತುಗಳಿಂದ

ಹುರಿದುಂಬಿಸುತ್ತಾನೆ. ೮೧ನೆಯ ಶ್ಲೋಕದಲ್ಲಿ ಅರ್ಜುನನು ಬಹಳ ಬೇಗ ಕರ್ಣನ ಬಳಿಗೆ ಹೋದನು–ಎಂದಿದೆ. ಪುನಃ ೨೨ನೆಯ ಶ್ಲೋಕದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು–'ಶೀಘ್ರವಾಗಿ ಕುದುರೆಗಳನ್ನು ನಡೆಸು'–ಎಂದು ಹೇಳಿದ ಪ್ರಕರಣವಿದೆ. **ಚೋದಯಾಶ್ವಾನ್ಹೃಷೀಕೇಶ.** ಪುನಃ ೨೩ನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಕುದುರೆಗಳನ್ನು ಓಡಿಸಿಕೊಂಡು ಹೋದನೆಂದೂ, ಕ್ಷಣಮಾತ್ರದಲ್ಲಿ ಕರ್ಣನ ಎದುರಿನಲ್ಲಿ ರಥವನ್ನು ನಿಲ್ಲಿಸಿದನೆಂದೂ–ಹೇಳಿದೆ. ಹೀಗೆ ಇಲ್ಲಿ ಸ್ವಲ್ಪ ವಿರೋಧಾಭಾಸವಿದೆ. ಈ ಅಧ್ಯಾಯವು ಭಂ. ರಿ. ಇನ್ಸ್ಟಿಟ್ಯೂಟ್‌ನವರ ಪುಸ್ತಕದಲ್ಲಿಲ್ಲ.

೮೭ನೆಯ ಅಧ್ಯಾಯ :– ಈ ಅಧ್ಯಾಯವು ೮೫ನೆಯ ಅಧ್ಯಾಯದಿಂದ ಅನುವರ್ತಿತವಾಗಿದೆ. ಈ ಕಾರಣದಿಂದಲೇ ಕೆಲವರು ೮೬ನೆಯ ಅಧ್ಯಾಯ ವನ್ನು ಅಧಿಕಪಾಠವೆಂದು ನಿಶ್ಚಯಿಸಿರಬಹುದು. ಇಲ್ಲಿ ಶೋಕಾಭಿಭೂತನಾದ ಕರ್ಣನೇ ಅರ್ಜುನನ ಬಳಿಗೆ ಯುದ್ಧಮಾಡಲು ಹೋದನು–ಎಂದಿದೆ. **ರಥೇನ ಕರ್ಣಸ್ತೇಜಸ್ವೀ ಜಗಾಮಾಭಿಮುಖೋ ರಿಪುಮ್** (೨)–ಈ ಅಧ್ಯಾಯದಲ್ಲಿ ಕರ್ಣಾರ್ಜುನರ ಸುಂದರವಾದ ವರ್ಣನೆಯಿದೆ. ವ್ಯಾಸರು ಕರ್ಣಾರ್ಜುನರಿಬ್ಬರನ್ನೂ ಯಾವ ವಿಧವಾದ ತಾರತಮ್ಯವೂ ಇಲ್ಲದಂತೆ ಮುಕ್ತಕಂಠದಿಂದ ಹೊಗಳಿದ್ದಾರೆ. ಅವರಿಬ್ಬರ ಸಕಲಸದ್ಗುಣಗಳನ್ನೂ ಹಾಡಿದ್ದಾರೆ. ಯಾರು ವಿಜಯಿಗಳಾಗುವರೆಂಬುದನ್ನು ನಿರ್ಧರಿಸಿ ಹೇಳಲು ಯಾರಿಂದಲೂ ಸಾಧ್ಯವಾಗಲಿಲ್ಲ. ಕರ್ಣಾರ್ಜುನರ ಯುದ್ಧವನ್ನು ನೋಡಲು ಬಂದಿದ್ದ ಪ್ರೇಕ್ಷಕರೆಲ್ಲರೂ ಪಕ್ಷ-ಪ್ರತಿಪಕ್ಷಗಳನ್ನು ವಹಿಸುತ್ತಾರೆ. ಸೂರ್ಯೇಂದ್ರರಿಗೂ ಆ ವಿಷಯದಲ್ಲಿ ಸಂವಾದವುಂಟಾಯಿತು. ಅರ್ಜುನ ನನ್ನು ಸಂಹರಿಸಿ ಕರ್ಣನು ವಿಜಯಗಳಿಸಲಿ ಎಂದು ಸೂರ್ಯನು ಹೇಳುತ್ತಿದ್ದರೆ ಕರ್ಣನನ್ನು ಸಂಹರಿಸಿ ಅರ್ಜುನನು ವಿಜಯಗಳಿಸಲಿ–ಎಂದು ಇಂದ್ರನು ಹೇಳುತ್ತಿದ್ದನು (೫೮). ದೇವ-ದಾನವ-ದೈತ್ಯ-ರಾಕ್ಷಸ-ಪಿಶಾಚರಲ್ಲಿ ಯಾರು-ಯಾರು ಯಾವ ಪಕ್ಷವನ್ನು ಆಶ್ರಯಿಸಿದ್ದರೆಂಬುದನ್ನು ವ್ಯಾಸರು ಒಂದು ಪಟ್ಟಿಯನ್ನೇ ಮಾಡಿ ಹೇಳಿದ್ದಾರೆ. ಆ ಸಮಯದಲ್ಲಿ ಯಾರು ಜಯಗಳಿಸುವರೆಂಬುದನ್ನು ತಿಳಿದುಕೊಳ್ಳಲು ಇಂದ್ರನು ಬ್ರಹ್ಮ-ರುದ್ರರ ಸಮೀಪಕ್ಕೆ ಹೋಗುತ್ತಾನೆ. ಆಗ ಅವರಿಬ್ಬರೂ ಅರ್ಜುನನೇ ವಿಜಯಿ

ಯಾಗುವನೆಂದು ಸಕಾರಣಗಳಿಂದ ಪ್ರತಿಪಾದಿಸಿ ಹೇಳುತ್ತಾರೆ. ಕರ್ಣಾರ್ಜುನರು ಎದುರು-ಬದುರಾಗಿ ನಿಂತೊಡನೆಯೇ ಅವರಿಬ್ಬರ ಧ್ವಜಗಳಲ್ಲಿದ್ದ ಕಪಿ ಮತ್ತು ಆನೆಗಳ ಹಗ್ಗಗಳೇ ಯುದ್ಧಮಾಡುವ ಪ್ರಕರಣವೂ ಇಲ್ಲಿ ಬರುತ್ತದೆ. ಮುಂದೆ ಕರ್ಣನು 'ಅರ್ಜುನನೇನಾದರೂ ನನ್ನನ್ನು ಸಂಹರಿಸಿದರೆ ನೀನೇನು ಮಾಡುವೆ?'–ಎಂದು ಶಲ್ಯನನ್ನು ಪ್ರಶ್ನಿಸುತ್ತಾನೆ. ಅದಕ್ಕುತ್ತರವಾಗಿ ಶಲ್ಯನು 'ರಥೈಕಸಹಾಯನಾಗಿ ನಾನು ಕೃಷ್ಣಾರ್ಜುನರಿಬ್ಬರನ್ನೂ ಸಂಹರಿಸುತ್ತೇನೆ'– ಎನ್ನುತ್ತಾನೆ. ಅರ್ಜುನನೂ ಈ ಪ್ರಶ್ನೆಯನ್ನೇ ಶ್ರೀಕೃಷ್ಣನಿಗೂ ಹಾಕುತ್ತಾನೆ. ಅದಕ್ಕುತ್ತರವಾಗಿ ಶ್ರೀಕೃಷ್ಣನು ಅರ್ಜುನನ ವಧೆಯು ಅಸಾಧ್ಯವೆಂದು ಹೇಳಿ– 'ಒಂದು ವೇಳೆ ಹಾಗೇನಾದರೂ ಸಂಭವಿಸಿದರೆ ಕರ್ಣ-ಶಲ್ಯರಿಬ್ಬರನ್ನೂ ತೋಳುಗಳಿಂದಲೇ ಬಡಿದು ಸಂಹರಿಸುತ್ತೇನೆ' ಎನ್ನುತ್ತಾನೆ. ಅನಂತರ ಅರ್ಜುನನು ಕರ್ಣನನ್ನು ಸಂಹಾರಮಾಡಿಯೇ ತೀರುವುದಾಗಿ ಪ್ರತಿಜ್ಞೆಯನ್ನು ಮಾಡುತ್ತಾನೆ. ಕರ್ಣಾರ್ಜುನರ ಸಂಭಾಷಣೆಯೊಡನೆ ಈ ಅಧ್ಯಾಯವು ಮುಗಿಯುತ್ತದೆ.

೮೮ನೆಯ ಅಧ್ಯಾಯ :– ಈ ಅಧ್ಯಾಯದಲ್ಲಿ ಮೊದಲು ಯುದ್ಧದ ವರ್ಣನೆಯಿದೆ. ಅನಂತರ ಕರ್ಣಾರ್ಜುನರ ಯುದ್ಧವರ್ಣನೆಯನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ವರ್ಣಿಸಿರುತ್ತಾರೆ. ಬಳಿಕ ದುರ್ಯೋಧನಾದಿ ಐವರು ಮಹಾರಥರು ಅರ್ಜುನನನ್ನು ಬಾಣಗಳಿಂದ ಪ್ರಹರಿಸುತ್ತಾರೆ. ಅವರೆಲ್ಲರನ್ನೂ ಅರ್ಜುನನೊಬ್ಬನೇ ಎದುರಿಸಿ ಯುದ್ಧಮಾಡುತ್ತಾನೆ. ಆಕಾಶದಿಂದ ಅರ್ಜುನನ ಮೇಲೆ ಪುಷ್ಪವೃಷ್ಟಿಯಾಗುತ್ತದೆ. ಪ್ರೇಕ್ಷಕರೆಲ್ಲರೂ ಅರ್ಜುನನ ಪರಾಕ್ರಮವನ್ನು ನೋಡಿ ವಿಸ್ಮಯಗೊಳ್ಳುತ್ತಾರೆ. ಆದರೆ ಕರ್ಣ-ದುರ್ಯೋಧನರಿಗೆ ವಿಸ್ಮಯವೂ ಆಗುವುದಿಲ್ಲ ; ದುಃಖವೂ ಆಗುವುದಿಲ್ಲ. (೨೦)–ಆ ಸಮಯದಲ್ಲಿ ಅಶ್ವತ್ಥಾಮನು, ಪಾಂಡವರೊಡನೆ ಸಂಧಾನ ಮಾಡಿಕೊಳ್ಳುವಂತೆ ದುರ್ಯೋಧನನಿಗೆ ಹೇಳುತ್ತಾನೆ. ಇಲ್ಲಿ ಅಶ್ವತ್ಥಾಮನ ಮಾತುಗಳು ಯುಕ್ತಿಯುಕ್ತವಾಗಿಯೇ ಇವೆ. ಆದರೆ ದುರ್ಯೋಧನನು ಸಂಧಾನಕ್ಕೆ ಒಪ್ಪುವುದಿಲ್ಲ. ಒಪ್ಪದಿರಲು ಅವನು ಮಂಡಿಸುವ ಕಾರಣಗಳೂ ಸಾಧುವಾಗಿಯೇ ತೋರುತ್ತವೆ. ಬಳಲಿರುವ ಕೃಷ್ಣಾರ್ಜುನರನ್ನು ಕರ್ಣನು ಸಂಹರಿಸಿಯೇ ತೀರುವನೆಂದು ದುರ್ಯೋಧನನು ದೃಢವಾಗಿ ನಂಬಿರು

ತ್ತಾನೆ. ಅದನ್ನೇ ಅವನು ಅಶ್ವತ್ಥಾಮನೊಡನೆಯೂ ಹೇಳುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೮೯ನೆಯ ಅಧ್ಯಾಯ :– ಕರ್ಣಾರ್ಜುನರ ಯುದ್ಧದ ಅದ್ಭುತವಾದ ವರ್ಣನೆಯಿದೆ. ಅರ್ಜುನನು ಆಗ್ನೇಯಾಸ್ತ್ರವನ್ನು ಪ್ರಯೋಗಿಸುತ್ತಾನೆ. (೧೭) ಅದಕ್ಕೆ ಪ್ರತಿಯಾಗಿ ಕರ್ಣನು ವಾರುಣಾಸ್ತ್ರವನ್ನು ಪ್ರಯೋಗಿಸುತ್ತಾನೆ. (೧೯) ಆ ಎರಡು ಮಹಾಸ್ತ್ರಗಳ ಪರಿಣಾಮವನ್ನು ವ್ಯಾಸರು ಚಿತ್ರಿಸಿದ್ದಾರೆ. ಕರ್ಣನ ವಾರುಣಾಸ್ತ್ರವನ್ನು ಅರ್ಜುನನು ವಾಯವ್ಯಾಸ್ತ್ರದಿಂದ ನಿರಸನಗೊಳಿಸುತ್ತಾನೆ. ಬಳಿಕ ಅರ್ಜುನನು ವಜ್ರಾಸ್ತ್ರವನ್ನು ಪ್ರಯೋಗಿಸುತ್ತಾನೆ. ಆ ಮಹಾಸ್ತ್ರವು ಕರ್ಣನನ್ನು ಬಹಳವಾಗಿ ಪೀಡಿಸುತ್ತದೆ. ವಜ್ರಾಸ್ತ್ರವನ್ನು ನಿರಸನಗೊಳಿಸಲು ಕರ್ಣನು ಭಾರ್ಗವಾಸ್ತ್ರವನ್ನು ಪ್ರಯೋಗಿಸುತ್ತಾನೆ. ಮುಂದೆ ಭಾರ್ಗವಾಸ್ತ್ರದ ಪ್ರಭಾವವನ್ನು ವರ್ಣಿಸಲಾಗಿದೆ.

ಈ ಸಂದರ್ಭದಲ್ಲಿ ನಾವು ಅರ್ಜುನನ ಬಾಣಪ್ರಯೋಗದಲ್ಲಿ ಶೈಥಿಲ್ಯ ವನ್ನೇನೂ ಕಾಣುವುದಿಲ್ಲ. ಕರ್ಣಾರ್ಜುನರಿಬ್ಬರೂ ಸಮ-ಸಮನಾಗಿಯೇ ಯುದ್ಧಮಾಡುತ್ತಿರುತ್ತಾರೆ. ಹೀಗಿದ್ದರೂ ಭೀಮಸೇನನು ಬಂದು ಅರ್ಜುನ ನನ್ನು ಉತ್ತೇಜಿಸುವ ಪ್ರಕರಣವಿಲ್ಲಿ ಬರುತ್ತದೆ. ೩೪ನೆಯ ಶ್ಲೋಕದಿಂದ ೮೧ನೆಯೇ ಶ್ಲೋಕದವರೆಗೆ ಇರುವ ಶ್ಲೋಕಗಳು ಅಸಹಜವಾಗಿ ಕಾಣು ತ್ತವೆ. ಅರ್ಜುನನೆಂದಿಗೂ ಅಲಸನಲ್ಲ. ಯುದ್ಧದಲ್ಲಿ ಉಪೇಕ್ಷೆಮಾಡು ವವನೂ ಅಲ್ಲ. ಭೀಮಸೇನನು ಈ ಪ್ರಕರಣದಲ್ಲಿ ಅರ್ಜುನನನ್ನು ಉಪೇಕ್ಷಿಸಿ ಮಾತನಾಡುತ್ತಾನೆ. ಹಾಗೆಯೇ ಶ್ರೀಕೃಷ್ಣನು ಅರ್ಜುನನನ್ನು ಕುರಿತು ಉತ್ತೇಜನಕರವಾದ ಮಾತುಗಳನ್ನಾಡುತ್ತಾನೆ. 'ನಾನು ಕೊಡುವ ಸುದರ್ಶನ ಚಕ್ರದಿಂದ ಶತ್ರುವಿನ ತಲೆಯನ್ನು ಕಡಿದುಹಾಕು '–ಎನ್ನುತ್ತಾನೆ. ( ४೫ )– ಇದು ತೀರ ಅಸ್ವಾಭಾವಿಕವಾದ ಮಾತು. ಕೃಷ್ಣ-ಭೀಮರ ಮಾತುಗಳನ್ನು ಕೇಳಿ ಅರ್ಜುನನು ಕರ್ಣನನ್ನು ವಧಿಸಲು ನಿಶ್ಚಯಿಸುತ್ತಾನೆ. ಬ್ರಹ್ಮಾಸ್ತ್ರ ಪ್ರಯೋಗಕ್ಕೆ ಬ್ರಹ್ಮ-ಶಂಕರರ ಅನುಮತಿಯನ್ನು ಕೇಳುತ್ತಾನೆ. ಬ್ರಹ್ಮನಿಗೆ ನಮಸ್ಕರಿಸಿ ಅರ್ಜುನನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾನೆ. ಬ್ರಹ್ಮಾಸ್ತ್ರದ ವಿಷಯವಾಗಿ ಇಲ್ಲಿ ಹೇಳಿರುವ ಮಾತುಗಳನ್ನು ಪರಿಶೀಲಿಸಿದರೆ ಆ ಮಹಾಸ್ತ್ರ

ದಿಂದಲೇ ಕರ್ಣನ ವಧೆಯಾಗಿಬಿಡುವುದೋ ಎನಿಸುತ್ತದೆ. ಆದರೆ ದೇವತೆಗಳ ಅನುಮತಿಯನ್ನು ಪಡೆದು ಬ್ರಹ್ಮನಿಗೆ ನಮಸ್ಕರಿಸಿ ಪ್ರಯತ್ನಪೂರ್ವಕವಾಗಿ ಬಿಟ್ಟ ಆ ಮಹಾಸ್ತ್ರವನ್ನು ಸ್ವಲ್ಪವಾದರೂ ಶ್ರಮವೇ ಇಲ್ಲದಂತೆ ಸಾಧಾರಣವಾದ ಬಾಣಗಳಿಂದಲೇ ಕರ್ಣನು ಧ್ವಂಸಮಾಡಿಬಿಡುತ್ತಾನೆ. **ತದಸ್ಯಹತ್ವಾ ವಿರರಾಜ ಕರ್ಣಃ** ( ೫೨ ) ಇದು ಬಹಳ ಅಸಹಜವಾಗಿಯೇ ಕಾಣುತ್ತದೆ. ಈ ಸಂದರ್ಭದಲ್ಲಿ ೪೮ನೆಯ ಶ್ಲೋಕದಲ್ಲಿ ಸೌತಿ ಎಂಬ ಪದಪ್ರಯೋಗವಿದೆ. ಸಾಮಾನ್ಯವಾಗಿ ಹೆಚ್ಚಿನ ಪಾಠವೆಂದು ಊಹೆಮಾಡಬಹುದಾದ ಕಡೆಗಳಲ್ಲಿ ಈ ಪದಪ್ರಯೋಗವು ಬರುತ್ತದೆ. ಸೂತನ ಮಗನು ಸೂತನಾಗುತ್ತಾನೆಯೇ ಹೊರತು ಸೌತಿಯಾಗುವುದಿಲ್ಲ. ಸೂತ ಎಂಬ ನಾಮಧೇಯವೇ ಕರ್ಣನ ತಂದೆಗಿದ್ದಿದ್ದರೆ ಆಗಲಾದರೂ ಸೌತಿ ಎಂಬ ಹೆಸರು ಬರಲು ಸಾಧ್ಯವಾಗುತ್ತಿದ್ದಿತು. **ಸೂತಸ್ಯ ಅಪತ್ಯಂ ಪುಮಾನ್ ಸೌತಿಃ** ಎಂದಾಗುತ್ತದೆ. ಕರ್ಣನು ಸೂತನ ಹೊಟ್ಟೆಯಲ್ಲಿ ಹುಟ್ಟಿದವನೂ ಅಲ್ಲ. ಕರ್ಣನ ಸಾಕುತಂದೆಯ ಹೆಸರೂ 'ಸೂತ' ಎಂದೂ ಅಲ್ಲ. ಆದುದರಿಂದ ಕರ್ಣನಿಗೆ ಸೌತಿ ಎಂಬ ಹೆಸರು ಯಾವುದೇ ಕಾರಣದಿಂದಲೂ ಸಲ್ಲುವುದಿಲ್ಲ. ಕೆಲವೆಡೆಗಳಲ್ಲಿ ಮಾತ್ರವೇ ಈ ಪದವು ಸೇರಿರುವುದರಿಂದ ಈ ಪ್ರಕರಣವು ಹೆಚ್ಚಿನ ಪಾಠವೆಂದು ಹೇಳಲು ಸಾಧ್ಯವಾಗಿದೆ. ಪುನಃ ಭೀಮಸೇನನ ಮಾತುಗಳು ಬರುತ್ತವೆ. ಭೀಮನಾಡುವ ಮಾತುಗಳನ್ನು ನೋಡಿದರೆ ಅರ್ಜುನನಿಗೆ ಮಹಾಸ್ತ್ರಗಳ ಪ್ರಯೋಗದ ವಿವೇಕವೇ ಇರಲಿಲ್ಲವೋ–ಎಂಬಂತೆ ಭಾಸವಾಗುತ್ತದೆ. ಪುನಃ ಅರ್ಜುನನು ವಿಧೇಯವಾಗಿದ್ದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾನೆ. ಅದರ ಘೋರವಾದ ಪ್ರತಿಕ್ರಿಯೆಯು ವರ್ಣಿತವಾಗಿದೆ. ಅನೇಕ ಯೋಧರು ಅಸುನೀಗುತ್ತಾರೆ. ಆದರೆ ಬ್ರಹ್ಮಾಸ್ತ್ರದಿಂದಲೂ ಕರ್ಣನಿಗೆ ತೊಂದರೆಯಾಯಿತೆಂಬ ವಾಕ್ಯವಿಲ್ಲ. ಅದಕ್ಕೆ ಪ್ರತಿಯಾಗಿ ಕರ್ಣನು ಭೀಮಾರ್ಜುನ-ಕೃಷ್ಣ ಈ ಮೂವರನ್ನೂ ಪ್ರಹರಿಸುತ್ತಾನೆ. ಅರ್ಜುನನಿಗೆ ಬುದ್ಧಿ ಹೇಳಿದ ಭೀಮನು ಕರ್ಣನನ್ನು ಹದಿನೆಂಟು ಬಾಣಗಳಿಂದ ಗಾಯಗೊಳಿಸುತ್ತಾನೆ. ಈ ಮಧ್ಯದಲ್ಲಿ ಸಭಾಪತಿ ಎಂಬುವನನ್ನು ಅರ್ಜುನನು ಸಂಹರಿಸುವ ಪ್ರಕರಣವು ಬರುತ್ತದೆ. ಈ ಸಭಾಪತಿ ಎಂಬುವನು ಯಾರು? ಎಲ್ಲಿಯವನು?–ಎಂಬ ವಿಷಯವಿಲ್ಲ. ಬಳಿಕ ಅರ್ಜುನನು ಸಾವಿರಾರು ಕುರು

ಯೋಧರನ್ನು ಸಂಹರಿಸುತ್ತಾನೆ. ಬಹಳವಾಗಿ ನೊಂದ ಕುರುಯೋಧರು ಅರ್ಜುನನನ್ನು ಸಂಹರಿಸುವಂತೆ ಕರ್ಣನಿಗೆ ಹೇಳುತ್ತಾರೆ. ಅವರ ಪ್ರಚೋದನೆಯಂತೆ ಕರ್ಣನು ಪಾಂಡವರ ಕಡೆಯ ಸಾವಿರಾರು ಯೋಧರನ್ನು ಸಂಹರಿಸಿ ಪುನಃ ಅರ್ಜುನನೊಡನೆ ದ್ವೈರಥಯುದ್ಧದಲ್ಲಿ ತೊಡಗುತ್ತಾನೆ. ಈ ಮಧ್ಯದಲ್ಲಿ ಯುಧಿಷ್ಠಿರನು ಕರ್ಣಾರ್ಜುನರ ಯುದ್ಧವನ್ನು ನೋಡಲು ರಣಾಂಗಣಕ್ಕೆ ಬಂದನೆಂಬ ವಿಷಯವಿದೆ. ಆದರೆ ಕರ್ಣನ ವಧೆಯ ಸಮಯದಲ್ಲಿ ಯುಧಿಷ್ಠಿರನು ರಣರಂಗದಲ್ಲಿರಲಿಲ್ಲ. ಯುಧಿಷ್ಠಿರನು ರಣರಂಗಕ್ಕೆ ಬಂದನಂತರ ಏನು ಮಾಡಿದನೆಂಬ ವಿಷಯವೂ ಮುಂದೆ ಬರುವುದಿಲ್ಲ. ಪುನಃ ಕರ್ಣನು ಕೃಷ್ಣಾರ್ಜುನರನ್ನೂ ಮತ್ತು ಪಾಂಡವರ ಕಡೆಯ ಸೈನಿಕರನ್ನೂ ನಿಶಿತವಾದ ಬಾಣಗಳಿಂದ ಗಾಯಗೊಳಿಸಿದ ಪ್ರಕರಣವು ಬಂದಿರುತ್ತದೆ. ೩೪ನೆಯ ಶ್ಲೋಕದ ಸಂದರ್ಭದಲ್ಲಿದ್ದ ಪ್ರಕರಣವೇ ಇಲ್ಲಿಯೂ ಪುನರಾವರ್ತಿತವಾಗಿದೆ. ತೇ ಭಿನ್ನದೇಹಾಃ ಎಂಬ ೩೨ನೆಯ ಶ್ಲೋಕವು ಇಲ್ಲಿ ೭೯ನೆಯ ಶ್ಲೋಕವಾಗಿದೆ. ೩೪ನೆಯ ಶ್ಲೋಕದಲ್ಲಿರುವ ಭಾವಾರ್ಥವೇ ೮೧ನೆಯ ಶ್ಲೋಕದಲ್ಲಿಯೂ ಇದೆ.

ಕರ್ಣಸ್ಯ ಮತ್ವಾ ತು ಜಯಂ ತ್ವದೀಯಾಃ
ಪರಾಂ ಮುದಂ ಸಿಂಹನಾದಾಂಶ್ಚ ಚಕ್ರುಃ ।
ಸರ್ವೇ ಹ್ಯಮನ್ಯನ್ತ ಭೃಶಾಹತೌ ಚ
ಕರ್ಣೇನ ಕೃಷ್ಣಾವಿತಿ ಕೌರವೇನ್ದ್ರ ॥೩೪॥
ಜಯಂ ಮತ್ವಾ ವಿಪುಲಂ ವೈ ತ್ವದೀಯಾ-
ಸ್ತಲಾನ್ನಿಜಘ್ನುಃ ಸಿಂಹನಾದಾಂಶ್ಚ ನೇದುಃ ।
ಸರ್ವೇ ಹ್ಯಮನ್ಯನ್ತ ವಶೇ ಕೃತೌ ತೌ
ಕರ್ಣೇನ ಕೃಷ್ಣಾವಿತಿ ತೇ ವಿಮರ್ದೇ ॥೮೧॥

ಈ ಮಧ್ಯದಲ್ಲಿರುವ ಪಾಠವು ಹೆಚ್ಚಿನದೆಂಬುದರಲ್ಲಿ ಯಾವ ಸಂದೇಹವೂ ಕಾಣುವುದಿಲ್ಲ. ಈ ಮಧ್ಯದಲ್ಲಿರುವುದನ್ನು ಬಿಟ್ಟು ಓದಿದರೆ ಕಥೆಯು ಸುರಸವಾಗಿ ಮುಂದುವರಿಯುತ್ತದೆ. ಮುಂದೆ ಕರ್ಣಪ್ರಮುಕ್ತವಾದ ಐದು ಬಾಣಗಳು ಶ್ರೀಕೃಷ್ಣನ ಕವಚವನ್ನು ಭೇದಿಸಿದ ಪ್ರಕರಣವು ಬರುತ್ತದೆ. ಅವುಗಳು ಪಾತಾಳಕ್ಕೆ ಹೋಗಿ ಪಾತಾಳಗಂಗೆಯಲ್ಲಿ ಸ್ನಾನಮಾಡಿ ಪುನಃ

ಕರ್ಣನ ಸಮೀಪಕ್ಕೆ ಬರುತ್ತಿದ್ದವೆಂದೂ ಅವುಗಳನ್ನು ಅರ್ಜುನನು ಕತ್ತರಿಸಿದನೆಂದೂ ಇಲ್ಲಿ ಹೇಳಿದೆ. ಈ ಐದು ಬಾಣಗಳು ಅಶ್ವಸೇನನ ಅನುಯಾಯಿಗಳಾದ ಐದು ಸರ್ಪಗಳೆಂದೂ ಇಲ್ಲಿ ಹೇಳಿದೆ. ಆದರೆ ಬಾಣಗಳು ಅಂತರ್ಗಂಗೆಯಲ್ಲಿ ಸ್ನಾನಮಾಡಿ ಪುನಃ ಕರ್ಣನ ಸಮೀಪಕ್ಕೆ ಬರುತ್ತಿರುವಾಗ ಅರ್ಜುನನು ಅವುಗಳನ್ನು ಏಕೆ ಕತ್ತರಿಸಿದನೆಂಬುದು ಅರ್ಥವಾಗುವುದಿಲ್ಲ. ಬಾಣಗಳು ತನ್ನೆದುರಾಗಿ ಬರುತ್ತಿದ್ದರೆ ಕತ್ತರಿಸಬಹುದು. ಸರ್ಪಾಸ್ತ್ರದ ಪ್ರಕರಣದಲ್ಲಿ ಅದು ಎದುರಾಗಿ ಬಂದಾಗ ಅರ್ಜುನನು ಅದನ್ನು ಕತ್ತರಿಸಿದನೆಂಬ ವಿಷಯವು ಬರುತ್ತದೆ.

ಬಳಿಕ ಅರ್ಜುನನು ಬಹಳ ಕ್ರುದ್ಧನಾಗಿ ಎಲ್ಲ ದಿಕ್ಕುಗಳನ್ನೂ ಬಾಣಗಳಿಂದ ತುಂಬಿಬಿಡುತ್ತಾನೆ. ಕರ್ಣನ ಚಕ್ರರಕ್ಷಕರನ್ನೂ, ಮುಂದಿದ್ದವರನ್ನೂ, ಹಿಂದಿದ್ದವರನ್ನೂ ಸಂಹಾರಮಾಡುತ್ತಾನೆ. ಎರಡು ಸಾವಿರ ಕುರುಪ್ರಮುಖರನ್ನು ಸಂಹಾರಮಾಡುತ್ತಾನೆ. ಕರ್ಣನೊಬ್ಬನನ್ನೇ ಬಿಟ್ಟು ಕೌರವರೆಲ್ಲರೂ ಅರ್ಜುನನ ಬಾಣಗಳ ಪ್ರಹಾರವನ್ನು ತಾಳಲಾರದೇ ಓಡಿಹೋಗುತ್ತಾರೆ. ಸರ್ವಶೂನ್ಯವಾಗಿದ್ದರೂ ಕರ್ಣನು ಸ್ವಲ್ಪವಾದರೂ ವ್ಯಥೆಗೊಳ್ಳದೇ ಪ್ರಹೃಷ್ಟನಾಗಿಯೇ ಅರ್ಜುನನನ್ನು ಪುನಃ ಆಕ್ರಮಿಸುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೯೦ನೆಯ ಅಧ್ಯಾಯ :– ಕರ್ಣಾರ್ಜುನರ ಯುದ್ಧದೊಡನೆ ಅಧ್ಯಾಯವು ಪ್ರಾರಂಭವಾಗುತ್ತದೆ. ಕರ್ಣನು ಅಥರ್ವಣಾಸ್ತ್ರವನ್ನು ಪ್ರಯೋಗಿಸುತ್ತಾನೆ. ಅವರಿಬ್ಬರ ಅದ್ಭುತವಾದ ಯುದ್ಧಚಾತುರ್ಯವನ್ನು ನೋಡಿ ಎಲ್ಲ ಪ್ರಾಣಿಗಳೂ ಇಬ್ಬರನ್ನೂ ಶ್ಲಾಘಿಸುತ್ತವೆ. ಆ ಸಮಯದಲ್ಲಿ ಅರ್ಜುನನಿಗೆ ಪರಮದ್ವೇಷಿಯಾಗಿದ್ದ ಅಶ್ವಸೇನನು–ಇದೇ ಸರಿಯಾದ ಸಮಯವೆಂದು ಭಾವಿಸಿ–ಕರ್ಣನ ಬತ್ತಳಿಕೆಯೊಳಗೆ ಸೇರಿಕೊಂಡನೆಂದು ಇಲ್ಲಿ ಹೇಳಿದೆ. **ಸಂಚಿನ್ತ್ಯ ತೂಣಂ ಪ್ರವಿವೇಶ ಚೈವ ಕರ್ಣಸ್ಯ ರಾಜಞ್ಶರರೂಪಧಾರೀ॥೧೪॥** ಇಲ್ಲಿ ಗಮನಿಸಬೇಕಾದ ಒಂದಂಶವಿದೆ. ಅಶ್ವಸೇನನೇ ಸರ್ಪಾಸ್ತ್ರವಾದನೇ? ಹಾಗಾಗಲು ಸಾಧ್ಯವಿಲ್ಲ. ಸರ್ಪಾಸ್ತ್ರವು ಮೊದಲಿನಿಂದಲೂ ಕರ್ಣನಲ್ಲಿದ್ದಿತು. ಕರ್ಣಪರ್ವದ ೪೦ನೆಯ ಅಧ್ಯಾಯದಲ್ಲಿ ಕರ್ಣನೇ ಶಲ್ಯನಿಗೆ ಈ ವಿಷಯವನ್ನು ಹೊರಗೆಡಹುತ್ತಾನೆ. ೧೪ನೆಯ ಶ್ಲೋಕದ

ಪ್ರಕಾರ ಆ ಸಮಯದಲ್ಲಿ ಅಶ್ವಸೇನನೇ ಬಾಣರೂಪವನ್ನು ತಾಳಿ ತೂಣೀರ ದೊಳಗೆ ಸೇರಿಕೊಂಡನು–ಎಂದಿದೆ. ಸರ್ಪಾಸ್ತ್ರವೇ ಅಲ್ಲದೇ ಬಾಣರೂಪದಲ್ಲಿ ಅಶ್ವಸೇನನೂ ಇದ್ದನೆಂದು ಈ ಶ್ಲೋಕದಿಂದ ಭಾಸವಾಗುತ್ತದೆ. ಸರ್ಪಾಸ್ತ್ರದ ವಿಷಯವಾಗಿ ಹೇಳುವಾಗ ೨೦-೨೧ನೆಯ ಶ್ಲೋಕಗಳಲ್ಲಿ **ಸುಸಂಚಿತಂ ಸದಾರ್ಚಿತಂ ಪಾರ್ಥಾರ್ಥಂ ಚಿರಾಯ ಗುಪ್ತಂ**–ಬಹಳ ಹಿಂದಿನಿಂದಲೂ ಸಂಗ್ರಹಿಸಿಟ್ಟುಕೊಂಡುದು ; ಸದಾಕಾಲದಲ್ಲಿಯೂ ಪೂಜಿಸಲ್ಪಡುತ್ತಿದ್ದುದು ; ಪಾರ್ಥನನ್ನು ಸಂಹರಿಸುವ ಸಲುವಾಗಿಯೇ ಬಹಳ ಕಾಲದಿಂದಲೂ ರಕ್ಷಿಸ ಲ್ಪಡುತ್ತಿದ್ದುದು–ಮುಂತಾಗಿ ವರ್ಣಿಸಲಾಗಿದೆ. ಆದರೆ ಮುಂದಿನ ೨೩ನೆಯ ಶ್ಲೋಕದಲ್ಲಿ **ಬಾಣೇ ಪ್ರವಿಷ್ಟಂ ಯೋಗಬಲೇನ ನಾಗಂ ಸೂತಪುತ್ರೋ ನ ಬುಬುಧೇ**–ಯೋಗಬಲದಿಂದ ನಾಗನು ಬಾಣದಲ್ಲಿ ಪ್ರವೇಶಿಸಿದ್ದುದನ್ನು ಕರ್ಣನು ತಿಳಿದಿರಲಿಲ್ಲ–ಎಂದಿದೆ. ೧೪ನೆಯ ಶ್ಲೋಕದಲ್ಲಿ ಬಾಣರೂಪವಾಗಿ ಅಶ್ವಸೇನನು ಬತ್ತಳಿಕೆಯಲ್ಲಿ ಸೇರಿಕೊಂಡನೆಂದು ಸ್ಪಷ್ಟವಾಗಿದೆ. ಸರ್ಪಾಸ್ತ್ರ ದೊಳಗೆ ಸೇರಿಕೊಂಡನೆಂದು ಎಷ್ಟೇ ಕಷ್ಟಪಟ್ಟರೂ ಅರ್ಥಮಾಡಲು ಸಾಧ್ಯ ವಾಗುವುದಿಲ್ಲ. ಮುಂದೆ ಅಶ್ವಸೇನನು ಸರ್ಪಾಸ್ತ್ರದಲ್ಲಿ ಸೇರಿಕೊಂಡನೆಂಬು ದನ್ನೇ ಆಧರಿಸಿ ಕಥೆಯನ್ನು ಬೆಳೆಸಲಾಗಿದೆ. ಅಶ್ವಸೇನನು ಸರ್ಪಾಸ್ತ್ರದಲ್ಲಿ ಸೇರಿಕೊಂಡುದನ್ನು ಕರ್ಣನು ಗಮನಿಸಲಿಲ್ಲ. ಇಂದ್ರನು ನೋಡಿ ಹೆದರಿ ದನು. ಆಗ ಬ್ರಹ್ಮನು–'**ಮಾ ವ್ಯಥಿಷ್ಠಾ ಜಯೇ ಶ್ರೀಃ**' 'ಹೆದರಬೇಡ ವಿಜಯಶ್ರೀಯು ಅರ್ಜುನನಿಗೇ ಲಭಿಸುತ್ತದೆ.' ಎನ್ನುತ್ತಾನೆ. ಹೀಗೆ ಕಥೆಯು ಬೆಳೆದುಕೊಂಡುಹೋಗುತ್ತದೆ. ೧೮ನೆಯ ಶ್ಲೋಕದಲ್ಲಿ ಸೂರ್ಯೇಂದ್ರರು ಕರ್ಣಾರ್ಜುನರ ಬೆವರಿದ ಮುಖಗಳನ್ನು ಒರೆಸಿದರು–ಎಂದೂ ಇದೆ. ಇವು ಗಳು ಸ್ವಲ್ಪ ಅಸಹಜವಾಗಿ ಕಾಣುತ್ತವೆ. ಭಂ.ರಿ.ಇನ್‌ಸ್ಟಿಟ್ಯೂಟಿನವರು ಪ್ರಕಟಿ ಸಿರುವ ಪುಸ್ತಕದಲ್ಲಿ–ಅಶ್ವಸೇನನು ಬಾಣವಾಗಿ ಬತ್ತಳಿಕೆಯೊಳಗೆ ನುಸುಳಿ ಕೊಂಡ ವಿಷಯವಾಗಲೀ, ಸರ್ಪಾಸ್ತ್ರದೊಳಗೆ ಸೇರಿಕೊಂಡ ವಿಷಯವಾಗಲೀ, ಇಂದ್ರನು ಭಯಪಟ್ಟ ವಿಷಯವಾಗಲೀ ಇರುವುದಿಲ್ಲ. ಕರ್ಣನು ಸರ್ಪಾಸ್ತ್ರ ವನ್ನು ಅನುಸಂಧಾನಮಾಡುತ್ತಾನೆ. ಆ ಸಮಯದಲ್ಲಿ ಶಲ್ಯನು 'ನೀನಿಟ್ಟಿ ರುವ ಗುರಿಯಿಂದ ಅರ್ಜುನನ ಕುತ್ತಿಗೆಯನ್ನು ಕತ್ತರಿಸಲು ಸಾಧ್ಯವಾಗು ವುದಿಲ್ಲ. ಗುರಿಯನ್ನು ಬದಲಾಯಿಸು'–ಎನ್ನುತ್ತಾನೆ. ಆದರೆ ಕರ್ಣನು ಶಲ್ಯನ

ಮಾತನ್ನು ಕೇಳುವುದಿಲ್ಲ. 'ನ ಸಂಧತ್ತೇ ದ್ವಿಃ ಶರಂ ಶಲ್ಯ ಕರ್ಣಃ = ಕರ್ಣನೆಂದಿಗೂ ಎರಡನೆಯ ಬಾರಿಗೆ ಗುರಿಯನ್ನಿಡುವುದಿಲ್ಲ' ಎನ್ನುತ್ತಾನೆ. ಇಟ್ಟ ಗುರಿಯಲ್ಲಿಯೇ ಸರ್ಪಾಸ್ತ್ರವನ್ನು ಪ್ರಯೋಗಿಸುತ್ತಾನೆ. ಆ ಸಮಯದಲ್ಲಿ ಶ್ರೀಕೃಷ್ಣನು ರಥವನ್ನೇ ಕೆಳಕ್ಕೆ ಮೆಟ್ಟಿಬಿಡುತ್ತಾನೆ. ರಥವು ಭೂಮಿಯೊಳಗೆ ಹುದುಗಿಕೊಳ್ಳುತ್ತದೆ. ಕುದುರೆಗಳು ಮೊಳಕಾಲುಗಳಲ್ಲಿ ನಿಂತುಕೊಳ್ಳುತ್ತವೆ. ಸರ್ಪಾಸ್ತ್ರವು ಅರ್ಜುನನ ಕಿರೀಟವನ್ನು ಹಾರಿಸಿಕೊಂಡು ಹೋಗುತ್ತದೆ. ಬಿದ್ದುಹೋದ ಕಿರೀಟದ ವರ್ಣನೆಯಿದೆ. ಅನಂತರ ಆ ಬಾಣವು ಮತ್ತೆ ಕರ್ಣನ ಬಳಿಗೆ ಹೋಗಿ ಪುನಃ ತನ್ನನ್ನು ಬಿಡುವಂತೆ ಪ್ರಾರ್ಥಿಸಿಕೊಳ್ಳುತ್ತದೆ. ಕರ್ಣನು ಆ ಸಮಯದಲ್ಲಿ ನೀನಾರೆಂದು ಪ್ರಶ್ನಿಸುತ್ತಾನೆ. ಅದು ತನ್ನ ಪೂರ್ವವೃತ್ತಾಂತವನ್ನು ಹೇಳಿ ಮತ್ತೊಮ್ಮೆ ಬಾಣದಲ್ಲಿ ಅನುಸಂಧಾನಮಾಡಿ ಬಿಟ್ಟುದಾದರೆ ಅರ್ಜುನನ ತಲೆಯನ್ನು ಖಂಡಿತವಾಗಿಯೂ ಕತ್ತರಿಸುವೆನೆಂದು ಅದು ಹೇಳುತ್ತದೆ. ಕರ್ಣನು ' ನ ಸಂದಧ್ಯಾಂ ದ್ವಿಃ ಶರಂ, ಒಂದೇ ಬಾಣವನ್ನು ಎರಡನೆಯ ಬಾರಿಗೆ ಅನುಸಂಧಾನಮಾಡುವುದಿಲ್ಲ' ಎಂದು ಅದನ್ನು ತಿರಸ್ಕರಿಸುತ್ತಾನೆ. ಈ ಕಥಾಭಾಗವು ಭಂ.ರಿ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿರುವುದಿಲ್ಲ. ಅನಂತರ ಆ ಬಾಣವು ತಾನಾಗಿಯೇ ಅರ್ಜುನನನ್ನು ಸಂಹರಿಸಲು ಹೋಗುತ್ತದೆ. ಆಗ ಶ್ರೀಕೃಷ್ಣನ ಮಾತಿನಂತೆ ಅರ್ಜುನನು ಅದನ್ನು ಕತ್ತರಿಸಿಹಾಕುತ್ತಾನೆ. ಈ ಸಮಯದಲ್ಲಿ ಶ್ರೀಕೃಷ್ಣನು ಅಶ್ವಸೇನನೇ ಬಾಣರೂಪದಲ್ಲಿರುವನೆಂದು ಹೇಳುತ್ತಾನೆ. ಈ ಸಂದರ್ಭವನ್ನು ಕ್ರೋಢೀಕರಿಸಿ ಹೀಗೆ ಹೇಳಬಹುದಾಗಿದೆ : ಅಶ್ವಸೇನನೇ ಸರ್ಪಾಸ್ತ್ರದ ರೂಪದಲ್ಲಿ ಬಹಳ ಹಿಂದೆಯೇ ಕರ್ಣನಲ್ಲಿ ಸೇರಿಕೊಂಡಿದ್ದನು. ಪ್ರಕೃತಸಮಯದಲ್ಲಿ ಬಂದು ಸೇರಿಕೊಳ್ಳಲಿಲ್ಲ. ಆದರೆ ಈ ವಿಷಯವು ಮಹಾಭಾರತದಲ್ಲಿ ಎಲ್ಲಿಯೂ ಬಂದಿಲ್ಲವಾದುದರಿಂದ ಇಲ್ಲಿದನ್ನು ಜೋಡಿಸಲಾಗಿದೆ. ಶ್ರೀಕೃಷ್ಣನ ಮಾತಿನಿಂದಲೇ ಇದು ಸ್ಪಷ್ಟವಾಗುತ್ತಿದ್ದುದರಿಂದ ವಿರೋಧಾಭಾಸಗಳಿರುವಂತೆ ಕಾಣುವ ಕಥೆಯ ಜೋಡಣೆ ಬೇಕಾಗಿರಲಿಲ್ಲ. ಈ ಪ್ರಕರಣದಲ್ಲಿ ಅಪೂರ್ವವೃತ್ತಗಳಿಂದ ಕೂಡಿರುವ ಮತ್ತು ಸಮಸ್ಯಾರೂಪವಾದ ಶ್ಲೋಕಗಳೂ ಇವೆ. ಶ್ಲೋಕಾರ್ಥವನ್ನು ಕಥಾಭಾಗದಲ್ಲಿಯೇ ವಿವರಿಸಿ ಹೇಳಲಾಗಿದೆ.

ಅನಂತರ ನೆಲಕ್ಕೆ ಹುದುಗಿಕೊಂಡಿದ್ದ ರಥವನ್ನು ಶ್ರೀಕೃಷ್ಣನೇ ತನ್ನ ಭುಜಗಳಿಂದ ಮೇಲಕ್ಕೆತ್ತುತ್ತಾನೆ. ಪುನಃ ಕರ್ಣಾರ್ಜುನರಿಗೆ ಭಯಂಕರವಾದ ಯುದ್ಧವಾಗುತ್ತದೆ. ಕರ್ಣನು ಬಹಳವಾಗಿ ಗಾಯಗೊಂಡು ಮೂರ್ಛಿತನಾಗುತ್ತಾನೆ. ಆ ಸಮಯದಲ್ಲಿ ಧರ್ಮಭೀರುವಾದ ಅರ್ಜುನನು ಕರ್ಣನನ್ನು ಸಂಹರಿಸಲು ಇಚ್ಛೆಪಡುವುದಿಲ್ಲ. ಆದರೆ ಶ್ರೀಕೃಷ್ಣನು ಕರ್ಣನನ್ನು ಸಂಹರಿಸಲು ಇದೇ ಸರಿಯಾದ ಸಮಯವೆಂದು ತಿಳಿಯಹೇಳುತ್ತಾನೆ. ಶ್ರೀಕೃಷ್ಣನು ಕೊಟ್ಟ ಸಲಹೆಗಾಗಿ ಅವನನ್ನು ಅಭಿನಂದಿಸಿ ಅರ್ಜುನನು ಕರ್ಣನ ಮೇಲೆ ಬಾಣಪ್ರಯೋಗಮಾಡಿದನೆಂದು ಇಲ್ಲಿ ಹೇಳಿದೆ. ಇಲ್ಲಿ ಅರ್ಜುನನು ಬಿಡುವ ಬಾಣಪ್ರಯೋಗದ ವೈಖರಿಯನ್ನು ನೋಡಿದರೆ ಮೂರ್ಛೆಹೊಂದಿದ್ದ ಕರ್ಣನು ಅಸುನೀಗಬೇಕಾಗಿದ್ದಿತು. ೬೯ನೆಯ ಶ್ಲೋಕದಲ್ಲಿ ಹೇಳಿರುವಂತೆ ಕರ್ಣನು ಧನುಸ್ಸನ್ನು ಕೈಬಿಟ್ಟು ಮೂರ್ಛೆತಳೆದಿದ್ದನು. ಅರ್ಜುನನು ಬಿಟ್ಟ ಬಾಣಗಳನ್ನು ನಿವಾರಣೆಮಾಡಿಕೊಳ್ಳಲು ಅವನಿಗೆ ಸಾಧ್ಯವಿರಲಿಲ್ಲ. ಹೀಗಿರುವಾಗ ಅವನು ಉಳಿಯುವುದೆಂತು? ಆದರೆ ಕರ್ಣನು ಪುನಃ ಧೈರ್ಯತಂದುಕೊಂಡು ಪಾರ್ಥನನ್ನೂ ಶ್ರೀಕೃಷ್ಣನನ್ನೂ ಹತ್ತಾರು ಬಾಣಗಳಿಂದ ಪ್ರಹರಿಸಿದನೆಂದು ೭೯ನೆಯ ಶ್ಲೋಕದಲ್ಲಿ ಹೇಳಿದೆ. ಈ ಪ್ರಕರಣವು ಒಂದೆರಡು ಕಾರಣಗಳಿಂದ ಅಸಂಗತವಾಗಿ ಕಾಣುತ್ತದೆ. ಶತ್ರುವಧೆಯನ್ನೇ ಮುಖ್ಯವಾಗಿಟ್ಟುಕೊಂಡು ಮೂರ್ಛೆತಳೆದಿರುವವನನ್ನು ಪ್ರಹರಿಸುವಂತೆ ಶ್ರೀಕೃಷ್ಣನು ಹೇಳಲಾರನು. ಮೂರ್ಛಿತನಾಗಿರುವಾಗ ಪ್ರಹರಿಸಿರುವ ಪ್ರಕರಣವು ಈವರೆಗೂ ಬಂದಿರುವುದಿಲ್ಲ. ಅರ್ಜುನನೂ ಮೂರ್ಛೆಗೊಂಡವನ ಮೇಲೆ ಬಾಣ ಪ್ರಯೋಗಮಾಡಿದನೆಂಬುದು ಅರ್ಜುನನ ವಿಷಯದಲ್ಲಿಯೂ ಸಲ್ಲದ ಮಾತಾಗುತ್ತದೆ. ಮೂರನೆಯದಾಗಿ ಬಾಣಗಳ ಮಳೆಗರೆದರೂ ಕರ್ಣನು ಸಾಯದಿರುವುದೂ ಇಲ್ಲಿ ಆಶ್ಚರ್ಯಕರವಾಗಿ ಕಾಣುತ್ತದೆ. ಈ ಕಾರಣಗಳಿಂದ ಇದು ಹೆಚ್ಚು ಪಾಠವಿರಬಹುದೆಂದು ಊಹಿಸಬಹುದಾಗಿದೆ. ಭಂ. ರಿ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿ ಈ ಆರು ಶ್ಲೋಕಗಳಲ್ಲಿ ಅಂತರ್ಗತವಾಗಿರುವ–ಕರ್ಣನು ಮೂರ್ಛಿತನಾದುದು, ಅರ್ಜುನನು ಬಾಣಪ್ರಯೋಗವನ್ನು ನಿಲ್ಲಿಸಿದುದು, ಶ್ರೀಕೃಷ್ಣನು ಶತ್ರುವನ್ನು ಕೊಲ್ಲಲು ಅದೇ ಸಮಯವೆಂದು ಸಲಹೆ ನೀಡಿದುದು, ಅರ್ಜುನನು ಸಲಹೆಗೆ ಕೃತಜ್ಞತೆಯನ್ನು ತೋರಿಸಿ ಕರ್ಣನ

ಮೇಲೆ ಬಾಣಗಳ ಮಳೆಗರೆಯುವುದು–ಈ ಪ್ರಕರಣವಿರುವುದಿಲ್ಲ. ಇದೇ ಸಮಂಜಸವಾಗಿ ಕಾಣುತ್ತದೆ.

ಕರ್ಣನ ತೋಳುಗಳ ಮಧ್ಯದಿಂದ ಹೊರಬರುತ್ತಿದ್ದ, ಮಹಾಸರ್ಪಗಳಂತೆ ದೇದೀಪ್ಯಮಾನವಾಗಿ ಕಾಣುತ್ತಿದ್ದ ಬಾಣಗಳನ್ನು ಅರ್ಜುನನ ಬಾಣಗಳು ಎಲ್ಲ ದಿಕ್ಕುಗಳಿಗೂ ಹೋಗಿ ನಾಶಗೊಳಿಸಿದುವು (೮೧). ಈ ಶ್ಲೋಕವಾದನಂತರ ಮತ್ತೊಂದು ಪ್ರಕರಣವು ಪ್ರಾರಂಭವಾಗುತ್ತದೆ. ಕರ್ಣನು ಹತ್ತು ಮತ್ತು ಆರು ಬಾಣಗಳಿಂದ ಕೃಷ್ಣಾರ್ಜುನರನ್ನು ಪ್ರಹರಿಸುತ್ತಾನೆ (೭೯). ಕಿರೀಟಿಯು ಮಹಾಸ್ತ್ರವೊಂದನ್ನು ಬಿಡಲು ಮನಸ್ಸುಮಾಡುತ್ತಾನೆ. **ರೌದ್ರಮಹಾಸ್ತ್ರಸಮ್ಭೃತಂ ಕ್ಷೇಪ್ತುಮಾನಾ ಮಹಾಮತಿಃ।** (೮೦). ಅದೃಶ್ಯನಾದ ಕಾಲಪುರುಷನು–ಭೂಮಿಯು ಕರ್ಣನ ರಥದ ಚಕ್ರವನ್ನು ನುಂಗುತ್ತದೆಂದು ಹೇಳುತ್ತಾನೆ (೮೧). ಮಹಾತ್ಮನಾದ ಪರಶುರಾಮನು ದಯಪಾಲಿಸಿದ್ದ ಭಾರ್ಗವಾಸ್ತ್ರವು ಕರ್ಣನ ಸ್ಮೃತಿಪಥದಿಂದ ಹೊರಟುಹೋಗುತ್ತದೆ. ಎಡಭಾಗದ ಚಕ್ರವನ್ನು ಭೂಮಿಯು ನುಂಗಿ ಹಾಕುತ್ತದೆ. (೮೨). ಬ್ರಾಹ್ಮಣನ ಶಾಪದಿಂದಾಗಿ ರಥವು ಸುತ್ತುತ್ತದೆ (?) ರಥಚಕ್ರವು ಭೂಮಿಯಲ್ಲಿ ಹುದುಗಿಕೊಳ್ಳುತ್ತದೆ. ಕರ್ಣನು ವಿಹ್ವಲನಾಗುತ್ತಾನೆ (೮೩). ೨೪ನೆಯ ಶ್ಲೋಕವು ಇದೇ ಅರ್ಥವನ್ನು ಕೊಡುತ್ತದೆ. ಪರಶುರಾಮನು ದಯಪಾಲಿಸಿದ್ದ ಅಸ್ತ್ರವು ಮರೆತುಹೋಗಲಾಗಿ, ಪಾರ್ಥನು ಸರ್ಪಾಸ್ತ್ರವನ್ನು ಕತ್ತರಿಸಿಹಾಕಲಾಗಿ ; ಕರ್ಣನು ನಿಂದಿಸುತ್ತಾ ಹೇಳುತ್ತಾನೆ. (ಧರ್ಮವೆಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು. ) ಮುಂದಿನ ಶ್ಲೋಕದಲ್ಲಿ ಕರ್ಣನು ಧರ್ಮವನ್ನು ನಿಂದನೆಮಾಡುತ್ತಾನೆ (೮೬). ಅರ್ಜುನನ ಬಾಣಗಳಿಂದ ಪೀಡಿತನಾಗುತ್ತಿದ್ದ ಕರ್ಣನು ಪುನಃ ಧರ್ಮವನ್ನೇ ನಿಂದಿಸುತ್ತಾನೆ (೮೭). ಇದು ಇಲ್ಲಿನ ಕಥಾಪ್ರಸಂಗ. ಇಷ್ಟು ಪ್ರಕರಣಗಳು ಹೆಚ್ಚಿನವೆಂದು ಊಹಿಸಲು ಶಕ್ಯವಿದೆ. ಕರ್ಣನ ರಥವನ್ನು ಭೂಮಿಯು ನುಂಗಿಹಾಕುವ ಪ್ರಸಂಗವು ಪುನಃ ಮುಂದೆ ಬರುತ್ತದೆ. ಎರಡು ಬಾರಿ ರಥಚಕ್ರವನ್ನು ಭೂಮಿಯು ನುಂಗುವುದಿಲ್ಲ. ಸರ್ಪಾಸ್ತ್ರವು ಪುನಃ ಅವನ ಬಳಿಗೆ ಬಂದರೂ ಕರ್ಣನು ಅದನ್ನು ಎರಡನೆಯ ಬಾರಿಗೆ ಬಿಡುವುದಿಲ್ಲ. ಅದು ವಿನಾಶಹೊಂದಿದನಂತರವೂ ಕರ್ಣನು ಧೈರ್ಯದಿಂದ ಯುದ್ಧಮಾಡು

ತ್ತಲೇ ಇರುತ್ತಾನೆ. ಆದುದರಿಂದ ಇಲ್ಲಿ ಅವನು ವಿಷಾದಪಟ್ಟನೆಂಬುವುದಕ್ಕೆ ಅರ್ಥವಿಲ್ಲ. ಕರ್ಣನೆಂದಿಗೂ ಧರ್ಮವನ್ನು ಹಳಿದವನಲ್ಲ. ಹಳಿಯುವವನೂ ಅಲ್ಲ. ಇದುವರೆಗೆ ಅಂತಹ ಪ್ರಕರಣವು ಬಂದಿರುವುದಿಲ್ಲ. ಮುಂದೆಯೂ ಅಂತಹ ಪ್ರಕರಣವೆಲ್ಲಿಯೂ ಕಾಣುವುದಿಲ್ಲ. ರಾಮನಿಂದ ಪಡೆದುಕೊಂಡ ಅಸ್ತ್ರಗಳು ವಿಸ್ಮರಣೆಹೊಂದಿದುವೆಂದು ಇಲ್ಲಿ ಹೇಳಿದೆ. ಆದರೆ ಮುಂದೆಯೂ ಕರ್ಣನು ಅನೇಕಮಹಾಸ್ತ್ರಗಳನ್ನು ಪ್ರಯೋಗಿಸುತ್ತಾನೆ. **ಬಲೇನಾಥ ಸ ಸಂಸ್ತಭ್ಯ ಬ್ರಹ್ಮಾಸ್ತ್ರಂ ಸಮುದೈರಯತ್** (೯೧) ಈ ಕಾರಣಗಳಿಂದ ಈ ಪ್ರಕರಣವು ಹೆಚ್ಚಿನ ಪಾಠವೆಂಬುದರಲ್ಲಿ ಸಂಶಯವಿಲ್ಲ. ೭೮ನೆಯ ಶ್ಲೋಕದಿಂದ ೮೭ನೆಯ ಶ್ಲೋಕದವರೆಗೆ ೯ ಶ್ಲೋಕಗಳನ್ನು ಬಿಟ್ಟು ಓದಿದರೆ ಅಸಂಗತಗಳು ಇರುವುದಿಲ್ಲ. ಕಥೆಯ ಓಟವೂ ಚೆನ್ನಾಗಿಯೇ ಇರುತ್ತದೆ. ಈ ೯ ಶ್ಲೋಕಗಳಲ್ಲಿ ಮೂರು ಶ್ಲೋಕಗಳು ಮಾತ್ರ ಭಂ. ರಿ. ಇನ್‌ಸ್ಟಿಟ್ಯೂಟಿ ನವರ ಪುಸ್ತಕದಲ್ಲಿದೆ. ಧರ್ಮವನ್ನು ನಿಂದಿಸಿದ ಶ್ಲೋಕಗಳು ಅವರ ಪುಸ್ತಕ ದಲ್ಲಿಯೂ ಇವೆ. ಕರ್ಣನಿಗೆ ಶಾಪದ ಅರಿವಿದೆ. ಅದನ್ನು ಈ ಹಿಂದೆಯೇ ಹೇಳಿದ್ದಾನೆ. ಶಾಪದಿಂದಲೇ ಅರ್ಥಾತ್ ಅಧರ್ಮದ ಕಾರಣದಿಂದಲೇ ತನಗೆ ಈ ದುಃಸ್ಥಿತಿ ಒದಗಿದೆಯೆಂಬುದು ಅವನಿಗೆ ತಿಳಿಯದೇ ಇಲ್ಲ. ಆದುದರಿಂದ ಧರ್ಮವನ್ನು ಅವನೆಂದಿಗೂ ನಿಂದಿಸಿಲ್ಲವೆಂಬುದು ನಿಶ್ಚಯ. ರಥಚಕ್ರವನ್ನು ಭೂಮಿಯು ನುಂಗಿರಲಾಗಿ–ಅಸ್ತ್ರಗಳು ಮರೆತುಹೋಗಲಾಗಿ-ಕೈಲಾಗದೇ ಧರ್ಮವನ್ನು ನಿಂದಿಸುತ್ತಿದ್ದವನು–ಪುನಃ ಇದ್ದಕ್ಕಿದ್ದಂತೆಯೇ ಬಾಣಗಳನ್ನೂ ಮಹಾಸ್ತ್ರಗಳನ್ನೂ ಅದ್ಭುತವಾದ ರೀತಿಯಲ್ಲಿ ಬಿಡಲು ಪ್ರಾರಂಭಿಸಿದನು– ಎಂದರೆ ಸ್ವಲ್ಪವೂ ಹೊಂದಿಕೊಳ್ಳುವುದಿಲ್ಲ. ಈ ಎಲ್ಲ ಕಾರಣಗಳಿಂದಲೂ ನಾವು ಈ ಪಾಠವು ಹೆಚ್ಚಿನದೆಂಬ ನಿರ್ಧಾರಕ್ಕೇ ಬಂದಿರುತ್ತೇವೆ. ಮುಂದೆ ಕರ್ಣನು ಬಾಣಗಳನ್ನು ಬಿಡುತ್ತಾನೆ. ೭೮ನೆಯ ಶ್ಲೋಕದಿಂದ ಮುಂದಕ್ಕೆ ಕರ್ಣನು ಬಾಣಬಿಡುವುದನ್ನು ಅನುವರ್ತನೆಮಾಡಿಕೊಳ್ಳಬೇಕು. ಅರ್ಥಾತ್ ಅವನ ರಥವು ಭೂಮಿಯಲ್ಲಿ ಹುದುಗಿಕೊಂಡಿರುವುದಿಲ್ಲ. ಅವನಿಗೆ ಅಸ್ತ್ರಗಳ ವಿಸ್ಮರಣೆಯೂ ಆಗಿರುವುದಿಲ್ಲ. ಇಲ್ಲಿಂದ ಮುಂದೆ ೧೦೧ನೆಯ ಶ್ಲೋಕದಲ್ಲಿ **ಚಕ್ರೇ ಚಾಪ್ಯಧಿಕಂ ಪಾರ್ಥಾತ್ ಸ್ವವೀರ್ಯಮತಿದರ್ಶಯನ್ ।** ಕರ್ಣನು

ತನ್ನ ವೀರ್ಯಾತಿಶಯವನ್ನು ಪ್ರದರ್ಶಿಸುತ್ತಾ ತಾನು ಪಾರ್ಥನಿಗಿಂತಲೂ ಅಧಿಕನೆಂಬುದನ್ನು ಕಾರ್ಯತಃ ತೋರಿಸುತ್ತಿದ್ದನು–ಎಂದಿದೆ. (ಪ್ರಕರಣವು ಹೀಗೆ ಮುಂದುವರಿದಿರುವಾಗ ಕರ್ಣನು ಕೈಲಾಗದೇ ಧರ್ಮವನ್ನು ನಿಂದಿಸಿದನೆಂದು ಊಹೆಮಾಡಲಾದರೂ ಸಾಧ್ಯವಾಗುವುದೇ? ಇಂತಹ ಅಪಪಾಠಗಳು ಹೇಗೆ ನುಸುಳಿ ಬಂದುವೆಂಬುದನ್ನು ಊಹಿಸಲೂ ಸಾಧ್ಯವಾಗುವುದಿಲ್ಲ.)

ಅರ್ಜುನನು ಪೀಡಿತನಾದುದನ್ನು ನೋಡಿ ಶ್ರೀಕೃಷ್ಣನು ಪುನಃ ಅರ್ಜುನನನ್ನು ಮಹಾಸ್ತ್ರವನ್ನು ಪ್ರಯೋಗಿಸುವಂತೆ ಪ್ರಚೋದಿಸುತ್ತಾನೆ. ನಾವು ಹೆಚ್ಚು ಪಾಠವೆಂದು ಬಗೆದಿರುವ ೮೦ನೆಯ ಶ್ಲೋಕವು ಇಲ್ಲಿ ಪುನರಾ ವರ್ತಿತವಾಗಿದೆ. ಆದರೆ ಇಲ್ಲಿ ಆ ಶ್ಲೋಕವು ಅನುಷ್ಟುಪ್ ಛಂದಸ್ಸಿನಲ್ಲಿದೆ. ತಾತ್ಪರ್ಯವೊಂದೇ ಆಗಿದೆ. ಅರ್ಜುನನು ಕರ್ಣನ ಮೇಲೆ ಮಹಾಸ್ತ್ರವನ್ನು ಬಿಡಲು ಮನಸ್ಸುಮಾಡಿದನು. **ಕ್ಷೇಪ್ತುಮನಾ ಮಹಾಮತಿಃ** (೮೦) ಆದರೆ ಇಲ್ಲಿ **ಕ್ಷೇಪ್ತುಕಾಮಃ ಕಿರೀಟವಾನ್** (೧೦೩) ಎಂಬುದಾಗಿ ಇಲ್ಲಿದೆ. ಈ ಸಂದರ್ಭದಲ್ಲಿ ಕರ್ಣನ ರಥದ ಚಕ್ರವನ್ನು ಭೂಮಿಯು ನುಂಗುತ್ತದೆ. ಅದ ರಿಂದ ಕರ್ಣನು ವಿಹ್ವಲನಾಗಿ ಧರ್ಮವನ್ನು ನಿಂದಿಸಹೋಗುವುದಿಲ್ಲ. ಕೆಳಕ್ಕಿ ಳಿದು ರಥಚಕ್ರವನ್ನು ಮೇಲೆತ್ತಲು ಪ್ರಯತ್ನಿಸುತ್ತಾನೆ. ಮೇಲೆತ್ತಲು ಸಾಧ್ಯ ವಾಗುವುದಿಲ್ಲ. ಆ ಸಮಯದಲ್ಲಿ ಅರ್ಜುನನು ಕರ್ಣನ ಮೇಲೆ ಮಹಾಸ್ತ್ರ ವನ್ನು ಪ್ರಯೋಗಮಾಡಲು ಉದ್ದೇಶಿಸಿರುತ್ತಾನೆ. ಅದನ್ನು ನೋಡಿದ ಕರ್ಣನು ಈ ಸಮಯದಲ್ಲಿ ಮಹಾಸ್ತ್ರವನ್ನು ಪ್ರಯೋಗಿಸದಿರುವಂತೆ ಅರ್ಜುನನಿಗೆ ಹೇಳುತ್ತಾನೆ. ಆ ಸಮಯದಲ್ಲಿ ಕರ್ಣನು ಹೇಳುವ ಮಾತು ಗಳು ಯುಕ್ತಿಯುಕ್ತವಾಗಿವೆ. ಧರ್ಮಸಮ್ಮತವಾಗಿರುವಂತೆ ಕಾಣುತ್ತವೆ. ಹಿಂದೆ ಕರ್ಣನು ಧರ್ಮವನ್ನು ಹಳಿದಿದ್ದರೆ ಧರ್ಮವನ್ನೇ ನಿರೂಪಿಸಿ ಅರ್ಜುನನಿಗೆ ಬಾಣ ಬಿಡದಿರುವಂತೆ ಹೇಳುತ್ತಿರಲಿಲ್ಲ. ಆದುದರಿಂದ ಕರ್ಣನು ಧರ್ಮದ ನಿಂದನೆಯನ್ನು ಮಾಡಿಲ್ಲವೆಂಬುದು ಇದರಿಂದಲೂ ಸ್ಪಷ್ಟವಾಗುತ್ತದೆ. ಕಡೆಯದಾಗಿ ಕರ್ಣನು 'ನೀನು ಕ್ಷತ್ರಿಯಕುಲದಲ್ಲಿ ಹುಟ್ಟಿರುವವನು ; ಕ್ಷತ್ರಿಯಕುಲದ ಕೀರ್ತಿಯನ್ನು ಹೆಚ್ಚಿಸುವವನು. ಆದುದರಿಂದ ಸ್ವಲ್ಪಹೊತ್ತು ಸುಮ್ಮನಿರೆಂದು ಹೇಳುತ್ತಿದ್ದೇನೆ. 'ನಿನಗಾಗಲೀ ವಾಸುದೇವನಿಗಾಗಲೀ ಹೆದರಿ

ನಾನು ಈ ಮಾತುಗಳನ್ನಾಡುತ್ತಿಲ್ಲ' (೧೧೯) ಎನ್ನುತ್ತಾನೆ ವೀರಕರ್ಣ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ಒಟ್ಟಿನಲ್ಲಿ ಈ ಅಧ್ಯಾಯವು ಸಮನ್ವಯ ಮಾಡಲಾಗದಂತಹ ಪ್ರಕರಣಗಳಿಂದ ತುಂಬಿಹೋಗಿದೆ. ಯಥಾಮತಿ ವಿಶ್ಲೇಷಿಸಿದ್ದೇವೆ. ವಿದ್ವಾಂಸರೇನಾದರೂ ವಿಷಯಗಳ ಮೇಲೆ ಬೆಳಕುಚೆಲ್ಲಿ ತಿಳಿಸುವುದಾದರೆ ಕೃತಜ್ಞತೆಯಿಂದ ಪ್ರಕಟಿಸುತ್ತೇವೆ. ನಾವು ಅನುವಾದಿಸು ತ್ತಿರುವ ಪುಸ್ತಕದಲ್ಲಿ ಈ ಅಧ್ಯಾಯದಲ್ಲಿ ೧೧೬ ಶ್ಲೋಕಗಳಿವೆ. ಭಂ.ರಿ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿ ಕೇವಲ ೬೫ ಶ್ಲೋಕಗಳಿವೆ.

೯೧ನೆಯ ಅಧ್ಯಾಯ :– ಈ ಅಧ್ಯಾಯದಲ್ಲಿ ಶ್ರೀಕೃಷ್ಣನು **ಕ್ವ ತೇ ಧರ್ಮಸ್ತದಾ ಗತಃ** ಎಂಬ ಪಲ್ಲವಿಯೊಡನೆ ಹಿಂದೆ ಕರ್ಣನು ಮಾಡಿದ್ದ ಕಾರ್ಯಗಳೆಲ್ಲವನ್ನೂ ಪಟ್ಟಿಮಾಡಿ ಹೇಳುತ್ತಾನೆ. ಹೀಗೆ ಹೇಳುವಾಗ **ಯದ್ಭೀಮಸೇನಂ ಸರ್ಪೈಶ್ಚ** ನಿನ್ನ ಸಲಹೆಯಂತೆ ದುರ್ಯೋಧನನು ಭೀಮಸೇನನನ್ನು ವಿಷಸರ್ಪಗಳಿಂದ ಕಡಿಸಿದನು. ವಿಷಪೂರ್ಣವಾದ ಭೋಜನವನ್ನು ಉಣಿಸಿದನು–ಎನ್ನುತ್ತಾನೆ ( ೫ ). ಆದರೆ ಆ ಸಂದರ್ಭ ದಲ್ಲಿ ಕರ್ಣನಿನ್ನೂ ಹಸ್ತಿನಾಪಟ್ಟಣಕ್ಕೆ ಬಂದಿರಲಿಲ್ಲ. ಈ ಶ್ಲೋಕವೂ ಮತ್ತು ಇಲ್ಲಿರುವ ಇನ್ನೂ ಹಲವಾರು ಶ್ಲೋಕಗಳೂ ಭಂ. ರಿಂ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿರುವುದಿಲ್ಲ. ಕೃಷ್ಣನ ಆ ಮಾತನ್ನು ಕೇಳಿದ ಕರ್ಣನು ಪ್ರತ್ಯುತ್ತರ ವನ್ನೇ ಕೊಡುವುದಿಲ್ಲ. ಕ್ರೋಧಯುಕ್ತನಾಗಿ ಪಾರ್ಥನೊಡನೆ ಪುನಃ ಯುದ್ಧದಲ್ಲಿ ತೊಡಗುತ್ತಾನೆ (೧೬). ಆದರೆ ಈ ಸಂದರ್ಭದಲ್ಲಿ ರಥಚಕ್ರ ವನ್ನೆತ್ತಲು ಕೆಳಗಿಳಿದಿದ್ದ ಕರ್ಣನು ಪುನಃ ರಥದ ಮೇಲೆ ಹತ್ತಿದನೆಂಬ ವಾಕ್ಯ ವಿಲ್ಲ. ಮುಂದೆ ಕೃಷ್ಣನು ಫಾಲ್ಗುಣನನ್ನು ಕುರಿತು ದಿವ್ಯಾಸ್ತ್ರದಿಂದ ಕರ್ಣನ ತಲೆಯನ್ನು ಕತ್ತರಿಸುವಂತೆ ಹೇಳುತ್ತಾನೆ ( ೧೭ ). ಶ್ರೀಕೃಷ್ಣನ ಮಾತು ಗಳನ್ನು ಕೇಳಿ ಅರ್ಜುನನು ಕರ್ಣನ ವಿಷಯದಲ್ಲಿ ಅತ್ಯಂತ ಕುಪಿತನಾಗು ತ್ತಾನೆ. ಅವನ ರೋಮರೋಮಗಳಿಂದಲೂ ಅಗ್ನಿಯ ಜ್ವಾಲೆಗಳು ಹೊರ ಹೊಮ್ಮುತ್ತವೆ (೧೯). ಕರ್ಣನು ಅರ್ಜುನನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಪುನಃ ರಥಚಕ್ರವನ್ನೆತ್ತಲು ಪ್ರಯತ್ನಿಸುತ್ತಾನೆ (೨೦). ಅರ್ಜು ನನು ಅದನ್ನು ಬ್ರಹ್ಮಾಸ್ತ್ರದಿಂದಲೇ ನಿರಸನಗೊಳಿಸಿ ಆಗ್ನೇಯಾಸ್ತ್ರವನ್ನು ಕರ್ಣನ ಮೇಲೆ ಪ್ರಯೋಗಿಸುತ್ತಾನೆ ( ೨೧ -೨೨ ). ಅನಂತರ ಕರ್ಣನು

ವಾರುಣಾಸ್ತ್ರದಿಂದ ಆಗ್ನೇಯಾಸ್ತ್ರವನ್ನು ಉಪಶಮನಗೊಳಿಸುತ್ತಾನೆ (೨೩). ಇಲ್ಲಿರುವ ಅನುಷ್ಟುಪ್ ಶ್ಲೋಕಗಳು ೬೯ನೆಯ ಅಧ್ಯಾಯದ ೧೭-೧೮-೧೯-೨೦-೨೧-೨೨-೨೩ನೇ ಶ್ಲೋಕಗಳ ಪುನರಾವರ್ತನೆಯೇ ಆಗಿವೆ. ಆದರೆ ಆ ಶ್ಲೋಕಗಳ ಛಂದಸ್ಸು ಮಾತ್ರ ಬೇರೆಯಾಗಿದೆ. ಆದರೆ ಈ ಸಂದರ್ಭದಲ್ಲಿಯೂ ಕರ್ಣನು ಪುನಃ ರಥಕ್ಕೆ ಹತ್ತಿ ಬಾಣಬಿಟ್ಟನೆಂಬ ವಿಷಯವಿಲ್ಲ. ಅನಂತರ ಕರ್ಣನು ಮಹಾಸ್ತ್ರವನ್ನು ಅರ್ಜುನನ ಮೇಲೆ ಪ್ರಯೋಗಿಸುತ್ತಾನೆ. ಆ ಮಹಾಸ್ತ್ರದ ಪ್ರಹಾರದಿಂದ ಅರ್ಜುನನು ವಿಸಂಜ್ಞನಾಗುತ್ತಾನೆ. ಗಾಂಡೀವ ಧನುಸ್ಸೂ ಕೈಯಿಂದ ಜಾರಿ ಕೆಳಕ್ಕೆ ಬೀಳುತ್ತದೆ. ಬಳಿಕ ಕರ್ಣನು ಪುನಃ ರಥದಿಂದಿಳಿದು ಚಕ್ರವನ್ನೆತ್ತಲು ಪ್ರಯತ್ನಿಸಿದನೆಂಬ ಶ್ಲೋಕವಿದೆ. ಆದರೆ ರಥಚಕ್ರವನ್ನೆತ್ತಲು ಅವನಿಗೆ ಸಾಧ್ಯವಾಗಲಿಲ್ಲ (೩೧). ಬಾಣವನ್ನು ಪ್ರಯೋಗಿಸಲು ಅಥವಾ ಮಹಾಸ್ತ್ರಗಳನ್ನು ಅರ್ಜುನನ ಮೇಲೆ ಬಿಡಲು ರಥಕ್ಕೆ ಹತ್ತಿದನೆಂಬ ವಾಕ್ಯವು ಎಲ್ಲಿಯೂ ಕಾಣದಿದ್ದರೂ ಬಾಣಗಳನ್ನೂ ಅಸ್ತ್ರಗಳನ್ನೂ ಪ್ರಯೋಗಿಸಿದನಂತರ ಪುನಃ ರಥಚಕ್ರವನ್ನೆತ್ತಲು ಕೆಳಕ್ಕಿಳಿದನೆಂಬ ವಾಕ್ಯಗಳಿವೆ. **ಪುನರ್ಯತ್ನಮಕರೋದ್ರಥಸರ್ಜನೇ ॥** (೨೦) **ತದನ್ತರಂ ಪ್ರಾಪ್ಯ ವೃಷೋ ಮಹಾರಥೋ ರಥಾಙ್ಗಮುರ್ವೀಗತಮುಜ್ಜಿಹೀರ್ಷುಃ । ರಥಾದವಪ್ಲುತ್ಯ** (೩೧) ಇಲ್ಲೊಂದು ಪ್ರಶ್ನೆಯೇಳುತ್ತದೆ. ರಥಚಕ್ರವು ಭೂಮಿಗೆ ಹುದುಗಿಹೋಗಿದ್ದರೂ ಯುದ್ಧಮಾಡುವ ಸಾಧ್ಯತೆಯಿದ್ದುದಾದರೆ ಕರ್ಣನೇಕೆ ಅರ್ಜುನನನ್ನು ಸ್ವಲ್ಪಹೊತ್ತು ಸುಮ್ಮನಿರಲು ಹೇಳುತ್ತಿದ್ದನು? ಪರಶುರಾಮನ ಶಾಪವಿತ್ತೆಂದೂ, ಅವಸಾನಕಾಲದಲ್ಲಿ ಬ್ರಹ್ಮಾಸ್ತ್ರವು ಅವನ ಸ್ಮರಣೆಗೆ ಬರುವುದಿಲ್ಲವೆಂದೂ ಹಿಂದಿನ ಪ್ರಕರಣದಲ್ಲಿಯೇ ಬಂದಿರುತ್ತದೆ. ಆದರೆ ಈ ಸಂದರ್ಭದಲ್ಲಿಯೂ ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಉಲ್ಲೇಖವಿದೆ (೨೦). ಇದರಿಂದಾಗಿ ವಸ್ತುತಃ ಕರ್ಣನಿಗೆ ಪರಶುರಾಮನ ಶಾಪವಾಗಲೀ ಬ್ರಾಹ್ಮಣನ ಶಾಪವಾಗಲೀ ಯಾವ ತೊಂದರೆಯನ್ನೂ ಉಂಟುಮಾಡಲಿಲ್ಲವೆಂದು ಈ ಪ್ರಕರಣದಿಂದ ಭಾಸವಾಗುತ್ತದೆ. ರಥದಲ್ಲಿ ಕುಳಿತು ಕ್ಷಣ-ಕ್ಷಣಕ್ಕೂ ಅರ್ಜುನನ ಮೇಲೆ ಮಹಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದವನು ಮೂರನೆಯ ಬಾರಿ ಕೆಳಗಿಳಿದಾಗ ಏಕೆ ಪುನಃ ಮಹಾಸ್ತ್ರಗಳ ಪ್ರಯೋಗವನ್ನು ಮಾಡಲಿಲ್ಲ? ಈ ಮಧ್ಯದಲ್ಲಿ ಕರ್ಣನ ಧ್ವಜವನ್ನು ಅರ್ಜು

ನನು ಕತ್ತರಿಸಿದ ಪ್ರಕರಣವಿದೆ. ಆದರೂ ಕರ್ಣನು ಎಚ್ಚರಗೊಳ್ಳಲಿಲ್ಲವೇ? ಎರಡು ಬಾರಿ ರಥವನ್ನು ಹತ್ತಿ ಮಹಾಸ್ತ್ರವನ್ನು ಪ್ರಯೋಗಿಸಿ ಅರ್ಜುನನನ್ನು ಮೂರ್ಛೆಗೊಳಿಸಿದ ಧೀರನು ಮೂರನೆಯ ಬಾರಿಯೂ ಹಾಗೆಯೇ ಮಾಡಬಹುದಾಗಿತ್ತಲ್ಲವೇ?–ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕುವುದು ಬಹಳ ಕಷ್ಟವೇ ಸರಿ. ಸಂಶಯವನ್ನು ಪರಿಹರಿಸುವುದಕ್ಕೆ ಆಗದ ರೀತಿಯಲ್ಲಿ ಶ್ಲೋಕಗಳು ಸೇರಿಹೋಗಿವೆ. ರಥಚಕ್ರವು ಹುದುಗಿಹೋಗಿದ್ದರೂ ಯುದ್ಧ ಮಾಡುವ ಸಾಧ್ಯತೆಯಿದ್ದಿದ್ದರೆ ಕರ್ಣನು ಅರ್ಜುನನನ್ನು ಸ್ವಲ್ಪಹೊತ್ತು ಸುಮ್ಮನಿರುವಂತೆ ಕೇಳಿಕೊಳ್ಳುತ್ತಿರಲಿಲ್ಲ. ಆದುದರಿಂದ ಕರ್ಣನಿಗೆ ಮುಂದೆ ಯುದ್ಧಮಾಡಲು ಸಾಧ್ಯವಾಗಲಿಲ್ಲ. ಚಕ್ರವನ್ನೆತ್ತುವ ಪ್ರಯತ್ನದಲ್ಲಿಯೇ ಅವನಿದ್ದನು–ಎಂಬುದನ್ನು ಆಧರಿಸಿ ಸೇರಿಹೋಗಿರುವ ಹೆಚ್ಚು ಶ್ಲೋಕಗಳನ್ನು ಪ್ರಕ್ಷಿಪ್ತವೆಂದೇ ಹೇಳಬೇಕಾಗುತ್ತದೆ. ಅದಕ್ಕೆ ಮೊದಲು ಮತ್ತೊಂದು ಪ್ರಕರಣವನ್ನು ವಿಶ್ಲೇಷಿಸುವ ಅಗತ್ಯವಿದೆ. ಕರ್ಣನ ಬಾಣಗಳಿಂದ ಗಾಢವಾಗಿ ಗಾಯಗೊಂಡ ಅರ್ಜುನನ ತಲೆಯು ತಿರುಗುತ್ತದೆ. ಗಾಂಡೀವವು ಕೈಯಿಂದ ಜಾರುತ್ತದೆ. ಮೂರ್ಛಿತನೇ ಆಗುತ್ತಾನೆ (೩೦). ಸ್ವಲ್ಪಹೊತ್ತು ಕಳೆದನಂತರ ಕಿರೀಟಿಯು ಎಚ್ಚರಗೊಂಡು ಯಮದಂಡರೂಪವಾದ ಅಂಜಲಿಕವೆಂಬ ಬಾಣವನ್ನು ಕೈಗೆತ್ತಿಕೊಳ್ಳುತ್ತಾನೆ. ಆ ಸಮಯದಲ್ಲಿ ಶ್ರೀಕೃಷ್ಣನು–ಶತ್ರುವು ಪುನಃ ರಥವನ್ನು ಹತ್ತುವುದರೊಳಗಾಗಿ ಅದೇ ಬಾಣದಿಂದಲೇ ಅವನ ತಲೆಯನ್ನು ಕತ್ತರಿಸು–ಎನ್ನುತ್ತಾನೆ (೩೩). ಅರ್ಜುನನು ಶ್ರೀಕೃಷ್ಣನ ಮಾತನ್ನು ಶ್ಲಾಘಿಸುತ್ತಾ ಅದೇ ಬಾಣದಿಂದ ಕರ್ಣನ ಧ್ವಜವನ್ನು ಪ್ರಹರಿಸುತ್ತಾನೆ. (ಕರ್ಣನನ್ನು ಪ್ರಹರಿಸುವುದಿಲ್ಲ.) ಕರ್ಣನ ಧ್ವಜವು ಕೆಳಕ್ಕೆ ಬಿದ್ದುಹೋದ ವರ್ಣನೆಯು ಮುಂದಿನ ೫ ಶ್ಲೋಕಗಳಲ್ಲಿ ಬರುತ್ತದೆ. ಶ್ರೀಕೃಷ್ಣನು ಕರ್ಣನ ಶಿರಸ್ಸನ್ನು ಕತ್ತರಿಸುವಂತೆ ಹೇಳುತ್ತಾನೆ. ಅರ್ಜುನನು ಕರ್ಣನನ್ನು ಸಂಹರಿಸುವುದಕ್ಕೆ ಬದಲಾಗಿ ಅವನ ಧ್ವಜವನ್ನು ಅಂಜಲಿಕವೆಂಬ ಅಸ್ತ್ರದಿಂದ ಕೆಳಕ್ಕೆ ಕೆಡುವುತ್ತಾನೆ. ಆದರೆ ಇದಕ್ಕೆ ಕರ್ಣನ ಪ್ರತಿಕ್ರಿಯೆಯೇನೂ ಇಲ್ಲ. ಇವಿಷ್ಟು ಇಲ್ಲಿ ಗಮನಿಸಬೇಕಾದ ಅಂಶಗಳು. ಮುಂದೆ ಅರ್ಜುನನು ಬಹಳ ತ್ವರೆಯಿಂದ ಅಂಜಲಿಕವೆಂಬ ಅಸ್ತ್ರವನ್ನು ಬತ್ತಳಿಕೆಯಿಂದ ತೆಗೆದನೆಂದು ಹೇಳಿದೆ. (೪೦) ಅಂಜಲಿಕಗಳೆಂಬ

ಎರಡು ಅಸ್ತ್ರಗಳಿದ್ದುವೇ? ಅಥವಾ ಕರ್ಣನ ಧ್ವಜವನ್ನು ಕೆಡುಹಿದ ಅಂಜಲಿಕವು ಪುನಃ ಅರ್ಜುನನ ಬತ್ತಳಿಕೆಯೊಳಗೆ ಸೇರಿಕೊಂಡಿತ್ತೇ?–ಈ ಪ್ರಕರಣವು ಸ್ವಲ್ಪ ಅಸಂಗತವಾಗಿಯೇ ಕಾಣುತ್ತದೆ. ಈ ಸಮಸ್ಯೆಗಳಿಗೆ ನಮ್ಮ ಸಮಾಧಾನವು ಈ ರೀತಿಯಾಗಿದೆ : ಬ್ರಾಹ್ಮಣನ ಶಾಪದ ಪರಿಣಾಮವಾಗಿ ಭೂಮಿಯು ಕರ್ಣನ ರಥಚಕ್ರವನ್ನು ನುಂಗಿದನಂತರ ಯುದ್ಧಮಾಡಲು ಸಾಧ್ಯವಾಗದೇ ಕರ್ಣನು ರಥದಿಂದ ಕೆಳಕ್ಕಿಳಿದು ಚಕ್ರವನ್ನೆತ್ತಲು ಪ್ರಯತ್ನಿಸುತ್ತಾನೆ. ಆ ಸಮಯದಲ್ಲಿ ನೆಲದ ಮೇಲಿರುವವನ ಮೇಲೆ, ರಥದಲ್ಲಿ ಕುಳಿತಿರುವವನು ಬಾಣಬಿಡುವುದು ಯುಕ್ತವಲ್ಲವೆಂದೂ ಚಕ್ರವನ್ನು ಮೇಲಕ್ಕೆತ್ತುವವರೆಗೆ ಸುಮ್ಮನಿರಬೇಕೆಂದೂ–ಕರ್ಣನು ಅರ್ಜುನನಿಗೆ ಹೇಳುತ್ತಾನೆ (೯೦ನೆಯ ಅಧ್ಯಾಯ) ಶ್ರೀಕೃಷ್ಣನು ಕರ್ಣನ ಮಾತನ್ನು ಹೀಯಾಳಿಸುತ್ತಾನೆ. (೯೧ನೆಯ ಅಧ್ಯಾಯ-೧-೧೪) ಕರ್ಣನು ಲಜ್ಜಾನ್ವಿತನಾಗಿ ಯಾವ ಉತ್ತರವನ್ನೂ ಹೇಳುವುದಿಲ್ಲ. (೧೫) ಈ ಶ್ಲೋಕದಲ್ಲಿ ನಾಚಿಕೆಪಟ್ಟುಕೊಂಡನೆಂದು ಹೇಳಿ ಮುಂದಿನ ಶ್ಲೋಕದಲ್ಲಿಯೇ ಕ್ರುದ್ಧನಾಗಿ ಅರ್ಜುನನೊಡನೆ ಕರ್ಣನು ಯುದ್ಧಮಾಡಿದನೆಂದು ಹೇಳಿದೆ. (೧೬) ಇದು ಸಂಗತವಾಗಿ ಕಾಣುವುದಿಲ್ಲ. ಆದುದರಿಂದ ಇದಕ್ಕೆ ಸಂಬಂಧಿಸಿದಂತೆ ೧೬ ಮತ್ತು ೧೭ನೆಯ ಶ್ಲೋಕಗಳು ಹೆಚ್ಚು ಪಾಠವೆಂಬುದು ನಮ್ಮ ಅಭಿಪ್ರಾಯ. ಸಂಜಯನು ಶ್ರೀಕೃಷ್ಣನ ಮಾತಿಗೆ ಕರ್ಣನ ಪ್ರತಿಕ್ರಿಯೆಯನ್ನು ಹೇಳಿದಂತೆ ಅರ್ಜುನನ ಪ್ರತಿಕ್ರಿಯೆಯೇನೆಂಬುದನ್ನೂ ೧೮ ಮತ್ತು ೧೯ನೆಯ ಶ್ಲೋಕಗಳಲ್ಲಿ ಹೇಳುತ್ತಾನೆ. 'ಶ್ರೀಕೃಷ್ಣನಿಂದ ಹೀಗೆ ಹೇಳಲ್ಪಟ್ಟ ಅರ್ಜುನನು ಕರ್ಣನ ವಿಷಯದಲ್ಲಿ ಅತ್ಯಂತಕುಪಿತನಾಗುತ್ತಾನೆ. ಹಿಂದೆ ಕರ್ಣನು ಮಾಡಿದುದೆಲ್ಲವನ್ನೂ ಸ್ಮರಿಸುತ್ತಿದ್ದ ಅರ್ಜುನನನ್ನು ಘೋರವಾದ ಕ್ರೋಧವು ಆವರಿಸುತ್ತದೆ. ಕ್ರುದ್ಧನಾದ ಅರ್ಜುನನ ರೋಮ-ರೋಮಗಳಿಂದಲೂ ಎಲ್ಲ ರಂಧ್ರಗಳಿಂದಲೂ ಅಗ್ನಿಯ ಜ್ವಾಲೆಗಳು ಹೊರಹೊಮ್ಮುತ್ತವೆ. ಅದು ಎಲ್ಲರಿಗೂ ಪರಮಾದ್ಭುತವಾಗಿ ಕಂಡಿತು.' ಇದು ಆ ಸಮಯದಲ್ಲಿ ಅರ್ಜುನನ ಸ್ವಾಭಾವಿಕವಾದ ಪ್ರತಿಕ್ರಿಯೆಯಾಗಿದೆ. ಇಷ್ಟು ಕುಪಿತನಾದುದಕ್ಕೆ ಪ್ರಯೋಜನವೇನು? ಮುಂದಿನ ಶ್ಲೋಕದಲ್ಲಿ–' ಅದನ್ನು ನೋಡಿದ

ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಕಟಪಡಿಸಿ ಅರ್ಜುನನ ಮೇಲೆ ಬಾಣಗಳ ಮಳೆಗರೆಯುತ್ತಾ ಪುನಃ ರಥವನ್ನು ಮೇಲೆತ್ತುವ ಪ್ರಯತ್ನವನ್ನು ಮುಂದುವರಿಸಿದನು–ಎಂದಿದೆ. (೨೦) ಈ ಶ್ಲೋಕವು ಅರ್ಜುನನ ಮಹಾ ಕೋಪದ ಪ್ರಯೋಜನವನ್ನು ಹೇಳುವುದಾಗಿಲ್ಲ. ಅವಸಾನಕಾಲದಲ್ಲಿ ಕರ್ಣನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನೆಂಬುದೂ ಅಸಹಜವಾಗಿ ಕಾಣುತ್ತದೆ. ಕರ್ಣನು ಪುನಃ ರಥಕ್ಕೆ ಹತ್ತಿದನೇ? ಕೆಳಗೇ ನಿಂತುಕೊಂಡೇ ಬಾಣ ಬಿಟ್ಟನೇ?–ಎಂಬುದನ್ನು ಇಲ್ಲಿ ಹೇಳಿಲ್ಲ. ಚಕ್ರವು ಭೂಮಿಯೊಳಗೆ ಹುದುಗಿಕೊಂಡಿದ್ದಿದ್ದರೂ ಯುದ್ಧಮಾಡುವ ಸಾಧ್ಯತೆಯಿದ್ದುದಾದರೆ ಕರ್ಣನು ಚಕ್ರವನ್ನು ಮೇಲಕ್ಕೆತ್ತುವ ಪ್ರಯತ್ನದಲ್ಲಿ ತೊಡಗಿ ಪ್ರಾಣಾರ್ಪಣೆ ಮಾಡುತ್ತಿರಲಿಲ್ಲ. ಆದುದರಿಂದ ಇದಕ್ಕೆ ಸಂಬಂಧಿಸಿರುವಂತೆ ಬಂದಿರುವ ೨೦ನೆಯ ಶ್ಲೋಕದಿಂದ ೩೯ನೆಯ ಶ್ಲೋಕದವರೆಗಿನ ಶ್ಲೋಕಗಳು ಪ್ರಕ್ಷಿಪ್ತಗಳೆಂಬುದು ನಮ್ಮ ಅಭಿಪ್ರಾಯವಾಗಿದೆ. ಅರ್ಜುನನ ಮಹಾಕೋಪದ ಪರಿಣಾಮವೇನೆಂಬುದನ್ನು ೪೦ನೆಯ ಶ್ಲೋಕವು ಹೇಳುತ್ತದೆ.

ಅಥ ತ್ವರನ್ಕರ್ಣವಧಾಯ ಪಾರ್ಥೋ
ಮಹೇನ್ದ್ರವಜ್ರಾನಿಲದಣ್ಡಸಂನಿಭಮ್ ।
ಆದತ್ತ ಚಾಥಾಞ್ಜಲಿಕಂ ನಿಷಙ್ಗಾ-
ತ್ಸಹಸ್ರರಶ್ಮೇರಿವ ರಶ್ಮಿಮುತ್ತಮಮ್ ॥೪೦॥

ಅತ್ಯಂತಕ್ರುದ್ಧನಾಗಿದ್ದ ಪಾರ್ಥನು ಕರ್ಣನ ವಧೆಗಾಗಿ ತ್ವರೆಮಾಡುತ್ತಾ ಮಹೇಂದ್ರನ ವಜ್ರಾಯುಧ, ಅಗ್ನಿದಂಡ ಮತ್ತು ಸೂರ್ಯನ ಶ್ರೇಷ್ಠವಾದ ಕಿರಣ–ಇವುಗಳಿಗೆ ಸಮಾನವಾಗಿದ್ದ ಅಂಜಲಿಕವೆಂಬ ಬಾಣವನ್ನು ಬತ್ತಳಿಕೆ ಯಿಂದ ಹೊರತೆಗೆದನು.

ಹೀಗೆ ಮಾಡುವ ಕಥಾನುವರ್ತನೆಯು ಸ್ವಾರಸ್ಯವಾಗಿಯೂ ಸಾಂಗತ್ಯ ದಿಂದ ಕೂಡಿಯೂ ಇರುತ್ತದೆ. ವಿರೋಧಾಭಾಸಗಳಿಂದ ವಿಹೀನವಾಗಿರು ತ್ತದೆ. ಇದರಿಂದ ಗ್ರಂಥಕ್ಕೆ ಅಪಚಾರವಾಗುವುದಿಲ್ಲ.

ಮುಂದೆ ಅರ್ಜುನನು ಅಂಜಲಿಕವೆಂಬ ಮಹಾಸ್ತ್ರದಿಂದ ಕರ್ಣನ ತಲೆ

ಯನ್ನು ಹಾರಿಸುತ್ತಾನೆ. ಇಲ್ಲಿ ಬರುವ ವರ್ಣನೆಯು ಬಹಳ ಸುಂದರವಾಗಿದೆ. ಕರ್ಣನ ವಧೆಯೊಡನೆ ಅಧ್ಯಾಯವು ಮುಗಿಯುತ್ತದೆ.

೯೨ನೆಯ ಅಧ್ಯಾಯ :– ಕರ್ಣನು ಹತನಾದನಂತರ ಎರಡೂ ಪಕ್ಷಗಳ ಸೈನಿಕರಲ್ಲಾದ ಪ್ರತಿಕ್ರಿಯೆಯನ್ನು ಈ ಅಧ್ಯಾಯದಲ್ಲಿ ವರ್ಣಿಸಿದೆ. ಇಲ್ಲಿ ಗಮನಿಸಬೇಕಾದ ಒಂದಂಶವಿದೆ. ಶಲ್ಯನು ಕರ್ಣನ ರಥವನ್ನೇ ನಡೆಸಿಕೊಂಡು ಹೋಗುತ್ತಾನೆ. ರಥಚಕ್ರವನ್ನು ಮೇಲಕ್ಕೆತ್ತಿದ ಪ್ರಕರಣವು ಬರುವುದಿಲ್ಲ. ಕರ್ಣನ ಪ್ರಾಣಾಪಹಾರದೊಡನೆ ಬ್ರಾಹ್ಮಣನ ಶಾಪದಂತೆ ರಥಚಕ್ರವನ್ನು ನುಂಗಿದ್ದ ಭೂಮಿಯು ರಥಚಕ್ರವನ್ನು ಮೇಲಕ್ಕೆ ತಳ್ಳಿಬಿಟ್ಟಿತೆಂದು ಹೇಳ ಬಹುದಾಗಿದೆ.

ಶಲ್ಯನು ದುರ್ಯೋಧನನಿಗೆ ಸಮಾಧಾನಹೇಳುತ್ತಾನೆ. ಆದರೆ ದುರ್ಯೋಧನನಿಗೆ ಸಮಾಧಾನವಾಗುವುದಿಲ್ಲ. ಅವನು ಬಹಳ ದುಃಖಿತನಾಗಿ ನಿಟ್ಟುಸಿರುಬಿಡುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೯೩ನೆಯ ಅಧ್ಯಾಯ :– ಕರ್ಣಪರ್ವದ ಈ ಅಧ್ಯಾಯವೂ ಶಲ್ಯಪರ್ವದ ೩ನೆಯ ಅಧ್ಯಾಯವೂ ಸಾಮಾನ್ಯವಾಗಿ ಒಂದೇ ಆಗಿರುತ್ತದೆ. ಭಂ. ರಿ.ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿ ಕರ್ಣಪರ್ವದಲ್ಲಿ ೯೩ನೇ ಈ ಅಧ್ಯಾಯವಿಲ್ಲ. ೯೨ನೆಯ ಅಧ್ಯಾಯವು ೯೪ನೆಯ ಅಧ್ಯಾಯದೊಡನೆ ಸೇರಿಯೇ ಆ ಪುಸ್ತಕದಲ್ಲಿ ಮುಂದುವರಿದಿದೆ. ಸಂದರ್ಭವೂ ಸಹ ಹಾಗೆಯೇ ಇದೆ. ಶಲ್ಯ-ದುರ್ಯೋಧನರ ಮಾತು ಮುಂದುವರಿಯುತ್ತದೆ. ಕೌರವಸೈನಿಕರು ದಿಕ್ಕಾಪಾಲಾಗಿ ಓಡುತ್ತಿರುತ್ತಾರೆ. ಅದನ್ನು ನೋಡಿದ ದುರ್ಯೋಧನನು ತಾನೇ ಕೌರವರೊಡನೆ ಯುದ್ಧಮಾಡಿ ಕೃಷ್ಣಾರ್ಜುನ-ಭೀಮಸೇನರನ್ನು ಸಂಹರಿಸಿ ಕರ್ಣನ ಋಣದಿಂದ ಮುಕ್ತನಾಗುವೆನೆಂದು ಸಾರಥಿಯೊಡನೆ ಹೇಳುತ್ತಾನೆ. ಇಪ್ಪತ್ತೈದು ಸಾವಿರ ಮಂದಿ ಕೌರವಯೋಧರು ಯುದ್ಧಸನ್ನದ್ಧರಾಗಿರುತ್ತಾರೆ. ಅವರೆಲ್ಲರನ್ನೂ ಭೀಮಸೇನನೊಬ್ಬನೇ ಗದಾಪಾಣಿಯಾಗಿ ಸಂಹರಿಸುತ್ತಾನೆ. **ಅವಧೀತ್ತಾವಕಾನ್ಸರ್ವಾನ್** (೨೫) ಮತ್ತೊಂದು ವಿಭಾಗದಲ್ಲಿ ಅರ್ಜುನನು ಯುದ್ಧಮಾಡುತ್ತಿರುತ್ತಾನೆ. ನಕುಲ-ಸಹದೇವರೂ ಮತ್ತು ಸಾತ್ಯಕಿಯೂ ಶಕುನಿಯನ್ನು ಆಕ್ರಮಿಸುತ್ತಾರೆ. ಅರ್ಜುನನನ್ನು ನೋಡಿದೊಡ

ನೆಯೇ ಕೌರವಸೈನಿಕರು ಪಲಾಯನಮಾಡುತ್ತಾರೆ. ಇಲ್ಲಿಯೂ ಸಹ ಇಪ್ಪತ್ತೈದು ಸಾವಿರ ಕಾಲಾಳುಗಳು ಹತರಾದರು ಎಂದಿದೆ. (೩೪) ಮುಂದಿನ ಶ್ಲೋಕದಲ್ಲಿ ಮಹಾರಥನಾದ ಧೃಷ್ಟದ್ಯುಮ್ನನು ಅವರೆಲ್ಲರನ್ನೂ ಸಂಹಾರ ಮಾಡಿದನು–ಎಂದಿದೆ. **ಹತ್ವಾ ತಾನ್ಪುರುಷವ್ಯಾಘ್ರಃ ಪಾಞ್ಚಾಲಾನಾಂ ಮಹಾರಥಃ**(೩೫). ಅರ್ಜುನ-ಭೀಮಧ-ಧೃಷ್ಟದ್ಯುಮ್ನರು ಇಪ್ಪತ್ತೈದು ಸಾವಿರ ಕಾಲಾಳುಗಳನ್ನು ಸಂಹರಿಸಿದರೆಂದು ಅರ್ಥಮಾಡಬೇಕಾಗುತ್ತದೆ. ಎಲ್ಲ ರಂಗ ಗಳಲ್ಲಿಯೂ ಕೌರವರು ಪರಾಜಿತರಾಗಿ ಪಲಾಯನಮಾಡುತ್ತಾರೆ. ಆ ಸಮಯದಲ್ಲಿ ದುರ್ಯೋಧನನೊಬ್ಬನೇ ಶೌರ್ಯದಿಂದ ಯುದ್ಧಮಾಡು ತ್ತಾನೆ. ಬಹಳವಾಗಿ ಗಾಯಗೊಂಡು ಓಡಿಹೋಗುತ್ತಿದ್ದ ಸೈನಿಕರನ್ನು ಹುರಿದುಂಬಿಸಿ ಯುದ್ಧಕ್ಕೆ ಹಿಂದಿರುಗುವಂತೆ ಹೇಳುತ್ತಾನೆ. ಭೀಷ್ಮ-ದ್ರೋಣ-ಕರ್ಣರು ಮೃತರಾದರೂ ದುರ್ಯೋಧನನಿಗೆ ತಾನು ಪಾಂಡವರನ್ನು ಜಯಿಸಿಯೇ ತೀರುವೆನೆಂಬ ಅಭಿಮಾನವಿರುತ್ತದೆ.

**ಅಲ್ಪಂ ಚ ಬಲಮೇತೇಷಾಂ ಕೃಷ್ಣೌ ಚ ಭೃಶವಿಕ್ಷತೌ । ಅದ್ಯ ಸರ್ವಾನ್ಹನಿಷ್ಯಾಮಿ ಧ್ರುವೋ ಹಿ ವಿಜಯೋ ಭವೇತ್** (೫೩) ದುರ್ಯೋಧನನು ಎಷ್ಟೇ ಧೈರ್ಯಹೇಳಿದರೂ **ಅನವೇಕ್ಷ್ಯೈವ ತದ್ವಾಕ್ಯಂ ಪ್ರಾದ್ರವನ್ಸರ್ವತೋ ದಿಶಃ** (೬೦) ಅವನ ಮಾತನ್ನು ಗಮನಕ್ಕೆ ತೆಗೆದು ಕೊಳ್ಳದೇ ಕೌರವಸೈನಿಕರು ಪಲಾಯನಮಾಡಿದರು. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ. ಶಲ್ಯಪರ್ವದಲ್ಲಿ ಎರಡನೆಯ ಅಧ್ಯಾಯದಿಂದ ಅನು ವರ್ತಿತವಾಗಿ ಈ ಅಧ್ಯಾಯವು ಬಂದಿರುತ್ತದೆ. ಶಲ್ಯಪರ್ವದ ಮೂರನೆಯ ಅಧ್ಯಾಯದಲ್ಲಿ ದುರ್ಯೋಧನನ ಮಾತನ್ನು ಗೌರವಿಸಿ ಮಹಾರಥರೆಲ್ಲರೂ ಪಾಂಡವರೊಡನೆ ಯುದ್ಧಕ್ಕೆ ಹೋಗುತ್ತಾರೆ. **ಪುನರೇವಾಭ್ಯವರ್ತನ್ತ ಕ್ಷತ್ರಿಯಾಃ ಪಾಣ್ಡವಾನ್ಪ್ರತಿ** (೫೮) ಇದೊಂದು ಮಾತ್ರ ವ್ಯತ್ಯಸ್ತವಾಗಿದೆ.

೯೪ನೆಯ ಅಧ್ಯಾಯ :– ಈ ಅಧ್ಯಾಯವು ೯೨ನೆಯ ಅಧ್ಯಾಯದಿಂದ ಅನುವರ್ತಿತವಾಗಿದೆ. ಶಲ್ಯನು ದುರ್ಯೋಧನನಿಗೆ ರಣರಂಗವನ್ನು ತೋರಿಸಿ ಭಯಂಕರಸ್ವರೂಪವನ್ನು ವರ್ಣಿಸುತ್ತಾನೆ. ಜನರೆಲ್ಲರೂ ಕರ್ಣನನ್ನು ಕೊಂಡಾಡುತ್ತಾರೆ. ಕರ್ಣನು ಹತನಾದುದರಿಂದ ಭೂಮಿಯಲ್ಲಾದ ವೈಪ

ರೀತ್ಯವನ್ನು ಸಂಜಯನು ಹೇಳುತ್ತಾನೆ. (೪೯) ವಿಜಯಿಗಳಾದ ಕೃಷ್ಣಾರ್ಜುನರು ಶಂಖಧ್ವನಿಗಳನ್ನು ಮಾಡುತ್ತಾ ಪಾಂಡವಸೈನಿಕರಿಗೆ ಆನಂದವನ್ನೂ–ಕೌರವಸೈನಿಕರಿಗೆ ಭಯವನ್ನೂ ಉಂಟುಮಾಡುತ್ತಾರೆ. ಕುರುಸೈನಿಕರು ಭಯಂಕರಶಬ್ದವನ್ನು ಕೇಳಿ ಪಲಾಯನಮಾಡುತ್ತಾರೆ. ಕೃಷ್ಣಾರ್ಜುನರು ತಮ್ಮ ಸುಹೃದರೊಡನೆ ಸೇರಿಕೊಂಡು ಅಧಿಕವಾದ ಆನಂದವನ್ನು ಅನುಭವಿಸುತ್ತಾರೆ.

೯೫ನೆಯ ಅಧ್ಯಾಯ :– ಇದನ್ನು ಕೌರವರ ಪಲಾಯನಾಧ್ಯಾಯವೆಂದೇ ಕರೆಯಬಹುದು. ಇದರಲ್ಲಿರುವ ೧೮ ಶ್ಲೋಕಗಳೂ ಕೌರವರ ಸೈನಿಕರೂ, ಯೋಧರೂ, ಅತಿರಥ-ಮಹಾರಥರೂ ಯುದ್ಧಭೂಮಿಯಿಂದ ಶಿಬಿರಕ್ಕೆ ಪಲಾಯನಮಾಡಿದರೆಂಬ ವಿಷಯವನ್ನೇ ಹೇಳುವುದಾಗಿದೆ. ಭಂ. ರಿ. ಇನ್‌ಸ್ಟಿಟ್ಯೂಟಿನವರ ಪುಸ್ತಕದಲ್ಲಿ ಈ ಅಧ್ಯಾಯವಿಲ್ಲ.

೯೬ನೆಯ ಅಧ್ಯಾಯ :– ಶ್ರೀಕೃಷ್ಣನು ಕರ್ಣನನ್ನು ಸಂಹರಿಸಿದುದಕ್ಕಾಗಿ ಅರ್ಜುನನನ್ನು ಆಲಿಂಗನೆಮಾಡಿಕೊಂಡು ಅವನನ್ನು ಬಹಳವಾಗಿ ಪ್ರಶಂಸಿಸಿ ಈ ವಿಷಯವನ್ನು ಧರ್ಮರಾಜನಿಗೆ ತಿಳಿಸಬೇಕೆಂದು ಹೇಳುತ್ತಾನೆ. ಇಲ್ಲೆರಡು ಶ್ಲೋಕಗಳಿವೆ. ಧರ್ಮರಾಜನು ಯುದ್ಧಸಮಯದಲ್ಲಿ ಯುದ್ಧವನ್ನು ನೋಡುವ ಸಲುವಾಗಿ ಬಂದಿದ್ದನೆಂದೂ ಅನಂತರ ಅವನು ಬಹಳವಾಗಿ ಗಾಯಗೊಂಡಿದ್ದರಿಂದ ಶಿಬಿರಕ್ಕೆ ಹೊರಟುಹೋದನೆಂದೂ ಶ್ರೀಕೃಷ್ಣನು ಹೇಳಿದ್ದಾನೆ. (೬-೭) ಆದರೆ ಈ ಎರಡು ಶ್ಲೋಕಗಳು ಎಲ್ಲ ಪುಸ್ತಕಗಳಲ್ಲಿಯೂ ಇರುವುದಿಲ್ಲ. ಅದು ಹೆಚ್ಚು ಪಾಠವಿರಬಹುದೆಂದು ನಾವು ಅಭಿಪ್ರಾಯಪಟ್ಟಿದ್ದೇವೆ.

ಶ್ರೀಕೃಷ್ಣನು ಹೀಗೆ ಹೇಳಿದನಂತರ ಅರ್ಜುನನು ಶಿಬಿರಕ್ಕೆ ಹೋಗಲು ಸಮ್ಮತಿಸುತ್ತಾನೆ. ಶ್ರೀಕೃಷ್ಣನು ಭೀಮಾದಿಗಳಿಗೆ ರಣರಂಗದಲ್ಲಿಯೇ ಇದ್ದು ಶತ್ರುಗಳನ್ನು ಎದುರಿಸುವಂತೆ ಹೇಳುತ್ತಾನೆ. ಕೃಷ್ಣಾರ್ಜುನರಿಬ್ಬರೂ ಶಿಬಿರಕ್ಕೆ ಹೋಗುತ್ತಾರೆ. ಹಂಸತೂಲಿಕಾತಲ್ಪದಲ್ಲಿ ಮಲಗಿದ್ದ ಯುಧಿಷ್ಠಿರನ ಪಾದಾರವಿಂದಗಳನ್ನು ಕೃಷ್ಣಾರ್ಜುನರಿಬ್ಬರೂ ಹಿಡಿದುಕೊಳ್ಳುತ್ತಾರೆ. ಆ ಸಮಯದಲ್ಲಿ ಕರ್ಣನು ಹತನಾಗಿರುವ ವಿಷಯದಲ್ಲಿ ಯುಧಿಷ್ಠಿರನಿಗೆ ಸಂಶಯವು ಉಳಿ

ದಿರುವುದಿಲ್ಲ. ಯುಧಿಷ್ಠಿರನು ಎದ್ದುಕುಳಿತು ಇಬ್ಬರನ್ನೂ ಗಾಢಾಲಿಂಗನೆ ಮಾಡಿಕೊಳ್ಳುತ್ತಾನೆ. ಸುಖಮಯಸನ್ನಿವೇಶವದು. ಅದೃಷ್ಟವಶಾತ್ ಕರ್ಣನು ಹತನಾದನು ; ಅದೃಷ್ಟವಶಾತ್ ನೀವೈವರೂ ಜೀವಂತರಾಗಿರುವಿರಿ–ಎಂದು ಹೇಳಿದ ಶ್ರೀಕೃಷ್ಣನ ಮಾತಿಗೆ ಉತ್ತರವಾಗಿ ಯುಧಿಷ್ಠಿರನು ಎಲ್ಲವೂ ನಿನ್ನ ಪ್ರಸಾದದಿಂದಲೇ ಆಯಿತೆಂದು ಹೇಳುತ್ತಾನೆ. ಕರ್ಣನನ್ನು ಸಂಹರಿಸಿದ ನಂತರವೇ ಕೃಷ್ಣಾರ್ಜುನರು ತನ್ನ ಸಮೀಪಕ್ಕೆ ಬಂದಿರುವರೆಂಬುದನ್ನು ಯುಧಿಷ್ಠಿರನು ಸಂಪೂರ್ಣವಾಗಿ ನಂಬಿದ್ದನಾದರೂ–ಕರ್ಣನು ಹತನಾಗಿ ಬಿದ್ದಿರುವುದನ್ನು ತಾನೇ ಒಮ್ಮೆ ನೋಡಬೇಕೆಂಬ ಆಶಯದಿಂದ ಅವರೆಲ್ಲ ರೊಡನೆಯೂ ರಣಭೂಮಿಗೆ ಹೋಗುತ್ತಾನೆ. ಸತ್ತುಬಿದ್ದಿದ್ದ ಕರ್ಣನನ್ನು ಎವೆಯಿಕ್ಕದೇ ಕಣ್ಣುತುಂಬ ನೋಡುತ್ತಾನೆ. ಅನಂತರವೇ ಯುಧಿಷ್ಠಿರನು **ಅದ್ಯ ರಾಜಾಸ್ಮಿ ಗೋವಿನ್ದ**–ಈಗ ನಾನು ರಾಜನಾದೆನು–ಎಂದು ನಿಟ್ಟುಸಿರು ಬಿಡುತ್ತಾ ಹೇಳುತ್ತಾನೆ. ಕರ್ಣನ ಅವಸಾನವಾಗುವವರೆಗೂ ಯುಧಿಷ್ಠಿರನಿಗೆ ನೆಮ್ಮದಿಯೇ ಇರಲಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅನಂತರ ಎಲ್ಲರೂ ಪರಸ್ಪರವಾಗಿ ಪ್ರಶಂಸೆಮಾಡುತ್ತಾ ಶಿಬಿರಗಳಿಗೆ ತೆರಳುತ್ತಾರೆ. ಇತ್ತಕಡೆ ಕರ್ಣನ ಮರಣವಾರ್ತೆಯನ್ನು ಕೇಳಿದೊಡನೆಯೇ ಧೃತರಾಷ್ಟ್ರ-ಗಾಂಧಾರಿಯರು ಮೂರ್ಛೆಹೋಗುತ್ತಾರೆ. ವಿದುರ-ಸಂಜಯರು ಧೃತರಾಷ್ಟ್ರ ನಿಗೂ, ಕುರುರಾಜಕುಮಾರಿಯರು ಗಾಂಧಾರಿಗೂ ಶೈತ್ಯೋಪಚಾರಗಳನ್ನು ಮಾಡುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

## ಕರ್ಣಪರ್ವ – ಶ್ಲೋಕರೂಪದಲ್ಲಿ ಕಥಾಸಂಗ್ರಹ

**ಅತಃ ಪರಂ ಕರ್ಣಪರ್ವ ಪ್ರೋಚ್ಯತೇ ಪರಮಾದ್ಭುತಮ್ ।**
**ಸಾರಥ್ಯೇ ವಿನಿಯೋಗಶ್ಚ ಮದ್ರರಾಜಸ್ಯ ಧೀಮತಃ ।**
**ಆಖ್ಯಾತಂ ಯತ್ರ ಪೌರಾಣಂ ತ್ರಿಪುರಸ್ಯ ನಿಪಾತನಮ್ ॥೧॥**

**ಪ್ರಯಾಣೇ ಪುರುಷಶ್ಚಾತ್ರ ಸಂವಾದಃ ಕರ್ಣಶಲ್ಯಯೋಃ ।**
**ಹಂಸಕಾಕೀಯಮಾಖ್ಯಾನಂ ತತ್ರೈವಾಕ್ಷೇಪಸಂಹಿತಮ್ ॥೨॥**
**ವಧಃ ಪಾಣ್ಡ್ಯಸ್ಯ ಚ ತಥಾ ಅಶ್ವತ್ಥಾಮ್ನಾ ಮಹಾತ್ಮನಾ ।**
**ದಣ್ಡಸೇನಸ್ಯ ಚ ತತೋ ದಣ್ಡಸ್ಯ ಚ ವಧಸ್ತಥಾ ॥೩॥**

ದ್ವೈರಥೇ ಯತ್ರ ಕರ್ಣೇನ ಧರ್ಮರಾಜೋ ಯುಧಿಷ್ಠಿರಃ ।
ಸಂಶಯಂ ಗಮಿತೋ ಯುದ್ಧೇ ಮಿಷತಾಂ ಸರ್ವಧನ್ವಿನಾಮ್ ॥೪॥

ಅನ್ಯೋನ್ಯಂ ಪ್ರತಿ ಚ ಕ್ರೋಧೋ ಯುಧಿಷ್ಠಿರಕಿರೀಟಿನೋಃ ।
ತತ್ರೈವಾನುನಯಃ ಪ್ರೋಕ್ತೋ ಮಾಧವೇನಾರ್ಜುನಸ್ಯ ಹಿ ॥೫॥

ಪ್ರತಿಜ್ಞಾಪೂರ್ವಕಂ ಚಾಪಿ ವಕ್ಷೋ ದುಃಶಾಸನಸ್ಯ ಚ ।
ಭಿತ್ತ್ವಾ ವೃಕೋದರೋ ರಕ್ತಂ ಪೀತವಾನ್ಯತ್ರ ಸಂಯುಗೇ ॥೬॥

ದ್ವೈರಥೇ ಯತ್ರ ಪಾರ್ಥೇನ ಹತಃ ಕರ್ಣೋ ಮಹಾರಥಃ ।
ಅಷ್ಟಮಂ ಪರ್ವ ನಿರ್ದಿಷ್ಟಾಮೇತದ್ಭಾರತಚಿನ್ತಕೈಃ ॥೭॥

ಏಕೋನಸಪ್ತತಿಃ ಪ್ರೋಕ್ತಾ ಅಧ್ಯಾಯಾಃ ಕರ್ಣಪರ್ವಣಿ ।
ಚತ್ವಾರ್ಯೇವ ಸಹಸ್ರಾಣಿ ನವ ಶ್ಲೋಕಶತಾನಿ ಚ ।
ಚತುಃಷಷ್ಟಿಸ್ತಥಾ ಶ್ಲೋಕಾಃ ಪರ್ವಣ್ಯಸ್ಮಿನ್ಪ್ರಕೀರ್ತಿತಾಃ ॥೮॥

ಪರ್ವಸಂಗ್ರಹಪರ್ವದ ಪ್ರಕಾರ ಕರ್ಣಪರ್ವದಲ್ಲಿ 69 ಅಧ್ಯಾಯಗಳು. ಶ್ಲೋಕಗಳ ಸಂಖ್ಯೆ 4964. ಪ್ರಚಲಿತವಾಗಿರುವ ಅಥವಾ ನಾವು ಅನುವಾದಿಸುತ್ತಿರುವ ಪುಸ್ತಕದಲ್ಲಿ ಅಧ್ಯಾಯಗಳು 96. ಶ್ಲೋಕಗಳ ಸಂಖ್ಯೆ 5340. ಭಂ. ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿ ಅಧ್ಯಾಯಗಳು 69. ಶ್ಲೋಕಗಳ ಸಂಖ್ಯೆ 3870.

## ಶಲ್ಯಪರ್ವದ ವಿಶ್ಲೇಷಣೆ

೧ನೆಯ ಅಧ್ಯಾಯ :– ಜನಮೇಜಯನ ಪ್ರಶ್ನೆಯಿಂದ ಅಧ್ಯಾಯವು ಪ್ರಾರಂಭವಾಗುತ್ತದೆ. ಅರ್ಜುನನು ಕರ್ಣನನ್ನು ಸಂಹರಿಸಿದನಂತರ ಮುಂದೇನಾಯಿತೆಂದು ಜನಮೇಜಯನು ವೈಶಂಪಾಯನರನ್ನು ಪ್ರಶ್ನಿಸುತ್ತಾನೆ. ವೈಶಂಪಾಯನರು–ಕರ್ಣನನ್ನು ಕಳೆದುಕೊಂಡ ದುರ್ಯೋಧನನು ಕಡೆಯವರೆಗೂ ಯುದ್ಧಮಾಡಲು ನಿಶ್ಚಯಿಸಿ ಶಲ್ಯನಿಗೆ ಸೇನಾಧಿಪತಿಯ ಪಟ್ಟಗಟ್ಟಿದುದು ; ಹದಿನೆಂಟನೆಯ ದಿವಸದ ಮಧ್ಯಾಹ್ನದಲ್ಲಿ ಧರ್ಮರಾಜನಿಂದ ಶಲ್ಯನ ಸಂಹಾರವಾದುದು ; ಭಯಗೊಂಡ ದುರ್ಯೋಧನನು ಸರೋವರವನ್ನು ಪ್ರವೇಶಿಸಿದುದು ; ಭೀಮಸೇನನು ದುರ್ಯೋಧನನನ್ನು

ಯುದ್ಧಕ್ಕೆ ಆಹ್ವಾನಿಸಿ ಅವನನ್ನು ಸಂಹರಿಸಿದುದು ; ಅಂದಿನ ರಾತ್ರಿ ಅಶ್ವತ್ಥಾಮ-ಕೃಪ-ಕೃತವರ್ಮರು ಮಲಗಿದ್ದ ಪಾಂಡವ-ಪಾಂಚಾಲಸೈನಿಕರೆಲ್ಲ ರನ್ನೂ ಸಂಹರಿಸಿದುದು ; ಹತ್ತೊಂಬತ್ತನೆಯ ದಿವಸ ಬೆಳಗಾಗುತ್ತಲೇ ಸಂಜಯನು ರಣರಂಗದಿಂದ ರಾಜಧಾನಿಗೆ ಓಡುತ್ತಾ ಬಂದುದು–ಇಷ್ಟು ವಿಷಯಗಳನ್ನೂ ಸಂಕ್ಷೇಪವಾಗಿ ಹೇಳುತ್ತಾರೆ. ಮುಂದೆ ಸಂಜಯನು ಧೃತ ರಾಷ್ಟ್ರನನ್ನು ಸಂಧಿಸಿದನಂತರ ಸಂಜಯ-ಧೃತರಾಷ್ಟ್ರರ ಮೂಲಕವಾಗಿ ಕಥೆಯು ಮುನ್ನಡೆಯುತ್ತದೆ. ಸಂಜಯನು ಹದಿನೆಂಟನೆಯ ದಿವಸದ ಯುದ್ಧದಲ್ಲಿ ಸತ್ತವರಾರೆಂಬುದನ್ನು ಪಟ್ಟಿಮಾಡಿ ಹೇಳುತ್ತಾನೆ. ಎಲ್ಲರೂ ಹತರಾಗಿ ಎರಡು ಪಕ್ಷಗಳಲ್ಲಿಯೂ ಒಟ್ಟು ಹತ್ತು ಮಂದಿ ಮಾತ್ರವೇ ಉಳಿದಿದ್ದಾರೆಂದು ಹೇಳುತ್ತಾನೆ. ದುರ್ಯೋಧನನ ಮರಣವಾರ್ತೆಯನ್ನು ಕೇಳಿದೊಡನೆಯೇ ಧೃತರಾಷ್ಟ್ರನೇ ಆದಿಯಾಗಿ ಎಲ್ಲರೂ ಮೂರ್ಛಿತರಾಗುತ್ತಾರೆ. ಶೈತ್ಯೋಪಚಾರಗಳಾದನಂತರ ಎಲ್ಲರೂ ಎಚ್ಚರಗೊಳ್ಳುತ್ತಾರೆ. ಧೃತರಾಷ್ಟ್ರನು ಕ್ಷಣಕ್ಕೊಮ್ಮೆ ಮೂರ್ಛೆಹೋಗುತ್ತಲೇ ಇರುತ್ತಾನೆ. ಕಡೆಗೊಮ್ಮೆ ಎಚ್ಚೆತ್ತು ಅಲ್ಲಿದ್ದ ಗಾಂಧಾರಿಯೇ ಮೊದಲಾದ ಅಂತಃಪುರದ ಸ್ತ್ರೀಯರನ್ನು ಬೇರೆಯ ಕಡೆಗೆ ಕಳುಹಿಸುವಂತೆ ಹೇಳುತ್ತಾನೆ. ಎಲ್ಲರೂ ಹೊರಟುಹೋಗುತ್ತಾರೆ. ವಿದುರ-ಸಂಜಯ-ಧೃತರಾಷ್ಟ್ರರು ಮೂವರು ಮಾತ್ರವೇ ಉಳಿದಿರುತ್ತಾರೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೨ನೆಯ ಅಧ್ಯಾಯ :– ಈ ಅಧ್ಯಾಯದಲ್ಲಿ ಧೃತರಾಷ್ಟ್ರನ ಉನ್ಮಾದಾ ವಸ್ಥೆಯ ವರ್ಣನೆಯಿದೆ. ಐವರು ಪಾಂಡವರಲ್ಲಿ ಒಬ್ಬರಾದರೂ ಹತ ರಾಗದೇ ಇದ್ದುದಕ್ಕಾಗಿ ಬಹಳವಾಗಿ ಪರಿತಪಿಸುತ್ತಾನೆ. **ಅಹೋ ಬತ ಮಹದ್ದುಃಖಂ ಯದಹಂ ಪಾಣ್ಡವಾನ್ರಣೇ । ಕ್ಷೇಮಿಣಶ್ಚಾವ್ಯಯಾಂಶ್ಚೈವ ತ್ವತ್ತಃ ಸೂತ ಶೃಣೋಮಿ ವೈ ॥೩॥** ದುರ್ಯೋಧನನು ತನ್ನ ಬಲದ ವಿಷಯದಲ್ಲಿ ಹೇಳಿದ್ದುದೆಲ್ಲವನ್ನೂ ಧೃತರಾಷ್ಟ್ರನು ಸ್ಮರಿಸಿಕೊಂಡು ವಿಲಪಿಸುತ್ತಾನೆ. ಕಡೆಗೆ ಪಾಂಡವರು ಸೌಭಾಗ್ಯಶಾಲಿಗಳೆಂಬ ನಿರ್ಧಾರಕ್ಕೆ ಬರುತ್ತಾನೆ. ಹಿಂದೆಯೇ ವಿದುರನ ಮಾತನ್ನು ಕೇಳದೇ ಇದ್ದುದಕ್ಕಾಗಿ ಪಶ್ಚಾತ್ತಾಪಪಡುತ್ತಾನೆ. ತನಗೆ ಒದಗಿರುವ ದುರವಸ್ಥೆಗಾಗಿ ಪರಿತಪಿಸುತ್ತಾನೆ. ಅನಂತರ, ಕರ್ಣನ ನಿಧನಾನಂತರ ಏನಾಯಿತೆಂಬುದನ್ನು ಹೇಳುವಂತೆ

ಸಂಜಯನಿಗೆ ನಿರ್ದೇಶಿಸುತ್ತಾನೆ. ಶಲ್ಯ-ದುರ್ಯೋಧನರ, ಧೃಷ್ಟದ್ಯುಮ್ನ-ದ್ರೌಪದೇಯರ ನಿಧನವು ಹೇಗಾಯಿತೆಂಬುದನ್ನು ವಿವರಿಸಿ ಹೇಳುವಂತೆ ಸಂಜಯನನ್ನು ಕೇಳುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೩ನೆಯ ಅಧ್ಯಾಯ :– ಕರ್ಣಪರ್ವದ ೯೩ನೆಯ ಅಧ್ಯಾಯದ ಕಥಾ ಭಾಗವೇ ಇಲ್ಲಿ ಪುನಃ ಹೇಳಲ್ಪಟ್ಟಿದೆ. ಅಲ್ಲಿರುವ ಶ್ಲೋಕಗಳೇ ಇಲ್ಲಿಯೂ ಇವೆ. ಕೆಲವು ಶ್ಲೋಕಗಳಲ್ಲಿ ಮಾತ್ರ ಕೆಲವು ಪದಗಳು ವ್ಯತ್ಯಸ್ತವಾಗಿವೆ. ಇಪ್ಪತ್ತೈದು ಸಾವಿರ ಸೈನಿಕರನ್ನು ಯಾರು ಸಂಹರಿಸಿದರೆಂಬ ವಿಷಯವಾಗಿ ಇಲ್ಲಿ ಸಮಸ್ಯೆಯಿದೆ. ಒಂದು ಕಡೆ ಭೀಮನು ಸಂಹರಿಸಿದನೆಂದೂ ಮತ್ತೊಂದು ಕಡೆ ಧೃಷ್ಟದ್ಯುಮ್ನನು ಸಂಹರಿಸಿದನೆಂದೂ ಉಲ್ಲೇಖವಿದೆ. **ಭೀಮಃ ಪಞ್ಚವಿಶಂತಿಸಾಹಸ್ರಾಂಸ್ತಾವಕಾನಾಂ ವ್ಯಪೋಥಯತ್ ॥೨೯॥ ಪಞ್ಚವಿಶಂತಿಸಾಹಸ್ರಾಃ ಪಾರ್ಥಮಾರ್ಛನ್ಪದಾತಯಃ ಹತ್ವಾ ತತ್ಪುರುಷಾನೀಕಂ ಪಞ್ಚಾಲಾನಾಂ ಮಹಾರಥಃ । ಭೀಮಸೇನಂ ಪುರಸ್ಕೃತ್ಯ ನಾಚಿರಾತ್ಪ್ರತ್ಯದೃಶ್ಯತ ॥೩೬॥** ಇಬ್ಬರೂ ಇಪ್ಪತ್ತೈದು ಇಪ್ಪತ್ತೈದು ಸಾವಿರ ಪದಾತಿಗಳನ್ನು ಸಂಹರಿಸಿದರೆಂದು ಭಾವಿಸಬಹುದಾಗಿದೆ. ಭೀಮಸೇನನು ಇಪ್ಪತ್ತೈದುಸಾವಿರ ಸೈನಿಕರನ್ನು ಸಂಹರಿಸಿದನಂತರ **ಧೃಷ್ಟದ್ಯುಮ್ನಂ ಪುರಸ್ಕೃತ್ಯ ಪುನಸ್ತಸ್ಥೌ ಮಹಾಬಲಃ ॥೨೯॥** ಎಂಬುದಾಗಿಯೂ– ಧೃಷ್ಟದ್ಯುಮ್ನನು ಇಪ್ಪತ್ತೈದುಸಾವಿರ ಮಂದಿಯನ್ನು ಸಂಹರಿಸಿದನಂತರ **ಭೀಮಸೇನಂ ಪುರಸ್ಕೃತ್ಯ ನಚಿರಾತ್ಪ್ರತ್ಯದೃಶ್ಯತ ॥೩೬॥** ಎಂಬುದಾಗಿಯೂ ಇದೆ. ಈ ಅಧ್ಯಾಯವು ಭಂ. ರಿ. ಇನ್‌ಸ್ಟಿಟ್ಯೂಟ್‌ನವರ ಪುಸ್ತಕದಲ್ಲಿರುವುದಿಲ್ಲ. ಹಿಂದೆಯೇ ಪ್ರಕರಣವು ಸಂಪೂರ್ಣವಾಗಿ ಬಂದಿರುವುದರಿಂದ ಇಲ್ಲಿ ಬರಬೇಕಾದ ಕಾರಣವಿಲ್ಲ. ಪುನಃ ಇಲ್ಲಿಯೂ ಅದೇ ಅಧ್ಯಾಯವೇ ಹೇಗೆ ಪುನರಾವರ್ತಿತವಾಯಿತೋ ತಿಳಿಯದು. ಉಳಿದೆಲ್ಲ ಪುಸ್ತಕಗಳಲ್ಲಿಯೂ ಈ ಶ್ಲೋಕಗಳು ಎರಡು ಕಡೆಗಳಲ್ಲಿಯೂ ಇವೆ.

೪ನೆಯ ಅಧ್ಯಾಯ :– ಅಧ್ಯಾಯಪೂರ್ತಿಯಾಗಿ ಕೃಪರು ಪಾಂಡವರೊಡನೆ ಸಂಧಿಮಾಡಿಕೊಳ್ಳುವಂತೆ ದುರ್ಯೋಧನನಿಗೆ ಉಪದೇಶಮಾಡುತ್ತಾರೆ. ದುರ್ಯೋಧನನು ಗೆಲ್ಲಲು ಅಸಾಧ್ಯವೆಂಬುದನ್ನೂ ನಿದರ್ಶನಗಳೊಡನೆ ಪ್ರತಿಪಾದಿಸುತ್ತಾರೆ. ಪ್ರಕೃತಸಮಯದಲ್ಲಿ ಯುಧಿಷ್ಠಿರನಿಗೆ ಶರಣಾಗತ

ನಾಗುವುದೇ ಶ್ರೇಯಸ್ಕರವೆಂದು ಹೇಳುತ್ತಾರೆ. ಕಟ್ಟಕಡೆಗೆ ದುಃಖಾತಿರೇಕದಿಂದ ಅವರೇ ಮೂರ್ಛಿತರಾಗಿ ಕೆಳಕ್ಕೆ ಬೀಳುತ್ತಾರೆ. ಬೃಹಸ್ಪತಿಯ ನೀತಿಶಾಸ್ತ್ರವನ್ನು ಆಧರಿಸಿ ಹೇಳಿರುವ ಕೃಪರ ಮಾತುಗಳು ಯುಕ್ತಿಯುಕ್ತವಾಗಿವೆ.

೫ನೆಯ ಅಧ್ಯಾಯ :– ಈ ಅಧ್ಯಾಯಪೂರ್ತಿಯಾಗಿ ದುರ್ಯೋಧನನ ಉತ್ತರವಿದೆ. "ನಿಮ್ಮ ಮಾತು ರುಚಿಸಲಿಲ್ಲ" ಎಂದೇ ಪ್ರಾರಂಭಿಸಿ ದುರ್ಯೋಧನನು ಶಾಂತಿಗೊಪ್ಪದಿರುವುದಕ್ಕೆ ಕಾರಣಗಳನ್ನು ಕೊಡುತ್ತಾನೆ. ನಮ್ಮಿಂದ ವಂಚಿತರಾದ ಪಾಂಡವರು ಸಂಧಾನಕ್ಕೆ ಒಪ್ಪಲಾರರೆಂಬುದನ್ನು ಪ್ರತಿಪಾದಿಸುತ್ತಾನೆ. ಕ್ಷತ್ರಧರ್ಮದ ದೃಷ್ಟಿಯಿಂದಲೂ ಪ್ರಕೃತಸಮಯದಲ್ಲಿ ಶಾಂತಿ ಮಾಡಿಕೊಳ್ಳುವುದು ಅಯುಕ್ತವೆಂಬುದನ್ನು ತರ್ಕಬದ್ಧವಾಗಿ ಪ್ರತಿಪಾದಿಸುತ್ತಾನೆ. ದುರ್ಯೋಧನನ ಮಾತನ್ನು ಕೇಳಿ ಅವನ ಸೈನಿಕರೆಲ್ಲರೂ "ಭಲೇ ಭಲೇ" ಎನ್ನುತ್ತಾರೆ. ಈ ಅಧ್ಯಾಯದಲ್ಲಿ ದುರ್ಯೋಧನನು ಆಡಿರುವ ಮಾತುಗಳು ಅಷ್ಟು ಸ್ವಾರಸ್ಯವಾಗಿವೆ. ಯುದ್ಧಮಾಡಲು ನಿಶ್ಚಯಿಸಿ ಎಲ್ಲರೂ ಯುದ್ಧಭೂಮಿಗೆ ಹಿಂದಿರುಗುತ್ತಾರೆ.

೬ನೆಯ ಅಧ್ಯಾಯ :– ಕೌರವರೆಲ್ಲರೂ ಹದಿನೇಳನೆಯ ದಿವಸದ ರಾತ್ರಿಯಲ್ಲಿ ಬಿಡಾರಗಳಲ್ಲಿ ಉಳಿದುಕೊಳ್ಳದೇ–ಹಿಮವತ್ಪರ್ವತದ ಪ್ರಸ್ಥಭೂಮಿಯಲ್ಲಿ ತಂಗಿದ್ದರೆಂದು ಈ ಅಧ್ಯಾಯದ ಮೊದಲಿನಲ್ಲಿ ಬಂದಿರುತ್ತದೆ. ಶಲ್ಯನಿಗೆ ಸೇನಾಪತ್ಯವನ್ನು ಒಪ್ಪಿಸುವ ಪ್ರಕರಣವನ್ನು ಹೇಳಿರುವ ಈ ಅಧ್ಯಾಯದಲ್ಲಿ ಅಶ್ವತ್ಥಾಮನ ಅದ್ಭುತವರ್ಣನೆಯಿದೆ. ಈ ವರ್ಣನೆಯನ್ನು ನೋಡಿದರೆ ಅಶ್ವತ್ಥಾಮನಿಗೇ ಸೇನಾಪತಿಯ ಪಟ್ಟವನ್ನು ಕಟ್ಟುವರೋ ಎಂಬಂತೆ ಭಾಸವಾಗುತ್ತದೆ. ಆದರೆ ದುರ್ಯೋಧನನು ಅಶ್ವತ್ಥಾಮನನ್ನು ಮುಂದಿನ ಸೇನಾಪತಿಯು ಯಾರೆಂಬುದನ್ನು ಪ್ರಶ್ನಿಸುವ ಮೊದಲಿಗೆ ಈ ವರ್ಣನೆಯು ಬಂದಿರುತ್ತದೆ. ಅಶ್ವತ್ಥಾಮನು ಶಲ್ಯನಿಗೆ ಸೇನಾಪತಿಯ ಪಟ್ಟಗಟ್ಟುವಂತೆ ಸಲಹೆ ನೀಡುತ್ತಾನೆ. ದುರ್ಯೋಧನನು ಸೇನಾಪತಿಯಾಗಬೇಕೆಂದು ಶಲ್ಯನನ್ನು ಪ್ರಾರ್ಥಿಸುತ್ತಾನೆ.

೭ನೆಯ ಅಧ್ಯಾಯ :– ಶಲ್ಯನು ತನ್ನ ಪರಾಕ್ರಮವನ್ನು ಹೇಳಿಕೊಳ್ಳುತ್ತಾ ತಾನು ಪಾರ್ಥನನ್ನೂ ಮತ್ತು ಸೋಮಕರನ್ನೂ ಜಯಿಸುವೆ

ನೆಂದು ಪ್ರತಿಜ್ಞೆಮಾಡುತ್ತಾನೆ. **ಇತಿ ಸತ್ಯಂ ಬ್ರವೀಮ್ಯೇಷ ದುರ್ಯೋಧನ ನ ಸಂಶಯಃ ॥೫॥** ಒಡನೆಯೇ ದುರ್ಯೋಧನನು ಶಲ್ಯನಿಗೆ ಸೇನಾಪತಿಯ ಪಟ್ಟಗಟ್ಟುತ್ತಾನೆ. ಶಲ್ಯನು ಸೇನಾಪತಿಯಾದನೆಂಬ ವಿಷಯವು ಯುಧಿಷ್ಠಿರನಿಗೂ ತಿಳಿಯುತ್ತದೆ. ಅವನು ಒಡನೆಯೇ ಶ್ರೀಕೃಷ್ಣನೊಡನೆ ಮುಂದೇನು ಮಾಡಬೇಕೆಂಬುದರ ಬಗೆಗೆ ಸಮಾಲೋಚನೆ ನಡೆಸುತ್ತಾನೆ. ಶಲ್ಯನಿಗೆ ಸಮಾನರಾದವರೇ ತಮ್ಮ ಕಡೆಯಲ್ಲಿ ಇಲ್ಲವೆಂದು ಶ್ರೀಕೃಷ್ಣನು ಹೇಳುತ್ತಾನೆ. **ಶಿಖಣ್ಡ್ಯರ್ಜುನಭೀಮಾನಾಂ ಸಾತ್ವತಸ್ಯ ಚ ಭಾರತ। ಧೃಷ್ಟದ್ಯುಮ್ನಸ್ಯ ಚ ತಥಾ ಬಲೇನಾಭ್ಯಧಿಕೋ ರಣೇ ॥೩೧॥** ನೀನೊಬ್ಬನೇ ಅವನನ್ನು ಸಂಹರಿಸಲು ಸಮರ್ಥನಾಗಿರುವೆಯೆಂದು ಶ್ರೀಕೃಷ್ಣನು ಯುಧಿಷ್ಠಿರನಿಗೆ ಹೇಳುತ್ತಾನೆ. (೩೪) ನಿನ್ನ ಬಲವನ್ನೀಗ ಪ್ರದರ್ಶಿಸೆಂದು ಧರ್ಮರಾಜನನ್ನು ಹುರಿದುಂಬಿಸುತ್ತಾನೆ.

ಕೃಷ್ಣ-ಯುಧಿಷ್ಠಿರರ ಸಮಾಗಮವು ಯಾವ ಹೊತ್ತಿನಲ್ಲಿ ನಡೆಯಿತು? ಎಂಬುದು ಸ್ವಲ್ಪ ಜಿಜ್ಞಾಸೆಗೆ ಕಾರಣವಾಗುತ್ತದೆ. ಇಬ್ಬರ ಸಂಭಾಷಣೆಗಳೂ ಪೂರ್ಣವಾದನಂತರ ಈ ಶ್ಲೋಕವು ಬರುತ್ತದೆ. **ಏತಾವದುಕ್ತ್ವಾ ವಚನಂ ಕೇಶವಃ ಪರವೀರಹಾ। ಜಗಾಮ ಶಿಬಿರಂ ಸಾಯಂ ಪೂಜ್ಯಮಾನೋಽಥ ಪಾಣ್ಡವೈಃ ॥** (೪೨) ಹದಿನೇಳನೆಯ ದಿವಸದ ಸಾಯಂಕಾಲವೇ ಹೀಗೆ ಶ್ರೀಕೃಷ್ಣನೊಡನೆ ಯುಧಿಷ್ಠಿರನು ಸಮಾಲೋಚಿಸಿ ತನ್ನ ಶಿಬಿರಕ್ಕೆ ಹೋದನೆಂದು ಈ ಶ್ಲೋಕವು ಅರ್ಥಕೊಡುತ್ತದೆ. ಶಲ್ಯನ ಪಟ್ಟಾಭಿಷೇಕದ ವೇಳೆಯನ್ನು ಗಮನಿಸಿದರೆ ರಾತ್ರಿಯಲ್ಲಿ ನಡೆಯಿತೆಂದು ಹಿಂದಿನ ಪ್ರಕರಣಗಳಿಂದ ಹೇಳಬಹುದಾಗಿದೆ. ೬ನೇ ಅಧ್ಯಾಯದ ಮೊದಲಿನಲ್ಲಿ ಕೌರವವೀರರೆಲ್ಲರೂ ಆ ರಾತ್ರಿ ಹಿಮವತ್ಪರ್ವತದಲ್ಲಿದ್ದರೆಂದೂ ಅಲ್ಲಿಯೇ ಸೇನಾಪತಿಯು ಯಾರಾಗಬೇಕೆಂಬ ಬಗೆಗೆ ಸಮಾಲೋಚನೆ ನಡೆಸಿದರೆಂದೂ ಉಕ್ತವಾಗಿದೆ. **ಅಥ ಹೈಮವತೇ ಪ್ರಸ್ಥೇ ಸ್ಥಿತ್ವಾ ಯುದ್ಧಾಭಿನನ್ದಿನಃ** (೧) **ಜಯತ್ಸೇನಶ್ಚ ರಾಜಾನಸ್ತೇ ರಾತ್ರಿಮುಷಿತಾಸ್ತತಃ** (೩) **ನಾಲಮ್ಬುಞ್ಮರ್ಮ ತೇ ಪುತ್ರಾಃ ಹಿಮವನ್ತಮೃತೇಗಿರಿಮ್** (೪) ಈ ಮೂರು ಶ್ಲೋಕಗಳೂ, ಕೌರವರು ಹಿಮವತ್ಪರ್ವತದ ತಪ್ಪಲಿನಲ್ಲಿ ಆ ರಾತ್ರಿ ಇದ್ದರೆಂಬುದನ್ನೂ–ಅಲ್ಲಿಯೇ ಸೇನಾಪತ್ಯದ ಬಗೆಗೆ ಸಮಾಲೋಚನೆ

ಯನ್ನೂ ನಡೆಸಿದರೆಂಬುದನ್ನೂ ಪುಷ್ಟೀಕರಿಸುತ್ತದೆ. ಶಲ್ಯನು ಸೇನಾಪತಿಯಾದನಂತರ ೭ನೆಯ ಅಧ್ಯಾಯದಲ್ಲಿ ಈ ಶ್ಲೋಕವು ಬಂದಿದೆ. **ಪ್ರಹರ್ಷಂ ಪ್ರಾಪ್ಯ ಸೇನಾ ತು ತಾವಕೀ ಭರತರ್ಷಭ । ತಾಂ ರಾತ್ರಿಮುಷಿತಾ ಸುಪ್ತಾ** (೨೩) ರಾತ್ರಿಯಲ್ಲೇ ಆದ ಶಲ್ಯನ ಪಟ್ಟಾಭಿಷೇಕವನ್ನು ನೋಡಿ ಸೈನಿಕರೆಲ್ಲರೂ ಸಂತೋಷಚಿತ್ತರಾಗಿ ಆ ರಾತ್ರಿಯಲ್ಲಿ ಮಲಗಿದರು. ಇದರ ಮುಂದಿನ ಶ್ಲೋಕದಲ್ಲಿ **ಸೈನ್ಯಸ್ಯ ತವ ತಂ ಶಬ್ದಂ ಶ್ರುತ್ವಾ ರಾಜಾ ಯುಧಿಷ್ಠಿರಃ** –ಸೈನಿಕರ ಆ ಜಯಘೋಷವನ್ನು ಕೇಳಿ ಯುಧಿಷ್ಠಿರನು ಶ್ರೀಕೃಷ್ಣನೊಡನೆ ಹೀಗೆ ಹೇಳಿದನು ಎಂದಿದೆ. (೨೪) ಎಲ್ಲವನ್ನೂ ಕ್ರೋಢೀಕರಿಸಿ ಇದರ ತಾತ್ಪರ್ಯವನ್ನು ಹೀಗೆ ಹೇಳಬಹುದಾಗಿದೆ : ಕೌರವರ ಸೇನಾಪತಿಗಳು ಹದಿನೇಳನೆಯ ದಿವಸದ ರಾತ್ರಿ ತಂಗಲು ಹಿಮವತ್ಪರ್ವತದ ತಪ್ಪಲಿಗೆ ಹೋಗಿದ್ದರು. ಸೇನಾಪತಿಯ ವಿಷಯವಾಗಿ ಸಮಾಲೋಚಿಸಿ ಶಲ್ಯನಿಗೆ ಆಗಲೇ (ರಾತ್ರಿಯಲ್ಲಿ) ಪಟ್ಟಗಟ್ಟಿದರು. ಅದರಿಂದ ಉಂಟಾದ ಕೋಲಾಹಲಶಬ್ದವನ್ನು ಧರ್ಮರಾಜನು ಕೇಳಿದನು. ಇವಿಷ್ಟೂ ರಾತ್ರಿ ನಡೆದ ವಿಷಯಗಳು. ಈ ಕಾರಣಗಳಿಂದ ೭ನೆಯ ಅಧ್ಯಾಯದ ೪೨ನೆಯ ಶ್ಲೋಕದಲ್ಲಿ–ಯುಧಿಷ್ಠಿರನು ಸಂಭಾಷಣೆಗಳನ್ನು ಮುಗಿಸಿ ಸಾಯಂಕಾಲ ಶಿಬಿರಕ್ಕೆ ಹೋದನೆಂದು ಹೇಳಿರುವುದು ವಿರೋಧಾಭಾಸವಾಗಿ ಕಾಣುತ್ತದೆ. **ಜಗಾಮ ಶಿಬಿರಂ ಸಾಯಂ ಪೂಜ್ಯಮಾನೋಽಥ ಪಾಣ್ಡವೈಃ** (೪೨) ಎಲ್ಲ ಪುಸ್ತಕಗಳಲ್ಲಿಯೂ ಹೀಗೆಯೇ ಪಾಠವಿದೆ. ಅದುವರೆಗೂ ಅವನು ರಣರಂಗದಲ್ಲಿಯೇ ಇದ್ದನೇ? ಕರ್ಣಪರ್ವದ ೬೯ನೆಯ ಅಧ್ಯಾಯದಲ್ಲಿಯೇ ಯುಧಿಷ್ಠಿರಾದಿಗಳು ಸಂತೋಷಭರಿತರಾಗಿ ತಮ್ಮ ಶಿಬಿರಗಳಿಗೆ ಹೋದರೆಂದು ಹೇಳಿದೆ. **ಜಗ್ಮುಃ ಸ್ವಶಿಬಿರಾಯ್ಯೈವ ಮುದಾಯುಕ್ತಾ ಮಹಾರಥಾಃ** (೫೨) ಈ ಎಲ್ಲ ಕಾರಣದಿಂದ ಈ ಅಧ್ಯಾಯದ ೨೩ನೆಯ ಶ್ಲೋಕದಿಂದ ಮುಂದಕ್ಕಿರುವುದು ಹೆಚ್ಚು ಪಾಠದಂತೆ ಕಾಣುತ್ತದೆ.

೮ನೆಯ ಅಧ್ಯಾಯ :– ಕೌರವರು ಶತ್ರುಗಳೊಡನೆ ಹೇಗೆ ಯುದ್ಧ ಮಾಡಬೇಕೆಂಬ ವಿಷಯವಾಗಿ ನಿಯಮಗಳನ್ನು ಹಾಕಿಕೊಳ್ಳುತ್ತಾರೆ. ಶಲ್ಯನು ಸರ್ವತೋಭದ್ರವೆಂಬ ವ್ಯೂಹವನ್ನು ರಚಿಸುತ್ತಾನೆ. ಪಾಂಡವರು ವ್ಯೂಹವನ್ನು ರಚಿಸಿಕೊಂಡರೆಂಬ ವಿಷಯವಿದೆಯೇ ಹೊರತು ಅವರು ರಚಿಸಿದ

ವ್ಯೂಹವು ಯಾವುದೆಂಬುದರ ಉಲ್ಲೇಖವಿಲ್ಲ. ಧೃಷ್ಟದ್ಯುಮ್ನ, ಶಿಖಂಡೀ ಸಾತ್ಯಕಿ ಮತ್ತು ಯುಧಿಷ್ಠಿರರು ಶಲ್ಯನನ್ನು ಆಕ್ರಮಿಸುತ್ತಾರೆ. ಅರ್ಜುನನು ಹಾರ್ದಿಕ್ಯನನ್ನೂ ಸಂಶಪ್ತಕರನ್ನೂ, ಭೀಮಸೇನ-ಸೋಮಕರು ಕೃಪರನ್ನೂ, ನಕುಲ-ಸಹದೇವರು ಶಕುನಿ ಮತ್ತು ಉಲೂಕರನ್ನೂ ಆಕ್ರಮಿಸುತ್ತಾರೆ. ಈ ಸಂದರ್ಭದಲ್ಲಿ ಎರಡೂ ಪಕ್ಷಗಳ ಸೈನ್ಯಗಳ ಸಂಖ್ಯಾಬಲವೆಷ್ಟಿತ್ತೆಂದು ಧೃತ ರಾಷ್ಟ್ರನು ಪ್ರಶ್ನಿಸುತ್ತಾನೆ. ಕೌರವರ ಪಕ್ಷದಲ್ಲಿ ಹನ್ನೊಂದು ಸಾವಿರ ರಥಗಳು, ಹತ್ತು ಸಾವಿರದ ಏಳು ನೂರು ಆನೆಗಳು, ಎರಡು ಲಕ್ಷ ಕುದುರೆಗಳು ಮತ್ತು ಮೂರು ಕೋಟಿ ಪದಾತಿಗಳೂ ಇದ್ದುವೆಂದೂ–ಪಾಂಡವರ ಪಕ್ಷದಲ್ಲಿ ಆರು ಸಾವಿರ ರಥಗಳೂ, ಆರು ಸಾವಿರ ಆನೆಗಳೂ, ಹತ್ತು ಸಾವಿರ ಕುದುರೆಗಳೂ, ಎರಡು ಕೋಟಿ ಪದಾತಿಸೈನ್ಯಗಳೂ ಇದ್ದುವೆಂದೂ ಸಂಜಯನು ಉತ್ತರಿಸಿ ದ್ದಾನೆ. ಆದರೆ ಅಕ್ಷೌಹಿಣೀಸಂಖ್ಯೆಯನ್ನೇ ನಾವು ಮೂಲವಾಗಿ ಇಟ್ಟುಕೊಂಡರೆ ಹದಿನೆಂಟು ಅಕ್ಷೌಹಿಣೀಸೈನ್ಯದ ಒಟ್ಟು ಪದಾತಿಗಳ ಸಂಖ್ಯೆಯೇ 19,68,300. 18ನೆಯ ದಿವಸದ ಯುದ್ಧದಲ್ಲಿ ಐದು ಕೋಟಿ ಪದಾತಿಗಳಿದ್ದುವೆಂದು ಇಲ್ಲಿ ಹೇಳಿದೆ. ಇದು ಅಸಂಭವವಾಗಿ ತೋರುತ್ತದೆ. ಹದಿನೆಂಟು ಅಕ್ಷೌಹಿಣೀಸೈನ್ಯದ ಕುದುರೆಗಳ ಒಟ್ಟು ಸಂಖ್ಯೆ 11,80,980. ಇದರಲ್ಲಿ ಎರಡೂ ಪಕ್ಷಗಳಿಂದ 2,10,000 ಕುದುರೆಗಳು ಉಳಿದಿದ್ದುವೆಂದರೆ ಸಮಂಜಸವಾಗಿ ಕಾಣುತ್ತದೆ. ರಥ ಮತ್ತು ಆನೆಗಳ ಸಂಖ್ಯೆಯೂ ಹೊಂದಿಕೊಳ್ಳುವಂತಿದೆ. ಆದರೆ ಪದಾತಿಗಳ ಸಂಖ್ಯೆಯನ್ನು ಸಮನ್ವಯಿಸುವುದು ಕಷ್ಟ. ಎರಡೂ ಪಕ್ಷಗಳವರಿಗೂ ಘೋರವಾದ ಯುದ್ಧವು ಪ್ರಾರಂಭವಾಯಿತೆಂಬ ಸಂಜಯನ ವಾರ್ತೆಯೊಡನೆ ಈ ಅಧ್ಯಾಯವು ಮುಗಿಯುತ್ತದೆ.

೯ನೆಯ ಅಧ್ಯಾಯ :– ಈ ಅಧ್ಯಾಯವು ರಣಾಂಗಣದ ಭಯಂಕರ ವರ್ಣನೆಯಿಂದ ಕೂಡಿದೆ. ಕಡೆಯಲ್ಲಿ ಕೌರವರ ಸೈನ್ಯವು ಪಲಾಯನ ಮಾಡಿತೆಂಬ ಪ್ರಶಂಸೆಯಿದೆ.

೧೦ನೆಯ ಅಧ್ಯಾಯ :– ಪಲಾಯನಮಾಡುತ್ತಿರುವ ತನ್ನ ಸೈನ್ಯವನ್ನು ನೋಡಿ ಮದ್ರರಾಜನು ತನ್ನ ರಥವನ್ನು ಯುಧಿಷ್ಠಿರನ ರಥಕ್ಕೆ ಎದುರಾಗಿ ನಿಲ್ಲಿಸುವಂತೆ ಹೇಳುತ್ತಾನೆ. ಶಲ್ಯನಿಗೂ–ಯುಧಿಷ್ಠಿರನ ಸೈನ್ಯಕ್ಕೂ ಘೋರ

ವಾದ ಯುದ್ಧವು ಪ್ರಾರಂಭವಾಗುತ್ತದೆ. ನಕುಲನಿಗೂ ಶಲ್ಯನ ಮಗನಾದ ಚಿತ್ರಸೇನನಿಗೂ ಘೋರವಾದ ಯುದ್ಧವು ಪ್ರಾರಂಭವಾಗುತ್ತದೆ. ನಕುಲನು ಚಿತ್ರಸೇನನನ್ನು ಅವನ ರಥವನ್ನೇ ಹತ್ತಿ ಸಂಹರಿಸುತ್ತಾನೆ. ಒಡನೆಯೇ ಸುಷೇಣ ಮತ್ತು ಸತ್ಯಸೇನರೆಂಬ ಕರ್ಣನ ಮತ್ತಿಬ್ಬರು ಮಕ್ಕಳು ನಕುಲನನ್ನು ಆಕ್ರಮಿಸುತ್ತಾರೆ. ನಕುಲನು ರಥಶಕ್ತಿಯಿಂದ ಸತ್ಯಸೇನನನ್ನು ಸಂಹರಿಸುತ್ತಾನೆ. ಬಳಿಕ ರಥಹೀನನಾಗಿದ್ದ ನಕುಲನು ಸುತಸೋಮನ ರಥವನ್ನು ಹತ್ತಿಕೊಂಡು ಅರ್ಧಚಂದ್ರವೆಂಬ ಬಾಣದಿಂದ ಸುಷೇಣನ ತಲೆಯನ್ನು ಕತ್ತರಿಸುತ್ತಾನೆ. ಸುಷೇಣನು ನಕುಲನಿಂದಲೇ ಹತನಾದ ವಿಷಯವು ಕರ್ಣಪರ್ವದ ೭೫ನೆಯ ಅಧ್ಯಾಯದಲ್ಲಿಯೂ ಬಂದಿದ್ದು ಈ ( 4590 ) ಪುಟದ ಟಿಪ್ಪಣಿಯಲ್ಲಿಯೇ ಈ ವಿಷಯವನ್ನು ವಿಶ್ಲೇಷಿಸಲಾಗಿದೆ. ಕರ್ಣನ ಮಕ್ಕಳು ಹತರಾದನಂತರ ಅಧ್ಯಾಯದ ಕಡೆಯವರೆಗೂ ಯುದ್ಧದ ವರ್ಣನೆಯೇ ಇದೆ.

೧೧ನೆಯ ಅಧ್ಯಾಯ :– ಯುದ್ಧದ ವರ್ಣನೆಯಿಂದ ಅಧ್ಯಾಯವು ಪ್ರಾರಂಭವಾಗುತ್ತದೆ. ಕೌರವಪಕ್ಷಕ್ಕೆ ಅಶುಭಸೂಚಕವಾದ ಪ್ರಕರಣದ ವರ್ಣನೆಯಿದೆ. ಶಲ್ಯನಿಗೂ ಯುಧಿಷ್ಠಿರಾದಿಗಳಿಗೂ ನಡೆಯುವ ಘೋರ ಯುದ್ಧದ ವರ್ಣನೆಯಿದೆ. ಕೃತವರ್ಮನು ಭೀಮಸೇನನನ್ನೂ, ಕೃಪರು ಧೃಷ್ಟದ್ಯುಮ್ನನನ್ನೂ, ಶಕುನಿಯು ದ್ರೌಪದಿಯ ಮಕ್ಕಳನ್ನೂ, ಅಶ್ವತ್ಥಾಮನು ನಕುಲ-ಸಹದೇವರನ್ನೂ, ದುರ್ಯೋಧನನು ಕೃಷ್ಣಾರ್ಜುನರನ್ನೂ–ಎದುರಿಸಿ ಯುದ್ಧಮಾಡುತ್ತಿರುತ್ತಾರೆ. ಕೃತವರ್ಮನು ಭೀಮಸೇನನ ಕುದುರೆಗಳನ್ನು ಸಂಹರಿಸುತ್ತಾನೆ. **ಋಕ್ಷವರ್ಣಾಞ್ಜಘಾನಾಶ್ವಾನ್ಭೋಜೋ ಭೀಮಸ್ಯ ಸಂಯುಗೇ** (೪೧) ಕುದುರೆಗಳಿಂದ ವಿಹೀನನಾಗಿದ್ದ ಭೀಮಸೇನನು ರಥದಿಂದಿಳಿದು ಗದೆಯನ್ನೆತ್ತಿಕೊಂಡು ಶತ್ರುಗಳನ್ನು ಸದೆಬಡಿಯಲು ಪ್ರಾರಂಭಿಸುತ್ತಾನೆ. ಮುಂದೆ ಭೀಮಸೇನನು ಪುನಃ ರಥದಲ್ಲಿ ಕುಳಿತು ಕೊಂಡು ಯುದ್ಧಕ್ಕೆ ಬರುವ ಪ್ರಕರಣವೇ ಬರುವುದಿಲ್ಲ. ಆದರೆ ೪೫ನೆಯ ಶ್ಲೋಕದಲ್ಲಿ **ಪುನಶ್ಚ ಭೀಮಸೇನಸ್ಯ ಜಘಾನಾಶ್ವಾಂಸ್ತಥಾಹವೇ ।** ಕೃತವರ್ಮನು ಪುನಃ ಭೀಮಸೇನನ ಕುದುರೆಗಳನ್ನು ಸಂಹರಿಸಿದನು–ಎಂದು ಉಕ್ತವಾಗಿದೆ. ಭೀಮಸೇನನು ಗದಾಪಾಣಿಯಾಗಿ ರಥದಿಂದ ಇಳಿಯುತ್ತಾನೆ.

೪೧ನೆಯ ಶ್ಲೋಕವೇ ಇಲ್ಲಿ ಪುನರುಕ್ತವಾಗಿದೆ. ಅನಂತರ ಗದೆಯಿಂದ ಭೀಮಸೇನನು ಕೃತವರ್ಮನ ಕುದುರೆಗಳನ್ನು ಪ್ರಹರಿಸಿದನೆಂದೂ ಕೃತವರ್ಮನು ಓಡಿಹೋದನೆಂದೂ ಈ ಪ್ರಕರಣದಲ್ಲಿ ಬಂದಿರುತ್ತದೆ. ಈ ಶ್ಲೋಕಗಳು ಭಂ. ರಿ. ಇನ್‌ಸ್ಟಿಟ್ಯೂಟಿನ ಪುಸ್ತಕದಲ್ಲಿ ಇರುವುದಿಲ್ಲ. ಇಲ್ಲಿರುವುದೇ ಸಾಧುವಾಗಿ ಕಾಣುತ್ತದೆ. ೧೯ನೆಯ ಸಂಪುಟದ ಟಿಪ್ಪಣಿಯಲ್ಲಿಯೂ ಇದನ್ನು ಪ್ರಸ್ತಾಪಿಸಲಾಗಿದೆ. (ಪುಟ-4597) ಶಲ್ಯನು ಯುಧಿಷ್ಠಿರನ ಮೇಲೆ ಬಾಣಪ್ರಯೋಗಮಾಡುತ್ತಾನೆ. ಅದರಿಂದ ಕ್ರುದ್ಧನಾದ ಭೀಮಸೇನನು ಗದೆಯನ್ನೆತ್ತಿಕೊಂಡು ಶಲ್ಯನನ್ನು ಆಕ್ರಮಿಸುತ್ತಾನೆ. ಇಲ್ಲಿ ಆರೆಂಟು ಶ್ಲೋಕಗಳಲ್ಲಿ ಭೀಮಸೇನನ ಗದೆಯ ವರ್ಣನೆಯಿದೆ. ಬಳಿಕ ಭೀಮಸೇನನು ಗದೆಯಿಂದ ಶಲ್ಯನ ರಥದ ನಾಲ್ಕು ಕುದುರೆಗಳನ್ನೂ ಸಂಹಾರಮಾಡುತ್ತಾನೆ. ಶಲ್ಯನು ಆ ಸಮಯದಲ್ಲಿ ಪ್ರಯೋಗಿಸಿದ ತೋಮರವನ್ನೇ ಭೀಮಸೇನನು ಶಲ್ಯನ ಸಾರಥಿಯ ಮೇಲೆ ಪ್ರಹರಿಸಿ ಅವನನ್ನೂ ರಥದಿಂದ ಕೆಳಕ್ಕೆ ಕೆಡಹುತ್ತಾನೆ. ಶಲ್ಯನು ರಥದಿಂದ ಇಳಿದನೆಂಬ ವಿಷಯವು ಇಲ್ಲಿ ಬರುವುದಿಲ್ಲ. **ಮದ್ರರಾಜಸ್ತ್ವಪಾಕ್ರಮತ್** (೬೧) ಮದ್ರರಾಜನು ಹಿಂದಕ್ಕೆ ಸರಿದನು'–ಎಂದಿದೆ. ರಥದಿಂದಿಳಿದು ಹಿಂದಕ್ಕೆ ಸರಿದನು ಎಂದು ಅರ್ಥ ಮಾಡಬೇಕಾಗಿದೆ. ಈ ಮಹಾಸಾಹಸಕಾರ್ಯದಿಂದ ಭೀಮಸೇನನು ತನ್ನ ಕಡೆಯವರ ಶ್ಲಾಘನೆಗೆ ಪಾತ್ರನಾಗುತ್ತಾನೆ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

೧೨ನೆಯ ಅಧ್ಯಾಯ :– ಕುದುರೆಗಳನ್ನೂ ಸಾರಥಿಯನ್ನೂ ಕಳೆದುಕೊಂಡ ಶಲ್ಯನು ಪುನಃ ಬೇರೆಯ ರಥದಲ್ಲಿ ಬರುವ ಪ್ರಸ್ತಾಪವಿಲ್ಲ. ಗದೆಯನ್ನು ಹಿಡಿದು ಭೀಮಸೇನನೊಡನೆ ಯುದ್ಧಕ್ಕೆ ಸಿದ್ಧನಾಗುತ್ತಾನೆ. ಭೀಮ-ಶಲ್ಯರ ಅದ್ಭುತವಾದ ಗದಾಯುದ್ಧದ ವರ್ಣನೆಯಿದೆ. ಕಡೆಯಲ್ಲಿ ಇಬ್ಬರೂ ಗಾಯಗೊಂಡು ಒಟ್ಟಾಗಿ ಕೆಳಕ್ಕೆ ಬೀಳುತ್ತಾರೆ. ಕೃಪರು ಶಲ್ಯನನ್ನು ತಮ್ಮ ರಥದಲ್ಲಿ ಕುಳ್ಳಿರಿಸಿಕೊಂಡು ಹೋಗುತ್ತಾರೆ. ಭೀಮಸೇನನು ಎಚ್ಚೆತ್ತು ಶಲ್ಯನನ್ನು ಪುನಃ ಯುದ್ಧಕ್ಕೆ ಆಹ್ವಾನಿಸುತ್ತಾನೆ. ಆದರೆ ಭೀಮ-ಶಲ್ಯರ ಯುದ್ಧವು ಮುಂದುವರಿಯುವುದಿಲ್ಲ. ದುರ್ಯೋಧನನು ಚೇಕಿತಾನನನ್ನು ಸಂಹರಿಸುತ್ತಾನೆ. ಮುಂದೆ ದ್ವಂದ್ವಯುದ್ಧದ ವರ್ಣನೆಯಿದೆ. ಮುಂದೆ

ಶಲ್ಯನು ಧರ್ಮಜನೊಡನೆ ಯುದ್ಧವನ್ನು ಪ್ರಾರಂಭಿಸುತ್ತಾನೆ. ಆದರೆ ಕೃಪರ ರಥದಲ್ಲಿ ಹೋದವನು ಪುನಃ ಯಾವಾಗ ಬಂದನೆಂಬ ಪ್ರಸ್ತಾಪ ಬರುವುದಿಲ್ಲ. ನೂತನ ರಥಾಶ್ವಸಾರಥಿಗಳೊಡನೆ ಶಲ್ಯನು ರಣರಂಗಕ್ಕೆ ಬಂದನೆಂದು ಊಹಿಸಬೇಕಾಗಿದೆ. ಇದೇ ರೀತಿಯಲ್ಲಿ ಭೀಮಸೇನನೂ ಮುಂದೆ ಸಾತ್ಯಕಿ-ನಕುಲ-ಸಹದೇವರೊಡನೆ ಸೇರಿಕೊಂಡು ಶಲ್ಯನೊಡನೆ ಯುದ್ಧಮಾಡುವ ಪ್ರಸಂಗವು ಬರುತ್ತದೆಯೇ ಹೊರತು ಅವನು ನೂತನರಥಾಶ್ವಸಮೇತನಾಗಿ ಬಂದನೆಂಬ ಪ್ರಸ್ತಾಪವಿಲ್ಲ. ಸ್ವಲ್ಪ ಹಿಂದೆ ಗದಾಯುದ್ಧಮಾಡಿ ಇಬ್ಬರೂ ಮೂರ್ಛಿತರಾಗಿ ಕೆಳಕ್ಕೆ ಬಿದ್ದಿದ್ದರು. ಇಬ್ಬರೂ ಬಹಳವಾಗಿ ಬಳಲಿದ್ದರು. ಆದರೆ ಮುಂದಿನ ಪ್ರಕರಣದಲ್ಲಿ ಇಬ್ಬರೂ ಗದಾಯುದ್ಧದಲ್ಲಿ ತೊಡಗಿಯೇ ಇರಲಿಲ್ಲವೋ ಎಂಬಂತೆ ಅಸ್ತ್ರಯುದ್ಧವನ್ನು ಬಿರುಸಿನಿಂದ ಮಾಡುತ್ತಿರುತ್ತಾರೆ. ಈ ಅಧ್ಯಾಯದ ಕಡೆಯಲ್ಲಿ ಭೀಮ-ಸಾತ್ಯಕಿ-ನಕುಲ-ಸಹದೇವರಿಂದಲೂ ಯುಧಿಷ್ಠಿರನಿಂದಲೂ ಆಕ್ರಮಿಸಲ್ಪಟ್ಟಿದ್ದರೂ ಶಲ್ಯನೇ ಯುಧಿಷ್ಠಿರನನ್ನು ಬಹಳವಾಗಿ ಪೀಡಿಸುವ ವಿಷಯವಿದೆ.

೧೩ನೆಯ ಅಧ್ಯಾಯ :– ಶಲ್ಯನ ಅತುಲಪರಾಕ್ರಮದ ವರ್ಣನೆಯು ಈ ಅಧ್ಯಾಯದಲ್ಲಿ ಮೊದಲಿನಿಂದ ಕಡೆಯವರೆಗೂ ಇದೆ. ಪಾಂಡವರ ಕಡೆಯ ಮಹಾಯೋಧರೆಲ್ಲರನ್ನೂ ಶಲ್ಯನೊಬ್ಬನೇ ಎದುರಿಸಿ ಯುದ್ಧ ಮಾಡುತ್ತಾನೆ. ಯುಧಿಷ್ಠಿರನಿಗೆ ತನ್ನ ಜಯದಲ್ಲಿಯೇ ಸಂಶಯವುಂಟಾಗುತ್ತದೆ. ಶಲ್ಯನ ಹಸ್ತಲಾಘವವನ್ನು ಕಂಡು ದೇವ-ಗಂಧರ್ವ-ದಾನವರೂ ಅಚ್ಚರಿಪಡುತ್ತಾರೆ. ವಿಸ್ಮಯಂ ಪರಮಂ ಜಗ್ಮುರ್ದೇವಗನ್ಧರ್ವದಾನವಾಃ ( ೪೫ ) ಯುಧಿಷ್ಠಿರಾದಿಗಳು ಶಲ್ಯನ ಬಾಣಗಳಿಂದ ಬಹಳವಾಗಿ ಗಾಯ ಗೊಂಡಿದ್ದರೂ ಶಲ್ಯನನ್ನು ಬಿಟ್ಟುಹೋಗುವುದಿಲ್ಲ. ಇಲ್ಲಿಗೆ ಅಧ್ಯಾಯವು ಮುಗಿಯುತ್ತದೆ.

[ ಮುಂದುವರಿಯುವುದು. ]



